# ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಅಮರೇಶ ಯತಗಲ್

ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ

ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೫

# ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ಅಮರೇಶ ಯತಗಲ್



ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ

ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೫

# ಸಂಶೋಧಕರ ಪ್ರಮಾಣ ಪತ್ರ

ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಅಮರೇಶ ಯತಗಲ್
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೦೫.೦೯.೨೦೦೫
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಅಮರೇಶ ಯತಗಲ್ ಅವರು ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರೊ. ಲಕ್ಷ್ಮಣ್ ತೆಲಗಾವಿ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೦೫.೦೯.೨೦೦೫
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ ೧

# ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧

# ಪ್ರಸ್ತಾವನೆ

## ೧.೧ ಅಧ್ಯಯನದ ಉದ್ದೇಶ ಮತ್ತು ಮಹತ್ವ

ಇತಿಹಾಸವು ಮಾನವನ ಜೀವನದಲ್ಲಿ ಒಂದು ರೋಮಾಂಚಕ ಅಧ್ಯಾಯವಾಗಿದೆ. ಇದು ಭವಿಷ್ಯತ್ತನ್ನು ಕಟ್ಟುವ ಸಲುವಾಗಿ ಭೂತಕಾಲದ ಅನುಭವಗಳನ್ನು ನೀಡುತ್ತದೆ. ಭವಿಷ್ಯತ್ತೆಂಬುದು ವರ್ತಮಾನದ ಫಲ. ಭೂತಕಾಲವನ್ನು ಮರೆತುಬಿಡುವ ದೇಶಕ್ಕೆ ಅಥವಾ ಸಮುದಾಯಕ್ಕೆ ಭವಿಷ್ಯವಿರುವುದಿಲ್ಲ. ವರ್ತಮಾನವೆಂಬ ವೃಕ್ಷಕ್ಕೆ ಭೂತಕಾಲವೇ ಬೀಜವಾದರೆ ಭವಿಷ್ಯತ್‌ಕಾಲವೇ ಫಲ. ಈ ಫಲವನ್ನು ಪಡೆಯಲಪೇಕ್ಷಿಸುವವರು ಭೂತಕಾಲದ ಸಾಮರ್ಥ್ಯವನ್ನು ಅರಿಯುವುದು ಅನಿವಾರ್ಯ. ಇದು ಚರಿತ್ರೆಯ ಅಧ್ಯಯನಕ್ಕೆ ಅತ್ಯಗತ್ಯ. ಇಲ್ಲಿ ಚರಿತ್ರೆಯೆಂದರೆ ಕೇವಲ ಹೆಸರುಗಳ ಹಾಗೂ ವರ್ಷಗಳ ಎಣಿಕೆಯಲ್ಲ; ಹಾಗೂ ರಾಜ-ಮಹಾರಾಜರ ಹಾಗೂ ರಾಜ್ಯಗಳ ಹುಟ್ಟು, ಸಾವು, ವೈಭೋಗ, ಆಡಳಿತ, ಯುದ್ಧ, ಸೋಲು, ಗೆಲುವು, ರಾಜ್ಯವಿಸ್ತಾರ ಮುಂತಾದವುಗಳನ್ನು ಚಿತ್ರಿಸುವುದಷ್ಟೇ ಅಲ್ಲ. ಅದರ ಉದ್ದೇಶವಾದರೂ ಒಟ್ಟು ಬದುಕಿನ ಸಮಗ್ರ ಚಿತ್ರಣವನ್ನು ನೀಡುವುದು. ಅಂದರೆ ಅವರ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ನೆಲೆಗಳನ್ನು ಅಥವಾ ಆಯಾಮಗಳನ್ನು ಪ್ರತಿನಿಧಿಸುವುದು. ಈ ನಿಟ್ಟಿನಲ್ಲಿ ನಮ್ಮನಾಡಿನ ಸುಪ್ರಸಿದ್ಧ ಅರಸುಮನೆತನಗಳೆಂದು ಗುರುತಿಸಿಕೊಂಡ ಶಾತವಾಹನರು, ಬನವಾಸಿಯ ಕದಂಬರು, ತಲಕಾಡಿನ ಗಂಗರು, ಬಾದಾಮಿಯ ಚಾಳುಕ್ಯರು, ಕಲ್ಯಾಣದ ಚಾಳುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ಕಳಚೂರ್ಯರು, ದೋರಸಮುದ್ರದ ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಅರಸರು ಮುಂತಾದವರ ಕುರಿತಾಗಿ ಕಳೆದ ಒಂದು ಶತಮಾನದಿಂದಲೂ ಆಕರ ಶೋಧ, ವಿಶ್ಲೇಷಣೆ ಸಾಕಷ್ಟು ನಡೆದಿದೆ ಹಾಗೂ ನಡೆಯುತ್ತಿದೆ. ಆದರೆ ಸಣ್ಣಪುಟ್ಟ ಅರಸುಮನೆತನಗಳ ಕುರಿತಾದ ಅಧ್ಯಯನವನ್ನು ಕಡೆಗಣಿಸಲಾಗಿದೆಯೆಂಬುದು ಸ್ಪಷ್ಟ.

ಒಂದು ಪ್ರದೇಶದ ನಿಜವಾದ ಇತಿಹಾಸವೆಂದರೆ ಸಣ್ಣಪುಟ್ಟ ಸಂಸ್ಥಾನಿಕರ ಇತಿಹಾಸವೆನ್ನುವುದರಲ್ಲಿ ಸಂಶಯವಿಲ್ಲ. ಅವರು ಬದುಕಿದ ರೀತಿ, ನೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅಳವಡಿಸಿಕೊಂಡ ಜೀವನದ ಮೌಲ್ಯಗಳೂ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಆಚರಣೆಗಳೂ ಬಹುಮುಖ್ಯವಾಗಿವೆ.

ಇಂತಹ ಸಣ್ಣಪುಟ್ಟ ಅರಸರಲ್ಲಿ ಕರ್ನಾಟಕದ ನಾಯಕ ಅರಸರು ಪ್ರಮುಖರು. ಕರ್ನಾಟಕದ ಚರಿತ್ರೆಯೆಂದರೆ ನಾಯಕ(ಬೇಡ)ರ ಚರಿತ್ರೆ ಎನ್ನುವಷ್ಟರ ಮಟ್ಟಿಗೆ ನಾಯಕ ಅರಸರ ಪಾತ್ರ ಮಹತ್ವದ್ದು. ದಕ್ಷಿಣಭಾರತದ ಇತರ ರಾಜ್ಯಗಳಲ್ಲೂ ನಾಯಕ ಅರಸರ ಮನೆತನಗಳ ಆಳ್ವಿಕೆ, ಸೈನಿಕರ ಸೇವೆ, ತ್ಯಾಗ, ಬಲಿದಾನಗಳು, ಒಂದಕ್ಕಿಂತ ಇನ್ನೊಂದು ಮೇಲು ಎಂಬಂತೆ ಮೆರೆದಿವೆ. ಹೀಗಾಗಿ ಸ್ಥಳೀಯ ಚರಿತ್ರೆಯ ದೃಷ್ಟಿಯಿಂದ ಈ ನಾಯಕ ಮನೆತನಗಳನ್ನು ಕಡೆಗಣಿಸುವಂತಿಲ್ಲ. ಏಕೆಂದರೆ ಆಧುನಿಕ ಕರ್ನಾಟಕದ ಸಮಗ್ರ ಇತಿಹಾಸವನ್ನು ರಚಿಸುವಲ್ಲಿ ಈ ಮನೆತನಗಳು ಬಹುಮುಖ್ಯವಾದ ಪಾತ್ರವನ್ನು ವಹಿಸಿವೆ. ನಾಯಕರದು ಹೇಳಿ ಮಾಡಿಸಿದಂತಹ ಯೋಧ ಜನಾಂಗ. ಉತ್ತರದಲ್ಲಿ ರಜಪೂತರು, ಮಧ್ಯದಲ್ಲಿ ಮರಾಠರು, ದಕ್ಷಿಣದಲ್ಲಿ ನಾಯಕರು ಈ ಮೂರು ಜನಾಂಗಗಳು ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರ ವಹಿಸಿರುವುದು ವಾಸ್ತವ. ಇವರನ್ನು ಪಾಳೆಯಗಾರರು, ದೊರೆಗಳು ಎಂದು ಕರೆಯುತ್ತಿದ್ದರು. ಈ 'ಪಾಳೆಯಗಾರರು' ಎಂಬ ಪದ ಜಾತಿಸೂಚಕವಾಗಿ ಬೇಡ ಜನಾಂಗಕ್ಕೆ ನೇರವಾಗಿ ಬಳಕೆಯಾಗಿರುವುದುಂಟು. ಈ ಬೇಡರು ಆಳುವವರ್ಗಕ್ಕೆ ಸೇರಿದ ಮೇಲೆ ತಮ್ಮನ್ನು 'ನಾಯಕರು' ಎಂದು ಕರೆದುಕೊಂಡರು. ಕ್ರಮೇಣ ಈ ಹೆಸರು ಅಧಿಕಾರಸೂಚಕವಾಗಿ ನಂತರ ಜಾತಿಸೂಚಕವಾಗಿ ಪ್ರಸಿದ್ಧಿ ಪಡೆಯಿತು. ಮೇಲ್‌ಸ್ತರದಲ್ಲಿ ಗುರುತಿಸಿಕೊಂಡ ಇವರು 'ನಾಯಕರು' ಎಂದು ಕರೆಯಲ್ಪಟ್ಟರು. ವಿಜಯನಗರ ಕಾಲದ ಮತ್ತು ನಂತರದಲ್ಲಿಯ ಪಾಳೆಯಗಾರರು ತಮ್ಮನ್ನು ನಾಯಕರೆಂದು ಕರೆದುಕೊಂಡಿದ್ದಾರೆ.

ಇತಿಹಾಸತಜ್ಞರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಈ ಕುರಿತು ಹೀಗೆ ಅಭಿಪ್ರಾಯಿಸಿರುವುದುಂಟು : ಕುಲಶಾಸ್ತ್ರಕ್ಕೆ ಅನುಸಾರವಾದ ಅಧ್ಯಯನದಲ್ಲಿ ಗಮನಿಸಬಹುದಾದ ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಪ್ರವೃತ್ತಿ ಮೊದಲಾದವು ಆಯಾ ಕುಲದ ಮೂಲನೆಲೆ, ಇತ್ಯಾದಿಯನ್ನು ಗುರುತಿಸಲು ಸಹಾಯ ಮಾಡುತ್ತದೆಂಬುದನ್ನು ಈ ಅರಸರ ವಿಚಾರದಲ್ಲಿ ನೋಡಬಹುದು.[೨] ಈ ಅಭಿಪ್ರಾಯ ಆಯಾ ಮನೆತನಗಳ ಮೂಲನೆಲೆ, ಕುಲ, ಆಚಾರಗಳ ಕುರಿತದ್ದು. ಕರ್ನಾಟಕದ ಸಂಸ್ಕೃತಿಯ ಹಿರಿಮೆ ಗರಿಮೆಗಳನ್ನು ಮೆರೆದ ನಾಯಕರು ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕ ಇತಿಹಾಸದಲ್ಲಿ ವಹಿಸಿದ ನಿರ್ಣಾಯಕ ಪಾತ್ರವನ್ನು ಇವರ ಆಳ್ವಿಕೆಯ ವಿವಿಧ ಮುಖಗಳ ಪರಿಶೀಲನೆಯಿಂದ ಮನಗಾಣಬಹುದು.

ನಾಯಕ ಜನಾಂಗದಲ್ಲಿ ಉನ್ನತಸ್ಥಾನದಲ್ಲಿದ್ದ ಪಾಳೆಯಗಾರರು ಅಥವಾ ದೊರೆಗಳು ಈ ದೇಶದ ಇತಿಹಾಸದಲ್ಲಿ ಪಡೆದುಕೊಂಡಿರುವ ಸ್ಥಾನ-ಮಾನಗಳು ಮಹತ್ವದವು. ಒಂದು ಸಾಮ್ರಾಜ್ಯದ ಅಳಿವು ಉಳಿವುಗಳು ಇಂತಹ ಪಾಳೆಯಗಾರರ, ದೊರೆಗಳ ನಿಷ್ಠೆಯನ್ನವಲಂಬಿಸಿದ್ದವು. ಅಲ್ಲದೆ ಜನಸಮುದಾಯದ ನೇರ ಸಂಪರ್ಕವುಳ್ಳ ಈ ನಾಯಕ ಅರಸುಮನೆತನಗಳು ಅವರ ಜನಜೀವನದ ಆಗುಹೋಗುಗಳನ್ನು ಗಮನಿಸುತ್ತಿದ್ದವು; ಅವುಗಳೊಡನೆ ಬೆರೆತುಹೋಗಿದ್ದವು. ಹೀಗಾಗಿ ವಿಜಯನಗರದ ಅವನತಿಯ

ತರುವಾಯ ಸ್ವತಂತ್ರರಾಗಿ, ರಾಜಕೀಯ, ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಹಾಗೂ ತಮ್ಮನ್ನು ಅರಸರೆಂದು ಕರೆದುಕೊಂಡು ತಮ್ಮ ಹಿಂದಿನ ಸಾಮ್ರಾಟರಂತೆಯೇ ಆಳ್ವಿಕೆ ನಡೆಸಲು ಇವರಿಗೆ ಸಾಧ್ಯವಾಯಿತು.

ವಿಜಯನಗರವನ್ನು ಹೋಲುವಂತಹ ಸಾಮ್ರಾಜ್ಯವನ್ನು ಇನ್ನೊಮ್ಮೆ ಕಟ್ಟಿ ಆಳಬೇಕೆಂಬ ಹಾಗೂ ಹಿಂದೂಧರ್ಮದ ಉತ್ಕೃಷ್ಟ ಸಂಸ್ಕೃತಿಯನ್ನು ಉಳಿಸಿ ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ ಇಂಥ ಅರಸು ಮನೆತನಗಳ ಇತಿಹಾಸ ಸಾಧ್ಯವಾದಷ್ಟು ಸಮಗ್ರವಾಗಿ ರಚನೆಗೊಳ್ಳದ ಹೊರತು, ನಿಜವಾದ ಅರ್ಥದಲ್ಲಿ ನಮ್ಮನಾಡಿನ ಸಮಗ್ರ ಇತಿಹಾಸದ ರಚನೆ ಎಂದಿಗೂ ವಸ್ತುನಿಷ್ಠವಾಗಲಾರದೆಂಬುದರಲ್ಲಿ ಎರಡು ಮಾತಿಲ್ಲ. ಈ ನಾಯಕರು ಪ್ರಜಾಹಿತಕ್ಕೆ ನೀಡಿದ ಕಾಣಿಕೆ ಅವಿಸ್ಮರಣೀಯ. ಅವರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆಗಳು, ಗುಡಿಗೋಪುರಗಳು, ಕೋಟೆ-ಕೊತ್ತಲಗಳು, ಮಠಮಾನ್ಯಗಳು, ಸೃಷ್ಟಿಸಿದ ಕಲೆ, ಸಾಹಿತ್ಯ ಇತ್ಯಾದಿ ನಮ್ಮ ನಾಡ ಸಂಸ್ಕೃತಿಗೆ ನೀಡಿದ ಅತ್ಯಮೂಲ್ಯ ಕೊಡುಗೆಗಳು. ಆದ್ದರಿಂದ ಈ ಮನೆತನಗಳ ಇತಿಹಾಸ ರಚನೆಯ ವಿಷಯದಲ್ಲಿ ನಿರ್ಲಕ್ಷ್ಯ ಧೋರಣೆ ಸಲ್ಲದೆಂಬುದು ಈ ಅಧ್ಯಯನದ ಮೂಲ ಆಶಯ.

ಇಂದು ಕನ್ನಡನಾಡಿನ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದ ಅಧ್ಯಯನದ ಸಂದರ್ಭದಲ್ಲಿ ಸ್ಥಳೀಯ ನಾಯಕ ಅರಸರ ಪಾತ್ರವನ್ನು ಕಡೆಗಣಿಸುವಂತಿಲ್ಲ. ಆದರೆ ಇಂತವರ ಚರಿತ್ರೆ ಕುರಿತಾಗಿ ಸಾಕಷ್ಟು ಅಧ್ಯಯನಗಳು ನಡೆದಿಲ್ಲ. ಕಾಲಗರ್ಭದಲ್ಲಿ ಮರೆತುಹೋದ ಇವರ ಅರಸೊತ್ತಿಗೆಗಳು ಈ ಕಾರಣಕ್ಕಾಗಿಯೇ ಇಂದು ಅಧ್ಯಯನಾಸಕ್ತರಲ್ಲಿ ತೀವ್ರ ಕುತೂಹಲ ಕೆರಳಿಸುತ್ತವೆ. ಇತಿಹಾಸವನ್ನು ನೋಡುವ ದೃಷ್ಟಿಕೋನ ಕಳೆದ ದಶಕದಿಂದೀಚೆಗೆ ಬದಲಾವಣೆ ಕಂಡಿದೆ. ಇತಿಹಾಸ ರಚನೆಯ ಆಕರಗಳನ್ನು, ಆಯಾಮಗಳನ್ನು ಹೊಸರೀತಿಯಿಂದ ನೋಡುವ, ವಿಶ್ಲೇಷಿಸುವ ಖಚಿತ ದೃಷ್ಟಿ ಬೆಳೆದಿದೆ. ಕೇವಲ ರಾಜಕೀಯ ಚರಿತ್ರೆಯ ಅಧ್ಯಯನಮಾರ್ಗವನ್ನು ಬಿಟ್ಟು ಅವರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಅವರ ಏಳು-ಬೀಳಿನ ಹಾದಿಯನ್ನು ವಿವಿಧ ಮಗ್ಗುಲುಗಳಿಂದ ಪರಿಚಯಿಸುವ ಸ್ಪಷ್ಟ ಧೋರಣೆಯನ್ನು ಪ್ರಸ್ತುತ ಮಹಾಪ್ರಬಂಧವಾದ **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ** ಹೊಂದಿದೆ.

ಸ್ಥಳೀಯವಾಗಿ ಕಾರ್ಯ ನಿರ್ವಹಿಸುತ್ತಿದ್ದ ಈ ನಾಯಕ ಅರಸರು ಸಹಜವಾಗಿಯೇ ಹೆಚ್ಚು ಪ್ರಭಾವಶಾಲಿ ಗಳಾಗಿರುತ್ತಿದ್ದರು. ಇದಕ್ಕೆ ಮುಖ್ಯಕಾರಣ ಅವರು ಕೈಗೊಳ್ಳುತ್ತಿದ್ದ ಜನೋಪಯೋಗಿ ಕಾರ್ಯಗಳು. ಹೀಗಾಗಿ ಇವರು ಪ್ರಜಾಹಿತಕ್ಕೆ ನೀಡಿದ ಕಾಣಿಕೆ ಅವಿಸ್ಮರಣೀಯವಾದುದು. ಹೀಗಾಗಿ ಇವರ ಸಂಸ್ಕೃತಿ ಕುರಿತಾದ ಅಧ್ಯಯನಕ್ಕೆ ವಿಶೇಷ ಮಹತ್ವ ಪ್ರಾಪ್ತವಾಗುತ್ತದೆ. ಇವುಗಳ ಮೂಲಕ ಇವರ ವಿಶಿಷ್ಟ ಸಂಸ್ಕೃತಿಯನ್ನು ಅರಿಯಬಹುದು. ಇಲ್ಲಿ ಸಂಸ್ಕೃತಿಯೆಂದರೆ ಅದೊಂದು ಜೀವನದ ರೀತಿ ಮಾತ್ರವಾಗಿರದೆ, ಒಂದು ಮನೆತನದಲ್ಲಿರುವ ನಾಗರಿಕತೆ, ಕೃತಜ್ಞತೆ, ವಿನಯಶೀಲತೆ, ಸಭ್ಯತೆ, ಆಲೋಚನಾ ಫಲ,

ವಿಚಾರಪರತೆ, ಅನುಭವ, ಕರ್ತವ್ಯಪರತೆ, ನಡವಳಿಕೆ, ದೇಶಾಭಿಮಾನ ಮುಂತಾದವುಗಳ ಸಮ್ಮಿಳನವೂ ಹೌದು.

ಸಂಸ್ಕೃತಿ ಚಲನಶೀಲವಾದುದು. ಅಂದರೆ ಈ ನಾಯಕ ಅರಸರು ತಮ್ಮ ಆಚಾರ, ವಿಚಾರ, ರೂಢಿ, ಸಂಪ್ರದಾಯಗಳನ್ನು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾಯಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅನೇಕ ವರ್ಷಗಳ ಫಲವಾಗಿಯೇ ಬಂದ ಸಂಸ್ಕಾರವನ್ನು ನಾವು ಸಂಸ್ಕೃತಿ ಎಂದು ಇಲ್ಲಿ ಕರೆದಿರುವುದು ಈ ದೃಷ್ಟಿಯಿಂದ. ಇಂಥ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಮನೆತನಗಳೇ ಕರ್ನಾಟಕ ನಾಯಕ ಅರಸುಮನೆತನಗಳು. ಮರೆಯಾದ ಇಂಥ ಮನೆತನಗಳು ಚಾರಿತ್ರಿಕ ಸಂಗತಿಗಳಿಗೆ ವಿಶೇಷ ಆದ್ಯತೆ ನೀಡಲಾಗಿದ್ದು, ಇತ್ತೀಚೆಗೆ ಈ ನಿಟ್ಟಿನಲ್ಲಿ ವ್ಯಾಪಕ ಚರ್ಚೆ, ವಿಶ್ಲೇಷಣೆ ಹಾಗೂ ಸಂಶೋಧನೆಗಳು ನಡೆಯತೊಡಗಿವೆ.

ಈ ಹಿಂದೆ ಪ್ರಮುಖ ರಾಜಮನೆತನಗಳ ಶ್ರೇಯೋಭಿವೃದ್ಧಿಗಾಗಿ ಅಡಿಪಾಯ ಹಾಕಿ ಅವುಗಳ ರಕ್ಷಣೆಗಾಗಿ ಟೊಂಕಕಟ್ಟಿನಿಂತ ನಾಯಕ ಅರಸರ ಚರಿತ್ರೆಯನ್ನು ಸಂಶೋಧಿಸುವಲ್ಲಿ ಒಂದು ವರ್ಗದ ಅನೇಕರು ಅನಾಸಕ್ತಿಯನ್ನು ತಾಳಿದ್ದುಂಟು. ಅಲ್ಲದೆ, ಇತಿಹಾಸದಲ್ಲಿ ಈ ವಿಷಯಗಳು ಪ್ರಮುಖ ವಾದುವೇನಲ್ಲ ಎಂಬ ಮನೋಧೋರಣೆ ಅವರದಾಗಿತ್ತು. ಹೀಗಾಗಿ ಕೆಳಮಟ್ಟದ ಚರಿತ್ರೆ ಕಣ್ಮರೆಯಾಗಿ ಮೇಲ್ಮಟ್ಟದ ರಾಜ ವೈಭೋಗಗಳೇ ಇತಿಹಾಸದಲ್ಲಿ ಸಾಕಷ್ಟು ಸ್ಥಳಾವಕಾಶ ಪಡೆದು, ಹಿರಿಯ ಅರಸು ಮನೆತನಗಳ ಕಾಲಾವಧಿಯನ್ನು ಸುವರ್ಣಯುಗವೆಂದು ಭಾವಿಸಲಾಗಿತ್ತು. ಆದರೆ ಚರಿತ್ರೆಯಲ್ಲಿ ಇಂಥ ಸುವರ್ಣಯುಗಕ್ಕೆ ಕಾರಣೀಕರ್ತೃವಾದ ದೇಶೀಯ ಸಂಸ್ಥಾನಗಳ ಕೊಡುಗೆಯನ್ನು ಇತಿಹಾಸಕಾರರು ಕಡೆಗಣಿಸುತ್ತಾ ಬಂದುದು ದುರಾದೃಷ್ಟಕರ ಸಂಗತಿ. ಕರ್ನಾಟಕದಲ್ಲಿಯ ಪ್ರತಿ ಚಿಕ್ಕಪುಟ್ಟ ಅರಸು ಮನೆತನಗಳ ಅಧ್ಯಯನ ನಡೆದುದಾದರೆ ಕರ್ನಾಟಕದ ಜನಜೀವನದ ಸಂಸ್ಕೃತಿಯ ಸಮಗ್ರ ಚಿತ್ರ ಸಿಗುತ್ತದೆ. ಈ ನಿಟ್ಟಿನಲ್ಲಿ ಕೈಗೊಳ್ಳುವ ಯಾವುದೇ ಅಧ್ಯಯನವೂ ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ಅತ್ಯಮೂಲ್ಯ ಸೇರ್ಪಡೆಯಾಗುತ್ತದೆ. ಈ ಅಧ್ಯಯನದ ಮೂಲಕ ಅಂದಿನ ನಾಯಕ ಅರಸರ ಆದರ್ಶಗಳು, ಮೌಲ್ಯಗಳು, ಪೂರ್ವ ಪರಂಪರೆಯ ಮುಂದುವರಿಕೆ ಇತ್ಯಾದಿಯನ್ನು ತಕ್ಕಮಟ್ಟಿಗಾದರೂ ತಲಸ್ಪರ್ಶಿಯಾಗಿ ಪರಿಶೀಲಿಸಿ ನಿರೂಪಿಸಲು ಪ್ರಯತ್ನಿಸಿದೆ. ಹಿಂದೂಧರ್ಮದ ರಕ್ಷಾಕವಚವೆಂಬಂತೆ ಬಾಳಿ ಬದುಕಿದ ನಾಯಕ ಅರಸರ ಸಾಂಸ್ಕೃತಿಕ ಆಚರಣೆಗಳ ಸಮಗ್ರ ಅಧ್ಯಯನವೇ ಪ್ರಸ್ತುತ ಮಹಾಪ್ರಬಂಧದ ಉದ್ದೇಶ.

ಇತ್ತೀಚಿನ ಸಂಶೋಧನೆಗಳು ತಲಸ್ಪರ್ಶಿ ಅಧ್ಯಯನಗಳಾಗಿದ್ದು, ನವನವೀನ ಆಯಾಮಗಳನ್ನು ಮೈಗೂಡಿಸಿಕೊಂಡು ಮುನ್ನಡೆಯುತ್ತಿರುವುದು ಸೂಕ್ಷ್ಮ ಅಧ್ಯಯನಗಳಿಗೆ ನಾಂದಿಯಾಗಿದೆ. ಈಗೀಗ ಈ ಅಧ್ಯಯನಗಳು ಕೆಳಮಟ್ಟದಿಂದ ಪುನಾರಚನೆಯಾಗುತ್ತಿವೆ. ಒಂದು ನಾಡಿನ ಇತಿಹಾಸದಲ್ಲಿ ಪ್ರಧಾನ

ರಾಜವಂಶಗಳಿಗೆ ನೀಡುವ ಮಹತ್ವವನ್ನು ಈ ಸ್ಥಾನಿಕ ಸಂಸ್ಥಾನಗಳಿಗೂ ನೀಡುತ್ತಿರುವುದು ಈ ಮನೆತನಗಳ ವಿಸ್ತೃತ ಸ್ವರೂಪದ ಅಧ್ಯಯನಕ್ಕೆ ಪುಷ್ಟಿ ನೀಡಿದಂತಾಗಿದೆ.

ಈ ನಾಯಕ ಮನೆತನಗಳು ಕೇವಲ ಹಿಂದಿನ ಅರಸರ ನಾಮಾವಳಿಯನ್ನೂ, ಅವರ ವಂಶಗಳ ಪರಂಪರೆಯನ್ನು ಹಲಕೆಲವು ರಾಜಕೀಯ ಕಾರ್ಯನೀತಿಗಳನ್ನು ಹೊಂದದೆ, ತಮ್ಮದೇ ಆದ ಸಾಹಸ, ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ವೈಭವದಿಂದ ಮೆರೆದಿವೆ. ತಮ್ಮ ಮೂಲಪ್ರವೃತ್ತಿಗನುಗುಣವಾಗಿ ವೀರರಾಗಿ, ಶೂರರಾಗಿ ಸ್ವಾತಂತ್ರ್ಯಾಭಿಮಾನಕ್ಕೆ ಹೆಸರಾಗಿ ಹೆಮ್ಮೆಯ ಜನಾಂಗವೆನಿಸಿಕೊಂಡು ಇತಿಹಾಸ ಪ್ರಸಿದ್ಧರೆನಿಸಿದುದು ಇವರ ವೈಶಿಷ್ಟ್ಯ. ಅಲ್ಲದೆ ಇವರು ಹೊಂದಿದ್ದ ಪ್ರಜಾವಾತ್ಸಲ್ಯ, ಸಾಹಿತ್ಯಪ್ರೇಮ, ರಾಜನೀತಿ, ಪ್ರೇಮನಿಷ್ಠೆ, ದೈವಭಕ್ತಿಗಳು ಹಾಗೂ ಅನುಸರಿಸಿದ ಸಮನ್ವಯದ ಧಾರ್ಮಿಕ ನೀತಿಗಳು ಇವರ ಪ್ರತಿಷ್ಠೆಯನ್ನು ಹೆಚ್ಚಿಸಿವೆ. ಇವರು ಕೇವಲ ಭೋಗದೆಡೆಗೆ ಗಮನ ನೀಡಿದವರಲ್ಲ; ತ್ಯಾಗ, ಧರ್ಮ, ಸಜ್ಜನಿಕೆ ಮೊದಲಾದವುಗಳೆಡೆಗೂ ಗಮನ ನೀಡಿದಂಥವರು. ಹೀಗಾಗಿ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ವಲಯಗಳಲ್ಲಿ ಇವರಿಗೆ ವಿಶಿಷ್ಟ ಸ್ಥಾನವಿದೆ. ಈ ಮನೆತನಗಳಿಗೆ ಉಜ್ವಲ ಪರಂಪರೆಯಿದೆ ಎಂಬುದನ್ನು ಅವರ ಸಾಂಸ್ಕೃತಿಕ ಆಚರಣೆಗಳ ಅಧ್ಯಯನದ ಮೂಲಕ ಈ ಮಹಾಪ್ರಬಂಧದಲ್ಲಿ ಸಮರ್ಥಿಸಲು ಪ್ರಯತ್ನಿಸಲಾಗಿದೆ.

ನಾಯಕ ಅರಸುಮನೆತನಗಳು ಕರ್ನಾಟಕ ಇತಿಹಾಸದ ಒಂದು ಅನಿವಾರ್ಯ ಭಾಗವಾಗಿರುವುದರಿಂದ ಈ ಮನೆತನಗಳ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವುದು ಅರ್ಥಪೂರ್ಣವಾದುದು; ಹಾಗೂ ಈ ಅಧ್ಯಯನಕ್ಕೆ ತಾತ್ವಿಕ ಚೌಕಟ್ಟು ಅಗತ್ಯ. ಪ್ರಸ್ತುತ ಮಹಾಪ್ರಬಂಧವನ್ನು ಈ ನಿಟ್ಟಿನಲ್ಲಿ ರೂಪಿಸಲು ಪ್ರಯತ್ನಿಸಲಾಗಿದೆ. ಈ ಮನೆತನಗಳ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪಗಳ ಬಗೆಗೆ ಸ್ಥೂಲವಾಗಿಯಾದರೂ ಇಲ್ಲಿ ವಿವೇಚಿಸಲಾಗಿದೆ. ಮುಖ್ಯವಾಗಿ, ಈ ಅಧ್ಯಯನದ ಪ್ರಸ್ತುತತೆ ಕುರಿತು ಇಲ್ಲಿ ಗಮನಿಸದೆ ಇಲ್ಲ. ಈ ಹಿನ್ನೆಲೆಯಲ್ಲಿ ಇಂದಿಗೂ ಜೀವಂತವಿರುವ ಪ್ರಮುಖ ನಾಯಕ ಅರಸು ಮನೆತನಗಳಾದ ಚಿತ್ರದುರ್ಗ, ಸುರಪುರ, ಆನೆಗೊಂದಿ; ಸಹ ಮನೆತನಗಳಾದ ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನಗಳು; ಅಲ್ಲದೆ ಇಲ್ಲಿಯವರೆಗೆ ಯಾವುದೇ ರೀತಿಯ ಸಂಶೋಧನೆಗೊಳಪಡದ ಗುಡಗುಂಟಿ, ಗುಂತಗೋಳ ಹಾಗೂ ದೇವದುರ್ಗದ ನಾಯಕ ಅರಸು ಮನೆತನಗಳ ಕುರಿತಾಗಿ ಇಲ್ಲಿ ಮೊಟ್ಟಮೊದಲ ಬಾರಿಗೆ ಅವರ ರಾಜಕೀಯ ವೃತ್ತಾಂತದೊಡನೆ ಸಾಂಸ್ಕೃತಿಕ ಚರಿತ್ರೆಯನ್ನೂ ರಚಿಸಲಾಗಿದೆ.

ಈ ಸಂದರ್ಭದಲ್ಲಿ ಇಂದು ಈ ಎಲ್ಲ ನಾಯಕ ಅರಸುಮನೆತನಗಳ ಸಾಂಸ್ಕೃತಿಕ ಇತಿಹಾಸದ ಕಡೆ ಗಮನಹರಿಸಬೇಕಾದ ಅಗತ್ಯವಿದೆ. ನಾಯಕ ಅರಸುಮನೆತನಗಳು ಕೈಬಿಟ್ಟ ಆಚರಣೆಗಳ ಕೊಂಡಿಗಳನ್ನು ಸೇರಿಸುವ ಪ್ರಕ್ರಿಯೆಯಲ್ಲಿ ರಾಜಕೀಯ ಇತಿಹಾಸಕ್ಕಿಂತ ಸಾಂಸ್ಕೃತಿಕ ಇತಿಹಾಸ ಪರಿಣಾಮವನ್ನುಂಟು

ಮಾಡುತ್ತದೆ. ಈ ಹಿನ್ನೆಲೆಯಲ್ಲಿ ಆ ರಾಜಮನೆತನಗಳ ಏಳುಬೀಳಿನ ಒಂದು ಪ್ರದೇಶದ ಸಂಸ್ಕೃತಿಯು ಆಗಿರುತ್ತದೆ. ಹೀಗಾಗಿ ನಮ್ಮಲ್ಲಿ ಸಾಮಾಜಿಕ ಇತಿಹಾಸವಾಗಲಿ, ಸಾಂಸ್ಕೃತಿಕ ವಿಕಾಸವಾಗಲಿ, ರಾಜಕೀಯ ಇತಿಹಾಸದಷ್ಟು ಬೆಳಕಿಗೆ ಬಂದಿಲ್ಲ. ಆದರೆ ಆ ನಿಟ್ಟಿನಲ್ಲಿ ಪ್ರಯತ್ನ ನಡೆದಿದೆ ಎಂಬ ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಅಭಿಪ್ರಾಯ ಈ ಮನೆತನಗಳ ಸಂಶೋಧನೆಗೆ ಪ್ರೇರಣೆ ನೀಡುತ್ತದೆ. ನಾಯಕ ಅರಸರು ನಾಡಿನ ನಾನಾ ಭಾಗಗಳಲ್ಲಿ ತಮ್ಮವೇ ಆದ ವಿಶಿಷ್ಟ, ಆದರ್ಶ ಸಂಸ್ಥಾನಗಳನ್ನು ಸ್ಥಾಪಿಸಿದ್ದಾರೆ; ಉನ್ನತ ಸಂಸ್ಕೃತಿಯನ್ನು ಮೆರೆದಿದ್ದಾರೆ. ಈ ಜನಾಂಗದ ಅರಸರ ಚರಿತ್ರೆಯ ಸಮಗ್ರತೆಯನ್ನು ಕಾಪಾಡಲು ಹಾಗೂ ಅವರ ಹಿಂದಿನ ವೈಭವ ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ನೆನಪು ಮಾಡಿಕೊಡಲು ಪ್ರಸ್ತುತ ಅಧ್ಯಯನದ ಮೂಲಕ ಸಹಾಯಕವಾಗಬಹುದೆಂಬ ಆಶಯ ಇಲ್ಲಿಯದು. ಈ ದೃಷ್ಟಿಯಿಂದ ಮನೆತನಗಳ ಸಾಂಸ್ಕೃತಿಕ ಇತಿಹಾಸವನ್ನು ಚಿರಂತನಗೊಳಿಸಿ ವರ್ತಮಾನ ಹಾಗೂ ಭವಿಷ್ಯದ ತಲೆಮಾರಿಗೆ ಆಧಾರಪೂರಿತ ನೈಜ ಹಾಗೂ ವಸ್ತುನಿಷ್ಠ ಚರಿತ್ರೆಯನ್ನು ಕಟ್ಟಿಕೊಡುವುದು ಅನಿವಾರ್ಯ.

ಇಂದಿನ ಅತ್ಯಾಧುನಿಕ ನಾಗರಿಕ ಪರಿಸರದಲ್ಲಿ ಆಯಾ ಮನೆತನಗಳ ಮೂಲ ಸಂಸ್ಕೃತಿಯ ಅಂಶಗಳು ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಸೊರಗುತ್ತಿವೆ. ನಾಗರಿಕತೆಯ ಪ್ರಭಾವದಿಂದ ಮೂಲದ ಎಷ್ಟೋ ಸಾಂಸ್ಕೃತಿಕ ಆಚರಣೆಗಳು ಮರೆಯಾಗುವ ಸ್ಥಿತಿಯಲ್ಲಿವೆ. ಅವುಗಳಲ್ಲಿ ಕೆಲವು ಆಚರಣೆಗಳು ಮಾರ್ಪಾಡುಗಳನ್ನು ಹೊಂದುತ್ತಲಿವೆ. ಹೀಗಾಗಿ ಅವುಗಳು ಮರೆಯಾಗುವ ಮುನ್ನ ಅವುಗಳನ್ನು ಗುರುತಿಸುವ, ದಾಖಲಿಸುವ, ಕಾರ್ಯ ನಡೆಯಬೇಕಾಗಿರುವುದು ಅತ್ಯವಶ್ಯಕ. ಹೀಗಾಗಿ ಈ ನಾಯಕ ಅರಸುಮನೆತನಗಳ ಸಾಂಸ್ಕೃತಿಕ ಹಿರಿಮೆಯನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಈ ಮನೆತನಗಳು ತಮ್ಮದೇ ಆದ ವಂಶಾನುಚರಿತ್ರೆಯನ್ನು ಹೊಂದಿದ್ದು, ಈ ಮನೆತಗಳ ರಾಜಕೀಯ ಮುಖಗಳನ್ನು ಪರಿಚಯಿಸುವ ಹಲವಾರು ಗ್ರಂಥಗಳು ನೂರಾರು ಲೇಖನಗಳೂ ಪ್ರಕಟಗೊಂಡಿವೆ. ಅವುಗಳಲ್ಲಿ ಪ್ರಮುಖವಾದುವನ್ನು ಈ ಕೆಳಗಿನಂತೆ ಸಮೀಕ್ಷಿಸಬಹುದು.

ಚಿತ್ರದುರ್ಗದ ನಾಯಕ ಅರಸರಿಗೆ ಸಂಬಂಧಿಸಿದ ಕೆಲವು ಕೃತಿಗಳು, ಸಂಶೋಧನ ಅಧ್ಯಯನಗಳು ಹಾಗೂ ಲೇಖನಗಳು ಪ್ರಕಟಗೊಂಡಿವೆ. ಬಿ.ಎಲ್.ರೈಸ್ ಅವರು ಚಿತ್ರದುರ್ಗದ ಜಿಲ್ಲೆಯ ಶಾಸನ ಗಳನ್ನು ಒಳಗೊಂಡ ಎಪಿಗ್ರಾಫಿಯ ಕರ್ನಾಟಿಕ ೧೧ನೆಯ ಸಂಪುಟವನ್ನು ೧೯೦೩ರಲ್ಲಿ ಪ್ರಕಟಿಸಿದ್ದಾರೆ. ಸಿ.ಹಯವದನರಾವ್ ಅವರ, 'ಮೈಸೂರು ಗೆಜೆಟಿಯರ್ ಸಂಪುಟ', ಬಿ.ಎನ್.ಶ್ರೀಸತ್ಯನ್ ಅವರ 'ಚಿತ್ರದುರ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್'ಗಳಲ್ಲಿ ಚಿತ್ರದುರ್ಗದ ಕುರಿತಾದ ಖಚಿತ ವಿವರಣೆ ಇದೆ. ಆರ್.ನರಸಿಂಹಾಚಾರ್, ಡಾ.ಎಂ.ಎಚ್.ಕೃಷ್ಣ, ಡಾ. ಎಂ.ಶೇಷಾದ್ರಿ, ಡಾ.ಎಂ.ಎಸ್. ನಾಗರಾಜರಾವ್, ಹುಲ್ಲೂರು ಶ್ರೀನಿವಾಸ ಜೋಯಿಸ, ಪ್ರೊ.ಲಕ್ಷ್ಮಣ್ ತೆಲಗಾವಿ, ಪ್ರೊ.ಬಿ.ರಾಜಶೇಖರಪ್ಪನವರು ಶೋಧಿಸಿದ ಶಾಸನಗಳು ಈ ನಿಟ್ಟಿನಲ್ಲಿ ಪ್ರಮುಖವಾಗಿವೆ. ಅಲ್ಲದೆ ಪ್ರೊ.ಲಕ್ಷ್ಮಣ್ ತೆಲಗಾವಿ ಅವರ ನೇತೃತ್ವದ

ಚಿತ್ರದುರ್ಗದ ಸಂಶೋಧನ ತಂಡದವರು ಕೆಲವು ಶಾಸನಗಳನ್ನು ಪತ್ತೆ ಹಚ್ಚುವುದರ ಮುಖಾಂತರ ಚಿತ್ರದುರ್ಗನಾಯಕ ಅರಸರ ಇತಿಹಾಸಕ್ಕೆ ಹೆಚ್ಚುವರಿಯಾದ ಅಂಶಗಳನ್ನು ಒದಗಿಸುವಲ್ಲಿ ಸಫಲರಾಗಿದ್ದಾರೆ. ಡಾ.ಪಿ.ಕೃಷ್ಣರಾವ್ ಅವರು ವಿದ್ಯಾರ್ಥಿಯಾಗಿದ್ದಾಗಲೇ ರಚಿಸಿದ 'ಚಿತ್ರದುರ್ಗದ ಬೆಟ್ಟ'(೧೯೧೯) ಮತ್ತು 'ನಾಯಕ ಸಾಮ್ರಾಜ್ಯ'(೧೯೨೧) ಲೇಖನಗಳು ಇತರ ಸಮಕಾಲೀನ ಸಂಶೋಧಕರಿಗೆ ಪ್ರೇರಣೆ ನೀಡಿದವು. ನಂತರ ಹುಲ್ಲೂರು ಶ್ರೀನಿವಾಸ ಜೋಯಿಸರು ಚಿತ್ರದುರ್ಗದ ಇತಿಹಾಸ ಸಂಶೋಧನೆಯ ಕ್ಷೇತ್ರಕ್ಕೆ ಸಂಬಂಧಿಸಿದ ಅನೇಕ ಸಂಶೋಧನ ಲೇಖನಗಳನ್ನು ಪ್ರಕಟಿಸಿದರು. ಇವುಗಳು ಅಲ್ಲಲ್ಲಿ ಪತ್ರಿಕೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟಗೊಂಡಿದ್ದವು. ಅಲ್ಲಿಯ ಪ್ರಮುಖ ಲೇಖನಗಳನ್ನು ಆಯ್ದು, ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ ಅವರು 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು'(೧೯೭೬) ಮತ್ತು 'ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು'(೧೯೯೫) ಎಂಬ ಹೆಸರಿನ ಎರಡು ಸಂಪುಟಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಇಲ್ಲಿಯ ಲೇಖನಗಳು ಚಿತ್ರದುರ್ಗದ ಇತಿಹಾಸದ ವೈವಿಧ್ಯಮಯ ಲೇಖನಗಳನ್ನು ಒಳಗೊಂಡಿವೆ.

ಎಂ.ಎಸ್.ಪುಟ್ಟಣ್ಣನವರು 'ಪಾಳಯಗಾರರು : ಐದು ಉಪನ್ಯಾಸಗಳು'(೧೯೨೪) ಹಾಗೂ ಚಿತ್ರದುರ್ಗದ ನಾಯಕ ಅರಸರ ಇತಿಹಾಸವನ್ನು 'ಚಿತ್ರದುರ್ಗದ ಪಾಳಯಗಾರರು' ಕೃತಿಯಲ್ಲಿ ಮೊಟ್ಟಮೊದಲ ಬಾರಿಗೆ ಪೂರ್ಣಪ್ರಮಾಣದಲ್ಲಿ ನಿರೂಪಿಸಿದ್ದಾರೆ. ಚಿತ್ರದುರ್ಗದ ನಾಯಕ ಅರಸರ ವಂಶಸ್ಥರಾದ ರಾಜಾ ಬಿಚ್ಚುಕತ್ತಿ ಪರಶುರಾಮಪ್ಪನಾಯಕರು, 'ಚಿತ್ರದುರ್ಗದ ಗಜಕೇಸರಿ ಭಾಗ ೧'(೧೯೬೧) ಮತ್ತು ಚಿತ್ರದುರ್ಗ ಪಾಳೆಯಗಾರರ ಇನ್ನೋರ್ವ ವಂಶಸ್ಥರಾದ ಬಿ.ಎಸ್.ಶ್ರೀನಿವಾಸನಾಯಕರು 'ಚಿತ್ರದುರ್ಗದ ಕಾಮಗೇತಿ ಅರಸರು'(೧೯೮೪) ಕೃತಿಗಳನ್ನು ರಚಿಸಿದ್ದಾರೆ.

ಎಚ್.ಟಿ.ದೇಶಪಾಂಡೆ ಅವರು ಪೂನಾ ವಿಶ್ವವಿದ್ಯಾಲಯಕ್ಕೆ 'ಚಿತ್ರದುರ್ಗ ನಾಯಕರ ಕಾಲದ ಭೂ ವ್ಯವಸ್ಥೆ' ಎಂಬ ಮಹಾಪ್ರಬಂಧವನ್ನು(೧೯೭೨) ಸಾದರಪಡಿಸಿದ್ದಾರೆ. ನಂತರ ಚಿತ್ರದುರ್ಗ ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿಯಿಂದ ಚಿತ್ರದುರ್ಗ ಜಿಲ್ಲೆಯ ಇತಿಹಾಸ ಕುರಿತಾದ ಲೇಖನಗಳುಳ್ಳ 'ಚಂದ್ರವಳ್ಳಿ'(೧೯೭೬) ಎಂಬ ಸಂಪುಟವನ್ನು ಡಾ.ಎಂ.ವಿ.ಶ್ರೀನಿವಾಸ ಹಾಗೂ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಸಂಪಾದಿಸಿದ್ದಾರೆ. ಅಲ್ಲದೆ, ಚಿತ್ರದುರ್ಗ ವೈವಿಧ್ಯಮಯ ಲೇಖನಗಳನ್ನೊಳಗೊಂಡ 'ಐತಿಹಾಸಿಕ ಚಿತ್ರದುರ್ಗ' ಎಂಬ ಕೃತಿಯನ್ನು ಲಕ್ಷ್ಮಣ್ ತೆಲಗಾವಿ ಹಾಗೂ ಕೆ.ವೆಂಕಣ್ಣಾಚಾರ್‌ರವರು ಸಂಪಾದಿಸಿದ್ದಾರೆ. ಎ.ಡಿ.ಕೃಷ್ಣಯ್ಯ ಅವರ 'ಭಾರತದ ಧೀರ ಮಹಿಳೆ', 'ಚಿತ್ರದುರ್ಗದ ಒನಕೆ ಓಬವ್ವ', ಕೆ.ವೆಂಕಣ್ಣಾಚಾರ್, ಲಕ್ಷ್ಮಣ್ ತೆಲಗಾವಿ ಮತ್ತು ಹು.ಶ್ರೀ.ಪಾಂಡುರಂಗ ಜೋಯಿಸ್ ಸಿದ್ಧಪಡಿಸಿದ 'ಚಿತ್ರದುರ್ಗ ದರ್ಶಿನಿ', ಪ್ರೊ.ಲಕ್ಷ್ಮಣ್ ತೆಲಗಾವಿ ಅವರ 'ಇದು ಚಿತ್ರದುರ್ಗ' ಮುಂತಾದ ಕೃತಿಗಳು ಚಿತ್ರದುರ್ಗದ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸುತ್ತವೆ.

ಅಲ್ಲದೇ ಲಿಂಗಣ್ಣಕವಿಯ 'ಕೆಳದಿನೃಪವಿಜಯಂ', ನಲ್ಲಪ್ಪನ 'ಹೈದರ್‌ನಾಮಾ' ಚಂದ್ರಭೀಮಕವಿಯ 'ಮದಕರಿರಾಜೇಂದ್ರದಂಡಕ', ದೊಡ್ಡವೀರರಾಜೇಂದ್ರಒಡೆಯ ಬರೆಯಿಸಿದ 'ಕೊಡಗು ಸಂಸ್ಥಾನದ ರಾಜೇಂದ್ರನಾಮೆ', ಮಹಾದೇವಕವಿಯ 'ಮಹಾಲಿಂಗೇಂದ್ರವಿಜಯ', ಬಿ.ರಾಮರಾವ್ ಅವರು ಬೆಳಕಿಗೆ ತಂದ 'ಕಣಕುಪ್ಪೆಕೋಟೆಕಟ್ಟಿದ ಕೈಫಿಯತ್ತು', ಹುಲ್ಲೂರು ಶ್ರೀನಿವಾಸ ಜೋಯಿಸರು ಪ್ರಕಟಿಸಿದ ಭೀಮಾಜಿಪಂತನ 'ಚಿತ್ರದುರ್ಗದ ಬಖೈರ್', ಎಂ.ವಿ.ಚಿತ್ರಲಿಂಗಯ್ಯ ಮತ್ತು ಎಂ.ವಿ.ಶ್ರೀನಿವಾಸ್ ಅವರು ಸಂಗ್ರಹಿಸಿದ 'ರಾಮನಗರಂ ಕೈಫಿಯತ್ತು' ಪ್ರಮುಖವಾದವು.

ಈ ಅರಸರಿಗೆ ಸಂಬಂಧಿಸಿದ ಜನಪದಸಾಹಿತ್ಯ ಆಕರಗಳಾದ ಕ.ರಾ.ಕೃಷ್ಣಸ್ವಾಮಿಯವರು ಸಂಪಾದಿಸಿದ 'ಪಾಳಯಗಾರರ ಪದಗಳು', ಹಾಗೂ 'ಚಿತ್ರಕಲ್ಲು ಮದಕರಿ', ಹುಲ್ಲೂರು ಶ್ರೀನಿವಾಸ ಜೋಯಿಸ, ಮತಿಘಟ್ಟ ಕೃಷ್ಣಮೂರ್ತಿಗಳು ಸಂಗ್ರಹಿಸಿದ ಗೀತೆಗಳು, ಪ್ರೊ.ಜಿ.ಎಸ್.ದೀಕ್ಷಿತ್ ಸಂಗ್ರಹಿಸಿದ 'ದೊಡ್ಡೇರಿ ಕಾಳಗ', ಪ್ರೊ.ಲಕ್ಷ್ಮಣ್ ತೆಲಗಾವಿ ಅವರ 'ಮಾಯಕೊಂಡದ ಕಾಳಗದ ಕೋಲುಪದ'ಗಳು ಅತ್ಯಂತ ಉಪಯುಕ್ತವಾದವು. ಪ್ರೊ.ಲಕ್ಷ್ಮಣ್ ತೆಲಗಾವಿ ರಚಿಸಿದ 'ಜನಪದ ವೀರಸಾಹಿತ್ಯ, ಚಾರಿತ್ರಿಕ ವಿವೇಚನೆ'(೧೯೮೭), ಫ್ಲೀಟ್‌ರು ಸಂಗ್ರಹಿಸಿದ 'ಲಾವಣಿಗಳು' ಮುಂತಾದ ಚಾರಿತ್ರಿಕ ಜನಪದಗೀತೆಗಳು ಪ್ರಮುಖವಾದರೆ, ಈ ಕ್ಷೇತ್ರದಲ್ಲಿ ಡಾ.ಜೀ.ಶಂ.ಪರಮಶಿವಯ್ಯ, ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ. ಕೃಷ್ಣಮೂರ್ತಿ ಹನೂರು, ಬಾರಿಕೇರ ಕರಿಯಪ್ಪ, ಡಾ.ಮೀರಾಸಾಬಿಹಳ್ಳಿ ಶಿವಣ್ಣ ಮೊದಲಾದವರು ಚಿತ್ರದುರ್ಗದ ನಾಯಕ ಅರಸರ ಕುರಿತಾಗಿ ಕೆಲವು ಜನಪದಸಾಹಿತ್ಯದ ಲೇಖನಗಳನ್ನು ಬರೆದಿದ್ದಾರೆ.

ಅಲ್ಲದೇ ಈ ನಾಯಕ ಅರಸರ ಕುರಿತಾಗಿ ಕೆಲವು ಲೇಖನಗಳನ್ನು ಪ್ರಕಟಿಸಿದವರೆಂದರೆ ಎಂ.ಚಿದಾನಂದಮೂರ್ತಿ, ಸೂರ್ಯನಾಥ ಕಾಮತ್, ಬಿ.ರಾಮರಾವ್, ಜಿ.ಎನ್.ಸಾಲೆತ್ತೊರೆ, ಚನ್ನಪ್ಪ ಎರೇಸೀಮೆ, ಎಂ.ವಿ. ಚಿತ್ರಲಿಂಗಯ್ಯ, ಹೆಚ್.ವಿ.ವೀರನಾಯಕ, ಬಿ.ರಾಜಶೇಖರಪ್ಪ, ಹೆಚ್.ಶ್ರೀಶೈಲ ಆರಾಧ್ಯ, ಮೀರಾಸಾಬಿಹಳ್ಳಿ ಶಿವಣ್ಣ, ಕೆಳದಿ ಗುಂಡಾಜೋಯಿಸ್, ಎಲ್. ಬಸವರಾಜು, ಕಮಲಾ ಹಂಪನಾ, ಎಸ್.ಶ್ರೀಕಂಠಶಾಸ್ತ್ರಿ, ಝುಡ್. ಮಹ್ಮದ್ ಜಫರುಲ್ಲಾ, ಪಿ.ಕೃಷ್ಣರಾವ್, ಟಿ.ಗಿರಿಜ, ಶ್ರೀಧರ ಮೂರ್ತಿ, ಹು.ಶ್ರೀ.ಪಾಂಡುರಂಗ ಜೋಯಿಸ್, ಶಂಕರ್ ಎಸ್.ಅಥಣಿ, ಕೆ.ವಿ.ಮಂಜುನಾಥರಾವ್, ಜೆ.ಕೃಷ್ಣಪ್ಪ, ಟಿ.ಗಿರಿಜ, ಬಿ.ಎಲ್.ವೇಣಿ, ಎಂ.ವಿ.ಶ್ರೀನಿವಾಸ್ ಹಾಗೂ ಲಕ್ಷ್ಮಣ್ ತೆಲಗಾವಿ ಪ್ರಮುಖ ರಾಗಿದ್ದಾರೆ.

ಸುರಪುರ ನಾಯಕ ಅರಸರ ಚರಿತ್ರೆಗೆ ಸಂಬಂಧಿಸಿದಂತೆ ಕಪಟರಾಳ ಕೃಷ್ಣರಾವ್‌ರವರ 'ಸುರಪುರ ಸಂಸ್ಥಾನದ ಇತಿಹಾಸ', ಪುರುಷಕಾರಿ ಲೋಕಯ್ಯನ 'ಸುರಪುರ ರಾಜರ ಚರಿತೆ' ಹಸ್ತಪ್ರತಿ, ರಾಜಪುರೋಹಿತ ಜಯತೀರ್ಥರವರ 'ಸುರಪುರದ ಶೂರ ನಾಯಕರು', Framurz Jung Bahadur Nawabನ 'Shorapur : An Ancient Beydur Raj(1907). Phillip Meadows Taylorನ 'The Story

of My Life(1920) ಮತ್ತು ಎಂ.ವಿ.ಕೃಷ್ಣರಾವ್ ಮತ್ತು ಜಿ.ಎಸ್.ಹಾಲಪ್ಪ ಅವರ ಸಂಪಾದಕತ್ವದಲ್ಲಿ ಹೊರಬಂದ History of Freedom Movement in Karnataka Vol.I(1962), ರೇವಣಸಿದ್ದಯ್ಯ ರುದ್ರಸ್ವಾಮಿಯವರ ಸುರಪುರ ತಾಲ್ಲೂಕು ದರ್ಶನ, ಭಾಸ್ಕರ್‌ರಾವ್ ಮುಡಬೂಳರವರ ಮರೆತುಹೋದ ಸುರಪುರ ಇತಿಹಾಸ, ಬಿ.ಕೃಷ್ಣಮಾಚಾರ್ಯರ ಮರೆಯಲಾಗದ ಸುರಪುರ ರಾಜರ ಚರಿತ್ರೆ ಮುಂತಾದವುಗಳು ಪ್ರಮುಖ ಕೃತಿಗಳಾಗಿವೆ. ಅಲ್ಲದೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧಗಳಾದ ಡಾ.ಎನ್.ಎಚ್.ಕುಲಕರ್ಣಿ ಅವರ 'British Relationship with the Principality of Surapur'(೧೯೭೨), ಡಾ.ಆರ್.ಎಸ್.ಚುಳುಕಿ ಅವರ 'The Image of India in the Work's of Phillip Meadows Taylor'(೧೯೮೫), ಡಾ.ಎಸ್.ಕೆ.ಅರುಣಿ ಅವರು ಪೂನಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, 'History and Culture of Surapura Samsthana, North Karnataka A.D.1650'(೧೯೯೮) ಹಾಗೂ ಡಾ.ರಂಗರಾಜ ವನದುರ್ಗರವರ 'ಸುರಪುರ ಸಂಸ್ಥಾನ : ಒಂದು ಅಧ್ಯಯನ'- ಇವುಗಳೆಲ್ಲಾ ಸುರಪುರದ ರಾಜಕೀಯ ಚರಿತ್ರೆಗೆ ಸಂಬಂಧಿಸಿದ ಪ್ರಮುಖವಾದ ಆಕರಗಳು. ಅಲ್ಲದೇ ಈ ಮನೆತನದ ಕುರಿತಾಗಿ ಕೆಲವು ಬಿಡಿಲೇಖನಗಳನ್ನು ಬರೆದು ಪ್ರಕಟಿಸಿದವರಲ್ಲಿ ಆದ್ಯ ರಾಮಾಚಾರ್ಯ, ಸೀತಾರಾಮ ಜಾಗೀರದಾರ, ಎ.ಕೃಷ್ಣ, ಜೆ.ಅಗಸ್ಟೀನ್, ಬಿ.ಆರ್.ಸುರಪುರ, ಪೆರುಮಾಳ್ಳ ಗುಂಡಾಚಾರ್ಯ, ಹನುಮಾಕ್ಷಿ ಗೋಗಿ, ಟಿ.ಸುಚರಿತಾ, ಪಾಂಡುರಂಗ ಚಿನ್ನಾಕರ ಮುಂತಾದವರು ಪ್ರಮುಖರಾಗಿದ್ದಾರೆ.

ಆನೆಗೊಂದಿ ಇತಿಹಾಸಕ್ಕೆ ಸಂಬಂಧಿಸಿದಂತೆ ರಾಬರ್ಟ್ ಸಿವಿಲ್ ಅವರ 'A Forgotten Empire' ಬಿ.ಸೂರ್ಯನಾರಾಯಣರಾವ್ ಅವರ 'A History of Vijayanagar: Never to be Forgotten Empire, Tobert, Natalie ರವರ 'Sacred Lands, Devoted Lives, Hinduism and daily Life in a South Indian Village ಮತ್ತು ಇದೇ ಲೇಖಕರ 'A 'ANEGONDI' Architectural Ethnography of A Royal Village ಹಾಗೂ ಮಂಜುನಾಥ ಬೇವಿನಕಟ್ಟಿ ಅವರು ಸಂಪಾದಿಸಿದ ವಿಜಯನಗರ ಸಾಂಸ್ಕೃತಿಕ ಆಯಾಮಗಳು, ಟಿ.ಪರಮೇಶ್ವರಪ್ಪ ಸಂಪಾದಿಸಿದ ಹಂಪಿ ಪರಂಪರೆ, ರಾಜಾ ಅಚ್ಯುತದೇವರಾಯ ಮತ್ತು ಇತರರು ರಚಿಸಿದ ಆನೆಗೊಂದಿ ಒಂದು ಕಿರುಪರಿಚಯ, ಅಲ್ಲದೇ ಸುಗಂಧ ಅವರು ಪೂನಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ History and Archeaology of Anegondi ಎಂಬ ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ. ಡಿ.ಬಿ.ಕರಡೋಣಿಯವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ 'ಆನೆಗೊಂದಿ : ಒಂದು ಅಧ್ಯಯನ' ಕಿರುಪ್ರಬಂಧ ಮತ್ತು ಈ ಮನೆತನಕ್ಕೆ ಸಂಬಂಧಿಸಿದಂತೆ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ೧೯೯೮ ರಿಂದ ೧೯೯೯ರಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಕೆಲವು ಬಿಡಿಲೇಖನಗಳನ್ನು ಪ್ರಕಟಿಸಿದವರಲ್ಲಿ ಪಿ.ವಿ.ಕೃಷ್ಣಮೂರ್ತಿ, ಶ್ರೀನಿವಾಸ ವಿ.ಪಾಡಿಗಾರ, ಎಸ್. ವಿ. ವೆಂಕಟೇಶಯ್ಯ ಮುಂತಾದವರು ಪ್ರಮುಖರಾಗಿದ್ದಾರೆ.

ಕನಕಗಿರಿ ನಾಯಕ ಅರಸರ ಕುರಿತು ಜಯತೀರ್ಥ ರಾಜಪುರೋಹಿತರು ರಚಿಸಿದ 'ಕನಕಗಿರಿ' ಕೃತಿ, ಶರಣಬಸಪ್ಪ ಪಿ.ಕೋಲ್ಕಾರ ಅವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಅಪ್ರಕಟಿತ ಎಂ.ಫಿಲ್.ನಿಬಂಧ 'ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ವಾಸ್ತುಶಿಲ್ಪ', ದೇವರಕೊಂಡಾರೆಡ್ಡಿ ಅವರು ಸಂಪಾದಿಸಿದ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ' ಪ್ರಮುಖವಾದವು.

ಗುಡೇಕೋಟೆ ನಾಯಕ ಅರಸರ ಕುರಿತು ಹೆಚ್.ಎಂ.ಬಸವರಾಜ ಅವರು ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ 'ಗುಡೇಕೋಟೆ : ಒಂದು ಚಾರಿತ್ರಿಕ ಅಧ್ಯಯನ' ಎಂಬ ಎಂ.ಫಿಲ್.ಅಪ್ರಕಟಿತ ಪ್ರಬಂಧ, ಜರಿಮಲೆ ನಾಯಕ ಅರಸರ ಕುರಿತು ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಪ್ರಕಟಿಸಿದ 'ಜರಿಮಲೆ ಸಂಸ್ಥಾನದ ವಂಶಾವಳಿ', ಹಾಗೂ ಜರಿಮಲೆ ಕುರಿತು ಸಿದ್ಧಪಡಿಸಿರುವ ಗ್ರಂಥ, ನಾಯಕನಹಟ್ಟಿ ಕುರಿತು ಎಂ.ವಿ.ಚಿತ್ರಲಿಂಗಯ್ಯ, ಮೀರಾಸಾಬಿಹಳ್ಳಿ ಶಿವಣ್ಣ ಮುಂತಾದವರು ಪ್ರಕಟಿಸಿರುವ ಲೇಖನಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಮತ್ತೋಡಿನ ನಾಯಕ ಅರಸರನ್ನು ಕುರಿತು ಮಲ್ಲಿಕಾರ್ಜುನ ಎಂ.ಕೆ., ಯಶೋಧಾ ಬಿ. ಮುಂತಾದವರ ಲೇಖನಗಳು, 'ಹರತಿ' ನಾಯಕ ಅರಸರ ಕುರಿತು ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಸಂಪಾದಿಸಿದ 'ಹರತಿ' ವೀರನಾಯಕರ ಅಭಿನಂದನ ಗ್ರಂಥ 'ಹರತಿಸಿರಿ' ಹಾಗೂ ಇವರೇ ರಚಿಸಿದ ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ' ಕೃತಿ; ಅಲ್ಲದೆ ಡಾ.ಎಂ.ವಿ.ವಸು ಅವರು ಸಂಪಾದಿಸಿದ 'ದಕ್ಷಿಣಕರ್ನಾಟಕದ ಅರಸುಮನೆತನಗಳು' ಡಾ.ಎಂ.ಕೆ. ದುರಗಪ್ಪ ಅವರು ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ 'ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ'ಇವು ಈ ಮನೆತನಗಳನ್ನು ಕುರಿತು ಕೆಲವು ಅಧಿಕೃತ ಮಾಹಿತಿಗಳನ್ನು ಒದಗಿಸುತ್ತವೆ. ಬಿ.ತಿಪ್ಪಣ್ಣ ಮರಿಕುಂಟೆ, ಪರಮೇಶ, ಬಿ.ಎಸ್.ಶ್ಯಾಮಲ ರತ್ನಕುಮಾರಿ ಮುಂತಾದವರು ಹಲವಾರು ಬಿಡಿಲೇಖನಗಳನ್ನು ರಚಿಸಿದ್ದಾರೆ.

ಹೀಗೆ ಕರ್ನಾಟಕದ ನಾಯಕ ಅರಸುಮನೆತನಗಳ ಕುರಿತು ಅಧ್ಯಯನ ಮಾಡಿದ ಇನ್ನೂ ಕೆಲವರೆಂದರೆ ಎಂ.ವಿ.ಚಿತ್ರಲಿಂಗಯ್ಯ, ಹೆಚ್.ವಿ.ವೀರನಾಯಕರು, ಡಾ.ಆರ್.ರಾಜಣ್ಣ, ಪಿ.ಅಬ್ದುಲ್ ಸತ್ತಾರ್, ಡಾ.ಎಂ.ಜಿ. ಈಶ್ವರಪ್ಪ, ಡಾ.ರುದ್ರಪ್ಪ ಕರಿಶೆಟ್ಟಿ, ಡಾ.ಹನುಮನಾಯಕ, ಡಾ.ಎಂ.ವಿ.ವಸು, ಡಾ.ಜಿ.ವರದರಾಜರಾವ್, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಎ.ಆರ್.ನಾಯಕ, ಬಿ.ಆರ್.ತುಬಾಕಿ, ಪ್ರೊ.ದೇವೇಂದ್ರ ಮಾಧವನವರ್, ಕುಂ.ಬಾ. ಸದಾಶಿವಪ್ಪ, ಸಂತೆಬೆನ್ನೂರು ಸುಮತೀಂದ್ರ ನಾಡಿಗ, ಬಾಗೂರ್ ಆರ್.ನಾಗರಾಜಪ್ಪ, ಹರ್ತಿಕೋಟೆ ವೀರೇಂದ್ರಸಿಂಹ, ಡಾ.ಎಂ.ಕೆ.ದುರಗಪ್ಪ, ಎಂ.ಪಿ.ವೀಣಾ ಮುಂತಾದವರು. ಇವರು ನಾಯಕ ಅರಸರನ್ನು ಕುರಿತು ಕೆಲವು ಲೇಖನಗಳನ್ನೂ ಪ್ರಕಟಿಸಿರುವುದುಂಟು.

ಈ ಮೇಲಿನ ಕೃತಿಗಳನ್ನು ಹಾಗೂ ಲೇಖನಗಳನ್ನು ಸಮೀಕ್ಷಿಸಿದಾಗ ತಿಳಿದುಬರುವ ಸಂಗತಿಯೇನೆಂದರೆ, ನಾಯಕ ಅರಸುಮನೆತನಗಳ ಆಡಳಿತ, ಆರ್ಥಿಕತೆ ಹಾಗೂ ಅವರ ರಾಜಕೀಯ ವೃತ್ತಾಂತಗಳನ್ನು ಈ

ಬರಹಗಳು ತಿಳಿಸುತ್ತವೆ. ಆದರೆ ಸಾಂಸ್ಕೃತಿಕ ಆಚರಣೆಗಳ ಸಮಗ್ರ ಮಾಹಿತಿಯನ್ನು ಒದಗಿಸುವ ಪ್ರಯತ್ನ ಇಲ್ಲಿ ಕಂಡುಬರುವುದಿಲ್ಲ. ಆದುದರಿಂದ ಈ ಕೊರತೆಯನ್ನು ನೀಗಿಸುವಲ್ಲಿ ಪ್ರಸ್ತುತ ಅಧ್ಯಯನ ಅವಶ್ಯವಿದೆ.

ಕರ್ನಾಟಕದ ನಾಯಕ ಅರಸರುಮನೆತನಗಳ ಸಾಂಸ್ಕೃತಿಕ ಆಚರಣೆಗಳ ಕುರಿತ ಸಾಮಗ್ರಿಯಲ್ಲಿ ಪ್ರಕಟಿತ ಮಾಹಿತಿಗಿಂತಲೂ, ಅಪ್ರಕಟಿತ ಮಾಹಿತಿಯೇ(ಮೌಖಿಕ) ಅಪಾರವಾಗಿರುವುದು ಮುಖ್ಯ. ಇವೆಲ್ಲವುಗಳನ್ನು ಈ ಮಹಾಪ್ರಬಂಧದ ಒಡಲಿಗೆ ಸೇರಿಸುವುದರ ಮುಖಾಂತರ ಈ ನಾಯಕ ಅರಸರ ಸಾಂಸ್ಕೃತಿಕ ಆಚರಣೆಗಳನ್ನು ಸಮಗ್ರವಾಗಿ ಪರಿಚಯಿಸುವ ಕಾರ್ಯವನ್ನು ಈ ಮಹಾಪ್ರಬಂಧದಲ್ಲಿ ಕೈಗೊಳ್ಳಲಾಗಿದೆ. ಈ ಮೂಲಕ ಇದೊಂದು ಸಾಂಸ್ಕೃತಿಕ ನೆಲೆಯ ತಲಸ್ಪರ್ಶಿ ಅಧ್ಯಯನವನ್ನಾಗಿ ಮಾಡಲು ಪ್ರಯತ್ನಿಸಲಾಗಿದೆ.

## ೨.೨ ಅಧ್ಯಯನದ ವ್ಯಾಪ್ತಿ

**'ಕರ್ನಾಟಕದ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ'** ಎಂಬ ಈ ಮಹಾಪ್ರಬಂಧವು ನಾಯಕ ಅರಸುಮನೆತನಗಳ ಸಂಕ್ಷಿಪ್ತ ರಾಜಕೀಯ ಇತಿಹಾಸ ಹಾಗೂ ವಿಸ್ತೃತವಾದ ಅವರ ವಿಶಿಷ್ಟ ಸಾಂಸ್ಕೃತಿಕಾಚರಣೆಗಳನ್ನೊಳಗೊಂಡಿದೆ. ಈ ಅಧ್ಯಯನವನ್ನು ಅನುಕೂಲದ ದೃಷ್ಟಿಯಿಂದ ಆರು ಪ್ರಮುಖ ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದ್ದು, ಈ ಅಧ್ಯಾಯಗಳ ಅಡಿಯಲ್ಲಿ ಉಪಶೀರ್ಷಿಕೆಗಳನ್ನೂ ನೀಡಲಾಗಿದೆ.

### ಅಧ್ಯಾಯ ೧ : ಪ್ರಸ್ತಾವನೆ

ಕರ್ನಾಟಕದಲ್ಲಿ ಸ್ವತಂತ್ರ ರಾಜ್ಯವನ್ನು ಕಟ್ಟಿ ಆಳಿದ ಅನೇಕ ಅರಸುಮನೆತನಗಳ ಸಾಲಿನಲ್ಲಿ ನಾಯಕ ಅರಸುಮನೆತನಗಳು ಸೇರುತ್ತವೆ. ಮೊದಲು ಪಾಳೆಯಪಟ್ಟುಗಳ ಮೂಲಕ ಅಧಿಕಾರಕ್ಕೆ ಬಂದು, ತಮ್ಮ ಮೇಲಿನ ಅರಸನಿಗೆ ಅಥವಾ ಸಾಮ್ರಾಜ್ಯಕ್ಕೆ ಅಧೀನರಾಗಿ, ಆ ಸಾಮ್ರಾಜ್ಯದ ಏಳ್ಗೆಗೆ ತಳಪಾಯವಾಗಿದ್ದರಲ್ಲದೆ ಸಾಮ್ರಾಜ್ಯಕ್ಕೆ ಒದಗುವ ಧಾಳಿಗಳನ್ನು ತಡೆಯುವಲ್ಲಿ ಈ ನಾಯಕ ಅರಸುಮನೆತನಗಳ ಪಾತ್ರ ಹಿರಿದು. ಹೀಗಾಗಿ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ಅಧ್ಯಯನದ ಸಂದರ್ಭದಲ್ಲಿ ನಾಯಕ ಅರಸರ ಪಾತ್ರವನ್ನು ಕಡೆಗಣಿಸಲಾಗದು. ಇವರ ರಾಜಕೀಯ ಮತ್ತು ಬದುಕಿನ ರೀತಿನೀತಿಗಳು, ಅನುಸರಿಸಿದ ಧರ್ಮ, ಬೆಳೆಸಿದ ಕಲೆ, ಜೀವನದ ಮೌಲ್ಯಗಳು ಪ್ರಮುಖವಾದವುಗಳಾಗಿವೆ. ಆದರೆ ಇಲ್ಲಿಯವರೆಗೆ ನಡೆದಿರುವ ಬಹುತೇಕ ಅಧ್ಯಯನಗಳು ಅವರ ರಾಜಕೀಯ ಅಂಶಗಳಿಗೆ ಮಹತ್ವವನ್ನು ನೀಡಿವೆ. ಆದರೆ ವೈಯಕ್ತಿಕ ಜೀವನ ಹಾಗೂ ಅವರ ಸಾಂಸ್ಕೃತಿಕ ಆಚರಣೆಗಳನ್ನು ತಿಳಿಯುವ ಪ್ರಯತ್ನ ಮಾಡಿರುವುದಿಲ್ಲ. ಹೀಗಾಗಿ ಕರ್ನಾಟಕದ ನಾಯಕ ಅರಸುಮನೆತನಗಳನ್ನು ಗಮನದಲ್ಲಿಟ್ಟುಕೊಂಡು

ಅಂದಿನ ಅವರ ವಿಶಿಷ್ಟ ಸಾಂಸ್ಕೃತಿಕ ಆಚರಣೆಗಳನ್ನು ಈ ಮಹಾಪ್ರಬಂಧದ ಮೂಲಕ ಕಟ್ಟಿಕೊಡಲಾಗಿದೆ ಎಂಬ ಅಂಶಗಳನ್ನು ಅಧ್ಯಯನದ ಉದ್ದೇಶ ಮತ್ತು ಮಹತ್ವದಲ್ಲಿ ವಿವರಿಸಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಸಂಬಂಧಿಸಿದಂತೆ ಇಂದಿಗೂ ಜೀವಂತವಿರುವ ಅಂತಹ ನಾಯಕ ಅರಸುಮನೆತನಗಳನ್ನು ಅಧ್ಯಯನದ ವ್ಯಾಪ್ತಿಗೊಳಪಡಿಸಲಾಗಿದೆ. ಅಧ್ಯಯನದ ವಿಧಾನದಲ್ಲಿ ಈಗಾಗಲೇ ಪ್ರಕಟಿತ ಆಕರಗಳಲ್ಲಿಯ ಸಾಂಸ್ಕೃತಿಕ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿಕೊಂಡು ಈ ಮನೆತನಗಳ ವಂಶಸ್ಥರನ್ನು ಮತ್ತು ಆ ಅರಸರ ಅಧೀನದಲ್ಲಿದ್ದ ಅಧಿಕಾರವರ್ಗದವರ ವಂಶಸ್ಥರನ್ನು ಸಂದರ್ಶಿಸುವುದರ ಮೂಲಕ ಮತ್ತು ಆ ಮನೆತನಗಳಲ್ಲಿ ಇಂದಿಗೂ ಪ್ರಚಲಿತವಿರುವ ಮೌಖಿಕ ಮಾಹಿತಿಯನ್ನು ಸಂಗ್ರಹಿಸಿ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ೨ : ಕರ್ನಾಟಕ ನಾಯಕ ಅರಸುಮನೆತನಗಳು : ಅವಲೋಕನ**

ಈ ಅಧ್ಯಾಯದಲ್ಲಿ ಅಧ್ಯಯನದ ದೃಷ್ಟಿಯಿಂದ ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿಗಳನ್ನು ಪ್ರಮುಖವಾದ ಜೀವಂತ ನಾಯಕ ಅರಸುಮನೆತನಗಳೆಂದು, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನಗಳನ್ನು ಇತರ ಜೀವಂತ ಸಹಮನೆತನಗಳೆಂದು ಪರಿಗಣಿಸಲಾಗಿದೆ. ಇಲ್ಲಿಯವರೆಗೂ ಇತಿಹಾಸದ ಪುಟ ಸೇರದ ಗುಡಗುಂಟಿ, ಗುಂತಗೋಳ, ದೇವದುರ್ಗ ಅರಸು ಮನೆತನಗಳ ಕುರಿತಾಗಿ ಬೆಳಕು ಚೆಲ್ಲಲಾಗಿದೆ. ಹಾಗೂ ಕರ್ನಾಟಕದ ಚರಿತ್ರೆಯಲ್ಲಿ ಈ ಎಲ್ಲಾ ಮನೆತನಗಳ ಅಸ್ತಿತ್ವವನ್ನು ಗುರುತಿಸುವುದರೊಂದಿಗೆ ಇವರ ಸಾಧನೆಗಳನ್ನು ಹಾಗೂ ಅವರ ಕಾಲದ ಸ್ಥಿತಿಗತಿಗಳನ್ನು ಸಂಕ್ಷಿಪ್ತ ರಾಜಕೀಯ ಚರಿತ್ರೆಯನ್ನು ಅವಲೋಕಿಸಲಾಗಿದೆ.

**ಅಧ್ಯಾಯ ೩ : ಧಾರ್ಮಿಕ ನೆಲೆಯ ಆಚರಣೆಗಳು**

ಈ ಅಧ್ಯಾಯದಲ್ಲಿ ಧಾರ್ಮಿಕ ಹಿನ್ನೆಲೆಯನ್ನಾಧರಿಸಿ ಆಚರಿಸಲ್ಪಡುವ ಆಚರಣೆಗಳನ್ನು ವಿವರಿಸಲಾಗಿದೆ. ರಾಜರ ಪಟ್ಟಾಭಿಷೇಕದಲ್ಲಿ ಪಟ್ಟಾಭಿಷಿಕ್ತನಾಗುವ ರಾಜನ ಅರ್ಹತೆಗಳು, ಪಟ್ಟಾಭಿಷೇಕದ ನಿಯಮಗಳು, ದತ್ತು ಸ್ವೀಕಾರದ ಅರ್ಹತೆಗಳು, ನಿಯಮಗಳು, ವಿಧಿವಿಧಾನಗಳು ಹಾಗೂ ಪಟ್ಟಾಭಿಷೇಕ ಸಮಾರಂಭದ ಹಂತಗಳಲ್ಲಿ ಉಪನಯನ ಮಹೋತ್ಸವ, ವಿಧಿಪೂರ್ವಕ ವಿವಾಹ, ತುಲಾಭಾರ ಕಾರ್ಯಕ್ರಮ, ದಾನಧರ್ಮ, ಪ್ರಾಯಶ್ಚಿತ್ತಾದಿ ಕಾರ್ಯಕ್ರಮ, ಐಂದ್ರಶಾಂತಿಯ ಕಾರ್ಯಕ್ರಮ, ಸಿಂಹಾಸನಾರೋಹಣ ಕಾರ್ಯಕ್ರಮ, ಕಾಣಿಕೆ ಸಮರ್ಪಣೆ, ಯುವರಾಜ ಪಟ್ಟಾಭಿಷೇಕ ಮುಂತಾದ ಧಾರ್ಮಿಕ ವಿಧಿ-ವಿಧಾನಗಳನ್ನು ವಿವೇಚಿಸಲಾಗಿದೆ.

ಪಟ್ಟದರಸಿಯ ನೇಮಕದಲ್ಲಿ ಪಟ್ಟದರಸಿಯ ಇತರ ಹೆಸರುಗಳು, ಆಕೆಯ ಅರ್ಹತೆಗಳು, ಕಾರ್ಯಗಳು, ಸ್ಥಾನಮಾನಗಳನ್ನು ವಿವರಿಸಲಾಗಿದೆಯಲ್ಲದೆ. ಈ ನಾಯಕ ಅರಸುಮನೆತನಗಳಲ್ಲಿ ಪಟ್ಟದರಸಿಯಾಗಿ,

ಆಳ್ವಿಕೆ ಮಾಡಿದ ಚಿತ್ರದುರ್ಗದ ಓಬಮ್ಮನಾಗತಿ, ಸುರಪುರದ ರಾಣಿ ಅಮ್ಮಾನಾಗತಿ, ರಾಣಿ ಈಶ್ವರಮ್ಮ, ಕನಕಗಿರಿಯ ರಾಣಿ ವೆಂಕಟಮ್ಮ, ರಾಣಿ ಗೌರಮ್ಮ, ಗುಡಗುಂಟಿಯ ರಾಣಿ ಗೌರಮ್ಮ- ಇಂಥ ಪಟ್ಟದ ಅರಸಿಯರು ಕೈಗೊಂಡ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಹಾಗೂ ಇವರ ಅಂತಃಪುರದ ಜೀವನ, ಸಹಗಮನ ಪದ್ಧತಿ ಮುಂತಾದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಯುದ್ಧದ ಪೂರ್ವಸಿದ್ಧತೆಯಲ್ಲಿ ನಾಯಕ ಅರಸರು ಯುದ್ಧಕ್ಕೆ ತೆರಳುವ ಮುನ್ನ ಯುದ್ಧದ ಪೂರ್ವ ಸಿದ್ಧತೆಯನ್ನು ಹೇಗೆ ಮಾಡಿಕೊಳ್ಳುತ್ತಿದ್ದರು ಎಂಬುದಕ್ಕೆ ಸೈನ್ಯ ವ್ಯವಸ್ಥೆ, ಸೈನಿಕರನ್ನು ಯುದ್ಧಕ್ಕಾಗಿ ಅರಸನು ಪ್ರೇರೇಪಿಸುವ ಬಗೆ, ಯುದ್ಧೋಪಕರಣಗಳ ಸಿದ್ಧತೆ, ಕುಲದೇವತೆ, ಮನೆದೇವತೆ ಹಾಗೂ ಆರಾಧ್ಯ ದೇವರುಗಳಿಗೆ ಸಲ್ಲಿಸುವ ಪೂಜೆ, ಸೈನ್ಯ ಶಿಬಿರದ ವ್ಯವಸ್ಥೆಯ ತಯಾರಿ ಮುಂತಾದವುಗಳ ಬಗೆಯನ್ನು ವಿವರಿಸಲಾಗಿದೆ.

ಹಬ್ಬ-ಉತ್ಸವಗಳಿಗೆ ಸಂಬಂಧಿಸಿದಂತೆ ಅರಸರು ಕೌಟುಂಬಿಕವಾಗಿ ಹಾಗೂ ಸಾರ್ವಜನಿಕವಾಗಿ ಆಚರಿಸುವ ಹಬ್ಬ ಉತ್ಸವಗಳಾದ ಯುಗಾದಿ, ದೀಪಾವಳಿ, ಮಹಾಶಿವರಾತ್ರಿ, ಶ್ರೀರಾಮನವಮಿ, ಶ್ರೀ ಕೃಷ್ಣ ಜನ್ಮಾಷ್ಟಮಿ, ದಸರಾ, ಸಂಕ್ರಾಂತಿ ಮುಂತಾದವುಗಳನ್ನು ಆಚರಿಸುವಾಗ ಅರಸರು ಭಾಗವಹಿಸುತ್ತಿದ್ದುದು ಹಾಗೂ ತಮ್ಮ ಭಾಗದ ಅನೇಕ ಜಾತ್ರೆಗಳಲ್ಲಿ ಇಂದಿಗೂ ಆ ಮನೆತನಗಳ ವಂಶಜರು ಭಾಗವಹಿಸುತ್ತಿರುವ ಬಗೆಯನ್ನು ಚರ್ಚಿಸಲಾಗಿದೆ.

ಆರಾಧ್ಯದೇವರುಗಳ ಪೂಜಾವಿಧಾನಗಳಲ್ಲಿ ನಾಯಕ ಅರಸರು ತಮ್ಮ ಮನೆದೇವರು, ಕುಲದೇವರು ಮತ್ತು ಆರಾಧ್ಯದೇವರುಗಳನ್ನು ಪೂಜಿಸುವ ವಿಧಿವಿಧಾನಗಳನ್ನು ತಿಳಿಸಲಾಗಿದೆ. ಅಲ್ಲದೇ ಈ ಅರಸರಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ ಅರಸರು ಶ್ರೀವೈಷ್ಣವಮತವನ್ನು ಹಾಗೂ ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಅರಸರು ಶೈವಮತವನ್ನು ಪಾಲಿಸುತ್ತಿದ್ದರು. ಆದರೂ ಇವರಲ್ಲಿಯ ಸರ್ವಧರ್ಮ ಸಮನ್ವಯ ದೃಷ್ಟಿಕೋನವನ್ನು ಇಲ್ಲಿ ವಿವೇಚಿಸಲಾಗಿದೆ; ಹಾಗೂ ಅನೇಕ ದೇವಾಲಯಗಳಿಗೆ, ಮಠಮಾನ್ಯಗಳಿಗೆ ನೀಡಿದ ದಾನಧರ್ಮವನ್ನು ವಿವರಿಸಲಾಗಿದೆ.

ಈ ಮನೆತನದವರು ಅನುಸರಿಸುತ್ತಿದ್ದ ನಂಬಿಕೆ ಸಂಪ್ರದಾಯಗಳಲ್ಲಿ ಶಕುನ, ಅಪಶಕುನದ ವಿವರಣೆಯನ್ನು ಸಾಂದರ್ಭಿಕವಾಗಿ ನೀಡುತ್ತಾ, ಕನಸು ಕುರಿತು, ಶುಭಮುಹೂರ್ತ, ಅಶುಭ ಮುಹೂರ್ತ, ಪಾಪ ಪುಣ್ಯ, ತೀರ್ಥಯಾತ್ರೆ, ಹರಕೆ, ಶಾಪ, ದೇವರಿಗೆ ಬಲಿ ಕೊಡುವುದು ಹಾಗೂ ಕುಟುಂಬದಲ್ಲಿ ಆಚರಿಸುತ್ತಿದ್ದ ಷೋಡಶ ಸಂಸ್ಕಾರಗಳಾದ ಗರ್ಭದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಕರ್ಣಭೇದನ, ಅನ್ನಪ್ರಾಶನ, ಚೌಲಕಾರ್ಯಕ್ರಮ, ಅಕ್ಷರಾಭ್ಯಾಸ, ವಿದ್ಯಾರಂಭ ಕಾರ್ಯಕ್ರಮ, ಉಪನಯನ, ವಿವಾಹ ಕಾರ್ಯಕ್ರಮ ಮುಂತಾದವುಗಳ ಕುರಿತಾಗಿ ಇಲ್ಲಿ ವಿಶ್ಲೇಷಿಸಲಾಗಿದೆ.

## ಅಧ್ಯಾಯ ೪ : ಸಾಮಾಜಿಕ ನೆಲೆಯ ಆಚರಣೆಗಳು

ಈ ಅಧ್ಯಾಯದಲ್ಲಿ ಅರಸುಮನೆತನಗಳ ಸಾಮಾಜಿಕ ಆಚರಣೆ ಸಾಮಾಜಿಕ ಜೀವನದ ಸ್ವರೂಪ ಹಾಗೂ ಅವರ ಕೌಟುಂಬಿಕ ಹಿನ್ನೆಲೆಯ ವೈಶಿಷ್ಟ್ಯತೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಆಚರಣೆಗಳಲ್ಲೊಂದಾದ ಕುಟುಂಬ ವ್ಯವಸ್ಥೆಯಲ್ಲಿ ಈ ಅರಸರು ಹೆಚ್ಚಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದರು. ಕುಟುಂಬದಲ್ಲಿ ಅರಸ, ರಾಣಿ, ಯುವರಾಜ ಹಾಗೂ ಅರಸುವರ್ಗದ ಹಿರಿಯರ ಪಾತ್ರಗಳನ್ನು ಅವಲೋಕಿಸುತ್ತಾ, ಪ್ರತಿಯೊಬ್ಬರ ಕರ್ತವ್ಯಗಳನ್ನು ಅವಲೋಕಿಸಲಾಗಿದೆ.

ವಿವಾಹ ಪದ್ಧತಿಯಲ್ಲಿ ಈ ಮನೆತನದವರು ಇತರ ಮನೆತನದೊಂದಿಗೆ ಹೊಂದಿರುವ ವೈವಾಹಿಕ ಸಂಬಂಧಗಳು. ಆ ಸಂಬಂಧಗಳ ನಿಯಮಗಳು, ನಿರ್ಬಂಧಗಳು ಹಾಗೂ ಶ್ರೀವೈಷ್ಣವ ಹಾಗೂ ಶೈವ ಪದ್ಧತಿಗನುಗುಣವಾಗಿ ಜರುಗುವ ವಿವಾಹದ ಹಂತಗಳಾದ, ಕನ್ಯೆ ನೋಡುವುದು, ನಿಶ್ಚಿತಕಾರ್ಯ, ಲಗ್ನ ಕಟ್ಟಿಸುವುದು, ಎಲೆಶಾಸ್ತ್ರ ಕಾರ್ಯಕ್ರಮ, ಹರಣಿ ಕಾರ್ಯಕ್ರಮ, ನಾಂದಿ ಕಾರ್ಯಕ್ರಮ, ಮಾಂಗಲ್ಯಧಾರಣ, ವಿವಾಹ ಮಂಟಪ, ಮೆರವಣಿಗೆ, ನಾಗೋಲಿಶಾಸ್ತ್ರ ಮುಂತಾದ ಹಂತಗಳಿಗನುಗುಣವಾಗಿ ವಿವಾಹವು ಜರುಗುವ ಬಗೆಯನ್ನು ವಿವರಿಸಲಾಗಿದೆ.

ಉಡುಗೆ ತೊಡುಗೆಗಳಿಗೆ ಸಂಬಂಧಿಸಿದಂತೆ ಅರಸರು, ರಾಣಿಯರು, ವಿವಿಧ ಸಂದರ್ಭಗಳಲ್ಲಿ ಅಂದರೆ, ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು, ಒಡ್ಡೋಲಗದಲ್ಲಿ, ವಿವಾಹದ ಸಂದರ್ಭದಲ್ಲಿ ಯುದ್ಧದ ಸಂದರ್ಭದಲ್ಲಿ, ಬೇಟೆಯ ಸಂದರ್ಭದಲ್ಲಿ, ಸಾಮಾನ್ಯ ದಿನಗಳಲ್ಲಿ ಧರಿಸುತ್ತಿದ್ದ ಉಡುಪುಗಳು ಹಾಗೂ ಉಡುಪುಗಳ ಬಣ್ಣಗಳನ್ನು ಕುರಿತ ಇವರ ನಂಬಿಕೆಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಆಹಾರ ಪದ್ಧತಿಗೆ ಸಂಬಂಧಿಸಿದಂತೆ ಅನ್ನ, ರೊಟ್ಟಿ, ಸಿಹಿ ತಿಂಡಿಗಳು, ಕಾರದ ತಿನಿಸುಗಳು ದವಸಧಾನ್ಯಗಳು, ಮಧುರ ಪಾನೀಯಗಳು, ಹಣ್ಣಿನ ಆಹಾರ, ತರಕಾರಿಗಳ ಸೇವನೆ, ಮಾಂಸಾಹಾರ ಸೇವನೆ, ಹೈನು, ತಾಂಬೂಲ, ಮದ್ಯಪಾನ ಸೇವನೆ ಕುರಿತು ಹಾಗೂ ದೇವರಿಗೆ ನೈವೇದ್ಯ ಮಾಡುವುದು, ಅಕ್ಕಿಪಡಿ ಪದ್ಧತಿ ಮುಂತಾದ ಆಹಾರ ಸೇವನೆಗೆ ಸಂಬಂಧಿಸಿದ ಕುರಿತ ನಿಯಮ-ನಿರ್ಬಂಧಗಳನ್ನು ಇಲ್ಲಿ ಚರ್ಚಿಸಲಾಗಿದೆ.

ವಿಜಯೋತ್ಸವದಲ್ಲಿ ನಾಯಕ ಅರಸರು ಯಾವ ಯಾವ ಯುದ್ಧದಲ್ಲಿ ಜಯಶಾಲಿಗಳಾದರು, ಪ್ರಯುಕ್ತವಾಗಿ ವಿಜಯೋತ್ಸವವನ್ನು ಆಚರಿಸಿದ ಬಗೆ ಹೇಗೆ, ಅವರ ಮೆರವಣಿಗೆಯ ದೃಶ್ಯ ಹೇಗಿರುತ್ತಿತ್ತು, ವಿಜಯೋತ್ಸವ ದಲ್ಲಿ ದೇವರಿಗೆ ಸಲ್ಲಿಸುತ್ತಿದ್ದ ಪೂಜೆಯ ಬಗೆ ಹಾಗೂ ವಿಜಯಿ ಸೈನಿಕರನ್ನು ಸತ್ಕರಿಸುತ್ತಿದ್ದ ರೀತಿಯನ್ನು ಇಲ್ಲಿ ವಿವರಿಸಲಾಗಿದೆ.

ಕಪ್ಪಕಾಣಿಕೆ ಪದ್ಧತಿಯಲ್ಲಿ ಕಪ್ಪಕಾಣಿಕೆಯ ಉದ್ದೇಶ, ಕಾಣಿಕೆಯ ರೀತಿಗಳು, ನಾಯಕ ಅರಸರು ತಮ್ಮ ಮೇಲಿನ ಅರಸರಿಗೆ ನೀಡುತ್ತಿದ್ದ ಕಪ್ಪಕಾಣಿಕೆ ಹಾಗೂ ಇವರಿಗೆ ಅಧೀನ ಅರಸರು ನೀಡುತ್ತಿದ್ದ ಕಪ್ಪಕಾಣಿಕೆ ಕುರಿತು ತಿಳಿಸಲಾಗಿದೆ.

ಬೇಟೆಯ ಪದ್ಧತಿಯಲ್ಲಿ ಅರಸರ ಬೇಟೆಯ ಉದ್ದೇಶ, ಯುಗಾದಿಯ ಬೇಟೆಯ ಸಂದರ್ಭಗಳಾದ ಅರಸರ ಬೇಟೆ, ದೈವದ ಬೇಟೆ. ಸಾರ್ವಜನಿಕ ಬೇಟೆ, ಸಾಮಾನ್ಯ ದಿನಗಳ ಬೇಟೆಯನ್ನು ವಿವರಿಸಲಾಗಿದೆ. ಬೇಟೆಯ ವಿಧಾನಗಳಾದ ಬಲೆಯ ಬೇಟೆ, ಸಾರಕಿ ಬೇಟೆ, ಮರಸು ಬೇಟೆ, ಬೆಳಕಿನ ಬೇಟೆಗಳ ಬಗೆಗೆ ಹಾಗೂ ಬೇಟೆಗೆ ಬಳಸುತ್ತಿದ್ದ ಆಯುಧಗಳ ವಿವರಣೆಯನ್ನು ನೀಡಲಾಗಿದೆ. ಅಲ್ಲದೆ, ಬೇಟೆ ಕುರಿತಂತೆ ಅರಸರಲ್ಲಿದ್ದ ನಂಬಿಕೆಗಳನ್ನು ಚರ್ಚಿಸಲಾಗಿದೆ. ಅಂತಿಮವಾಗಿ ಬೇಟೆ ಕುರಿತ ಸರ್ಕಾರದ ಇತ್ತೀಚಿನ ನಿರ್ಬಂಧಗಳನ್ನು ಕುರಿತು ಮಾಹಿತಿ ಒದಗಿಸಲಾಗಿದೆ.

ಶವಸಂಸ್ಕಾರ ಪದ್ಧತಿಯಲ್ಲಿ ನಾಯಕ ಅರಸುಮನೆತನಗಳು ಆಚರಿಸುತ್ತಿದ್ದ ಶೈವ ಹಾಗೂ ಶ್ರೀವೈಷ್ಣವ ಸಂಪ್ರದಾಯದಂತೆ ಶವದ ಸಿಂಗಾರ, ಮಂಟಪ, ಶವದ ಮೆರವಣಿಗೆ, ಅಂತ್ಯಕ್ರಿಯೆಯ ತಯಾರಿ, ವಿಧಿ ವಿಧಾನಗಳು, ಶವಸಂಸ್ಕಾರದ ನಂತರದ ಕ್ರಿಯಾವಿಧಿಗಳಾದ ಶ್ರಾದ್ಧ, ದಶಪಿಂಡ, ವೈಕುಂಠ ಸಮಾರಾಧನೆ, ವಾರ್ಷಿಕ ಶ್ರಾದ್ಧ ಕಾರ್ಯಕ್ರಮಗಳ ಕುರಿತಾಗಿ ವಿವರಿಸಲಾಗಿದೆ.

## ಅಧ್ಯಾಯ ೫ : ಸಾಹಿತ್ಯ, ಶಿಕ್ಷಣ ಮತ್ತು ಕಲೆ

ಈ ಅಧ್ಯಾಯದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸ್ವತಃ ನಾಯಕ ಅರಸರೇ ಕೃತಿ ರಚಿಸಿರುವುದು ಇಲ್ಲಿಯ ವಿಶೇಷ. ಜೊತೆಗೆ ಸಮಕಾಲೀನವಾಗಿ ಅನೇಕ ಅಸ್ಥಾನ ಪಂಡಿತರು ಈ ನಾಯಕ ಅರಸರ ಬಗೆಗೆ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ, ಈ ಅರಸರನ್ನು ಕುರಿತು ಹೊರಬಂದ ಜನಪದ ಸಾಹಿತ್ಯವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಅರಸರ ಶಿಕ್ಷಣ ಕ್ರಮ, ಶಿಕ್ಷಣದ ವಿಷಯಗಳು, ಭಾಷೆ, ಗರಡಿಶಿಕ್ಷಣ, ಸೈನಿಕರಿಗೆ ಹಾಗೂ ಅವರ ಮಕ್ಕಳಿಗೆ ನೀಡುತ್ತಿದ್ದ ಶಿಕ್ಷಣ, ಸ್ತ್ರೀಯರಿಗೆ ನೀಡುತ್ತಿದ್ದ ಶಿಕ್ಷಣ ಮುಂತಾದ ವಿಷಯಗಳನ್ನು ತಿಳಿಸಲಾಗಿದೆ. ಅಲ್ಲದೆ ಪ್ರಸ್ತುತ ದಿನಗಳಲ್ಲಿ ನಾಯಕ ಅರಸುಮನೆತನಗಳ ವಂಶಸ್ಥರಲ್ಲಿಯ ಶಿಕ್ಷಣದ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ಪ್ರಮುಖವಾಗಿ ಚಿತ್ರಕಲೆ, ಶಿಲ್ಪಕಲೆ, ಸಂಗೀತ ಕಲೆಗೆ ಒತ್ತು ನೀಡಲಾಗಿದೆ. ಚಿತ್ರಕಲೆಯಲ್ಲಿ ಅರಸರಿಗೆ ಸಂಬಂಧಿಸಿದ ಚಿತ್ರಗಳು ಅರಸುಮನೆತನಗಳಲ್ಲಿ ದೇವಾಲಯಗಳಲ್ಲಿ ಮತ್ತು ಮಠಗಳಲ್ಲಿ ಭಿತ್ತಿಚಿತ್ರಗಳು ಹಾಗೂ ಇತರ ಚಿತ್ರಗಳಿಗೆ ಅರಸರ ಪ್ರೋತ್ಸಾಹ ಕುರಿತು ವಿವರಿಸಲಾಗಿದೆ. ಶಿಲ್ಪಕಲೆಗೆ ಸಂಬಂಧಿಸಿದಂತೆ ಉಬ್ಬುಶಿಲ್ಪಗಳಲ್ಲಿ, ಗಾರೆಶಿಲ್ಪಗಳಲ್ಲಿ, ಕಂಬಶಿಲ್ಪಗಳಲ್ಲಿ ನಾಯಕ ಅರಸರು ಮತ್ತು ರಾಣಿಯರು ಮೂಡಿಬಂದುದನ್ನು ವಿವರಿಸಲಾಗಿದೆ. ಸಂಗೀತಕ್ಕೆ ಸಂಬಂಧಿಸಿದಂತೆ ಅರಸರು ತಮ್ಮ ಆಸ್ಥಾನದಲ್ಲಿ ಸಂಗೀತ ಕಲೆಗೆ ನೀಡಿದ ಪ್ರಾಶಸ್ತ್ಯ ಹಾಗೂ ಪ್ರೋತ್ಸಾಹ ಸಂಗೀತಗಾರರಿಗೆ ಆಶ್ರಯದಾತರಾಗಿ, ವಿವಿಧ ಸಂಗೀತಗೋಷ್ಠಿಗಳನ್ನು ನಡೆಯಿಸಿ ಸಂಗೀತಗಾರರನ್ನು ಸತ್ಕರಿಸಿದುದು ಹಾಗೂ ಸ್ವತಃ ಅರಸರೇ ಸಂಗೀತಗಾರರಾಗಿ, ಸಂಗೀತ ಗೋಷ್ಠಿಗಳಲ್ಲಿ ಭಾಗಿಗಳಾದ ಸಂದರ್ಭಗಳನ್ನು ಇಲ್ಲಿ ವಿವರಿಸಲಾಗಿದೆ.

ಅಧ್ಯಾಯ ೬ : ಸಮಾರೋಪ

ಈ ಅಧ್ಯಾಯದಲ್ಲಿ ಒಟ್ಟಾರೆ ಮಹಾಪ್ರಬಂಧದ ತಿರುಳನ್ನು, ಮೇಲಿನ ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಗಳನ್ನು ಹಾಗೂ ಸಾಹಸ ಪ್ರವೃತ್ತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ನಾಯಕ ಅರಸುಮನೆತನಗಳ ನೆಲೆ ಎಂತಹದೆಂಬುದನ್ನು ಚರ್ಚಿಸಲಾಗಿದೆ. ಜನಸಾಮಾನ್ಯರ ಜೀವರಕ್ಷಣೆಯ ಮಹಾನ್ ಜವಾಬ್ದಾರಿಯನ್ನು ಹೊತ್ತುಕೊಂಡು ಸುಮಾರು ಮೂರ್‍ನಾಲ್ಕು ಶತಮಾನಗಳ ಸುದೀರ್ಘ ಅವಧಿಯವರೆಗೆ ತಮ್ಮ ಜವಾಬ್ದಾರಿಗಳನ್ನು ವಿವಿಧ ಸಂದರ್ಭಗಳಲ್ಲಿ ಹೇಗೆ ನಿರ್ವಹಿಸಿದರೆಂಬುದರ ಬಗೆಗೆ ವಿವರಿಸಲಾಗಿದೆ. ಸಾಂಸ್ಕೃತಿಕವಾಗಿಯೂ ವಿಶಿಷ್ಟ ವಿಭಿನ್ನ ಆಚರಣೆಗಳನ್ನು ಆಚರಿಸುತ್ತಾ ಬಂದ ನಾಯಕ ಅರಸುಮನೆತನದವರು ಪ್ರಸ್ತುತ ಸಂದರ್ಭದಲ್ಲೂ ಉಳಿಸಿಕೊಂಡು ಬಂದಿರುತ್ತಾರೆ. ಕಳೆದ ಮೂರು ಶತಮಾನಗಳಿಗಿಂತಲೂ ಹೆಚ್ಚು ಕಾಲದವರಗೆ ಈ ಸಾಂಸ್ಕೃತಿಕ ಆಚರಣೆಗಳು ದೇಶಿ ಸಂಸ್ಕೃತಿಯ ನೆಲೆಯಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಬಗೆಗೆ ವಿಶ್ಲೇಷಣೆಯನ್ನು ಈ ಸಮಾರೋಪದಲ್ಲಿ ಕೈಗೊಳ್ಳಲಾಗಿದೆ. ಅಂತಿಮವಾಗಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಅನುಬಂಧದಲ್ಲಿ ಕೊಡಲಾಗಿದೆ.

## ೧.೩ ಅಧ್ಯಯನದ ವಿಧಾನ

ಯಾವುದೇ ಸಂಶೋಧನೆಗೆ ಅಧ್ಯಯನದ ವಿಧಾನವು ಅತಿಮುಖ್ಯ. ಅಧ್ಯಯನವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಉಪಯುಕ್ತವಾದ ಅಧ್ಯಯನದ ಕ್ರಮವಿರಬೇಕಾಗುತ್ತದೆ. ಒಂದು ಮನೆತನದ ಇತಿಹಾಸವನ್ನು ರಚಿಸುವಲ್ಲಿ ಆಕರಗಳು ಪ್ರಮುಖ ಪಾತ್ರ ವಹಿಸುತ್ತವೆ. ಹೀಗಾಗಿ ಅವುಗಳ ಮೊರೆ ಹೋಗಬೇಕಾದುದು ಅನಿವಾರ್ಯವಾಗಿರುತ್ತದೆ. ಪ್ರಸ್ತುತ ಅಧ್ಯಯನವನ್ನು ಆರಂಭಿಸುವ ಮುನ್ನ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟ ಗ್ರಂಥಗಳ ಸೂಚಿಯನ್ನು ತಯಾರಿಸಿ ಅಧ್ಯಯನ ವಿಷಯಗಳ ಸಮೀಕ್ಷೆ ನಡೆಸಲಾಯಿತು. ನಾಯಕ ಅರಸುಮನೆತನಗಳಿಗೆ ಸಂಬಂಧಿಸಿದಂತೆ ಕೆಲವು ಶಾಸನಗಳು, ಸಾಹಿತ್ಯಿಕ ಆಕರಗಳು, ಜನಪದಸಾಹಿತ್ಯ ಕೃತಿಗಳೂ ಸಹಾಯಕವಾಗಿವೆ. ಅಧ್ಯಯನದ ಉದ್ದೇಶದಲ್ಲಿ ಇವುಗಳ ಕುರಿತು ಈಗಾಗಲೇ ಚರ್ಚಿಸಲಾಗಿದೆ.

ಈ ಮಹಾಪ್ರಬಂಧದ ರಚನೆಯಲ್ಲಿ ಇತಿಹಾಸದ ಸಂಶೋಧನ ವಿಧಿ-ವಿಧಾನಗಳನ್ನು ಅನುಸರಿಸಲಾಗಿದೆ. ಪ್ರಮುಖವಾಗಿ, ಐತಿಹಾಸಿಕ, ಸರ್ವೇಕ್ಷಣಾ(ಸಮೀಕ್ಷೆ) ಕ್ಷೇತ್ರ ಅಧ್ಯಯನ ಹಾಗೂ ಸಂದರ್ಶನ ವಿಧಾನಗಳನ್ನು ಅಧ್ಯಯನದುದ್ದಕ್ಕೂ ಅನುಸರಿಸಲಾಯಿತು. ಚಾರಿತ್ರಿಕ ವಿಧಾನದ ಮೂಲಕ ಈ ಮನೆತನಗಳ ರಾಜಕೀಯ ಇತಿಹಾಸವನ್ನು ಶೋಧಿಸಿದರೆ, ಸರ್ವೇಕ್ಷಣಾ ವಿಧಾನ, ಕ್ಷೇತ್ರ ಅಧ್ಯಯನ ಹಾಗೂ ಸಂದರ್ಶನ ವಿಧಾನಗಳ ಮೂಲಕ ಈ ಮನೆತನಗಳ ಸಾಂಸ್ಕೃತಿಕ ಬದುಕನ್ನು ಗುರುತಿಸಲಾಯಿತು. ಸಾಂಸ್ಕೃತಿಕ ಬದುಕಿನ ಪ್ರತೀಕಗಳಾದ ದೇವಾಲಯಗಳು, ಮೂರ್ತಿಶಿಲ್ಪ, ವಾಸ್ತುಶಿಲ್ಪ, ಅರಮನೆ, ಕೋಟೆ ಕೊತ್ತಲಗಳ

ಮುಖಾಂತರ ಇವರ ಸಂಸ್ಕೃತಿಯನ್ನು ಸಾಂಸ್ಕೃತಿಕಾಚರಣೆಗಳ ವಿಧಿ-ವಿಧಾನಗಳನ್ನು ಹಾಗೂ ಈ ಆಚರಣೆಗಳು ಕಾಲಘಟ್ಟದಲ್ಲಿ ಸ್ಥಿತ್ಯಂತರಗೊಂಡು, ಇಂದು ಯಾವ ರೀತಿ ಆಚರಿಸಲ್ಪಡುತ್ತಿವೆ, ಯಾವ ಆಚರಣೆಗಳು ರೂಢಿಯಲ್ಲಿವೆ, ಇವರಿಂದ ಮರೆಯಾದ ಆಚರಣೆಗಳಾವುವು? ಹಾಗೂ ಕೆಲವು ಆಚರಣೆಗಳು ಮಾರ್ಪಾಡಾದ ಬಗೆಯನ್ನು ಚರ್ಚಿಸುವುದರ ಮೂಲಕ ಅವುಗಳ ಅಸ್ತಿತ್ವವನ್ನು ಗುರುತಿಸಲಾಗಿದೆ. ಅಲ್ಲದೆ ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿ ಇಲ್ಲಿಯ ವಿಷಯವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಈ ಮನೆತನಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮರ್ಪಕ ಆಕರಗಳ ಕೊರತೆ ಒಂದೆಡೆಯಾದರೆ, ರೂಪಿತಗೊಂಡಿರುವ ಚರಿತ್ರೆಯು ಕ್ರಮವಾಗಿ ನಿರೂಪಿಸಲ್ಪಡದಿರುವುದು ಮತ್ತೊಂದು ಕೊರತೆ. ಅಲ್ಲದೆ ಈ ಮನೆತನಗಳ ವಂಶಜರು ಕ್ರಮಬದ್ಧ ಮಾಹಿತಿಯನ್ನು ಹೊಂದಿಲ್ಲದಿರುವುದೊಂದು ದೊಡ್ಡ ಕೊರತೆ. ಅವರಲ್ಲಿದ್ದ ದಾಖಲೆಗಳು, ಕಾಗದ ಪತ್ರಗಳು, ಸಾಕಷ್ಟು ನಿರ್ಲಕ್ಷ್ಯಕ್ಕೊಳಗಾಗಿ ನಾಶವಾಗಿವೆ ಹಾಗೂ ನಾಶವಾಗುತ್ತಿವೆ. ಹೀಗಾಗಿ ಇಲ್ಲಿಯವರೆಗೆ ಪ್ರಕಟಿತಗೊಂಡಿರುವ ಕೃತಿಗಳನ್ನು, ಸಂಶೋಧನ ಪ್ರಬಂಧಗಳನ್ನು, ಅರಸರ ವಂಶಾವಳಿಗಳನ್ನು, ಶಾಸನಗಳನ್ನು  ಕೈಫಿಯತ್ತುಗಳನ್ನು ಗಮನಿಸುವುದರ ಮೂಲಕ ಅವರ ಸಾಂಸ್ಕೃತಿಕ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ವಿವಿಧ ಪ್ರದೇಶಗಳ ವೈವಿಧ್ಯಮಯವಾದ ಆಧಾರಗಳನ್ನು ಸಂಗ್ರಹಿಸಿ, ಶೋಧಿಸಿ, ಶುದ್ಧೀಕರಿಸಿ ಜೋಡಿಸಿದಾಗ ಇದರ ಆಚರಣೆಗಳ ಚಿತ್ರ ಸ್ಪಷ್ಟವಾಗಿ ಮೂಡಲು ಸಾಧ್ಯವಾಗಿದೆ.

ಅಧ್ಯಯನದ ಪ್ರಮುಖ ಅಂಗವೆಂದರೆ ಕ್ಷೇತ್ರಕಾರ್ಯ. ಈ ಕ್ಷೇತ್ರಕಾರ್ಯದ ಮೂಲಕ ಇಲ್ಲಿಯ ಸಾಂಸ್ಕೃತಿಕ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಕ್ಷೇತ್ರಕಾರ್ಯಗಳು ಸಂಶೋಧನೆಯನ್ನು ಗಟ್ಟಿಗೊಳಿಸುತ್ತವಲ್ಲದೆ, ಅವುಗಳಿಂದ ದೊರಕುವ ಮಾಹಿತಿ ಚರಿತ್ರೆಯ ಮಹತ್ವವನ್ನು ಹೆಚ್ಚಿಸುತ್ತವೆ. ಪ್ರೊ.ಲಕ್ಷ್ಮಣ್ ತೆಲಗಾವಿ ಅವರು 'ಪ್ರಾದೇಶಿಕ ಇತಿಹಾಸ ಅಧ್ಯಯನದ ಅವಶ್ಯಕತೆ' ಲೇಖನದಲ್ಲಿ ಕ್ಷೇತ್ರಕಾರ್ಯದ ಕುರಿತು, ಹೊಸ ಶೋಧನೆಗಳಿಂದ ಈವರೆಗೆ ಬೆಸೆಯಲಾಗದ ಬೇರೆ ಬೇರೆ ಯುಗದ ಇತಿಹಾಸದ ಕೊಂಡಿಗಳನ್ನು ಜೋಡಿಸಲಾಗುತ್ತದೆ. ಇದು ನಿಜಕ್ಕೂ ಜಟಿಲವಾದ ಕಾರ್ಯ. ಈ ಬಗೆಯ ಪ್ರಯತ್ನಗಳಿದ್ದರೂ, ಪ್ರತಿಯೊಂದು ರಾಜಮನೆತನವನ್ನು ಕುರಿತು ಸಾಕಷ್ಟು ಬರೆಯಲಾಗಿದ್ದರೂ ಈ ಮಾಹಿತಿ ಸಂಗ್ರಹಿಸಬೇಕಾದ ಹಾಗೂ ಬರೆಯಬೇಕಾದ ಕೆಲಸವಿನ್ನೂ ಆಗಾಧವಾಗಿದೆ. ಆಯಾ ಮನೆತನದವರು ಆಳ್ವಿಕೆ ನಡೆಸಿದ ಅವಧಿಯಲ್ಲಿನ ಎಲ್ಲ ಬಗೆಯ ಸ್ಥಿತಿಗತಿಗಳ ಬಗೆಗೆ ಚಟುವಟಿಕೆಗಳ ಬಗೆಗೆ ಪೂರ್ಣವಾಗಿ ದಾಖಲಿಸುವುದು ಮುಗಿಯದ ಕಾರ್ಯವೆನಿಸಿದೆ. ಇದಕ್ಕೆ ಕಾರಣವಾದರೂ ಅಗತ್ಯ ಮಾಹಿತಿಯ ಅಭಾವ. ಕ್ಷೇತ್ರಕಾರ್ಯ(Field Work)ದಿಂದ ಸಂಬಂಧಿಸಿದ ಚಾರಿತ್ರಿಕ ಅವಧಿಯ ಬಗೆಗೆ ಮಾಹಿತಿ ಸಂಗ್ರಹಿಸಬಹುದಾದರೂ ಖಚಿತವಾದುದನ್ನು ನಾವು ಲಿಖಿತ ದಾಖಲೆಗಳಿಂದ ನಿರೀಕ್ಷಿಸಬಹುದು. ದಾಖಲೆಗಳೇನಾದರೂ ನಮಗೆ ಅಗತ್ಯವಿರುವ ಎಲ್ಲ ವಿವರಗಳನ್ನೂ ನೀಡಲಾರವು. ಹೊಸ ಆಧಾರಗಳನ್ನು ಹುಡುಕುವ ಗೋಜಿಗೆ

ಹೋಗದ ಹೊರತು ನಮ್ಮ ಉದ್ದೇಶ ಈಡೇರದು. ಆದ್ದರಿಂದ ಕ್ಷೇತ್ರಕಾರ್ಯವನ್ನು ಮೊದಲಿಗಿಂತ ಇಂದು ಹೆಚ್ಚಾಗಿ ವ್ಯಾಪಕವಾಗಿ ನಡೆಸಬೇಕಾಗಿದೆ.[೩] ಎಂಬ ಮಾತು ಅರ್ಥಪೂರ್ಣವಾಗಿದೆಯಲ್ಲದೆ ಕ್ಷೇತ್ರಕಾರ್ಯದ ಮಹತ್ವವನ್ನು ಹೇಳುತ್ತದೆ.

ಹೀಗಾಗಿ ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಇಂದಿಗೂ ಜೀವಂತವಿರುವ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನಗಳಿಗೆ ಸಂಬಂಧಿಸಿದಂತೆ; ಚಿತ್ರದುರ್ಗ, ಚಳ್ಳಕೆರೆ, ನಾಯಕನಹಟ್ಟಿ, ದೊರೆಗಳಹಟ್ಟಿ, ಕಾಟಪ್ಪನಹಟ್ಟಿ, ಅರೆಹಳ್ಳಿಹಟ್ಟಿ, ತಳಕು, ಪರಶುರಾಮಪುರ, ಐಮಂಗಲ, ಗುಳಿಹಳ್ಳಿ, ಕಾಶೀಹಳ್ಳಿ, ಭಟ್ಟರಹಳ್ಳಿ, ಹಂಜಗೆರೆ, ಯಳನಾಡು, ಗುಲಬರ್ಗಾ ಜಿಲ್ಲೆಯ ಸುರಪುರಕ್ಕೆ ಸಂಬಂಧಿಸಿದಂತೆ; ವಾಗಿನಗೇರಿ, ವನದುರ್ಗ, ಶಹಾಪುರ, ಕಕ್ಕೇರಿ, ರಂಗಂಪೇಟೆ, ರುಕುಂಪೇಟೆ, ಭೀಮರಾಯನಗುಡಿ, ಮುಡಬೂಳ, ಹೊಸಕೇರಾ, ಹುಣಸಗಿ, ತಿಂಥಣಿ, ಗೋಗಿ, ಕೊಡೇಕಲ್, ದೇವಪುರ, ರಸ್ತಾಪೂರ, ಸಗರ, ಬೈಚಬಾಳ, ಶಾಂತಪುರ, ನಗನೂರು, ರಾಯನಪಾಳ್ಯ, ನರಬೋಳಿ, ರಾಯಚೂರು ಜಿಲ್ಲೆಯ ಗುಡಗುಂಟಿ, ಗುಂತಗೋಳ, ದೇವದುರ್ಗ ನಾಯಕ ಅರಸುಮನೆತನಗಳಿಗೆ ಸಂಬಂಧಿಸಿದಂತೆ; ಐದಬಾವಿ, ರಾಯದುರ್ಗ, ಕೋತಾ, ಗೆಜ್ಜಲಗಟ್ಟಿ, ತವಗಾರೋಡಲ ಬಂಡಾ, ಸರ್ಜಾಪುರ, ಹೊನ್ನಹಳ್ಳಿ, ಮಾಚನೂರು, ಯರಡೋಣ, ಗೋನವಾಟ್ಲ, ಕಾಳಾಪುರ, ನೀರಲಕೇರಿ, ಈಚನಾಳ, ಐದನಾಳ, ಜಲದುರ್ಗ, ಹಾಲಬಾವಿ, ಗಲಗ, ಕ್ಯಾದಿಗೇರಾ, ಮುಂಡರಗಿ, ಜಾಲಹಳ್ಳಿ, ಅರಕೇರಾ, ಕರಡಿಗುಡ್ಡ, ನವಲಗುಡ್ಡ, ಕೊಪ್ಪಳ ಜಿಲ್ಲೆಯ ಆನೆಗೊಂದಿ ಹಾಗೂ ಕನಕಗಿರಿ ನಾಯಕ ಅರಸರಿಗೆ ಸಂಬಂಧಿಸಿದಂತೆ; ಹುಲಿಹೈದರ್, ಗಂಗಾವತಿ, ಸೋಮಸಾಗರ, ಗುಂತಮಡು, ಹಿರೇಮನ್ನಾಪುರ, ತಿಮ್ಮಲಾಪುರ, ಕಮಲಾಪುರ, ವೆಂಕಟಾಪುರ, ಬಳ್ಳಾರಿ ಜಿಲ್ಲೆಯ ಗುಡೇಕೋಟೆ ಹಾಗೂ ಜರಿಮಲೆ ನಾಯಕ ಅರಸರಿಗೆ ಸಂಬಂಧಿಸಿದಂತೆ ಕೆಲವು ಹಳ್ಳಿಗಳ ಕ್ಷೇತ್ರಕಾರ್ಯ ಕೈಗೊಳ್ಳುವುದರ ಮೂಲಕ ಈ ಮನೆತನಗಳಿಗೆ ಸಂಬಂಧಿಸಿದ ಪ್ರತಿಯೊಂದು ಐತಿಹಾಸಿಕ ಸ್ಥಳದ ಮಾಹಿತಿ ಸಂಗ್ರಹಿಸಲಾಯಿತು. ಈ ಅರಸರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು, ಕೋಟೆಗಳು, ಕೆರೆಗಳು, ಬಾವಿಗಳು ಇವುಗಳ ಬಗ್ಗೆ ಪ್ರತ್ಯಕ್ಷವಾಗಿ ಶೋಧಿಸಲಾಯಿತು. ಅಲ್ಲದೆ ಹಲವಾರು ಸಂದರ್ಭಗಳಲ್ಲಿ ಈ ಮನೆತನಗಳ ಅರಸರ ಕಾಲದಿಂದ ಇಂದಿನವರೆಗೂ ಅನೂಚಾನವಾಗಿ ನಡೆದುಕೊಂಡು ಬಂದಿರುವ ಇವರ ಸಾರ್ವಜನಿಕ ಹಾಗೂ ಕೌಟುಂಬಿಕ ಹಬ್ಬ ಹರಿದಿನಗಳು, ಜಾತ್ರೆ, ಉತ್ಸವಗಳಲ್ಲಿ ಹಾಗೂ ಈ ಅರಸರ ಕುಟುಂಬಕ್ಕೆ ಸೀಮಿತವಾಗಿ ನಡೆಯುವ ವಿವಾಹ, ಶವಸಂಸ್ಕಾರ ಮುಂತಾದವುಗಳಲ್ಲಿ ಭಾಗವಹಿಸಿ ಪ್ರತ್ಯಕ್ಷ ಮಾಹಿತಿ ಸಂಗ್ರಹಿಸು ವುದರೊಂದಿಗೆ ಛಾಯಾಚಿತ್ರಗಳನ್ನೂ ತೆಗೆಯಲಾಯಿತು.

ಈ ನಾಯಕ ಮನೆತನಗಳ ಕೆಲವು ಆಚರಣೆಗಳಿಗೆ ಯಾವುದೇ ಲಿಖಿತ ದಾಖಲೆಗಳು ಸಿಗುವುದಿಲ್ಲ. ಇಲ್ಲಿ ದಾಖಲೆಗಳೆಂದು ಪರಿಗಣಿಸುವುದಿದ್ದರೆ ಕೇವಲ ಮೌಖಿಕ ಆಕರಗಳು ಮಾತ್ರ. ಇವು ಸ್ಥಳೀಯ

ಚರಿತ್ರೆಯ ಅಧ್ಯಯನದಲ್ಲಿ ಲಿಖಿತ ದಾಖಲೆಗಳಿಗಿಂತಲೂ ಮಹತ್ವವಾದವು ಎನ್ನಲಡ್ಡಿಯಿಲ್ಲ. ಈ ದೃಷ್ಟಿಯಿಂದ ಇಲ್ಲಿ ದೊರೆತ ಮಾಹಿತಿ ಅತ್ಯಂತ ಅಮೂಲ್ಯವಾದುದೆಂಬುದರಲ್ಲಿ ಸಂಶಯವಿಲ್ಲ. ಸಾಂಸ್ಕೃತಿಕ ಆಚರಣೆಗಳ ಅಧ್ಯಯನದ ದೃಷ್ಟಿಯಿಂದಲಂತೂ ಇದು ಪ್ರಮುಖ ಆಕರ. ಲಭ್ಯವಿರುವ ಮೌಖಿಕ ಆಕರಗಳು ಪ್ರಚಲಿತವಿರುವ ವಿವಿಧ ಆಚರಣೆಗಳ ನಾನಾ ಮುಖಗಳ ಪರಿಚಯ ಮಾಡಿಕೊಡುತ್ತವೆ. ಜನರ ನಾಲಿಗೆಯ ಮೇಲೆ ಇಲ್ಲಿಯ ಚರಿತ್ರೆ ದಾಖಲಾಗಿದೆ. ಹೀಗಾಗಿ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಮೌಖಿಕ ಇತಿಹಾಸವೇ ಪ್ರಧಾನ ಆಧಾರ. ಅಲ್ಲದೇ, ಈಗಾಗಲೇ ದಾಖಲಾದ ಮತ್ತು ಕ್ಷೇತ್ರಕಾರ್ಯದಲ್ಲಿ ದೊರೆತ ಜನಪದಸಾಹಿತ್ಯವೂ ಮುಖ್ಯವಾದುದು. ಕೆಲವೊಮ್ಮೆ ಇತಿಹಾಸದಲ್ಲಿ ಬಿಟ್ಟುಹೋದ ಅಮೂಲ್ಯ ಸಂಗತಿಗಳನ್ನು ಗುರುತಿಸಲು ಇದು ಸಹಕಾರಿ. ಜನಪದಸಾಹಿತ್ಯವು ಇತಿಹಾಸದ ಪುನಾರಚನೆಯಲ್ಲಿ ನೆರವಾಗುತ್ತದೆಂಬುದು ಸ್ಪಷ್ಟ. ಅನೇಕ ಜನಪದಹಾಡುಗಳಲ್ಲಿ, ಮಂಗಳಾರತಿಪದಗಳಲ್ಲಿ ಜನಪದ ಕತೆಗಳಲ್ಲಿ ಚಾರಿತ್ರಿಕ, ಸಾಂಸ್ಕೃತಿಕ ಅಂಶಗಳು ಅಡಗಿವೆ. ಅವುಗಳನ್ನು ಕೆಲವರು ತಾವು ಕೈಗೊಂಡ ಇತಿಹಾಸ ರಚನಾ ಕಾರ್ಯದಲ್ಲಿ ನಿರ್ಲಕ್ಷಿಸುವುದುಂಟು. ಆದರೆ ನಿತ್ಯ ಚಿಗುರುವ ಜನಪದವನ್ನು ಅಲಕ್ಷಿಸುವುದು ಸರಿಯಲ್ಲ. ಅಕ್ಷರಜ್ಞಾನ ಕಡಿಮೆ ಇರುವ ಪ್ರದೇಶದ ಸಾಂಸ್ಕೃತಿಕ ಇತಿಹಾಸ ಬರೆಯುವಲ್ಲಿ ಕೇವಲ ಅಕ್ಷರವನ್ನು ಆಧರಿಸಿಕೊಂಡರೆ, ಅಂತಹ ಇತಿಹಾಸ ಪಾರ್ಶ್ವಿಕವಾಗುತ್ತದೆ. ಏಕೆಂದರೆ ಅಕ್ಷರ ಬಲ್ಲವರು ಬರೆಯುವ ವಿವರಗಳಲ್ಲಿ ಅನಕ್ಷರಸ್ಥರ ವಿವರಗಳಿರುವ ಸಾಧ್ಯತೆಗಳು ತೀರ ಕಡಿಮೆ. ಹೀಗಾಗಿ ಮೌಖಿಕ ಪರಂಪರೆಯ ಸಾಮಗ್ರಿಯಿಲ್ಲದ ಇತಿಹಾಸ ಅಪೂರ್ಣವಾಗಿಯೇ ಉಳಿಯಬಲ್ಲದು. ಆದ್ದರಿಂದ ಮೌಖಿಕ ಮಾಹಿತಿಯನ್ನು, ಅಗತ್ಯ ಪ್ರಶ್ನಾವಳಿ ರಚಿಸಿಕೊಂಡು ಆಯಾ ಮನೆತನದ ವಂಶಸ್ಥರನ್ನು, ರಾಜಗುರುಗಳನ್ನು, ರಾಜಪುರೋಹಿತರನ್ನು ಅಧಿಕಾರ ವರ್ಗಗಳವರ ವಂಶಸ್ಥರನ್ನು, ಆಯಾ ಪ್ರದೇಶದ ವಿದ್ವಾಂಸರನ್ನು, ಪರಿಣತರನ್ನು ಸಂದರ್ಶಿಸುವುದರೊಡನೆ ಮೂಲ ಮಾಹಿತಿಯನ್ನು ಸಂಗ್ರಹಿಸಲಾಯಿತು.

ಇಂದಿಗೂ ಈ ಅರಸುಮನೆತನಗಳನ್ನು ಕುರಿತು ಇವರ ಆಡಳಿತದ ಅಧೀನದಲ್ಲಿದ್ದ ಕೆಲ ಹಳ್ಳಿಗಳಲ್ಲಿ ಜನಪದ ಗೀತೆಗಳು, ಕಥೆಗಳು, ಲಾವಣಿ, ದುಂದುಮಿಗಳು, ಕೋಲುಪದಗಳು, ಮಂಗಳಾರತಿಪದಗಳು ಪ್ರಚಾರದಲ್ಲಿದ್ದು, ಅವು ಇಂಥಾ ಸ್ಥಳೀಯ ಸಂಸ್ಥಾನಿಕರ ಅಂದಿನ ಜೀವನದ ವಿಧಾನವನ್ನು ಹಾಗೂ ಸಾಂಸ್ಕೃತಿಕ ಪರಿಸರವನ್ನು ವಿವರಿಸುತ್ತವೆ; ಹಾಗೂ ಅವರ ರಾಜವೈಭವವನ್ನು ನೆನಪಿಗೆ ತರುವಂತೆ ಅಂದಿನ ಇವರ ಜೀವನ ಕ್ರಮ, ಕಲೆ, ಸಂಪ್ರದಾಯ, ಆಚರಣೆಗಳನ್ನು, ನಮ್ಮ ಕಣ್ಮುಂದೆ ಕಟ್ಟುವಂತೆ ವಿವರಿಸುತ್ತವೆ. ಇವರ ಆಚರಣೆಗಳು ಹಿಂದಿನ ಸಂಸ್ಕೃತಿಯ ಜೀವಂತ ಪಳೆಯುಳಿಕೆಗಳಾಗಿದ್ದು, ಇತಿಹಾಸಕ್ಕೊಂದು ಹೊಸ ಅರ್ಥ ನೀಡುವ ಮಟ್ಟಿಗೆ ಪ್ರಯೋಜನಕಾರಿಯಾಗಿವೆ.

ಹೀಗೆ ನಾಯಕ ಅರಸರ ಸಾಂಸ್ಕೃತಿಕಾಚರಣೆಗಳ ಅಧ್ಯಯನಕ್ಕೆ ಸಂಬಂಧಿಸಿದ ವಿಶ್ವಸನೀಯ ಆಕರಗಳನ್ನು ಬಳಸಿಕೊಂಡು, ಚಾರಿತ್ರಿಕ ಘಟನೆಗಳನ್ನು ಹಾಗೂ ಆಚರಣೆಗಳನ್ನು ವಸ್ತುನಿಷ್ಠವಾಗಿ

ಕಾಲಕ್ರಮಕ್ಕನುಗುಣವಾಗಿ ಹೊಂದಿಸಿ ನಿರೂಪಿಸಲು ಈ ಮಹಾಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ವಾಸ್ತವದಲ್ಲಿ, ಇಂದಿಗೂ ಇವರ ಕಾಲದ ಸಾಂಸ್ಕೃತಿಕ ಸಂಪತ್ತು ಹಾಗೂ ಪರಂಪರೆಯಿಂದ ಬಂದ ಉತ್ಕೃಷ್ಟ ಆಚರಣೆಗಳು ಸಂಸ್ಕೃತಿಯ ಅಧ್ಯಯನಕ್ಕೆ ಸಾಕ್ಷಿಯಾಗಿದ್ದು, ಹಿಂದಿನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಬಿಂಬಿಸುವಲ್ಲಿ ಪರಿಣಾಮಕಾರಿ ಪಾತ್ರವಹಿಸಿವೆ.

**ಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು ಕೆಲವು ವಿಚಾರಗಳು : ಪ್ರತಿಕ್ರಿಯೆ,* ಮಾನವಿಕ ಕರ್ನಾಟಕ, ೧೭-೪, ಅಕ್ಟೋಬರ್ ೧೯೮೭, ಪು.೬೪

೨. ಲಕ್ಷ್ಮಣ್ ತೆಲಗಾವಿ, *ಇತಿಹಾಸ ಸಂಶೋಧನೆಯಲ್ಲಿ ವೈಚಾರಿಕತೆ,* ತರಳಬಾಳು, ೫-೨, ಜನವರಿ ೧೯೮೦, ಪು.೩೦

೩. ಲಕ್ಷ್ಮಣ್ ತೆಲಗಾವಿ, *ಪ್ರಾದೇಶಿಕ ಇತಿಹಾಸ ಅಧ್ಯಯನದ ಅವಶ್ಯಕತೆ,* ಕನ್ನಡ ಶಾರದೆ, ಅಖಿಲ ಭಾರತ ೫೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ಚಿಕ್ಕಮಗಳೂರು, ೧೯೮೧, ಪು.೮೨

# ಅಧ್ಯಾಯ ೨

# ಕರ್ನಾಟಕ ನಾಯಕ ಅರಸುಮನೆತನಗಳು : ಅವಲೋಕನ

೨.೧ ಚಿತ್ರದುರ್ಗ ನಾಯಕ ಅರಸರು

೨.೨ ಸುರಪುರ ನಾಯಕ ಅರಸರು

೨.೩ ಆನೆಗೊಂದಿ ನಾಯಕ ಅರಸರು

೨.೪ ಗುಡಗುಂಟಿ ನಾಯಕ ಅರಸರು

೨.೫ ಗುಂತಗೋಳ ನಾಯಕ ಅರಸರು

೨.೬ ದೇವದುರ್ಗ ನಾಯಕ ಅರಸರು

೨.೭ ಕನಕಗಿರಿ ನಾಯಕ ಅರಸರು

೨.೮ ಗುಡೇಕೋಟೆ ನಾಯಕ ಅರಸರು

೨.೯ ಜರಿಮಲೆ ನಾಯಕ ಅರಸರು

೨.೧೦ ನಾಯಕನಹಟ್ಟಿ ನಾಯಕ ಅರಸರು

೧.೧೧ ಮತ್ತೋಡು ನಾಯಕ ಅರಸರು

೧.೧೨ ಹರತಿ ನಾಯಕ ಅರಸರು

೨

## ಕರ್ನಾಟಕ ನಾಯಕ ಅರಸುಮನೆತನಗಳು : ಅವಲೋಕನ

ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ಚರಿತ್ರೆ ಇರುವಂತೆ, ನಾಯಕ(ಬೇಡ) ಜನಾಂಗಕ್ಕೂ ವಿಶಿಷ್ಟವಾದ ಚರಿತ್ರೆ ಇದೆ. ಭಾರತದಲ್ಲಿ ನಾಯಕ(ಬೇಡ)ರನ್ನು ನಾನಾ ಹೆಸರುಗಳಿಂದ ಕರೆಯುವುದುಂಟು. ಕರ್ನಾಟಕದಲ್ಲಿ ವಾಲ್ಮೀಕಿ, ಬೇಡ, ತಳವಾರ, ನಾಯಕ, ಪರಿವಾರವೆಂತಲೂ, ಆಂಧ್ರದಲ್ಲಿ ಬೋಯಾ, ನಿಷಾಧ, ಬಿಲ್ಲ, ಚೆಂಚು, ಕಿರಾತಕ ಎಂದು, ತಮಿಳುನಾಡಿನಲ್ಲಿ ವೇಡನ್, ನಾಯಕ್ಡ, ನಾಯಕ, ನಾಯಕರ್, ಬೆತ್ತಲೆ ನಾಯಕರ್, ವೇತುಕನ್ ಎಂದು, ಕೇರಳದಲ್ಲಿ ನಾಯರ್, ಉತ್ತರಪ್ರದೇಶದಲ್ಲಿ ಜಾಟ್, ಪಂಜಾಬಿನಲ್ಲಿ ಬಿಲ್, ಬಾಲಮೀಕಿ ವಾಲ್ಮೀಕಿ ನಾಯಕ, ಯಾಂಗ್ ಎಂದು, ಕಾಶ್ಮೀರದಲ್ಲಿ ಡೋಗ್ರಾ,[೧] ಉತ್ತರ ಭಾರತದಲ್ಲಿ ವಾಸಿಗಳೆಂದು ಉತ್ತರ ಮಲಬಾರಿನಲ್ಲಿ ಪೆದಿಂಗಲ್ ವೆಟ್ಟುವಾನ್ ಗಳೆಂದು, ತಿರುವಾಂಕೂರ ಗುಡ್ಡನಾಡಿನಲ್ಲಿ ಮಲೆವೇಡನ್ ಹಾಗೂ ಶ್ರೀಲಂಕಾದಲ್ಲಿ ವೆಡ್ಡರೆಂದು ಕರೆಯುತ್ತಾರೆ.

ಬೇಡರು ಮೂಲತಃ ಕ್ಷತ್ರಿಯ ಕುಲಕ್ಕೆ ಸೇರಿದವರು. ಪೌರಾಣಿಕ ಹಾಗೂ ಅದಕ್ಕೂ ಪೂರ್ವದಿಂದಲೂ ಇವರು ಕ್ಷಾತ್ರವೃತ್ತಿಗೆ ಹೆಸರಾದ ನಿರ್ಭೀತ ಜನಾಂಗವೆಂತಲೂ, ಮೂಲದಿಂದಲೇ ಕಿರಾತ ಜನಾಂಗವಾಗಿರದೆ ಉತ್ತರದಿಂದ ದಕ್ಷಿಣಕ್ಕೆ ಬಂದು ಜೀವನ ನಿರ್ವಹಣೆಗಾಗಿ ಬೇಟೆಯ ಉಪಜೀವನವನ್ನು ರೂಢಿಸಿಕೊಂಡ ರೆಂದು[೨] ತಿಳಿದುಬರುತ್ತದೆ. ಇನ್ನು ಕೆಲವು ಬೇಡರು ಶ್ರೀಶೈಲದ ಬಳಿಯ ಕರಿಮಲೆ - ಕೊಮ್ಮಮತಿಗಳ ಕಡೆಯಿಂದ[೩] ಮತ್ತು ತಿರುಪತಿಯ ಬಳಿಯ ಜಡೇಕಲ್ಲುದುರ್ಗದ ಕಡೆಯಿಂದ ಹೊರಟುಬಂದರು.[೪] ಇವರೆಲ್ಲರೂ ಮೂಲತಃ ಬೇಟೆಗಾರರೆ. ಹುಲ್ಲು ನೀರು ಹುಡುಕುತ್ತಾ ಪಶುಪಾಲನೆ ಕೈಗೊಂಡು ಜೀವನ ನಡೆಸುತ್ತಿದ್ದವರು. ಒಮ್ಮೆ ಶ್ರೀಶೈಲ ಪ್ರದೇಶದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿದ್ದರಿಂದ ಆಗ ತಮ್ಮ ದನ ಕರುಗಳೊಡನೆ ಕರ್ನಾಟಕದ ಪೂರ್ವಗಡಿಗಳಲ್ಲಿ ಆಶ್ರಯ ಪಡೆದರು. ಹೀಗೆಂದು ಹೇಳಿಕೊಳ್ಳುವವರನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಾಣಬಹುದಾಗಿದೆ.

ಸಾಹಸ ಶೌರ್ಯಕ್ಕೆ ಹೆಸರಾದ ಈ ಬೇಡ ಜನಾಂಗವನ್ನು ಕರ್ನಾಟಕದ ರಾಜರು ತಮ್ಮ ಸೈನ್ಯದಲ್ಲಿ ಸೇರಿಸಿಕೊಂಡರು. ಯುದ್ಧ ಪ್ರೇಮಿಗಳಾದ ಬೇಡರು ಬಹುಬೇಗ ಸೈನದಲ್ಲಿ ಉನ್ನತ ಸ್ಥಾನಮಾನ

ಸಂಪಾದಿಸಿದರು. ಚಾರಿತ್ರಿಕವಾಗಿ ಮೌರ್ಯರ ಕಾಲದಿಂದಲೂ ಬೇಡರು ಕಾಣಿಸಿಕೊಳ್ಳುತ್ತಾರೆ. ಕನ್ನಡದ ಮೊದಲ ಮನೆತನವಾದ ಕದಂಬರು ಬೇಡ ಕುಲದವರೆಂದು ಬುಕಾನನ್‌ನು ಹೇಳುತ್ತಾನೆ.[೫] ಗಂಗರು ಸಹಿತ ಬೇಡರನ್ನು ಸೈನ್ಯಕ್ಕೆ ಸೇರಿಸಿಕೊಂಡರು. ಚಾಲುಕ್ಯರ ಕಾಲದಲ್ಲಿ ಬೇಡ ಪಡೆಗಳು ಕರ್ನಾಟಕದ ಸೈನ್ಯದಲ್ಲಿ ಪ್ರಸಿದ್ಧವಾಗಿದ್ದವು. ಕರ್ನಾಟಕದ ಸೈನ್ಯವೆಂದರೆ 'ಬೇಡರ ಸೈನ್ಯ'ವೆಂದೇ ಹೆಸರಾಗಿತ್ತು. ಏಕೆಂದರೆ ಕರ್ನಾಟಕ ಸೈನ್ಯದಲ್ಲಿ ಬೇಡರೇ ಹೆಚ್ಚು ಸಂಖ್ಯೆಯಲ್ಲಿದ್ದರು.[೬]

ರಾಷ್ಟ್ರಕೂಟರ ಕಾಲಕ್ಕೆ ಅಧಿಕಾರಿಗಳಾಗಿ ಅನೇಕ ಹುದ್ದೆಗಳನ್ನು ಅಲಂಕರಿಸಿದ ಬೇಡರು ನಾಡಗಾವುಂಡರಾಗಿ ನೇಮಕಗೊಂಡಿರುವುದು ತಿಳಿದುಬರುತ್ತದೆ.[೭] ಇವರು ಯಾವತ್ತೂ ಆಯುಧ ಜೀವಿಗಳಾಗಿದ್ದರಿಂದ ರಾಷ್ಟ್ರಕೂಟರ ಕಾಲದಲ್ಲಿ ಬೇಡರಿಗೆ ನಾಯಕ ಎಂಬ ಹೆಸರು ಅನ್ವಯಿಸಲ್ಪಟ್ಟಿತು.

ಹೊಯ್ಸಳರ ಪ್ರಸಿದ್ಧ ದೊರೆ ವಿಷ್ಣುವರ್ಧನನು ಬೇಡರನ್ನು ತನ್ನ ಸೈನ್ಯದಲ್ಲಿ ನೇಮಿಸಿಕೊಂಡಿದ್ದನು. ಹಾಗೂ ಆಪ್ತ ಸಹಾಯಕ್ಕಾಗಿ ಕ್ರಿ.ಶ.೧೧೧೭ರಲ್ಲಿ ಕಿರಾತ ಮುಖ್ಯಸ್ಥರನ್ನು ವೀರರನ್ನು ನೇಮಿಸಿಕೊಂಡಿದ್ದನು. ಇದೇ ಸಮಯದಲ್ಲಿ ಹೊಯ್ಸಳರಿಗೆ ಮತ್ತು ಸೇವುಣರಿಗೆ ಯುದ್ಧವಾದಾಗ ಬೇಡ ಸೈನಿಕರ ಪಾತ್ರ ನಿರ್ಣಾಯಕವಾಗಿತ್ತು.[೮] ಹೀಗೆ ಈ ಎಲ್ಲ ಮನೆತನಗಳಲ್ಲಿ ಬೇಡ ಸೈನಿಕರು ಗುರುತಿಸಿಕೊಂಡಿದ್ದಾರೆ.

ವಿಜಯನಗರಕ್ಕಿಂತ ಪೂರ್ವದಲ್ಲಿ ತುಂಗಭದ್ರ ನದಿ ತೀರದ ಪ್ರದೇಶದಲ್ಲಿದ್ದ ಕುಮ್ಮಟದುರ್ಗದ ಅರಸರ ಕಾಲದಲ್ಲಿ ಬೇಡರು ಒಂದು ನಿಶ್ಚಿತ ನೆಲೆಯನ್ನು ಕಂಡುಕೊಳ್ಳುವಂತಾಯಿತು. ಅಂದಿನ ದೊರೆಗಳು ಬೇಡರನ್ನು ನೆಲೆಸುವಂತೆ ಮಾಡಲು ಕೆಲವು ಅಗತ್ಯ ಕ್ರಮಗಳನ್ನು ಕೈಗೊಂಡಾಗ, ಬೇಡರು ಕುಮ್ಮಟದುರ್ಗದ ಸುತ್ತಮುತ್ತ ಬಂದು ನೆಲೆಸಿದರು. ಮುಮ್ಮಡಿಸಿಂಗನು ಕುಮ್ಮಟದುರ್ಗದ ಮೊದಲ ಪಾಳೆಯಗಾರ ಎಂಬುದನ್ನು ಕ್ರಿ.ಶ.೧೨೮೦-೧೨೮೭ರ ಶಾಸನಗಳು ಸಮರ್ಥಿಸುತ್ತವೆ. ಇವನು ಉತ್ತರದ ಯಾದವ ಮತ್ತು ದಕ್ಷಿಣದ ಹೊಯ್ಸಳರೊಡನೆ ಹೋರಾಡುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದನು.[೯]

ಮುಮ್ಮಡಿಸಿಂಗನ ತರುವಾಯ ಆತನ ಮಗ ಕಂಪಿಲರಾಯ ಉತ್ತರಾಧಿಕಾರಿಯಾದನು.(ಕ್ರಿ.ಶ.೧೩೧೩-೧೫) ಮಲ್ಲಿಕಾಫರನ ಧಾಳಿಯನ್ನು ಯಶಸ್ವಿಯಾಗಿ ಎದುರಿಸಿದವನು.[೧೦] ಈತನಿಗೆ ಮಗ ಕುಮಾರರಾಮನು ಸಹಾಯಕನಾಗಿ ನಿಂತನು. ಕುಮಾರರಾಮನ ಕಾಲದಲ್ಲಿ ಕುಮ್ಮಟದುರ್ಗವು ಒಂದು ಹೊಸ ರಾಜಧಾನಿಯಾಗಿ ಮಾರ್ಪಟ್ಟಿತಲ್ಲದೆ, ಬೇಡರ ಪಡೆಗಳನ್ನು ಕಟ್ಟಿಕೊಂಡು ವರಂಗಲ್ಲಿನ ಪ್ರತಾಪರುದ್ರನ ಮೇಲೆ ಸೈನ್ಯ ಸಮೇತನಾಗಿ ಹೋಗಿ ಜಯಶೀಲನಾದನು. ಹೊಯ್ಸಳ ದೊರೆ ವೀರಬಲ್ಲಾಳನ ಮೇಲೆ ೧೭ ಸಾವಿರ ಪಡೆಯೊಂದಿಗೆ ಧಾಳಿ ಮಾಡಿದನು. ಅಲ್ಲದೆ ಕೊಂಗು, ಮಲೆಯಾಳ, ಮಧುರ, ಕೊಡಗು, ಕೋಲಾರ, ಪೆನ್ನುಗೊಂಡ, ನಿಡುಗಲ್ಲು, ಮಿಡಗೇಸಿ, ಮಾಗಡಿ, ಮಧುಗಿರಿ, ಕಡಪ, ಕರ್ನೂಲು, ರಾಯದುರ್ಗ, ಕೆಳದಿನಾಡು, ಹಾವನೂರು, ಹುಬ್ಬಳ್ಳಿ, ಜರಿಮಲೆ, ಕನಕಾದ್ರಿ, ರಾಯಪೀಠ, ಆನೆಗೊಂದಿ ಮುಂತಾದ

ರಾಜರುಗಳನ್ನು ಹತ್ತಿಕ್ಕಿದನು. ಪರ್ಯಾಯವಾಗಿ ಅವರುಗಳು ಕುಮಾರರಾಮನಿಗೆ ಕೈಮುಗಿದು ಉಡುಗೊರೆಗಳನ್ನು ನೀಡಿದರು. ಪ್ರತಿಯಾಗಿ ಅವರಿಗೆಲ್ಲಾ ಕುಮಾರರಾಮನು ಸಹ ಉಡುಗೊರೆಯನ್ನು ಕೊಟ್ಟು ಕಳುಹಿಸಿದನು.[೧೧]

ಮಹಮದ್ ಬಿನ್ ತುಘಲಕನ ಸೋದರಿಯ ಮಗ ಬಾಹುಯುದ್ದೀನ್ ಗರ್ಷ್‌ಹಾಸ್ಪ್‌ನು ಮಹಮದ್ ಬಿನ್ ತೊಘಲಕನ ವಿರುದ್ಧವೇ ದಂಗೆ ಎದ್ದು ಕಂಪಿಲರಾಯನ ಆಶ್ರಯಕ್ಕೆ ಬಂದನು. ಕಂಪಿಲರಾಯ ಆಶ್ರಯಕೋರಿ ಬಂದವನನ್ನು ರಕ್ಷಿಸಿದ. ಆಗ ತುಘಲಕನು ಪ್ರಬಲವಾದ ಪಡೆಯನ್ನು ಕಂಪಿಲರಾಯನ ವಿರುದ್ಧ ಕಳುಹಿಸಿದ. ಆಗ ಕಂಪಿಲರಾಯನು ಆ ಪಡೆಯನ್ನು ಎದುರಿಸಿದ, ಮತ್ತೇ ಎರಡು ಬಾರಿ ತುಘಲಕನ ಸೈನ್ಯವನ್ನು ಸೋಲಿಸಿದನು.[೧೨] ಈ ಸಂದರ್ಭದಲ್ಲಿ ಬೇಡರ ಪಡೆ ಧೈರ್ಯದಿಂದ ಹೋರಾಡುತ್ತಿತ್ತು. ಕುಮ್ಮಟದ ರಕ್ಷಣೆ ತಮ್ಮ ರಕ್ಷಣೆಯೇ ಆಗಿತ್ತು. ಮುಸಲ್ಮಾನರ ಧಾಳಿಗಳನ್ನು ಒಗ್ಗಟ್ಟಿನಿಂದ ಎದುರಿಸುತ್ತಿದ್ದರು. ಮುಸ್ಲಿಂ ದಂಡು ಕುಮ್ಮಟದುರ್ಗವನ್ನು ಮುತ್ತಿದಾಗ ಹರಿಯಾಲದೇವಿಯ ಸಹೋದರರು ೬೦೦೦ ರಾವುತರೊಂದಿಗೆ ಹೋಗಿ ದಾರಿಯಲ್ಲಿ ಬರುತ್ತಿದ್ದ ದಂಡನ್ನು ಎದುರಿಸಿದರು.[೧೩]

ಮೂರನೆಯ ಬಾರಿಗೆ ಮಹಮದ್ ಬಿನ್ ತುಘಲಕ್‌ನು ಕಂಪಲಿ ರಾಜ್ಯದ ಮೇಲೆ ಧಾಳಿ ಮಾಡಿದ. ಕಂಪಿಲರಾಯ ತೀರಾ ಇಕ್ಕಟ್ಟಿನ ಸ್ಥಿತಿಯಲ್ಲಿದ್ದಾಗ ಕುಮಾರರಾಮನು ತಂದೆಯ ಜೊತೆಯಲ್ಲಿ ರಣರಂಗದಲ್ಲಿ ಹೋರಾಡುತ್ತಾ ವೀರಮರಣ ಹೊಂದಿದನು. ಸುಮಾರು ೩೧ ವರ್ಷಗಳ ಕಾಲ ಸ್ವತಂತ್ರವಾಗಿ ಎಲ್ಲಾ ಧಾಳಿಗಳನ್ನು ಎದುರಿಸಿದ್ದ ಸಂಪದ್ಭರಿತ ಸುವ್ಯವಸ್ಥಿತ ರಾಜ್ಯ ಕ್ರಿ.ಶ.೧೩೨೭ರಲ್ಲಿ ನಾಶವಾಗಿಹೋಯಿತು.

ಕಂಪಲಿ ಮಹಮದ್ ಬಿನ್ ತುಘಲಕನ ವಶವಾಯಿತು. ಪ್ರಾಂತ್ಯಪಾಲಕನಾಗಿ, ತುಘಲಕ್ ಮಲ್ಲಿಕ್ ಮಹಮ್ಮದ್ ನೇಮಕವಾದನು. ಆಗ ಉತ್ತರದಲ್ಲಿ ಧಾಳಿಗಳು ಪ್ರಾರಂಭವಾಗಿದ್ದವು. ಮಲ್ಲಿಕ್‌ನು ಮಹಮದ್‌ನ ಸಹಾಯಕ್ಕೆ ಸೈನ್ಯವನ್ನು ಸೆರೆಯಾಳುಗಳನ್ನಾಗಿ ಮಾಡಿಕೊಂಡು ದೆಹಲಿಗೆ ಹೋದನು. ಆಗ ಮುಸಲ್ಮಾನರಿಂದ ಸ್ವತಂತ್ರರಾಗುವ ಪ್ರಯತ್ನಗಳು ನಡೆದವು. ಪ್ರೋಲಯ ನಾಯಕ ಮತ್ತು ಆತನ ಮಗ ಕಾಪಾಯನಾಯಕ ಸುಲ್ತಾನನ ಸಾಮ್ರಾಜ್ಯವನ್ನು ನಿರ್ನಾಮಗೊಳಿಸುವಲ್ಲಿ ಕಾರ್ಯಶೀಲರಾಗಿ, ದಕ್ಷಿಣದ ಹಿಂದೂರಾಜರ ಒಂದು ಒಕ್ಕೂಟ ಸ್ಥಾಪಿಸಲು ಪ್ರಯತ್ನಿಸಿದರು.[೧೪]

ಇದೇ ಸಂದರ್ಭದಲ್ಲಿ ಮಲ್ಲಿಕ್‌ನ ನಾಯಬನ ವಿರುದ್ಧ ಜನ ತೆರಿಗೆ ಪಾವತಿ ಮಾಡಲಿಲ್ಲ ಹಾಗೂ ಸ್ಥಳೀಯ ಸೌಲಭ್ಯಗಳು ದೊರೆಯದಂತೆ ಮಾಡಿದರು. ಈ ಸುದ್ದಿ ತಿಳಿದ ಸುಲ್ತಾನ ಹಿಂದೂಗಳನ್ನು ಪ್ರಾಂತ ಪಾಲಕರನ್ನಾಗಿ ನೇಮಿಸಬೇಕೆಂದುಕೊಂಡು ಈ ಹಿಂದೆ ಉತ್ತರಕ್ಕೆ ಸೆರೆಯಾಳುಗಳನ್ನಾಗಿ ಹಿಡಿದುಕೊಂಡು ಹೋದವರಲ್ಲಿ ಕುಮ್ಮಟದುರ್ಗದಲ್ಲಿ ಕಾವಲುಗಾರರಾಗಿದ್ದ ಕಂಪಿಲರಾಯನ ಭಾವ, ಸಂಗಮನ ಮಕ್ಕಳಾದ ಹರಿಹರ ಬುಕ್ಕರು ಇದ್ದರು. ಅವರನ್ನೇ ಕಂಪಲಿ ಪ್ರಾಂತ್ಯದ ಪ್ರಾಂತಪಾಲ ಹಾಗೂ ಉಪಪ್ರಾಂತಪಾಲರನ್ನಾಗಿ

ನೇಮಕ ಮಾಡಿದನು. ಇವರು ವಿದ್ಯಾರಣ್ಯರಿಂದ ಪ್ರೇರಿತರಾಗಿ ಹಿಂದೂಧರ್ಮದ ರಕ್ಷಣೆಗಾಗಿ ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು.

ಕುಮ್ಮಟದುರ್ಗ ಹಾಳಾದ ಮೇಲೆ ಚದುರಿಹೋಗಿದ್ದ ನಾಯಕ ಜನಾಂಗ ಮತ್ತೆ ವಿಜಯನಗರದ ಆಶ್ರಯ ಪಡೆದರು. ಆಗ ಇವರ ಯೋಧವೃತ್ತಿಯು ವಂಶಪಾರಂಪರ್ಯವಾಗಿ ಮುಂದುವರೆಯಿತು. ವಿಜಯನಗರದ ಅರಸರು ಬೇಡರನ್ನು ಸೈನ್ಯದಲ್ಲಿ ಸೇರಿಸಿಕೊಂಡರು. ವಿಜಯನಗರದ ಬಹುಭಾಗವು ಈ ಬೇಡರ ಕಾಲಾಳುಗಳ ಪಡೆಯಿಂದ ಕೂಡಿದ್ದಿತು.[೧೫] ಹೆಚ್ಚಾಗಿ ಸೈನ್ಯದಲ್ಲಿ ಬೇಡರನ್ನೇ ನೇಮಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಸೈನ್ಯದಲ್ಲಿ ಮೀಸಲು ಪಡೆಯೆಂಬುದು ಇತ್ತು.[೧೬] ಆ ಮೀಸಲು ಪಡೆಯಲ್ಲಿ ಬೇಡಜನಾಂಗ ನಾಯಕರಾಗಿದ್ದರು.[೧೭] ಸೈನ್ಯದ ಅನೇಕ ಹುದ್ದೆಗಳಲ್ಲಿ ಬೇಡರು ಮುಖಂಡರಾಗಿ, ಅಧಿಕಾರಿಗಳಾಗಿ ಮೆರೆದರು. ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ವಿಜಯನಗರದ ಸೈನ್ಯದ ಬಗ್ಗೆ ತುಂಬಾ ಕೊಂಡಾಡಿದ್ದಾರೆ. ಸೈನ್ಯದಲ್ಲಿ ಬೇಡರು ಪ್ರಮುಖ ಸ್ಥಾನದಲ್ಲಿದ್ದರು. ಪೆರಿಯ ಓಬಳನಾಯಕ ಎಂಬುವನು ವಿಜಯನಗರದ ಸೈನ್ಯದಲ್ಲಿ ಉನ್ನತ ಹುದ್ದೆಯನ್ನು ಹೊಂದಿದ್ದನು[೧೮] ಎಂಬುದಾಗಿ ವಿವರಣೆಯನ್ನು ನೀಡಿದ್ದಾರೆ. ಆಗ ಕೆಲವು ಉಪಜಾತಿಗಳ ಗಣ್ಯರನ್ನು ಮುಖ್ಯವಾಗಿ ಅಮರನಾಯಕರನ್ನಾಗಿ ಗೇಣಿ ರೈತರನ್ನಾಗಿ ಕಾವಲುಗಾರರನ್ನಾಗಿ ನೇಮಕ ಮಾಡಲಾಗಿತ್ತು.

ವಿಜಯನಗರ ಅರಸರ ಕಾಲದಲ್ಲಿ ಬಹಳಷ್ಟು ಪಾಳೆಯಗಾರರು ತಲೆ ಎತ್ತಿದರು. ವಿಜಯನಗರದ ಅರಸರು ವಿಸ್ತಾರವಾದ ಸಾಮ್ರಾಜ್ಯಕ್ಕೆ ಸೇರಿದ ನಾನಾ ಭಾಗಗಳ ಆಳ್ವಿಕೆಯನ್ನು ತಾವೇ ನೇರವಾಗಿ ಮಾಡುವುದು ಕಷ್ಟವಾದಾಗ, ಆಯಾ ಪ್ರದೇಶಗಳ ಆಡಳಿತ ಉಸ್ತುವಾರಿ, ಕಂದಾಯ ವಸೂಲಿ, ಶಾಂತಿ ಸುವ್ಯವಸ್ಥೆ ಕಾಪಾಡಲು ಹಾಗೂ ಯುದ್ಧ ಸಮಯದಲ್ಲಿ ಸಹಾಯ ಮಾಡಲು ಬಲಿಷ್ಟ ಹಾಗೂ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಸಾಮಂತ ಅಧಿಕಾರಿಗಳೇ ಕ್ರಮೇಣ ಪಾಳೆಯಗಾರರೆನಿಸಿಕೊಂಡರು.[೧೯] ಪಾಳೆಯಗಾರರು ಸಾಮಾನ್ಯವಾಗಿ ೨೦ ಹಳ್ಳಿಗಳ ಒಂದು ಗುಚ್ಚಕ್ಕೆ ಮುಖ್ಯಸ್ಥರಾಗಿರುತ್ತಿದ್ದರು. ಇವರೇ ವಿಜಯನಗರ ಸಾಮ್ರಾಜ್ಯದ ಗಟ್ಟಿ ತಳಪಾಯಗಳಾದರು. ಇವರಿಂದಲೇ ವಿಜಯನಗರ ಸಾಮ್ರಾಜ್ಯವು ವಿಸ್ತಾರಗೊಳ್ಳಲು ಸಾಧ್ಯವಾಯಿತು. ಹೀಗಾಗಿ ವಿಜಯನಗರ ಸಾಮ್ರಾಜ್ಯವು ಪಾಳೆಯಗಾರರ ಒಂದು ಒಕ್ಕೂಟವೇ ಆಗಿತ್ತು ಎನ್ನಬಹುದು. ಅಂದು ಸುಮಾರು ೨೦೦ ಸಾಮಂತರುಗಳ ಮೂಲಕ ವಿಜಯನಗರದ ಆಡಳಿತ ನಡೆಯುತ್ತಿತ್ತು. ಅವರಲ್ಲಿ ಬೇಡರೇ ಅಧಿಕ ಸಂಖ್ಯೆಯಲ್ಲಿದ್ದರು. ವಿಜಯನಗರದ ಅರಸರು ಆಪತ್ಕಾಲದಲ್ಲಿದ್ದಾಗ, ರಾಜ್ಯವನ್ನು ರಕ್ಷಿಸುವ ಹಾಗೂ ಆರ್ಥಿಕ ಸಂಕಷ್ಟಗಳ ಪರಿಸ್ಥಿತಿಯಲ್ಲಿ ಸಹಾಯ ಮಾಡುವ ಸಲುವಾಗಿ ಸಂಗ್ರಹಿಸಿದ್ದ ದ್ರವ್ಯದಲ್ಲಿ ನಿಗದಿಪಡಿಸಿದ ಕಾಲಕ್ಕೆ ಪ್ರಭುವಿಗೆ ಪೊಗದಿಯನ್ನು ಸಲ್ಲಿಸಿ ಸ್ವಾಮಿಭಕ್ತಿಯನ್ನು ಪ್ರದರ್ಶಿಸುತ್ತಿದ್ದರಲ್ಲದೆ, ಯುದ್ಧದಲ್ಲಿ ಪಾಲ್ಗೊಂಡು ಶೌರ್ಯಸಾಹಸಗಳನ್ನು ಪ್ರದರ್ಶಿಸಿ, ಪ್ರಭುವಿನಿಂದ ಬಿರುದುಗಳನ್ನು ಪಡೆದಿರುವುದಕ್ಕೆ ಅನೇಕ ನಿದರ್ಶನಗಳಿವೆ.

ಕೆಲವೊಮ್ಮೆ ತಾವೇ ಪ್ರಭುವಿನ ಸಮಾನರಂತೆ ವರ್ತಿಸಿರುವ ಉದಾಹರಣೆಗಳಿವೆ.[೨೦] ಊಳಿಗಮಾನ್ಯಪದ್ಧತಿ ಸರಕಾರವನ್ನು ಹೋಲುವ, ನಾಯಕರ ಆಡಳಿತ ಪದ್ಧತಿಯನ್ನು ಹುಟ್ಟು ಹಾಕಿದರು ಎನ್ನಬೇಕು. ಅಲ್ಲದೆ ವಿಜಯನಗರದ ಅರಸರ ಕಾಲದಲ್ಲಿ ಪಾಳೆಗಾರಿಕೆಯ ಸ್ಥಾಪನೆಗೆ ಮುಕ್ತ ಅವಕಾಶ ನೀಡಿದ್ದರಿಂದ ಅನೇಕ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದವು. ಈ ಪಾಳೆಯಪಟ್ಟುಗಳನ್ನು ಸ್ಥಾಪಿಸಿದವರಲ್ಲಿ ಬಹುತೇಕ ಜನ ವಿಜಯನಗರದ ಸಾಮ್ರಾಜ್ಯದ ಸೇವೆಯಲ್ಲಿದ್ದವರಾಗಿದ್ದರು.

ಹರತಿ ಮನೆತನದ ತಿಪ್ಪರಾಜ ಸಂಗಮವಂಶದ ಹಕ್ಕಬುಕ್ಕರಲ್ಲಿ ಸೈನ್ಯದ ದಳಪತಿಯಾಗಿದ್ದನು. ಚಿತ್ರದುರ್ಗದ ಅರಸ ಕಾಮಗೇತಿನಾಯಕ ವಿಜಯನಗರದ ಅರಸರಲ್ಲಿದ್ದು, ಕ್ರಿ.ಶ.೧೩೯೮ರಲ್ಲಿ ಗುಲ್ಬರ್ಗಾದ ಸುಲ್ತಾನನಿಂದ ಹರಿಹರನ ಕಗ್ಗೊಲೆಯನ್ನು ತಪ್ಪಿಸಿದನು. ಆತನಿಗೆ ಕ್ರಿ.ಶ.೧೫೦೮ರಲ್ಲಿ ವಿಜಯನಗರದ ಅರಸರು ಹೊಳಲ್ಕೆರೆಯ ನಾಯಕನನ್ನಾಗಿ ನಿಯೋಜಿಸಿದರು. ಕ್ರಿ.ಶ.೧೪೩೬-೩೭ರಲ್ಲಿ ಪ್ರೌಢದೇವರಾಯನ ಸಹಾಯದಿಂದ ಕನಕಗಿರಿಯಲ್ಲಿ ಪರಸಪ್ಪ ಉಡಿಚನಾಯಕ ಪಾಳೆಯಪಟ್ಟನ್ನು ಆರಂಭಿಸಿದ. ಹೀಗಾಗಿ ಕನಕಗಿರಿ ಪಾಳೆಯಪಟ್ಟು ವಿಜಯನಗರ ಅರಸರ ರಕ್ಷಣೆಯಲ್ಲಿ ಮೊದಲ ಸ್ಥಾನ ಪಡೆಯಿತು. ವಿಜಯನಗರದ ಕೇಂದ್ರಬಿಂದುವಾಗಿದ್ದ, ಮುದಗಲ್ ಕೋಟೆಯ ಅಧಿಕಾರಿ ವರದಣ್ಣನಾಯಕ ವಿಜಯನಗರದಲ್ಲೇ ಸೇವೆ ಸಲ್ಲಿಸುತ್ತಿದ್ದ.

ಜರಿಮಲೆ ಸಂಸ್ಥಾನದ ಪಾಪಣ್ಣನಾಯಕನು ವಿಜಯನಗರದ ಸಾಳ್ವನರಸಿಂಹನ ಸೇವಕರಲ್ಲಿ ಒಬ್ಬನಾಗಿ ಸೇವೆ ಸಲ್ಲಿಸುತ್ತಿದ್ದನು. ಈತನಲ್ಲಿಯ ಸ್ವಾಮಿನಿಷ್ಠೆ ಮತ್ತು ಧೈರ್ಯವನ್ನು ಮೆಚ್ಚಿ ಸಾಳ್ವ ನರಸಿಂಹ ಕೆಲವು ಗ್ರಾಮಗಳನ್ನು ಬಳುವಳಿಯಾಗಿ ನೀಡುತ್ತಾನೆ. ಹಾಗೆಯೇ ತುಳುವ ನರಸಿಂಹ ಕ್ರಿ.ಶ.೧೫೦೮-೧೫೦೯ರಲ್ಲಿ ಜರಿಮಲೆಯ ಪೆನ್ನಪ್ಪನಾಯಕನಿಗೆ ಜರಿಮಲೆ, ಗುಡೇಕೋಟೆ, ಭೂಪಸಮುದ್ರಗ್ರಾಮಗಳನ್ನು ಉಡುಗೊರೆಯಾಗಿ ನೀಡುತ್ತಾನೆ. ಹಾಗಲವಾಡಿಯ ಯೆರಿಮಾದಿನಾಯಕನು ತುಂಮಳ ಸಂಸ್ಥಾನದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಾದೇಶಿಕ ಹಂತದ ಅಧಿಕಾರಿಯಾಗಿದ್ದ. ವಿಜಯನಗರ ಅರಸರ ಅಧೀನರಾಗಿ ಪಾಳೆಯಪಟ್ಟನ್ನು ಸ್ಥಾಪಿಸಿ ಕ್ರಿ.ಶ.೧೪೯೬ ರಿಂದ ೧೫೧೬ರವರೆಗೆ ಅಧಿಕಾರ ನಡೆಸಿದ.[೨೧] ಹಾಗೆಯೇ ಸಂತೆಬೆನ್ನೂರು ಹನುಮಪ್ಪನಾಯಕ ವಿಜಯನಗರದ ಸೈನ್ಯದ ಸೇನಾನಿಯಾಗಿ ಕ್ರಿ.ಶ.೧೫೬೫ರಲ್ಲಿ ಪರಾಕ್ರಮವನ್ನು ಪ್ರದರ್ಶಿಸಿದವನಾಗಿದ್ದನು.

ಇಂಥ ವಿವರಗಳಿಂದ ಪಾಳೆಯಗಾರರು ಸ್ವಂತ ಸೈನ್ಯವನ್ನು ಹೊಂದಲು ಅವಕಾಶವಾಯಿತು. ಪಾಳೆಯಗಾರಿಕೆಯ ಆಡಳಿತವನ್ನು ವಿಜಯನಗರದ ಅರಸರು ಪೋಷಿಸಿದ್ದರಿಂದ ಪಾಳೆಯಗಾರರು ದೊರೆಗಳೆಂದು, ಸಾಮಂತರೆಂದು, ನಾಡ ಪ್ರಭುಗಳೆಂದು ಆಯಾ ಭಾಗಗಳಲ್ಲಿ ಪ್ರಬಲರಾಗಲು ಸಾಧ್ಯವಾಯಿತು. ಕಾರಣ, ಇವರು ಜನಸಾಮಾನ್ಯ ವರ್ಗದಿಂದ ಬಂದವರು ಹಾಗೂ ರಾಜಮನೆತನದವರಂತೆ ತಮ್ಮನ್ನು ದೈವಾಂಶ ಸಂಭೂತರೆಂದು ಭಾವಿಸಿಕೊಂಡು ಪ್ರಜೆಗಳಿಂದ ದೂರವಾಗಿ ಉಳಿಯದೇ ಸಾಮಾನ್ಯ

ಜನರೊಡನೆ ನಿಕಟಸಂಪರ್ಕವನ್ನು ಹೊಂದಿದ್ದರು. ತಮ್ಮ ಪ್ರದೇಶದ ಜನಸಮುದಾಯದ ಬೆಂಬಲವನ್ನು ಪಡೆದು ಸಂಪೂರ್ಣವಾದ ಅಧಿಕಾರವನ್ನು ನಡೆಸುವಂತಾದರು. ದೂರದ ರಾಜನಿಗಿಂತ ಸಮೀಪದ ಈ ಪಾಳೆಯಗಾರರೇ ಜನರಿಗೆ ಹತ್ತಿರದವರಾದರು, ಹೊಣೆಗಾರರಾದರು ಪರಿಣಾಮವಾಗಿ ಆ ಭಾಗದ ಜನರಿಂದ ದೊರೆ, ರಾಜ, ಅರಸರೆಂದೆನಿಸಿಕೊಂಡರು.

ವಿಜಯನಗರದ ಅರಸರು ದುರ್ಬಲವಾದಂತೆ ಈ ಪಾಳೆಯಗಾರರು ದಿನದಿಂದ ದಿನಕ್ಕೆ ಸ್ಥಳೀಯವಾಗಿ ಪ್ರಬಲಗೊಳ್ಳುತ್ತಲೇ ಬಂದರು. ಆದರೆ ವಿಜಯನಗರಕ್ಕೆ ಬೆನ್ನೆಲುಬಾಗಿದ್ದ ಇವರು ಆ ಸಿಂಹಾಸನಕ್ಕೆ ಸಾಮಂತರಾಗಿದ್ದುಕೊಂಡು ಆಡಳಿತ ನಡೆಸಿದ್ದರಲ್ಲದೆ, ಕ್ರಿ.ಶ.೧೫೬೫ರ ತಾಳಿಕೋಟೆ ಯುದ್ಧದಲ್ಲಿ ಧೈರ್ಯ ಸಾಹಸವನ್ನು ತೋರಿ ಈ ಯುದ್ಧದಲ್ಲಿ ೭೨ ವಂಶದ ನಾಯಕರೂ ಮತ್ತು ಅವರ ಅನುಯಾಯಿಗಳೂ, ಕಷ್ಟಕ್ಕೀಡಾದರೆಂದು ಹೇಳಲಾಗಿದೆ.[೨೨] ಸಾಕಷ್ಟು ಸಂಖ್ಯೆಯಲ್ಲಿ ಬೇಡ ಸೈನಿಕರು ಹತರಾದರು. ಸುಮಾರು ೪೦ ಸಾವಿರ ಬೇಡರ ಪಡೆ ಹಾಳಾಯಿತೆಂದು ವಿದೇಶಿ ಪ್ರವಾಸಿ ಫೆರಿಸ್ತಾ ಹೇಳುತ್ತಾನೆ.

ಕ್ರಿ.ಶ.೧೫೬೫ರ ನಂತರ ಬಹುತೇಕವಾಗಿ ವಿಜಯನಗರದ ಅಧೀನದ ಪಾಳೆಯಗಾರರು ಸ್ವತಂತ್ರರಾದರು. ಅವರಲ್ಲಿ ಬೇಡ ಸಂಸ್ಥಾನಗಳೇ ಅಧಿಕವಾಗಿವೆ. ಹೀಗಾಗಿ ವಿಜಯನಗರೋತ್ತರಕಾಲೀನ ಕರ್ನಾಟಕದ ಇತಿಹಾಸವನ್ನು ಬೇಡರ ಇತಿಹಾಸವೆಂದು ಕರೆಯಬಹುದಾಗಿದೆ.

ತಾಳಿಕೋಟೆ ಯುದ್ಧದಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಂಡ ಹಲವು, ತರುವಾಯ ಸ್ವತಂತ್ರ ಸ್ಥಾಪಿಸಿಕೊಂಡ ಕೆಲವು, ಒಟ್ಟು ಪ್ರಮುಖ ೭೨-೭೩ ಪಾಳೆಯಪಟ್ಟುಗಳನ್ನು ಗುರುತಿಸಲಾಗಿದೆ.[೨೩] ಇತಿಹಾಸತಜ್ಞರಾದ ಪ್ರೊ.ಲಕ್ಷ್ಮಣ್ ತೆಲಗಾವಿಯವರು ೭೭ ಪಾಳೆಯಪಟ್ಟುಗಳನ್ನು ಗುರುತಿಸಿದ್ದಾರೆ. ಈ ಪಾಳೆಯಪಟ್ಟುಗಳಲ್ಲಿ ಆನೆಗೊಂದಿ, ಚಿತ್ರದುರ್ಗ, ರತ್ನಗಿರಿ, ನಿಡಗಲ್ಲು, ಶಿರಾ, ಬಳ್ಳಾರಿ, ಮೊಳಕಾಲ್ಮೂರು, ರಾಯದುರ್ಗ, ಪೆನಗೊಂಡ, ಮದಮನೂರು, ಇಕ್ಕೇರಿ, ಸ್ವಾದಿ, ಚಂದಾವರ, ಕೊಲ್ಲಾಪುರ, ಬಿದನೂರ, ಮುಂಡಿಕೋಟೆ, ಬಂಕಾಪುರ, ನಂದಿಯಾಳ, ದಾವಸಹಳ್ಳಿ, ಹರಪನಹಳ್ಳಿ, ಮುಟ್ಟಿ, ಬೆಳಗುತ್ತಿ, ಕಡಪೆ, ಕಿತ್ತೂರ, ತಲಚೇರಿ, ತಂಜಾವೂರು, ಸುರಪುರ, ಕಕ್ಕೇರಿ. ಕೋಸಗಿ, ಕೂಡೇಕಲ್ಲು, ಕರಿಗುಡ್ಡ, ಗುಂತಗೋಳ, ದೇವದುರ್ಗ, ಕ್ಯಾದಿಗೇರಿ, ಕಪಟರಾಳ, ಹಾಗಲವಾಡಿ, ಮಂಗಳೂರು, ಬಸವಾಪಟ್ಟಣ, ಬೇಲೂರು, ಬಾದಾಮಿ, ದೊರೆಮಲೆ, ಜರಿಮಲೆ, ಗುಡೇಕೋಟೆ, ನನ್ನಿವಾಳ, ಹರತಿಕೋಟೆ, ಐಮಂಗಳ, ತರೀಕೆರೆ, ಪುರವರ, ಮಿಡಿಗೇಶಿ, ಪಾವಗಡ, ಶಿವರ, ಹೊಸಕೋಟೆ, ಕುಂದಾಪುರ, ಬಾಗೂರ, ಗುತ್ತಿ, ಚನ್ನಪಟ್ಟಣ, ಕಂಪಲಿ, ಮಲೆದುರ್ಗ, ಕನಕಗಿರಿ, ಗುಡಗುಂಟಿ, ಲೇಪಾಕ್ಷಿ, ಮಧುರೆ, ಆದವಾನಿ, ರಾಯಚೂರು, ಠಾಣ್ಯ, ಹದಿನಾಡು, ಯಳಂದೂರು, ಕಾಪುಗಹಳ್ಳಿ, ಹುಲಿಯೂರು, ಕೊರಟಗಿ, ಹೊನ್ನುಡಕಿ, ಹರಪನಹಳ್ಳಿ, ಕರಜಗಿ, ಉಚ್ಚಂಗಿದುರ್ಗ, ಮತ್ತೋಡು, ನಾಯಕನಹಟ್ಟಿ, ಅರಕೇರಿ, ದೂದಿಕೊಂಡಿ, ಸೂಂಡಿ,

ಪಾಮನಕಲ್ಲು, ಪ್ಯಾಪಲಿ, ಅಗಳಿ, ಪರಶುರಾಮಪುರ, ತುಳುಕು, ದ್ಯಾವನಹಳ್ಳಿ, ಮುದಗಲ್ , ಐಮಂಗಲ, ಬಾಣರಾವಿ, ಇನ್ನೂ ಮುಂತಾದ ಪಾಳೆಯಪಟ್ಟುಗಳು ಸೇರಿವೆ. ಇದರಲ್ಲಿ ಕೆಲವು ಪಾಳೆಯಪಟ್ಟುಗಳು ವಿಜಯನಗರದ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದರೆ, ಕೆಲವು ವಿಜಯನಗರದ ಅಧೀನದಲ್ಲಿ ಬೆಳೆದವು. ಕೆಲವು ವಿಜಯನಗರೋತ್ತರ ಕಾಲದಲ್ಲಿ ಹುಟ್ಟಿಕೊಂಡವುಗಳಾಗಿವೆ. ಈ ಮೇಲಿನ ಪಾಳೆಯಪಟ್ಟುಗಳು ಎಷ್ಟು ವರ್ಷ ಜೀವಿಸಿದ್ದವು, ಯಾರ ಸಾಮಂತಿಕೆಯಲ್ಲಿದ್ದವು, ಯಾವಾಗ ಸ್ವತಂತ್ರವಾಗಿ ಆಡಳಿತ ನಡೆಸಿದವು, ಇವುಗಳ ಅವನತಿ ಹೇಗಾಯಿತು ಎನ್ನುವುದರ ಸಂಶೋಧನೆಯನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಮಾಡಿದ್ದಾರೆ. ಅರಾಜಕತೆಯ ಭೀತಿಯಿಂದ ತತ್ತರಿಸುತ್ತಿದ್ದ ದಕ್ಷಿಣ ಭಾರತದ ಜನತೆಗೆ ರಾಜಕೀಯ ಭದ್ರತೆಯನ್ನು ನೀಡಿದ್ದುದು ಈ ನಾಯಕ ಪಾಳೆಯಗಾರರ ಬಹುಮುಖ್ಯವಾದ ಕೊಡುಗೆ.

ಈ ಎಲ್ಲಾ ಪಾಳೆಯಪಟ್ಟುಗಳು, ಮೂಲತಃ ಕೆಳವರ್ಗದ ಅದರಲ್ಲೂ ಬೇಡಜನಾಂಗದ ವ್ಯಕ್ತಿಗಳಿಂದ ಸ್ಥಾಪನೆಗೊಂಡು, ಅವರ ಅಧಿಪತ್ಯದಲ್ಲೇ ಸಾಗಿದವು. ಕೆಲದಿನಗಳ ತರುವಾಯ ಮೇಲ್ವರ್ಗದ ಮಡಿಲನ್ನು ಬಯಸಿಹೋದವು. ಬಹುಶಃ ಪ್ರಭುಸತ್ತೆಯಿಂದ ಮಾತ್ರ ಪ್ರಬಲರಾಗಿ ಗೌರವ, ಸಂಪತ್ತುಗಳಿಗೆ ಒಡೆಯರಾಗಿದ್ದ ಇವರು ಕೆಳಜಾತಿಯ ವಿಷಯ ಬಂದಾಗ ತಲೆತಗ್ಗಿಸುವ ವಾತಾವರಣ ಅಂದು ಉಂಟಾಗಿರಬಹುದು. ಅನಿವಾರ್ಯವಾಗಿ ತಮ್ಮ ಕೆಳಜಾತಿಯನ್ನು ತ್ಯಜಿಸಿ, ಮುಕ್ತ ಧೋರಣೆಯ ವೀರಶೈವ ಧರ್ಮವನ್ನು ಸ್ವೀಕರಿಸಿದರು.

ಬೇಡಜನಾಂಗದ ಚಿತ್ರದುರ್ಗದ ಅರಸು ಮನೆತನದವರು ಕ್ರಿ.ಶ.೧೫೯೬ರಲ್ಲಿ ವೀರಶೈವ ಧರ್ಮದ ತೆಕ್ಕೆಗೆ ಹೊಕ್ಕರು. ನಂತರ ಮರಳಿ ನಾಯಕ ಮತವನ್ನೇ ಅಪ್ಪಿಕೊಂಡಾಗ ಸಮಕಾಲೀನ ಬೇಡರ ಪಾಳೆಯಪಟ್ಟುಗಳಿಗೆ ಮತ್ತೆ ಜೀವ ಬಂದಿತು. ಚಿತ್ರದುರ್ಗದ ಮೂಲಕ ಉಸಿರಾಡತೊಡಗಿದ ಅನೇಕ ಪಾಳೆಯಗಾರರಿಗೆ ಇದೊಂದು ಒಕ್ಕೂಟದ ಒಕ್ಕೊರಲು ಅಗಿತ್ತು.[೨೪]

ಕೆಲವು ಮನೆತನಗಳು ವೀರಶೈವ ಧರ್ಮವನ್ನು ಅನುಸರಿಸಿ, ಇಂದಿಗೂ ಆ ವಂಶಜರು ವೀರಶೈವರಾಗಿಯೇ ಮುಂದುವರೆದಿದ್ದಾರೆ. ಕೆಲವು ಮನೆತನಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿವೆ. ಇನ್ನು ಕೆಲವು ನಾಯಕ ಅರಸುಮನೆತನಗಳು ನಾಯಕರಾಗಿಯೇ ಉಳಿದುಕೊಂಡು ಇಂದಿಗೂ ಅವರ ವಂಶಸ್ಥರು ಜೀವಿಸಿದ್ದಾರೆ. ಅಂತಹ ಮನೆತನಗಳಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೆಕೋಟೆ, ಜರಿಮಲೆ, ನಾಯಕನಹಟ್ಟಿ ಮತ್ತೋಡು ಮತ್ತು ಹರತಿ ಪ್ರಮುಖವಾದವುಗಳು. ಇವರು ನಾಯಕ ಜನಾಂಗದೊಂದಿಗೆ ತಮ್ಮ ಸಂಬಂಧವನ್ನು ಇರಿಸಿಕೊಂಡಿರುವುದಲ್ಲದೇ ತಮ್ಮ ವಂಶಪಾರಂಪರಿಕವಾಗಿ ಬಂದ ಸಾಂಸ್ಕೃತಿಕ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

## ೨.೧ ಚಿತ್ರದುರ್ಗ ನಾಯಕ ಅರಸರು

ಕರ್ನಾಟಕ ಇತಿಹಾಸದಲ್ಲಿ ಚಿತ್ರದುರ್ಗ ನಾಯಕ ಅರಸರ ಪಾತ್ರ ಬಹಳ ಮಹತ್ವವಾದದ್ದು. ವಿಜಯನಗರ ಪತನಾನಂತರ ಅಧಿಕಾರಕ್ಕೆ ಬಂದ ಕೆಲವು ನಾಯಕ ಅರಸು ಮನೆತನಗಳಲ್ಲಿಯೇ ಅತ್ಯಂತ ಬಲಿಷ್ಠವಾದುದು. ಈ ಮನೆತನದ ಅರಸರು ಕ್ರಿ.ಶ. ೧೫೬೮ ರಿಂದ ೧೭೭೯ರವರೆಗೆ ಇನ್ನೂರಾ ಹನ್ನೊಂದು ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ. ತಮ್ಮ ಆಡಳಿತಾವಧಿಯಲ್ಲಿ ಚಿತ್ರದುರ್ಗದ ಹೆಸರು ಜಾಜ್ವಲ್ಯಮಾನವಾಗುವಂತೆ ಮಾಡಿದವರು. ಇವರ ಶೌರ್ಯ ಸಾಹಸಗಳನ್ನು ಕೇಳದವರು ವಿರಳ. ಇವರು ಕಟ್ಟಿಸಿದ ಕೋಟೆ, ಕೊತ್ತಲ, ದೇವಾಲಯ, ಕೆರೆ, ಕುಂಟೆ ಮತ್ತು ಕಾಲುವೆಗಳು ಇಂದಿಗೂ ಅವರ ಸಾಧನೆಗೆ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಇವರು ತಮ್ಮ ಸುತ್ತಲಿನ ರಾಯದುರ್ಗ, ಹರತಿ, ಬೇಲೂರು, ಸಂತೆಬೆನ್ನೂರು, ನಾಯಕನಹಟ್ಟಿ, ಮತ್ತೋಡು ಮುಂತಾದ ಪಾಳೆಯಗಾರರ ಮೇಲೆ ರಾಜಕೀಯ ಪ್ರಭಾವ ಬೀರಿದವರು. ಕರ್ನಾಟಕದ ಚರಿತ್ರೆಯಲ್ಲಿ ಇವರ ಕಾಲ ವಿವಿಧ ದೃಷ್ಟಿಕೋನಗಳಿಂದ ಪ್ರಮುಖವಾದುದು. 'ಗಂಡುಮೆಟ್ಟಿನನಾಡು' ಎಂಬುದು ವಿಶೇಷವಾಗಿದೆ.

ಬೇಡಜನಾಂಗದವರಾದ ಇವರು ತಮ್ಮನ್ನು ವಾಲ್ಮೀಕಿ ಗೋತ್ರದವರೆಂದು, ಕಾಮಗೇತಿ ಎಂಬ ವಂಶಕ್ಕೆ ಸೇರಿದವರಾದ್ದರಿಂದ ಕಾಮಗೇತಿ, ಕಾಮಗೇತಿ ಕಸ್ತೂರಿ ಎಂಬ ವಿಶೇಷಣದೊಂದಿಗೆ ತಮ್ಮ ಶಾಸನಗಳಲ್ಲಿ ಕರೆದುಕೊಂಡಿರುವರು. ಹಗಲುಕಗ್ಗೊಲೆಯಮಾನ್ಯ, ಗಾದ್ರಿಮಲೆಹೆಬ್ಬುಲಿ ಇತ್ಯಾದಿ ಬಿರುದುಗಳನ್ನು ಧರಿಸಿದವರು.

ಚಿತ್ರದುರ್ಗ ನಾಯಕ ಅರಸರ ಮೂಲವ್ಯಕ್ತಿ ಮತ್ತಿತಿಮ್ಮಣ್ಣನಾಯಕ(ಕ್ರಿ.ಶ. ೧೫೬೮-೧೫೮೯). ಪ್ರಾರಂಭದಲ್ಲಿ ಈತ ವಿಜಯನಗರದ ಪ್ರತಿನಿಧಿಯಾಗಿದ್ದಾಗ, ಅಚ್ಯುತರಾಯ ಕೃಷ್ಣರಾಯ ಸಂತತಿಯ ಸಾಳೋನರಸಿಂಗರಾಯನು ಕ್ರಿ.ಶ. ೧೫೬೦ರಲ್ಲಿ ಹೊಳಲ್ಕೆರೆ, ಹಿರಿಯೂರುಗಳನ್ನು ನಂತರ ಕ್ರಿ.ಶ. ೧೫೬೮ರಲ್ಲಿ ಚಿತ್ರದುರ್ಗದ ನಾಯಕತನವನ್ನು ನೀಡಿದನು.[೨೫]

ತಿಮ್ಮಣ್ಣನಾಯಕನು ತನ್ನ ಮಗ ಓಬಣ್ಣನಾಯಕ, ತಮ್ಮ ಗುಲುಪಿನಾಯಕ, ಅಣ್ಣನಾದ ಓಬಣ್ಣನಾಯಕನನ್ನು ಕರೆದುಕೊಂಡು ೨೦೦೦ ಮಂದಿ ವೀರರೊಂದಿಗೆ ಸಾಳುವ ನರಸಿಂಗರಾಯರೊಡನೆ ಕಲಬುರ್ಗಿ ಕೋಟೆಯನ್ನು ಮುತ್ತಿ ಅದನ್ನು ಸಾಧಿಸಿದ್ದರಿಂದ ವಿಜಯನಗರದ ಅರಸರು ಈತನಿಗೆ 'ಹಗಲುಕಗ್ಗೊಲೆಯ ಮಾನ್ಯ' ಎಂಬ ಬಿರುದನ್ನು ಪಾಲಿಸಿದರು[೨೬] ಹಾಗೂ ಮೂರು ತಿಂಗಳುಗಳ ಕಾಲ ತಮ್ಮ ಅತಿಥಿಯನ್ನಾಗಿ ಮಾಡಿಕೊಂಡರಲ್ಲದೆ ಚಿನ್ನದ ಮುಲಾಮಿನ ಶಂಖು, ಚಕ್ರ, ಅಂದಳ ಮತ್ತು ಮೊಸಳಿ ಬಾಯಿಜೋಡು, ಫಿರಂಗಿ, ಶ್ವೇತ ಛತ್ರಿ, ಚಿನ್ನದ ಹಸ್ತ ಹಗಲ ದೀವಟಿಗೆಯನ್ನು ನೀಡಿ. ದುರ್ಗಕ್ಕೆ ಕಳುಹಿಸಿದರು. ನಂತರ ಈತ ತನ್ನ ಸೀಮೆಯಲ್ಲಿ ಗ್ರಾಮನಿರ್ಮಾಣ ದೇವಾಲಯ, ಜಲಾಶಯ, ಕೋಟೆ-

ಕೊತ್ತಳ ಮುಂತಾದವುಗಳನ್ನು ನಿರ್ಮಾಣ ಮಾಡುವುದರೊಂದಿಗೆ ಆಡಳಿತವನ್ನು ಭದ್ರಪಡಿಸಿ, ವಿಸ್ತರಿಸಲು ಪ್ರಯತ್ನಿಸಿದನು.

ಮತ್ತಿತಿಮ್ಮಣ್ಣನಾಯಕ ಬೆದ್ದಲು, ನೀರಾರಂಭ, ಕಾಡಾರಂಭಗಳ ತಾರತಮ್ಯಾನುಸಾರ ಉತ್ಪತ್ತಿಯ ಮೇಲೆ ಕಂದಾಯವನ್ನು ನಿಗದಿಗೊಳಿಸಿದನಲ್ಲದೆ ಮಾರ್ಗದ ಸುಂಕ, ಹುಲ್ಲುಬನ್ನಿ, ತಂಬಾಕು, ಗಾಂಜಾ, ಷರಾಬು, ಉಪ್ಪಿನ ಮಾಳೆ, ಆಚಾರ ಕಾಣಿಕೆಗಳನ್ನು ನಿರ್ಧರಿಸಿದನು. ರೈತರು ತಮ್ಮ ಆದಾಯದಲ್ಲಿ ಮೂರನೇ ಒಂದು ಭಾಗವನ್ನು ಅರಮನೆಗೆ ಸಲ್ಲಿಸಬೇಕಾಗಿತ್ತು. ಹೀಗಾಗಿ, ಈತನ ಕಾಲದಲ್ಲಿ ಸುವರ್ಣಾದಾಯ ೨೫೦೦೦ ದುರ್ಗಿ ವರಹಗಳಷ್ಟಿದುದ್ದು ತಿಳಿಯುತ್ತದೆ. ಅಲ್ಲದೆ ಸೀಮೆಯ ೧೩ ಗಡಿಗಳನ್ನು ಪಟ್ಟಡಿ, ಫಿರ್ಕಾಗಳೆಂದು ವಿಭಾಗಿಸುತ್ತಾನೆ. ಆ ವಿಭಾಗಗಳೀಗೆ ೭, ೮, ೧೦, ೧೨ ಗ್ರಾಮಗಳನ್ನು ಜೋಡಿಸುತ್ತಾನೆ. ಅದರ ಆಡಳಿತವನ್ನು ನೋಡಿಕೊಂಡು ಹೋಗಲು ಗೌಡ, ಶಾನುಭೋಗರನ್ನು ನೇಮಿಸುತ್ತಾನೆ. ಜೊತೆಗೆ ಪ್ರತಿ ವಿಭಾಗಗಳಿಗೆ ಶತ್ರುಗಳಿಂದ ರಕ್ಷಿಸಲು ಸೈನ್ಯವನ್ನು ಒದಗಿಸುತ್ತಾನೆ.[೨೨]

ಮತ್ತಿತಿಮ್ಮಣ್ಣನಾಯಕ ಶೂರ, ಸಾಹಸಿಯಾಗಿದ್ದಂತೆ ಸ್ವಾಭಿಮಾನಿಯೂ ಆಗಿದ್ದ. ಕೆಲವರು ಈತನ ಏಳ್ಗೆಯನ್ನು ಸಹಿಸದಾದರು. ವಿಜಯನಗರದ ಅರಸರಿಗೆ ಚಾಡಿ ಹೇಳಿದರು. ಈತನು ಸ್ವತಂತ್ರ ಪ್ರವೃತ್ತಿ ಹೊಂದಿದ್ದರಿಂದ ವಿಜಯನಗರದ ಅರಸರ ವಿರುದ್ಧ ತಿರುಗಿಬಿದ್ದ. ಪ್ರತಿಯಾಗಿ ವಿಜಯನಗರದ ಅರಸರು ಈತನನ್ನು ಸೆರೆಯಲ್ಲಿಟ್ಟರು. ಅಲ್ಲಿಯೇ ಈತ ಕ್ರಿ.ಶ. ೧೫೮೯ರಲ್ಲಿ ಮರಣ ಹೊಂದಿದ.

ಈತನ ತರುವಾಯ ಈತನ ಮಗ ಓಬಣ್ಣನಾಯಕ(ಕ್ರಿ.ಶ. ೧೫೮೯-೧೬೦೨) ಚಿತ್ರದುರ್ಗದ ಅರಸನಾದ. ಈತ ದದ್ಯಾನ್ನದ ಓಬಣ್ಣನಾಯಕ, ಠಾಣ್ಯದ ಓಬಳನಾಯಕ, ಅಣ್ಣಗಾರ ಓಬಣ್ಣ, ಗಡ್ಡದ ಮದಕರಿ ಎಂತಲೂ ಹೆಸರಾಗಿದ್ದಾನೆ. ತಿಮ್ಮಣ್ಣನ ಕಾಲದಲ್ಲಿಯ ಹರಪನಹಳ್ಳಿಯ ನಾಯಕರ ರಕ್ತಸಂಬಂಧ ಓಬಣ್ಣನ ಕಾಲದಲ್ಲಿ ಇರದೇ ಇದ್ದುದರಿಂದ ಹರಪನಹಳ್ಳಿ ಸಂಸ್ಥಾನದವರು ಚಿತ್ರದುರ್ಗದ ವೈರಿಗಳಾಗಿ ಮುನ್ನಡೆದರು. ವಿಜಯನಗರ ಅರಸರ ಅಧೀನದಿಂದ ಹೊರಬಂದ ಓಬಣ್ಣನಾಯಕನು ಸ್ವತಂತ್ರನಾಗಿ ಅಧಿಕಾರ ನಡೆಸಿದನು.[೨೩] ಕನಕಗಿರಿಯ ಅರಸ ರಂಗಪ್ಪನಾಯಕನ ಮಗಳಾದ ಕನಕವ್ವ ನಾಗತಿಯನ್ನು ಮದುವೆ ಆಗಿದ್ದರಿಂದ ಕನಕಗಿರಿ ನಾಯಕ ಅರಸರ ಮನೆತನದೊಂದಿಗೆ ಬಾಂಧವ್ಯ ಬೆಳೆಯಿತು. ಕ್ರಿ.ಶ. ೧೬೦೨ರಲ್ಲಿ ಈತ ಮರಣ ಹೊಂದಿದ.

ಈತನ ನಂತರ ಮಗ ಒಂದನೇ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ.೧೬೦೨-೧೬೫೨) ಅಧಿಕಾರಕ್ಕೆ ಬಂದನು. ಈತನ ಕಾಲವು ಸುತ್ತಮುತ್ತಲ ಪಾಳೆಯಗಾರರೊಂದಿಗೆ ಘರ್ಷಣೆಯಿಂದ ತುಂಬಿತ್ತು. ಕ್ರಿ.ಶ. ೧೬೩೪ರಲ್ಲಿ ತರೀಕೆರೆಯ ಹನುಮಪ್ಪನಾಯಕ ಚಿತ್ರದುರ್ಗದ ಕೆಲ ಪ್ರಾಂತ್ಯಗಳ ಮೇಲೆ ಧಾಳಿಮಾಡಿ ಆ ಊರುಗಳನ್ನು ವಶಪಡಿಸಿಕೊಂಡಾಗ ಕಸ್ತೂರಿ ರಂಗಪ್ಪನಾಯಕ ಆತನನ್ನು ಎದುರಿಸಿ, ಸೆರೆಹಿಡಿದನು.

ಕೆಲಕಾಲದ ನಂತರ ಮರಳಿ ಬಿಟ್ಟನು. ಹಾಗೆಯೇ ಕ್ರಿ.ಶ. ೧೬೩೬ರಲ್ಲಿ ಹರಪನಹಳ್ಳಿಯ ಇಮ್ಮಡಿ ಬಸವಂತಪ್ಪ ನಾಯಕನೊಂದಿಗೆ ಲಡಾಯಿ ನಡೆಸಿ ಸೋಲಿಸಿದನು.

ಸೀರಾದ ರಂಗಪ್ಪನಾಯಕನು ಕ್ರಿ.ಶ. ೧೬೩೮ರಲ್ಲಿ ಹಿರಿಯೂರಿಗೆ ಮುತ್ತಿಗೆ ಹಾಕಿದ. ಹಿರಿಯೂರು ಕೆಂಚಣ್ಣನಾಯಕ ಸಹಾಯಕ್ಕಾಗಿ ಕಸ್ತೂರಿರಂಗಪ್ಪನಾಯಕನನ್ನು ಕೋರಿದಾಗ, ಕಸ್ತೂರಿ ರಂಗಪ್ಪನಾಯಕ ಸೀರಾದ ರಂಗಪ್ಪನಾಯಕನ ಸೈನ್ಯವನ್ನು ಹಿಮ್ಮೆಟ್ಟಿಸಿದ. ಆಗ ಅವರ ಸೇನೆ ಮಸಗಲ್ಲು ಬಳಿ ಚಿತ್ರದುರ್ಗದ ಸೈನ್ಯಕ್ಕೆ ಶರಣಾಯಿತು. ಸೀರಾದ ರಂಗಪ್ಪನಾಯಕ ಗುಂಡುತಗುಲಿ ಮರಣವನ್ನಪ್ಪಿದ. ಕಸ್ತೂರಿ ರಂಗಪ್ಪನ ಕಾಲಕ್ಕೆ ಚಿತ್ರದುರ್ಗ ಸುಮಾರು ೨೨ ಸೀಮೆಗಳ ಸಂಸ್ಥಾನವಾಗಿ ಅದರ ವಾರ್ಷಿಕ ಆದಾಯ ೬೩ ಸಾವಿರದ ವರಹಗಳಿಗೆ ಮುಟ್ಟಿತ್ತು. ಈತ ಕ್ರಿ.ಶ. ೧೬೫೨ರಲ್ಲಿ ತೀರಿಕೊಂಡನು.

ನಂತರದಲ್ಲಿ ಈತನು ಮಗ ಇಮ್ಮಡಿ ಮದಕರಿನಾಯಕ(ಕ್ರಿ.ಶ. ೧೬೫೨-೧೬೭೪)ನು ಅಧಿಕಾರಕ್ಕೆ ಬಂದ. ಈತನ ದ್ರೋಹಿಗಳ ಗುಂಪನ್ನು ಕಡಿದುಹಾಕಿ, 'ಗಂಡುಗೊಡಲಿ ಸರ್ಜ' ಎಂಬ ಬಿರುದನ್ನು ಪಡೆದಿದ್ದ.[೨೯] ತರೀಕೆರೆಯ ಹನುಮಪ್ಪನಾಯಕ ಮತ್ತು ಪಟ್ಟಾಭಿರಾಮನಾಯಕನನ್ನು ಸೋಲಿಸಿ ನನ್ನಿವಾಳ, ಐಮಂಗಲವನ್ನು ವಶಪಡಿಸಿಕೊಂಡನು. ಅಲ್ಲದೇ, ಅವರಲ್ಲಿಯ ಯುದ್ಧ ಸಾಮಗ್ರಿಗಳನ್ನು ಕಸಿದು ಕೊಂಡನು. ಈ ಜಯದ ಪ್ರತೀಕವಾಗಿ ತನ್ನ ಕಾಲಿಗೆ ಬಿದುರಿನ ಬಳೆಯನ್ನು ಹಾಕಿಕೊಂಡನು.

ತರೀಕೆರೆಯವರ ದಂಡು ಯಳ್ಳಂಬಳಸೆ(ಕಡೂರು ತಾಲೂಕು)ವರೆಗೆ ಹಿಮ್ಮೆಡಿತು. ಕ್ರಿ.ಶ. ೧೬೬೨ರಲ್ಲಿ ಈ ನಾಯಕನು ಹಿರಿಯೂರು ಸಾಧಿಸಿದನು.[೩೦] ಈತನ ಕಾಲಕ್ಕೆ ಸಂಸ್ಥಾನಕ್ಕೆ ಒಂದು ಲಕ್ಷ ಆದಾಯದ ಸೀಮೆಗಳಿದ್ದವು. ಅವುಗಳನ್ನು ನಾಲ್ಕು ಭಾಗಗಳನ್ನಾಗಿ ಮಾಡಿ ಮುಖ್ಯಾಧಿಕಾರಿಗಳನ್ನು ನೇಮಿಸಿದನು. ಈತನಿಗೆ ಮಕ್ಕಳಿರಲಿಲ್ಲ. ಈತ ಕ್ರಿ.ಶ. ೧೬೭೪ರಲ್ಲಿ ಮರಣ ಹೊಂದಿದನು.

ತರುವಾಯ ಈತನ ಸಾಕುಮಗ ಇಮ್ಮಡಿ ಓಬಣ್ಣನಾಯಕ(ಕ್ರಿ.ಶ. ೧೭೭೪-೧೭೭೫) ಅಧಿಕಾರಕ್ಕೆ ಬಂದನು. ಈತ ಅಧಿಕಾರಕ್ಕೆ ಬಂದ ತಕ್ಷಣವೇ ದುರ್ಗದಲ್ಲಿ ಅಶಾಂತಿ ಪ್ರಾರಂಭವಾಯಿತು. ಆಗಿನ ಕಾಲದ ಪದ್ಧತಿಯಂತೆ ಹೊಸದಾಗಿ ಪಟ್ಟವಾದವರು ದಳವಾಯಿಗಳಿಗೆ, ಗುರಿಕಾರರಿಗೆ, ಸೈನ್ಯಕ್ಕೆ ಇನ್ನಿತರ ಸಿಬ್ಬಂದಿಯವರಿಗೆ ಪಟ್ಟಗಾಣಿಕೆಯನ್ನು ನೀಡುವ ಸಂಪ್ರದಾಯವಿತ್ತು. ಆದರೆ ಆಗ ಒಂದು ತಿಂಗಳ ಸಂಬಳ ಕೊಡಲಿಲ್ಲ ಎಂಬ ಕಾರಣಕ್ಕೆ ಕೋಟೆಯ ಚಿಕ್ಕಬಾಗಿಲಿನ ಬಳಿ ಇಮ್ಮಡಿ ಓಬಣ್ಣನಾಯಕನ ತಲೆ ಹೊಡೆದರು. ಆಗ ಇಮ್ಮಡಿ ಮದಕರಿನಾಯಕನ ಅಣ್ಣನಾದ ಕೊಮಾರೆಪ್ಪ ಕಣಕುಪ್ಪೆ ಕೋಟೆಗೆ ಮತ್ತು ಆತನ ಎರಡನೆಯ ಮಗ ಚಿಕ್ಕಣ್ಣನಾಯಕರು ಹರಪನಹಳ್ಳಿಗೆ ತಲೆತಪ್ಪಿಸಿಕೊಂಡು ಹೋದರು. ನಂತರ ದಳವಾಯಿ ದಾಸಣ್ಣ ಮತ್ತು ರಂಗಪ್ಪ ಅವರು ಕಣಕುಪ್ಪೆಗೆ ಓಡಿಹೋಗಿದ್ದ ಕಸ್ತೂರಿ ರಂಗಪ್ಪನಾಯಕರ ಹಿರಿಯ ಮಗ ಸರ್ಜೆರಾಯನ ಹಿರಿಯ ಪುತ್ರ, ಚಿಕ್ಕಣ್ಣನಾಯಕನನ್ನು ಕರೆತಂದು ಕ್ರಿ.ಶ. ೧೬೭೫ರಲ್ಲಿ ಚಿತ್ರದುರ್ಗಕ್ಕೆ ಪಟ್ಟ ಕಟ್ಟಿದರು.

ಚಿಕ್ಕಣ್ಣನಾಯಕ(ಕ್ರಿ.ಶ. ೧೬೭೫-೧೬೮೬)ನು ಪಟ್ಟಕ್ಕೆ ಬಂದ ತಕ್ಷಣವೇ ನಿಡುಗಲ್ಲಿನವರು ಸಾಣಿಕೆರೆಯನ್ನು, ಹರಪನಹಳ್ಳಿಯವರು ಅಣಜಿಕೋಟೆಯನ್ನು ಮುತ್ತಿದರು. ಆಗ ಒಪ್ಪಂದದ ಮೂಲಕ ಚಿಕ್ಕಣ್ಣನಾಯಕ ಮರಳಿ ಪಡೆದುಕೊಂಡನು. ಕ್ರಿ.ಶ. ೧೬೭೬ರಲ್ಲಿ ಮೊಘಲರ ಷಂಷೇರ್‌ಖಾನ್ ಹರಿಹರವನ್ನು ಮುತ್ತಿದ. ಅಲ್ಲಿಯ ಸುಬೇದಾರ ಷೇರ್‌ಖಾನ್ ಚಿಕ್ಕಣ್ಣನಾಯಕನ ಸಹಾಯವನ್ನು ಬೇಡುತ್ತಾನೆ. ಚಿಕ್ಕಣ್ಣನಾಯಕ ಹರಿಹರದ ಬಾರೇಗುಡ್ಡಕ್ಕೆ ದಾಳಿ ಮಾಡಿ ಹರಿಹರದ ಒಡೆತನವನ್ನು ಮತ್ತೆ ಸುಬೇದಾರ ಷೇರ್‌ಖಾನ್‌ನಿಗೆ ಲಭ್ಯವಾಗುವಂತೆ ಮಾಡುತ್ತಾನೆ. ಪ್ರತಿಯಾಗಿ ಅವರಿಂದ ಉಡುಗೊರೆಗಳನ್ನು ಪಡೆಯುತ್ತಾನೆ. ಮುಂದೆ, ಕ್ರಿ.ಶ. ೧೬೭೭ರಲ್ಲಿ ರಾಯದುರ್ಗಕ್ಕೆ ಮುತ್ತಿಗೆ ಹಾಕುತ್ತಾನೆ. ಅಲ್ಲಿಯ ಬುಟುಗಲ ಓಬಯ್ಯ ಊರ ಬಾಗಿಲ ಬೀಗದ ಕೈಯ್ಯನ್ನು ಚಿಕ್ಕಣ್ಣನಾಯಕನಿಗೆ ಒಪ್ಪಿಸಿ ಶರಣಾಗುತ್ತಾನೆ.[೩೧]

ಚಿಕ್ಕಣ್ಣನಾಯಕನು ಹಟ್ಟಿಮಲ್ಲಪ್ಪನಾಯಕನ ಮಗಳು ಮಲ್ಲವ್ವನಾಗತಿಯನ್ನು ಮದುವೆಯಾದನು. ಹಟ್ಟಿಯ ನಾಯಕನು ವೀರಶೈವ ಧರ್ಮ ಸ್ವೀಕರಿಸಿದ್ದರಿಂದ, ಅರಮನೆಯ ಸರ್ವರೂ ಜಂಗಮರ ಕೈಯಿಂದ ಶಿವದೀಕ್ಷೆಯನ್ನು ತೆಗೆದುಕೊಂಡು ಉಗ್ರಚನ್ನವೀರದೇವರೆಂಬ ವಿರಕ್ತ ಜಂಗಮರನ್ನು ಗುರುವಾಗಿ ಸ್ವೀಕರಿಸಿ, ಲಾಳಕೋಟೆ ಬಾಗಿಲಲ್ಲಿ ಇವರಿಗೆ ಒಂದು ಕಲ್ಲುಮಠ ಕಟ್ಟಿಸಿಕೊಟ್ಟರು. ಸ್ವಲ್ಪ ದಿನಗಳಾದ ಮೇಲೆ ಇವರಿಗೆ ವೀರಶೈವ ಧರ್ಮ ಸರಿ ಕಾಣಲಿಲ್ಲ. ಮತ್ತೆ ಮೂಲಧರ್ಮಕ್ಕೆ ಮರಳಿದರು. ಲಿಂಗವನ್ನು ತೆಗೆದರು. ಆದರೆ ಹಟ್ಟಿಮಲ್ಲವ್ವನಾಗತಿ ಮಾತ್ರ ಲಿಂಗವನ್ನು ಧರಿಸಿಕೊಂಡು ಎಲ್ಲರನ್ನು ಬಿಟ್ಟು ಬೇರೆ ಕಡೆ ವಾಸವಾಗಿದ್ದಳು.[೩೨]

ಬಿದನೂರಿನ ರಾಣಿ ಚೆನ್ನಮ್ಮಾಜಿಯ ಅಧಿಕಾರಿಯ ಮೂಲಕ ತರೀಕೆರೆಯ ದೊರೆ ಹನುಮಪ್ಪನಾಯಕ ತನ್ನ ಮಗಳನ್ನು ಚಿಕ್ಕಣ್ಣನಾಯಕನಿಗೆ ಕೊಡುವ ಸುದ್ದಿ ಕಳಿಸಿದಾಗ ಚಿಕ್ಕಣ್ಣನಾಯಕ ಒಪ್ಪಿದನು. ಆದರೆ ಮದುವೆಯ ಸಂದರ್ಭಕ್ಕೆ ವೈಪರೀತ್ಯಗಳಾಗಿ, ತರೀಕೆರೆಯವರ ಮೇಲೆ ಕೋಪಿಷ್ಠನಾಗಿ ಅವರ ಗಡಿಗ್ರಾಮಗಳಾದ ಯಗಟಿ, ಯಳ್ಳಂಬಳಸೆ, ಚೌಡ್ಲ ಹಿರಿಯೂರುಗಳನ್ನು ವಶಪಡಿಸಿಕೊಂಡ. ಆಗ ಅವರು ನಿಯೋಗಿಗಳನ್ನು ಕಳುಹಿಸಿ ಒಪ್ಪಂದಕ್ಕೆ ಬಂದರು. ಆಗ ಪೂರ್ವಕಾಲದಿಂದ ನಡೆದುಬಂದ ಸಂಪ್ರದಾಯದಂತೆ ಚಂದ್ರಾಯುಧವನ್ನು ಕಳುಹಿಸಿ ತರೀಕೆರೆಯ ಹನುಮವ್ವನಾಗತಿಯನ್ನು ಮದುವೆಯಾಗಿ ಸಂಬಂಧ ಬೆಳೆಸಿದ ನಾಯಕನು ಅವರಿಗೆ ಗಡಿಗ್ರಾಮಗಳನ್ನು ಮರಳಿ ನೀಡಿದನು. ಹಾಗೆಯೇ ಹರಪನಹಳ್ಳಿಯವರ ಧಾಳಿಯನ್ನು ಎದುರಿಸಿದ.

ಕ್ರಿ.ಶ. ೧೬೮೦ರಲ್ಲಿ ಬಿಜಾಪುರದ ರಣದುಲ್ಲಾಖಾನನು ಹರಪನಹಳ್ಳಿಯವರೂ ಸೇರಿ ದುರ್ಗದ ಗಡಿಗಳಿಗೆ ಮುತ್ತಿದಾಗ ಚಿಕ್ಕಣ್ಣನಾಯಕ ಮುತ್ತಿಗೆಯನ್ನು ಎದುರಿಸಿದ. ಕ್ರಿ.ಶ. ೧೬೮೪ರಲ್ಲಿ ದೊರೆ ಕಳುಹಿಸಿದ ದಂಡು ಬೂದಿಹಾಳನ್ನು ಮುತ್ತಿದಾಗ ಇತ್ತ ಕಡೆ ಗೋಲ್ಕೊಂಡದವರ ದಂಡು ಬರುತ್ತದೆಂಬ

ಸುದ್ದಿ ಅರಿತು ಬೂದಿಹಾಳಿಗೆ ತೆರಳಿದರು. ಗೋಲ್ಕೊಂಡದವರು ರಾಮಗಿರಿ ಮುತ್ತಿದ್ದಾಗ ದೊರೆ ಆ ಮುತ್ತಿಗೆಯನ್ನು ತಡೆದನು.[೩೩]

ಕ್ರಿ.ಶ. ೧೬೮೫ರಲ್ಲಿ ಉಜ್ಜಯನಿಯನ್ನು ಚಿತ್ರದುರ್ಗದವರು ಆಕ್ರಮಿಸಿಕೊಂಡರು. ಆದರೆ ಕೆಲವೇ ತಿಂಗಳಲ್ಲಿ ಹರಪನಹಳ್ಳಿಯವರು ಅದನ್ನು ಆಕ್ರಮಿಸಿಕೊಂಡರು. ಚಿತ್ರದುರ್ಗದ ದಳವಾಯಿಗಳಾದ ದಾಸಣ್ಣ ಮತ್ತು ಕುಂಟಪ್ಪನು ಅದನ್ನು ಬಿಡಿಸಲು ಹೋದರೂ ಸಫಲವಾಗಲಿಲ್ಲ. ಆಗ ದುರ್ಗದ ಸೈನ್ಯ ಸೋತು ಹಿಮ್ಮೆಟ್ಟಬೇಕಾಯಿತು. ಉಜ್ಜಯನಿ ಕೋಟೆಯಲ್ಲಿದ್ದ ಜರಿಮಲೆ ಬೊಮ್ಮಣ್ಣನು ಹರಪನ ಹಳ್ಳಿಯವರಿಂದ ಸೆರೆಹಿಡಿಯಲ್ಪಟ್ಟು ಬಿದನೂರಿಗೆ ವರ್ಗಾಯಿಸಲ್ಪಟ್ಟನು. ಮೂರ್ನಾಲ್ಕು ತಿಂಗಳುಗಳ ನಂತರ ಈತನನ್ನೂ ಬಿಡುಗಡೆ ಮಾಡಲಾಯಿತು.[೩೪] ಮಕ್ಕಳಿಲ್ಲದ ಚಿಕ್ಕಣ್ಣನಾಯಕ ಕ್ರಿ.ಶ. ೧೬೮೬ರಲ್ಲಿ ಕಾಲವಾದ ನಂತರ ಚಿತ್ರದುರ್ಗದ ಪಟ್ಟ ಚಿಕ್ಕಣ್ಣನಾಯಕನ ಅಣ್ಣ ಲಿಂಗಣ್ಣನಾಯಕನೆಂದು ಕರೆಯಿಸಿಕೊಂಡ ಮುಮ್ಮಡಿ ಮದಕರಿನಾಯಕ(ಕ್ರಿ.ಶ. ೧೬೮೭-೧೬೮೯)ನಿಗೆ ದಕ್ಕಿತು.

ಮುಮ್ಮಡಿ ಮದಕರಿನಾಯಕನು ದುರ್ಬಲನಾಗಿದ್ದ. ಹೀಗಾಗಿ ದಳವಾಯಿ ಪಂಚಮರ ಮುದ್ದಣ್ಣ ಅರಸರ ವಿರುದ್ಧ ತಿರುಗಿಬಿದ್ದ. ಗುರಿಕಾರರ ಸಹಾಯದೊಂದಿಗೆ ಕಸ್ತೂರಿ ರಂಗಪ್ಪನಾಯಕನ ಮನೆಯಲ್ಲಿ ಅರಸ ಮುಮ್ಮಡಿ ಮದಕರಿನಾಯಕ ಪೂಜೆಯಲ್ಲಿ ನಿರತನಾಗಿದ್ದಾಗ ಬಂಧಿಸಲಾಯಿತು. ಜೊತೆಗೆ ಅರಸನಿಗೆ ಆಪ್ತರಾದವರು ಸೆರೆಗೆ ತಳ್ಳಲ್ಪಟ್ಟರು. ನಂತರ ಮುಮ್ಮಡಿ ಮದಕರಿನಾಯಕನನ್ನು ಹುಣಸೆ ಮರದ ಗಿರಿಯಣ್ಣ ಎಂಬುವನ ಮನೆಯಲ್ಲಿ ಮೂಗು ಕೊಯ್ದು ಮನೆಯಲ್ಲಿಯೇ ಕೂಡಿಹಾಕಿದರು.

ಪಂಚಮರ ಮುದ್ದಣ್ಣನೇ ದುರ್ಗದ ಸರ್ವಾಧಿಕಾರಿಯಾದ. ಆತನ ವರ್ತನೆ ಕೆಲವರಿಗೆ ಸರಿಬೀಳಲಿಲ್ಲ. ಆದರೂ ಕೆಲವೇ ತಿಂಗಳಲ್ಲಿ ಚಿಕ್ಕಣ್ಣನಾಯಕನ ತಮ್ಮ ಚಿಕ್ಕ ಮದಕರಿನಾಯಕನ ಮಗ ದೊಣ್ಣೆ ರಂಗಪ್ಪನಾಯಕನನ್ನು ಹೆಸರಿಗೆ ದೊರೆಯನ್ನಾಗಿ ಮಾಡಿ ತಾನೇ ಅಧಿಕಾರ ಚಲಾಯಿಸಿದನು. ಆಗ ಕೆಲ ದಳವಾಯಿಗಳಲ್ಲೂ ಬಿರುಕುಂಟಾಗಿ ದಳವಾಯಿ ಮುದ್ದಣ್ಣ ಮತ್ತು ಅವನ ಸಂಗಡಿಗರ ದುರಾಡಳಿತದ ವಿರುದ್ಧ ಒಂದು ಅಲೆ ಪ್ರಾರಂಭವಾಯಿತು. ನಿಷ್ಠಾವಂತ ದಳವಾಯಿಯೆಂದೇ ಹೆಸರಾದ ದಳವಾಯಿ ಭರಮಪ್ಪನ ಮುಖಂಡತ್ವದಲ್ಲಿ ಉಳಿದ ಪ್ರಮುಖರು ಒಂದಾಗಿ ಮುದ್ದಣ್ಣ ಹಾಗೂ ಈತನ ಸಹೋದರರಾದ ಚುಕ್ಕಣ್ಣ, ಚಿಕ್ಕಣ್ಣ ಹಾಗೂ ರಾಮಣ್ಣನನ್ನು ಶಿರಚ್ಛೇದನ ಮಾಡಿದರು. ದೊಣ್ಣೆ ರಂಗಪ್ಪನಾಯಕನನ್ನು ಓಬಳ ದೇವರ ಗುಡಿಯ ಬಳಿಯ ಅರಮನೆಯಲ್ಲಿ ಸೆರೆಯಲ್ಲಿಡಲಾಯಿತು. ದಳವಾಯಿ ಭರಮಪ್ಪ ಸರ್ವಾಧಿಕಾರ ವಹಿಸಿಕೊಂಡನು.

ತರುವಾಯ ದಳವಾಯಿ ಭರಮಪ್ಪನು ಬಿಳಿಚೋಡಿನಲ್ಲಿದ್ದ ಚಿಕ್ಕಣ್ಣನಾಯಕನನ್ನು ಕರೆತಂದು ಕ್ರಿ.ಶ. ೧೬೮೯ರಲ್ಲಿ ಪಟ್ಟ ಕಟ್ಟಿದರು. ಇಲ್ಲಿಗೆ ಮತ್ತಿಸಂತತಿ ಕೊನೆಗೊಂಡು, ಬಿಳಿಚೋಡು ಸಂತತಿಯ

ಅರಸರು ಅಧಿಕಾರಕ್ಕೆ ಬಂದರು. ಈ ಚಿಕ್ಕಣ್ಣನಾಯಕ ಬಿಚ್ಚುಗತ್ತಿ ಭರಮಣ್ಣನಾಯಕನೆಂದೇ ಹೆಸರಾಗಿದ್ದಾನೆ. ಈತನ ಕಾಲದಲ್ಲಿ ಮೊಗಲರು ಬಿಜಾಪುರವನ್ನು ತಮ್ಮ ಅಧೀನ ಮಾಡಿಕೊಂಡು ಶಿರಾದವರೆಗೂ ತಮ್ಮ ಪ್ರಭಾವವನ್ನು ಬೀರಿದ್ದರು. ಬೂದಿಹಾಳು ಮತ್ತು ಬಸವಾಪಟ್ಟಣಗಳು ಅವರ ಪರಗಣಗಳಾದವು. ಚಿತ್ರದುರ್ಗ ಸೇರಿದಂತೆ ಹಲವಾರು ಸಂಸ್ಥಾನಗಳು ಮೊಗಲರಿಗೆ ಕಪ್ಪ ಕೊಡಬೇಕಾಯಿತು.[೩೫]

ಹರಪನಹಳ್ಳಿಯವರೂ, ಬಿದನೂರಿನವರೂ ಸೇರಿ ಅಣಜಿಕೋಟೆಯನ್ನು ಮುತ್ತಿದರು. ಚಿತ್ರದುರ್ಗದವರಿಗೆ ಜಯ ಸಿಗಲಿಲ್ಲ. ಅಣಜಿ ವೈರಿಗಳ ಕೈಸೇರಿತು. ಆಗ ಸುತ್ತಮುತ್ತಲಿನ ಸಂಸ್ಥಾನಿಕರ ನೆರವನ್ನು ಪಡೆದುಕೊಂಡು ದಳವಾಯಿ ಭರಮಪ್ಪ ಅಣಜಿಯನ್ನು ಗೆದ್ದುಕೊಂಡನು.

ಕ್ರಿ.ಶ. ೧೬೯೭ರಲ್ಲಿ ಮರಾಠ ಸಂತಾಜಿ ಘೋರ್ಪಡೆ ಶಿರಾದ ಮೇಲೆ ಧಾಳಿ ಮಾಡಿದನು. ಸಿರಾ ಸುಬೇದಾರ ಖಾಸಿಂಖಾನನ ಮೇಲೆ ಸೇಡು ತೀರಿಸಿಕೊಳ್ಳಲು ನಾಯಕನು ಸಂತಾಜಿಯ ಸಹಾಯಕ್ಕೆ ಸೈನ್ಯವನ್ನು ಕಳುಹಿಸಿದನು. ಖಾಸಿಂಖಾನನು ಯುದ್ಧದಲ್ಲಿ ಮರಣ ಹೊಂದಿದನು.[೩೬] ಸಂತಾಜಿ ಘೋರ್ಪಡೆ ದೊಡ್ಡೇರಿಯನ್ನು ದುರ್ಗದವರಿಗೆ ನೀಡಿ ಮರಳಿ ಹೋದನು. ಕ್ರಿ.ಶ. ೧೬೯೮ರಲ್ಲಿ ಭರಮಣ್ಣನಾಯಕ ಗುಡೇಕೋಟೆಯವರ ನಾಗಸಮುದ್ರವನ್ನು ಮುತ್ತಿಗೆ ಹಾಕಿದಾಗ ಗುಡೇಕೋಟೆಯ ಬಂಗಾರವ್ವ ನಾಗತಿಯನ್ನು ಭರಮಣ್ಣನಾಯಕನಿಗೆ ಕೊಟ್ಟು ವಿವಾಹ ಮಾಡಲಾಯಿತು.

ಕ್ರಿ.ಶ.೧೬೯೯ರಲ್ಲಿ ಇಂದೂರಾಯ ಹಾಗೂ ರಾಯದುರ್ಗದವರು ನಾಯಕನಹಟ್ಟಿ ಕೋಟೆಯನ್ನು ಮುತ್ತಿಗೆ ಹಾಕುತ್ತಾರೆ. ಆಗ ಭರಮಣ್ಣನಾಯಕನು ಹಟ್ಟಿ ಮಲ್ಲಪ್ಪನಾಯಕನೊಂದಿಗೆ ಹಾವನೂರು, ಗುಡೇಕೋಟೆ, ನಿಡುಗಲ್ಲು, ರತ್ನಗಿರಿ, ಜರಿಮಲೆ ಮತ್ತು ಸಿರಾದ ಸೈನ್ಯವನ್ನು ಕರೆದುಕೊಂಡು ನನ್ನಿವಾಳದ ಬಳಿ ಶತ್ರುಗಳನ್ನು ಎದುರಿಸುತ್ತಾರೆ. ಹಾಗೂ ಚಿತ್ರದುರ್ಗದ ಮತ್ತು ಸಿರಾದ ಫಡದುಲ್ಲಾಖಾನನ ನೇತೃತ್ವದ ಸೈನ್ಯವು ಶತ್ರುಗಳನ್ನು ಹಟ್ಟಿಯಿಂದ ಹೊಡೆದೋಡಿಸಿತಲ್ಲದೆ, ಕೊಟ್ಟೂರಿನವರೆಗೂ ಅವರನ್ನು ಓಡಿಸಿಕೊಂಡು ಹೋಗಿ ಕಾಳಗವಾಡಿ ಸೋಲಿಸಿತು.[೩೭]

ಕ್ರಿ.ಶ.೧೭೦೬ರಲ್ಲಿ ರಾಯದುರ್ಗ ಆಡಳಿತದ ಗೌರಸಮುದ್ರ ಕೋಟೆಯನ್ನು ಗೆದ್ದುದಲ್ಲದೆ ಸಿರಾದ ಸುಬೇದಾರ ಫಡದುಲ್ಲಾಖಾನನಿಗೆ ಮಲೆನಾಡು ಸೀಮೆಯ ಹೊಳೆಹೊನ್ನೂರನ್ನು ಗೆದ್ದುಕೊಟ್ಟನು. ಆಗ ಫಡದುಲ್ಲಾಖಾನ ದೊಡ್ಡೇರಿ, ಜಾಜೂರು ಸೀಮೆಗಳನ್ನು ಸಂತೋಷದಿಂದ ನೀಡಿದನು. ಕ್ರಿ.ಶ.೧೭೦೯ರಲ್ಲಿ ಹರಪನಹಳ್ಳಿಯನ್ನು ಗೆದ್ದು ಮರಳಿ ಅವರಿಗೆ ಬಿಟ್ಟುಕೊಟ್ಟನು.

ಕ್ರಿ.ಶ.೧೭೨೧ರಲ್ಲಿ ಬಿಜಾಪುರದ ದಿಲಾವರ್‌ಖಾನನ ದಂಡು ಚಿತ್ರದುರ್ಗವನ್ನು ಮುತ್ತಲು ಹಿರಿಯೂರಿಗೆ ಬಂದಾಗ ಭರಮಣ್ಣನಾಯಕ ದಂಡಿನೊಂದಿಗೆ ಕದನದಲ್ಲಿ ಭಾಗವಹಿಸಿದ ನಂತರ ನವಾಬನನ್ನು ಸೆರೆ ಹಿಡಿಯಲಾಯಿತು. ಆಗ ಭರಮಣ್ಣ ನಾಯಕನಿಗೆ ಜಯವಾಯಿತು. ಬಿಚ್ಚುಕತ್ತಿ ಭರಮಣ್ಣನಾಯಕನು

ಇಪ್ಪತ್ತೊಂದು ಕೆರೆಗಳು, ಮೂವತ್ತು ದೇವಾಲಯಗಳು, ನಾಲ್ಕು ಅರಮನೆಗಳು ಹಾಗೂ ಐದು ಬಲಿಷ್ಠ ಕೋಟೆಗಳನ್ನು ನಿರ್ಮಿಸಿದನಲ್ಲದೆ, ಉಚ್ಚಂಗಿದುರ್ಗದಿಂದ ಉತ್ಸವಾಂಬೆಯ ವಿಗ್ರಹವನ್ನು ಚಿತ್ರದುರ್ಗಕ್ಕೆ ತಂದು ಸ್ಥಾಪಿಸಿದನು. ಚಿತ್ರದುರ್ಗದ ಪಾಳೆಯಗಾರರು ಕಟ್ಟಿದ ಸಾಮ್ರಾಜ್ಯವು ಬಿಳಿಚೋಡು ವಂಶದ ಮೊದಲನೆಯ ಅರಸು ಬಿಚ್ಚುಕತ್ತಿ ಭರಮಪ್ಪನಾಯಕನ ಆಳ್ವಿಕೆಯ ಕಾಲಕ್ಕೆ ಅತ್ಯಂತ ಉನ್ನತ ಸ್ಥಿತಿಗೇರಿತು. ಈತನ ಅವಧಿಯಲ್ಲಿ 'ಸುವರ್ಣಯುಗ'ವಾಗಿತ್ತೆಂದು[೩೮] ಸಂಶೋಧಕರಾದ ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಅಭಿಪ್ರಾಯವು ಸಹ ಸಮಂಜಸವಾದುದು.

ಭರಮಣ್ಣನಾಯಕನ ತರುವಾಯ ಆತನ ಮಗ ಹಿರೇಮದಕರಿನಾಯಕ(ಕ್ರಿ.ಶ. ೧೭೨೧-೧೭೪೯)ನು ಅಧಿಕಾರಕ್ಕೆ ಬಂದನು. ಈತನ ಕುರಿತಾಗಿ ತಾರಾವಳಿಯು ವಿವರಣೆಯನ್ನು ನೀಡುತ್ತದೆ. ಈತನು ಶೂರನೂ, ಧೀರನೂ ಆಗಿದ್ದನಲ್ಲದೆ, ಈತನ ಕಾಲದಲ್ಲಿ ನಡೆದ ಘಟನೆಗಳು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದಿವೆ. ಇವನು ಪಟ್ಟಕ್ಕೆ ಬಂದ ಕೆಲವೇ ವರ್ಷಗಳಲ್ಲಿ ಮರಾಠರೊಡನೆ ಹಾಗೂ ಇತರ ಪಾಳೆಯಗಾರರೊಡನೆ ಯುದ್ಧ ಮಾಡಬೇಕಾಯಿತು.[೩೯] ಈ ಅವಧಿಯಲ್ಲಿ ಕೆಳದಿ ಸಂಸ್ಥಾನದವರು ಇತರೆ ಸಂಸ್ಥಾನದ ಅರಸರ ಸಹಾಯದಿಂದ ಚಿತ್ರದುರ್ಗ ಸಂಸ್ಥಾನವನ್ನು ಹಾಳುಗೆಡುವಲು ಪ್ರಯತ್ನಿಸಿದರು.[೪೦]

ಕ್ರಿ.ಶ. ೧೭೨೧ ರಿಂದ ೧೭೨೬ರವರೆಗೆ ಮರಾಠರು ಮತ್ತು ಮೊಗಲರ ವಿರುದ್ಧ ಯುದ್ಧದಲ್ಲಿ ನಿರತನಾದನು. ಕ್ರಿ.ಶ.೧೭೨೬ರಲ್ಲಿ ಉಚ್ಚಂಗಿದುರ್ಗವನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಉಚ್ಚಂಗಿದುರ್ಗ ವಶವಾಗಲಿಲ್ಲ. ನಂತರ ಹರ್ತಿಕೋಟೆಯವರ ಅಧೀನದಲ್ಲಿದ್ದ ಹಾಗಲವಾಡಿ ಒಪ್ಪಂದದ ಮೂಲಕ ಚಿತ್ರದುರ್ಗದವರ ಕೈಸೇರಿತು.

ಕ್ರಿ.ಶ. ೧೭೨೮ರಲ್ಲಿ ರತ್ನಗಿರಿ ಸೀಮೆಯ ವೇಣುಕಲ್ಲು, ಇಕ್ಕನೂರುಗಳು ಕ್ರಿ.ಶ. ೧೭೩೩ರಲ್ಲಿ ಗುಡೇಕೋಟೆ ಮತ್ತು ಕೆಲವು ಹಳ್ಳಿಗಳನ್ನು ಕ್ರಿ.ಶ. ೧೭೩೬ ಮತ್ತು ೧೭೩೭ರಲ್ಲಿ ಕೊಡಗನೂರು ಮತ್ತು ಹೊಳಲು ಕೋಟೆಗಳನ್ನು ಮುತ್ತಿದರು. ಸಿದ್ದೋಜಿ ಮತ್ತು ಹಾವನೂರವರುಗಳನ್ನು ಕ್ರಿ.ಶ. ೧೭೩೮ರಲ್ಲಿ, ಬಿದನೂರು ಮತ್ತು ಹರಪನಹಳ್ಳಿಯವರು ಮುತ್ತಿದ ಹೊಳಲು ಮತ್ತು ಮೈಲಾರ ಕೋಟೆಗಳನ್ನು ಚಿತ್ರದುರ್ಗದವರು ಹೋರಾಡಿ ಬಿಡಿಸಿಕೊಂಡರು.[೪೧]

ಕ್ರಿ.ಶ.೧೭೪೫ರಲ್ಲಿ ಹದಡಿ, ಕಾಡಜ್ಜಿ, ಹೋದಿಗೆರೆ ಮರವಂಜಿಗಳನ್ನು ವಶಪಡಿಸಿಕೊಂಡರು. ಕ್ರಿ.ಶ.೧೭೪೧ರಲ್ಲಿ ಕೆಳದಿ ಬಸಪ್ಪನಾಯಕನ ಸೂಚನೆಯಂತೆ ಹರಪನಹಳ್ಳಿ, ಆನೆಗೊಂದಿ, ಸವಣೂರು ಮತ್ತು ರಾಯದುರ್ಗ ಪಾಳೆಯಗಾರರು, ರಾಮಗಿರಿ ಕೋಟೆಯನ್ನಿಡಿದರು. ಹಿರೇಮದಕರಿ ನಾಯಕನು ಅವರೊಡನೆ ಶೌರ್ಯದಿಂದ ಹೋರಾಡಿ ಆ ಕೋಟೆಯನ್ನು ಪುನರಾಕ್ರಮಿಸಿದನು.[೪೨] ಮರಾಠರು,

ಸೀರಾದವರು ಮತ್ತು ಸುತ್ತಮುತ್ತಲ ಸಂಸ್ಥಾನದವರು ಮೇಲಿಂದ ಮೇಲೆ ಚಿತ್ರದುರ್ಗದ ಗಡಿಕೋಟೆಗಳ ಮೇಲೆ ಆಕ್ರಮಣ ಮಾಡುವುದು, ಚಿತ್ರದುರ್ಗದವರು ಅವರನ್ನು ಹಿಮ್ಮೆಟ್ಟಿಸುವುದು, ಹೀಗೆ ಒಂದರ ಮೇಲೆ ಒಂದು ಘಟನೆಗಳು ಜರುಗಿದವು.

ಕ್ರಿ.ಶ. ೧೭೪೪ರಲ್ಲಿ ರಾಮಗಿರಿದುರ್ಗಕ್ಕೆ ಮಲೆನಾಡಿನವರು ಮುತ್ತಿಗೆ ಹಾಕಿದರು. ಹರಪನಹಳ್ಳಿಯ ಸೋಮಶೇಖರ ನಾಯಕ, ಆನೆಗೊಂದಿ, ರಾಯದುರ್ಗ, ಸವಣೂರು, ಇತರ ಸಣ್ಣ ಪಾಳೆಯಗಾರರೂ ಎದುರಾದರು. ಅವರನ್ನು ಎದುರಿಸಲು ಹಿರೇಮದಕರಿನಾಯಕ ದಂಡಿನೊಡನೆ ಬಂದನು. ಆನೆಯ ಮೇಲೆ ಕುಳಿತು ಖಡ್ಗ ಬೀಸಿ ಯುದ್ಧ ಮಾಡಿದನು. ಆಗ ಎದುರಾಳಿಯ ಬಾಣದಿಂದ ತೀವ್ರ ಗಾಯವಾಯಿತು. ದೊರೆ ಹೆದರದೆ ಫಿರಂಗಿಯಿಂದ ಧಾಳಿ ಮಾಡಿದನು. ರಾಮಗಿರಿ ಕೋಟೆಯನ್ನು ಬಿಟ್ಟು ಶತ್ರುಗಳು ಓಡಿದರು. ನಂತರ ದೊರೆ ರಾಮಗಿರಿಯನ್ನು ವಶಪಡಿಸಿಕೊಂಡನು. ಅಲ್ಲಿಯ ಕಬ್ಬಿಣದ ಫಿರಂಗಿಗಳನ್ನು ತಂದು ಸಿದ್ಧೇಶ್ವರ ಸ್ವಾಮಿಗೆ ಒಪ್ಪಿಸಿದನಂತೆ.

ಕ್ರಿ.ಶ.೧೭೪೪ ರಿಂದ ೧೭೪೮ರವರೆಗೆ ಚಿತ್ರದುರ್ಗದ ಸೇನೆಯು ರಾಯದುರ್ಗದ ಸೀಮೆಯ ಗ್ರಾಮಗಳನ್ನು ವಶಪಡಿಸಿಕೊಂಡು ಆ ಗ್ರಾಮಗಳಿಗೆ ಪ್ರತಿನಾಮಗಳನ್ನು ನೀಡಿದರು. ನಂತರದಲ್ಲಿ ಕ್ರಿ.ಶ. ೧೭೪೮ರಲ್ಲಿ ಹದಡಿಕೋಟೆ, ಹೊನ್ನೂರು ಹೊಳಲು ಮತ್ತು ಮೈಲಾರಗಳನ್ನು, ಬಿದನೂರು, ಸವಣೂರು, ಹರಪನಹಳ್ಳಿಯವರೂ ಸೇರಿ ಚಿತ್ರದುರ್ಗದವರಿಂದ ವಶಪಡಿಸಿಕೊಂಡರು. ಚಿತ್ರದುರ್ಗ ಮತ್ತು ನೆರೆಯ ಸಂಸ್ಥಾನಗಳ ನಡುವೆ ವಿರಸ ಹೆಚ್ಚಿ ಕ್ರಿ.ಶ.೧೭೪೮-೪೯ರ ಮಾಯಕೊಂಡದ ಕಾಳಗ ನಡೆಯಿತು. ಇದರ ಕುರಿತಾಗಿ ಜನಪದ ಸಾಹಿತ್ಯ ಪೂರ್ಣ ವಿವರ ನೀಡುತ್ತದೆ.

ಹಿರೇಮದಕರಿನಾಯಕ ಬಿದನೂರು, ಹರಪನಹಳ್ಳಿ, ರಾಯದುರ್ಗ, ಆನೆಗೊಂದಿ, ಮತ್ತು ಸವಣೂರು ಸಂಸ್ಥಾನಿಕರ ವಿರುದ್ಧ ಭೀಕರ ಹೋರಾಟ ನಡೆಸಲು ನಿರ್ಧರಿಸಿದ. ಗುತ್ತಿಯ ಸಿದ್ಧೋಜಿಯ ನೆರವು ಪಡೆಯಲು ೨೦,೦೦೦ ದಂಡಿನೊಂದಿಗೆ ಅಣಜಿಗೆ ತೆರಳಿದನು. ಆದರೆ ಸಿದ್ಧೋಜಿಗೆ ಶತ್ರು ಪಕ್ಷದವರು ಹಣದ ಆಸೆ ತೋರಿಸಿದರು. ಯುದ್ಧದಲ್ಲಿ ಸೈನಿಕರು ಹೋರಾಡಲಿಲ್ಲ. ಆದರೆ ಚಂದಾಸಾಹೇಬ ಮತ್ತು ಹಿರೇಮದಕರಿನಾಯಕನಿಗೆ ಯುದ್ಧದಲ್ಲಿ ಆತನ ಮಗ ಆಬಿದ್‌ಅಲಿ(ಆಬಿದ್‌ಸಾಹೇಬ್)ಯು ನೆರವಾದನು. ಕಾಳಗ ಭೀಕರ ಸ್ವರೂಪ ಪಡೆದುಕೊಂಡಿತ್ತು. ಹರಪನಹಳ್ಳಿಯ ಸೋಮಶೇಖರನಾಯಕ ಮತ್ತು ಹಿರೇಮದಕರಿ ನಾಯಕರು ಪರಸ್ಪರ ಆನೆಯ ಮೇಲೆ ಕುಳಿತು ಯುದ್ಧ ಮಾಡುವಾಗ ಸೋಮಶೇಖರ ನಾಯಕನು ಹಯೋಮುಖವೆಂಬ ಹೊಸ ಭರ್ಚಿಯಿಂದ ಹಿರೇಮದಕರಿ ನಾಯಕನನ್ನು ತಿವಿದನು. ಅವನು ಅದನ್ನು ಹಿಡಿದು ತನ್ನೆಡೆಗೆ ಸೆಳೆದುಕೊಂಡನು. ಆಗ ಇಬ್ಬರಿಗೆ ಗಾಯಗಳಾದವು. ಆದರೆ ಮದಕರಿ ನಾಯಕನಿಗೆ ಬಹಳ ಪೆಟ್ಟುಗಳಾದವು. ಆತ ಮರಣ ಹೊಂದಿದನು. ಇಲ್ಲಿಗೆ ಮಾಯಕೊಂಡದ ಕಾಳಗ ಮುಗಿಯಲಿಲ್ಲ.

ಹಿರೇಮದಕರಿನಾಯಕನ ಮೃತದೇಹವನ್ನು ಮಾಯಕೊಂಡದಲ್ಲಿಯೇ ಅಂತ್ಯಕ್ರಿಯೆ ಮಾಡಿ ಸಮಾಧಿಯನ್ನು ಕಟ್ಟಿಸಲಾಯಿತು. ನಂತರ ಅಸ್ಥಿಶೇಷಗಳನ್ನು ಚಿತ್ರದುರ್ಗಕ್ಕೆ ತಂದು ಭರಮಣ್ಣನಾಯಕನ ಸಮಾಧಿಯ ಹತ್ತಿರ ಒಂದು ಚಿಕ್ಕ ಮಂಟಪವನ್ನು ಕಟ್ಟಿಸಲಾಯಿತು.

ಚಿಕ್ಕಮದಕರಿ ನಾಯಕನ ಕಾಲದಲ್ಲಿ ಆದಾಯ ಮೂರುಲಕ್ಷ ವರಹ ದಾಟಿತ್ತು. ಈತ ೬೦ ಸೀಮೆಗಳ ಮೇಲೆ ಅಧಿಪತ್ಯ ಸ್ಥಾಪಿಸಿದ್ದನಲ್ಲದೆ ೬೪ ಗಡಿಗಳಿಗೆ ಗಡಿವಾಳ ನಾಯಕರನ್ನು ನೇಮಿಸಿ, ಆ ನಾಯಕರಿಗೆ ಒಂದೊಂದು ಗಡಿಗೆ ೭೫೦ ಜನರು ಇರುತ್ತಿದ್ದರು. ಅವರಿಗೆ ಮದ್ದು ಗುಂಡುಗಳನ್ನು ನೀಡಲಾಗುತ್ತಿತ್ತು. ಏಳು ಜನ ದಳವಾಯಿಗಳು ಆ ಗಡಿಗಳ ಕಾರುಬಾರು ಮಾಡುತ್ತಿದ್ದರು. ಹಿರೇಮದಕರಿನಾಯಕನ ಶೌರ್ಯ ಸಾಹಸಗಳನ್ನು ಮೆಚ್ಚಿ ಮೈಸೂರಿನ ದೊರೆಗಳಾದ ದೊಡ್ಡ ಕೃಷ್ಣದೇವರಾಜ ಒಡೆಯರು, ಚಾಮರಾಜ ಒಡೆಯರು, ಚಿಕ್ಕಕೃಷ್ಣರಾಜ ಒಡೆಯರು ಕೆಲವು ಮುತ್ತಿಗೆ ಸಂದರ್ಭಗಳಲ್ಲಿ ಹಿರೇಮದಕರಿನಾಯಕನನ್ನು ಅಭಿನಂದಿಸಿ ಬರೆದ ಪತ್ರಗಳೂ ಇವೆ.

ಈತನ ತರುವಾಯ ಈತನ ಮಗ ಇಮ್ಮಡಿ ಕಸ್ತೂರಿ ರಂಗಪ್ಪನಾಯಕ(ಕ್ರಿ.ಶ. ೧೭೪೯-೧೭೫೪)ನು ಅಧಿಕಾರಕ್ಕೆ ಬಂದನು. ತನ್ನ ತಂದೆಯ ಮರಣಕ್ಕೆ ಕಾರಣವಾದ ಮಾಯಕೊಂಡದ ಶತ್ರುಗಳ ಮೇಲೆ ಆಕ್ರಮಣ ಮಾಡುವಂತೆ ಗುತ್ತಿಯ ಮರಾಠ ದೊರೆ ಮುರಾರಿರಾಯನಿಗೆ, ಆದವಾನಿಯ ಸುಬೇದಾರ ಹಿದಾಯತ್ ಮೋತಿಖಾನ್‌ನಿಗೆ ಒಂದು ಲಕ್ಷ ವರಹ ನೀಡಿದನು. ಕ್ರಿ.ಶ. ೧೭೪೯ರಲ್ಲಿ ಇವರು ಬಿದನೂರು, ಹರಪನಹಳ್ಳಿ, ಉಳಿದ ದಂಡುಗಳು ಮಾಯಕೊಂಡವನ್ನು ಬಿಟ್ಟುಹೋದವು. ಮುಂದೆ ಸಂತೆಬೆನ್ನೂರನ್ನು ಮುತ್ತಿದವು. ಆಗ ಮುರಾರಿರಾಯ ಮತ್ತು ಮೋತಿಖಾನ್ ಶತ್ರುಗಳ ಲಂಚಕ್ಕೆ ಬಲಿಯಾದರು. ಆಗ ದುರ್ಗದ ಅರಸ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನು ಸಂಕಷ್ಟಕ್ಕೆ ಈಡಾಗಿ ದಾರಿಕಾಣದೆ ಚಿತ್ರದುರ್ಗಕ್ಕೆ ಮರಳಿದ.

ನಂತರದಲ್ಲಿ ಆನೆಗೊಂದಿಯವರು ವಡ್ಡಿಗೆ ಲಗ್ಗೆ ಹಾಕಿದರು. ಕೋಟೆ ವಶವಾಗಲಿಲ್ಲ. ಆಗ ಎರಡನೇ ಕಸ್ತೂರಿ ರಂಗಪ್ಪನಾಯಕ ಕಂಪಲಿಗೆ ಸೇರಿದ ಏಳು ಗ್ರಾಮಗಳನ್ನು ವಶಪಡಿಸಿಕೊಂಡನು. ಅದೇ ವರ್ಷವೇ ರಾಯದುರ್ಗ ಸೀಮೆಯ ಕರೆಕಲ್ಲು, ತಿಮ್ಮಲಾಪುರ ಚಿತ್ರದುರ್ಗದ ಅಧೀನವಾದವು.

ಕ್ರಿ.ಶ. ೧೭೫೦ರಲ್ಲಿ ಸೀರ್ಯದ ಸುಬೇದಾರ ತನ್ನ ಮೂರು ಗ್ರಾಮಗಳನ್ನು ಕಾಣಿಕೆಯಾಗಿ ಕೊಟ್ಟ. ಹುಳಿಯಾರು, ಎಣ್ಣೆಗೆರೆ, ಹೆಗ್ಗೆರೆ ಎಳನಾಡು ಚಿತ್ರದುರ್ಗಕ್ಕೆ ಸೇರಿದ್ದವಲ್ಲದೆ, ಬೂದಿಹಾಳು ಸೀಮೆಯ ಮೇಲೆ ಕಾರ್ಯಾಚರಣೆ ಮಾಡಲಾಯಿತು. ಕ್ರಿ.ಶ. ೧೭೫೧ರ ಒಪ್ಪಂದದಂತೆ ಇವರ ವಶವಾಯಿತು. ಆಗ ಸೀರ್ಯದ ಸುಬೇದಾರನಿಂದ ತೇಕಲವಟ್ಟಿ ಗ್ರಾಮ ಕ್ರಯಕ್ಕೆ ಪಡೆದುಕೊಳ್ಳಲಾಯಿತು. ಹೊನ್ನೂರು ಹದಡಿಗಳ ಮೇಲೆ ಧಾಳಿ ನಡೆಸಿ ವಶಪಡಿಸಿಕೊಳ್ಳಲಾಯಿತು.

ಮರಾಠರ ನಾನಾಜಿರಾಯನ ದಂಡು ಚಿತ್ರದುರ್ಗಕ್ಕೆ ಬಂದು ಕ್ರಿ.ಶ. ೧೭೫೨ರಲ್ಲಿ ವಡ್ಡಿನಹಳ್ಳಿಗೆ ಬಂದಾಗ, ಹಣ ನೀಡಿ ಸಂಧಾನ ಮಾಡಿಕೊಂಡರೂ, ಮತ್ತೆ ನಾನಾಜಿರಾಯನು ಹಣದ ಆಸೆಗೆ ಕ್ರಿ.ಶ. ೧೭೫೩ರಲ್ಲಿ ಅಣಜಿ ಕೋಟೆಗೆ ಮುತ್ತಿಗೆ ಹಾಕಿದ. ಪುನಃ ಹಣ ನೀಡಿ ಕೋಟೆಯನ್ನು ಮರಳಿ ಪಡೆಯಲಾಯಿತು.

ಎರಡನೆಯ ಕಸ್ತೂರಿ ರಂಗಪ್ಪನಾಯಕನು ಕ್ರಿ.ಶ. ೧೭೫೪ರಲ್ಲಿ ಮಸಕಲ್ಲು ಎಂಬ ಗ್ರಾಮವನ್ನು ಮುರಾರಿರಾವ್ ಘೋರ್ಪಡೆಗೆ ಕಾಣಿಕೆಯಾಗಿ ನೀಡಿದನು. ಅನಾರೋಗ್ಯಪೀಡಿತನಾದ ಈತ ಪುತ್ರ ಸಂತಾನವಿಲ್ಲದೆ ಕ್ರಿ.ಶ.೧೭೫೪ರಲ್ಲಿ ತೀರಿಕೊಂಡನು. ಈತನ ತಾಯಿ ಗಂಡಿಲ ಓಬವ್ವನಾಗತಿ ತನ್ನ ಮಗ ತೀರಿಕೊಂಡ ಮೇಲೆ ಹೊಸ ಅರಸನನ್ನು ಪಟ್ಟಕ್ಕೆ ಕೂಡಿಸುವವರೆಗೆ ಚಿತ್ರದುರ್ಗದ ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡಳು. ಎರಡು ವರ್ಷಗಳ ಕಾಲ ಆಳ್ವಿಕೆ ಮಾಡಿದಳು. ಆ ಅವಧಿಯಲ್ಲಿ ಮುದಿಭರಮಪ್ಪ ಮತ್ತು ಗುರುಸಿದ್ದಪ್ಪರೆಂಬವರ ತಲೆಹೊಡೆಸಿದ್ದಳಲ್ಲದೆ ತನ್ನ ಸಹೋದರರಾದ ನರಸಪ್ಪನಾಯಕ ಮತ್ತು ನೀಲಪ್ಪನಾಯಕರು ಚಿತ್ರದುರ್ಗದ ಅರಸೊತ್ತಿಗೆಯನ್ನು ಪಡೆಯಬೇಕೆಂಬ ಉದ್ದೇಶವಿಟ್ಟುಕೊಂಡ ಈಕೆ ತನ್ನ ಮಗ ಕಸ್ತೂರಿ ರಂಗಪ್ಪನಾಯಕ ಮತ್ತು ದಂಡಿನ ಜಂಪಣ್ಣನಾಯಕನೆಂಬ ಮೈದುನನನ್ನು ವಿಷ ನೀಡಿ ಕೊಲ್ಲಬೇಕೆಂಬ ಆಲೋಚನೆ ಮಾಡಿ ಆ ಕೆಲಸಕ್ಕಾಗಿ ದಳವಾಯಿ ನರಸಪ್ಪನನ್ನು ಬಳಸಿಕೊಳ್ಳಲು ಪ್ರಯತ್ನಿಸಿದಳು. ಆತ ಒಪ್ಪಿಕೊಳ್ಳದ್ದಕ್ಕಾಗಿ ಆತನನ್ನು ಕೊಂದು ಹಾಕಲಾಯಿತು.

ದಂಡಿನ ಜಂಪಣ್ಣನಾಯಕನು ತನ್ನ ಅಣ್ಣನಾದ ಹಿರೇಮದಕರಿನಾಯಕನನ್ನು ಎಲ್ಲ ಸಂದರ್ಭಗಳಲ್ಲೂ ಅನುಸರಿಸಿಕೊಂಡು ನಡೆದಿದ್ದನು. ಈತನಿಗೆ ದೊಡ್ಡೇರಿ ಗ್ರಾಮವನ್ನು, ಈತನ ಸಹೋದರ ಲಿಂಗಣ್ಣನಾಯಕನಿಗೆ ಐಮಂಗಲವನ್ನು ಜಹಗೀರಾಗಿ ನೀಡಲಾಗಿತ್ತು. ವೀರನಾದ ಲಿಂಗಣ್ಣನಾಯಕನು ತನ್ನ ಅಣ್ಣ ಹಿರೇಮದಕರಿನಾಯಕನ ಆಜ್ಞೆಯಂತೆ ಆತ್ಮಹತ್ಯೆ ಮಾಡಿಕೊಂಡನೆಂದು ತಿಳಿದುಬರುವುದು. ಜಂಪಣ್ಣನಾಯಕನೆ ಹಿರೇಮದಕರಿನಾಯಕನಿಗೆ ಅತ್ಯಂತ ಸಮೀಪವರ್ತಿಯಾಗಿದ್ದನು. ಹಿರೇಮದಕರಿ ನಾಯಕನು ಮಾಯಕೊಂಡ ಕಾಳಗದಲ್ಲಿ ಕೊಲ್ಲಲ್ಪಟ್ಟ ನಂತರ ಜಂಪಣ್ಣನು ಕಸ್ತೂರಿ ರಂಗಪ್ಪನಾಯಕನಿಗೆ ಆಪ್ತನೂ ಪೋಷಕನೂ ಆಗಿದ್ದಿರಬಹುದು. ಈ ಹಿನ್ನೆಲೆಯಲ್ಲಿ ಗಂಡಿಲ ಓಬವ್ವನಾಗತಿ ಮತ್ತು ಆಕೆಯ ಸಹೋದರರು ಪಿತೂರಿಯ ಮಾರ್ಗವನ್ನು ಅನುಸರಿಸಿರಬಹುದೆಂಬ[೪೩] ಅಭಿಪ್ರಾಯವನ್ನು ಪ್ರೊ. ಲಕ್ಷ್ಮಣ್ ತೆಲಗಾವಿ ಅವರು ವ್ಯಕ್ತಪಡಿಸುತ್ತಾರೆ. ಅಲ್ಲದೆ ಈ ಎಲ್ಲಾ ಅಂಶಗಳು ಪರಿಶೀಲನಾರ್ಹವಾದವುಗಳೆಂದು ಅವರು ಹೇಳುತ್ತಾರೆ.

ಹಲವು ಹಸ್ತಪ್ರತಿಗಳಲ್ಲಿ ಮಕ್ಕಳಿಲ್ಲದ್ದಕ್ಕೆ ಕಸ್ತೂರಿ ರಂಗಪ್ಪನಾಯಕನು ದೊಡ್ಡ ಮದಕರಿನಾಯಕನನ್ನು ದತ್ತು ಮಗನಾಗಿ ಮಾಡಿಕೊಂಡಿದ್ದನೆಂದು ಹಾಗೂ ಆಡಳಿತದ ಪ್ರಮುಖರೆಲ್ಲ ಹಿರೇಮದಕರಿನಾಯಕನ ದೊರೆಯ ತಮ್ಮನಾದ ಹೊಸದುರ್ಗ ಗಡಿಠಾಣ್ಯವನ್ನು ನೋಡಿಕೊಳ್ಳುತ್ತಿದ್ದ. ಈತನ ಮಗನಾದ

ಕುಮಾರ ಭರಮಪ್ಪನಾಯಕನನ್ನು ಪಟ್ಟಕ್ಕೆ ತರಬೇಕೆಂದು ಯೋಚಿಸಿದ್ದರೆಂದು ಕೆಲವು ಹಸ್ತಪ್ರತಿಗಳು ಹೇಳುತ್ತವೆ. ಆಗ ಓಬವ್ವನಾಗತಿ ದೊಡ್ಡಮದಕರಿನಾಯಕ ಉತ್ತರಾಧಿಕಾರಿಯಾಗುವುದು ಆಕೆಗೆ ಇಷ್ಟವಿಲ್ಲದ ಕಾರಣ ತಂತ್ರವೊಂದನ್ನು ಹೂಡಿದಳು. ತನ್ನ ಗಂಡ ಹಿರೇಮದಕರಿನಾಯಕ ಕನಸಿನಲ್ಲಿ ತಾನು ಜಾನಕಲ್ಲಿನ ತೊದಲು ಭರಮಪ್ಪನ ಹೊಟ್ಟೆಯಲ್ಲಿ ಮದಕರಿನಾಯಕನಾಗಿ ಹುಟ್ಟಿದ್ದೇನೆಂದು ತನಗೆ ಪಟ್ಟ ಕಟ್ಟಬೇಕೆಂದು ಹೇಳಿದ್ದಾನೆಂದು ಎಲ್ಲಾ ಹಿರಿಯರನ್ನು ನಂಬಿಸಿ, ಹನ್ನೆರಡು ವರ್ಷದ ಚಿಕ್ಕ ಮದಕರಿನಾಯಕನನ್ನೂ ಜಾನಕಲ್ಲಿನಿಂದ ಕರೆಸಿ ಪಟ್ಟಗಟ್ಟಿ ರಾಜಮುದ್ರೆ ನೀಡಿದಳು. ದೊಡ್ಡ ಮದಕರಿನಾಯಕನಿಗೆ ಕತ್ತಿಯನ್ನು ನೀಡಿ, 'ಕಾಳಗದ ಅಯ್ಯ' ಎಂದು ಹೇಳಿ ಸಮಾಧಾನ ಮಾಡಿ ತಾನು ದುರ್ಗದ ಅಧಿಕಾರ ವಹಿಸಿಕೊಂಡಳು. ನಂತರದಲ್ಲಿ ಚಿಕ್ಕಮದಕರಿನಾಯಕ ಚಿತ್ರದುರ್ಗದ ಅರಸನಾಗಿ, ದೊಡ್ಡ ಮದಕರಿನಾಯಕ ಆತನ ರಕ್ಷಕನಾದ. ಕ್ರಿ.ಶ. ೧೭೫೭ರಲ್ಲಿ ಓಬವ್ವನಾಗತಿ ಮರಣ ಹೊಂದಿದಳು. ಮುಂದೆಯೂ ಚಿಕ್ಕಮದಕರಿನಾಯಕ ಮತ್ತು ದೊಡ್ಡಮದಕರಿನಾಯಕ ಉತ್ತಮ ರೀತಿಯಲ್ಲಿಯೆ ನಡೆದುಕೊಂಡರು.

ಚಿಕ್ಕಮದಕರಿ ನಾಯಕ(ಕ್ರಿ.ಶ.೧೭೫೪-೧೭೭೯)ನಿಗೆ ಕಡೆಯ ಮದಕರಿನಾಯಕ, ರಾಜಾವೀರ ಮದಕರಿ ನಾಯಕನೆಂತಲೂ ಕರೆಯುತ್ತಿದ್ದರು. ಈತ ಇನ್ನೂ ಸಣ್ಣವನಿದ್ದ ಕಾರಣ ಹರಪನಹಳ್ಳಿಯವರ ನೆರವು ಪಡೆದು ರಾಯದುರ್ಗದವರು ಚಿತ್ರದುರ್ಗದ ಗಡಿಗಳೆಡೆ ಬರಹತ್ತಿದರು. ಆಗ ಚಿತ್ರದುರ್ಗದವರು ಅವರನ್ನು ಓಡಿಸಿ ರಾಯದುರ್ಗದ ಸೀಮೆಯ ಗಡಿಠಾಣ್ಯಗಳನ್ನು ಹಾಗೂ ರಾಯದುರ್ಗದ ಪೇಟೆಯನ್ನು ವಶಪಡಿಸಿಕೊಂಡರು.

ಚಿತ್ರದುರ್ಗದ ತೂಯಲಹಳ್ಳಿಯನ್ನು ಕ್ರಿ.ಶ. ೧೭೬೦ರಲ್ಲಿ ಹರಪನಹಳ್ಳಿ ಸೋಮಶೇಖರನಾಯಕ ಕೆಲವರ ಕುಮ್ಮಕ್ಕಿನಿಂದ ಮುತ್ತಿಗೆ ಹಾಕಲು ಪ್ರಯತ್ನಿಸುತ್ತಾನೆ. ಆಗ ಮದಕರಿನಾಯಕ ಕಣಕುಪ್ಪೆಗೆ ತೆರಳಿ ಶತ್ರುಸೈನ್ಯವನ್ನು ಎದುರಿಸಿದ. ಮೊದಮೊದಲಿಗೆ ದುರ್ಗದವರು ಜಯದ ಕಡೆ ತಿರುಗಿದರೂ ಕೊನೆ ಘಳಿಗೆ ಯಲ್ಲಿ ಹಿಂದಿರುಗಬೇಕಾಯಿತು. ನಂತರ ಮದಕರಿನಾಯಕ ಜರಿಮಲೆ ಮತ್ತು ತರೀಕೆರೆಯವರ ಹಾವಳಿಯನ್ನು ಅಡಗಿಸುವಲ್ಲಿ ಯಶಸ್ವಿಯಾಗುತ್ತಾನೆ.

ಕ್ರಿ.ಶ. ೧೭೬೨ರಲ್ಲಿ ಹೈದರಾಲಿಖಾನನು ದಂಡಿನೊಂದಿಗೆ ಚಿತ್ರದುರ್ಗದೆಡೆಗೆ ಧಾಳಿಮಾಡಲು ಪ್ರಾರಂಭಿಸಿ, ಬಾಗೂರು ಹೊಸದುರ್ಗಕ್ಕೆ ಆಗಮಿಸಿದಾಗ ಆತನಿಗೆ ಲಕ್ಷಾಂತರ ವರಹ ನೀಡಿ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಮುಂದೆ ಮದಕರಿನಾಯಕನು ಹೈದರಾಲಿಗೆ ಇಕ್ಕೇರಿ ಸಂಸ್ಥಾನ ವಶಪಡಿಸಿ ಕೊಳ್ಳುವಲ್ಲಿ ಸಹಾಯ ಮಾಡಿದ. ಮರಾಠ ಪೇಶ್ವೆ ಮಾಧವರಾವ್, ಶ್ರೀರಂಗಪಟ್ಟಣವನ್ನು ಮುತ್ತಲೆತ್ನಿಸಿದರು. ಮದಕರಿನಾಯಕ ಹೈದರಾಲಿಖಾನ್‌ನ ಜೊತೆಗೆ ಇದ್ದುದನ್ನು ತಿಳಿದು ಮರಾಠರು ಅಲ್ಲಿಂದ ಕಾಲ್ತೆಗೆದರು. ನಂತರ ಗುತ್ತಿ, ನಿಜಗಲ್ಲು ಕೋಟೆಗಳು ಹೈದರನ ವಶವಾಗುವಂತೆ ಮಾಡುವಲ್ಲಿ ಮದಕರಿನಾಯಕನ ಪಾತ್ರ ಪ್ರಮುಖವಾಗಿತ್ತು. ಚಿತ್ರದುರ್ಗದ ಬೇಡರ ಪಡೆ ಹಾಗೂ ದೊರೆಗಳ ಸಾಹಸ ಧೈರ್ಯವನ್ನು

ಹೈದರಾಲಿ ಜಾಣತನದಿಂದ ಗ್ರಹಿಸಿದನು. ಹೈದ್ರಾಬಾದ್‌ನಿಂದ ಸಂಪತ್ತನ್ನು ಲೂಟಿ ಮಾಡಿ ಕೊಂಡುಬರುವಲ್ಲಿ ೩೦೦ ಬೇಡ ತರುಣರು ಈತನಿಗೆ ಸಹಾಯಕಾರಿ ಆಗಿದ್ದರು.[೪೪]

ಆಗ ಮರಾಠರು ಮದಕರಿನಾಯಕನ ಬಲವನ್ನು ತಿಳಿದು ಸ್ನೇಹ ಬೆಳೆಸಲು ಪ್ರಯತ್ನಿಸಿದರು. ಮರಾಠರ ಮಾಧವರಾಯ ಹೈದರನ ಬೆದರಿಕೆ ತಪ್ಪಿಸಲು ಮದಕರಿನಾಯಕನ ನೆರವು ಅವಶ್ಯವೆಂದು ಅರಿತು ಸಹಾಯ ಕೋರಿದ. ಆಗ ಮದಕರಿಯ ಸಹಾಯದಿಂದ ಹೈದರಾಲಿಯ ವಶದಲ್ಲಿದ್ದ ಸಾವನದುರ್ಗ, ಹುತ್ತರಿದುರ್ಗ, ನುಗ್ಗೆಹಳ್ಳಿ, ಹಾಗಲವಾಡಿ, ಬಾಣಾವರ ಕೋಟೆಗಳನ್ನು ಹಾಗೂ ಕ್ರಿ.ಶ. ೧೭೬೯ರಲ್ಲಿ ತುರುವೇಕೆರೆ, ಬೆಳ್ಳೂರು, ಕೋಲಾರ, ಮುಳಬಾಗಿಲು, ದೇವರಾಯನದುರ್ಗ, ಮಂಜರಾಬಾದ್, ದಾರಿನಾಯಕನಪಾಳ್ಯ ಚಿಕ್ಕಬಳ್ಳಾಪುರಗಳನ್ನು. ನಿಜಗಲ್ಲುಕೋಟೆ, ಆನವಟ್ಟಿಯ ಕೋಟೆ ಇವೆಲ್ಲವೂ ಮರಾಠರಿಗೆ ಸೇರುವಲ್ಲಿ ಚಿತ್ರದುರ್ಗದವರ ಪಾತ್ರ ಪ್ರಮುಖವಾಗಿತ್ತು. ಆಗ ಮುಖಭಂಗವಾಗಿ ಹೈದರ್ ಶ್ರೀರಂಗಪಟ್ಟಣಕ್ಕೆ ತೆರಳಿದ.

ಈ ಎಲ್ಲಾ ಘಟನೆಗಳು ಹೈದರನ ಮೇಲೆ ಪರಿಣಾಮ ಬೀರಿ, ಮದಕರಿನಾಯಕನ ವಿರುದ್ಧ ದ್ವೇಷ ಉಂಟುಮಾಡಿದವು. ನಾಯಕನ ಶ್ರೇಯಸ್ಸು ಹೈದರಾಲಿಖಾನ್‌ನಲ್ಲಿ ಆತಂಕವನ್ನು ಮೂಡಿಸಿತು. ಅವನನ್ನು ಹತ್ತಿಕ್ಕಲು ಆಲೋಚಿಸಿದ. ಹೈದರಾಲಿಖಾನ್ ಕೆಲವು ತಂತ್ರಗಳನ್ನು ಹೂಡಿದ. ಈ ಮೊದಲೆ ಕ್ರಿ.ಶ. ೧೭೬೨ರಲ್ಲಿ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಿ ಧರ್ಮಪುರ ಪರಶುರಾಮಪುರ, ವೇಣುಕಲ್ಲು, ಯಿಕ್ಕನೂರು, ದೊಡ್ಡೇರಿ, ತಳುಕು, ಗೌರಸಮುದ್ರ, ನಾಯಕನಹಟ್ಟಿ, ಹಿರಿಯೂರು, ಹೊಸದುರ್ಗ, ಜಾನಕಲ್ಲು, ಭರಮಣ್ಣ ನಾಯಕನದುರ್ಗ, ಹೊಳಲ್ಕೆರೆ, ರಾಮಗಿರಿ, ರಂಗಯ್ಯನದುರ್ಗ, ಬಾಗೂರು ಹೀಗೆ ಗಡಿದುರ್ಗಗಳನ್ನು ತೆಗೆದುಕೊಂಡು ಠಾಣೆ ಹಾಕಿದನು. ಹೈದರಾಲಿಗೆ ಮದಕರಿನಾಯಕ ಎರಡು ಲಕ್ಷ ವರಹಗಳನ್ನು ನೀಡುವುದಾಗಿ ಸಂಧಾನ ಮಾಡಿಕೊಂಡಿದ್ದ.[೪೫] ಈಗ ಎರಡನೆಯ ಸಾರಿ ಕ್ರಿ.ಶ. ೧೭೭೪ರ ಮಾರ್ಚ್‌ನಲ್ಲಿ, ಕ್ರಿ.ಶ. ೧೭೭೭ರಲ್ಲಿ ಮರಾಠರೂ, ನಿಜಾಮ್ ಅಲಿಯೂ ಸೇರಿಕೊಂಡು ಹೈದರಾಲಿಖಾನ್‌ನನ್ನು ಎದುರಿಸುವ ಸನ್ನಾಹ ಮಾಡತೊಡಗಿದಾಗ ಚಿತ್ರದುರ್ಗದ ಮದಕರಿನಾಯಕ ಈ ಸುದ್ದಿ ಕೇಳಿ ಹೈದರಾಲಿಯ ಪತನ ಸನ್ನಿಹಿತವಾಗಿದೆಯೆಂಬ ಭ್ರಾಂತಿಯಿಂದ ಅವನಿಗೆ ತಾನು ಕಳುಹಿಸಬೇಕಾಗಿದ್ದ ಸೈನ್ಯ ಸಹಾಯವನ್ನು ಕಳುಹಿಸದೆ ಸುಮ್ಮನಾದನು.

ಇದನ್ನು ಅರಿತ ಹೈದರಾಲಿಖಾನ್ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಿದ. ಭಯಭೀತನಾದ ಮದಕರಿನಾಯಕ ಹೇರಳ ಧನದಂಡ ತೆರುವುದಾಗಿ ಹೇಳಿದರೂ, ಹೈದರಾಲಿ ಅವನ ವಚನದಲ್ಲಿ ನಂಬಿಕೆಯಿಡದೆ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಿದ. ಹಲವಾರು ತಿಂಗಳ ಮುತ್ತಿಗೆ ಮುಂದುವರೆದರೂ ಚಿತ್ರದುರ್ಗವು ಹೈದರನ ವಶವಾಗುವ ಸೂಚನೆ ತೋರದಾಯಿತು. ಆ ಸಂಧಿನಿಯಮದಂತೆ ಹದಿಮೂರು ಲಕ್ಷಗಳ ವರಹ ಧನವನ್ನು ಚಿತ್ರದುರ್ಗ ನಾಯಕನು ನಷ್ಟ ಸಂಹಾರವಾಗಿ ನೀಡತಕ್ಕದೆಂದು ನಿರ್ಣಯವಾಯಿತು.

ಕ್ರಿ.ಶ. ೧೭೭೯ರ ಫೆಬ್ರುವರಿಯಲ್ಲಿ ನಾಲ್ಕನೆಯ ಬಾರಿಗೆ ಮತ್ತೋಡು ಹಾಲಪ್ಪನಾಯಕನ ಸಲಹೆ ಮೇರೆಗೆ ಚಿತ್ರದುರ್ಗದ ದನಗಳನ್ನು ಹಿಡಿದು ಹೈದರಾಲಿ ಸಮರ ಸಾರಿದ. ಆಟ ನಡೆಯದಾದಾಗ ರಾಯದುರ್ಗ, ಹರಪನಹಳ್ಳಿ, ಸವಣೂರು, ಕಡಪ, ಕನಕಗಿರಿ, ಸಂಸ್ಥಾನಿಕರ ನೆರವು ಪಡೆದುಕೊಂಡು ಹೈದರ್ ಚಿತ್ರದುರ್ಗದ ಮೇಲೆ ಮುನ್ನುಗ್ಗಿದ. ಕನಕಗಿರಿ, ಆದವಾನಿ ಮತ್ತು ಜರಿಮಲೆ ಪಾಳೆಯಗಾರರು ಮೊದಲೆರಡು ದಾಳಿಗಳ ಸಂದರ್ಭದಲ್ಲಿ ಮದಕರಿನಾಯಕನ ಪರವಾಗಿ ಹೋರಾಡಿದ್ದರೂ ಈಗ ಸಹಾಯ ಮಾಡಲಿಲ್ಲ.[೪೭]

ಈ ಪಾಳೆಯಪಟ್ಟುಗಳೆಲ್ಲ ಹೈದರನ ರಾಜ್ಯವಿಸ್ತಾರದ ನೀತಿಗೆ ಬಲಿಯಾದವಲ್ಲದೆ ಹೈದರನ ಆಪ್ತ ಸಚಿವರುಗಳಾಗಿದ್ದ ಬರಕೀ ಶ್ರೀನಿವಾಸರಾಯರು, ಮೀರಾಸಾಹೇಬರು, ಪೂರ್ಣಯ್ಯನವರ ಸಲಹೆಯಂತೆ ಹೈದರಾಲಿ ಆಶ್ರಿತ ಪಾಳೆಯಗಾರರಿಗೆ ಪತ್ರ ಬರೆಯಿಸಿ ಚಿತ್ರದುರ್ಗದ ಸುತ್ತಲಿನ ಹಳ್ಳಿಗಳನ್ನು ಸುಲಿದು ಪ್ರಜೆಗಳನ್ನು ವಂಚಿಸಿ ತಮ್ಮ ಪಕ್ಷಕ್ಕೆ ಸೇರಿಸಿಕೊಂಡು, ತನ್ನ ಪಕ್ಷವಹಿಸಿ ಬಂದವರಿಗೆ ಇನಾಂ ಭೂಮಿ ಕಾಣಿಕೆ ನೀಡಿದನು. ಪರಶುರಾಮಭಾವುವನ್ನು ಚಿತ್ರದುರ್ಗದವರ ಸಹಾಯಕ್ಕೆ ಬಂದು ಸೇರಲಾರದಂತೆ ತುಂಗಭದ್ರಾ ನದಿ ದಡದಲ್ಲಿ ಇಪ್ಪತ್ತು ಸಾವಿರ ಫೌಜು ಕಾಯಲು ಇಟ್ಟಿದ್ದನು. ಅಲ್ಲದೆ ಹೊರಗಿನವರ ಫೌಜು ಚಿತ್ರದುರ್ಗದೊಳಕ್ಕೆ ಹೋಗದಂತೆ ಹಾಗೂ ಕೋಟೆಯೊಳಗಿಂದ ಒಬ್ಬರೂ ಹೊರಗೆ ಬರದಂತೆ ನೋಡಿಕೊಂಡಿದ್ದರು. ತುಂಗಭದ್ರಾ ತೀರದಲ್ಲಿ ಕಾವಲಿಟ್ಟ ದುರ್ಗವನ್ನು ಹಿಡಿದುಕೊಂಡಿದ್ದನು.[೪೮] ಈ ಸಂದರ್ಭದಲ್ಲಿ ಮರಾಠರು ಚಿತ್ರದುರ್ಗದ ಮದಕರಿನಾಯಕನಿಗೆ ಸಹಾಯಕರಾಗಲಿಲ್ಲ. ಸೈನ್ಯದಲ್ಲಿದ್ದ ಕೆಲ ಮುಸಲ್ಮಾನ ಸರದಾರರು ಹಾಗೂ ಹಿಂದೂ ಅಧಿಕಾರಿ ವರ್ಗದವರು ಹೈದರ್‌ನ ಹಣದ ಆಮಿಷಕ್ಕೆ ಒಳಗಾದರು. ಹೀಗಾಗಿ ೧೭೭೯ರ ಮಾರ್ಚ್ ೨೫ರಂದು ಚಿತ್ರದುರ್ಗ ಪತನವಾಗುವುದರೊಂದಿಗೆ ಹೈದರ್‌ನ ವಶವಾಯಿತು.

ಚಿತ್ರದುರ್ಗ ಮೂರು ದಿನಗಳ ಕಾಲ ಲೂಟಿಯಾಯಿತು. ಚಿತ್ರದುರ್ಗದ ಖಜಾನೆಯಲ್ಲಿದ್ದ ೬,೪೦೦, ೦೦೦ ಬೆಳ್ಳಿಯ ನಾಣ್ಯಗಳನ್ನು ೧೦೦೦ ರಾಯಲ, ೧,೭೦೦,೦೦೦ ಅಷ್ರಫಿ, ೨,೫೦೦,೦೦೦ ದಬೋಲಿಕ ದಾಲಿ ಮತ್ತು ೧,೦೦೦,೦೦೦ ಚೌರಿ ನಾಣ್ಯಗಳನ್ನು ಹೈದರಾಲಿ ತನ್ನೊಂದಿಗೆ ಸಾಗಿಸಿಕೊಂಡು ಹೋದನು.[೪೮] ಚಿತ್ರದುರ್ಗ ನಾಯಕ ಅರಸರ ಮನೆದೇವತೆ ಉತ್ಸವಾಂಬ ದೇವಾಲಯ, ಗ್ರಾಮದೇವತೆ, ದುರ್ಗಾಧಿದೇವತೆ ಏಕನಾಥೇಶ್ವರಿ ದೇವಾಲಯ, ಸಂಪಿಗೆ ಸಿದ್ಧೇಶ್ವರ ದೇವಾಲಯದಲ್ಲಿದ್ದ ವಜ್ರ, ವೈಢೂರ್ಯ ಚಿನ್ನದ ಭಾರಿ ನಗಗಳೂ ಸೇರಿದಂತೆ ಚಿತ್ರದುರ್ಗ ಸೀಮೆಯಲ್ಲಿಯ ದೇವರುಗಳಿಗೆ ನೀಡಿದ್ದ ಜಹಗೀರು, ಮಾನ್ಯಗ್ರಾಮಗಳು ಅವನ ವಶಕ್ಕೆ ಹೋದವು. ಮುಸಲ್ಮಾನರಿಗಾಗಿ ಊರಿನ ಮಧ್ಯದಲ್ಲಿ ಜಮ್ಮಾ ಮಸೀದಿ ನಿರ್ಮಾಣಗೊಂಡಿತಲ್ಲದೆ, ಉತ್ಸವಾಂಬ ದೇವಾಲಯದ ಮುಂದಿನ ಭುವನೇಶ್ವರಿ ಕಟ್ಟಡದ ಎರಡು ಅಂತಸ್ತುಗಳನ್ನು ಬಿಟ್ಟು, ಮೇಲಿನ ಭಾಗ ಕೆಡವಿ, ಅದರ ಶಿಲೆಯನ್ನು ಮಸೀದಿಯ ಕಟ್ಟಡಕ್ಕೆ ಉಪಯೋಗಿಸಿಕೊಂಡನು.

ಇತ್ತ ಮದಕರಿನಾಯಕನನ್ನು ಹಾಗೂ ಅವರ ತಮ್ಮ ಪರಶುರಾಮಪ್ಪನಾಯಕ, ಮಗ ಬಾಲಕ ಕುಮಾರ ಭರಮಪ್ಪನಾಯಕ ಹಾಗೂ ದೊಡ್ಡ ಮದಕರಿನಾಯಕರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಕರದ್ಯೊಯ್ದರು. ಅಲ್ಲಿ, ಚಿಕ್ಕ ಮದಕರಿನಾಯಕ ಮತ್ತು ದೊಡ್ಡ ಮದಕರಿನಾಯಕರನ್ನು ಬೇರೆ ಬೇರೆಯಾಗಿ ಬಂಧನದಲ್ಲಿಟ್ಟರು. ಆದರೆ ಪರಶುರಾಮಪ್ಪ ಮತ್ತು ಕುಮಾರಭರಮಪ್ಪನಾಯಕರನ್ನು ಕಬ್ಬಾಳು ದುರ್ಗಕ್ಕೆ ಸಾಗಿಸಿದರು. ವೀರ ಮದಕರಿನಾಯಕನ ಬಂಧನದ ಸುದ್ದಿ ತಿಳಿಯುತ್ತಿದ್ದಂತೆಯೇ ರಾಣಿವಾಸದವರು ಮೇಲುದುರ್ಗದ ಹೊಂಡದಲ್ಲಿ ಧುಮುಕಿ ಆತ್ಮಾರ್ಪಣೆ ಮಾಡಿಕೊಂಡರು. ಪರಶುರಾಮಪ್ಪ ಮತ್ತು ಕುಮಾರ ಭರಮಪ್ಪ ನಾಯಕರು ಸೆರೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದರಿಂದ ಅವರನ್ನು ಬೈರಾಪಟ್ಟಣಕ್ಕೆ ಕರೆದೊಯ್ದು ಅಲ್ಲಿಯ ಆಲದ ಮರವೊಂದಕ್ಕೆ ನೇಣುಹಾಕಿ ಕೊಲ್ಲಲಾಯಿತು. ಹಾಗೂ ಮದಕರಿನಾಯಕನಿಗೆ ವಿಷವನಿಕ್ಕಿ ಕೊಲ್ಲಲಾಯಿತು.[೪೯]

ಇತ್ತ ಚಿತ್ರದುರ್ಗದ ಸುಬೇದಾರನನ್ನಾಗಿ ಷೇಕ್ ಆಯಾಜ್‌ನನ್ನು ಹೈದರಾಲಿಯು ನೇಮಕ ಮಾಡಿದನು. ದುರ್ಗದ ಸೈನಿಕರಲ್ಲಿ ೨೦,೦೦೦ ಬೇಡ ತರುಣರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಕರೆದೊಯ್ದು[೫೦] ಮುಸಲ್ಮಾನರನ್ನಾಗಿ ಮಾಡಿದನು. ಈ ಯೋಧ ಪಡೆಯನ್ನು 'ಚೇಲಾಪಡೆ' ಎಂದು ಕರೆಯಲಾಗುತ್ತಿತ್ತು.[೫೧] ಹೀಗೆ ಸುಮಾರು ಇಂಥ ಚೇಲಾಪಡೆ ೨,೬೦,೦೦೦ ಇತ್ತು.[೫೨] ಚಿತ್ರದುರ್ಗವನ್ನು ವಶಪಡಿಸಿಕೊಂಡ ಹೈದರಾಲಿ ಒಂದು ವರ್ಷದವರೆಗೆ ಪರಿವಾರ ಸಮೇತ ಚಿತ್ರದುರ್ಗದಲ್ಲಿ ಅರಮನೆಯನ್ನು ಕಟ್ಟಿಸಿಕೊಂಡು ವಾಸವಾಗಿದ್ದನು. ಅಲ್ಲದೇ ಚಿತ್ರದುರ್ಗಕ್ಕೆ ಫರ್ರುಕಾಬಾದ್ ಎಂಬ ಹೊಸ ಹೆಸರಿಟ್ಟನು.[೫೩]

ಆನಂತರ ಹೈದರಾಲಿ ದಿವಾನ್ ಪೂರ್ಣಯ್ಯ ಮತ್ತಿತರ ಸಲಹೆಯ ಮೇರೆಗೆ ದೊಡ್ಡಮದಕರಿ ನಾಯಕನನ್ನು ಸೆರೆಯಿಂದ ಬಿಡುಗಡೆ ಮಾಡಿಸಿ ಆತನ ಮನವೊಲಿಸಿ ಒಂದು ಭಾರೀ ಸೈನ್ಯಕ್ಕೆ ತಿಂಗಳಿಗೆ ಮುನ್ನೂರು ರೂಪಾಯಿಯ ಸಂಬಳದ ಮೇಲೆ ಸಾವಿರ ಸೇನೆಯ ಸರದಾರನಾಗಿ ನೇಮಿಸಲಾಯಿತು.

ಹೈದರಾಲಿ ಆರ್ಕಾಟಿನ ಮೇಲೆ ದಂಡಯಾತ್ರೆ ಕೈಗೊಂಡನು. ಜೊತೆಗೆ ದೊಡ್ಡ ಮದಕರಿನಾಯಕನೂ ತೆರಳಿದನು. ಆರ್ಕಾಟು, ಕರ್ನೂಲ್, ತಿರುಚನಾಪಳ್ಳಿ, ಕಡಪ ಮತ್ತು ವೆಲ್ಲೂರುಗಳ ಕಾಳಗದಲ್ಲಿ ಹೋರಾಡಿ ಹೈದರಾಲಿನಿಗೆ ಜಯ ತಂದುಕೊಟ್ಟನು. ಸಂತಸಗೊಂಡ ಹೈದರ್ ದೊಡ್ಡಮದಕರಿನಾಯಕನಿಗೆ ಹೇರಳ ಧನಕನಕವನ್ನು ನೀಡಿದನಲ್ಲದೆ ಮುನ್ನೂರು ರೂಪಾಯಿಯ ಸಂಬಳವನ್ನು ಐದುನೂರು ರೂಪಾಯಿಗಳಿಗೆ ಏರಿಸಿದನು.

ಮಾಪಿಳ್ಳೆಯವರ ಆವಾಂತರದಿಂದ ಕಲ್ಲಿಕೋಟೆಯ ಸೀಮೆಯ ಸರದಾರ ಅಷರಫ್‌ಖಾನ ತೀರಿಕೊಂಡಾಗ, ಹೈದರಾಲಿಯ ಸೈನ್ಯದೊಂದಿಗೆ ಹಿರೇಮದಕರಿನಾಯಕನು ತೆರಳಿದಾಗ ಬ್ರಿಟೀಷರ ಸೈನ್ಯವು ಇವರಿಗೆ ಗಾಯಮಾಡಿತು. ಇದನ್ನು ಕೇಳಿ ಟಿಪ್ಪುಸುಲ್ತಾನ ೩೦,೦೦೦ ಕರ್ನಾಟಕ ಸೇನೆ, ೨೦,೦೦೦ ಕಾಲುಬಲ,

೧೫,೦೦೦ ಕುದುರೆ ಸವಾರರೊಂದಿಗೆ ಎದುರಿಸಿದಾಗ, ಬ್ರಿಟಿಷರು ತೋಪುಗುಂಡುಗಳಿಗೆ ಹೆದರಿದರು. ಆಗ ಹಿರೇಮದಕರಿನಾಯಕ ಐದುನೂರು ಕಾಲ್ಬಲದೊಡನೆ ಹೋರಾಡಿ, ಇಪ್ಪತ್ತೆರಡು ಬ್ರಿಟಿಷ್ ಸೈನಿಕರನ್ನು ಸೆರೆ ಹಿಡಿದನು. ಹದಿನಾರು ಜನರನ್ನು ಕೊಂದುಹಾಕಿದನು. ಆಗ ಸಂತೋಷಗೊಂಡ ಟಿಪ್ಪುಸುಲ್ತಾನ ಚಿತ್ರದುರ್ಗದ ಒಡೆತನ ಮರಳಿಕೊಡುವ ವಾಗ್ದಾನ ಮಾಡಿದನು. ಮುಂದಿನ ಯುದ್ಧದ ತಯಾರಿ ನಡೆಸಿದನು. ಅದೇ ಸಂದರ್ಭದಲ್ಲಿ ಹೈದರ್‌ಅಲಿ ಮರಣವನ್ನಪ್ಪಿದ ಸುದ್ದಿ ತಿಳಿದ ಟಿಪ್ಪುಸುಲ್ತಾನ ಯುದ್ಧ ಬಿಟ್ಟು ಅಲ್ಲಿಗೆ ತೆರಳಿದ. ದೊಡ್ಡ ಮದಕರಿನಾಯಕನನ್ನು ಮತ್ತು ಐಷದ್‌ಬೇಗ್‌ನನ್ನು ಕಲ್ಲಿಕೋಟೆಗೆ ಕಳುಹಿಸಿದ. ಕಲ್ಲಿಕೋಟೆಯಲ್ಲಿ ಬಹಳ ದಿನಗಳ ಕಾಲ ಕಂದಾಚಾರ ಕಚೇರಿಯಲ್ಲಿ ಭಕ್ಷಿ ಕೆಲಸ ಮಾಡುತ್ತಾ ಇರುವಾಗ ಹಿರೇಮದಕರಿನಾಯಕನ ಏಳ್ಗೆಯನ್ನು ಸಹಿಸದ ಕೆಲವು ಬ್ರಾಹ್ಮಣರು ಟಿಪ್ಪುವಿಗೆ "ದೊಡ್ಡ ಮದಕರಿನಾಯಕ ಹಿಂದೆ ನಿಮಗೆ ವೈರಿಯಾಗಿದ್ದ, ವೀರಮದಕರಿನಾಯಕನೂ ಈತನ ದಾಯಾದಿಗಳು. ನೀವು ಈತನಿಗೆ ವಿಶ್ವಾಸ ತೋರಿ ಜವಾಬ್ದಾರಿಯ ಕೆಲಸಗಳನ್ನು ಕೊಡುವುದರಿಂದ ಮುಂದೊಂದು ದಿನ ನಿಮ್ಮ ವಿರುದ್ಧವೇ ನಿಲ್ಲಬಹುದಾದ ಅಪಾಯದ ಸಂದರ್ಭ ಬರಬಹುದು. ಹಾವಿನ ಮರಿಗೆ ಹಾಲುಕೊಟ್ಟು ರಕ್ಷಿಸುತ್ತಿರುವಿರಿ" ಎಂದು ಚಾಡಿ ಹೇಳಿದರು. ಅವರ ಮಾತನ್ನು ಕೇಳಿ ಟಿಪ್ಪು ಕಲ್ಲಿಕೋಟೆಯಿಂದ ಮದಕರಿನಾಯಕನನ್ನು ತನ್ನಲ್ಲಿಗೆ ಕರೆಯಿಸಿಕೊಂಡು ಅವನ ಸ್ಥಳದಲ್ಲಿ ಮಹ್ಮದ್ ಭಕ್ಷಿಯನ್ನು ನೇಮಕ ಮಾಡುವ ಮೂಲಕ ದೊಡ್ಡ ಮದಕರಿನಾಯಕನ ಬೆಳವಣಿಗೆಗೆ ಅಡ್ಡಿಯಾದನು.[೫೪] ದೊಡ್ಡ ಮದಕರಿನಾಯಕನನ್ನು ಕೊಲ್ಲಿಸಲು ಇಲ್ಲವೇ ಖೋಜಾಮಾಡಿ ತನ್ನ ಜನಾನಾದಲ್ಲಿ ಇಡಲು ಸಂಚು ಮಾಡಿದನು.

ದೊಡ್ಡಮದಕರಿಗೆ ತನ್ನ ಆಪ್ತರಿಂದ ಈ ವಿಷಯ ತಿಳಿಯಿತು. ಆಗ ಟಿಪ್ಪುವಿನ ವಿರೋಧಿಯಾದ ಅನಂತಶಯನ(ತಿರುವನಂತಪುರದ) ದೊರೆ ಕಿರೀಟಪತಿ ರಾಮವರ್ಮ ಮಹಾರಾಜನಲ್ಲಿಗೆ ಹೋಗಿ ಆಶ್ರಯದಾತನಾಗಬಯಸಿ ಅವರನ್ನು ಕೋರಿದಾಗ ಆ ದೊರೆ ಈತನಿಗೆ ಆಶ್ರಯ ನೀಡಿದನು. ಆಗ ಟಿಪ್ಪು ದೊಡ್ಡಮದಕರಿನಾಯಕನನ್ನು ಮರಳಿ ಕಳುಹಿಸಲು ಕಿರೀಟಪತಿ ರಾಮವರ್ಮನಿಗೆ ತಾಕೀತು ಮಾಡಿದ. ತಿರುವನಂತಪುರದ ದೊರೆ ಒಪ್ಪಲಿಲ್ಲ. ಟಿಪ್ಪು ಅವರ ಮೇಲೆ ಯುದ್ಧಕ್ಕೆ ಸನ್ನದ್ಧನಾದ. ದೊಡ್ಡಮದಕರಿನಾಯಕನೂ ಯುದ್ಧಕ್ಕೆ ತೆರಳಿದ. ಸುಮಾರು ಒಂಭತ್ತು ತಿಂಗಳುಗಳ ಕಾಲ ಕಾಳಗ ನಡೆದವು. ಟಿಪ್ಪುವನ್ನು ದೊಡ್ಡಮದಕರಿ ನಾಯಕ ಕಂದಕದಲ್ಲಿ ಕೆಡವಿ ಚೂರಿಯನ್ನು ಕುತ್ತಿಗೆಗೆ ಹಾಕಲು ಕೈ ಎತ್ತಿದಾಗ, "ಚಿಚ್ಚಾ ತುಮಾರ ಬಚ್ಚ ಮಾಫ್ ಕರ್ನಾ"[೫೫] ಎಂದು ಟಿಪ್ಪು ಬೇಡಿಕೊಂಡಾಗ ದೊಡ್ಡಮದಕರಿನಾಯಕ ಕ್ಷಮಿಸುತ್ತಾನೆ. ಟಿಪ್ಪುವಿನ ಸೋಲು ಅನಂತಶಯನದ ಮಹಾರಾಜ ಕಿರೀಟ ರಾಮರಾಜನಿಗೆ ಖುಷಿಯಾಯಿತು. ದೊಡ್ಡಮದಕರಿನಾಯಕನಿಗೆ ಎಲ್ಲಾ ವ್ಯವಸ್ಥೆ ಮಾಡಿದನು.

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಬ್ರಿಟಿಷರು ಟಿಪ್ಪುವನ್ನು ಸೋಲಿಸಲು ತಂತ್ರಹೂಡಿದರು, ಟಿಪ್ಪುಸುಲ್ತಾನನಿಗೂ ಕುಂಪಿನಿಯವರಿಗೂ ಯುದ್ಧ ನಡೆಯಲು ಅನಂತಶಯನದ ರಾಜ

ದೊಡ್ಡಮದಕರಿನಾಯಕನಿಗೆ ಇಂಗ್ಲೀಷಿನವರ ಪಕ್ಷಕ್ಕೆ ಸೇರಿ ಟಿಪ್ಪುವನ್ನು ಸೋಲಿಸಿದರೆ, ಚಿತ್ರದುರ್ಗ ರಾಜ್ಯವನ್ನು ಮರಳಿಸಲು ಬ್ರಿಟಿಷರಿಗೆ ಶಿಫಾರಸ್ಸು ಮಾಡುವುದಾಗಿ ಹೇಳಿದನು. ದೊಡ್ಡ ಮದಕರಿನಾಯಕ ಬ್ರಿಟಿಷರ ಪರವಾಗಿ ಟಿಪ್ಪು ಸುಲ್ತಾನನ ವಿರುದ್ಧ, ಪಿರಿಯಾಪಟ್ಟಣದವರೆಗೆ ಬಂದು ಸಾಹಸ ತೋರಿದ. ಬ್ರಿಟೀಷರು ಯುದ್ಧದಲ್ಲಿ ಟಿಪ್ಪುಸುಲ್ತಾನನನ್ನು ಕೊಂದರು. ಶ್ರೀರಂಗಪಟ್ಟಣ ಕ್ರಿ.ಶ. ೧೭೯೯ರ ಮೇ ೪ರಂದು ಪತನವಾಯಿತು. ಆಗ ದೊಡ್ಡಮದಕರಿ ನಾಯಕನು ಇಂಗ್ಲೀಷಿನವರೊಡಗೂಡಿ ಶ್ರೀರಂಗಪಟ್ಟಣ ವನ್ನು ಇಂಗ್ಲೀಷರ ವಶವಾಗುವಂತೆ ಮಾಡಿದ್ದಕ್ಕಾಗಿ ಕಿರೀಟಪತಿಗಳು ದೊಡ್ಡಮದಕರಿನಾಯಕನನ್ನು ಮೆಚ್ಚಿ ಕೊಂಡಾಡಿದರು. ಶಿಫಾರಸ್ಸು ಪತ್ರವನ್ನು ನೀಡಿ ಸಾಹುಕಾರ ಸುಂದರರಾಂಡಂಪಿಳ್ಳೆ ಮತ್ತು ನವರೋಜು ಇವರನ್ನು ದೊಡ್ಡ ಮದಕರಿನಾಯಕನೊಂದಿಗೆ ಚನ್ನಪಟ್ಟಣಕ್ಕೆ ಕಳುಹಿಸಿದರು. ಅವರು ಕಲ್ಲಿಕೋಟೆ ತಲುಪಿ, ಕೊಯಮತ್ತೂರಿನಲ್ಲಿ ೪೦ ದಿನಗಳವರೆಗೆ ತಂಗಿ, ನಂತರ ಚನ್ನಪಟ್ಟಣಕ್ಕೆ ತಲುಪಿದರು. ಕುಂಪಣಿಯ ಸಾಹೇಬರನ್ನು ಕಂಡು ತಿರುವನಂತಪುರದ ಅರಸರ ಪತ್ರವನ್ನು ಅವರ ಕೈಗಿಟ್ಟರು. ಆಗ ಅವರು ದೊಡ್ಡಮದಕರಿನಾಯಕನನ್ನು ಉಪಚರಿಸಿ ಸುಮಾರು ಎರಡು ವರ್ಷಗಳ ಕಾಲ ಅಲ್ಲಿಯೇ ಇಟ್ಟುಕೊಂಡು ದಿನಕ್ಕೆ ಹತ್ತು ರೂಪಾಯಿಯಂತೆ ಖರ್ಚಿಗೆ ಹಣ ನೀಡಿದರು.

ನಂತರ ಕಿರೀಟಪತಿಗಳು ದೊಡ್ಡಮದಕರಿನಾಯಕನ ವಿಷಯದಲ್ಲಿ ಶಿಫಾರಸ್ಸು ಪತ್ರ ನೀಡಿ ಬ್ರಿಟಿಷರಿಗೆ ಕಳುಹಿಸಿದರು. ಆಗ ಬ್ರಿಟಿಷರು ಮೈಸೂರು ಅರಸರಲ್ಲಿ ದಿವಾನ್ ಪದವಿಯಲ್ಲಿದ್ದ ಪೂರ್ಣಯ್ಯನವರಿಗೆ ಪತ್ರ ಬರೆದು ಚಿತ್ರದುರ್ಗದ ನಾಯಕತನವನ್ನು ದೊಡ್ಡಮದಕರಿನಾಯಕರಿಗೆ ಕೊಡಲು ತಿಳಿಸಿದರು. ಆ ಪತ್ರದೊಂದಿಗೆ ಮೈಸೂರಿಗೆ ಬಂದರು. ಪೂರ್ಣಯ್ಯನವರು ಅದನ್ನು ಮೊದಲೇ ತಿಳಿದುಕೊಂಡಿದ್ದರು. ಇವರು ಬರುವುದನ್ನು ತಿಳಿದು ತಮ್ಮ ಕೆಲವು ಸರಹದ್ದುಗಳ ಭೇಟಿಗೆ ತೆರಳಿದ್ದರು. ನಂತರ ಮಗಳಿದ ತಕ್ಷಣ ದೊಡ್ಡಮದಕರಿನಾಯಕರಿಗೆ ಬ್ರಿಟಿಷನವರು ಉತ್ತರದೇಶದ ಸಫರುಮಾಡಿ ಜಯಪ್ರದಮಾಡಿಕೊಂಡು ಬರಲಿ, ಲೆಕ್ಕಪತ್ರವನ್ನು ನೋಡಿ ದೇಶವನ್ನು ತಹಬಂದಿಗೆ ತಂದು ಇಂಗ್ಲೀಷನವರ ಅಪ್ಪಣೆಯಂತೆ ನಿಮ್ಮ ರಾಜ್ಯವನ್ನು ಕೊಡುತ್ತೇವೆಂದು ಹೇಳಿದರು.

ಪೂರ್ಣಯ್ಯನವರು ದೊಡ್ಡಮದಕರಿನಾಯಕ ಮತ್ತು ಅವನ ಪರಿವಾರಕ್ಕೆ ಮೈಸೂರಿನಲ್ಲಿ ಮನೆಮಾಡಿಕೊಟ್ಟು, ಖರ್ಚಿಗಾಗಿ,

ದೊಡ್ಡಮದಕರಿನಾಯಕರಿಗೆ ವರಹ - ೧೦೯೦

ಮಗ ಜಂಗಳ ನಾಯಕರಿಗೆ ವರಹ - ೩೦೯೦

ಮಗ ಕಾಟಪ್ಪ ನಾಯಕರಿಗೆ ವರಹ - ೧೦೯೦

ಮಗ ಭೂಮರಾಜ ನಾಯಕರಿಗೆ ವರಹ - ೫೯೦

ಮಗ ರಾಮಪ್ಪ ನಾಯಕರಿಗೆ ವರಹ - ೫೯೦

ಮಗ ಸಾಬರಿ ಭರಮಪ್ಪ ನಾಯಕರಿಗೆ ವರಹ - ೫೯೦

ಒಟ್ಟು ವರಹ - ೫೫೫೯೦[೫೬]

ಹಣವನ್ನು ಗೊತ್ತು ಮಾಡಿದರು. ಹಾಗೆಯೇ ಕಾಲ ನೂಕಿ ಇದೇ ಖಾಯಂ ಆಗಲು ಕೊನೆಗೆ ೨೫೦೦೦ ವರಹದ ಸಣ್ಣ ಸೀಮೆಯನ್ನು ಖಂಡಣಿಗೊತ್ತು ಮಾಡಿಕೊಡುವುದಾಗಿ ಹೇಳಿದರು. ಇದನ್ನು ಒಪ್ಪದ ಹಿರೇಮದಕರಿ ನಾಯಕ ನಿರಾಶನಾಗಿ ಚಿತ್ರದುರ್ಗ ಸಂಸ್ಥಾನದ ದೊಡ್ಡೇರಿ ತಾಲ್ಲೂಕಿನ ಚಳ್ಳಕೆರೆಗೆ ಬಂದು ನೆಲೆಸಿದರು. ಅಲ್ಲಿಯೇ ಮರಣ ಹೊಂದಿದರು.

ಇವರ ಹಿರಿಯಮಗ ಜಂಪಣ್ಣನಾಯಕನಿಗೆ ಮೈಸೂರಿನಲ್ಲಿರುವಂತೆ ಏರ್ಪಾಡು ಮಾಡಿ ಆತನಿಗೆ ತಿಂಗಳಿಗೆ ೮೧೬೦ ವರಹ ಸುಖವೇತನ ನೀಡಲಾಗಿತ್ತು. ಆಗ ಶ್ರೀರಂಗಪಟ್ಟಣದಲ್ಲಿದ್ದಾಗ ಐರೋಪ್ಯ ಸೈನಿಕರು ದಂಗೆ ಎದ್ದರು. ಆ ದಂಗೆಯನ್ನು ಅಡಗಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಜಂಪಣ್ಣನಾಯಕ ಚಿತ್ರದುರ್ಗದಿಂದ ೪೦೦೦ ಜನರನ್ನು ಕರೆಯಿಸಿ 'ರಣಗಂಭ' ಕಾಳಗದಲ್ಲಿ ಜಯಶಾಲಿಯಾದುದಕ್ಕೆ ದಿವಾನ್ ಪೂರ್ಣಯ್ಯನವರು ನಗರದಲ್ಲಿ ನಡೆಯುವ ತುಂಟಾಟಗಳನ್ನು ನಿಗ್ರಹಿಸಲು ಕಳುಹಿಸಿದರು.

ಈ ಮಧ್ಯೆ ಕ್ರಿ.ಶ. ೧೮೩೧ರಲ್ಲಿ ಇಂಗ್ಲೀಷರ ಮತ್ತು ಮೈಸೂರು ಅರಸರ ವಿರುದ್ಧ ತರೀಕೆರೆಯ ಸರ್ಜಾರಂಗಪ್ಪ ನಾಯಕರು, ಹನುಮಪ್ಪನಾಯಕರು, ಇಮ್ಮಡಿ ಹನುಮಪ್ಪನಾಯಕರು ಮತ್ತು ಸರ್ಜಾಹನುಮಪ್ಪನಾಯಕರು ತರೀಕೆರೆಯ ಸ್ವಾತಂತ್ರ್ಯಕ್ಕಾಗಿ ಯುದ್ಧ ಸಾರಿದಾಗ ಮುಮ್ಮಡಿ ಕೃಷ್ಣರಾಜ ಒಡೆಯರ ಕೋರಿಕೆಯಂತೆ ಜಂಪಣ್ಣನಾಯಕ ಯುದ್ಧದಲ್ಲಿ ಭಾಗವಹಿಸುತ್ತಾನೆ. ಆಗ ಯುದ್ಧದಲ್ಲಿ ಒಡೆಯರ ಸೈನ್ಯ ಸೋಲುತ್ತದೆ. ಇಂಗ್ಲೀಷರು ಜೊತೆಗೂಡಿ ತರೀಕೆರೆಯವರನ್ನು ಸೋಲಿಸುತ್ತಾರೆ. ಸರ್ಜಾರಂಗಪ್ಪನಾಯಕರನ್ನು ಗಲ್ಲಿಗೇರಿಸಲಾಗುತ್ತದೆ.

ಜಂಪಣ್ಣನಾಯಕ ಸ್ಥಳೀಯರ ತುಂಟಾಟಗಳನ್ನು ನಿಗ್ರಹಿಸಿದ್ದಕ್ಕಾಗಿ, ಮೈಸೂರು ಅರಸರು ನಾಲ್ಕು ಸಾವಿರ ತುಕಡಿ ಸೈನ್ಯ ನೀಡಿ ನಾಯಕತನ ನೀಡಿದರು. ಈತನಲ್ಲಿಯ ಒಳ್ಳೆಯ ಗುಣಗಳು, ಬ್ರಿಟಿಷ್ ಚೀಫ್ ಕಮೀಷನರ್‌ನ ಅಚ್ಚುಮೆಚ್ಚಿನ ಬಂಟನಾಗಿ ನೇಮಕಗೊಳ್ಳಲು ಕಾರಣವಾಯಿತು. ಮೈಸೂರು ಅರಸರಿಗೂ ಮತ್ತು ಬ್ರಿಟಿಷರಿಗೂ ಪ್ರೀತಿಗೆ ಪಾತ್ರನಾದ. ಇಷ್ಟ ಬಂದ ಸ್ಥಳಕ್ಕೆ ಸಂಚಾರ ಮಾಡುವ ರಹದಾರಿ ಸಿಕ್ಕಿತು. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡ ಜಂಪಣನಾಯಕ ಕ್ರಿ.ಶ.೧೮೪೯ರಲ್ಲಿ ಚಿತ್ರದುರ್ಗದ ಅಧಿಕಾರ ಪುನಃ ಪಡೆಯಲು ಪ್ರಯತ್ನಿಸಿದನಾದರೂ ಸಾರ್ವಜನಿಕರು ಹಾಗೂ ಸೈನಿಕರು ಕೈಜೋಡಿಸಲಿಲ್ಲ.[೫೭] ಕೊನೆಗೆ ಬೆಂಗಳೂರಿನಲ್ಲಿ ನಿಧನನಾದನು. ಈತನಿಗೆ ನಾಲ್ಕು ಜನ ಮಕ್ಕಳು, ಬಿಚ್ಚುಕತ್ತಿ ಮದಕರಿನಾಯಕ, ಕಿರೀಟ ರಾಮರಾಜು, ಕೃಷ್ಣಪ್ಪನಾಯಕ ಮತ್ತು ತಿಮ್ಮಳನಾಯಕ

ಇವರುಗಳಿಗೆ ತಂದೆ ತೀರಿದ ಬಳಿಕ ಆತನಿಗೆ ಸಲ್ಲುತ್ತಿದ್ದ ಸುಖವೇತನ ಇವರಿಗೆ ನೀಡಲ್ಪಟ್ಟಿತು. ಇವರ ವಂಶಸ್ಥರೇ ಇಂದು ಚಳ್ಳಕೆರೆ, ಕಾಟಪ್ಪನಹಟ್ಟಿ, ಅರೆಹಳ್ಳಿ, ಗುಡೇಕೋಟೆಗಳಲ್ಲಿ ವಾಸವಾಗಿದ್ದಾರೆ. ಈ ಮನೆತನದ ವಂಶಸ್ಥರು ರಾಜಕೀಯ ಕ್ಷೇತ್ರದ ಕಡೆ ಅಲಕ್ಷ್ಯ ವಹಿಸಿರುವುದು ಕಂಡುಬರುತ್ತದೆ. ತಾವು ನಾಯಕ ಅರಸು ಮನೆತನದವರು ನಮಗ್ಯಾಕೆ ರಾಜಕೀಯ ಎಂಬ ಇವರ ಮನೋಧೋರಣೆಯಿಂದಲೋ ಅಥವಾ ಇವತ್ತಿನ ರಾಜಕೀಯಕ್ಕೆ ಬೇಕಾದ ಆರ್ಥಿಕ ಸಬಲತೆ ಇವರಲ್ಲಿ ಇಲ್ಲದ್ದರಿಂದಲೋ ಏನೋ ರಾಜಕೀಯದಿಂದ ದೂರ ಉಳಿಯಲು ಕಾರಣವಾಗಿರಬಹುದು.

ದಿ.ಸಿ.ಪಿ.ರಾಜಾಪರಶುರಾಮಪ್ಪನಾಯಕರು ಚಳ್ಳಕೆರೆಯ ಪುರಸಭೆಯ ಅಧ್ಯಕ್ಷರಾಗಿದ್ದರು. ಡಾ.ಬಿ. ರಾಜಾ ಜಯಚಂದ್ರರಾಜು ರಾಜಕೀಯ ಕ್ಷೇತ್ರಕ್ಕೆ ಸೇರಿ ಮುಂದುವರೆಯಲು ಪ್ರಯತ್ನಿಸಿದರೂ ಫಲ ದೊರೆಯಲಿಲ್ಲ. ಆದರೆ ಇಂದು ಕೆಲ ರಾಜಕಾರಣಿಗಳು ಓಟಿಗಾಗಿ ಇವರ ಬೆಂಬಲವನ್ನು ಕೇಳುತ್ತಾರೆ. ಪ್ರಜೆಗಳು, ಮಠಾಧೀಶರು, ಅಧಿಕಾರಿಗಳು ಇವರಿಗೆ ಅರಸರ ವಂಶಸ್ಥರೆಂದು ಗೌರವವನ್ನು ನೀಡುತ್ತಾ ಬಂದಿರುವುದಲ್ಲದೆ, ಸಭೆ-ಸಮಾರಂಭ, ಹಬ್ಬ-ಉತ್ಸವಗಳಲ್ಲಿ ಮಾತ್ರ ಇವರಿಗೆ ಮರ್ಯಾದೆ ನೀಡುತ್ತಾರೆ. ಆದರೆ ಮೊದಲಿನಷ್ಟು ಗೌರವವನ್ನು ನಿರೀಕ್ಷಿಸುವಂತಿಲ್ಲವೆಂದೇ ಹೇಳಬಹುದಾಗಿದೆ.

## ೨.೨ ಸುರಪುರದ ನಾಯಕ ಅರಸರು

ಕಲಬುರ್ಗಿ ಜಿಲ್ಲೆಯಿಂದ ದಕ್ಷಿಣಕ್ಕೆ ೧೦೬ ಕಿ.ಮೀ ದೂರದಲ್ಲಿರುವ ಸುರಪುರ, ಕೃಷ್ಣಾ ಹಾಗೂ ಭೀಮಾನದಿಯ ಮಧ್ಯದಲ್ಲಿದೆ. ಕ್ರಿ.ಶ.೧೬೩೬ ರಿಂದ ೧೮೫೮ರವರೆಗೆ ಹನ್ನೆರಡು ಜನ ನಾಯಕ ಅರಸರು ಸುರಪುರ ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ್ದಾರೆ. ಈ ಅರಸರಿಗೆ ಗೋಸಲ ವಂಶದವರೆಂದು ಕರೆಯುವ ರೂಢಿಯಿದೆ. ಇವರು ಗೋವುಗಳನ್ನು ಸಲಹುತ್ತಿರುವುದರಿಂದ ಇವರಿಗೆ ಗೋಸಲದವರೆಂದು ಹೆಸರು ಬಂದಿತು.[೫೮] ಗುಹನಿಂದ ಪ್ರಾರಂಭಗೊಂಡ ಈ ವಂಶದ ಮೂಲ ಪ್ರದೇಶ ರತ್ನಗಿರಿ ರಾಜ್ಯವೆಂಬುದು ನಿರ್ವಿವಾದ.[೫೯] ರತ್ನಗಿರಿ ಸದ್ಯ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರ ತಾಲೂಕಿನ ಒಂದು ಪ್ರಮುಖ ಪಟ್ಟಣವಾಗಿದೆ. ಇವರು ಬೇಟೆಯನ್ನೇ ಮೂಲ ಕಸುಬನ್ನಾಗಿಸಿಕೊಂಡು ಅಲೆಮಾರಿಗಳಾಗಿ ಬೇಟೆಗಾರರೊಂದಿಗೆ ವಲಸೆ ಹೊರಟು ಕರ್ನಾಟಕದ ಆಂಧ್ರ ಗಡಿಭಾಗದಲ್ಲಿ ಬೀಡುಬಿಟ್ಟರು.

ಅಪಾರ ಶಕ್ತಿ-ಸಾಮರ್ಥ್ಯ ಇವರಲ್ಲಿದ್ದ ಕಾರಣ ಅಂದು ಅಸ್ತಿತ್ವದಲ್ಲಿದ್ದ ರಾಜ್ಯ, ಸಾಮ್ರಾಜ್ಯಗಳು ಇವರನ್ನು ತಮ್ಮ ಸೈನ್ಯದಲ್ಲಿ ಸೇರಿಸಿಕೊಂಡವು. ಇವರು ಬಹುಬೇಗ ಸೈನ್ಯದಲ್ಲಿ ಉನ್ನತ ಸ್ಥಾನಮಾನ ಸಂಪಾದಿಸಿದರು. ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯದ ವೈಭವದ ಉನ್ನತಿಗೆ ಕಾರಣರಾದ ಅನೇಕ ಪಾಳೆಯಗಾರರಲ್ಲಿ ಸುರಪುರದವರ ಪಾತ್ರವೂ ಇದೆ. ಗುಲಬರ್ಗಾ, ರಾಯಚೂರು ಹಾಗೂ ಇನ್ನಿತರ ಮುಸ್ಲಿಂ ರಾಜ್ಯಗಳ ಮೇಲೇರಿ ಹೊರಟ ಕೃಷ್ಣದೇವರಾಯನ ದಂಡಯಾತ್ರೆಯಲ್ಲಿ

ಸಗರನಾಡಿನ ಬೇಡರ ಪಡೆಗಳು ಪ್ರತ್ಯಕ್ಷವಾಗಿ ಪಾಲ್ಗೊಂಡಿದ್ದವು. ಅಲ್ಲದೇ ಮುದಗಲ್ ಯುದ್ಧದಲ್ಲಿ ವಿಜಯನಗರವನ್ನು ಬೆಂಬಲಿಸಿದ ಬೇಡ ಪಾಳೆಯಗಾರರು ಸುರಪುರದ ಪೂರ್ವಜರೇ ಆಗಿದ್ದರೆನ್ನಲು ಅನೇಕ ಆಧಾರಗಳಿವೆ.[೬೦]

ಸಗರನಾಡಿನ ಕೇಂದ್ರಕೋಟೆಯಾದ ಸಗರ ದುರ್ಗವನ್ನು ಬಹಮನಿಗಳಿಂದ ಕಸಿದುಕೊಂಡು ಅಳಿಯ ರಾಮರಾಯ 'ಸಗರ ಸಂಕ್ರಮಣ ಧುರೀಣ'ನೆಂದು ಬಿರುದಿಗೆ ಪಾತ್ರನಾದನೆಂದು ಮತ್ತು ಗೆದ್ದಕೋಟೆ ವಶವಾದ ತರುವಾಯ ತನ್ನ ಪಾಳೆಯಗಾರರಾದ ಸಗರನಾಡಿನ ಬೇಡ ನಾಯಕರ ಒಡೆತನಕ್ಕೆ ಒಪ್ಪಿಸಿದನೆಂದು ಉಲ್ಲೇಖಗಳಿವೆ.[೬೧]

ರತ್ನಗಿರಿ, ಕಂಪಿಲಿ, ವಿಜಯನಗರಗಳ ಮೂಲಕ ವಿಸ್ತರಿಸಿದ ಸುರಪುರದ ಪೂರ್ವಜರುಗಳೆಂದರೆ

ನರಸಿಂಹನಾಯಕ
|
ವೀರಬೊಮ್ಮನಾಯಕ
|
ಸಿಂಗಪ್ಪನಾಯಕ
|
ಒಡೇರನಾಯಕ
|
ಕಲ್ಲಪ್ಪನಾಯಕ
|
ಚಿಣ್ಣ ಹನಮನಾಯಕ
|
ಹಾವಿನಾಯಕ
|
ಪೆದ್ದ ಸೋಮನಾಯಕ
|
ಉಗ್ರ ಸಿಂಗನಾಯಕ
|
ಮದರಿ ನಾಯಕ
|
ವೀರಝುಂಪನಾಯಕ
|
ಬಲಸೋಮನಾಯಕ
|
ಹಿರೇ ಪಾಮನಾಯಕ
|
ಜಕ್ಕಪ್ಪದೇಸಾಯಿ[೬೨]

ಹೀಗೆ ಹದಿನಾಲ್ಕು ತಲೆಮಾರುಗಳವರೆಗೆ ಇದ್ದಾರೆ.

ನರಸಿಂಹನಾಯಕ ಸುರಪುರ ಸಂಸ್ಥಾನದ ಆರಂಭಿಕ ಪಾಳೆಯಗಾರನಾಗಿದ್ದು, ಆಂಧ್ರ ಪ್ರದೇಶದ ರತ್ನಗಿರಿ ಭಾಗದಲ್ಲಿ ತಲೆಯೆತ್ತಿ, ಮುಂದೆ ಸಾಗುತ್ತಾ ಇವನು ವೀರಬೊಮ್ಮನಾಯಕನೆಂಬ ಮಗನ ಮೂಲಕ ಸಾರಂಗಕೊಳ್ಳವನ್ನು ವಶಪಡಿಸಿಕೊಳ್ಳುವನು. ನಂತರ ಸಿಂಗಪ್ಪನಾಯಕ ಮತ್ತು ಒಡೇರನಾಯಕರೆಂಬ ತಂದೆ ಮಕ್ಕಳು ಸಾರಂಗಕೊಳ್ಳದ ದೇಶಗತಿಯನ್ನು ಗಳಿಸಿದರು. ಒಡೇರನಾಯಕನ ಮಗ ಕಲ್ಲಪ್ಪನಾಯಕನು 'ಕದನ ಕಡುಗಲಿ' ಎಂದೇ ಹೆಸರಾಗಿದ್ದ. ಈತನು ಅನೂಚಾನವಾಗಿ ಬಂದ ವಂಶದ ಆಸ್ತಿ ಮತ್ತು ಶಕ್ತಿಯನ್ನು ಕ್ರೋಢೀಕರಿಸಿಕೊಂಡು ತನ್ನ ಅಸ್ತಿತ್ವ ಸ್ಥಾಪಿಸಿದನು.

ನಂತರ ಕಂಪಲಿ ರಾಜ್ಯದ ಅವಸಾನ ಹಾಗೂ ವಿಜಯನಗರದ ಹುಟ್ಟುಗಳೆರಡನ್ನು ಕಂಡುಂಡ ಈತನು ಸಾರಂಗಕೊಳ್ಳದಿಂದ ತುಂಬಳಕ್ಕೆ ಬರುತ್ತಾನೆ. ಆಗ ಮುದಗಲ್ಲಿನಲ್ಲಿ ಕಿಲ್ಲೆದಾರ ಮುಸ್ತಫಖಾನ್‌ನ ಸ್ನೇಹದ ಕರೆಗೆ ಓಗೊಟ್ಟು ಕಲ್ಲಪ್ಪನಾಯಕ ಕಂಪಲಿ, ಗಂಗಾವತಿ, ತಾವರಗೇರಿ ಮೂಲಕ ತನ್ನ ಏಳು ಮಕ್ಕಳೊಂದಿಗೆ ಮುದಗಲ್‌ಗೆ ಹೋಗುತ್ತಾನೆ. ಇದರ ಕುರುಹಾಗಿ ಇಂದು ಮುದಗಲ್‌ನಲ್ಲಿ 'ಗೋಸಲಪೇಟೆ' ಎಂಬ ಓಣಿ ಇದೆ. ಹಾಗೂ ಅಲ್ಲಿ ಗೋಸಲರಾಯ ಎಂಬ ಮಾರುತಿ ದೇವಾಲಯವನ್ನು ಕಾಣಬಹುದಾಗಿದೆ. ಹಾಗೂ ಗುಡ್ಡದ ಮೇಲೆ ಕಲ್ಲಪ್ಪನಾಯಕನ ಏಳು ಜನ ಹನುಮನಾಯಕರ ಪ್ರತೀಕವಾಗಿ ಏಳು ಹನುಮ ವಿಗ್ರಹಗಳಿವೆ.[೬೩]

ಮುದಗಲ್‌ನಲ್ಲಿ ತಳವೂರಿದ್ದ ಕಲ್ಲಪ್ಪನಾಯಕ ತನ್ನ ಏಳು ಜನ ಮಕ್ಕಳು ಬೇರೆ ಬೇರೆ ಕಡೆ ಚದುರಿ ಹೋಗಿ, ಸ್ವತಂತ್ರ ದೇಸಗತಿಗಳಿಗೆ ದೊರೆಗಳಾದರು. ಉತ್ತರಕ್ಕೆ ಹೋದ ಹಿರೇಹಣಮನಾಯಕ ಕೃಷ್ಣಾನದಿಯನ್ನು ದಾಟಿ ಕೊಡೇಕಲ್, ನಾಲತ್ವಾಡ ಪ್ರದೇಶದಲ್ಲಿ ಅಸ್ತಿತ್ವ ಸ್ಥಾಪಿಸಿದರೆ, ಇಮ್ಮಡಿ ಹನುಮನಾಯಕ ಪೂರ್ವದ ಕೋಸಗಿ ಪ್ರಾಂತ್ಯವನ್ನು, ಮುಮ್ಮಡಿ ಹಣುಮನಾಯಕ ಉತ್ತರದ ಕೋಳಕೂರ, ರದ್ದೇವಾಡಗಿ, ಬೀದರ್ ಮಾರ್ಗವಾಗಿ ವರ್ಹಾಡಕ್ಕೆ ಹೋದನು.[೬೪]

ನಾಲ್ಕನೆಯ ಹಣಮನಾಯಕ ಪಶ್ಚಿಮಕ್ಕಿರುವ ಕೌಲಗಿ, ನಿಡಗುಂದಿ, ಕೆರೂರ ಭಾಗಕ್ಕೆ ತೆರಳಿದ. ಐದನೆಯ ಕರಿಹಣಮನಾಯಕ ಮತ್ತು ಆರನೆಯ ಬಿಲ್ಲ ಹಣಮನಾಯಕರು ದಕ್ಷಿಣದೆಡೆಗೆ ತೆರಳಿದರು. ಏಳನೆಯ ಚಿನ್ನಹಣಮನಾಯಕನೇ ತನ್ನ ಸಹೋದರ ಹಿರೇಹಣಮನಾಯಕನ ರಕ್ಷಣೆಯಲ್ಲಿ ಸಗರನಾಡಿನ ಕಕ್ಕೇರಿ ಭಾಗದಲ್ಲಿ ನಾಯಕನಾಗಿ ಹೊರಹೊಮ್ಮಿದ. ಈತನ ತರುವಾಯ ಹಾವಿನಾಯಕ, ಪೆದ್ದಸೋಮನಾಯಕ, ಉಗ್ರಸಿಂಗನಾಯಕ, ಮದರಿನಾಯಕ, ವೀರರಝುಂಪನಾಯಕ ಮತ್ತು ಬಲಸೋಮನಾಯಕರು ಕಕ್ಕೇರಿ ಬಿಟ್ಟು ಐದಭಾವಿ ಹಾಗೂ ಕೃಷ್ಣಾ ನದಿಯ ಗಡ್ಡಿಪ್ರದೇಶದಲ್ಲಿ ಆಶ್ರಯ ಪಡೆದರು. ಐದಾರು ತಲೆಮಾರುಗಳ ದೀರ್ಘ ಸೋಲಿನ ಸೇಡನ್ನು ತೀರಿಸಿಕೊಳ್ಳಲೆಂದೇ ಸಿಡಿದೆದ್ದು ಬಂದ ಬಲಸೋಮನಾಯಕನ ಮಗ ಹಿರೇಪಾಮನಾಯಕನು ಕಕ್ಕೇರಿಯನ್ನು ಕಸಿದುಕೊಂಡಿದ್ದ ಗೌಡ

ದೇಸಾಯಿಯರನ್ನು ಕೊಂದು ತನ್ನ ಪೂರ್ವಜರ ಜಮೀನು ಜಹಗೀರುಗಳನ್ನೆಲ್ಲ ಮರಳಿ ಸಂಪಾದಿಸಿದ.[೬೫] ನಂತರ ಇಬ್ರಾಹಿಂ ಆದಿಲ್‌ಶಾಹನ ಸರದಾರ ಅಬ್ದುಲ್ ರಹೀಮ್ ಬಹಲೂಲಖಾನ್‌ನ ಸ್ನೇಹವನ್ನು ಬೆಳೆಸುತ್ತಾನೆ.

ಜಕ್ಕಪ್ಪ ದೇಸಾಯಿ ಕಕ್ಕೇರಿ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆಯನ್ನು ಪ್ರಾರಂಭಿಸುತ್ತಾನೆ. ಈತನಿಗೆ ಇಬ್ಬರು ಮಕ್ಕಳಿದ್ದರು. ಅವರೇ ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕರು. ಇವರು ಕಕ್ಕೇರಿಯ ಗಡ್ಡಿಯಲ್ಲಿ ವಾಸವಾಗಿದ್ದರಿಂದ ಗಡ್ಡಿ ಎಂಬ ಹೆಸರು ಬಂದಿತು. ಗಡ್ಡಿಲಿಂಗನಾಯಕನು ಗುಡಗುಂಟಿಯ ಮೂಲಪುರುಷನಾದನು. ಗಡ್ಡಿಪಿಡ್ಡನಾಯಕನು ಬಿಜಾಪುರ ಮಹ್ಮದ್ ಆದಿಲ್ ಶಾಹನಿಂದ ಕ್ರಿ.ಶ.೧೬೩೯ರಲ್ಲಿ ತಾಳಿಕೋಟೆ ಮತ್ತು ಕೊಡೇಕಲ್ ಸರದೇಶಗತಿ ಸಂಪಾದಿಸುವುದರೊಂದಿಗೆ ಸುರಪುರ ಸಂಸ್ಥಾನವನ್ನು ಸ್ಥಾಪಿಸಿದನು. ಈತ ಇಪ್ಪತ್ತೆರಡು ಜಮೀನುದಾರರಿಂದ ಕಪ್ಪಕಾಣಿಕೆಗಳನ್ನು ಒಪ್ಪಿಕೊಂಡು ವೈಭವದ ಆಳ್ವಿಕೆ ನಡೆಸಿದನು.[೬೬]

ಕ್ರಿ.ಶ.೧೬೩೫ರಲ್ಲಿ ಮೊಗಲ್ ಸರದಾರರು ಬಿಜಾಪುರದ ಮೇಲೆ ದಂಡೆತ್ತಿ ಬಂದು, ಡೋಣಿ ಎಂಬ ಪ್ರದೇಶವನ್ನು ಲೂಟಿ ಮಾಡುತ್ತಿದ್ದಾಗ ಪಿಡ್ಡನಾಯಕ ಮೊಗಲ್ ಸರದಾರರನ್ನು ಹಿಮ್ಮೆಟ್ಟಿಸುತ್ತಾನೆ. ಬಿಜಾಪುರದ ಬಾದಶಹನಿಗೆ ಸಂತೋಷವಾಗಿ ಈತನ ಧೈರ್ಯವನ್ನು ಮೆಚ್ಚಿ ಕ್ರಿ.ಶ.೧೬೩೮-೩೯ರಲ್ಲಿ ಪಿಡ್ಡನಾಯಕನಿಗೆ ತಾಳಿಕೋಟೆಯ ಸರದೇಶಗತಿ, ಕೊಡೇಕಲ್ ಸಮತಿನ ಮೌಜೆಹಗರಟಗಿ ಹೇರೂರ ಸಮತಿನ ಮಾರನಭಾವಿ ಕಸಬೆಯನ್ನು ಇನಾಮಾಗಿ ನೀಡುತ್ತಾನೆ.

ವಾಗಿನಗೇರಿಯಲ್ಲಿ ಬೃಹತ್ ಕೋಟೆಯನ್ನು ನಿರ್ಮಿಸಿ ೫೦೦ ಕುದುರೆ, ೪೦೦೦ ಕಾಲಾಳುಗಳೊಡನೆ ಸಗರನಾಡಿನ ಕೇಂದ್ರಕೋಟೆಯಾದ ಶಹಪುರ ಕಿಲ್ಲೆಯನ್ನು ಬಿಜಾಪುರ ಆದಿಲ್‌ಶಾಹಿ ಕಿಲ್ಲೆದಾರನಿಂದ ಕಸಿದುಕೊಂಡನು.[೬೭] ಇದನ್ನು ತಿಳಿದ ಬಿಜಾಪುರ ಬಾದಶಹ ಪಿಡ್ಡನಾಯಕನ ಸೊಕ್ಕನ್ನು ಮುರಿಯಲು ಸರದಾರರೊಂದಿಗೆ ಸೈನ್ಯವನ್ನು ಕಳುಹಿಸಿದ. ಆಗ ಪಿಡ್ಡನಾಯಕ 'ಅಗ್ನಿ' ಎಂಬ ಸ್ಥಳದಲ್ಲಿ ಅವನನ್ನು ಸೋಲಿಸಿದ. ನಂತರ ಬಾದಷಹ ಈತನನ್ನು ಕೊಲ್ಲಲು ಆಲೋಚಿಸಿ, 'ಮದ್ದಾನೆಯ ಕಾಳಗ' ಏರ್ಪಡಿಸುತ್ತಾನೆ. ಆಗ ಪಿಡ್ಡನಾಯಕ ಮದವೇರಿದ ಆನೆಯ ಸೊಕ್ಕು ಮುರಿದ ಎಂಬ ಐತಿಹ್ಯವಿದೆ. ಮದ್ದಾನೆಯ ಕಾಳಗದಲ್ಲಿ ವಿಜಯ ಹೊಂದಿದ ಈ ಪಿಡ್ಡನಾಯಕನಿಗೆ 'ಮದಗಜಮಲ್ಲ'ನೆಂಬ ಬಿರುದನ್ನಿತ್ತು ಸಗರ ನಾಡಿನ ದೇಸಾಯಿತನವನ್ನು ವಹಿಸಿಕೊಟ್ಟು ಸ್ನೇಹಪರನಾಗಿ ಉಳಿದನು.[೬೮] ಅಂದು ಪಿಡ್ಡನಾಯಕನಿಗೆ ಗೌರವಾರ್ಥವಾಗಿ ಕೊಟ್ಟನೆಂದು ಹೇಳಲಾದ ಗದೆ ಸುರಪುರದ ಅರಮನೆಯಲ್ಲಿ ಈಗಲೂ ಕಾಣಬಹುದಾಗಿದೆ.

ಕ್ರಿ.ಶ.೧೬೪೮ರಲ್ಲಿ ಈತನಿಗೆ ಬಿಜಾಪುರದ ಆದಿಲ್ ಶಾ ಮಾಮಲೇನಸರತಾಬಾದ, ಮೇಲಿನ ಸರದೇಸಗತಿ ಅಧಿಕಾರದ ಸನದು ನೀಡಿ ಗೌರವಿಸುತ್ತಾನೆ.[೬೯] 'ಗಜದಂಡಬಹರಿಪಿಡ್ಡನಾಯಕ' ಎಂಬ

ಬಿರುದನ್ನು ಹೊಂದಿದ ಈತನಿಗೆ ಆನೆ, ೫೦ ಕೊತ್ತಲ ಕುದುರೆ, ಪಾಲ್ಕಿ, ಆಪ್ತ ಬಗಿರಿ, ಸಿರಪಟ್ಟ, ಡಂಕಾ, ಒಂಟಿ, ರೂಲಿ, ಹಜಾರಿ. ಮನಸಬು, ನವಲಿ, ಚಿತಾಪುರ ಪಾಲ್ಕಿಮಾನ್ಯ ಹಾಗೂ ಬಿಜಾಪುರದ ಪ್ರಾಂತ್ಯದ ಸರದೇಶಗತಿಗಳನ್ನೆಲ್ಲಾ ಪಿಡ್ಡನಾಯಕನ ಹೆಸರಿನಲ್ಲಿ ಆದಿಲ್ ಶಾ ಸಾರಿದನು.[೨೦]

ಕ್ರಿ.ಶ.೧೬೫೬ರಲ್ಲಿ ಬಿಜಾಪುರದ ಬಾದಷಹ ಮಹ್ಮದ್ ಆದಿಲ್ ಶಾ ತೀರಿದ ನಂತರ ರಾಜ್ಯದಲ್ಲಿ ಅಂತಃಕಲಹ ಪ್ರಾರಂಭವಾದವು. ಆಗ ಮೊಗಲ್‌ರ ಔರಂಗಜೇಬನು ದಕ್ಷಿಣಕ್ಕೆ ಧಾಳಿಯಿಡುತ್ತಾನೆ. ಬಿಜಾಪುರದ ಆದಿಲ್‌ಶಾಹಿಗಳನ್ನು ಶಿಥಿಲಗೊಳಿಸುತ್ತಾನೆ. ಬಿಜಾಪುರದವರು ಮೊಗಲರ ವಿರುದ್ಧ ಹೋರಾಡಲು ಪಿಡ್ಡನಾಯಕನನ್ನು ಆಹ್ವಾನಿಸುತ್ತಾರೆ. ಪಿಡ್ಡನಾಯಕ ಆ ಯುದ್ಧದಲ್ಲಿ ಭಾಗವಹಿಸಿದಾಗ ಔರಂಗಜೇಬ ಪಿಡ್ಡನಾಯಕನಿಗೆ ಪತ್ರವೊಂದನ್ನು ಬರೆದನು. ಅದು ಇಂದಿಗೂ ಸುರಪುರದ ಅರಮನೆಯಲ್ಲಿದೆ. ಅದರ ಸಾರಾಂಶ ಇಂತಿದೆ :



"ನೀನು ಮುಸಲ್ಮಾನನಾಗಿದ್ದರೆ ನಮ್ಮ ಧರ್ಮಬಂಧುವಾಗಿರುತ್ತಿದ್ದಿ, ಸುರಕ್ಷಿತವಾಗಿರುತ್ತಿದ್ದಿ, ಪತನವಿಲ್ಲದ ಸಂಕಟದಿಂದ ಮತ್ತು ಅನೇಕ ಶತ್ರುಗಳಿಂದ ಸಂರಕ್ಷಿಸಲ್ಪಡುತ್ತಿದ್ದಿ, ಆದರೆ ನೀನು ಮುಸಲ್ಮಾನನಾಗಿಲ್ಲವೆಂಬುದು ಖೇದದ ಸಂಗತಿಯಾಗಿದೆ. ಶ್ರೇಷ್ಠನಾದ ಮತ್ತು ಕೃಪಾಪಾತ್ರನಾದ ಪಿಡ್ಡನಾಯಕನೇ ಬಾದಶಾಹನ ಕೃಪೆಯಾದುದಕ್ಕೆ ಅಭಿಮಾನವನ್ನು ತಾಳಿ, ಅರಿತುಕೊಳ್ಳುವುದೇನೆಂದರೆ ಈಗಿನ ಕಾಲದಲ್ಲಿ ಪೃಥ್ವೀಪತಿಯು ಕೃಪೆಯುಳ್ಳವನಾಗಿ ಆ ಶ್ರೇಷ್ಠನಾದವನ ತಪ್ಪುಗಳನ್ನು ಕ್ಷಮಿಸಿ, ನಸರತಾಬಾದದ ಸರದೇಶಗತಿಯನ್ನು ಪೂರ್ವದಿಂದ ನಡೆದು ಬಂದಂತೆ ನಡೆಯಿಸಲಾಗುವುದೆಂದು ರಾಜಾಜ್ಞೆಯಾಗಿದೆ. ಕಾರಣ ಬಾದಶಾಹನ ಅನುಗ್ರಹವನ್ನು ಆಪೇಕ್ಷೆಯುಳ್ಳವನಾಗಿ ತನ್ನ ಮಗನಾದ ಪಾಮನಾಯಕನನ್ನು ನಮ್ಮ ಸನ್ನಿಧಿಗೆ ಕಳುಹಿಸಿ ಬಾದಶಾಹನಿಂದ ಅನುಗ್ರಹ ಮತ್ತು ಮನಸಬಗಳಿಂದ ಮರ್ಯಾದಿತನಾಗಬೇಕು. ಪವಿತ್ರವಾದ ರಮಜಾನ-೪ ಜಲೂಸಿನ ೧ನೇ ವರ್ಷ.[೨೧] ಈ ಪತ್ರವು ಪಿಡ್ಡನಾಯಕನ ಶೌರ್ಯ ಸಾಹಸಕ್ಕೆ ಹಿಡಿದ ಕನ್ನಡಿಯಾಗಿದೆ.

ಔರಂಗಜೇಬನ ಆಕ್ರಮಣ ಹಾಗೂ ಶಿವಾಜಿಯ ಲೂಟಿಯಿಂದ ಬಿಜಾಪುರ ತತ್ತರಿಸಿ ಹೋದಾಗ ನೆರವಿಗೆ ನಿಂತವರು ಪಿಡ್ಡನಾಯಕ ಮತ್ತು ಈತನ ಮಗನಾದ ಪಾಮನಾಯಕ. ವೈರಿಗಳಿಂದ ಈತ ಮಿರಜ್ ಪ್ರಾಂತವನ್ನು ದಕ್ಕಿಸಿಕೊಟ್ಟದ್ದಕ್ಕಾಗಿ, ತಾಳಿಕೋಟೆ ಪರಗಣೆ, ನಾಲತ್ವಾಡದ ಪರದೇಶಗತಿ ಹಾಗೂ ಕೊಡೇಕಲ್‌ಸಮತಿನ ಸರದೇಶಗತಿಯನ್ನು ಆದಿಲ್ ಶಾ ಕ್ರಿ.ಶ.೧೬೪೫ರಲ್ಲಿ ಪಿಡ್ಡನಾಯಕನಿಗೆ ವಂಶಪಾರಂಪರ್ಯವಾಗಿ ನೀಡುತ್ತಾನೆ. ಕ್ರಿ.ಶ.೧೬೬೦ರಲ್ಲಿ ಅರಕೇರಿ ಸಮತಿನ ಹೇಮನೂರನ್ನು ಪೂರ್ವದಂತೆ ಪಿಡ್ಡನಾಯಕನ ಒಡೆತನಕ್ಕೆ ಒಪ್ಪಿಸಲಾಗಿದೆ ಎಂದು ನಸರತಾಬಾದಿನ ಹವಾಲ್ದಾರ ಮತ್ತು ಅಧಿಕಾರಿಗಳಿಗೆ ಅಲಿ ಆದಿಲ್ ಶಾ ಸೂಚಿಸಿದನು.[೨೨] ಹೀಗೆ ಆದಿಲ್ ಶಾಹಿಗಳಿಗೆ ಒಮ್ಮೆ ಸೈನ್ಯಶಕ್ತಿ ತೋರಿಸಿ, ಇನ್ನೊಮ್ಮೆ ಸೈನ್ಯ ಸಹಾಯ ನೀಡಿ ಅನೇಕ ಜಹಗೀರುಗಳನ್ನು ಗಳಿಸಿಕೊಂಡನು.[೨೩]

ಈತನ ತರುವಾಯ ಈತನ ದತ್ತುಪುತ್ರ ಹಸರಂಗಿ ಪಾಮನಾಯಕ(ಕ್ರಿ.ಶ.೧೬೬೬-೧೬೮೭)ನು ಅಧಿಕಾರಕ್ಕೆ ಬಂದ. ಈತ ತನ್ನ ತಂದೆಯ ಪಾಲಿನ ಸರದೇಶಗತಿಗಳನ್ನು ಸಂರಕ್ಷಿಸುತ್ತಾ ತಂದೆಯ ಜಹಗೀರುಗಳೆಲ್ಲ ತನ್ನ ಹೆಸರಿಗೆ ವರ್ಗಾಯಿಸಿಕೊಳ್ಳುವಲ್ಲಿ ಆದಿಲ್‌ಶಾಹಿ ಅರಸನಿಂದ ಸಾಮಂತನಾಗಿ ಸನದು ಸ್ವೀಕರಿಸಿದನು.[೭೪] ನಂತರ ಆತನಿಂದ ಅನೇಕ ಸನದುಗಳನ್ನು ಸಂಪಾದಿಸಿದನಲ್ಲದೆ ಸರದೇಸಾಯಿ ಮಾಮಲೆ ನಸರತಾಬಾದ ಮತ್ತು ಸರಸರ ದೇಸಾಯಿಶಹರ ಅಹಸನಬಾದಿಯ ಅಧಿಕಾರ ಧರಿಸಿದ ಹಸರಂಗಿ ಪಾಮನಾಯಕ ಬಿಜಾಪುರ ಬಾದಷಹನಲ್ಲಿ ಮನವಿಯೊಂದನ್ನಿರಿಸಿ "ದೇವದುರ್ಗ ಕಿಲ್ಲೆಯ ಪೂರ್ವಕ್ಕಿರುವ ಮಹತ್ವಪೂರ್ಣ ಪ್ರದೇಶವಾಗಿದ್ದ ಇದರ ಕೆಳಗಿನ ಹಳ್ಳಿಗಳನ್ನು ಕನಕಗಿರಿಯ ಉಡಚನಾಯಕ ಕಸಿದುಕೊಂಡು ಇಲ್ಲಿಯ ಜನರಿಗೆ ಬಹುವಾಗಿ ಕಷ್ಟಕೊಟ್ಟಿದ್ದಾನೆ. ಕಾರಣ ತಮ್ಮ ದೌಲತ್ತಿನ ಹಿತಚಿಂತಕನು ಸಾಮಂತನು ಆದ ನನಗೆ ಅಹಸನಾಬಾದ ನಸರತಾಬಾದ್, ದೇವದುರ್ಗ ಕೆಳಗಿನ ಎಲ್ಲಾ ಹಳ್ಳಿಗಳನ್ನು ದಯಪಾಲಿಸಬೇಕೆಂದು, ಇದಕ್ಕೆ ಪ್ರತಿಯಾಗಿ ವಾರ್ಷಿಕ ಐದುಸಾವಿರ ಹೊನ್ನು ನಜರಾಣಿ ನೀಡುವೆನೆಂದು ವಿನಂತಿಸಿದನು. ಪಾಮನಾಯಕನ ಮನವಿಯ ಮೇರೆಗೆ ಬಾದಶಹ ೧೦೮೫ನೇ ಹಿಜರಿ ಶಬಾನಸನ್ ೩ನೆಯ ತಾರೀಖಿನಂದು ಫರ್ಮಾನು ಹೊರಡಿಸಿ ವಂಶ ಪಾರಂಪರ್ಯವಾಗಿ ಮೇಲ್ಕಾಣಿಸಿದ ಇನಾಮ ನೀಡಿ ಮನ್ನಿಸಿದನು.[೭೫]

ಹಾಗೆಯೇ ೧೦೮೬ನೆಯ ಹಿಜರಿ ಸಫರಸನ್ ೧ನೆಯ ತಾರೀಖಿನಂದು ೧೦೮೬ನೇ ಹಿಜರಿ ೭ನೆಯ ರಖಿಲಾವಲ್‌ದಂದು ೧೦೮೬ನೆಯ ಹಿಜರಿ ೧ನೆಯ ರಬಿ ಅಸ್ಸಾನಿಯಲ್ಲಿ ಕ್ರಿ.ಶ.೧೬೭೪ರಲ್ಲಿ ಸನದುಗಳನ್ನು ಆದಿಲ್‌ಶಾಹಿಯಿಂದ ಪಡೆದನು. ತನ್ನ ಅಧಿಕಾರವನ್ನು ವಿಸ್ತರಿಸಿಕೊಂಡನು.

ಶಹಪುರಕಿಲ್ಲೆಯು ಪಾಮನಾಯಕನ ಅಧೀನದಲ್ಲಿತ್ತು. ಕ್ರಿ.ಶ.೧೬೮೦ರ ಫೆಬ್ರವರಿ ೨೦, ೨೧ರಂದು ಈ ಕಿಲ್ಲೆಯ ಮೇಲೆ ಔರಂಗಜೇಬನ ಸರದಾರ ದಿಲೇರಖಾನ್ ಭೀಕರವಾಗಿ ಆಕ್ರಮಣ ಮಾಡಿದರೂ ಪ್ರಯೋಜನವಾಗಲಿಲ್ಲ. ಪಾಮನಾಯಕನ ಸೈನ್ಯದ ಭಾರೀ ಹೊಡೆತ ತಾಳದೆ ಮೊದಲನೆ ದಿನ ಹಿಂದಿರುಗಿದ. ಮತ್ತೆ ಮರುದಿನ ಕಿಲ್ಲೆಯನ್ನು ಮುತ್ತಿದಾಗ ಪಾಮನಾಯಕನ ಹನ್ನೆರಡು ಸಾವಿರ ನುರಿತ ಬೇಡ ಪಡೆ ಗುರಿತಪ್ಪದೆ ಗುಂಡಿನ ಸುರಿಮಳೆಗೈದರು. ಈ ಅಕ್ರಮಣದಿಂದ ಮೊಗಲ್ ಸೈನ್ಯ ತತ್ತರಿಸಿ ಹೋಯಿತು. ದಿಲೇರಖಾನ್ ಪಾಮನಾಯಕನಿಂದ ಜೀವಭಿಕ್ಷೆ ಪಡೆದು ಪಾರಾಗುತ್ತಾನೆ. ಹೀಗೆ ಚಿಕ್ಕ ಸಂಸ್ಥಾನದ ರಾಜನಿಂದ ಸಂಪೂರ್ಣ ಸೋಲನ್ನು ಮೊಗಲ್ ಸೈನ್ಯ ಅನುಭವಿಸಿತು.

ಮತ್ತೆ ಮೊಗಲರು ಬಿಜಾಪುರದ ಮೇಲೆ ಮರುಧಾಳಿಗೈದರು. ಶರಣಾಗತನಾದ ಸಿಕಂದರ ಕ್ರಿ.ಶ. ೧೩೪೭ರಲ್ಲಿ ಬಿಜಾಪುರವನ್ನು ಮೊಗಲರಿಗೆ ಸ್ವಾಧೀನಪಡಿಸಿದನು.[೭೬] ಇದರಿಂದ ಆದಿಲ್‌ಶಾಹಿ ಸಾಮ್ರಾಜ್ಯವೆಲ್ಲ ಮೊಗಲರ ಒಡೆತನಕ್ಕೆ ಒಳಪಟ್ಟಿತು. ಅವರ ಆಡಳಿತದ ಒಂದು ಸುಭೆಯಾಗಿ ಪರಿಣಮಿಸಿತು. ಆಗ

ರಾಜ್ಯದ ಅನೇಕ ಸಣ್ಣಪುಟ್ಟ ಪಾಳೆಯಗಾರರು ಸ್ವಾತಂತ್ರ್ಯ ಘೋಷಿಸಿಕೊಂಡು ಸ್ವಂತ ಅಸ್ತಿತ್ವ ಸ್ಥಾಪಿಸಿದರು.[೭೭]

ಇನ್ನುಳಿದವರು ಮೊಗಲರ ಸಾಮಂತಿಕೆ ಒಪ್ಪಿಕೊಂಡರು. ಅದರಲ್ಲಿ ಪಾಮನಾಯಕನೂ ಒಬ್ಬ. ಕ್ರಿ.ಶ.೧೬೮೭ರಲ್ಲಿ ಸಗರದುರ್ಗ ಸಮೇತ ಮೊಗಲರ ಪ್ರಭುತ್ವದ ಅಡಿಯಲ್ಲಿ ಆಳ್ವಿಕೆ ಆರಂಭಿಸಿದನು. ಆದರೆ ಸಾಮಂತಿಕೆ ಒಪ್ಪಿಕೊಂಡ ಐದನೆಯ ದಿನದಲ್ಲಿ ಪಾಮನಾಯಕನು ಅನಿರೀಕ್ಷಿತ ಸಾವಿಗೆ ಗುರಿಯಾದನು. ನಂತರ ಗುಡಗುಂಟಿಯ ಅನ್ನದಾನಿ ಸೋಮಪ್ಪನಾಯಕನ ಮಗ ಪಿಡ್ಡನಾಯಕನನ್ನು ದತ್ತಕ ತೆಗೆದುಕೊಳ್ಳಲಾಯಿತು.

ಪೀತಾಂಬರಿ ಬಹರಿ ಪಿಡ್ಡನಾಯಕ(ಕ್ರಿ.ಶ.೧೬೮೭-೧೭೨೬)ನು ಅಧಿಕಾರಕ್ಕೆ ಬಂದಾಗ ಈತನ ಪೂರ್ವೋತ್ತರ ಪ್ರದೇಶವೆಲ್ಲ ಔರಂಗಜೇಬನ ಅಧಿಕಾರವನ್ನು ಒಪ್ಪಿಕೊಂಡಿತ್ತು. ಇದೇ ಸಂದರ್ಭದಲ್ಲಿ ಕ್ರಿ.ಶ.೧೬೮೯ರಲ್ಲಿ ಮರಾಠರ ಸಂಭಾಜಿ ಮೊಗಲರ ಖೈದಿಯಾದ. ಆಗ ಮರಾಠ ಸರದಾರರೆಲ್ಲ ಮೊಗಲರ ವಿರುದ್ಧ ಸಿಡಿದೆದ್ದರು.[೭೮] ಇವರನ್ನು ಮಟ್ಟಹಾಕಲು ಔರಂಗಜೇಬ ಸರದಾರ ಸರ್ಜಾಖಾನನನ್ನು ಕಳುಹಿಸಿದ. ಸರ್ಜಾಖಾನ ಸೋತನು. ಈತನ ಮಗ ಗಾಲಿಬನು ತಂದೆಗಾದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಮೊಗಲರ ಸೇನೆಯೊಂದಿಗೆ ಧಾವಿಸಿ ಬಂದನು. ಮರಾಠ ಸರದಾರರು ಸೈನ್ಯಶಕ್ತಿಯಿಲ್ಲದೆ ವಾಗಿನಗೇರಿಯ ಪೀತಾಂಬರ ಪಿಡ್ಡನಾಯಕನಿಗೆ ಮೊರೆಹೋದಾಗ, ಮರಾಠರಿಗೆ ಸಹಾಯ ಮಾಡುತ್ತಾನೆ. ಆಗ ಪಿಡ್ಡನಾಯಕನು ಘನಘೋರ ಯುದ್ಧದಲ್ಲಿ ಭಾಗವಹಿಸುತ್ತಾನೆ. ಏರಿ ಬಂದ ಮೊಗಲರ ರುಸ್ತುಂಖಾನನನ್ನು ಸೋಲಿಸಿ, ಮೊಗಲ ಸೈನ್ಯವೆಲ್ಲ ರಣರಂಗದಿಂದ ಪಲಾಯನ ಮಾಡುವಂತೆ ಮಾಡಿದನು.[೭೯]

ಪಿಡ್ಡನಾಯಕನು ಔರಂಗಜೇಬನ ಆಧಿಪತ್ಯವನ್ನು ಧಿಕ್ಕರಿಸಿ, ತಂದೆ ಪಾಮನಾಯಕ ಸಂಪಾದಿಸಿದ್ದ ರಾಜ್ಯದ ಮೇಲೆ ಸ್ವಾತಂತ್ರ್ಯ ಸಾರಿದ. ಆಗ ಔರಂಗಜೇಬನು ತನ್ನ ಮಗ ಕಾಮಭಕ್ಷನನ್ನು ಯುದ್ಧಕ್ಕೆ ಕಳುಹಿಸುತ್ತಾನೆ. ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಎರಡನೆಯ ಬಾರಿಗೂ ಆತ ಸೋಲನ್ನು ಅನುಭವಿಸಿದ. ಈ ಸೋಲುಗಳನ್ನು ಸಹಿಸದ ಔರಂಗಜೇಬನು ತನ್ನ ಇನ್ನೋರ್ವ ಮಗನಾದ 'ಅಜಮ'ನನ್ನು ಕಳುಹಿಸಿದನು. ಈತನಿಂದ ಒಂದು ವರ್ಷದವರೆಗೆ ವಾಗಿನಗೇರಿ ಸುತ್ತಮುತ್ತಲಿನ ಪ್ರದೇಶ ಧ್ವಂಸಗೊಂಡಿತು. ಆಗ ಪಿಡ್ಡನಾಯಕ ಸಂಧಾನ ಬಯಸಿದನು. ಎರಡು ಲಕ್ಷ ನಾಣ್ಯ ಕಾಣಿಕೆ ಕೊಡಲು ಒಪ್ಪಿಕೊಂಡನು.[೮೦]

ನಂತರ ಈ ಪೂರ್ವದಲ್ಲಿ ಆದಿಲ್‌ಶಾಹಿಗಳಿಗೆ ಸಲ್ಲಿಸಿದಂತೆ ಕಂದಾಯದ ಎಲ್ಲಾ ಬಾಬತ್ತುಗಳನ್ನು ತಮಗೂ ನೀಡಬೇಕೆಂದು ಔರಂಗಜೇಬ ಫರ್ಮಾನು ಹೊರಡಿಸಿದಾಗ ಪಿಡ್ಡನಾಯಕ ಇದನ್ನು ಒಪ್ಪದೆ ಕ್ರಿ.ಶ.೧೬೯೬ರಲ್ಲಿ ಮೊಗಲರ ವಿರುದ್ಧ ಸ್ವಾತಂತ್ರ್ಯ ಘೋಷಿಸಿದ. ಇದನ್ನರಿತ ಔರಂಗಜೇಬನು ಸತಾರೆ,

ಪಾರ್ಲಿ ಪನ್ಹಾಳಗಡ, ವಿಸಾಳಗಡ, ಕೊಂಡಾನಾ, ತೋರಖಾ ಮುಂತಾದ ದುರ್ಗಗಳನ್ನು ಗೆಲ್ಲುತ್ತಾ ಹೊರಟ. ಔರಂಗಜೇಬ ಅದೇ ಮಾರ್ಗವಾಗಿ ಕ್ರಿ.ಶ.೧೭೦೫ರಲ್ಲಿ ಸಗರನಾಡು ಪ್ರವೇಶಿಸಿದನು.[೬೧]

ವಾಗಿನಗೇರಿ ಕೋಟೆಯನ್ನು ಈತನ ಸೈನ್ಯ ಸುತ್ತುವರಿಯಿತು. ಪಿಡ್ಡನಾಯಕನ ಬೇಡಪಡೆಯಿಂದ ತುಬಾಕಿಗಳ ಗುಂಡುಗಳು ರಭಸವಾಗಿ ಸಿಡಿದವು. ಬಾಣ, ಕವಣಿಕಲ್ಲುಗಳು ತೂರಿಬಂದವು. ಇದರ ರಭಸಕ್ಕೆ ಮೊಗಲರ ಆನೆ, ಕುದುರೆಗಳು ನೆಲ ಕಚ್ಚಿದವು. ಹಾಗೆಯೇ ಯುದ್ಧ ಮುಂದುವರೆಯಿತು. ಪಿಡ್ಡನಾಯಕನೊಂದಿಗಿದ್ದ ಕೆಲವು ಮರಾಠ ಸರದಾರರು ತಮ್ಮ ಜೀವದ ಮೇಲಿನ ಆಸೆಗಾಗಿ ಹಾಗೂ ಔರಂಗಜೇಬನ ಹಣದ ಆಸೆಗಾಗಿ ಸಂಬಂಧವನ್ನೇ ಈ ಯುದ್ಧದಲ್ಲಿ ಕಡಿದುಕೊಂಡರು.[೬೨] ಮೊಗಲರಿಂದ ಬರುವ ಭಯಂಕರ ಹೊಡೆತಕ್ಕೆ ಪಿಡ್ಡನಾಯಕರ ಸೈನ್ಯ ತತ್ತರಿಸಿತು. ದೀರ್ಘ ದಾಳಿ ಎದುರಿಸದೆ ಪಿಡ್ಡನಾಯಕನು ಪಲಾಯನ ಮಾಡಿದ. ವಾಗಿನಗೇರಿ ಕೋಟೆಯು ಔರಂಗಜೇಬನ ವಶವಾಯಿತು.[೬೩]

ಪಿಡ್ಡನಾಯಕನು ಗುಡಗುಂಟಿ ಮಾರ್ಗವಾಗಿ ಕನಕಗಿರಿ ನಾಯಕರ ಅಧೀನದ ಎಮ್ಮಿಗುಡ್ಡದಲ್ಲಿ ಒಂದು ವರ್ಷ ಇದ್ದು, ಸೈನ್ಯ ಸಂಘಟಿಸಿಕೊಂಡು ಮರಳಿ ವಾಗಿನಗೇರಿಗೆ ನುಗ್ಗಿದನು. ಅಲ್ಲಿದ್ದ ಮೊಗಲ ಸರದಾರರು ಬೇಡಪಡೆಯ ಹೊಡೆತಕ್ಕೆ ದಿಕ್ಕೆಟ್ಟು ಓಡಿದರು. ಆರು ವರ್ಷಗಳವರೆಗೆ ಕೈಬಿಟ್ಟು ಹೋಗಿದ್ದ ವಾಗಿನಗೇರಿ ಕಿಲ್ಲೆ ಮರಳಿ ಪಡೆಯುವ ಮೂಲಕ ಪಿಡ್ಡನಾಯಕನು ವಿಜಯದ ಹನುಮಧ್ವಜ ಹಾರಿಸಿದನು.[೬೪] ವಾಗಿನಗೇರಿ ಕೋಟೆ ಮೊಗಲರ ಧಾಳಿಗೆ ಧ್ವಂಸಗೊಂಡಿತು. ಹೀಗಾಗಿ ಪಿಡ್ಡನಾಯಕ ವಾಗಿನಗೇರಿ ಕೋಟೆಯನ್ನು ಬಿಟ್ಟು ಕ್ರಿ.ಶ.೧೭೦೭ರಲ್ಲಿ ಸುರಪುರವನ್ನು ನಿರ್ಮಿಸುವ ಮೂಲಕ ಬಹಿರಿ ಪಿಡ್ಡನಾಯಕ ಕೀರ್ತಿಗೆ ಪಾತ್ರನಾದ. ಇದರ ಮೂಲಕವೇ ಸಗರನಾಡಿನ ಆಡಳಿತ ನಡೆಸಲು ನಾಂದಿ ಹಾಡಿದಾಗ ಇದಕ್ಕೆ ರಾಜಧಾನಿಯ ಪಟ್ಟ ಸಿಕ್ಕಿತು.[೬೫]

ಕ್ರಿ.ಶ.೧೭೨೬ರಲ್ಲಿ ಪಿಡ್ಡನಾಯಕನು ಮೃತನಾದನು. ತರುವಾಯ ಈತನ ಹಿರಿಯ ಮಗ ಇಮ್ಮಡಿ ಪಾಮನಾಯಕ ಕ್ರಿ.ಶ.೧೭೨೭ರಲ್ಲಿ ಪಟ್ಟವೇರಿದನು. ಈತನ ಕಾಲಕ್ಕೆ ಭಾರತದ ಆಳ್ವಿಕೆಯಲ್ಲಿ ಬಹಳಷ್ಟು ಬದಲಾವಣೆಯ ಗಾಳಿ ಬೀಸಿದವು. ದಿಲ್ಲಿಯ ದೊರೆ ಔರಂಗಜೇಬನ ಅಂತ್ಯದಿಂದ ಅರ್ಧಭಾಗ ಅಭದ್ರಗೊಂಡ ಮೊಗಲರ ಮುಖಂಡತ್ವ ಸಂಪೂರ್ಣ ಶಿಥಿಲಗೊಂಡಿತು. ನೆಪಮಾತ್ರಕ್ಕೆ ಮೊಗಲರಲ್ಲಿ ಸಾಮಂತಿಕೆ ಒಪ್ಪಿದ ನಿಜಾಮ ದಕ್ಷಿಣದಲ್ಲಿ ಸ್ವತಂತ್ರನಾದ. ಪಶ್ಚಿಮದಲ್ಲಿ ಮರಾಠ ಪೇಶ್ವೆಗಳು ಪ್ರಾಬಲ್ಯಕ್ಕೆ ಬಂದರು.[೬೬] ಇದರಿಂದ ದಕ್ಷಿಣದ ಚಿಕ್ಕಪುಟ್ಟ ಸಂಸ್ಥಾನಗಳು ನಿಜಾಮನ ಅಧೀನಕ್ಕೊಳಪಟ್ಟವು. ಅದರಲ್ಲಿ ಸುರಪುರವೂ ಒಂದಾಯಿತು. ಹೀಗಾಗಿ ತನ್ನ ಸಂಸ್ಥಾನದ ಸುಭದ್ರತೆ ಮತ್ತು ಅಭಿವೃದ್ಧಿಗಾಗಿ ನಿಜಾಮನಿಗೆ ಪಾಮನಾಯಕ ಮರಾಠರೊಂದಿಗೆ ನಡೆದ ಯುದ್ಧದಲ್ಲಿ ಬೆಂಬಲಿಸಿ ೪೦೦೦ ಸೈನ್ಯದೊಂದಿಗೆ ತೆರಳಿ ಜಯ ತಂದುಕೊಟ್ಟನು.

ನಿಜಾಮನ ಒಡೆತನದ ಮುದಗಲ್ಲಿನ ತೊದ್ದಪ್ಪರೆಡ್ಡಿಯನ್ನು ಆನೆಗೊಂದಿ ಅರಸು ಸೋಲಿಸಿದಾಗ ಮತ್ತೆ ಮುದಗಲ್‌ನ್ನು ತೊದ್ದಪ್ಪರೆಡ್ಡಿಗೆ ಒದಗಿಸಿಕೊಟ್ಟಿದ್ದುದು ಹಾಗೂ ಕನಕಗಿರಿ ಅರಸ ಹಿರೇನಾಯಕ ಆ ಭಾಗದ ದೇಸಾಯಿ ಮತ್ತು ದೊರೆಗಳಿಗೆ ತೊಂದರೆ ಕೊಡುತ್ತಿದ್ದಾಗ ನಿಜಾಮನ ಕೋರಿಕೆಯಂತೆ ಪಾಮನಾಯಕ ಹಿರೇನಾಯಕನನ್ನು ಸೆರೆ ಹಿಡಿದುಕೊಟ್ಟನು.

ತಂದೆಯ ತರುವಾಯ ಮಗ ಮುಮ್ಮಡಿ ಪಿಡ್ಡನಾಯಕ ಕ್ರಿ.ಶ.೧೭೪೨ರಲ್ಲಿ ಅಧಿಕಾರಕ್ಕೆ ಬಂದನು. ಸುರಪುರ ಸಂಸ್ಥಾನದಲ್ಲಿಯೇ ಈತ ಅತ್ಯಂತ ಅಸಮರ್ಥ ಅರಸ. ೧೯೪೬ರಲ್ಲಿ ಮರಣ ಹೊಂದಿದನು. ತರುವಾಯ ಈತನ ತಮ್ಮನಾದ ಮೊಂಡಗೈ ವೆಂಕಟಪ್ಪನಾಯಕನು ಸಿಂಹಾಸನವೇರಿದ. ಈತ ಸೈನ್ಯ ಸಮೇತ ದಖನಿ ಸರ್ದಾರರೊಂದಿಗೆ ದಂಡೋಲೆ, ಚಿತಾಪೂರ, ಅರಲೂರ ಗ್ರಾಮಗಳನ್ನು ಗೆಲ್ಲುತ್ತ ಹೊರಟ. ವೆಂಕಟಪ್ಪ ನಾಯಕನ ವಿರುದ್ಧವೇ ಸಂಸ್ಥಾನದಲ್ಲಿ ಬೇಡರ ದಂಡು ದಂಗೆ ಎದ್ದಿತು. ವೆಂಕಟಪ್ಪ ನಾಯಕ ಯುದ್ಧಕ್ಕೆ ಹೋದಾಗ ಸ್ಥಳೀಯ ಮುಖಂಡರು ಬೇಡರನ್ನು ಹುರಿದುಂಬಿಸಿ ಗುಡಗುಂಟಿಯ ಸೋಮಸರ್ಜನಾಯಕನನ್ನು ಸುರಪುರದ ಅರಸರೆಂದು ಘೋಷಿಸಿದರು. ಒಂಬತ್ತು ತಿಂಗಳ ನಂತರ ಮೊಂಡಗೈ ವೆಂಕಟ್ಟಪ್ಪನಾಯಕ ಸುರಪುರಕ್ಕೆ ಮರಳಿ ಬಂದ ನಂತರ ಗುಡಗುಂಟಿಯ ಸೋಮಸರ್ಜ ನಾಯಕನಿಗೂ ಹಾಗೂ ಮೊಂಡಗೈ ವೆಂಕಟಪ್ಪನಾಯಕನಿಗೂ ಭೀಕರ ಹೋರಾಟ ಜರುಗಿ ನಂತರ ದೇವದುರ್ಗದ ಅರಸ ಕಿಲಚನಾಯಕರ ಮಧ್ಯಸ್ಥಿಕೆಯಿಂದ ವಾತಾವರಣ ತಿಳಿಯಾಯಿತು.

ಫ್ರೆಂಚ್ ಗೌರ್ನರ್ ಡೂಪ್ಲೆಯು ಹೈದ್ರಾಬಾದ್ ನಿಜಾಮನ ವಿರುದ್ಧ ಚಂದಾಸಾಹೇಬನನ್ನು ಎತ್ತಿಕಟ್ಟಿ ಪಾಂಡಿಚೇರಿ ಕಾಳಗಕ್ಕೆ ಕಾರಣವಾದಾಗ ವೆಂಕಟಪ್ಪನಾಯಕನು ಹೈದ್ರಾಬಾದ್ ನಿಜಾಮನ ಪಕ್ಷ ವಹಿಸಿ ತನ್ನ ೧೨ ಸಾವಿರ ಮೂಲ ಬಲಾಢ್ಯ ಬೇಡಪಡೆಯೊಂದಿಗೆ ವೆಂಕಟಪ್ಪನಾಯಕನು ನಾಸರಜಂಗನಿಗೆ ಬೆಂಬಲಿಸಿದನು.[೮೭]

ಈತನ ದಂಡಿನ ವಿಶೇಷತೆಯೆಂದರೆ ೯೦೦ ಕೋಟಗಾರರ ಕಟು ಧೈರ್ಯ, ಬೇಡ ಪಡೆಯ ಬಿಲ್ಲುಗಾರಿಕೆ. ಸುರಪುರ ಬಿಡುವಾಗ ಸಂಸ್ಥಾನದ ಕಾರ್ಯಭಾರವೆಲ್ಲ ರಮಣಪ್ಪನಾಯಕನಿಗೆ ವಹಿಸಿ ಪಾಂಡಿಚೇರಿ ಪ್ರದೇಶಕ್ಕೆ ಬಂದಿಳಿದ.[೮೮]

೯ ದಿನದ ಈ ಯುದ್ಧದಲ್ಲಿ ನಾಸರಜಂಗನ ೩೨೦೦೦ ಸೈನಿಕರು ಹತರಾದರು. ಅಲ್ಲಿಯವರೆಗೆ ಯುದ್ಧ ಮಾಡದೇ ಸುಮ್ಮನಿದ್ದ ವೆಂಕಟಪ್ಪನಾಯಕನ ಸೈನ್ಯ ಕಣಕ್ಕಿಳಿದು ಒಂದೇ ದಿನದಲ್ಲಿ ಪಾಂಡಿಚೇರಿ ಕಿಲ್ಲೆಯನ್ನು ಕೈವಶಮಾಡಿಕೊಂಡಿತು. ಆಗ ನಾಸರಜಂಗನು ವೆಂಕಟಪ್ಪನಾಯಕನಿಗೆ ಇನಾಮುಗಳನ್ನು ನೀಡಿದ್ದಲ್ಲದೆ 'ಬೇಡರ ಟಣಕೇದಾರಿ' ಎಂಬ ಹೊಸ ರಸೂಮನ್ನು ಎತ್ತಿಕೊಳ್ಳಲು ಅನುಮತಿಯಿತ್ತನು. ಇವೆಲ್ಲಕ್ಕಿಂತ ಹೆಚ್ಚಾಗಿ 'ಬಲವಂತ ಬಜಂಗಮತಹರುದ್ದೌಲಾ ಬಬರುಲ್ಮುಲಕ' ಎಂಬ ನೂತನ ಬಿರುದಿತ್ತು ಸನ್ಮಾನಿಸಿದನು.

ರಾಜಧಾನಿಯ ರಕ್ಷಣೆಗಾಗಿ ಹಾಗೂ ಸಂಸ್ಥಾನದ ವಿಸ್ತರಣೆಗಾಗಿ ವಿಶೇಷ ಯೋಜನೆಯನ್ನು ಕಾರ್ಯರೂಪಕ್ಕಿಳಿಸಿದನು. ಸುರಪುರಕ್ಕೆ ಸುತ್ತಲೂ ಐದು ಅಗಸಿ ಕಟ್ಟಿಸಿ, ಭದ್ರಬಾಗಿಲು ನಿರ್ಮಿಸಿ, ೯೦೦ ಸೈನಿಕರನ್ನು ಪಹರೆಗಿಟ್ಟನು. ಇನ್ನು ಸುರಪುರದ ಸುತ್ತಮುತ್ತ ಏಳು ಚೌಕಿಗಳು, ಮೂರು ಕಿಲ್ಲೆಗಳಿದ್ದವು. ಪ್ರತಿ ಕಿಲ್ಲೆಗೆ ಶತ್ರುಗಳ ದಮನಕ್ಕೆ ಸೈನ್ಯ, ಮದ್ದು, ಗುಂಡು ಸಂಗ್ರಹಿಸಲಾಗಿತ್ತು. ಈತನ ಕಾಲದಲ್ಲಿಯೇ ಸುರಪುರದ ಸೈನ್ಯವ್ಯವಸ್ಥೆ ಸುವ್ಯವಸ್ಥಿತಗೊಂಡಿತು.

ವೆಂಕಟಪ್ಪನಾಯಕ ರಾಜ್ಯದ ಕಾರ್ಯಭಾರದಲ್ಲಿದ್ದಾಗ ಸಂಸ್ಥಾನದ ಜವಾಬ್ದಾರಿಯನ್ನು ರಮಣಪ್ಪ ನಾಯಕನಿಗೆ ಒಪ್ಪಿಸಿದ. ಸಂಸ್ಥಾನವನ್ನು ಶಾಂತ ರೀತಿಯಿಂದ ಮುನ್ನಡೆಸಿದ ಶಾಂತ ಸ್ವಭಾವ ಮತ್ತು ಸಾಧುವೃತ್ತಿಗೆ ಹೆಸರಾದ ಈತ ನ್ಯಾಯನೀತಿಗಾಗಿ ಜನರ ಮನಸ್ಸು ಗೆದ್ದಿದ್ದ. ಈತನ ಮಗನಾದ ಮುಮ್ಮಡಿ ಪಾಮನಾಯಕನು ಕ್ರಿ.ಶ.೧೭೫೦ರಲ್ಲಿ ಪಟ್ಟಾಭಿಷೇಕಗೊಂಡನು. ಈ ಸಂದರ್ಭದಲ್ಲಿ ಹೈದ್ರಾಬಾದ ಪಟ್ಟದ ಅಧಿಕಾರ ಹಿಡಿದ ನಿಜಾಮ ಅಲಿಖಾನನು ಇಂಗ್ಲೀಷರ ಸಹಾಯದಿಂದ ಆಳ್ವಿಕೆ ಆರಂಭಿಸಿದ್ದ ಪೇಶ್ವೆಗಳು ಕ್ರಿ.ಶ.೧೭೬೦ರಲ್ಲಿ ಉದಗೀರ ಯುದ್ಧದಲ್ಲಿ ನಿಜಾಮ ಅಲಿಖಾನನನ್ನು ಎದುರಿಸಿದರು. ೬೦ ಲಕ್ಷ ಉತ್ಪನ್ನದ ನಿಜಾಂ ಪ್ರಾಂತ್ಯ ಪೇಶ್ವೆಗೆ ಬಿಟ್ಟುಕೊಡಬೇಕಾಯಿತು. ನಂತರದಲ್ಲಿ ಉದಗೀರ ಒಪ್ಪಂದವಾಯಿತು. ಆಗ ಸುರಪುರದವರು ತಮ್ಮ ಪ್ರದೇಶದ ಮೇಲೆ ಹಕ್ಕು ಚಲಾಯಿಸಬೇಕಾದರೆ ಪೇಶ್ವೆಗಳ ಅನುಮತಿ ಬೇಕಾಗಿತ್ತು. ಇಲ್ಲಿಯ ಕಂದಾಯ ಬಾಬ್ತುಗಳ ಉಸ್ತುವಾರಿಗಾಗಿ ಪೇಶ್ವೆ ಮಾಧವರಾಯರು ಕ್ರಿ.ಶ. ೧೭೬೫ರಲ್ಲಿ ಆನಂದರಾವ್ ಭಿಕಾಜಿರಾಸ್ತೆ ಎಂಬ ಸರ್ದಾರನನ್ನು ನೇಮಿಸಿದನು. ಅಂದಿನಿಂದಲೇ ಸುರಪುರದೊಂದಿಗೆ ಕಲಹ ಪ್ರಾರಂಭವಾಯಿತು.

ಪೇಶ್ವೆ ಹಾಗೂ ನಿಜಾಮರ ಸೈನ್ಯ ಸುರಪುರದ ಮೇಲೆ ಬಿತ್ತು. ನಿಜಾಮ ಹಮಿದುಲ್ಲಾಖಾನ ಬೇಡ ಪಡೆಯ ಹೊಡೆತಕ್ಕೆ ಹೆದರಿ ಓಡಿಹೋದ. ಆಗ ಸುದ್ದಿ ತಿಳಿದುಕೊಂಡ ನಿಜಾಮ ೧೦ ಸಾವಿರ ಕಾಲ್ದಳ ೪ ಸಾವಿರ ಕುದುರೆಸವಾರರೊಡನೆ ಸೋಹಿಬೇಗನನ್ನು ಪಾಮನಾಯಕನ ವಿರುದ್ಧ ಕಳಿಸಿದ. ಅವರೆಲ್ಲ ಸುರಪುರದ ಅನೇಕ ಗ್ರಾಮಗಳನ್ನು ಸುಲಿಗೆ ಮಾಡಿದರು. ಇದಕ್ಕೆ ಪ್ರತಿಯಾಗಿ ಪಾಮನಾಯಕ ಪೇಶ್ವೆಗಳ ಪಂಡರಪುರವನ್ನು ಸುಲಿಯುತ್ತಾನೆ. ಅನೇಕ ದಾಳಿ, ಲೂಟಿಗಳಾದ ಮೇಲೆ ಪಾಮನಾಯಕ ತತ್ತರಿಸಿ ಹೋದ. ಆಗ ಅಲ್ಲಿಯವರೆಗೆ ಆಗಿದ್ದ ಹಾನಿಯನ್ನು ತುಂಬಿಕೊಡಲು ನಿಜಾಂನಿಗೆ ವಚನ ಕೊಟ್ಟ. ಆಗ ಕ್ರಿ.ಶ.೧೭೬೭ರಲ್ಲಿ ನಿಜಾಮ ಪೇಶ್ವೆ ಮತ್ತು ಸುರಪುರದವರ ಮಧ್ಯ ಐತಿಹಾಸಿಕ ಒಪ್ಪಂದವಾಯಿತು. ಅದೇ 'ಪೇಶ್ವೆ ನಿಜಾಮ 'ಪೇಷಕಷ' ಎಂದು ಹೆಸರಾಗಿದೆ. ಇದರ ಪ್ರಕಾರ ಸುರಪುರ ಸಂಸ್ಥಾನ ನಿಜಾಮ ಸರಕಾರಕ್ಕೆ ೭೯,೧೬೬ ರೂ. ಮತ್ತು ಪೇಶ್ವೆಗಳಿಗೆ ೯೪.೦೦೦ರೂ. ಕೊಡಬೇಕೆಂದು ತೀರ್ಮಾನಿಸಲಾಯಿತು.[೮೯] ಅಂದಿನಿಂದ ಸುರಪುರ ಸಾಲಗಾರ ಸಂಸ್ಥಾನವಾಯಿತು. ಸಂಸ್ಥಾನದ ಆದಾಯಕ್ಕೆ ಬಲವಾದ ಹೊಡೆತ ಬಿದ್ದಿತು. ನಂತರದಲ್ಲಿ ಸ್ಥಳೀಯ ಸರದಾರರೇ ಪಾಮನಾಯಕನ ವಿರುದ್ಧ ಬಂಡೆದ್ದರು. ಕಾರಣ ಅವರಿಗೆ

ಸಂಸ್ಥಾನದಲ್ಲಿ ಸರಿಯಾದ ಗೌರವ ಪ್ರಾಪ್ತವಾಗಿರಲಿಲ್ಲ. ಇವರನ್ನೆಲ್ಲಾ ಅರಸ ಸೆರೆಹಿಡಿಸಿ, ಕಪ್ಪಲ ಬೆಂಚಿಯಲ್ಲಿ ಕೊಲ್ಲಿಸಿದನು. ಕೆಲವರು ಗುಡಗುಂಟೆಗೆ ಹೋಗಿ ಆಶ್ರಯದಾತರಾದಾಗ ಪಾಮನಾಯಕ ಗುಡಗುಂಟೆಗೆ ತೆರಳಿ ಆರೋಪಿಗಳನ್ನೆಲ್ಲ ಕರೆತಂದನು. ಹಾಗೆಯೇ ಸಂಸ್ಥಾನದ ಸಮಗ್ರ ಅಭಿವೃದ್ಧಿಗೆ ನೀಲನಕ್ಷೆ ಸಿದ್ಧಪಡಿಸಿದನಲ್ಲದೆ ಆರಾಧ್ಯದೈವ ವೇಣುಗೋಪಾಲ ಸ್ವಾಮಿಯ ಗುಡಿಯಲ್ಲಿ ಅನೇಕ ಜನರಿಗೆ ಉದ್ಯೋಗದ ಅವಕಾಶ ನೀಡಿದ. ಸಂಸ್ಥಾನದ ಅನೇಕರಿಗೆ ಜಾಗೀರು ಗ್ರಾಮಗಳನ್ನು ಹಾಕಿಕೊಟ್ಟನು.

ಇವನ ನಂತರದಲ್ಲಿ ಕ್ರಿ.ಶ.೧೭೭೩ರಲ್ಲಿ ಅಧಿಕಾರದ ಗದ್ದುಗೆ ಏರಿದವನು ಇವನ ಹಿರಿಯ ಮಗ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨). ಅಧಿಕಾರಾರೂಢನಾದ ವರ್ಷವೇ ಅನೇಕ ಸವಾಲುಗಳು ಈತನಿಗೆ ಎದುರಾದವು. ನಿಜಾಮನಿಗೆ ಕೊಡಬೇಕಾದ ಪೇಷಕಷ ಬಾಕಿ ಇತ್ತು. ಇನ್ನೊಂದೆಡೆಗೆ ಸಂಬಂಧಿಕರಾದ ಗುಡಗುಂಟಿ, ದೇವದುರ್ಗ, ಕನಕಗಿರಿಯವರ ಕಲಹಗಳೂ ಪ್ರಾರಂಭವಾದವು. ಒಂದೆಡೆ ನಿಜಾಮ, ಇನ್ನೊಂದೆಡೆ ಪೇಶ್ವೆ, ಇಂಗ್ಲೀಷರ ಅಧಿಕಾರವನ್ನು ಒಪ್ಪಿಕೊಳ್ಳಬೇಕಾದ ಸಂದರ್ಭವೂ ಇತ್ತು. ಇಂಥ ಸಂದರ್ಭದಲ್ಲಿ ಪೇಶ್ವೆಗಳು ರುಸುಮಿನ ಬಾಕಿಯನ್ನು ನೆಪಮಾಡಿಕೊಂಡು ಕ್ರಿ.ಶ.೧೭೭೯ರಲ್ಲಿ ಸೈನ್ಯದೊಂದಿಗೆ ಸಗರನಾಡನ್ನು ಪ್ರವೇಶಿಸಿದರು. ಇವರಿಂದ ಹಲವಾರು ಹಳ್ಳಿಗಳು ಲೂಟಿಯಾದವು. ಇಮ್ಮಡಿ ವೆಂಕಟಪ್ಪ ನಾಯಕ ಸೈನ್ಯದೊಂದಿಗೆ ತೆರಳಿ, ಪೇಶ್ವೆಗಳನ್ನು ಹಿಮ್ಮೆಟ್ಟಿಸಿದ. ಇದನ್ನು ತಿಳಿದ ನಿಜಾಮ ಸುರಪುರದೊಂದಿಗೆ ಸ್ನೇಹ ಬೆಳೆಸಿದ ಖರ್ಡೆಯ ಯುದ್ಧಕ್ಕಾಗಿ ಆತನಿಗೆ ಸೈನ್ಯ ಬೇಕಾಗಿತ್ತು ೧ ಲಕ್ಷ ೫೦ ಸಾವಿರ ಸೈನಿಕರ ದಂಡು, ಮರಾಠರ ವಿರುದ್ಧ ಯುದ್ಧ ಸಾರಿದರು. ಇಮ್ಮಡಿ ವೆಂಕಟಪ್ಪನಾಯಕನ ಯುದ್ಧ ತಂತ್ರದಿಂದ (ರಾಕ್ಷಸಿಯುದ್ಧ) ಮರಾಠರನ್ನು ಧೂಳಿಪಟ ಮಾಡಿದ. 'ಈ ಸಹಾಯ ಮೆಚ್ಚಿದ ನಿಜಾಮ ವೆಂಕಟಪ್ಪನಾಯಕನಿಗೆ ಚಿತಾಪುರ, ಮಳಖೇಡ, ಕೊರಳಿ, ಕಲಬುರ್ಗಿ, ಸೇಡಂ, ಕಮಲಾಪುರ, ಚಿಂಚೋಳಿ, ಯಾದಗೀರ ಮುಂತಾದ ೨ ಲಕ್ಷ ಉತ್ಪನ್ನದ ಪ್ರದೇಶದ ಮೇಲಿನ ರುಸುಮು ಬಿಟ್ಟುಕೊಟ್ಟರು.[೯೦] ಹಾಗೆಯೇ ಗುಡಗುಂಟಿಯವರು, ಸುರಪುರದ ಸಾಲ ತೀರಿಸದಿದ್ದಕ್ಕಾಗಿ ದೇವದುರ್ಗದ ರಂಗಪ್ಪನಾಯಕ ಸುರಪುರದ ಜಾವಳ ಕಾರ್ಯಕ್ರಮವೊಂದರಲ್ಲಿ ಅಸಭ್ಯವಾಗಿ ವರ್ತಿಸಿದುದಕ್ಕಾಗಿ ಸುರಪುರದ ಕೆಲವು ಹಳ್ಳಿಗಳ ರುಸುಮು ಬರುತ್ತಿಲ್ಲದ್ದರಿಂದ ಅವುಗಳನ್ನು ಲೂಟಿ ಮಾಡಲಾಯಿತು.

ಕ್ರಿ.ಶ.೧೭೯೮ರಲ್ಲಿ ಇಂಗ್ಲೀಷರೊಂದಿಗೆ ಆದ ನಿಜಾಮನ ಒಪ್ಪಂದವು ೬೦೦೦ ಸಿಪಾಯಿಗಳ 'ಕುಮುಕ ಫೌಜು' ಸಹಾಯಕ್ಕೆ ಸಹಿ ಹಾಕಲಾಯಿತು. ಇದರ ಪ್ರಕಾರ ನಿಜಾಮ ಆಂಗ್ಲರಿಗೆ ಹಣ ಸಂದಾಯ ಮಾಡಬೇಕಾಗಿತ್ತು. ಇದೇ ಸಂದರ್ಭದಲ್ಲಿ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಶಹಪುರ ಕಿಲ್ಲೆ ಕಸಿದುಕೊಂಡ. ಆಗ ನಿಜಾಮ ತನ್ನ ಹಿರಿಯ ಮಗ ಸಿಕಂದರಜಾನ್‌ನನ್ನು ಸುರಪುರದ ಮೇಲೆ ಕಳುಹಿಸಿದ. ಇದರ ಹಿಂದೆಯೇ ನಿಜಾಮನ ನೀತಿಗೆ ಬೆಂಬಲಿಸಿ ಲೆಫ್ಟಿನೆಂಟ್ ಕರ್ನಲ್ ಕಿನ್ನೆ ಹೆಚ್ಚುವರಿ ಪಡೆಯೊಂದಿಗೆ ಸಗರ ಪ್ರಾಂತ ಪ್ರವೇಶಿಸಿದ."[೯೧]

ಈ ಆಕ್ರಮಣ ತಡೆಯಲು ಸುರಪುರದ ಕಡೆಯಿಂದ ಓರ್ವ ವಕೀಲ ಒಪ್ಪಂದಕ್ಕೆ ಬಂದ. ಪ್ರತಿವರ್ಷ ೧,೪೫,೦೦೦ ರೂಪಾಯಿ ಹಾಗೂ ದೇವದುರ್ಗಕ್ಕೆ ಸಂಬಂಧಪಟ್ಟ ೩೭,೫೦೦ ರೂ. ಕಂದಾಯ ಬಾಬತ್ತನ್ನು[೬೨] ಸುರಪುರವು ನಿಜಾಮನಿಗೆ ಕೂಡಲೇ ಸಲ್ಲಿಸಬೇಕೆಂದು ಸಿಕಂದರಜಾನ್ ಬಂದ ವಕೀಲನೆದುರು ಪಟ್ಟುಹಿಡಿದ, ಇಲ್ಲವಾದರೆ ಶಹಪುರ ಕೋಟೆಯನ್ನು ವಶಪಡಿಸಿಕೊಳ್ಳುವ ಬೆದರಿಕೆ ಒಡ್ಡಿದ.[೬೩] ಸದರಿ ಹಣವನ್ನು ಸಲ್ಲಿಸಲು ೧೫ ತಿಂಗಳುಗಳ ಅವಧಿ ನೀಡಬೇಕೆಂದು ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಸಿಕಂದರ ಜಾನ್‌ನಲ್ಲಿ ಕೇಳಿಕೊಂಡ. ಇದಕ್ಕೆ ಒಪ್ಪಿದ ಸಿಕಂದರ ಜಾ ಮತ್ತು ಕರ್ನಲ್ ಕಿನ್ನೆ ತಮ್ಮ ಸೈನ್ಯದೊಂದಿಗೆ ಕ್ರಿ.ಶ.೧೮೦೨ರ ಜುಲೈನಲ್ಲಿ ಹೈದ್ರಾಬಾದ್‌ಗೆ ಮರಳಿದರು.[೬೪]

ಸುರಪುರ ಸಂಸ್ಥಾನ ಈ ಸಂದರ್ಭದಲ್ಲಿ ಬಲವಾದ ಆರ್ಥಿಕ ಮುಗ್ಗಟ್ಟನ್ನು ಎದುರಿಸಿತು. ಈ ಸಂದರ್ಭದಲ್ಲಿ ಸುರಪುರದ ಆಂತರಿಕ ವ್ಯವಸ್ಥೆ ಕುಸಿಯಿತು. ಕ್ರಿ.ಶ.೧೮೦೨ರಲ್ಲಿ ವೆಂಕಟಪ್ಪನಾಯಕ ತೀರಿದ ಮೇಲೆ ಸಂಸ್ಥಾನದ ಅಧಿಕಾರಕ್ಕಾಗಿ ಕೋಲಾಹಲವೆದ್ದಿತು. ಇದ್ದೊಬ್ಬ ಮಗನನ್ನು ಕೈಯಾರೆ ಕೊಂದ ಈತನಿಗೆ ರಾಘಮ್ಮಳೆಂಬ ಮಗಳಿದ್ದಳು. ಪಟ್ಟದರಸಿ ಕಾಟಮ್ಮಳ ಪ್ರಯತ್ನದಿಂದ ರಾಘಮ್ಮಳನ್ನು ಪಟ್ಟಕ್ಕೆ ಕೂಡಿಸಲಾಯಿತು. ಆಗ ಸಾಕಷ್ಟು ಗೊಂದಲಗಳಾಗಿ ಕೊನೆಗೆ ಸಂಬಂಧಿ ಮದನಗೋಪಾಲನಾಯಕನ ಮಗನಾದ ಮುಮ್ಮಡಿ ಪಿಡ್ಡನಾಯಕ(ಕ್ರಿ.ಶ.೧೮೦೨-೧೮೧೮)ನನ್ನು ಸುರಪುರದ ಪಟ್ಟಕ್ಕೆ ಕೂಡಿಸಲಾಯಿತು. ಆಗ ಕಾಟಮ್ಮ ಮತ್ತು ದಿವಾನ ತಿಮ್ಮಪ್ಪನ ಕಡೆಯವರು ವಿರೋಧಿಸಿದರು.

ಆಗ ಪಿಡ್ಡನಾಯಕನ ಸಂಬಂಧಿಗಳಾದ ಪ್ಯಾಪಲಿಯವರು ಹಾಗೂ ದಾದಿಕೊಂಡಿ, ಪಾಮಡಿ ಕೊವಾರ ಕೊಂಡಿ, ಕೋಸಗಿ ಪಾಳೆಯಗಾರರು ದಂಗೆಯನ್ನು ಅಡಗಿಸುತ್ತಾರೆ.[೬೫] ಆಗ ಅಪ್ಪಪ್ಪನಾಯಕರು ಇದಕ್ಕೊಂದು ಶಾಶ್ವತ ಪರಿಹಾರ ರೂಪಿಸಿದರು. ಅದೇನೆಂದರೆ 'ಮುಮ್ಮಡಿ ಪಿಡ್ಡನಾಯಕನು ಸುರಪುರದ ಪಟ್ಟವೇರಬೇಕು. ಪಟ್ಟವೇರಿದ ಪಿಡ್ಡನಾಯಕ ಕಾಟಮ್ಮ ಹೇಳಿದಂತೆ ರಾಜ್ಯಕಾರ್ಯ ನಡೆಸಬೇಕು.[೬೬] ಈ ಷರತ್ತಿನ ಮೇರೆಗೆ ಅಧಿಕಾರ ಸ್ವೀಕರಿಸುವಷ್ಟೊತ್ತಿಗೆ ಬ್ರಿಟಿಷರು ಸುರಪುರ ಸಂಸ್ಥಾನದಲ್ಲಿ ಕಾರ್ಯಭಾರಕ್ಕಾಗಿ ತಮ್ಮ ಪ್ರತಿನಿಧಿಯೆಂದು ಮಹಿಪತಿರಾಮ ಎಂಬುವನನ್ನು ಕಳುಹಿಸಿದರು. ಈತ ತನ್ನ ಸೈನ್ಯದ ಖರ್ಚಿಗಾಗಿ ಸುರಪುರವನ್ನವಲಂಬಿಸಿದ್ದನಲ್ಲದೆ, ಸುರಪುರ ನಿಜಾಮನಿಗೆ ಕೊಡಬೇಕಾದ ಸಾಲ ವಸೂಲಿ ಮಾಡಲು ಹವಣಿಸುತ್ತಿದ್ದ. ಅದೇ ಸಂದರ್ಭದಲ್ಲಿ ಮೀರಆಲಂನೆಂಬಾತ ನಿಜಾಮನಿಂದ ಸಾಲ ವಸೂಲಿಗೆ ಸುರಪುರಕ್ಕೆ ಬಂದ.

ಮಹಿಪತಿರಾಮನು ಪಿಡ್ಡನಾಯಕನಿಗೆ "ನೀನು ನಿಜಾಮನಿಗೆ ಸುರಪುರ ಪ್ರದೇಶ ವಶಪಡಿಸಿಕೊಳ್ಳಲು ಪರೋಕ್ಷವಾಗಿ ಬೆಂಬಲಿಸುತ್ತಿರುವಿ" ಎಂದು ಆರೋಪಿಸಿದ್ದ. ವೆಂಕಟಪ್ಪನಾಯಕನ ಮಗನನ್ನು ಸೈನ್ಯಕ್ಕೆ ಹಣ ಕೊಡುವುದಾಗಿ ನೀನು ಒಪ್ಪಿಕೊಂಡಿದ್ದಕ್ಕಾಗಿ ನಿನ್ನ ಮಗನನ್ನು ಒತ್ತೆ ಇಟ್ಟುಕೊಳ್ಳುತ್ತೇನೆಂದು

ಇಟ್ಟುಕೊಂಡರು. ಈತನ ವರ್ತನೆಗೆ ಬೇಸತ್ತ ವೆಂಕಟಪ್ಪನಾಯಕ ಆಗ ನೇರವಾಗಿ ರೆಸಿಡೆಂಟನಲ್ಲಿ (ಹೈದ್ರಾಬಾದ್) ಮನವಿ ಸಲ್ಲಿಸಿ ಸುರಪುರದ ಮೇಲೆ ಮಹಿಪತಿರಾಮನಿಂದ ಆಗುತ್ತಿರುವ ಕ್ರೂರ ದುರ್ನಡತೆಗಳ ಬಗ್ಗೆ ಗಮನ ಸೆಳೆಯುತ್ತಾರೆ. ಮನವಿ ಪರಿಶೀಲಿಸಿದ ಸರ್ಕಾರವು ಮಹಿಪತಿರಾಮನ ಮೇಲೆ ಸಂದೇಹ ತಾಳಿ ವಿಚಾರಣೆ ಕೈಗೊಂಡಿತು. ಕೊನೆಗೆ ಅವು ಸಾಬೀತಾದವು.[೯೭]

ಬ್ರಿಟಿಷರಿಗೆ ಸುರಪುರವನ್ನು ಯಾರ ಹತೋಟಿಗೂ ಬಿಡಲು ಮನಸ್ಸಿರಲಿಲ್ಲ. ಪಿಡ್ಡನಾಯಕನ ಕಂದಾಯ ವಸೂಲಿ ಮಾಡಿ ಪೇಶ್ವೆಗೆ ಕೊಡಬೇಕಾದ ಸಾಲದ ಕಾಣಿಕೆ ಸಲ್ಲಿಸಿ[೯೮] ನಿಜಾಮನಿಗೆ ಸಲ್ಲಿಸುತ್ತಿರುವುದು ಅವರಿಗೆ ಖುಷಿ ತಂದಿತು. ಕ್ರಿ.ಶ.೧೮೦೬ ಮೇ ೧೦ರಂದು ಬ್ಯಾರಿಯು ಪೇಶ್ವೆ ಮತ್ತು ಸಂಸ್ಥಾನದ ಆಂತರಿಕ ಸಂಬಂಧಗಳ ಬಗ್ಗೆ ಕಲ್ಕತ್ತ ಸರ್ಕಾರಕ್ಕೆ ವರದಿ ಸಲ್ಲಿಸಿದ.[೯೯] ಕ್ರಿ.ಶ.೧೮೦೭-೦೮ರಲ್ಲಿ ಬಾಜಿರಾಯನು ಸುರಪುರ ಸಂಸ್ಥಾನವು ತಮಗೆ ಸಲ್ಲಿಸಬೇಕಾದ ಪೇಷಕಷ ಪಾವತಿ ಮಾಡಲು ಒತ್ತಾಯಿಸಿ[೧೦೦] ವಸೂಲಿಗಾಗಿ ಬಾಪುಗೋಖಲೆನನ್ನು ಕಳುಹಿಸಿದರು. ರೆಸಿಡೆಂಟ್ ಇಲ್ಲಿನ ವಾಸ್ತವ ಸಂಗತಿಯನ್ನು ತಿಳಿದ ಸಂಸ್ಥಾನ, ಮಹಿಪತಿರಾಮನ ದುರಾಡಳಿತದಿಂದ ಆರ್ಥಿಕವಾಗಿ ದುರ್ಬಲವಾಗಿದೆ, ಕಾಣಿಕೆ ನೀಡಲು ಆಗದು ಎಂದು ತಿಳಿಸಿದ. ಇದರಿಂದ ತೃಪ್ತಿ ಪಡೆಯದ ಪೇಶ್ವೆ ಕಲ್ಕತ್ತಾ ಕೋರ್ಟನಿಂದ ಸಾಲ ವಸೂಲಿ ಆದೇಶ ಪಡೆದ. ಸಾಲ ಕೊಡುವುದು ಅನಿವಾರ್ಯ. ಇಲ್ಲದಿದ್ದರೆ ನ್ಯಾಯಾಲಯದ ಆಜ್ಞೆಗೆ ನಿಂದನೆಯಾಗುತ್ತದೆಂದು ತಿಳಿಸಿದ.[೧೦೧] ಇವೆಲ್ಲವುಗಳ ಮಧ್ಯೆ ಕ್ರಿ.ಶ.೧೮೧೩ರಲ್ಲಿ ಸುರಪುರ ಸಂಸ್ಥಾನದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು.[೧೦೨] ನಿಜಾಮನಿಗೆ ಸಲ್ಲಿಸಬೇಕಾಗಿದ್ದು ೮ ಲಕ್ಷ ರೂ. ಬಾಕಿ ಈಗ ೧೩ ಲಕ್ಷ ರೂ. ಆಗಿತ್ತು. ಆದರೂ ಪಿಡ್ಡನಾಯಕ ರೈತರ ಅಭಿವೃದ್ಧಿಗಾಗಿ ಶ್ರಮಿಸಿ ಅವರ ಹಿತಾಸಕ್ತಿಯನ್ನು ಕಾಪಾಡಿದ. ಮುಮ್ಮಡಿ ಪಿಡ್ಡನಾಯಕನ ನಂತರ ಆತನ ಹಿರಿಯ ಮಗ ಮುಮ್ಮಡಿ ವೆಂಕಟಪ್ಪ ನಾಯಕ (ಕ್ರಿ.ಶ.೧೮೧೮-೧೮೨೭)ನು ಸುರಪುರದ ಅಧಿಕಾರ ಗದ್ದುಗೆ ಏರಿದ. ಒಪ್ಪಂದದ ಪ್ರಕಾರ ಹೈದ್ರಾಬಾದ್ ನಿಜಾಮನಿಗೆ ೬ ಲಕ್ಷ ರೂ. ನಜರಾಣಿ ಸಲ್ಲಿಸುವ ಮೂಲಕ ಸಿಂಹಾಸನರೋಹಣ ಸಮಾರಂಭಕ್ಕೆ ಸಾಮ್ರಾಜ್ಯ ಮರ್ಯಾದೆ ಸಂಪಾದಿಸಿದ್ದ.[೧೦೩]

ರಾಜ್ಯದಲ್ಲಿ ಬರಗಾಲ ಬಿದ್ದಿದರಿಂದ, ರೈತರ ಕಂದಾಯ ವಸೂಲಿ ಆಗಲಿಲ್ಲ. ಹೀಗಾಗಿ ನಿಜಾಮನಿಗೆ ಸಲ್ಲಿಸಬೇಕಾದ ೧೫ ಲಕ್ಷ ಸಾಲ ಹಾಗೆಯೇ ಉಳಿಯಿತು. ಆಗ ಪೇಶ್ವೆಯವರ ರುಸುಮು ಮುಟ್ಟದ್ದಕ್ಕಾಗಿ ಅವರ ರುಸುಮಿನ ಪ್ರಾಂತ್ಯಗಳನ್ನು ಮುಮ್ಮಡಿ ವೆಂಕಟಪ್ಪನಾಯಕನಿಂದ ಬ್ರಿಟಿಷರು ವಶಪಡಿಸಿಕೊಂಡರು. ಹೀಗೆ ಸುರಪುರದ ಹಣಕಾಸು ವ್ಯವಹಾರಗಳನ್ನು ಮೊಟಕುಗೊಳಿಸುತ್ತಾ ತಮ್ಮ ಅಧಿಕಾರವನ್ನು ವೃದ್ಧಿಸಲು ಪ್ರಯತ್ನಿಸುತ್ತಿದ್ದರು.

ನಿಜಾಮ ಮತ್ತು ಬ್ರಿಟಿಷರು ಸುರಪುರದ ಮೇಲಿದ್ದ ಹಿಂದಿನ ಒಪ್ಪಂದಗಳಾದ ಕ್ರಿ.ಶ.೧೮೦೦ರಲ್ಲಿ ನಿಜಾಮನಿಗೆ ೧,೪೫,೦೦೦ ರೂ. ಕೊಡತಕ್ಕ ಠರಾವು ಈಡೇರದಿದ್ದುದನ್ನು ಈ ಪ್ರದೇಶ ಬ್ರಿಟಿಷರ

ಆಡಳಿತಕ್ಕೆ ಒಳಪಟ್ಟಿದ್ದರಿಂದ ಪೇಶ್ವೆ ಪ್ರಾಂತ್ಯದಿಂದ ಕ್ರಿ.ಶ.೧೭೯೯ರಲ್ಲಿ ಬರಬೇಕಾಗಿದ್ದ ಚೌಥ ಹಣವನ್ನು ತಮಗೆ ನೀಡಬೇಕೆಂದು ವಾದಿಸತೊಡಗಿದರು.

ಪೂರ್ವದ ಷರತ್ತಿನಂತೆ ೧,೪೫,೦೦೦ ರೂ. ಜೊತೆಗೆ ಈಗ ಅಪ್ಪಾದೇಸಾಯಿಯ ಚೌಥ ೩೦ ಸಾವಿರ ರೂ. ಸೇರಿಸಿ ಒಟ್ಟು ೧ ಲಕ್ಷ ೭೫ ಸಾವಿರ ರೂ.ಗಳನ್ನು ಪ್ರತಿವರ್ಷ ಕಂದಾಯದ ಜೊತೆ ನಿಜಾಮನಿಗೆ ನೀಡಬೇಕೆಂದು ಸುರಪುರಕ್ಕೆ ಒತ್ತಡ ತರಲಾಯಿತು. ಈ ರೀತಿ ಕ್ರಿ.ಶ.೧೮೨೩ ರಿಂದ ಕಂಪನಿ ಸರಕಾರವು ನಿಜಾಮನ ಚೌಥನ್ನು ಒಂದು ವರ್ಷಕ್ಕೆ ೧೫ ಸಾವಿರ ರೂ.ದಂತೆ ಏರಿಸುವುದರೊಂದಿಗೆ ಸಂಸ್ಥಾನದ ವಿರುದ್ಧ ಪರೋಕ್ಷವಾಗಿ ನಿಜಾಮನ ಕೈ ಬಲಪಡಿಸಿದರು. ಬ್ರಿಟಿಷ್ ಸರಕಾರವು ತನ್ನ ಕೈವಾಡದಿಂದ ನಿಜಾಮನಿಗೆ ಹೆಚ್ಚುವರಿ ಆದಾಯ ಸಿಗುವಂತೆ ಇದ್ದ ಅವಕಾಶಗಳನ್ನು ಉಪಯೋಗಿಸಿಕೊಂಡಿತು.[೧೦೪]

ಇಂಥ ನಿಜಾಮ ಮತ್ತು ಬ್ರಿಟಿಷರ ಕಿರುಕುಳದ ದ್ವಂದ್ವ ನೀತಿ ಸಂಸ್ಥಾನವನ್ನು ಸಂಕಷ್ಟಕ್ಕೆ ಸಿಲುಕಿಸಿದವು. ಆ ಸಂದರ್ಭದಲ್ಲಿ ಹೈದ್ರಾಬಾದ ರೆಸಿಡೆಂಟನು ಮೌನ ತಾಳಿದ್ದುದು ವಿಶೇಷವಾಗಿತ್ತು. ಅನೇಕ ಅಡೆತಡೆಗಳ ನಡುವೆಯೂ ಈತನ ಆಡಳಿತ ಉತ್ತಮ ರೀತಿಯಲ್ಲಿ ನಡೆದಿತ್ತು. ಕ್ರಿ.ಶ.೧೮೨೭ರಲ್ಲಿ ಮುಮ್ಮಡಿ ವೆಂಕಟಪ್ಪನಾಯಕನು ನಿಧನನಾದನು.

ಈತನ ತರುವಾಯ ಮಕ್ಕಳಾದ ಕೃಷ್ಣಪ್ಪನಾಯಕ ಮತ್ತು ಹಣಮಪ್ಪ ನಾಯಕರಲ್ಲಿ ಅಧಿಕಾರಕ್ಕಾಗಿ ಪೈಪೋಟಿ ನಡೆಯಿತು. ಆಗ ಇವರು ನಿಜಾಮನ ಮೊರೆಹೋದಾಗ ನಿಜಾಮ ಇವರಿಂದ ಪಟ್ಟದ ನಜರಾಣೆಯ ಮೊತ್ತವನ್ನು ಮೀತಿಮೀರಿ ಏರಿಸಿದ. ಇದನ್ನು ಸವಾಲು ರೀತಿಯಲ್ಲಿ ಸ್ವೀಕರಿಸಿದ. ನಿಜಾಮ ಕೇಳಿದ ೧೫ ಲಕ್ಷ ರೂ. ನಜರಾಣೆಯನ್ನು ಮತ್ತು ೨,೩೦,೬೦೦ ರೂ. ವಾರ್ಷಿಕ ಕಂದಾಯವನ್ನು ಕೃಷ್ಣಪ್ಪನಾಯಕ ಕೊಡಲು ಒಪ್ಪಿದ.[೧೦೫] ಆರ್ಥಿಕ ತೊಂದರೆಯನ್ನನುಭವಿಸುತ್ತಿದ್ದ ಸಂಸ್ಥಾನಕ್ಕೆ ಇಷ್ಟೊಂದು ಹಣ ಕೊಡಲಾಗದಿದ್ದಾಗ, ನಾಲ್ಕುವರೆ ಲಕ್ಷ ರೂ. ಸದ್ಯ ಸಿಂಹಾಸನಾರೋಹಣಕಾಲಕ್ಕೆ ಕೊಟ್ಟ. ಉಳಿದ ಹಣದಲ್ಲಿ ಪ್ರತಿವರ್ಷ ೧,೨೫,೦೦೦ ರೂ.ಗಳನ್ನು ಕಂತಿನ ಮೇಲೆ ತನ್ನ ಸರಕಾರಕ್ಕೆ ತುಂಬಲು ನಿಜಾಮ ಠರಾವು ಮಾಡಿದ. ಕ್ರಿ.ಶ.೧೮೦೦ರಲ್ಲಿ ಆದ ಒಪ್ಪಂದದ ೧೭ನೇ ವಿಧಿಯನ್ನು ಈ ಮೂಲಕ ಉಲ್ಲಂಘಿಸಿದ ನಿಜಾಮ ನೀತಿಗೆ ರೆಸಿಡೆಂಟ್ ಅನುಮೋದಿಸಿದ.

ನಿಜಾಮ ಮತ್ತು ಇಂಗ್ಲೀಷ್ ಸರಕಾರದ ವಿರುದ್ಧ ಸಿಡಿದೇಳುವಷ್ಟು ಸಾಮರ್ಥ್ಯ ಈ ಸಂದರ್ಭದಲ್ಲಿ ಸುರಪುರ ಅರಸು ಮನೆತನಕ್ಕೆ ಇಲ್ಲದಾಗಿ ಕೃಷ್ಣಪ್ಪನಾಯಕ ಮೂರು ವರ್ಷಗಳವರೆಗೆ ನಿಜಾಮ ಸರಕಾರಕ್ಕೆ ಪಟ್ಟದ ನಜರಾಣೆ ಹಾಗೂ ಕರಕಂದಾಯ ನೀಡುತ್ತಾ ಬಂದ. ಸಂಸ್ಥಾನಕ್ಕೆ ಸಾಲದ ಹೊರೆ ಹೆಚ್ಚಾಯಿತು. ಆಗ ನಿಜಾಮರು ಮತ್ತು ಬ್ರಿಟಿಷರು ಹೈದ್ರಾಬಾದ್ ಲೇವಾದೇವಿ ವ್ಯವಹಾರಸ್ಥ ಮೋತಿಗಾರ ಗೋಸಿಯಾ ಎಂಬುವನಿಂದ ಸಾಲ ಪಡೆಯುವಂತೆ ಮಾಡಿದರು. ಬರಗಾಲದಿಂದ ಜನರಲ್ಲಿಯೂ ಹಣವಿರಲಿಲ್ಲ.

ಸಂಸ್ಥಾನಕ್ಕೆ ಕಂದಾಯವನ್ನು ಕಟ್ಟಲಿಲ್ಲ. ಇವೆಲ್ಲವು ಕೃಷ್ಣಪ್ಪನಾಯಕನಿಗೆ ತಲೆನೋವಾಗಿ ಪರಿಣಮಿಸಿದವು. ಸಾಲದ ಹೊರೆ ಹೆಚ್ಚಾಗಿ ರಾಜ್ಯವನ್ನು ಹಾಗೂ ತನ್ನ ಮಕ್ಕಳನ್ನೇ ಅಡವು ಇಡುವ ಪ್ರಸಂಗ ಒದಗಿತು. ಮೋತಿಗಾರ ಗೋಸಿಯಾ ತೀರಿಕೊಂಡನಾದರೂ, ಆತನ ಪುತ್ರ ಲಕ್ಷ್ಮಣಗೀರ್, ಸಾಲವಸೂಲಿಗೆ ಬಂದಾಗ ಕೃಷ್ಣಪ್ಪನಾಯಕ, ಸಂಕೇಶ್ವರಸ್ವಾಮಿ ಮತ್ತು ಬಾಗಲಕೋಟೆಯ ಸಾಹುಕಾರ ಸಿದ್ಧಪ್ಪನಲ್ಲಿಯೂ ಸಾಲ ಮಾಡಿದ್ದನೆಂದು ಆಂಗ್ಲದಾಖಲೆಗಳು ಹೇಳುತ್ತವೆ.[೧೦೬]

ರೆಸಿಡೆಂಟ್ ಫ್ರೇಜರನ ಸಲಹೆ ಮೇರೆಗೆ ಸಾಲದ ವ್ಯವಹಾರ ತನಿಖೆ ನಡೆಸಲು ಇಂಗ್ಲೀಷ್ ಅಧಿಕಾರಿಗಳು ಸುರಪುರಕ್ಕೆ ಆಗಮಿಸಿದರು. ಕ್ಯಾ.ಫ್ರಾನಿಸ್ ಗ್ರಿಸ್ಲೆ ಕ್ರಿ.ಶ.೧೮೪೧ರ ನವೆಂಬರ್ ೨೯ರಂದು ಸುರಪುರಕ್ಕೆ ಹೋಗಿ ವರದಿ ಮಾಡಲು ಆಂಗ್ಲ ಸರ್ಕಾರ ಆದೇಶ ಹೊರಡಿಸಿತು. ಆದೇಶದಂತೆ ವರದಿಯನ್ನು ತಯಾರಿಸಲಾಯಿತು. ಆ ವರದಿಯಲ್ಲಿ 'ಸುರಪುರದ ರಾಜರು ಸ್ವತಂತ್ರರು. ಹಿಂದೆ ಮರಾಠ ಮತ್ತು ನಿಜಾಮನಿಗೆ ಕಾಣಿಕೆ ಸಲ್ಲಿಸಿದ್ದಾರೆ. ಅದು ನಿಗದಿಯೇನಲ್ಲ. ಮೊದಲ ಬಾರಿಗೆ ಕ್ರಿ.ಶ.೧೮೭೨ರಲ್ಲಿ ನಿಜಾಮನು ಬ್ರಿಟಿಷರ ಸಹಾಯ ಕೇಳಿದಾಗ ಇದ್ದ ಕಾಣಿಕೆಯ ಮೊತ್ತ ರೂ. ೧,೪೫,೦೦೦ ಮಾತ್ರ. ಪೇಶ್ವೆ ಪ್ರಾಂತ್ಯ ಇಂಗ್ಲೀಷರ ಕೈಸೇರಿದ್ದರಿಂದ ಅದರ ಮೇಲೆ ಬರುವ ಕಂದಾಯದಲ್ಲಿ ೧೫,೦೦೦ ರೂ.ಗಳನ್ನು ಸಂಸ್ಥಾನವು ಬ್ರಿಟಿಷರಿಗೆ ನೀಡಬೇಕೆಂದು ನಿಜಾಮ ಹೇಳಿದ್ದ. ಇದರಿಂದ ಕ್ರಿ.ಶ.೧೮೨೩ರ ನಂತರ ನಿಜವಾದ ಕಾಣಿಕೆ ೧,೬೦,೦೦೦ ರೂ. ಇದ್ದದ್ದು ೧,೭೫,೦೦೦ ರೂ.ವರೆಗೆ ಆಯಿತು. ಕೃಷ್ಣಪ್ಪನಾಯಕನು ಅಧಿಕಾರಕ್ಕೆ ಬಂದ ನಂತರ ಅವನ ನಜರಾಣೆ ಇನ್ನಿತರ ರೂಪದಲ್ಲಿ ೧೫ ಲಕ್ಷ ರೂ.ಗಳಿಗೇರಿತು. ಕ್ರಿ.ಶ.೧೮೨೮ರಲ್ಲಿ ಹೈದ್ರಾಬಾದ್ ನಿಜಾಮನು ಸಂಸ್ಥಾನದಿಂದ ವಾರ್ಷಿಕ ಕಾಣಿಕೆಯೆಂದು ೧,೬೦,೦೦೦.೦೦ ದಿಂದ ೨,೩೦,೬೦೦.೦೦ ರೂ. ಕೇಳಿದ್ದನು. ಇವೆಲ್ಲವುಗಳಿಗೂ ರಾಜನು ಒಪ್ಪಿಕೊಂಡದ್ದೇಕೆ ಎಂದರೆ ತಾನೊಬ್ಬ 'ರಾಜ'ನೆಂದು ಗುರುತಿಸಿಕೊಳ್ಳಲು ಮಾತ್ರ.[೧೦೭] ಈ ವರದಿ ಸುರಪುರ ಸಂಸ್ಥಾನದ ಆರ್ಥಿಕ ದಿವಾಳಿತನದ ನೋಟವಾಗಿತ್ತು. ಈ ವರದಿಯ ಮೂಲಕ ಗ್ರಿಸ್ಲೆ ರೆಸಿಡೆಂಟನಿಗೆ ಸಂಸ್ಥಾನದ ಆಡಳಿತವನ್ನು ಬ್ರಿಟಷ ಸರ್ಕಾರ ನಿಯಂತ್ರಿಸಲು ಪ್ರವೇಶಿಸಲು ಅನುವು ಮಾಡಿಕೊಡುವಂತಿದ್ದವು. ಇವುಗಳನ್ನೆಲ್ಲ ರಾಜಾ ಕೃಷ್ಣಪ್ಪನಾಯಕ ವಿರೋಧಿಸಿದ. ಆದರೂ ಬ್ರಿಟಿಷರು ನಾವಿರುವುದು ನಿಮ್ಮ ಮತ್ತು ನಿಜಾಮನ ಮಧ್ಯದ ಬಿಕ್ಕಟ್ಟು ಬಗೆಹರಿಸಲು ಮಾತ್ರವೆಂದು ರಾಜನಿಗೆ ನಂಬಿಸಿದ್ದರು. ಗ್ರಿಸ್ಲೆಯ ಶಿಫಾರಸ್ಸುಗಳನ್ನು ನಿಜಾಮನ ಪಕ್ಷ ವಹಿಸಿ ಜಾರಿಗೆ ತರಲಾಯಿತು. ಇದರಿಂದ ರಾಜಾಕೃಷ್ಣಪ್ಪನಾಯಕ ರೊಚ್ಚಿಗೆದ್ದ. ಇದೇ ಸಂದರ್ಭದಲ್ಲಿ ಈತನ ಸಹೋದರ ಹಣಮಪ್ಪನಾಯಕನ ಬಂಡಾಯ ಬೇರೆ. ಇದನ್ನು ಕೃಷ್ಣಪ್ಪನಾಯಕ ಅಡಗಿಸಿದ. ಆಡಳಿತದ ಸುವ್ಯವಸ್ಥೆಗಾಗಿ ಚನ್ನಬಸಪ್ಪನೆಂಬ ದಕ್ಷ ಅಧಿಕಾರಿಯನ್ನು ಕೆಲವು ಹಳ್ಳಿಯನ್ನು ನೋಡಿಕೊಳ್ಳಲು ನೇಮಿಸಿದನು.

ರಾಯಚೂರು ಜಿಲ್ಲೆಯ ಜಮೀನುದಾರ ಮಾರ್ಕಾಂಡನ ಕೈವಾಡದಿಂದ ಸುರಪುರ ಸಂಸ್ಥಾನದ ಅಧೀನದ ಜೋಳದಡಗಿ ಗ್ರಾಮವನ್ನು ಕ್ರಿ.ಶ.೧೮೪೨ರಲ್ಲಿ ರಾಯಚೂರಿನ ಅರಬರು ಕೊಳ್ಳೆ ಹೊಡೆದರು. ಹೈದ್ರಾಬಾದ್ ಸಂಸ್ಥಾನದ ಅಧೀನದ ರಾಯಚೂರು ಜಿಲ್ಲೆಯ ಗೊಬ್ಬೂರು ಮತ್ತು ನಾರಾಯಣಪೇಟ ಜನ ಸುರಪುರ ಸಂಸ್ಥಾನದ ಜಹಗೀರು ಹಳ್ಳಿಗಳ ಜನರ ದನಕರುಗಳನ್ನು ರಾತ್ರೋರಾತ್ರಿ ಕೊಂಡೊಯ್ದರು. ಹಾಗೆಯೇ ಕೃಷ್ಣಪ್ಪನಾಯಕನ ಪ್ರಜೆಗಳು ನಿಜಾಮನ ಅಧೀನದ ಹಿಪ್ಪರಗಿ ತಾಲೂಕಿನ ದರೋಡೆ ಮತ್ತು ದನಕರುಗಳ ಅಪಹರಣ ಮಾಡಿದ್ದಾರೆಂದು ಹಾಗೂ ರಾಯಚೂರಿನ ಹತ್ತಿರದ ಕೆಲ ಹಳ್ಳಿಗಳ ಬೇಡರು ಮತ್ತು ರೋಹಿಲರು ಭಾಗವಹಿಸಿದ್ದರೆಂದು ಸುದ್ದಿಯನ್ನು ಹಬ್ಬಿಸಿದುದಲ್ಲದೆ, ಕೃಷ್ಣಪ್ಪನಾಯಕ ಅಸಮರ್ಥ ಅರಸನೆಂದು ಹೈದ್ರಾಬಾದ್ ರೆಸಿಡೆಂಟರಿಗೆ ತಿಳಿಸಿ ಆತನ ವ್ಯಕ್ತಿತ್ವಕ್ಕೆ ಅಪಮಾನ ಮಾಡಿದರು. ಇಂಥ ವಾತಾವರಣದಲ್ಲಿಯೇ ಕ್ರಿ.ಶ.೧೮೪೨ರ ಆಗಸ್ಟ್‌ನಲ್ಲಿ ಕೃಷ್ಣಪ್ಪನಾಯಕನು ತೀರಿಕೊಂಡನು. ನಂತರ ಜೂನ್ ೧೨, ೧೮೪೩ರಂದು ಮಗನಾದ ಬಾಲವೆಂಕಟನಿಗೆ ಸುರಪುರದ ರಾಜನೆಂದು ನಾಮಕರಣ ಮಾಡಲಾಯಿತು. ಈತ ಚಿಕ್ಕವನಿರುವುದರಿಂದ ಈತನ ಶಿಕ್ಷಣದ ಜವಾಬ್ದಾರಿ ಬ್ರಿಟಿಷರ ಪ್ರತಿನಿಧಿ ಮೆಡೋಸ್ ಟೇಲರನೇ ವ್ಯವಸ್ಥೆ ಮಾಡಿದ. ರಾಜನ ಪ್ರತಿನಿಧಿಯಾಗಿ ರಾಣಿ ಈಶ್ವರಮ್ಮ ಅಧಿಕಾರ ಚಲಾಯಿಸುತ್ತಿದ್ದಳು. ರಾಣಿ ಈಶ್ವರಮ್ಮನಿಗೂ ಟೇಲರನಿಗೂ ವೈಮನಸ್ಸುಂಟಾಯಿತು. ಆಗ ರಾಣಿ ಈಶ್ವರಮ್ಮ ಟೇಲರನ ವಿರುದ್ಧ ಬೇಡರ ಪಡೆಯನ್ನು ರೊಚ್ಚಿಗೆಬ್ಬಿಸಿದ್ದಳೆಂಬ ಸುದ್ದಿಯಿಂದ ಟೇಲರ್ ರೆಸಿಡೆಂಟನಿಗೆ ಸಲಹೆಗಾಗಿ ಪತ್ರ ಬರೆದ. ರೆಸಿಡೆಂಟ್ ಫ್ರೇಜರ್ ಸ್ವತಃ ಸುರಪುರಕ್ಕೆ ಬಂದು, ಕೆಲ ಅಧಿಕಾರ ಗಳನ್ನು ರಾಜನಿಗೆ ಒಪ್ಪಿಸಿ, ರಾಣಿ ಈಶ್ವರಮ್ಮನನ್ನು ಗಡಿಪಾರು ಮಾಡಲು ಆದೇಶ ನೀಡಿದ.

ನಾಲ್ವಡಿ ವೆಂಕಟಪ್ಪನಾಯಕನಿಗೆ ೧೮ ವರ್ಷಗಳು ತುಂಬಿದ ಮೇಲೆ ಟೇಲರನ ವರದಿ ಮೇರೆಗೆ ಗೌರ್ನರ್ ಜನರಲ್ ಆದ ಲಾರ್ಡ್ ಡಾಲಹೌಸಿಯು ಸುರಪುರದ ಅರಸೊತ್ತಿಗೆಯ ಕುರಿತು "ಯುವರಾಜನು ಕ್ರಮೇಣ ಜವಾಬ್ದಾರಿ ವಹಿಸಿಕೊಂಡು ರಾಜ್ಯದ ಆಡಳಿತವನ್ನು ದಕ್ಷ ರೀತಿಯಿಂದ ನಿರ್ವಹಿಸಬೇಕು. ಸಂಸ್ಥಾನದ ಕಾರ್ಯಭಾರ ಸುಗಮವಾಗಿ ಸಾಗಿದರೆ ಬ್ರಿಟಿಷ್ ಪ್ರತಿನಿಧಿಯು ಕೇವಲ ರಾಜ್ಯದ ಲೆಕ್ಕಪತ್ರ ಮಾತ್ರ ಪರಿಶೀಲಿಸಬಹುದೆಂದು" ಹೈದ್ರಾಬಾದ್ ರೆಸಿಡೆಂಟನ ಮೂಲಕ ಆಜ್ಞಾಪಿಸಿದ್ದ. ಆಗ ರಾಜನಿಗೆ ಅಧಿಕಾರ ಹಸ್ತಾಂತರವಾಯಿತು. ಕೆಲವು ದಿನಗಳ ನಂತರ ನಾಲ್ವಡಿ ವೆಂಕಟಪ್ಪನಾಯಕ ಮೆಡೋಸ್ ಟೇಲರನನ್ನು ರಾಜಕೀಯ ಪ್ರತಿನಿಧಿಯೆಂದು ಸುರಪುರದಲ್ಲಿ ಇಟ್ಟುಕೊಳ್ಳಲು ಇಷ್ಟಪಡಲಿಲ್ಲ. ಅಲ್ಲದೆ ೧,೫೦೦ ರೂ. ಸಂಬಳ ನೀಡಲು ಸಾಧ್ಯವಿಲ್ಲವೆಂದನು. ಕಾರಣ ಒಂದು ಕಡೆ ನಿಜಾಮ, ಇನ್ನೊಂದು ಕಡೆ ಬ್ರಿಟಿಷರೂ ಸುರಪುರ ರಾಜ್ಯದ ಕೆಲವು ಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದರಿಂದ ನಾಲ್ವಡಿ ವೆಂಕಟಪ್ಪನಾಯಕನ ಪೂರ್ವಿಕರು ಆಳುತ್ತಿದ್ದ ರಾಜ್ಯ ಈ ವೇಳೆಗಾಗಲೇ ಚಿಕ್ಕದಾಗಿತ್ತು. ಅವರ ಸಲುಗೆಯಿಂದಾಗಿ ಸುರಪುರದ ಖಜಾನೆಯೆಲ್ಲಾ ಬರಿದಾಗಿತ್ತು.[೧೦೭] ಲಾರ್ಡ್‌ಡಾಲ್‌ರನ ಆದೇಶದ ಪ್ರಕಾರ

ಮೆಡೋಸ್ ಟೇಲರ್ ಸಂಸ್ಥಾನದ ಸಮಸ್ತ ಜವಾಬ್ದಾರಿಯನ್ನು ಕ್ರಿ.ಶ.೧೮೫೩ ಜೂನ್ ೩೦ರಂದು ನಾಲ್ವಡಿ ವೆಂಕಟಪ್ಪನಾಯಕನಿಗೆ ವಹಿಸಿ ಸುರಪುರದಿಂದ ಹೈದ್ರಾಬಾದಿಗೆ ನಿರ್ಗಮಿಸಿದನು. ನಂತರದಲ್ಲಿ ಅರಸನ ಆಡಳಿತ ಕುಸಿಯಿತು. ಅರಸ ದುಶ್ಚಟಗಳ ದಾಸನಾದನು.

ಕ್ರಿ.ಶ.೧೮೫೪ ಏಪ್ರಿಲ್ ೧೨ ರಂದು ದೋ ಅಬ್ ಪ್ರದೇಶಕ್ಕೆ ಬ್ರಿಟಿಷರ ರಾಜಕೀಯ ಪ್ರತಿನಿಧಿಯೆಂದು ನೇಮಕವಾಗಿ ಬಂದಿದ್ದ ಕ್ಯಾಪ್ಟನ್ ಕ್ಯಾಂಬೆಲ್‌ನಿಗೆ ಸುರಪುರ ಸಂಸ್ಥಾನದ ಆಡಳಿತದ ಬಗ್ಗೆಯೂ ವರದಿ ಮಾಡಲು ನಿರ್ದೇಶಿಸಲಾಗಿತ್ತು.[೧೦೯] ಆಗ ಕ್ಯಾಂಬೆಲ್ ಸಂಸ್ಥಾನದ ಅಶಾಂತಿ, ಅವ್ಯವಸ್ಥೆ, ಸಾಲದ ಹೊರೆ, ಕಡಿಮೆ ರಾಜ್ಯಾದಾಯಗಳ ಕುರಿತಾಗಿ ಸಮಗ್ರ ಮಾಹಿತಿಯನ್ನು ನೀಡಿದ.

ನಾಲ್ವಡಿ ವೆಂಕಟಪ್ಪನಾಯಕನ ಕಕ್ಕ ಪಿಡ್ಡನಾಯಕನ ಮಕ್ಕಳೆಲ್ಲಾ, ಸಂಸ್ಥಾನ ಪದವಿಯಿಂದ ಪದಚ್ಯುತಿಗೊಂಡ ಮುದ್ದೋಭೀಮರಾಯನ ಜೊತೆಗೂಡಿ ಅರಸರ ವಿರುದ್ಧ ಪಿತೂರಿ ನಡೆಸಿದರು. ಇವೆಲ್ಲವುಗಳ ಮಧ್ಯೆಯೇ ನಾಲ್ವಡಿ ವೆಂಕಟಪ್ಪನಾಯಕನಲ್ಲಿ ಬ್ರಿಟಿಷರ ವಿರುದ್ಧದ ಸ್ವಾತಂತ್ರ್ಯದ ಕಿಡಿ ಹೊರಹೊಮ್ಮಿತು. ದೇಶದ ನಾನಾ ಕಡೆ ಬ್ರಿಟಿಷರ ವಿರುದ್ಧದ ಬಂಡಾಯಗಳು ನಡೆದವು. ಕರ್ನಾಟಕದಲ್ಲಿ ಕಿತ್ತೂರು, ಹಲಗಲಿ, ಮುಂಡರಗಿ, ನರಗುಂದ, ಕೊಪ್ಪಳ ಮುಂತಾದ ಕಡೆ ಬ್ರಿಟಿಷ್ ಸರ್ಕಾರದ ಕ್ರೂರನೀತಿ ವಿರುದ್ಧ ರಣದ ಕಿಡಿಯನ್ನು ಸಿಡಿಸಲು ಸಜ್ಜಾಗಿದ್ದರು.

ಕ್ರಿ.ಶ.೧೮೨೯ರಲ್ಲಿ ಬ್ರಿಟಿಷರ ವಿರುದ್ಧ ಹೋರಾಡಲು ಸಜ್ಜಾದ ಸಂಗೊಳ್ಳಿರಾಯಣ್ಣನಿಗೆ ಸುರಪುರದ ರಾಜಾಕೃಷ್ಣಪ್ಪನಾಯಕ ೩೦೦ ಜನ ಬೇಡರ ಪಡೆಯನ್ನು ಬೆಂಬಲಿಸಲು ಕಳಿಸಿಕೊಟ್ಟದ್ದು, ಇಂಥ ಬಂಡಾಯ, ರಾಣಿ ಈಶ್ವರಮ್ಮನ ಕಾಲಕ್ಕೆ ಒಂದು ಸ್ವರೂಪ ಪಡೆಯಿತು. ಈ ಎಲ್ಲ ಘಟನೆಗಳಿಂದ ಪ್ರೇರಿತನಾದ ನಾಲ್ವಡಿ ವೆಂಕಟಪ್ಪನಾಯಕ ಇಂಗ್ಲೀಷರ ವಿರುದ್ಧ ಧುಮುಕಲು ಭೂಗತ ಕಾರ್ಯಗಳನ್ನು ನಡೆಸಿದ. ಉತ್ತರದ ಕ್ರಾಂತಿಗೆ ನಾನಾ ಸಾಹೇಬ ನೇತೃತ್ವ ವಹಿಸಿದರೆ, ದಕ್ಷಿಣ ಸಂಸ್ಥಾನಿಕರೆಲ್ಲ ಸುರಪುರದ ನಾಲ್ವಡಿ ವೆಂಕಟಪ್ಪನಾಯಕನನ್ನೇ ಮುಂದಾಳೆಂದು ಆಲೋಚಿಸಿದ್ದರು. ಇದೆಲ್ಲವನ್ನು ಅರಿತ ರೆಸಿಡೆಂಟ್ ಡ್ಯಾವಿಡ್ಸ್‌ನನ್ನು ಸುರಪುರದ ರಾಜನ ಧೋರಣೆಗಳು ನಮ್ಮ ಸರ್ಕಾರದ ವಿರುದ್ಧವಾಗಿವೆ ಎಂಬ ವರದಿಯನ್ನು ರಾಯಚೂರಿನ ಲೆಫ್ಟ್‌ನೆಂಟ್ ಟೇಲರನಿಗೆ ಬರೆದಾಗ ಟೇಲರ್ ೧೮೫೭ ಸೆಪ್ಟಂಬರ್ ೨೯ರಂದು ಸುರಪುರದ ರಾಜನಿಗೆ ಬ್ರಿಟಿಷ್ ಸರಕಾರದ ಅಧೀನದಲ್ಲಿರುವ ನೀವು ನಿಮ್ಮನ್ನು ಮತ್ತು ನಿಮ್ಮ ರಾಜ್ಯವನ್ನು ರಕ್ಷಿಸಿಕೊಳ್ಳುವ ಬಯಕೆಯಿದ್ದರೆ ಕೂಡಲೇ ಸೇರಿಸಿಕೊಂಡಿರುವ ಅರಬ, ರೋಹಿಲರನ್ನು ಸೈನ್ಯದಿಂದ ತೆಗೆದುಹಾಕಬೇಕೆಂದು ಆಗ್ರಹಿಸಿದ.[೧೧೦]

ದಕ್ಷಿಣ ಭಾರತದಲ್ಲಿ ಬಿರುಸಿನಿಂದ ನಡೆದ ಬ್ರಿಟಿಷರ ವಿರುದ್ಧದ ಸೈನ್ಯ ಸಂಘಟನೆ ಉತ್ತರ ಕರ್ನಾಟಕದ ಸುರಪುರ ಬ್ರಿಟಿಷ ಸೈನ್ಯದಲ್ಲಿರುವ ಭಾರತೀಯ ಸೈನಿಕರನ್ನು ಸ್ವಾತಂತ್ರ್ಯದ ಧ್ವಜದಡಿ ತರಲು

ಸುರಪುರ ಹಿಂದೆ ಬೀಳಲಿಲ್ಲ. ಕೊಲ್ಲಾಪುರ, ಧಾರವಾಡ, ಬೆಳಗಾವಿಗಳಲ್ಲಿ ಬೀಡುಬಿಟ್ಟಿದ್ದ, ೨೭, ೨೮, ೨೯ನೆಯ ಬ್ರಿಟಿಷ್ ಸೈನ್ಯವಾಹಿನಿಯಲ್ಲಿ ಭಾರತೀಯರು ಸಿಂಹಪಾಲು ಸಂಖ್ಯೆಯಲ್ಲಿದ್ದರು. ಬೆಳಗಾವಿಯ ೨೯ನೆಯ ವಾಹಿನಿಯಲ್ಲಿ ಸ್ವದೇಶ ಭಕ್ತಿ ಮೂಡಿಸಿ ಬ್ರಿಟಿಷರ ವಿರುದ್ಧ ತಿರುಗಿ ಬೀಳಲು ಸುರಪುರದಿಂದ ಮಹಿಪಾಲ್‌ಸಿಂಗ್ ಎಂಬಾತ ಕಾರ್ಯಪ್ರವೃತ್ತನಾಗಿದ್ದನು.

ಬ್ರಿಟಿಷರು ಈತನನ್ನು ಬಂಧಿಸಿ, ವಿಚಾರಣೆ ಮಾಡಿ ಈತ ಸುರಪುರ ರಾಜನೊಂದಿಗೆ ಸಂಬಂಧ ಹೊಂದಿದ್ದುದು ತಿಳಿಯಿತು ಹಾಗೂ ಬ್ರಿಟಿಷರ ವಿರುದ್ಧ ನಾಲ್ವಡಿ ವೆಂಕಟಪ್ಪನಾಯಕ ಸಜ್ಜುಗೊಳಿಸುತ್ತಿರುವ ಸೈನ್ಯದ ಕುರಿತಾಗಿ ಸ್ಥಳೀಯರಿಂದ ಮಾಹಿತಿ ಪಡೆದ ಬ್ರಿಟಿಷ್ ಅಧಿಕಾರಿ ಥಾರ್ನ್‌ಹಿಲ್‌ನು ೨೪ನೆಯ ಡಿಸೆಂಬರ್ ೧೮೫೭ರಂದು ಕ್ಯಾಪ್ಟನ್ ಕ್ಯಾಂಬೆಲ್‌ಗೆ ಪತ್ರ ಬರೆದು ಕ್ಷಿಪ್ರ ಕಾರ್ಯಾಚರಣೆ ಕೈಗೊಳ್ಳಲು ಆದೇಶಿಸಿದ. ಕ್ಯಾಂಬೆಲ್ ಎಲ್ಲಾ ಮಾಹಿತಿಯನ್ನು ಶೋಧಿಸಿದ. ಆತನಿಗೆ ಬ್ರಿಟಿಷರ ವಿರುದ್ಧದ ಹೋರಾಟದ ಯಾವ ಸುಳಿವೂ ಸಿಗಲಿಲ್ಲ. ಇದೇ ಸಂದರ್ಭದಲ್ಲಿ ಮಂತ್ರಿ ಪದವಿಯಿಂದ ಉಚ್ಚಾಟನೆಗೊಂಡಿದ್ದ ಭೀಮರಾಯ ನಾಲ್ವಡಿ ವೆಂಕಟಪ್ಪನಾಯಕ ಅರಬ್ ಮತ್ತು ರೋಹಿಲ್‌ರನ್ನು ಸೈನ್ಯದಲ್ಲಿ ತುಂಬಿಕೊಳ್ಳುವಂತೆ ಕೋರಿಕೆಯ ಪತ್ರ ತಯಾರಿಸಿ, ಅರಸ ಮದ್ಯಸೇವಿಸಿ ಮಲಗಿದ್ದಾಗ ಆತನಿಂದ ರುಜು ಪಡೆದು ರಾಜ ಮುದ್ರೆ ಹಾಕಿ ಕ್ಯಾಂಬೆಲ್‌ನಿಗೆ ನೀಡಿದ, ಕ್ಯಾಂಬೆಲ್ ಈ ಪತ್ರದ ಆಧಾರದ ಮೇಲೆ ಶೋಧನೆಗಿಳಿದು ಜನವರಿ ೧೪, ೧೮೫೮ರಂದು ೧೫೦ ಜನ ರೋಹಿಲ್‌ರ ದಂಡು ಮಸೀದಿಯಲ್ಲಿದ್ದುದನ್ನು ಕಂಡು ಡೇವಿಡ್ಸನ್ನನಿಗೆ ವರದಿ ಮಾಡಿದ. ಡೇವಿಡ್ಸನು ಅದನ್ನು ಓದಿ ಬ್ರಿಟಿಷ್ ಸೈನ್ಯ ಸುರಪುರವನ್ನು ಆಕ್ರಮಿಸಲು ಆದೇಶ ನೀಡಿದ. ರೆಸಿಡೆಂಟನ ಆದೇಶದ ಮೇರೆಗೆ ಲಿಂಗಸುಗೂರಿನಿಂದ ಸೈನ್ಯಾಧಿಕಾರಿ ವಿಂಥೆಮ್ ೨೧೨ ಬಂದೂಕು ೪೦ ಬಿಲ್ಲುಗಾರರು, ೪೦೦ ಕಾಲ್ದಳಗಳೊಂದಿಗೆ ಸುರಪುರದತ್ತ ಹೊರಟ.[೧೧೧] ಹಾಗೆಯೇ ಮುಂಬೈ, ಮದ್ರಾಸ್ ತುಕಡಿಗಳು ಹ್ಯೂಗನ್ ನೇತೃತ್ವದಲ್ಲಿ ಬಂದರೆ, ಧಾರವಾಡದ ಬ್ರಿಟಿಷ್ ಪಡೆಯೂ ಬಂದಿತು. ೧೮೫೮, ಜನವರಿ ೩೧ರವರೆಗೆ ಶಾಂತವಾಗಿದ್ದ ಸುರಪುರ ಫೆಬ್ರವರಿ ೧ ರಿಂದ ಕ್ರೋಧ ತಾಳಿತು.

ಬ್ರಿಟಿಷ್ ಬಣ ಫೆಬ್ರವರಿ ೭, ೧೮೫೮ರಂದು ಬೆಳಗಿನ ಜಾವ ಸುರಪುರದ ಮೇಲೆ ನುಗ್ಗಿತು. ಎರಡೂ ಬಣಗಳ ನಡುವೆ ಗುಂಡಿನ ಚಕಮಕಿ ನಡೆಯಿತು. ರೊಚ್ಚಿಗೆದ್ದ ರೋಹಿಲರು ಸ್ಟೂಆರ್ಟ್‌ನ ಮೂಳೆ ಮುರಿದರು. ಕ್ಯೂ ನ್ಯೂಬೆರಿ ನೆಲಕ್ಕುರುಳಿದ. ಆತನ ರುಂಡವನ್ನು ನೋಡಿ ನಾಲ್ವಡಿ ವೆಂಕಟಪ್ಪನಾಯಕ ಭಯಭೀತನಾದ. ಸಂಸ್ಥಾನಕ್ಕೆ ಕೊನೆಗಾಲ ಸಮೀಪಿಸಿತೆಂದು ತಿಳಿದು ರಾತ್ರೋರಾತ್ರಿ ತನ್ನ ಪತ್ನಿಯರನ್ನು ಸುರಪುರದಿಂದ ಬೇರೆಡೆಗೆ ಕಳುಹಿಸಿದ. ತಾನು ವೃದ್ಧಮಂತ್ರಿ ಭೀಮರಾಯನೊಂದಿಗೆ ಹೈದ್ರಾಬಾದ್‌ಗೆ ಪ್ರಯಾಣಿಸಿದ. ಫೆಬ್ರವರಿ ೯, ೧೮೫೮ರಂದು ಬೆಳಗಿನ ಜಾವ ಗಡಿಯಲ್ಲಿದ್ದ ಬ್ರಿಟಿಷ್ ಪಡೆ, ಸುರಪುರದೊಳಗೆ ನುಗ್ಗಿತು, ಸುರಪುರ ಸಂಸ್ಥಾನ ಪತನವಾಯಿತು.

ಹೈದ್ರಾಬಾದ್‌ನಲ್ಲಿ ಸುತ್ತಾಡುತ್ತಿದ್ದ ನಾಲ್ವಡಿ ವೆಂಕಟಪ್ಪನಾಯಕನ ಕುರಿತಾಗಿ ವನಪರ್ತಿರಾಜನಿಂದ ಸುದ್ದಿ ತಿಳಿದ ಹೈದ್ರಾಬಾದ್ ನಿಜಾಮ ಸಾಲಾರಜಂಗ, ನಾಲ್ವಡಿ ವೆಂಕಟಪ್ಪನಾಯಕನನ್ನು ಬಂಧಿಸಿ ೧೨ ಫೆಬ್ರವರಿ ೧೮೫೮ರಂದು ಸಿಕಂದರಾಬಾದ್ ಕಾಂಟೋನೆಂಟನಲ್ಲಿ ಬಂಧಿಸಿಟ್ಟ. ನಂತರ ಆತನನ್ನು ವಿಚಾರಣೆಗೊಳ ಪಡಿಸಿದರು. ಮರಣದಂಡನೆಯ ಶಿಕ್ಷೆ ವಿಧಿಸಿದರು. ಮೇಡೋಸ್ ಟೇಲರನ ಕೋರಿಕೆಯಂತೆ ಉನ್ನತ ಅಧಿಕಾರ ಪಡೆದ ಗೌರ್ನರ್ ಜನರಲ್ ರಾಜನ ಮರಣದಂಡನೆಯನ್ನು ಕೈಬಿಟ್ಟು ೪ ವರ್ಷ ಅಮರಣಾಂತ ಗಡಿಪಾರು ಶಿಕ್ಷೆ ವಿಧಿಸಿ ರಾಜನನ್ನು ಮದ್ರಾಸ್ ಸಮೀಪದ ಚಂಗಲ್‌ಪೇಟೆ ದುರ್ಗದಲ್ಲಿಡಲು ಹೋಗುತ್ತಿದ್ದಾಗ ಹಾದಿಯಲ್ಲಿ ವಿಶ್ರಾಂತಿಗೆಂದು ತಂಗಿದ್ದಾಗ ರಾಜನ ಕಾವಲಿನಲ್ಲಿದ್ದ ಲೆಫ್ಟನೆಂಟ್ ಫಕ್ಕೆಲ್ ರಿವಾಲ್ವರ್‌ನ್ನು ರಾಜನ ಹತ್ತಿರ ಬಿಚ್ಚಿಟ್ಟು ಮುಖ ತೊಳೆಯಲೆಂದು ಹೊರಗಡೆ ಹೋಗಿದ್ದ. ಆಗ ಇದ್ದಕ್ಕಿದ್ದಂತೆ ಶಿಬಿರದ ಒಳಗಡೆ ಗುಂಡಿನ ಸದ್ದು ಕೇಳಿಸಿತು. ಓಡಿ ಹೋಗಿ ನೋಡುವಷ್ಟರಲ್ಲಿ ರಾಜ ರಕ್ತದ ಮಡುವಿನಲ್ಲಿ ಬಿದ್ದಿದ್ದ. ರಿವಾಲ್ವರ್ ಗುಂಡು ಹೊಟ್ಟೆ ಒಳಗಿನಿಂದ ನುಗ್ಗಿ ಬೆನ್ನಲ್ಲಿ ಪಾರಾಗಿತ್ತು. ರಾಜ ಆತ್ಮಹತ್ಯೆ ಮಾಡಿಕೊಂಡನೆಂದು ಸರ್ಕಾರದಿಂದ ನಿರ್ಧರಿಸಲಾಯಿತು. ಆದರೆ ಶವದ ಪಂಚನಾಮೆ ಮುಂತಾದ ಘಟನೆಗಳಿಂದ ರಾಜನನ್ನು ಕೊಲೆ ಮಾಡಿದರು ಎಂಬ ಅಂಶ ಸಾಬೀತಾಯಿತು. ಆದರೆ ಬ್ರಿಟಿಷ್ ಸರ್ಕಾರ ಮತ್ತು ನಿಜಾಮ ಸರ್ಕಾರ ಒಪ್ಪಲಿಲ್ಲ. ಕಾರಣ ಅದು ಅವರದೇ ಕುಟಿಲ ತಂತ್ರವಾಗಿತ್ತು. ಮೋಸದಿಂದ ನಾಲ್ವಡಿ ವೆಂಕಟಪ್ಪನಾಯಕನ ಕೊಲೆಯಾಯಿತು.

ಹೀಗೆ ಭಾರತದ ಪ್ರಥಮ ಸ್ವಾತಂತ್ರ್ಯದ ಸಂಗ್ರಾಮದಲ್ಲಿ ದಕ್ಷಿಣ ಭಾರತದ ರಾಜರನ್ನೆಲ್ಲಾ ಒಂದು ಗೂಡಿಸಿ, ಬ್ರಿಟಿಷರನ್ನು ಎದುರಿಸಿ ಅವರನ್ನು ದೇಶದಿಂದ ಹೊಡೆದೋಡಿಸಬೇಕೆಂಬ ಸಂಕಲ್ಪದಿಂದ ೨೩ ವರ್ಷದ ತರುಣ ರಾಜಾ ವೆಂಕಟಪ್ಪನಾಯಕ ತನ್ನೆಲ್ಲಾ ಸರ್ವಸ್ವವನ್ನು ಕೇವಲ ಸ್ವರಾಜ್ಯ ಹಾಗೂ ಸ್ವಧರ್ಮಕ್ಕಾಗಿ ಬಲಿದಾನಗೈದು ಹುತಾತ್ಮನಾದ. ದೇಶದ ಭವ್ಯ ಇತಿಹಾಸದ ರಾಷ್ಟ್ರಭಕ್ತರ ಸಾಲಿನಲ್ಲಿ ಸೇರಿ ಸುರಪುರಕ್ಕೆ ರಾಷ್ಟ್ರೀಯ ಮಹತ್ವ ತಂದುಕೊಟ್ಟ. ಈತನೊಂದಿಗೆ ಸುರಪುರ ಸಂಸ್ಥಾನ ಇನ್ನೊಬ್ಬರ ವಶವಾಯಿತು.

ಇತ್ತ ನಾಲ್ವಡಿ ವೆಂಕಟಪ್ಪನಾಯಕನೊಂದಿಗೆ ಪಾಲ್ಗೊಂಡಿದ್ದ ರಾಜನ ಸೇನಾಪತಿ ತಜದಿಕ ಹುಸೇನನನ್ನು ಬ್ರಿಟಿಷರು ದಸ್ತಗೀರ ಮಾಡಿ ಜುಲೈ ೩, ೧೮೫೮ರಂದು ಸುರಪುರದ ಮುಖ್ಯ ಬಜಾರದಲ್ಲಿ ಸಾರ್ವಜನಿಕವಾಗಿ ಗಲ್ಲಿಗೇರಿಸಿದರು. ರಾಜನ ಗೂಢಾಚಾರಿ ಮಹಿಪಾಲಸಿಂಗ್‌ನನ್ನು ಬೆಳಗಾವಿಯಲ್ಲಿ ತೋಪಿಗೆ ಕಟ್ಟಿ ಹಾರಿಸಿದರು.

ರಾಜಾ ನಾಲ್ವಡಿ ವೆಂಕಟಪ್ಪನಾಯಕನನ್ನು ಬ್ರಿಟಿಷರು ಮೋಸದಿಂದ ಕೊಲೆ ಮಾಡಿದ ಮೇಲೆ ಸುರಪುರ ಸಂಸ್ಥಾನ ಬ್ರಿಟಿಷರ ಅಧೀನಕ್ಕೊಳಪಟ್ಟಿತು. ಇವರು ಕ್ರಿ.ಶ.೧೮೬೧ರಲ್ಲಿ ಸುರಪುರದ ಆಡಳಿತವನ್ನು ನೋಡಿಕೊಳ್ಳಲು ಹೈದ್ರಾಬಾದ್ ನಿಜಾಮನಿಗೆ ಒಪ್ಪಿಸಿದರು.[೧೧೨] ನಾಲ್ವಡಿ ವೆಂಕಟಪ್ಪನಾಯಕನಿಗೆ ಎಂಟು

ಜನ ರಾಣಿಯರಿದ್ದರು. ಪಟ್ಟದರಾಣಿ ರಂಗಮ್ಮನಿಗೆ ಒಂದು ಹೆಣ್ಣು ಮಗು ಮಾತ್ರ ಇತ್ತು. ಈ ಎಂಟು ಜನ ರಾಣಿಯರಿಗೆ ನಿಜಾಮ ಸರಕಾರ ಸುಖವೇತನವನ್ನು ಜೀವಿತದ ಕಾಲದವರೆಗೂ ನೀಡಿತು.

ರಾಣಿ ರಂಗಮ್ಮ ಸಂಸ್ಥಾನವನ್ನು ಪುನಃ ಪಡೆಯಬೇಕೆಂದು ಸುರಪುರ ಸಂಸ್ಥಾನದ ಮುಖಂಡರೊಂದಿಗೆ ಸಮಾಲೋಚಿಸಿದ್ದಳು. ಇನ್ನೊಂದು ಕಡೆ ನಾಲ್ವಡಿ ವೆಂಕಟಪ್ಪನಾಯಕರ ಕಕ್ಕ ರಾಜಾಪಿಡ್ಡನಾಯಕರ ಮಕ್ಕಳಾದ ಕೃಷ್ಣಪ್ಪನಾಯಕ, ವೆಂಕಟಪ್ಪನಾಯಕ, ಪಿಡ್ಡನಾಯಕರು ಸಂಸ್ಥಾನ ಪಡೆಯಲು ಪ್ರಯತ್ನ ಶೀಲರಾಗಿದ್ದರು. ಇವರಿಗೂ ನಿಜಾಮ ಸರ್ಕಾರ ಸುಖವೇತನವನ್ನು ನೀಡುತ್ತಿತ್ತು.

ಇವರೆಲ್ಲರೂ ಸಂಸ್ಥಾನ ಮರಳಿ ಪಡೆಯಲು ಪ್ರಯತ್ನಿಸಿದರೂ ಬ್ರಿಟಿಷರು ಸಂಸ್ಥಾನವನ್ನು ನೀಡಲು ನಿರಾಕರಿಸಿದರು. ರಾಣಿ ರಂಗಮ್ಮ ಮುಜುಮದಾರ ವೆಂಕಟಪ್ಪನೊಂದಿಗೆ ಕ್ರಿ.ಶ.೧೮೯೦ರಲ್ಲಿ ಲಂಡನ್ನಿನ ಹೌಸ್ ಆಪ್ ಕಾಮನ್ಸ್‌ನಲ್ಲಿ ಸಂಸ್ಥಾನವನ್ನು ಮರಳಿ ಪಡೆಯಲು, ಪ್ರಶ್ನೆ ಕೇಳುವಂತೆ ಕಳುಹಿಸಿದ್ದಳು. ಆಗಲೂ ಇವಳ ಬೇಡಿಕೆ ತಿರಸ್ಕೃತಗೊಂಡಿತು. ನಂತರ ಬೇರೆ ಗತಿಯಿಲ್ಲದೆ ರಾಣಿರಂಗಮ್ಮ ವೆಂಕಟಪ್ಪನಾಯಕರ ಹಿರಿಯ ಪುತ್ರ ಕೃಷ್ಣಪ್ಪನಾಯಕನನ್ನು ದತ್ತು ತೆಗೆದುಕೊಂಡಳು. ಪೂರ್ವಜರ ಜಾಗೀರು ಗ್ರಾಮಗಳನ್ನು ಈತನಿಗೆ ನೀಡಿದಳು. ಕ್ರಿ.ಶ.೧೯೦೭ರಲ್ಲಿ ಮರಣ ಹೊಂದಿದಳು.

ಕೃಷ್ಣಪ್ಪನಾಯಕರು ಹೈದ್ರಾಬಾದ್ ವಿಮೋಚನೆಯಲ್ಲಿ ಪಾಲ್ಗೊಂಡವರಾಗಿದ್ದರು. ಈ ಸಂಸ್ಥಾನ ಕ್ರಿ.ಶ.೧೯೪೮ ಸೆಪ್ಟೆಂಬರ್ ೧೮ರಂದು ಭಾರತದ ಒಕ್ಕೂಟವನ್ನು ಸೇರಿತು. ರಾಜಾ ಕೃಷ್ಣಪ್ಪನಾಯಕರು ಕ್ರಿ.ಶ.೧೯೫೨ರಲ್ಲಿ ನಿಧನರಾದರು. ಇವರಿಗೆ ರಾಜಾ ಪಿಡ್ಡನಾಯಕ ಮತ್ತು ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕರೆಂಬ ಇಬ್ಬರು ಮಕ್ಕಳಿದ್ದರು.

ಭಾರತದ ಪ್ರಥಮ ಚುನಾವಣೆಗಳು ಜರುಗಿದಾಗ, ಇನ್ನೂ ಈ ಸಂಸ್ಥಾನಿಕರು ಜನರೊಂದಿಗೆ ಉತ್ತಮ ಸಂಬಂಧ ಹೊಂದಿದ್ದರಿಂದ ರಾಜಕೀಯಕ್ಕೆ ಪ್ರವೇಶ ಮಾಡಿದರು. ಆಗ ರಾಜಾಪಿಡ್ಡನಾಯಕರು ಸುರಪುರ ವಿಧಾನ ಸಭಾಕ್ಷೇತ್ರದಿಂದ ಆಯ್ಕೆಯಾದರು. ಹಾಗೆಯೇ ನಾಲ್ಕು ಬಾರಿ ಅವರೆ ವಿಧಾನಸಭಾ ಕ್ಷೇತ್ರಕ್ಕೆ ಆಯ್ಕೆಯಾಗಿ ಅನೇಕ ಜನಪರ ಕೆಲಸಗಳನ್ನು ಮಾಡಿ ೧೯೯೨ರಲ್ಲಿ ನಿಧನರಾದರು. ಇಂದು ಅವರ ಪುತ್ರರಾದ ರಾಜಾವೆಂಕಟಪ್ಪನಾಯಕ ಸುರಪುರದ ಅರಮನೆಯಲ್ಲಿ ವಾಸಿಸುತ್ತಿದ್ದಾರೆ. ಜನರು ಇವರನ್ನು ಪ್ರೀತಿಯಿಂದ ತಾತಾ ಎಂದೇ ಕರೆಯುತ್ತಾರೆ. ಇವರು ಒಂದು ಸಾರಿ ವಿಧಾನಸಭಾ ಚುನಾವಣೆಗೆ ಸ್ಪರ್ಧಿಸಿದ್ದರು. ಆಗ ಪರಾಭವಗೊಂಡ ನಂತರ ಮತ್ತೆ ರಾಜಕೀಯಕ್ಕೆ ಸೇರಲು ಮನಸ್ಸು ಮಾಡಿಲ್ಲ. ತಮ್ಮ ಬಂಧುಗಳನ್ನು ಚುನಾವಣೆಗೆ ನಿಲ್ಲಿಸಲು ಕಾರಣೀಕರ್ತರಾಗಿದ್ದಾರೆ.

ರಾಜಾ ವೆಂಕಟಪ್ಪನಾಯಕರು ಹೈದ್ರಾಬಾದ್‌ನಲ್ಲಿ ಪದವಿಯನ್ನು ಪಡೆದು ಹಾಗೂ ಉಚ್ಚ ವ್ಯಾಸಂಗಕ್ಕೆ ಲಂಡನ್‌ಗೆ ಹೋಗಿ ಬ್ಯಾರಿಸ್ಟರ್ ಪದವಿಯನ್ನು ಪಡೆದುಕೊಂಡವರು. ನಂತರದಲ್ಲಿ ಹೈದ್ರಾಬಾದ್

ನಿಜಾಮರ ಶ್ರೇಷ್ಠ ನ್ಯಾಯಾಲಯದಲ್ಲಿ ವಕೀಲರಾಗಿದ್ದ ಇವರು ೧೯೪೮ರಲ್ಲಿ ವಕೀಲಿ ವೃತ್ತಿ ತ್ಯಜಿಸಿದರು. ಆ ಸಂದರ್ಭದಲ್ಲಿ ಹೈದ್ರಾಬಾದ್ ನಿಜಾಮನಿಂದ ಪ್ರೇರಣೆಗೊಂಡು ಹಿಂದೂ ಜನರಿಗೆ ಕಿರುಕುಳ ನೀಡುತ್ತಿದ್ದ ಕಾಶಿಮ ರಜವಿಯ ವಿರುದ್ಧ ಶೆಡ್ಡು ಹೊಡೆದು ನಿಂತರು. ಆತನ ಕೃತ್ಯಗಳನ್ನು ಖಂಡಿಸಿದರು.

ತಾಳಿಕೋಟೆಯಲ್ಲಿ ತರುಣರ ಕ್ಯಾಂಪನ್ನು ಪ್ರಾರಂಭಿಸಿ ಹೈದ್ರಾಬಾದ್ ವಿಮೋಚನೆಗೆ ಹೋರಾಡಿದರು. ಆಗಿನ ಕೇಂದ್ರ ಗೃಹಮಂತ್ರಿ ಸರ್ದಾರ ವಲ್ಲಭಬಾಯಿ ಪಟೇಲ್‌ರೊಂದಿಗೆ ಉತ್ತಮ ಸಂಬಂಧ ಹೊಂದಿದ್ದ ಇವರು ಹೈದ್ರಾಬಾದ್ ವಿಮೋಚನೆಗಾಗಿ ಮಿಲಿಟರಿ ಕಾರ್ಯಾಚರಣೆಯನ್ನು ಈ ಭಾಗದಲ್ಲಿ ನಡೆಸಲು ಪ್ರಯತ್ನಶೀಲರಾದರು. ಆಗ ಈ ಪ್ರಾಂತ್ಯ ಹೈದ್ರಾಬಾದ್ ನಿಜಾಮನಿಂದ ಮುಕ್ತಗೊಳ್ಳಲು ಸಾಧ್ಯವಾಯಿತು.

ಬ್ಯಾರಿಸ್ಟರ್ ವೆಂಕಟಪ್ಪನಾಯಕರು ೧೯೬೭ರಲ್ಲಿ ನಡೆದ ಲೋಕಸಭೆ ಮತ್ತು ರಾಜ್ಯಸಭೆಯ ಚುನಾವಣೆಗಳೆರಡಕ್ಕೂ ಸ್ಪರ್ಧಿಸಿ, ಎರಡಕ್ಕೂ ಆಯ್ಕೆಯಾದರು. ನಂತರ ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ, ಸಂಸದರಾಗಿಯೇ ಮುಂದುವರೆದರು. ಜನರ ಕಲ್ಯಾಣಕ್ಕಾಗಿ ಸಂಸತ್ತಿನಲ್ಲಿ ಅನೇಕ ಪ್ರಶ್ನೆಗಳನ್ನು ಎತ್ತುತ್ತಿದ್ದರು. ಮೊದಲಿನಿಂದಲೂ ಹೈದ್ರಾಬಾದ್‌ನೊಂದಿಗೆ ಹೆಚ್ಚಿನ ಸಂಪರ್ಕವಿಟ್ಟುಕೊಂಡಿದ್ದ ಇವರು, ಅಲ್ಲಿಯ ಸುರಪುರದರಸರ ಅರಮನೆಯಲ್ಲಿ ವಾಸವಾಗಿದ್ದರು. ೨೦೦೨ರಲ್ಲಿ ಇವರು ನಿಧನರಾದರು.

ಇವರಿಗೆ ಮೂರು ಜನ ಮಕ್ಕಳಿದ್ದಾರೆ. ಹಿರಿಯ ಮಗ ರಾಜಾಕೃಷ್ಣಪ್ಪನಾಯಕರು ಇಂಜಿನೀಯರಾಗಿದ್ದಾರೆ. ರಾಜಾಸೀತಾರಾಮನಾಯಕರು ಸುರಪುರದಲ್ಲಿ ಪೆಟ್ರೋಲ್ ಬಂಕ್‌ನ್ನು ಹೊಂದಿದ್ದಾರೆ. ಈ ಪೆಟ್ರೋಲ್ ಬಂಕ್ ಇಡೀ ರಾಜ್ಯದಲ್ಲಿಯೇ ಸ್ವಚ್ಛ ಹಾಗೂ ಸುಂದರ ಬಂಕ್‌ಯೆಂದು ಹೆಸರಾಗಿದೆ. ಇವರ ತೃತೀಯ ಪುತ್ರ ರಾಜಾ ಶ್ರೀನಿವಾಸನಾಯಕರು ರಾಜಕೀಯ ಪ್ರವೇಶಿಸಿ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದಾರೆ. ಹೀಗೆ ಈ ಮನೆತನ ಇಂದು ಒಂದಲ್ಲಾ ಒಂದು ರೀತಿಯಲ್ಲಿ ರಾಜಕೀಯದೊಂದಿಗೆ, ಜನರ ಸಾಂಸ್ಕೃತಿಕ, ಸಾಮಾಜಿಕ ಬದುಕಿನೊಂದಿಗೆ ಮಿಳಿತಗೊಂಡಿದೆ. ಆ ಭಾಗದ ಜನರಿಗೆಲ್ಲಾ ಇಂದಿಗೂ ದೊರೆಗಳಾಗಿಯೇ ಇದ್ದಾರೆ.

## ೨.೩ ಆನೆಗೊಂದಿ ನಾಯಕ ಅರಸರು

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಿಂದ ನೈರುತ್ಯಕ್ಕೆ ೧೨ ಕಿ.ಮೀ. ಅಂತರದಲ್ಲಿರುವ ಆನೆಗೊಂದಿ ಒಂದು ಪ್ರಸಿದ್ಧ ಐತಿಹಾಸಿಕ ತಾಣ. ಇದು ಪೌರಾಣಿಕವಾಗಿ ಪಂಪಾಕ್ಷೇತ್ರ, ಭಾಸ್ಕರ ಕ್ಷೇತ್ರ, ಪಂಪಾತೀರ್ಥ, ವಿರೂಪಾಕ್ಷ ತೀರ್ಥ, ಕಿಷ್ಕಿಂದಾ ಕ್ಷೇತ್ರ ಮುಂತಾದ ಹೆಸರುಗಳನ್ನು ಹೊಂದಿರುವ ಈ ಪ್ರದೇಶ ಸದ್ಯ ಆನೆಗೊಂದಿಯೆಂದು ಕರೆಯಲ್ಪಟ್ಟಿದೆ.

ಬೇಡ ಜನಾಂಗದ ಪಾಳೆಯಗಾರಿಕೆಯ ಮೊದಲ ಸ್ಥಳವಾಗಿರುವ ಆನೆಗೊಂದಿ, ಅನೇಕ ಪಾಳೆಯಗಾರ ವಂಶಸ್ಥರು ತಮ್ಮ ಮೂಲಸ್ಥಳವೆಂದು ಹೇಳಿಕೊಳ್ಳುವುದುಂಟು. ಈ ಆನೆಗೊಂದಿಯ ನಾಯಕ ಅರಸರ

ಇತಿಹಾಸವನ್ನು ವಿಜಯನಗರ ಪೂರ್ವದ ಆನೆಗೊಂದಿ ನಾಯಕ ಅರಸರು, ವಿಜಯನಗರ ಅವಧಿಯ ನಾಯಕ ಅರಸರು, ವಿಜಯನಗರೋತ್ತರ ನಾಯಕ ಅರಸರು ಎಂದು ಮೂರು ಭಾಗವಾಗಿ ವಿಭಾಗಿಸ ಬಹುದಾಗಿದೆ.

ವಿಜಯನಗರ ಸಾಮ್ರಾಜ್ಯಕ್ಕಿಂತ ಮೊದಲು, ತುಂಗಭದ್ರ ನದಿ ದಂಡೆಯ ಮೇಲಿನ ಕುಮ್ಮಟದುರ್ಗದ ಅರಸರ ಕಾಲದಲ್ಲಿ ಬೇಡರು ಒಂದು ನಿಶ್ಚಿತ ನಿರ್ದಿಷ್ಟ ನೆಲೆಯನ್ನು ಕಂಡುಕೊಂಡರು. ಆ ಸಂದರ್ಭದಲ್ಲಿ ಬೇಡರು ಕುಮ್ಮಟದುರ್ಗದ ಸುತ್ತಮುತ್ತ ನೆಲೆಯೂರಿದರು. ಆನೆಗೊಂದಿ ಮೂಲತಃ ಬೇಡರದ್ದೇ ಆಗಿದೆ. ಆನೆಗೊಂದಿಯಲ್ಲಿ ಮೊದಲು ಸಂಸ್ಥಾನ ಸ್ಥಾಪಿಸಿದ ಮುಮ್ಮಡಿ ಸಿಂಗೇಯನಾಗಲಿ, ಅವರ ಮಗನಾದ ಕಂಪಿಲರಾಯ ಮತ್ತು ಮೊಮ್ಮಗನಾದ ಕುಮಾರರಾಮರು ಬೇಡರೆ.[೧೧೩] ಇದು ಅವರ ರಾಜ್ಯದ ಆಯಕಟ್ಟಿನ ಸ್ಥಳವಾಗಿತ್ತು.

ಆನೆಗೊಂದಿಯ ನಾಯಕರು ಕ್ರಿ.ಶ.೧೩೫೦ಕ್ಕೂ ಮುಂಚೆ ಆಳ್ವಿಕೆ ನಡೆಸಿದ್ದರು ಎಂದು ಫೆರಿಸ್ತಾ ಹೇಳಿಕೆಯಿಂದ ತಿಳಿದುಬರುತ್ತದೆ.[೧೧೪] ಪೋರ್ಚುಗೀಸ್ ಪ್ರವಾಸಿ ಪೆರ್‌ನೋವ್ ನ್ಯೂನಿಜ್ ಹೇಳುವಂತೆ "ಕ್ರಿ.ಶ. ೧೨೩೦ರಲ್ಲಿ ದೆಹಲಿ ಸುಲ್ತಾನನ ಮಗ ಹಾಗೂ ಮಧ್ಯಭಾರತದ ದೇವಗಿರಿಯ ಪ್ರತಿನಿಧಿಯಾಗಿದ್ದ ಮಹ್ಮದ್ ಬಿನ್ ತೊಗಲಕ್ ಆನೆಗೊಂದಿ ರಾಜನ ಮೇಲೆ ದಾಳಿ ಮಾಡಿದನು. ಅಪಾರ ಸೈನ್ಯದೊಂದಿಗೆ ಆನೆಗೊಂದಿ ರಾಜನು ಅವರ ವಿರುದ್ಧ ಹೋರಾಡಿ ಗೆಲ್ಲುವುದು ಅಸಾಧ್ಯವಾದಾಗ ಹತ್ತಿರದ ಚಿನ್ನಮಗೋಟದ ಪರಿಸರಕ್ಕೆ ತೆರಳುತ್ತಾನೆ. ನಂತರ ತನ್ನ ೫೦,೦೦೦ ಸೈನಿಕರಲ್ಲಿ ೫೦೦೦ ಸೈನಿಕರನ್ನು ಆಯ್ದುಕೊಂಡು ೧೨ ವರ್ಷ ಸತತವಾಗಿ ದೆಹಲಿಯ ಸುಲ್ತಾನರೊಂದಿಗೆ ಯುದ್ಧ ಮಾಡಿದ. ಈತನಿಗೆ ಅಪಾರ ನಷ್ಟವಾಯಿತು. ಕೊನೆಯಲ್ಲಿ ಆರು ಜನ ವೃದ್ಧರು ಉಳಿದುಕೊಂಡರು. ಆಗ ಸಾಮ್ರಾಜ್ಯದ ಬಹುಭಾಗ ದೆಹಲಿಯವರ ದಂಗೆಗೆ ತುತ್ತಾಯಿತು. ದೆಹಲಿ ಸುಲ್ತಾನರು ವಾಪಸ್ಸು ಹೋಗಲು ತಯಾರಾದಾಗ ಸಮೃದ್ಧವಾದ ಈ ಪ್ರದೇಶವನ್ನು ಕಳೆದುಕೊಳ್ಳಲು ಇಷ್ಟಪಡದೆ ಸ್ಥಳೀಯರ ಮಾಹಿತಿಯ ಮೇರೆಗೆ ಈತನ ಸಲಹೆಗಾರರ ಸೂಚನೆಯಂತೆ ಉಳಿದಿದ್ದ ಆರು ಮಂದಿಯಲ್ಲಿ ಒಬ್ಬನಾದ ದೇವರಾಯನಿಗೆ ಪಟ್ಟ ಕಟ್ಟಲಾಯಿತು.[೧೧೫]

ಅನಂತರದಲ್ಲಿ ಆನೆಗೊಂದಿಯು ಸಾಕಷ್ಟು ಔನ್ನತ್ಯಕ್ಕೆ ಬಂದಿತು. ತನ್ನ ಪ್ರಭಾವ ಮತ್ತು ಅಧಿಕಾರವನ್ನು ಬೆಳೆಸಿಕೊಂಡಿತು. ಇದನ್ನು ಆಳುತ್ತಿದ್ದ ನಾಯಕರು ಸಾಕಷ್ಟು ಸಂಪನ್ಮೂಲಗಳನ್ನು ಹೊಂದಿದ್ದರೆಂದು ತಿಳಿಯುತ್ತದೆ.

ವಿಜಯನಗರದ ಸ್ಥಾಪಕರಾದ ಬುಕ್ಕ ಮತ್ತು ಹರಿಹರರು ಹೊಯ್ಸಳ ಬಲ್ಲಾಳರ ಮಾಂಡಲಿಕರಾಗಿದ್ದರು. ನಂತರದಲ್ಲಿ ವಾರಂಗಲ್ಲಿನ ರಾಜನ ಭಂಡಾರದಲ್ಲಿಯೂ ಸೇವೆಗೈಯ್ಯುತ್ತಿದ್ದರು. ಅದು ಕ್ರಿ.ಶ.೧೩೨೩ರಲ್ಲಿ

ಲೂಟಿಯಾಗಿ ವಿನಾಶ ಹೊಂದಿದಾಗ ಅಲ್ಲಿಂದ ಆನೆಗೊಂದಿ ಚಿಕ್ಕರಾಜನ ಹತ್ತಿರ ಸೇವೆ ಕೈಗೊಂಡರು. ಅವರು ಮತ್ತು ಅವರ ದೊರೆಗಳು ಸೂರೆ ಮಾಡುತ್ತಿದ್ದ ಮುಸ್ಲಿಂರ ನಡತೆಯಿಂದ ಭಯ ಹಾಗೂ ಜಿಗುಪ್ಸೆ ಪಟ್ಟು ತಮ್ಮ ಧರ್ಮಕ್ಕಾಗಿ ಪಣತೊಟ್ಟು ಆನೆಗೊಂದಿಯಲ್ಲಿ ಅನುಕ್ರಮವಾಗಿ ಅಮಾತ್ಯ ಮತ್ತು ಭಂಡಾರಿ ಹುದ್ದೆಗಳಿಗೆ ಏರಿದರು. ಅತ್ತ ದಿಲ್ಲಿಯ ಮಹ್ಮದ್‌ನ ಸೋದರಳಿಯ ಬಹುಉದ್ದೀನನಿಗೆ ಆಶ್ರಯವಿತ್ತು ದರಿಂದ ಕ್ರಿ.ಶ.೧೩೩೪ರಲ್ಲಿ ಸುಲ್ತಾನ ದಾಳಿಯಿಟ್ಟ. ಇಬ್ನಬತೂತಾ ಹೇಳಿರುವಂತೆ ಆನೆಗೊಂದಿ ಪತನಗೊಂಡಿತು. ಮತ್ತು ಆ ರಾಜ್ಯವನ್ನಾಳಲು ಮಲ್ಲಿಕ್‌ನನ್ನು ತನ್ನ ಪ್ರತಿನಿಧಿಯಾಗಿ ಕಳುಹಿಸಿ ಸುಲ್ತಾನ ರಾಜ್ಯವನ್ನು ತಿರುಗಿಕೊಟ್ಟ.[೧೦೬] ಇತ್ತ ಕ್ರಿ.ಶ. ೧೩೩೬ರಲ್ಲಿ ವಿಜಯನಗರವು ಸ್ಥಾಪನೆಯಾಯಿತು. ಈ ವಿಜಯನಗರದ ತೊಟ್ಟಿಲಾಗಿ ಹಾಗೂ ಅವಿಭಾಜ್ಯ ಅಂಗವಾಗಿ, ಮೊದಲ ರಾಜಧಾನಿಯಾಗಿ ಆನೆಗೊಂದಿ ಪರಿಣಮಿಸಿತು. ಇಲ್ಲಿ ಆಳ್ವಿಕೆ ಮಾಡಿದವರು ನಾಯಕ ಜನಾಂಗಕ್ಕೆ ಸೇರಿದವರೇ ವಿನಃ ಬೇರೆ ಜನಾಂಗದವರಲ್ಲವೆಂದು ನಿರ್ಧಾರವಾಗಿದೆ. ಇದಕ್ಕೆ ಪೂರಕವಾಗಿ ಆನೆಗೊಂದಿ ಸಂಸ್ಥಾನದ ಜಯರೇಖೆಯ ನಕಲು ಈ ರೀತಿ ಇದೆ : "ಶ್ರೀ ಗುರು ಪಂಪಾವಿರೂಪಾಕ್ಷನೇ ನಮಃ ಶಾಲಿವಾಹನಶಕ ವರ್ಷಂಗಳು ೧೫೩ಕ್ಕೆ ಸರಿಯಾದ ವಿರೋಧಿನಾಮ ಸಂವತ್ಸರದ ಚೈತ್ರ ಶುದ್ಧ ೫ ಭಾನುವಾರ ಚಂದನಾವತಿಯೆಂಬ ಆನೆಗೊಂದಿ ನರಪತಿ ದೊರೆಗಳ ಜಯರೇಖೆ ನಕಲು. ಶ್ರೀಮಾನ್ ರಾಜಾಧಿರಾಜ, ರಾಜತೇಜೋನಿಧಿ ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕ, ಕಸ್ತೂರಿ ತಿಲಕ, ಕಾಮಕೇತನ, ಚಂಡಪ್ರಚಂಡ ಕುಲ ಭೇರುಂಡ, ನರಪತಿ ಮಂಡಲಾಧರ ಶ್ರೀಮಾನ್ 'ನಾಯಕ ವಂಶ' ನಿತ್ಯಾಚಾರ ಸತ್ಯಾಚಾರ ಲಿಂಗಾಚಾರ ಪ್ರವರ್ತನ ಸದ್ಧರ್ಮವುಳ್ಳ, ಚಂದ್ರವಂಶ ಮಹೀಪತಿಗೋತ್ರ ಮನುಮುನಿಸೂತ್ರ ಸಂಜನಿತರಾದ ಮಂಜಪ್ಪನಾಯ್ಕ ಭೂಮೀಪತಿಯ ಶ್ರೀ ಲಕ್ಷ್ಮಿದೇವಿ ಹಿರೇರಾಜರ ಪೆಟ್ಟಿಗೆಯನ್ನು ಪೂಜಿಸುತ್ತಾ ಪಂಪಾಕ್ಷೇತ್ರ ನಿವಾಸಿಗಳಾದ ಹರಿಹರಸ್ವಾಮಿಗಳವರ ವರವಂ ಪಡೆದು ಸುಖದಿಂದ ರಾಜ್ಯಪಾಲನೆ ಮಾಡುತ್ತಿದ್ದರು"[೧೦೭] ಎಂಬ ವಿವರಣೆ ಇದೆ.

ಅಲ್ಲದೆ ಆನೆಗೊಂದಿ ಕೆಲವು ಪಾಳೆಯಗಾರರ ಪೂರ್ವಜರಿಗೆ ತಾಣವಾಗಿತ್ತು ಎಂಬುದು ಗಮನಾರ್ಹ ಅಂಶ. ರತ್ನಗಿರಿಯ ನಾಯಕನಾದ ಇರಸಪ್ಪನಾಯಕನ ಮಗ ಹಿರೇಗೌಡ ಕ್ರಿ.ಶ.೧೩೯೯-೧೪೧೮ರಲ್ಲಿ ಆನೆಗೊಂದಿ ಯಲ್ಲಿ ಕಂಡುಬಂದ ವಿಲ್ಲಂಚ್ಛರ ಹಾವಳಿಯನ್ನು ಎದುರಿಸುವಲ್ಲಿ ಸಹಾಯ ಮಾಡಿದನು. ಇದರಿಂದ ಸಂತೋಷಗೊಂಡ ಆನೆಗೊಂದಿ ಅರಸ ಈತನಿಗೆ ಅನೇಕ ಬಿರುದು ಬಾವಲಿಗಳನ್ನಿತ್ತು ಸನ್ಮಾನಿಸಿದ.[೧೦೮] ಅಲ್ಲದೆ ಹರತಿಯ ದೊರೆ ತಿಪ್ಪರಾಜನ ತಂದೆ, ಇಲ್ಲವೆ ತಾತ ಆನೆಗೊಂದಿಯ ಕಡೆಯಿಂದ ವಲಸೆ ಬಂದವರು. ಹಾಗೆಯೇ ನಾಯಕನಹಟ್ಟಿ ಮನೆತನದ ಸ್ಥಾಪಕ ಕಾಟೇಮಲ್ಲನಾಯಕನು ಆನೆಗೊಂದಿಯಿಂದ ಬಂದವನು.[೧೦೯] ತರೀಕೆರೆಯ ಪಾಳೆಯಗಾರರ ವಂಶವೃತ್ತಾಂತದ ಪ್ರಕಾರ ಧೂಮರಾಜ ಎಂಬುವನು ವಿಜಯನಗರದಿಂದ ಬಂದವನು.[೧೧೦] ಚಿತ್ರದುರ್ಗದ ಮೂಲಪುರುಷ ಚಿತ್ರನಾಯಕ

ಆನೆಗೊಂದಿಯ ಕಡೆಯಿಂದ ಬಂದು ಉಚ್ಚಂಗಿದುರ್ಗ, ಬಿಳಚೋಡು, ಕೋಗುಂಟೆ, ಹೆಬ್ಬಾಳು ಮಾರ್ಗವಾಗಿ ನೀರ್ಥಡಿಗೆ ಬಂದನು.[೨೧] ವಿಜಯನಗರ ಅಸ್ತಿತ್ವದಲ್ಲಿದ್ದರೂ ಅವರ ಅಧೀನದಲ್ಲಿ ಆನೆಗೊಂದಿ ಅರಸರು, ಅಧಿಕಾರದಲ್ಲಿದ್ದರು. ಆಗ ಆನೆಗೊಂದಿ ವಿಜಯನಗರದ ಕೊನೆಯ ಠಾಣೆಯಾಯಿತು.

ಕ್ರಿ.ಶ.೧೫೨೦-೨೨ರಲ್ಲಿ ಪೋರ್ಚುಗಲ್ಲಿಗೆ ಡೋಮಿಂಗೊ ಫಿಯಾಸ್ ಆನೆಗೊಂದಿಗೆ ಸಂದರ್ಶನ ನೀಡುತ್ತಾನೆ. ಆತನ ಪ್ರಕಾರ "ಆನೆಗೊಂದಿಯ ಗೋಡೆಗಳು ಭದ್ರವಾಗಿದ್ದು, ಎರಡು ಪ್ರವೇಶ ದ್ವಾರಗಳನ್ನು ಹೊಂದಿದೆ. ಇದು ಕೆಲವೇ ಕೆಲವು ನಿವಾಸಿಗಳನ್ನು ಹೊಂದಿದೆ. ಇದು ವಿಜಯನಗರದ ಅರಸನ ನೇತೃತ್ವದಲ್ಲಿ ಅಧಿಕಾರ ನಡೆಸಲ್ಪಡುತ್ತದೆ." ಈ ಸಮಯದಲ್ಲಿ ಆನೆಗೊಂದಿಯು ವಿಜಯನಗರದ ಬಂದೋಬಸ್ತಿನಲ್ಲಿರುತ್ತದೆ.[೨೨]

ಕ್ರಿ.ಶ.೧೫೬೫ರಲ್ಲಿ ವಿಜಯನಗರ ಪತನವಾದ ಮೇಲೆ ಅರವೀಡುವಂಶ, ಪೆನುಗೊಂಡ, ಚಂದ್ರಗಿರಿ ಮತ್ತು ವೆಲ್ಲೂರಿನಲ್ಲಿ ನೆಲೆಸಿದರು. ಮತ್ತೆ ಆನೆಗೊಂದಿಯ ಪಾಳೆಯಗಾರನಲ್ಲಿ ಆಶ್ರಿತರಾದರು. ನಂತರದಲ್ಲಿ ಇಲ್ಲಿಯವರೆಗೆ ವಿಜಯನಗರದವರ ಅಧೀನದಲ್ಲಿದ್ದ ಆನೆಗೊಂದಿ ಸ್ವತಂತ್ರವಾದ ಸಣ್ಣರಾಜ್ಯವಾಗಿ ರೂಪುಗೊಂಡಿತು. ಕ್ರಿ.ಶ.೧೬ನೇ ಶತಮಾನದಲ್ಲಿ ಆನೆಗೊಂದಿಯ ಸುತ್ತಮುತ್ತಲ ಕೆಲವು ಜಿಲ್ಲೆಗಳು ಸೇರಿ, ಆನೆಗೊಂದಿ ಸ್ವತಂತ್ರ ರಾಜ್ಯ ರೂಪಿತವಾಯಿತು. ಆಗ ಇದು ೧೨೧ ಹಳ್ಳಿಗಳನ್ನು ಒಳಗೊಂಡಿದ್ದು, ವಾರ್ಷಿಕ ಕಂದಾಯ ವರಮಾನ ೧,೭೮,೭೨೫ ಬಂಗಾರದ ಪಗೋಡಗಳಾಗಿತ್ತು. ಕೆಲವೇ ದಿನಗಳಲ್ಲಿ ಆನೆಗೊಂದಿ ರಾಜ್ಯ ಬಿಜಾಪುರ ಮತ್ತು ಗೋಲ್ಕೊಂಡ ಅರಸರ ಅಧಿಕಾರ ವ್ಯಾಪ್ತಿಗೆ ಬಂದಿತು.[೨೩] ಮುಂದೆ, ಕ್ರಿ.ಶ.೧೬೮೯ರಲ್ಲಿ ಆನೆಗೊಂದಿಯು ಔರಂಗಜೇಬನ ಕೈವಶವಾಗುತ್ತದೆ. ಈ ಅವಧಿಯಲ್ಲಿ ಆನೆಗೊಂದಿಯ ಅರಸರಿಗೆ ತುಂಗಭದ್ರ ನದಿಯ ಉತ್ತರ ಮತ್ತು ದಕ್ಷಿಣಕ್ಕೆ ಕಂದಾಯ ನೀಡದೆ ಪುಕ್ಕಟೆಯಾಗಿ ಭೂಮಿ ಸಾಗುವಳಿ ಮಾಡಲು ಅನುಮತಿಯನ್ನು ನೀಡಲಾಯಿತು.[೨೪] ೧೭ನೇ ಶತಮಾನದಲ್ಲಿ ಮೊಗಲರ ಸಾಮಂತರಾಗಿದ್ದ ಆನೆಗೊಂದಿ ಸಂಸ್ಥಾನಕ್ಕೆ ಒಂಬತ್ತು ವಿಭಾಗಗಳಿದ್ದವು. ಇವು ವಿದ್ಯಾನಗರ, ಆನೆಗೊಂದಿ, ಗಂಗಾವತಿ, ಕಂಪ್ಲಿ, ಕಮಲಾಪುರ, ತೆಕ್ಕಲಕೋಟೆ, ಹೊಸೂರು, ವಡ್ಡು, ದರೋಜಿ, ಹಂಡ್ರಾವಿ, ಅಂತಪುರ, ಶಿರೇಕೊಳ್ಳ.[೨೫]

ಕ್ರಿ.ಶ.೧೭೦೭ರಲ್ಲಿ ಅಸಫ್ ಜಾ ಎಂಬ ಹೈದ್ರಾಬಾದಿನ ವೈಸರಾಯ ಆನೆಗೊಂದಿಯ ಎಲ್ಲಾ ಭೂಮಿಯನ್ನು ತನ್ನ ವಶಕ್ಕೆ ತೆಗೆದುಕೊಂಡ. ಆಗ ಇವರು ಹೈದ್ರಾಬಾದಿನ ವೈಸರಾಯರ ಅಧೀನದಲ್ಲಿರ ಬೇಕಾದ ಸಂದರ್ಭ ಬರುತ್ತದೆ. ಆದರೂ ಆ ಸಂದರ್ಭದಲ್ಲಿ ಆನೆಗೊಂದಿ ಅರಸರು, ತಮ್ಮ ಸಂಬಂಧಿ ನಾಯಕ ಅರಸುಮನೆತನಗಳ ಕೆಲವು ಸಣ್ಣಪುಟ್ಟ ಧಾಳಿಗಳಲ್ಲಿ ಅವರಿಗೆ ಬೆಂಬಲವನ್ನು ನೀಡುತ್ತಿದ್ದುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ವಡ್ಡು, ದರೋಜಿ, ಬಾಣಾರಾವಿ ಪಾಳೆಯಗಾರರಿಗೆ ಆನೆಗೊಂದಿ ಅರಸರ ಪ್ರೋತ್ಸಾಹವಿದ್ದುದು ಕಂಡುಬರುತ್ತದೆ.[೨೬]

ಮುದಗಲ್‌ನಲ್ಲಿ ತೊದ್ದಪ್ಪರೆಡ್ಡಿಯು ಆಳುತ್ತಿದ್ದನು. ಆನೆಗೊಂದಿಯ ಅರಸ ತೊದ್ದಪ್ಪರೆಡ್ಡಿಯನ್ನು ಸೋಲಿಸಿ ಸೆರೆ ಹಿಡಿದನು. ಆಗ ತೊದ್ದಪ್ಪರೆಡ್ಡಿಯು ಹೈದ್ರಾಬಾದ್ ನಿಜಾಮನಿಗೆ ಮೊರೆಹೋದನು. ನಿಜಾಮ ಆನೆಗೊಂದಿಯ ಅರಸನನ್ನು ದಂಡಿಸಲು, ಸುರಪುರದ ಇಮ್ಮಡಿ ಪಾಮನಾಯಕ(ಕ್ರಿ.ಶ.೧೭೨೭-೧೭೪೧)ನನ್ನು ಕಳುಹಿಸಿದರು. ಆಗ ಪಾಮನಾಯಕ ಮುದಗಲ್ಲಿಗೆ ತೆರಳಿ ೨೧ ದಿನಗಳವರೆಗೆ ಕಾಳಗ ಮಾಡಿ ಮುದಗಲ್ ಕಿಲ್ಲೆಯನ್ನು ಗೆದ್ದು, ಆನೆಗೊಂದಿಯ ಅರಸ ತಿರುಮಲರಾಯನನ್ನು ಸೆರೆ ಹಿಡಿದು ಒಂದು ವರ್ಷದವರೆಗೆ ಸೆರೆಯಲ್ಲಿಟ್ಟು ಕೊನೆಗೆ ೩ ಲಕ್ಷ ರೂ.ವನ್ನು ತಿರುಮಲರಾಯನಿಂದ ಪಡೆದುಕೊಂಡು ಬಿಡುಗಡೆ ಮಾಡಿದನು. ತಿರುಮಲರಾಯನಿಗೆ ೧೬ ಗ್ರಾಮಗಳನ್ನು ಬಿಟ್ಟು ಕರಾರು ಮಾಡಿಸಿಕೊಂಡನು.[೧೨೭]

ಆನೆಗೊಂದಿ ಅರಸರು ಚಿತ್ರದುರ್ಗದ ಹಿರೇಮದಕರಿನಾಯಕ(ಕ್ರಿ.ಶ.೧೭೨೧-೧೭೪೯)ನಿಗೆ ತನ್ನ ಮಗಳಾದ ಗಂಡೋಬವ್ವ ಅಥವಾ ಗಂಡಿಲ ಓಬವ್ವನಾಗತಿಯನ್ನು ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದ್ದರು.[೧೨೮] ಗಂಡೋಬವ್ವನಾಗತಿ ಪಟ್ಟದರಾಣಿಯಾಗಿದ್ದು ಮಗ ಕಸ್ತೂರಿ ರಂಗಪ್ಪನಾಯಕನ ತರುವಾಯ ಎರಡು ವರ್ಷಗಳವರೆಗೆ ಚಿತ್ರದುರ್ಗದ ಅಧಿಕಾರ ವಹಿಸಿಕೊಂಡಿದ್ದಳು.

ಚಿತ್ರದುರ್ಗದೊಂದಿಗೆ ವೈವಾಹಿಕ ಸಂಬಂಧ ಬೆಳಸಿದ್ದರೂ ಆನೆಗೊಂದಿ ಅರಸರು ಅನೇಕ ಸಾರಿ, ಚಿತ್ರದುರ್ಗದವರ ಮೇಲೆ ಪಾಳೆಯಗಾರರು ಮುತ್ತಿಗೆ ಹಾಕಿದಾಗ ಅವರೊಂದಿಗೆ ಇವರೂ ತೆರಳಿದ ಅನೇಕ ಘಟನೆಗಳಿವೆ. ಹಿರೇಮದಕರಿನಾಯಕನು ಚಿತ್ರದುರ್ಗದ ಅರಸನಾಗಿದ್ದಾಗ, ಕೆಳದಿಯ ಬಸವಪ್ಪನಾಯಕ (ಕ್ರಿ.ಶ.೧೭೩೯-೧೭೫೪)ನ ಸೂಚನೆಯಂತೆ ಕ್ರಿ.ಶ.೧೭೪೧ರಲ್ಲಿ ಹರಪನಹಳ್ಳಿ, ಸವಣೂರು, ರಾಯದುರ್ಗದ ಪಾಳೆಯಗಾರರೊಂದಿಗೆ ಆನೆಗೊಂದಿಯವರು ಸೇರಿ ೮೦೦೦ ಕುದುರೆ, ೨೦,೦೦೦ ಕಾಲುಬಲದೊಂದಿಗೆ ಚಿತ್ರದುರ್ಗಕ್ಕೆ ಸೇರಿದ ರಾಮಗಿರಿ ಕೋಟೆಯನ್ನು ವಶಪಡಿಸಿಕೊಡರು. ಅದೇ ರೀತಿ ಮಾಯಕೊಂಡ ಕಾಳಗದಲ್ಲಿ ಭಾಗವಹಿಸಿದ್ದರು.[೧೨೯]

ಕ್ರಿ.ಶ.೧೭೪೯ರಲ್ಲಿ ಆನೆಗೊಂದಿಯ ಭೂಪ್ರದೇಶಗಳು ಮರಾಠರ ದಾಳಿಗೊಳಪಟ್ಟವು. ಸೋತ ಆನೆಗೊಂದಿ ಅರಸರಿಗೆ ವಾರ್ಷಿಕವಾಗಿ ೭೦೦೦ ಪಗೋಡ ತೆರಿಗೆಯನ್ನು ಹೇರಿದರು.[೧೩೦] ಕ್ರಿ.ಶ.೧೭೭೬ರಲ್ಲಿ ಆನೆಗೊಂದಿಯು ಮೈಸೂರಿನ ಹೈದರಾಲಿಯ ಅಧೀನಕ್ಕೊಳಪಟ್ಟಿತು. ಅವನು ೧೨೦೦೦ ಪಗೋಡಗಳನ್ನು ತೆರಿಗೆ ರೂಪದಲ್ಲಿ ಆನೆಗೊಂದಿಯವರು ನೀಡುವಂತೆ ಆದೇಶ ಹೊರಡಿಸಿ ಇವರಿಂದ ವಸೂಲಿ ಮಾಡಿದನು.

ಹೈದರಾಲಿಯ ನಂತರ ಟಿಪ್ಪು ಆನೆಗೊಂದಿಯನ್ನು ಆಕ್ರಮಿಸಿ ತನ್ನ ವಶಕ್ಕೆ ತೆಗೆದುಕೊಂಡನಲ್ಲದೆ ಇಲ್ಲಿಯ ದೇವಾಲಯಗಳನ್ನು ಕೆಡವಿದನು. ಅರಮನೆಯನ್ನು ಮತ್ತು ಅರಸರ ಆಡಳಿತದ ದಾಖಲೆಗಳನ್ನು ಸುಟ್ಟುಹಾಕಿದನು. ಎಲ್ಲಾ ಭೂಪ್ರದೇಶವನ್ನು ಆಕ್ರಮಿಸಿಕೊಂಡು ಅವರ ಭೂಮಿಗಳನ್ನು ವಶಪಡಿಸಿಕೊಂಡನು.

ಆರ್ಥಿಕವಾಗಿ ಬಹಳಷ್ಟು ಕೆಳಮಟ್ಟಕ್ಕೆ ತಳ್ಳಲ್ಪಟ್ಟ ಆನೆಗೊಂದಿ ಅರಸರಿಗೆ ಟಿಪ್ಪುವಿನ ಮಂತ್ರಿ ದಿವಾನ್ ಪೂರ್ಣಯ್ಯ ವರ್ಷಕ್ಕೆ ೨೦೦೦ ರೂ.ಗಳ ಭತ್ಯೆಯನ್ನು ಪಡೆಯುವಂತೆ ವ್ಯವಸ್ಥೆ ಮಾಡಿದನು. ಕ್ರಿ.ಶ.೧೭೯೯ರಲ್ಲಿ ಟಿಪ್ಪು ಮರಣ ಹೊಂದಿದನು.

ಇತ್ತ ಹೈದ್ರಾಬಾದ್ ನಿಜಾಮ ಮತ್ತು ಬ್ರಿಟಿಷರ ಒಪ್ಪಂದದ ಮೇರೆಗೆ ಆನೆಗೊಂದಿಯು ಹೈದ್ರಾಬಾದ್ ನಿಜಾಮನ ಆಡಳಿತಕ್ಕೆ ವರ್ಗಾವಣೆಯಾಯಿತು. ತುಂಗಭದ್ರೆಯ ದಕ್ಷಿಣಕ್ಕಿರುವ ಭೂಪ್ರದೇಶವು ಮದ್ರಾಸ್ ಪ್ರೆಸಿಡೆನ್ಸಿಯ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ತುಂಗಭದ್ರಾ ನದಿಯು ಎರಡು ಪ್ರಾಂತ್ಯಗಳ ಸರಹದ್ದಾಯಿತು. ಮೂರನೇ ಒಂದು ಭಾಗ ನಿಜಾಮರಲ್ಲಿ ಉಳಿದರೆ ಮೂರನೇ ಎರಡು ಭಾಗ ಬ್ರಿಟಿಷರ ಪಾಲಾಯಿತು. ಹೀಗಾಗಿ ಆನೆಗೊಂದಿ ಮುಸ್ಲಿಂರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಉರ್ದು ಇವರ ಆಡಳಿತ ಭಾಷೆಯಾಯಿತು.[೧೩೧]

ನಿಜಾಮರು ಇವರಿಗೆ (೧೮೦೧-೧೮೩೪) ಕೊಡುತ್ತಿದ್ದ ಪೆನ್ಶನ್ ಪದ್ಧತಿಯನ್ನು ತೆಗೆದು ಹಾಕಿ ಮೊತ್ತಕ್ಕೆ ಸಮನಾದ ಆದಾಯವುಳ್ಳ ಐದು ಗ್ರಾಮಗಳನ್ನು ರಾಜನಿಗೆ ಮದದ್‌ಮಾಷ್ ರೂಪದಲ್ಲಿ ಜಾಗೀರಾಗಿ ಕೊಟ್ಟರು. ಈ ಗ್ರಾಮಗಳು ಹಿಂದೆ ಆನೆಗೊಂದಿ ಸಂಸ್ಥಾನಕ್ಕೆ ಸೇರಿದ ಗ್ರಾಮಗಳೇ ಆಗಿದ್ದವು. ಸಂಸ್ಥಾನದ ಪಾಲಕರು ಈ ಐದು ಗ್ರಾಮಗಳನ್ನು ಅಭಿವೃದ್ಧಿಪಡಿಸಿದರು. ಜೊತೆಗೆ ಇನ್ನು ಹದಿನಾಲ್ಕು ಗ್ರಾಮಗಳನ್ನು ಹೊಸದಾಗಿ ನಿರ್ಮಿಸಿ ಕೃಷಿಗೆ ಅನುಕೂಲವಾಗುವಂತೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟರು.[೧೩೨]

ಕ್ರಿ.ಶ. ೧೮೩೪ರಲ್ಲಿ ತುಂಗಭದ್ರ ನದಿಯ ದಕ್ಷಿಣದ ದಂಡೆಯ ಮೇಲಿನ ಭೂಮಿಯ ಬದಲಾಗಿ, ಬ್ರಿಟಿಷರಿಂದ ಮೊದಲ ವಿಶ್ರಾಂತಿ ವೇತನ ಪಡೆದ ಆನೆಗೊಂದಿಯ ಅರಸ ರಾಜತಿರುಮಲರಾಯ. ಈತನ ಮರಣದ ನಂತರ ಈತನ ಮಗ ವೀರವೆಂಕಟಪತಿ ಉತ್ತರಾಧಿಕಾರಿಯಾಗುತ್ತಾನೆ. ವೀರವೆಂಕಟಪತಿ ವಿವಾಹವಾಗದೆ ಮರಣ ಹೊಂದಿದನು. ಸಹೋದರಿಯ ಮಗನಾದ ತಿರುಮಲರಾಯನು ಉತ್ತರಾಧಿಕಾರಿ ಯಾದನು. ಈತ ಆನೆಗೊಂದಿಯನ್ನು ವಿಜಯನಗರದ ಆನೆಯ ಮೂಲೆ ಎಂದು ಕರೆಯುತ್ತಾನೆ. ಅವನಿಗೆ ನಿಜಾಮರಿಂದ ಕೆಲವು ಅಧೀನ ಗ್ರಾಮಗಳು ಮಂಜೂರಾದವು. ಇಂಗ್ಲಿಷರಿಂದ ವಿಶ್ರಾಂತಿ ವೇತನದೊಂದಿಗೆ ನದಿಯ ದಕ್ಷಿಣದ ದಂಡೆಯ ಮೇಲಿರುವ ಭೂಮಿಗಳು ಮಂಜೂರಾದವು.

ಕ್ರಿ.ಶ.೧೮೬೬ರಲ್ಲಿ ತಿರುಮಲರಾಯನ ಮಗ ವೆಂಕಟರಾಮರಾಯಲು ಉತ್ತರಾಧಿಕಾರಿಯಾದನು. ನಂತರ ಆತನ ಸಹೋದರ ಕೃಷ್ಣದೇವರಾಯ ಕ್ರಿ.ಶ.೧೮೭೧ ರಿಂದ ೧೮೭೨ರವರೆಗೆ ಪೆನ್ಷನ್‌ದಾರರಾಗಿ ದ್ದರು. ಈ ಸಂದರ್ಭದಲ್ಲಿ ಆನೆಗೊಂದಿ ದುಸ್ಥಿತಿಗೀಡಾಯಿತು. ನಿಜಾಮರಿಗೆ ನೀಡಬೇಕಾಗಿದ್ದ ಭಾರಿ ಮೊತ್ತದ ತೆರಿಗೆ ಸಂದಾಯದಿಂದ ಸಾಲದ ಹೊರೆ ಹೆಚ್ಚಾಯಿತು. ನಿಜಾಮ ಸರಕಾರ ಈತನ ಇಬ್ಬರು ಪತ್ನಿಯರಿಗೆ ಚಿಕ್ಕ ಮೊತ್ತದ ಮಾಸಾಶನವನ್ನು ಹತ್ತು ವರ್ಷಗಳವರೆಗೆ ನೀಡಿತು.

ನಂತರ ಕೃಷ್ಣದೇವರಾಯನ ಚಿಕ್ಕಮ್ಮಳ ಮಗ ಪೆದ್ದ ನರಸಿಂಹರಾಜು ಆನೆಗೊಂದಿಯ ಅರಸನಾದ. ಈತನ ಮರಣದ ನಂತರ ಈತನ ರಾಣಿ ನರಸಿಂಗಮ್ಮ ಕ್ರಿ.ಶ.೧೮೮೫ರಲ್ಲಿ ಆನೆಗೊಂದಿಯ ರಾಣಿಯಾಗುತ್ತಾಳೆ. ಕ್ರಿ.ಶ.೧೮೮೯ರಲ್ಲಿ ಈಕೆ ತೀರಿಕೊಂಡ ನಂತರ ಈಕೆಯ ಸಹೋದರಿ ಕುಪ್ಪಮ್ಮ ಪ್ರಭಾರಿ ರಾಣಿಯಾಗುತ್ತಾಳೆ. ನಂತರ ಈಕೆ ತನ್ನ ಕಿರಿಯ ಸಹೋದರ ಪಂಪಾಪತಿ ರಾಜನನ್ನು ದತ್ತಕ್ಕೆ ತೆಗೆದುಕೊಳ್ಳುತ್ತಾಳೆ. ಪಂಪಾಪತಿ ರಾಜ ಶ್ರೀರಂಗದೇವರಾಯನಾಗಿ ಪುನರ್ ನಾಮಕರಣಗೊಳ್ಳುತ್ತಾನೆ. ನಿಜಾಮ ಸರ್ಕಾರ ದತ್ತು ಸ್ವೀಕಾರವನ್ನು ವಿರೋಧಿಸುತ್ತದೆ. ಈತನ ಅವಧಿಯಲ್ಲಿ ಆನೆಗೊಂದಿ ರಾಜ್ಯವು ಸ್ವಲ್ಪ ಸುಧಾರಿಸಿಕೊಳ್ಳುತ್ತಿರುವಾಗಲೇ ನಿಜಾಮರು ಅವನಿಗೆ ವರ್ಷಕ್ಕೆ ೧೦,೦೦೦ ತೆರಿಗೆ ನೀಡಲು ಒತ್ತಾಯಿಸುತ್ತಾರೆ. ಇದರಿಂದ ಆನೆಗೊಂದಿ ರಾಜ್ಯದ ಆರ್ಥಿಕ ಸ್ಥಿತಿ ಶೋಚನೀಯವಾಗುತ್ತದೆ.

ಆಗ ನಿಜಾಮ ಸರ್ಕಾರ ಡನ್‌ಲಪ್ ಎಂಬ ಅಧಿಕಾರಿಯನ್ನು ನೇಮಿಸುವುದರ ಮೂಲಕ ಎಲ್ಲಾ ರೀತಿಯ ಆಡಳಿತವನ್ನು ಪರಿಶೀಲಿಸುತ್ತದೆ. ನಂತರ ನಿಜಾಮನ ದಿವಾನನಾದ ಸರ್ ಉಸ್ಮಾನ್ ಜಾ ಎಂಬುವರು ಆನೆಗೊಂದಿಯ ಮೇಲಿನ ಸಹಾನುಭೂತಿಯಿಂದ ದತ್ತು ತೆಗೆದುಕೊಳ್ಳುವುದನ್ನು ಅಂಗೀಕರಿಸುವುದರೊಂದಿಗೆ ಸಂಸ್ಥಾನದ ಸಾಲಗಳು ತೀರುವವರೆಗೆ ವರ್ಷಕ್ಕೆ ೫೦೦೦ ರೂ.ಗಳಂತೆಯೂ ಆನಂತರ ೧೦,೦೦೦ ರೂ.ಗಳು ಎಂದು ಕಪ್ಪವನ್ನು ನೀಡುವಂತೆ ನಿರ್ಣಯಿಸುತ್ತಾರೆ.[೧೩೩] ನಂತರ ಶ್ರೀರಂಗರಾಯರು (ಕ್ರಿ.ಶ.೧೮೮೯-೧೯೧೮) ೧೯೦೨ರಲ್ಲಿ ಅಧಿಕಾರಕ್ಕೆ ಬರುತ್ತಾರೆ. ಇವರ ಹಿರಿಯ ಮಗ ದರ್ಬಾರ್ ಕೃಷ್ಣರಾಯರು ಹಾಗೂ ಕ್ರಿ.ಶ.೧೯೧೮ರಲ್ಲಿ ಶ್ರೀರಂಗದೇವರಾಯರು ದೈವಾಧೀನರಾದರು. ಆಗಿನ್ನೂ ಶ್ರೀಕೃಷ್ಣದೇವರಾಯ ಸಣ್ಣವನಾದ್ದರಿಂದ ರಾಣಿ ಕುಪ್ಪಮ್ಮ ಸಂಸ್ಥಾನದ ರಾಜಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದರು. ಇವರ ನಂತರ ಮಗ ವಯಸ್ಕನಾದಾಗ ಸಂಸ್ಥಾನದ ಅಧಿಪತಿಯಾದ. ಆಗ ನಿಜಾಂ ರಾಜ್ಯದ ಭಾಗವಾಗಿದ್ದ ಆನೆಗೊಂದಿಯ ಸಂಸ್ಥಾನವು ಭಾರತದ ಸ್ವಾತಂತ್ರ್ಯದ ನಂತರ ೧೯೪೮ ಸೆಪ್ಟೆಂಬರ್‌ನಲ್ಲಿ ಭಾರತದ ಒಕ್ಕೂಟಕ್ಕೆ ಸೇರಿತು.

ಇಂದು ಆನೆಗೊಂದಿ ನಾಯಕ ಅರಸು ಮನೆತನದ ವಂಶಸ್ಥರು ಆನೆಗೊಂದಿ, ಗಂಗಾವತಿ ಮತ್ತು ಹೊಸಪೇಟೆಯಲ್ಲಿ ವಾಸವಾಗಿದ್ದಾರೆ. ಈಗ ಇವರು ತಾವು ಕ್ಷತ್ರಿಯರೆಂದು ಗುರುತಿಸಿಕೊಳ್ಳುತ್ತಿದ್ದಾರೆ. ಕಾರಣ ಮೂಲತಃ ನಾಯಕ ಜನಾಂಗದವರಾಗಿದ್ದರೂ ಆ ಜಾತಿಯಲ್ಲಿ ತೋರ್ಪಡಿಸಿಕೊಳ್ಳುವ ಮುಕ್ತವಾದ ಮನಸ್ಸಿನ ಕೊರತೆ ಇದೆ. ಅನೇಕ ವರ್ಷಗಳಿಂದ ನಾಯಕ ಜನಾಂಗದ ಸಮ್ಮೇಳನಗಳಲ್ಲಿ ಭಾಗವಹಿಸುತ್ತಾಬಂದ ಇವರು ಈಗ ಕೇವಲ ಕ್ಷತ್ರಿಯ ಸಮಾವೇಶಗಳಿಗೆ ಸೀಮಿತಗೊಂಡಿದ್ದಾರೆ. ಒಂದುಕಾಲಕ್ಕೆ ನಾಯಕ ಅರಸು ಮನೆತನದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ ಇವರು ಈಗ ಕ್ಷತ್ರಿಯ ಜನಾಂಗದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುತ್ತಿದ್ದಾರೆ. ಆದರೂ ನಾಯಕ ಜನಾಂಗದೊಂದಿಗಿನ ಒಡನಾಟವನ್ನು

ಮುಂದುವರೆಸಿಕೊಂಡೇ ಬಂದಿದ್ದಾರೆ. ರಾಜಕೀಯದಲ್ಲಿ ಸ್ಥಾನಮಾನಗಳಿಸಲು ಓಟಿಗಾಗಿ ನಾಯಕ ಜನಾಂಗದವರನ್ನೆ ಇವರು ನಂಬಿದ್ದಾರೆ. ಇವರುಗಳ ವೈಯಕ್ತಿಕ ಬದುಕಿನಾದಿಯಾಗಿ ಸಾಮಾಜಿಕ ಬದ್ಧತೆಗಳವರೆಗೆ ಬೇಕು ಬೇಡಗಳನ್ನು ಪೂರೈಸಿಕೊಳ್ಳಲು ವರ್ಗದ ಸಹಕಾರ ಅನಿವಾರ್ಯವಾಗಿದೆ ಎಂದೇ ಹೇಳಬಹುದು. ಪರಿಣಾಮವಾಗಿ ಕಮಲಾಪುರದ ಬೇಡರು ಇವರನ್ನು ತಮ್ಮ ದೊರೆಗಳೆಂದು ಇಂದಿಗೂ ಕರೆಯುವುದನ್ನು ಕಾಣಬಹುದು.

ರಾಜಕೀಯವಾಗಿ ಒಳ್ಳೆಯ ಪ್ರಭಾವವನ್ನು ಹೊಂದಿದ ಇವರು ಮೊದಲಿನಿಂದಲೂ ಆರ್ಥಿಕವಾಗಿ ಸಬಲರಾಗಿರುವುದು ಕಂಡುಬರುತ್ತದೆ. ಭಾರತ ಸರ್ಕಾರದೊಂದಿಗೆ ಇವರ ಸ್ಥಾನ ವಿಲೀನಗೊಂಡ ಕೆಲವರ್ಷಗಳಲ್ಲಿ ರಾಜಕೀಯಕ್ಕೆ ಪಾದಾರ್ಪಣೆ ಮಾಡಿದ್ದುದರ ಫಲವಾಗಿ ಇವರ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಉತ್ತಮ ರೀತಿಯಿಂದ ಕಾಯ್ದುಕೊಳ್ಳಲಿಕ್ಕೆ ಕಾರಣವಾಗಿದೆ.

ರಾಜಾ ತಿರುಮಲದೇವರಾಯರು ೧೯೬೨ ರಿಂದ ೧೯೬೭ರವರೆಗೆ ಕನಕಗಿರಿ ಕ್ಷೇತ್ರದಿಂದ ಆಯ್ಕೆಯಾದ ಪ್ರಪ್ರಥಮ ರಾಜ್ಯ ವಿಧಾನಸಭಾ ಸದಸ್ಯರಾಗಿದ್ದರು. ನಂತರ ೧೯೮೩ ರಿಂದ ೧೯೮೮ವರೆಗೆ ಪುನರ್ ಆಯ್ಕೆಯಾಗಿ ಪ್ರಾದೇಶಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು.

ರಾಜಾ ಶ್ರೀರಂಗದೇವರಾಯ ಅವರು ೧೯೮೯ ರಿಂದ ೧೯೯೪, ೧೯೯೪ ರಿಂದ ೧೯೯೯ ಹಾಗೂ ೧೯೯೯ ರಿಂದ ೨೦೦೪ರವರೆಗೆ ಮೂರು ಸಲ ವಿಧಾನಸಭೆಯ ಸದಸ್ಯರಾಗಿ ಕರ್ನಾಟಕ ಸರ್ಕಾರದ ಸಚಿವರೂ ಆಗಿದ್ದರು. ಕಳೆದ ಚುನಾವಣೆಯಲ್ಲಿ ಕೆಲವೇ ಮತಗಳಿಂದ ಪರಾಭವಗೊಂಡರು. ಇವರು ಅಧಿಕಾರದಲ್ಲಿದ್ದಾಗ ತುಂಗಭದ್ರಾ ನದಿಯ ಅಣೆಕಟ್ಟು ಅಭಿವೃದ್ಧಿಗೆ ಶ್ರಮಿಸಿದರು. ಅಲ್ಲದೇ ತುಂಗಭದ್ರಾ ಕಾಡಾ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಹಾಗೂ ಅನೇಕ ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕಿರುವರಲ್ಲದೆ ರಾಜ್ಯದ ಖಾದಿ ಗ್ರಾಮೋದ್ಯೋಗ ಮಂಡಳಿ ಅಧ್ಯಕ್ಷರಾಗಿದ್ದರು.

ರಾಜಾ ಅಚ್ಯುತದೇವರಾಯರು ನ್ಯಾಯವಾದಿಗಳಾಗಿದ್ದು ಹೊಸಪೇಟೆಯಲ್ಲಿ ನೆಲೆಸಿದ್ದಾರೆ. ರಾಜಾ ನರಸಿಂಹದೇವರಾಯ ಅವರು ವಕೀಲರಾಗಿ, ನೋಟರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀರಾಮ ದೇವರಾಯರು ಆನೆಗೊಂದಿಯಲ್ಲಿಯೇ ವಾಸವಾಗಿದ್ದು ಸ್ಥಳೀಯ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಈ ಕುಟುಂಬದ ಸದಸ್ಯರು ಶ್ರೀ ವಿದ್ಯಾ ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್, ಆನೆಗೊಂದಿ ಎಂಬ ಟ್ರಸ್ಟನ್ನು ಹುಟ್ಟು ಹಾಕಿ ಅದರಡಿಯಲ್ಲಿ ಅನೇಕ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಹೀಗೆ ಅನೇಕ ಚಟುವಟಿಕೆಗಳಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಳ್ಳುತ್ತಿರುವ ಇವರ ಬಳಿ ಆನೆಗೊಂದಿ ಸಂಸ್ಥಾನದ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ದಾಖಲೆಗಳಿವೆ. ಅವುಗಳನ್ನು ಪ್ರಕಟಿಸುವ ಹಾಗೂ ಸಂಶೋಧಕರಿಗೆ ಅಧ್ಯಯನಕ್ಕೆ ನೀಡುವ ಕ್ರಮವಹಿಸಿದ್ದಲ್ಲಿ ಖಚಿತವಾದ ಆನೆಗೊಂದಿ ಚರಿತ್ರೆಯನ್ನು ರಚಿಸಲು ಅನುವಾಗುತ್ತದೆ.

## ೨.೪ ಗುಡಗುಂಟಿ ನಾಯಕ ಅರಸರು

ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನಿಂದ ೧೯ ಕಿ.ಮೀ. ದೂರದಲ್ಲಿರುವ ಗುಡಗುಂಟಿಯು ನಾಯಕ ಅರಸುಮನೆತನವಾಗಿತ್ತು. ಸುರಪುರ ಹಾಗೂ ಗುಡಗುಂಟಿ ಅರಸರು ಒಂದೇ ಮೂಲಕ್ಕೆ ಸೇರಿದವರು. ಇವರು ಗೋಸಲ ವಂಶದವರು. ಪ್ರಾಚೀನ ಕೈಫಿಯತ್ತುಗಳ ಪ್ರಕಾರ ಇವರ ಪೂರ್ವಜರು ದಕ್ಷಿಣದಿಂದ ಬಂದವರೆಂದು ಇವರ ಮೂಲಪುರುಷ ನರಸಿಂಹನಾಯಕನೆಂದು ಹೇಳುತ್ತದೆ. ಇವರ ವಂಶಕ್ರಮ ಇಂತಿದೆ :

ನರಸಿಂಹನಾಯಕ
|
ವೀರಬೊಮ್ಮನಾಯಕ
|
ಸಿಂಗಪ್ಪನಾಯಕ
|
ಒಡೇರನಾಯಕ
|
ಕಲ್ಲಪ್ಪನಾಯಕ
|
ಚಿನ್ನಹಣಮನಾಯಕ
|
ಹಾವಿನಾಯಕ
|
ಪೆದ್ದಸೋಮನಾಯಕ
|
ಎಗ್ರಸಿಂಗನಾಯಕ
|
ಮದಕರಿನಾಯಕ
|
ವೀರಝುಂಪನಾಯಕ
|
ಬಲಿಸೋಮನಾಯಕ
|
ಹಿರೇಪಾಮನಾಯಕ
|
ಜಕ್ಕಪ್ಪದೇಸಾಯಿ

ಈತನಿಗೆ ಇಬ್ಬರು ಮಕ್ಕಳು. ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕ. ಜಕ್ಕಪ್ಪ ದೇಸಾಯಿ ಕಕ್ಕೇರಿಯಲ್ಲಿರುತ್ತಿದ್ದ. ಈತನ ಮಕ್ಕಳು ಕಕ್ಕೇರಿಯ ಹತ್ತಿರ ಕೃಷ್ಣಾ ನದಿಯನ್ನು ಹರಿಗಡಿದು ಮಾಡಿದ

ಸಣ್ಣ ನಡುಗಡ್ಡೆಗಳಲ್ಲಿರುತ್ತಿದ್ದರು. ಇಲ್ಲಿ ಆರು ನಡುಗಡ್ಡೆಗಳಿದ್ದವು. ಅವುಗಳ ಭೂವಿಸ್ತಾರ ಎರಡು ಮೂರು ಮೈಲುಗಳಷ್ಟಿದ್ದಿತು. ಅವು ನೀರದೇವರಗಡ್ಡಿ, ದೇವರಗಡ್ಡಿ, ಜಂಗಿನಗಡ್ಡಿ, ಮೇಲಿನಗಡ್ಡಿ, ನೀಲಕಂಠರಾಯನಗಡ್ಡಿ, ಬೆಣಚಿನಗಡ್ಡಿಗಳಾಗಿದ್ದವು. ಈ ಗಡ್ಡಿಯಲ್ಲಿ ಇವರು ವಾಸಮಾಡುತ್ತಿರುವುದರಿಂದ ಇವರಿಗೆ ಗಡ್ಡಿ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ.[೧೩೪]

ಜಕ್ಕಪ್ಪ ದೇಸಾಯಿಯ ಹಿರಿಯ ಮಗನಾದ ಗಡ್ಡಿಲಿಂಗನಾಯಕನೇ ಗುಡಗುಂಟಿ ಸಂಸ್ಥಾನದ ಸ್ಥಾಪಕ. ಈ ಮೊದಲು ಕಕ್ಕೇರಿ ಭಾಗವು ವಿಜಾಪುರ ಆದಿಲ್‌ಷಾಹಿಗಳ ಸಾಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟಿದ್ದರಿಂದ ಲಿಂಗನಾಯಕ ಗುಡಗುಂಟಿ ಪರಗಣೆಯ ಸರದೇಸಾಯಿಯಾಗಿ ಬಡ್ತಿ ಹೊಂದಿ ಇಲ್ಲಿ ಆಳ್ವಿಕೆ ಪ್ರಾರಂಭಿಸಿದ. ಈತನ ಆಡಳಿತದಲ್ಲಿ ೪೪ ಹಳ್ಳಿಗಳು ಸೇರಿದ್ದವು. ಈತ ತನ್ನ ರಾಜ್ಯವನ್ನು ವಿಸ್ತರಿಸುವುದಕ್ಕಾಗಿ ಬಿಜಾಪುರದ ಆದಿಲ್‌ಷಾಹಿಗಳೆಡೆಗೆ ಚರ್ಚಿಸಲು ಹೋದಾಗ ಷೇಖಮಿನ ಹಾಜ ಸರದಾರನಿಂದ ಕೊಲ್ಲಲ್ಪಟ್ಟನು. ಈತನಿಗೆ ಏಳು ಜನ ಮಕ್ಕಳಿದ್ದರು. ಆಗ ಸುರಪುರದ ಗಡ್ಡಿ ಪಿಡ್ಡನಾಯಕನಿಗೆ ಮಕ್ಕಳಾಗದ ಕಾರಣ ಗುಡಗುಂಟಿಯ ತನ್ನ ಅಣ್ಣ ಲಿಂಗಾಯನಾಯಕನ ಮಗನಾದ ಪಾಮನಾಯಕನನ್ನು ದತ್ತಕ ತೆಗೆದುಕೊಂಡನು. ಈತನೇ ಸುರಪುರದ ಹಸರಂಗಿ ಪಾಮನಾಯಕ.[೧೩೫] ಗಡ್ಡಿ ಲಿಂಗನಾಯಕ ಮರಣವನ್ನಪ್ಪಿದ ತರುವಾಯ ಆತನ ಮಗ ಜಡಿ ಸೋಮಪ್ಪನಾಯಕ ಬಿಜಾಪುರದ ಸುಲ್ತಾನರಲ್ಲಿ ತನ್ನ ಶೌರ್ಯ, ಸಾಹಸಗಳನ್ನು ತೋರಿಸಿದ್ದಕ್ಕಾಗಿ 'ಸರ್ಜಾಬಹದ್ದೂರ' ಎಂಬ ಬಿರುದನ್ನು ಪಡೆದಿದ್ದಾನೆ. ಜೊತೆಗೆ ಕ್ರಿ.ಶ.೧೬೯೯ರಲ್ಲಿ ಇಮ್ಮಡಿ ಅಲಿ ಆದಿಲ್‌ಶಾಹನಿಂದ (ಷಹೂರಸನ್ ಬನಯೀನವ ಅಲಫ ೧೦೭೦) ಒಂದು ಫಾರಸಿ ಸನದು ದೊರಕಿದೆ. ಈ ಸನದಿನಲ್ಲಿ ಸಮತ ಬೈಚಬಾಳು ಮತ್ತು ಕಕ್ಕೇರಿಯ, ಗುಡಗುಂಟಿಯ ಕೆಲವು ಹಳ್ಳಿಗಳನ್ನು ಜಡಿಸೋಮನಾಯಕನಿಗೆ ಇನಾಮು ಕೊಡಲಾಗಿದ್ದು ಇದನ್ನು ಗುಡಗುಂಟಿ ಅಥವಾ ಮಾದರಾಯನ ಕೋಟೆಯ (ಇಂದಿನ ಕೋಠಾ ಗ್ರಾಮ) ದೇಸಾಯಿ ಮತ್ತು ನಾಡಗೌಡರಿಗೆ ಸಂಬೋಧಿಸಲಾಗಿದೆ.[೧೩೬] ಹೀಗಾಗಿ ಗುಡಗುಂಟಿ ಸಂಸ್ಥಾನವು ಕ್ರಿ.ಶ. ೧೬೯೯ರಲ್ಲಿ ಸ್ಥಾಪನೆ ಯಾಗಿದೆ.

ಈತನ ತರುವಾಯ ಇಮ್ಮಡಿ ಲಿಂಗನಾಯಕನು ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಯ ಕುರಿತಾಗಿ ಯಾವುದೇ ದಾಖಲೆಗಳು ಲಭ್ಯವಿಲ್ಲ. ನಂತರ ಸೋಮಪ್ಪನಾಯಕನು ಅಧಿಕಾರಕ್ಕೆ ಬರುತ್ತಾನೆ. ಸುರಪುರದ ಹಸರಂಗಿ ಪಾಮನಾಯಕನಿಗೆ ಮಕ್ಕಳಿಲ್ಲದ್ದಕ್ಕಾಗಿ ಗುಡಗುಂಟಿಯ ಸೋಮಪ್ಪನಾಯಕನ ಆರು ಮಕ್ಕಳೊಳಗೆ ಪಿಡ್ಡನಾಯಕನೆಂಬುವನನ್ನು ದತ್ತು ಮಗನಾಗಿ ತೆಗೆದುಕೊಂಡನು.

ವಾಗಿನಗೇರಿ ಔರಂಗಜೇಬನ ವಶವಾದಾಗ ಪೀತಾಂಬರಿ ಪಿಡ್ಡನಾಯಕನು ತಪ್ಪಿಸಿಕೊಂಡು ಕೃಷ್ಣಾನದಿಯನ್ನು ದಾಟಿ ಗುಡಗುಂಟಿಗೆ ತಲುಪಿದನು. ಗುಡಗುಂಟಿ ಸೋಮಪ್ಪನಾಯಕನು ಈತನನ್ನು ರಕ್ಷಿಸಿದನು. ಆಗ

ಈತನ ವೈರಿ ದೇವದುರ್ಗದ ಕುಂಟ ವಾಸುದೇವನಾಯಕನು ಮೊಗಲರ ಸಹಾಯ ಪಡೆದು ಪೀತಾಂಬರಿ ಪಿಡ್ಡನಾಯಕನನ್ನು ಬೆನ್ನಟ್ಟಿದನು. ದೇವದುರ್ಗ ನಾಯಕನೊಡನೆ ಪಿಡ್ಡನಾಯಕನು ಹೋರಾಡಿ ಸೋಲಿಸಿದನು. ನಂತರ ಗುಡಗುಂಟಿ ಸೋಮಪ್ಪನಾಯಕನನ್ನು ಕರೆದುಕೊಂಡು ಕನಕಗಿರಿಯ ಅರಸ ಉಡಚನಾಯಕನ ರಕ್ಷಣೆಗೆ ತೆರಳಿದರು. ಉಡಚನಾಯಕನ ಬೆಂಬಲದಿಂದ ಗಂಗಾವತಿಯ ಎಮ್ಮಿಗುಡ್ಡವನ್ನು ಸೇರಿದನು. ಒಂದು ವರ್ಷ ಅಲ್ಲಿದ್ದು ಪುನಃ ತನ್ನ ಪರಿವಾರದೊಡನೆ ಗುಡಗುಂಟಿಗೆ ಬಂದನು. ಅಷ್ಟೊತ್ತಿಗೆ ಬಿಜಾಪುರವನ್ನು ಮೊಗಲ ರಾಜ್ಯದ ಒಂದು ಸುಭೆ(Division)ಯನ್ನಾಗಿ ಮಾಡಲಾಗಿತ್ತು. ಚೀನಕುಲಿಚ ಖಾನನು ಸುಭೇದಾರನಾಗಿದ್ದನು. ಅವನ ನಂತರ ಈ ಸುಭೆಯು ಅಸಫಜಾಹನ ವಶದಲ್ಲಿತ್ತು. ಅವನು ಗುಡಗುಂಟಿಯಲ್ಲಿ ಹಿಮ್ಮತ ಯಾರಖಾನ ಎಂಬುವನನ್ನು ನೇಮಿಸಿದ್ದನು. ಆಗ ಪಿಡ್ಡನಾಯಕನು ತನಗೆ ಸಹಾಯ ನೀಡಿದ ಗುಡಗುಂಟಿಯವರಿಗೆ ಸಹಾಯ ಮಾಡಿದನು. ಹಿಮ್ಮತ ಯಾರಖಾನನ್ನು ಹೊಡೆದೋಡಿಸಿ ಗುಡಗುಂಟಿಯನ್ನು ಅವನಿಂದ ಕಸಿದು ತನ್ನ ಬಂಧುವಾದ ಸೋಮಸರ್ಜನಾಯಕನಿಗೆ ಕೊಡಿಸಿ ಪೀತಾಂಬರಿ ಬಹರಿ ಪಿಡ್ಡನಾಯಕನು ವೀರಗೊಟಕ್ಕೆ ಬಂದುನಿಂತನು.[೧೩೭]

ಸುರಪುರದಲ್ಲಿ ಮೂರು ಕೇರಿಗಳ ಬೇಡರು ಮೊಂಡಗ್ಯೆ ವೆಂಕಟಪ್ಪನಾಯಕನ ವಿರುದ್ಧ ಬಂಡೆದ್ದರು ಆತ ಗಡಿ ವಿಸ್ತರಿಸಲು ಹೋದಾಗ ಗುಡಗುಂಟಿಯ ಸೋಮಸರ್ಜನಾಯಕನನ್ನು ಸುರಪುರಕ್ಕೆ ಕರೆದುಕೊಂಡು ಹೋಗಿ ಸುರಪುರದ ಅರಸನೆಂದು ಘೋಷಿಸಿದರು. ಒಂಬತ್ತು ತಿಂಗಳಾದ ತರುವಾಯ ರಾಜ್ಯ ವಿಸ್ತರಣೆಯಿಂದ ಮರಳಿಬಂದ ವೆಂಕಟಪ್ಪನಾಯಕನಿಗೆ ಮತ್ತು ಸ್ಥಳೀಯ ಬಂಡುಕೋರರಿಗೆ ಹೋರಾಟವಾಯಿತು.[೧೩೮] ಆಗ ದೇವದುರ್ಗದ ಅರಸ ಕಿಲಚನಾಯಕರ ಮಧ್ಯಸ್ಥಿಕೆಯಿಂದ ವಾತಾವರಣ ತಿಳಿಯಾಯಿತು. ಸೋಮ ಸರ್ಜನಾಯಕ ಗುಡಗುಂಟಿಗೆ ಪಲಾಯನಗೈದನು. ಅಂದಿನಿಂದ ಸುರಪುರ ಮತ್ತು ದೇವದುರ್ಗದವರು ಗುಡಗುಂಟಿ ಅರಸನನ್ನು ದ್ವೇಷಿಸಲು ಪ್ರಾರಂಭಿಸಿದರು.

ಸುರಪುರದ ಮುಮ್ಮಡಿ ಪಾಮನಾಯಕನ ವಿರುದ್ಧ ಸುರಪುರದ ರಾಜಧಾನಿಯ ಬೇಡರು ರಾಜನ ವಿರುದ್ಧವೇ ಬಂಡೆದ್ದರು. ಇದರಲ್ಲಿ ಅನೇಕ ಸರದಾರರು, ಹವಾಲ್ದಾರರು ಶಾಮೀಲಾಗಿದ್ದರು. ತಮಗೆ ಸಂಸ್ಥಾನದಿಂದ ಸರಿಯಾದ ಗೌರವ ಪ್ರಾಪ್ತವಾಗಿಲ್ಲವೆಂಬುದೇ ಇವರ ವಾದವಾಗಿತ್ತು. ಮಂತ್ರಿ ನಿಷ್ಠಿ ಕಡ್ಲಪ್ಪನನ್ನು ನಿಂದಿಸತೊಡಗಿದವರನ್ನು ಬಂಡಿನ ಮುಖಂಡರನ್ನು ಕಪ್ಪಲಬೆಂಚಿನಲ್ಲಿ ಕೊಲ್ಲಿಸಲಾಯಿತು. ತಪ್ಪಿಸಿಕೊಡು ಓಡಿ ಹೋದ ಕೆಲವರು ಗುಡಗುಂಟಿಯ ಅರಸರಲ್ಲಿ ಆಶ್ರಯ ಪಡೆದರು. ಕೂಡಲೇ ಅವರನ್ನು ತಮ್ಮ ಸ್ವಾಧೀನಕ್ಕೆ ಒಪ್ಪಿಸಬೇಕೆಂದು ಗುಡಗುಂಟಿಯ ಅರಸನಿಗೆ ಪಾಮನಾಯಕ ಪತ್ರ ಬರೆದ. ಈ ಗುಡಗುಂಟಿಯ ಅರಸ ಆ ಪತ್ರಕ್ಕೆ ಮಾನ್ಯತೆ ಕೊಡಲಿಲ್ಲ. ಆಗ ಪಾಮನಾಯಕನೇ ಸ್ವತಃ ತಾನೇ ಹುಣಸಗಿ, ಕಕ್ಕೇರಿ ಮಾರ್ಗವಾಗಿ ಗುಡಗುಂಟಿಗೆ ಧಾವಿಸಿ ದಾಳಿ ಮಾಡಿದ. ಆಗ ಹೆದರಿದ ಗುಡಗುಂಟಿ

ಅರಸ ಆರೋಪಿಗಳನ್ನೆಲ್ಲಾ ಇವರ ವಶಕ್ಕೆ ಬಿಟ್ಟುಕೊಟ್ಟನು.[೧೩೯] ಇನ್ನು ಮುಂದೆ ಇಂಥ ಯಾವ ಕೃತ್ಯಗಳನ್ನು ಎಸುಗುವುದಿಲ್ಲವೆಂದು ಮಾತುಕೊಟ್ಟ. ಅಂದಿನಿಂದ ಸುರಪುರದೊಂದಿಗೆ ಉತ್ತಮ ಸಂಬಂಧ ಬೆಳೆಯಿತು.

ಗುಡಗುಂಟಿಯ ಮೇಲೆ ಗಜೇಂದ್ರಗಡದವರು ಆಕ್ರಮಣ ಮಾಡಿದ್ದರಿಂದ ಅಪಾರ ಹಾನಿಯಾಯಿತು. ಆಗ ಗುಡಗುಂಟಿಯ ಅರಸ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಸಹಾಯವನ್ನು ಬೇಡಿದನು. ವೆಂಕಟ್ಟಪ್ಪನಾಯಕ ನೂರಕ್ಕೆ ಒಂದು ರೂಪಾಯಿಯ ಬಡ್ಡಿಯಂತೆ ೩೦ ಸಾವಿರ ರೂಪಾಯಿಗಳನ್ನು ನೀಡಿದನು. ಹಣದ ಸಲುವಾಗಿ ತಮ್ಮ ಭಾಗದ ಹುಣಸಗಿ ಮತ್ತು ೩೭ ಗ್ರಾಮಗಳನ್ನು ಒತ್ತಿ ಹಾಕಿದರು. ಈ ಹಳ್ಳಿಗಳನ್ನು ಬಿಟ್ಟುಕೊಡಲು ಗುಡಗುಂಟಿ ಅರಸರು ವೆಂಕಟಪ್ಪನಾಯಕನನ್ನು ಕೇಳಿಕೊಂಡಾಗ, ವೆಂಕಟಪ್ಪನಾಯಕನು ತಾನು ನೀಡಿದ ಹಣವನ್ನು ಬಡ್ಡಿ ಸಮೇತ ಮರಳಿಸಿದರೆ ನಿಮ್ಮ ಗ್ರಾಮಗಳನ್ನು ಬಿಡುವೆನೆಂದು ಉತ್ತರ ಕೊಟ್ಟನು. ಗುಡಗುಂಟಿಯ ಅರಸ ವೆಂಕಟಪ್ಪನಾಯಕನ ಉತ್ತರಕ್ಕೆ ಸಿಟ್ಟಿಗೆದ್ದ. ಅರಕೇರಿಯ ೫ ಗ್ರಾಮಗಳು, ಕಕ್ಕೇರಿ, ರಾಜನಕೋಳೂರು ಹುಣಿಸಗಿ, ಕಲ್ದೇವನಹಳ್ಳಿಗಳನ್ನು ಲೂಟಿ ಮಾಡಿದನು. ಇದನ್ನು ಕೇಳಿದ ವೆಂಕಟಪ್ಪನಾಯಕನು ದಖನಿ, ಸದರ ಬಾರಗೀರ, ಕೊಟಗಾರರು, ನಾಲ್ಕು ತೋಪುಗಳು, ೪೦೦ ಸವಾರರು, ೬೦೦೦ ಕಾಲಾಳುಗಳೊಂದಿಗೆ ಕೃಷ್ಣಾನದಿಯನ್ನು ದಾಟಿ ಗುಡಗುಂಟಿಯ ಸಮೀಪಕ್ಕೆ ಬಂದರು. ಇದನ್ನು ಅರಿತ ಗುಡಗುಂಟಿಯ ಅರಸ ಗೆಜ್ಜಲಗಟ್ಟಿ, ನೀರಲಕೇರಿ, ರೋಡಲಬಂಡಿಯ ನಾಡಗೌಡರ ಸಹಾಯವನ್ನು ಪಡೆದು ಸುರಪುರದವರನ್ನು ಎದುರಿಸಿದನು. ಈ ಕಾಳಗದಲ್ಲಿ ಸುರಪುರದವರು ಗೆದ್ದರು. ಗುಡಗುಂಟಿಗೆ ಆಕ್ರಮಿಸಿ ಕಕ್ಕೇರಿ ಕಡೆಯ ಗುಡಗುಂಟಿ ಅಗಸಿ ಬಾಗಿಲನ್ನು ಸುಟ್ಟರು. ಗುಡಗುಂಟಿಯನ್ನು ಲೂಟಿ ಮಾಡಹತ್ತಿದ್ದರು. ಆಗ ಗುಡಗುಂಟಿ ಅರಸ ಕನಕಗಿರಿಗೆ ಓಡಿದನು. ಸುರಪುರದವರು ಗುಡಗುಂಟಿಯಲ್ಲಿ ಒಂದು ವರ್ಷ ಅಧಿಕಾರ ನಡೆಸಿದರು. ಅನಂತರ ಕನಕಗಿರಿಯವರ ಮಧ್ಯಸ್ತಿಕೆಯಿಂದ ಇಬ್ಬರ ನಡುವೆ ಒಪ್ಪಂದವಾಗಿ ಸಾಲದ ಬದಲಾಗಿ ಹುಣಸಗಿ ಭಾಗವನ್ನು ಸುರಪುರಕ್ಕೆ ಬಿಟ್ಟುಕೊಡಬೇಕಾಗಿ ನಿರ್ಣಯವಾಯಿತು.[೧೪೦] ಆಗ ಗುಡಗುಂಟಿ ಅರಸನನ್ನು ಕರೆಯಿಸಿ, ಅವರ ಸಂಸ್ಥಾನವನ್ನು ಒಪ್ಪಿಸಿದರು. ಮತ್ತೊಂದು ಸಲ ಗುಡಗುಂಟಿಯವರು ಸುರಪುರದ ಅರಸರ ಮದುವೆಗೆ ಹೋಗಿದ್ದರು. ತಮಗೆ ಮದುವೆಯಲ್ಲಿ ಮೊದಲನೆಯ ಮರ್ಯಾದೆ ಸಿಗಲಿಲ್ಲವೆಂಬ ಕಾರಣಕ್ಕೆ ಜಗಳಕ್ಕೆ ನಿಂತರು. ಸಿಟ್ಟಿಗೆದ್ದ ಸುರಪುರದವರು ಗುಡಗುಂಟಿಯನ್ನು ಆಕ್ರಮಿಸಿಕೊಂಡರು.[೧೪೧]

ರಾಜಾ ಸೋಮಲಿಂಗನಾಯಕರಿಗೆ ಮಕ್ಕಳಿರಲಿಲ್ಲ. ಅಷ್ಟೊತ್ತಿಗೆ ನಿಜಾಮ ಸರ್ಕಾರ ಗುಡಗುಂಟಿಯನ್ನು ಅಕ್ರಮಿಸಿಕೊಂಡಿತು. ಆಗ ಅವರ ಆಜ್ಞೆಯ ಪ್ರಕಾರ ರಾಜಾ ಸೋಮಲಿಂಗನಾಯಕರ ಪತ್ನಿ ರಾಣಿ ಕಾಟಮ್ಮ ಅಧಿಕಾರವನ್ನು ನೋಡಿಕೊಂಡು ಹೋದರು. ನಿಜಾಂ ಸರ್ಕಾರಕ್ಕೆ ದತ್ತು ತೆಗೆದುಕೊಳ್ಳುವ ಕುರಿತಾಗಿ ಅರಿಕೆ ಮಾಡಿಕೊಂಡಳು. ಅವರ ಆಜ್ಞೆಯ ಮೇರೆಗೆ ರಾಣಿ ಕಾಟಮ್ಮ ತನ್ನ ಮೈದುನನ ಮಗನಾದ ರಾಜ

ಜಡಿಸೋಮಪ್ಪನಾಯಕನನ್ನು ದತ್ತಕ ತೆಗೆದುಕೊಂಡಳು. ಈತ ಚಿಕ್ಕವನಿದ್ದ ಕಾರಣಕ್ಕೆ ಸಂಸ್ಥಾನದ ಎಲ್ಲ ಕೆಲಸವನ್ನು ರಾಣಿಯವರೆ ನೋಡಿಕೊಂಡು ಹೋಗುತ್ತಿದ್ದರು. ಆಗ ನಿಜಾಂ ಸರ್ಕಾರ, ಸಂಸ್ಥಾನದ ಆಡಳಿತದ ವ್ಯವಸ್ಥೆಗಾಗಿ ಒಬ್ಬ ಸರ್ಕಾರಿ ಅಧಿಕಾರಿಯನ್ನು ನೇಮಿಸಿದರು. ಅವರಿಗೆ 'ನಾಜಿಮ್' ಎನ್ನುತ್ತಿದ್ದರು. ನಂತರ ಅರಸ ವಯಸ್ಸಿಗೆ ಬಂದ ಮೇಲೆ ಆಡಳಿತವನ್ನು ನೋಡಿಕೊಂಡು ಹೋದನು. ಈತ ತೀರಿಕೊಂಡ ತರುವಾಯ ಈ ಸಂಸ್ಥಾನವನ್ನು ನಿಜಾಂ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ೮ ತಿಂಗಳಿನ ನಂತರ ಈ ಮನೆತನದ ರಾಣಿ ಗೌರಮ್ಮನವರಿಗೆ ಸಂಸ್ಥಾನದ ಆಡಳಿತವನ್ನು ವಹಿಸಿಕೊಟ್ಟರು.

ರಾಣಿ ಗೌರಮ್ಮ ನಿಜಾಂ ಸರ್ಕಾರದ ಒಪ್ಪಿಗೆಯ ಮೇರೆಗೆ ತನ್ನ ಮೊಮ್ಮಗನಾದ ರಾಜಾ ತಿಪ್ಪರಾಜ ಜಡಿಸೋಮನಾಯಕ (ಕ್ರಿ.ಶ.೧೯೦೧ ರಿಂದ ೧೯೫೬)ನನ್ನು ದತ್ತಕ ತೆಗೆದುಕೊಂಡಳು. ಈತನೇ ಈ ಸಂಸ್ಥಾನದ ಕೊನೆಯ ದೊರೆ. ಇವರಿಗೆ ಶ್ರೀ ತಿಪ್ಪರಾಜ ಸರ್ಜಾಬಹದ್ದೂರ ಎಂದು ಕರೆಯುತ್ತಿದ್ದರು. ಈತ ತನ್ನ ಅಧಿಕಾರಾವಧಿಯಲ್ಲಿ ೪೪ ಹಳ್ಳಿಗಳಾದ ಗೋನವಾರ, ಬಸ್ಸಾಪುರ, ಸೈದಾಪುರ, ಅಮರಾವತಿ, ಸರ್ಜಾಪುರ, ಚಿಕ್ಕಹೆಸರೂರು, ಹಿರೇಹೆಸರೂರು, ಗೆಜ್ಜಲಗಟ್ಟಿ, ವೀರಾಪುರ, ನಿಲೋಗಲ್, ಹಿರೇನಗನೂರು, ಚಿಕ್ಕನಗನೂರು, ಆನ್ವರಿ, ಮೇದಿನಾಪುರ, ಗುಡದನಾಳ, ಯರಡೋಣಿ, ಭೂಪೂರ, ಪರಾಂಪುರ, ಟಣಮನಕಲ್, ರಾಯದುರ್ಗ, ಗೊಲಪಲ್ಲಿ, ಗದ್ದಗಿ, ಪೈದೊಡ್ಡಿ, ಹೊಸಗುಡ್ಡ, ಬಂಡೆ ಭಾವಿ, ರೋಡಲಬಂಡಾ, ಮಾಚನೂರು, ರೋಡಲಬಂಡಾ ತವಗಾ, ಕಡ್ದೋಣಿ, ಕೋಠಾ, ಹಟ್ಟಿ, ಹೊಸೂರು, ಚಿಕಲದೊಡ್ಡಿ, ಬೆಂಚಲದೊಡ್ಡಿ, ಚುಕ್ಕನಟ್ಟಿ, ಮಲ್ಲಾಪುರ, ಯಲಗಟ್ಟಾ, ದೇವತಗಲ್, ಹೂವಿನಬಾವಿ, ಜಂಗರಹಳ್ಳಿಹಾಳ, ಚಿಕ್ಕಕಾರ್ಲಕುಂಟಿ ಮತ್ತು ಅಮರೇಶ್ವರ ಹಳ್ಳಿಗಳ ಉಸ್ತುವಾರಿಯನ್ನು ನೋಡಿ ಕೊಂಡು ಹೋಗಲು ಸಣ್ಣಪುಟ್ಟ ಜಮೀನುದಾರರನ್ನು ನೇಮಕ ಮಾಡಿದನು. ಅವರಲ್ಲಿ ಗೆಜ್ಜಲಗಟ್ಟಿ, ಆನ್ವರಿ, ಐದಬಾವಿ, ನಗನೂರು, ರೋಡಲಬಂಡಾ ಜಮೀನುದಾರರು ಪ್ರಮುಖರಾದವರು. ಇವರನ್ನು ನಾಡಗೌಡರು, ದೇಸಾಯಿಗಳು ಎಂದು ಕರೆಯುತ್ತಿದ್ದರು. ಇವರಿಂದ ಸಂಸ್ಥಾನಕ್ಕೆ ಬರುವ ಅಂದಾಜು ೫೦,೦೦೦ ರೂ. ಕಂದಾಯದಲ್ಲಿ ನಿಜಾಂ ಸರ್ಕಾರಕ್ಕೆ ವರ್ಷಕ್ಕೆ ೭೦೦೦ ರೂ.ಗಳನ್ನು ಕೊಡಬೇಕಾಗಿತ್ತು.

ಈ ಸಂಸ್ಥಾನದಲ್ಲಿ ಆಡಳಿತದ ಅನುಕೂಲಕ್ಕಾಗಿ ನಾಲ್ಕು ವಿಭಾಗಗಳಿದ್ದವು. ಮೌಲ್(Revenue) ಫೌಜದಾರಿ(Criminal), ದಿವಾನಿ(Court Magistrate), ಪೋಲಿಸ್(Police) ಈ ವಿಭಾಗಗಳಿಗೆ ಪ್ರತ್ಯೇಕ ಕೆಲಸಕಾರ್ಯಗಳಿದ್ದವು.

ಈ ದೊರೆಗಳು ತಮ್ಮ ಅಧಿಕಾರಾವಧಿಯಲ್ಲಿ ವಿನೋಬಾಭಾವೆಯವರ ಭೂದಾನ ಚಳುವಳಿಗೆ ಸ್ಪಂದಿಸಿ ೨೦೦ ಎಕರೆ ಭೂಮಿಯನ್ನು ಭೂದಾನ ಮಾಡಿದ್ದಾರೆ. ಹೀಗೆ ತಮ್ಮ ಅಧಿಕಾರವನ್ನು ಇವರು ಮುಂದು ವರೆಸಿದರು. ದೇಶ ಸ್ವಾತಂತ್ರ್ಯಗಳಿಸಿದ ನಂತರ ದೇಶದ ಎಲ್ಲಾ ಅರಸೊತ್ತಿಗೆಗಳು ಭಾರತದ ಒಕ್ಕೂಟದಲ್ಲಿ

ಲೀನವಾದರೂ ಹೈದ್ರಾಬಾದ್ ಸಂಸ್ಥಾನದ ಸಮಕಾಲೀನ ಸಂಸ್ಥಾನವಾದ ಗುಡಗುಂಟಿ ೧೯೪೮ರ ಸೆಪ್ಟೆಂಬರ್ ೧೮ರ ವರೆಗೆ  ಅಧಿಕಾರವನ್ನು  ಬಿಟ್ಟುಕೊಟ್ಟಿರಲಿಲ್ಲ.

ಗುಡಗುಂಟಿ ವಂಶಸ್ಥರು ಇಂದು ಗುಡಗುಂಟಿಯ ಅರಮನೆಯಲ್ಲಿ ವಾಸಿಸುತ್ತಿದ್ದಾರೆ. ರಾಜಾ ಅಮರಪ್ಪ ನಾಯಕರು ೧೯೮೩ರಲ್ಲಿ ಮಾನ್ವಿ ಕ್ಷೇತ್ರದಿಂದ, ೧೯೮೫ರಲ್ಲಿ ಲಿಂಗಸಗೂರು ಕ್ಷೇತ್ರದಿಂದ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾದವರು. ಅಂದು ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡವರಾಗಿದ್ದರು. ನಂತರ ರಾಯಚೂರು ಲೋಕಸಭಾ ಕ್ಷೇತ್ರಕ್ಕೆ ಸ್ಪರ್ಧಿಸಿ ಕೆಲವೇ ಮತಗಳಿಂದ ಸೋತರು. ಹಟ್ಟಿ ಚಿನ್ನದಗಣಿಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಸದ್ಯ ಇವರ ಪುತ್ರ ರಾಜಾ ಸೋಮನಾಥನಾಯಕರು ಗುಡಗುಂಟಿ ಗ್ರಾಮಪಂಚಾಯತಿಯ ಅಧ್ಯಕ್ಷರಾಗಿದ್ದಾರೆ. ಮೊದಲಿನಿಂದಲೂ ಈ ಮನೆತನ ರಾಜಕೀಯ ಕ್ಷೇತ್ರದೊಂದಿಗೆ ಉತ್ತಮ ಸಂಪರ್ಕವನ್ನಿಟ್ಟುಕೊಂಡಿದ್ದರಿಂದ ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಸಬಲರಾಗಿದ್ದಾರೆ. ಇಂದು ಇವರು ನಿರ್ಧರಿಸಿದ ರಾಜಕಾರಣಿ ಶಾಸಕನಾಗುವಷ್ಟು ಸಾಮರ್ಥ್ಯ ಇವರಲ್ಲಿದೆ. ಹೀಗಾಗಿ ರಾಜಾ ಅಮರಪ್ಪನಾಯಕರನ್ನು ಈ ಭಾಗದ ರಾಜಕೀಯ ಗುರು ಎಂದು ಕರೆಯುತ್ತಾರೆ. ಈ ಭಾಗದ ಪ್ರಜೆಗಳು, ಮಠಾಧೀಶರು, ಅಧಿಕಾರಿಗಳು, ರಾಜಕಾರಣಿಗಳು ಇವರನ್ನು ರಾಜಮರ್ಯಾದೆಯಿಂದ ಕಾಣುತ್ತಾರೆ. ತಾಲೂಕಿನ ಎಲ್ಲಾ ಜಾತಿಯ ಜನ ಇವರನ್ನು ದಣಿಗಳೆಂದು ಸಂಬೋಧಿಸುತ್ತಾರೆ. ಪ್ರೀತಿಯಿಂದ ಕಾಣುತ್ತಾರೆ. ಈ ಭಾಗದ ನಾಯಕ ಜಾಂಗಕ್ಕೆ ನಾಯಕ ಗುರುಗಳಾಗಿಯೇ ಗುರುತಿಸಿಕೊಂಡಿದ್ದಾರೆ.

## ೨.೫ ಗುಂತಗೋಳದ ನಾಯಕ ಅರಸರು

ಗುಂತಗೋಳ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನಿಂದ ಸುಮಾರು ೩೦ ಕಿ.ಮೀ. ಅಂತರದಲ್ಲಿದೆ. ಇಲ್ಲಿ ನಾಯಕ ಜನಾಂಗದ ಅರಸರು ಆಳ್ವಿಕೆ ಮಾಡಿದ್ದಾರೆ. ಈ ಮನೆತನದ ಕುರಿತಾಗಿ ಆಕರಗಳು ಲಭ್ಯವಿಲ್ಲ. ಹೀಗಾಗಿ ಸ್ಥಳೀಯ ಸ್ಮಾರಕಗಳನ್ನು, ಜನಪದ ಹಾಡುಗಳನ್ನು ಅವಲೋಕಿಸಿದಾಗ ವ್ಯಕ್ತಗೊಳ್ಳುವ ಅಭಿಪ್ರಾಯಗಳನ್ನು ಆಧರಿಸಿ ಈ ಮನೆತನದ ವಂಶಸ್ಥರನ್ನು ಗುರುತಿಸಲಾಗಿದೆ. ಹಾಗೂ ಗುಂತಗೋಳ ಪರಿಸರದಲ್ಲಿರುವ ಅನೇಕ ಹಿರಿಯ ತಲೆಮಾರಿನವರನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

'ಗುಂತ' ಎಂದರೆ ತಗ್ಗಾದ ಪ್ರದೇಶ. 'ಗುಳೆ' ಎಂದರೆ ವಿಪ್ಲವ ಕಾಲದಲ್ಲಿ ಹೋಗಿ ನೆಲೆಸಿರುವುದು. ತಗ್ಗಾದ ಪ್ರದೇಶದಲ್ಲಿ ಯಾವುದೇ ವಿಪ್ಲವ ಕಾಲದಲ್ಲಿ ಹೋಗಿ ಅಲ್ಲಿ ನೆಲೆಯೂರಿರುವುದರಿಂದ ಈ ಹೆಸರು ಬಂದಿದೆ. ಮೊದಮೊದಲು ಇದನ್ನು ಗುಂತಗುಳೆ ಎಂದು ಕರೆಯುತ್ತಿದ್ದರು.[೪] ಗುಂತಗೋಳ ನಾಯಕರು ಕ್ರಿ.ಶ.೧೪೯೧ ರಿಂದ ೧೯೪೮ರವರೆಗೆ ಆಳ್ವಿಕೆ ಮಾಡಿದ್ದಾರೆ. ಇವರು ಮೂಲತಃ ಕಂಚಿಯಿಂದ

ಬಂದವರು. ಬರುವಾಗ ತಮ್ಮೊಂದಿಗೆ ಅನೇಕ ಜನರನ್ನು ಕರೆದುಕೊಂಡು ಬಂದಿದ್ದಾರೆ. ಇವರೊಂದಿಗೆ ಬಂದ ಮನೆತನದವರಿಗೆ ಕಂಚಿಯವರು ಎಂದು ಕರೆಯುತ್ತಾರೆ. ಇವರ ಕುಟುಂಬಗಳು ಇಂದಿಗೂ ಗುಂತಗೋಳದಲ್ಲಿವೆ.

ಗುಂತಗೋಳದ ನಾಯಕರು ಬಿಜಾಪುರದ ಆದಿಲ್‌ಶಾಹಿಗಳ ಆಡಳಿತಾವಧಿಯಲ್ಲಿ (ಕ್ರಿ.ಶ.೧೪೮೯-೧೬೮೬) ನಿರ್ಲಕ್ಷಿಸಲ್ಪಟ್ಟ ಪ್ರದೇಶದಲ್ಲಿ ಒಂದು ಸಂಸ್ಥಾನವನ್ನು ಸ್ಥಾಪಿಸಿದರು. ಬ್ರಿಟಿಷ್ ಮತ್ತು ಹೈದ್ರಾಬಾದ್ ನಿಜಾಮರ (ಕ್ರಿ.ಶ.೧೭೨೪-೧೯೪೮) ದಬ್ಬಾಳಿಕೆಯ ಮಧ್ಯೆ ಸಮರ್ಥವಾಗಿ ಆಳ್ವಿಕೆ ನಡೆಸಿದುದು ವಿಶೇಷವಾಗಿದೆ.[೧೪೩] ಗುಂತಗೋಳದ ನಾಯಕರು ಮೊದಲಿಗೆ ಬಿಜಾಪುರದ ಆದಿಲ್‌ಶಾಹಿಗಳ ಅಧೀನರಾಗಿದ್ದರು. ಆದಿಲ್‌ಶಾಹಿಗಳು ತಮ್ಮ ಅಧೀನದವರಿಗೆ ಜಹಗೀರು ಹಾಕಿಕೊಡುತ್ತಿದ್ದರು. ಆಯಾ ಜಹಗೀರುಗಳಿಗೆ ಮುಖಂಡರಾದವರನ್ನು ಜಹಗೀರುದಾರರು ಎಂದು ಕರೆಯುತ್ತಿದ್ದರು. ಹೀಗಾಗಿ ಇವರು ಮೊದಲು ಜಹಗೀರುದಾರರಾಗಿದ್ದರು. ನಂತರ ಔರಂಗಜೇಬನು ಬಿಜಾಪುರವನ್ನು ಮುತ್ತಿ ಸಿಕಂದರನನ್ನು ಸೆರೆಹಿಡಿದು ಆದಿಲ್‌ಶಾಹಿಗಳ ಆಳ್ವಿಕೆಯನ್ನು ಸಮಾಪ್ತಿಗೊಳಿಸಿದ ಮೇಲೆ ಇವರು ಸ್ವತಂತ್ರವಾಗಿ ಆಳ್ವಿಕೆ ಮಾಡಿದರು. ಇವರು ಮೊದಲು ಕೃಷ್ಣಾನದಿಯ ನಡುಗಡ್ಡೆಯಾದ ಜಲದುರ್ಗದಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಜಲದುರ್ಗವೇ ಇವರ ಮೊದಲ ರಾಜಧಾನಿ. ಗುಂತಗೋಳ ಆದಿಲ್‌ಶಾಹಿಗಳ ಕಾಲದಲ್ಲಿ ಖೈದಿಗಳಿಗೆ ಶಿಕ್ಷೆ ನೀಡುವ ಸ್ಥಳವಾಗಿ ಪರಿವರ್ತನೆಯಾದ ತರುವಾಯ ಇವರು ಗುಂತಗೋಳಕ್ಕೆ ಬಂದು ನೆಲೆಸ ಬೇಕಾಯಿತು.[೧೪೪]

ಗುಂತಗೋಳ ಸಂಸ್ಥಾನದ ಮೂಲಪುರುಷ ಕಾಳಭೈರವನಾಯಕ.[೧೪೫] ಈತನ ಸಮಾಧಿ ಗುಂತಗೋಳದಲ್ಲಿದೆ. ಅದನ್ನು ಈಗಲೂ ಕಾಳಭೈರವನಾಯಕನ ಗಚ್ಚಿನಕಟ್ಟೆ ಎಂದು ಕರೆಯುತ್ತಾರೆ. ಗುಂತಗೋಳದ ನಾಯಕ ಅರಸರಲ್ಲಿ ರಾಜಾ ಅಮರಪ್ಪನಾಯಕ, ರಾಜಬಸಪ್ಪನಾಯಕ, ರಾಜಾ ಇಮ್ಮಡಿ ಅಮರಪ್ಪನಾಯಕ, ರಾಜಾ ಶ್ರೀನಿವಾಸನಾಯಕ, ರಾಜಾ ಇಮ್ಮಡಿಬಸಪ್ಪನಾಯಕ, ರಾಜಾ ರಾಯಪ್ಪನಾಯಕ, ರಾಜಾ ಮುಮ್ಮಡಿ ಅಮರಪ್ಪನಾಯಕ, ರಾಜಾ ಇಮ್ಮಡಿ ರಾಯಪ್ಪನಾಯಕ, ರಾಜಾ ನರಸಿಂಹನಾಯಕ ಇವರುಗಳು ಪ್ರಮುಖರಾಗಿದ್ದಾರೆ.

ಈ ಸಂಸ್ಥಾನದ ಅರಸರಿಗೆ 'ಬಹರಿ ಬಹದ್ದೂರ್', 'ನಾಯಕಾಚಾರ್ಯ', 'ಮಹಾನಾಯಕ' ಎಂಬ ಬಿರುದುಗಳಿವೆ. ಇವರಿಗೆ ಆದಿಲ್‌ಶಾಹಿಗಳು 'ಬಹರಿಬಹದ್ದೂರ್' ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಈ ಭಾಗದ ನಾಯಕ ಜನಾಂಗಕ್ಕೆ ಗುರುಗಳಾದ ಇವರನ್ನು 'ನಾಯಕಾಚಾರ್ಯರು' ಎಂದು ಕರೆಯುವರು. ಇವರ ಬಿರುದಿನ ದ್ಯೋತಕವಾಗಿ ಮಹಾನಾಯಕನ ದೊಡ್ಡಿ ಎನ್ನುವುದು ಗುಂತಗೋಳದ ಒಂದು ಭಾಗವಾಗಿತ್ತು.[೧೪೬] ಈಗಲೂ ಈ ಮನೆತನವನ್ನು ಗುರು ಮತ್ತು ದೊರೆ ಮನೆತನ ಎಂದು ಕರೆಯುತ್ತಾರೆ.

ಈ ಸಂಸ್ಥಾನಿಕರ ರಾಜಲಾಂಛನ ಆನೆಯಾಗಿದ್ದು, ಹಸಿರು ಬಣ್ಣದ ಧ್ವಜಕ್ಕೆ ಬೆಳ್ಳಿಯ ಮೊಹರಿದೆ. ಶೈವಪಂಥದವರಾದ ಇವರು ಭಾರಧ್ವಜ ಗೋತ್ರದವರು. ಇವರ ಆಡಳಿತಕ್ಕೆ ಸುಮಾರು ೧೩೦ ಹಳ್ಳಿಗಳು ಸೇರಿದ್ದು, ಇವರ ಗಡಿಯನ್ನು ಸೂಚಿಸುವ ಜನಪದ ನುಡಿಯೊಂದು ಇಂತಿದೆ :

ಮಾಮಲೆ ಮುದಗಲ್, ಕಿಲ್ಲೆ ಜಲದುರ್ಗ
ಸಮತ್‌ಗೋನವಾಟ್ಲ ಸಂಸ್ಥಾನ ಗುಂತಗೋಳ
ನಮ್ಮ ರಾಜರದು.[೧೪೭]

ಆಡಳಿತ ವ್ಯವಸ್ಥೆಯಲ್ಲಿ ಪಾಟೀಲ, ಕುಲಕರ್ಣಿ, ನಾಡಗೌಡ, ಮಾಲೀಗೌಡ, ದೇಸಾಯಿ, ಪೋಲಿಸ್ ಪಾಟೀಲ್ ಎಂಬ ಅಧಿಕಾರಿಗಳಿದ್ದರು. ಇವರಲ್ಲಿ ಕಾಳಾಪುರದ ದಣಿಗಳು, ನೀರಲಕೇರಿಯ ನಾಡಗೌಡರು, ಬೆಲ್ಲದ ಮರಡಿಯ ದೇಸಾಯಿಗಳು ಪ್ರಮುಖರಾದವರು. ಇವರು ತಮ್ಮ ಭಾಗದ ಕಂದಾಯವನ್ನು ವಸೂಲಿ ಮಾಡಿ ಗುಂತಗೋಳದ ಅರಸರಿಗೆ ಸಲ್ಲಿಸುತ್ತಿದ್ದರು. ಗುಂತಗೋಳದ ಅರಸರು ಹೈದ್ರಾಬಾದ್ ನಿಜಾಮನಿಗೆ ವಾರ್ಷಿಕ ಕಪ್ಪ ಕಾಣಿಕೆಯನ್ನು ಸಲ್ಲಿಸುತ್ತಿದ್ದರು.

ಈ ಸಂಸ್ಥಾನದ ಕಾವಲುಗಾರನ ಹೆಂಡತಿ ಮಾಳಗುಂಡಮ್ಮಳೆಂಬ ಮಹಿಳೆ ಸಂಸ್ಥಾನದ ರಕ್ಷಣೆಗಾಗಿ ಹೋರಾಡಿ ಮಡಿದ ಕತೆ ಜನಜನಿತವಾಗಿದೆ. ಈಕೆಯನ್ನು ಚಿತ್ರದುರ್ಗದ ಒನಕೆ ಓಬವ್ವನಿಗೆ ಹೋಲಿಸುತ್ತಾರೆ. ಒಂದು ಸಲ ೨೦ ಜನ ವೈರಿ ಸೈನಿಕರು (ಆದಿಲ್‌ಶಾಹಿಗಳೋ, ಸುರಪುರದ ನಾಯಕರೋ) ಗುಂತಗೋಳಕ್ಕೆ ರಾತ್ರೋರಾತ್ರಿ ಮುತ್ತಿಗೆ ಹಾಕಲು ಪ್ರಯತ್ನಿಸಿ ಕಾವಲುಗಾರನನ್ನು ಕೊಲೆಗೈದರು. ಮಡದಿ ಮಾಳಗುಂಡಮ್ಮ ಸುದ್ದಿ ತಿಳಿದು ವೀರಾವೇಶದಿಂದ ಕೈಯಲ್ಲಿ ಖಡ್ಗ ಹಿಡಿದು ಅವರನ್ನು ಕೊಚ್ಚಿ ಹಾಕುವುದರೊಂದಿಗೆ ವೀರಮರಣವನ್ನಪ್ಪುತ್ತಾಳೆ. ಹೀಗಾಗಿ ಊರನ್ನು ರಕ್ಷಿಸಿದ ಈಕೆಯ ಹೆಸರಿನಲ್ಲಿ ಜನ ದೇವಾಲಯವನ್ನು ಕಟ್ಟಿಸಿ ಪೂಜಿಸುತ್ತಿದ್ದಾರೆ. ಈ ಮನೆತನದವರಿಗೆ ಅರಸರು ಇನಾಮುಗಳನ್ನು ನೀಡಿದ್ದರು. ಈಗ ಈ ಸಂತತಿಯವರು ಇಲ್ಲಿ ನೆಲೆಸಿರುವುದಿಲ್ಲ.[೧೪೮]

ಲಿಂಗಸುಗೂರು ತಾಲೂಕಿನ ಗುಂತಗೋಳದ ಭಾಗದಲ್ಲಿ ಮಾತ್ರ ನಮಗೆ ಅತೀ ಹೆಚ್ಚು ವೀರಗಲ್ಲುಗಳು ಸಿಗುತ್ತವೆ. ಇವುಗಳಿಗೆ ಅಗಸೀಕಟ್ಟೆಯ ವೀರಗಲ್ಲುಗಳು, ತಿಮ್ಮಣ್ಣನ ಹೊಲದ ವೀರಗಲ್ಲುಗಳು, ಗೋನವಾಟ್ಲದ ವೀರಗಲ್ಲುಗಳೆಂದೇ ಜನ ಕರೆಯುತ್ತಾರೆ. ಬಹುಶಃ ಇವುಗಳು ಈ ಭಾಗದ ಬೇಡ ಸೈನಿಕರು ವೀರ ಹೋರಾಟದಲ್ಲಿ ಮಡಿದ ಸವಿನೆನಪಿಗಾಗಿ ಕೆತ್ತಿಸಿರಬಹುದಾದ ಸಾಧ್ಯತೆ ಗಳಿವೆ.

ಈ ಸಂಸ್ಥಾನದ ಅರಸ ರಾಜಾರಾಯಪ್ಪನಾಯಕನು ಆಧ್ಯಾತ್ಮಿಕ ಒಲವಿನ ಪುರುಷರಾಗಿದ್ದರು. ದರಬಾರಿನಲ್ಲಿ ಪ್ರತಿವರ್ಷ ನಡೆಯುವ ನವರಾತ್ರಿಯ ಸಮಯದಲ್ಲಿ ದೇವಿಪುರಾಣವನ್ನು ಸ್ವತಃ ತಾವೇ ಪಾರಾಯಣ ಮಾಡುತ್ತಿದ್ದರು. ಕಲಾ ಪ್ರೇಮಿಗಳು ಹಾಗೂ ಕಲಾಕಾರರಾಗಿದ್ದರು. ನಾಟಕ ಕಂಪನಿಯೊಂದನ್ನು

ಹುಟ್ಟುಹಾಕಿ ಕಲಾಕಾರರಿಗೆ ತರಬೇತಿಯನ್ನು ನೀಡುವ ವ್ಯವಸ್ಥೆ ಮಾಡಿದ್ದರು. ಈ ಸಂಸ್ಥಾನಿಕರು ಸುರಪುರ, ದೇವದುರ್ಗ, ಗುಡಗುಂಟಿ, ಕನಕಗಿರಿ, ಗುಡೇಕೋಟೆ, ರತ್ನಗಿರಿ ಮನೆತನಗಳೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದಾರೆ.

ಇಂದು ಈ ಮನೆತನದ ವಂಶಸ್ಥರು ಗುಡಗುಂಟಿಯಲ್ಲಿ ವಾಸವಾಗಿದ್ದಾರೆ. ಗುಂತಗೋಳದಲ್ಲಿ ಸುಸಜ್ಜಿತ ಅರಮನೆ ಇದೆ. ಅಲ್ಲಿಗೆ ವಾರಕ್ಕೊಂದು ದಿನ ಹೋಗಿ ಬರುತ್ತಾರೆ. ಹಬ್ಬ ಹರಿದಿನಗಳಲ್ಲಿ ಭಾಗವಹಿಸುತ್ತಾರೆ. ಈ ಮನೆತನದವರು ಪ್ರಸ್ತುತ ರಾಜಕೀಯದೊಂದಿಗೆ ಉತ್ತಮ ಸಂಬಂಧ ಹೊಂದಿದ್ದಾರೆ. ರಾಜಾ ಅಮರೇಶ್ವರನಾಯಕ ೧೯೮೫ರಲ್ಲಿ ಲಿಂಗಸುಗೂರು ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ನಂತರ ೧೯೯೪ರಲ್ಲಿ ಇದೇ ಕ್ಷೇತ್ರದಿಂದ ಸ್ಪರ್ಧಿಸಿ ಧಾರ್ಮಿಕ ಮತ್ತು ದತ್ತಿ ಖಾತೆಯ ಸಚಿವರಾಗಿದ್ದರು. ನಂತರ ೧೯೯೯ರಲ್ಲಿ ಕಲ್ಮಲಾ ವಿಧಾನಸಭೆ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯಾಗಿ, ರಾಜ್ಯ ತೋಟಗಾರಿಕೆ ಸಚಿವರಾಗಿಯೂ ನಂತರ ಬಂಧಿಖಾನೆ, ಗೃಹರಕ್ಷಕದಳ ಮತ್ತು ಕಾನೂನು ಮಾಪನ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಕಳೆದ ೨೦೦೪ರ ಚುನಾವಣೆಯಲ್ಲಿ ಕಲ್ಮಲಾ ವಿಧಾನಸಭೆಗೆ ಸ್ಪರ್ಧಿಸಿ ಕೆಲವೇ ಮತಗಳಿಂದ ಪರಾಭವಗೊಂಡರು. ಇವರ ಹಿರಿಯ ಸಹೋದರರಾದ ರಾಜಾ ರಾಯಪ್ಪನಾಯಕರು ರಾಯಚೂರು ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿದ್ದರು. ಇಂದು ರಾಜಕೀಯದಲ್ಲಿ ಗುರುತಿಸಿಕೊಂಡಿದ್ದಾರೆ. ಇವರ ಕಿರಿಯ ಸಹೋದರ ರಾಜಾ ಶ್ರೀನಿವಾಸನಾಯಕ ಅವರು ದೇವರಭೂಪೂರದ ಮಂಡಲ ಪ್ರಧಾನರಾಗಿ, ಗುಂತಗೋಳ ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿಯೂ ಜಿಲ್ಲಾ ಯುವ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಗಳಾಗಿ ಹಾಗೂ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಈಗಲೂ ರಾಜಕೀಯದಲ್ಲಿ ಮುಂಚೂಣಿಯಲ್ಲಿದ್ದಾರೆ. ಹೀಗೆ ಈ ಮನೆತನದ ವಂಶಸ್ಥರು, ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಈ ಭಾಗದಲ್ಲಿ ಗುರುತಿಸಿಕೊಂಡಿದ್ದಾರೆ. ಅನೇಕ ಜನೋಪಯೋಗಿ ಕೆಲಸಗಳಲ್ಲಿ ಇಂದಿಗೂ ತಮ್ಮನ್ನು ತಾವು ತೊಡಗಿಸಿ ಕೊಂಡಿದ್ದಾರೆ.

## ೨.೬ ದೇವದುರ್ಗದ ನಾಯಕ ಅರಸರು

ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ನಾಯಕ ಅರಸರ ಸಂಸ್ಥಾನವಾಗಿತ್ತು. ಇವರ ಮೂಲಪುರುಷರು ಸವಣೂರು ಬಂಕಾಪುರದಲ್ಲಿ ಮೊದಲು ವಾಸವಾಗಿದ್ದರಂತೆ. ನಂತರ ಇವರ ಮೂಲಪುರುಷ ಸೋಮಜಂಪಲ ಭೂಮಿಪತಿರಂಗಪ್ಪನಾಯಕ ಮೊದಲು ದೇವದುರ್ಗ ತಾಲೂಕಿನ ಅರಕೇರಾದ ಜಂಪಲಮರಡಿಯಲ್ಲಿ ತಂಗಿದ್ದರು. ಅಲ್ಲಿಂದ ಇವರು ಚಂದನಕೇರಿಗೆ ಬರುತ್ತಾರೆ. ಚಂದನಕೇರಿ ದೇವದುರ್ಗದಿಂದ ಒಂದು ಕಿ.ಮೀ.ದೂರದಲ್ಲಿದೆ. ಅಲ್ಲಿ ವಾಸುದೇವನಾಯಕ ದೊರೆಯೆಂದು ಕರೆಯಿಸಿಕೊಂಡನು. ಈತನೇ ದೇವದುರ್ಗ ಅರಸು ಮನೆತನದ ಸಂಸ್ಥಾಪಕ.

ವಾಸುದೇವನಾಯಕ, ಚಂದನಕೇರಿ ಮತ್ತು ದೇವದುರ್ಗದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದನು. ಆದರೆ ಚಂದನಕೇರಿಯೆ ಇವರ ಮೊದಲ ರಾಜಧಾನಿಯಾಯಿತು. ಅದನ್ನು ಚಂದ್ರಗಿರಿ ಎಂತಲೂ ಕರೆಯುತ್ತಿದ್ದರು. ನಂತರದಲ್ಲಿ ಚಂದ್ರಗಿರಿಯಿಂದ ತನ್ನ ರಾಜಧಾನಿಯನ್ನು ದೇವದುರ್ಗಕ್ಕೆ ವರ್ಗಾಯಿಸಿದನು. ಆಗ ದೇವದುರ್ಗದ ಅಧೀನದ ಏಳು ಪ್ರಮುಖ ಗ್ರಾಮಗಳಿಗೆ ತನ್ನ ಐದು ಜನ ಮಕ್ಕಳನ್ನು ನೇಮಿಸುತ್ತಾನೆ. ದೇವದುರ್ಗವನ್ನು ತಮ್ಮ ಅಧೀನದಲ್ಲಿಯೇ ಇಟ್ಟುಕೊಳ್ಳುತ್ತಾನೆ. ಹಾಗೂ ತನ್ನೊಂದಿಗೆ ತನ್ನ ಹಿರಿಯ ಮಗ ಕಿಲಚನಾಯಕನನ್ನು ಉಳಿಸಿಕೊಳ್ಳುತ್ತಾನೆ. ಸಣ್ಣ ಕಿಲಚನಾಯಕನನ್ನು ಅರಕೇರಿಗೆ, ವೆಂಕಟಪ್ಪ ನಾಯಕನನ್ನು ಮುಂಡರಗಿಗೆ, ವಾಸುದೇವನಾಯಕನನ್ನು ಜಾಲಹಳ್ಳಿಗೆ, ಕೃಷ್ಣಪ್ಪನಾಯಕನನ್ನು ರಾಮದುರ್ಗಕ್ಕೆ, ರಂಗಪ್ಪನಾಯಕನನ್ನು ಕ್ಯಾದಿಗೇರಿಗೆ, ತಿಮ್ಮಪ್ಪನಾಯಕನನ್ನು ಗಲಗಿಗೆ ಕಳುಹಿಸುತ್ತಾನೆ.[೧೪೯]

ಸುರಪುರದ ವಾಗಿನಗೇರಿ ಮುತ್ತಿಗೆ ಕ್ರಿ.ಶ.೧೭೦೫ರಲ್ಲಿ ಪ್ರಾರಂಭವಾದಾಗ ಔರಂಗಜೇಬನ ಜೊತೆಗೆ ದೇವದುರ್ಗದ ವಾಸುದೇವನಾಯಕನು ಇದ್ದನು.[೧೫೦] ಸುರಪುರದ ವಾಗಿನಗೇರಿಯು ಔರಂಗಜೇಬನ ವಶವಾದಾಗ, ಪೀತಾಂಬರ ಬಹರಿ ಪಿಡ್ಡನಾಯಕ (ಕ್ರಿ.ಶ.೧೬೮೭-೧೭೨೬)ನು ಅಲ್ಲಿಂದ ತಪ್ಪಿಸಿಕೊಂಡು ಪಲಾಯನಗೈದು ತನ್ನ ಜನರೊಡನೆ ಕೃಷ್ಣಾ ನದಿಯನ್ನು ದಾಟಿ ಗುಡಗುಂಟಿಯನ್ನು ತಲುಪುತ್ತಾನೆ. ಅಲ್ಲಿಂದ ಗುಡಗುಂಟಿ ಅರಸ ಹುಚ್ಚ ಸೋಮಪ್ಪನಾಯಕರನ್ನು ಕರೆದುಕೊಂಡು ಹೋಗುವಾಗ ದೇವದುರ್ಗದ ವಾಸುದೇವನಾಯಕನು ಜಾಲಹಳ್ಳಿ ಮಾರ್ಗದಿಂದ ಮೊಗಲರ ಸಹಾಯವನ್ನು ಪಡೆದು ಅವರನ್ನು ಬೆನ್ನಟ್ಟುತ್ತಾನೆ. ಪಿಡ್ಡನಾಯಕನ ತಮ್ಮ ಭೂಪತಿನಾಯಕನ ಹೆಂಡರು ಮಕ್ಕಳು ವಾಸುದೇವನಾಯಕನ ಕೈಗೆ ಸಿಗುತ್ತಾರೆ. ಈ ಸುದ್ದಿಯನ್ನು ಕೇಳಿದ ಕೂಡಲೇ ಪೀತಾಂಬರಿ ಬಹರಿ ಪಿಡ್ಡನಾಯಕನು ಹಿಂದಿರುಗಿ ವಾಸುದೇವನಾಯಕನನ್ನು ಸೋಲಿಸುತ್ತಾನೆ. ವಾಸುದೇವನಾಯಕ ಮರಳುತ್ತಾನೆ. ಹೀಗೆ ಮೊಗಲರ ಸಂಗಡ ಕೂಡಿ ಅವರಿಗೆ ಪಿಡ್ಡನಾಯಕನ ವಿರುದ್ಧವಾಗಿ ನಿಂತು ಸಹಾಯ ಮಾಡಿದ್ದಕ್ಕಾಗಿ 'ಶಾಹ ಆಲಮ'ನು ವಾಸುದೇವನಾಯಕನಿಗೆ ರಾಯಚೂರು ಪ್ರಾಂತ್ಯದ ಜಮೀನುದಾರಿಕೆಯನ್ನು ತಾನು ಪಟ್ಟವೇರಿದ ಮೂರನೇ ವರ್ಷದಲ್ಲಿ ನೀಡುತ್ತಾನೆ.[೧೫೧]

ನಂತರ ಸುರಪುರದ ಅರಸರು ಮತ್ತು ದೇವದುರ್ಗದ ಅರಸರು ವೈವಾಹಿಕ ಸಂಬಂಧವನ್ನು ಬೆಳೆಸುತ್ತಾರೆ. ಸುರಪುರದ ಇಮ್ಮಡಿ ಪಾಮನಾಯಕ(ಕ್ರಿ.ಶ.೧೭೨೭-೧೭೪೧)ನ ಪಟ್ಟದರಾಣಿ ರುಕ್ಕಮ್ಮ ದೇವದುರ್ಗದವಳಾಗಿದ್ದಳು. ಈ ಪಾಮನಾಯಕನ ಕಾಲದಲ್ಲಿ ಕನಕಗಿರಿಯ ರಂಗಪ್ಪನಾಯಕನ ಮಗ ಹಿರೇನಾಯಕ ಕನಕಗಿರಿಯ ಅರಸನಾಗಿದ್ದು, ಈತನ ಉಪಟಳವನ್ನು ಸಹಿಸದ ದೇಸಾಯಿಗಳು ಹೈದ್ರಾಬಾದ್ ನಿಜಾಮನ ಮೊರೆ ಹೋಗುತ್ತಾರೆ. ಆಗ ನಿಜಾಮ ಕನಕಗಿರಿಯ ಹಿರೇನಾಯಕನನ್ನು ಬಂಧಿಸಲು ಸುರಪುರದ ಇಮ್ಮಡಿ ಪಾಮನಾಯಕನಿಗೆ ತಿಳಿಸುತ್ತಾನೆ. ಇಮ್ಮಡಿ ಪಾಮನಾಯಕ ಕನಕಗಿರಿಯ

ಹಿರೇನಾಯಕನನ್ನು ಬಂಧಿಸಲು ತೆರಳುವಾಗ ತನ್ನ ಸಂಬಂಧಿ ದೇವದುರ್ಗ(ರಾಮದುರ್ಗ)ದ ದೊರೆಯಾದ ಕೃಷ್ಣಪ್ಪನಾಯಕನನ್ನು ಕರೆದೊಯ್ಯುತ್ತಾನೆ.

ಪುರುಷಕಾರಿ ಲೋಕಯ್ಯನ ಗ್ರಂಥದಲ್ಲಿ ಇನ್ನೊಂದು ಘಟನೆ ಜರುಗುತ್ತದೆ. ನಿಜಾಮ ಆಸಫಿಜಾಹನು ಪಾಮನಾಯಕನನ್ನು ತನ್ನ ಭೇಟಿಗಾಗಿ ಕಲ್ಬುರ್ಗಿಯ ಸಮೀಪದ ಸುಲ್ತಾನಪುರಕ್ಕೆ ಬರಲು ಹೇಳುತ್ತಾನೆ. ಆಗ ಪಾಮನಾಯಕ ಸುಲ್ತಾನಪುರಕ್ಕೆ ಹೋದಾಗ, ಆಸಫಿಜಾಹನಿಗೆ ಆರೋಗ್ಯ ಸರಿ ಇರದ ಕಾರಣ ಬರದೆ ತನ್ನ ಸೇನಾಧಿಕಾರಿಯಾದ ಚಂದ್ರಸೇನನನ್ನು ಕಳುಹಿಸುತ್ತಾನೆ. ಚಂದ್ರಸೇನ ಪಾಮನಾಯಕನಿಗೆ ಮುಜುರೆ ಮಾಡುವಾಗ ಅವಮಾನಗೊಳಿಸುತ್ತಾನೆ. ನಾಯಕನು ಖೇದಕ್ಕೊಳಗಾದನು. ಕೊನೆಗೆ ಪಾಮನಾಯಕ ತೀರಿಕೊಳ್ಳುವಾಗ ಚಂದ್ರಸೇನನು ಅಪಮಾನಗೊಳಿಸಿದುದ್ದನ್ನು ದೇವದುರ್ಗದ ವಾಸುದೇವನಾಯಕನಿಗೆ ತಿಳಿಸುತ್ತಾನೆ. ಮುಂದೆ ದೇವದುರ್ಗದ ವಾಸುದೇವನಾಯಕನು ಸೇಡು ತಿರಿಸಿಕೊಳ್ಳುವೆನೆಂದು ವಚನ ಕೊಡುತ್ತಾನೆ.[೧೫೨]

ವಾಸುದೇವನಾಯಕನ ನಂತರ ಈತನ ಹಿರಿಯ ಮಗ ಕಿಲಚನಾಯಕನು ದೇವದುರ್ಗ ಸಂಸ್ಥಾನದ ಅಧಿಕಾರ ಸ್ವೀಕರಿಸುತ್ತಾನೆ. ಸುರಪುರದ ಅರಸ ಮೊಂಡಗೈ ವೆಂಕಟಪ್ಪನಾಯಕ(ಕ್ರಿ.ಶ.೧೭೪೭-೧೭೫೨)ನು ತನ್ನ ರಾಜ್ಯ ವಿಸ್ತಾರಕ್ಕೆ ತೆರಳಿದಾಗ ಸ್ಥಳೀಯ ಆಸ್ಥಾನಿಕರಲ್ಲಿ ಕೆಲವರು ಮೂರುಕೇರಿಯ ತಮ್ಮ ಕೈಕೆಳಗಿನ ಬೇಡರ ದಂಡನ್ನು ಹುರಿದುಂಬಿಸಿ, ಗುಡಗುಂಟಿಯ ಅರಸ ಸೋಮಸರ್ಜನನ್ನು ಕರೆತಂದು ಸುರಪುರದ ಅರಸನನ್ನಾಗಿ ಮಾಡುತ್ತಾರೆ. ಆತ ಒಂಬತ್ತು ತಿಂಗಳುಗಳ ಕಾಲ ಸುರಪುರವನ್ನು ಆಳುತ್ತಾನೆ. ಮರಳಿ ಮೊಂಡಗೈ ವೆಂಕಟಪ್ಪನಾಯಕ ಬಂದಾಗ, ಸುರಪುರದ ಬಂಡುಗಾರರು ಈತನನ್ನು ಸೆರೆಯಲ್ಲಿಡುತ್ತಾರೆ. ದೇವದುರ್ಗದ ಕಿಲಚನಾಯಕನು ಬಂದು ಮೂರುಕೇರಿಯ ಬೇಡರನ್ನು ಒಟ್ಟುಗೂಡಿಸಿ, ಅರಸನನ್ನು ಬಿಡುಗಡೆ ಮಾಡಿಸುತ್ತಾನೆ. ಆಗ ಸೋಮಸರ್ಜನಾಯಕ ಗುಡುಗುಂಟಿಗೆ ಫಲಾಯನಗೈಯುತ್ತಾನೆ.[೧೫೩]

ಕೆಲವು ದಿನಗಳ ನಂತರ ದೇವದುರ್ಗದ ಅರಸ ಕಿಲಚನಾಯಕನು ಕ್ಯಾದಿಗೇರಿಯ ಮೇಲೆ ಧಾಳಿ ಮಾಡುತ್ತಾನೆ. ಕ್ಯಾದಿಗೇರಿಯ ಪಾಳೆಯಗಾರನು ಸುರಪುರದ ಮುಮ್ಮಡಿ ಪಾಮನಾಯಕ (ಕ್ರಿ.ಶ.೧೭೫೦-೭೩)ನ ಮೊರೆ ಹೋಗುತ್ತಾನೆ. ಕೂಡಲೇ ಪಾಮನಾಯಕ ತನ್ನ ದಂಡಿನೊಡನೆ ಕ್ಯಾದಿಗೇರಿಗೆ ಹೋಗಿ ದೇವದುರ್ಗದ ಕಿಲಚನಾಯಕನನ್ನು ಬೆನ್ನಟ್ಟುತ್ತಾನೆ. ಕ್ಯಾದಿಗೇರಿಯ ಅರಸನನ್ನು ರಕ್ಷಿಸುತ್ತಾನೆ. ಬಹುಶಃ ಈ ಸಂದರ್ಭದಲ್ಲಿ ಸುರಪುರದ ಅರಸರಿಗೂ ಮತ್ತು ದೇವದುರ್ಗದ ಅರಸರಿಗೂ ಸಂಬಂಧ ಸರಿ ಇಲ್ಲವೆಂದು ಕಾಣುತ್ತದೆ. ನಂತರದಲ್ಲಿ ಕಿಲಚನಾಯಕನ ಮಗಳು ತಿಮ್ಮವ್ವಳನ್ನು ಪಾಮನಾಯಕನಿಗೆ ಕೊಟ್ಟು, ವಿವಾಹ ಮಾಡಿದಾಗ ಇವರುಗಳ ಮಧ್ಯೆ ಉತ್ತಮ ಬಾಂಧವ್ಯ ಬೆಳೆಯುತ್ತದೆ.

ಕಿಲಚನಾಯಕನ ಮಗ ರಂಗಪ್ಪನಾಯಕ ಚಂದನಕೇರಿಯ ಮುಖ್ಯಸ್ಥನಾಗಿದ್ದ. ಇವನ ತಂದೆಯ ನಂತರ ಈತ ಚಂದನಕೇರಿಯ ಪಾಳೆಯಗಾರನಾದ. ಈ ಪ್ರದೇಶ ದೇವದುರ್ಗದ ನಾಯಕನ ಅಧೀನದಲ್ಲಿತ್ತು.

ಆದರೆ ಬಿಜಾಪುರದ ಎರಡನೇ ಅಲಿ ಆದಿಲ್‌ಷಾಹನ ಮರಣದ (ಕ್ರಿ.ಶ.೧೬೭೨) ನಂತರ ಈ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶವನ್ನು ಶತ್ರುಗಳಿಂದ ರಕ್ಷಿಸಲು ಸುರಪುರದ ದೊರೆ ಹಸರಂಗಿ ಪಾಮನಾಯಕನಿಗೆ ಕೊಡಲ್ಪಟ್ಟಿತು.[೧೫೪] ದೇವದುರ್ಗದ ಅರಸರು ಹೆಸರಿಗೆ ಆಳ್ವಿಕೆ ಮಾಡುತ್ತಿದ್ದರು. ಸಂಪೂರ್ಣ ಅಧಿಕಾರ ಸುರಪುರದ ಅರಸರದಾಗಿತ್ತು. ಸುರಪುರದ ಅರಸರಿಗೆ ದೇವದುರ್ಗದ ಅರಸರು ತೆರಿಗೆಗಳನ್ನು ಕೊಡಬೇಕಾಗಿತ್ತು.

ಈತನ ನಂತರ ಚಿಕ್ಕ ಕೇಶವನಾಯಕ ದೇವದುರ್ಗದ ದೊರೆಯಾದ. ಈತನ ಅಧಿಕಾರಾವಧಿಯಲ್ಲಿ ಈ ಸಂಸ್ಥಾನದ ವಾರ್ಷಿಕ ಆದಾಯ ಮೂರುಲಕ್ಷ ರೂಪಾಯಿಗಳಷ್ಟಿದ್ದಿತು. ಈತನು ಇಲ್ಲಿ ವಾರಕ್ಕೊಮ್ಮೆ ಸಂತೆ ನಡೆಯುವಂತೆ ಮಾಡಿದನಲ್ಲದೆ ಆಗ ನಿಜಾಂಪೇಟೆ, ಸತ್ಯಂಪೇಟೆ, ಕೋಟೆಪೇಟೆಗಳನ್ನು ಕಟ್ಟಿಸುತ್ತಾನೆ. ಈತನ ಅವಧಿಯಲ್ಲಿ ಕ್ರಿ.ಶ.೧೭೬೬ರಲ್ಲಿ ಹೈದರಾಲಿಯ ಮೇಲೆ ದಂಡೆಯಾತ್ರೆ ಹೊರಟ ಪೇಶ್ವೆ ಮತ್ತು ನಿಜಾಮರ ಉಭಯ ಪಡೆಗಳು ದೇವದುರ್ಗದಲ್ಲಿ ಬೀಡುಬಿಟ್ಟವು. ಈತನ ತರುವಾಯ ಕೊಳ್ಳಿರಂಗಪ್ಪನಾಯಕ ಅಧಿಕಾರ ಸ್ವೀಕರಿಸಿದ. ಈತ ದೇವದುರ್ಗದ ಪ್ರಸಿದ್ಧ ರಾಜನಾಗಿದ್ದು, ಅನೇಕ ಜನೋಪಯೋಗಿ ಕೆಲಸಗಳನ್ನು ಮಾಡಿದ್ದಾನೆ.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ.೧೭೭೩-೧೮೦೨)ನು ತನ್ನ ಪತ್ನಿ ಕನಕಗಿರಿಯ ನರಸಿಂಗಮ್ಮನ ಉದರದಿಂದ ಬಾಪೂಸಾಹೇಬ ಮತ್ತು ಶ್ರೀನಿವಾಸನಾಯಕ ಎಂಬ ಮಕ್ಕಳನ್ನು ಪಡೆಯುತ್ತಾನೆ. ಕಿರಿಯನಾದ ಶ್ರೀನಿವಾಸ ನಾಯಕನ ಜಾವಳ ಕಾರ್ಯಕ್ರಮಕ್ಕೆ ಸೋದರಮಾವ ರಂಗಪ್ಪನಾಯಕನನ್ನು ಮತ್ತು ಇತರ ಬಂಧು ಬಳಗವನ್ನು ಕರೆ ಕಳುಹಿಸಿದ್ದ. ಆದರೆ ಅವರಾರೂ ಬರಲಿಲ್ಲ. ಕಾರಣ ವೆಂಕಟಪ್ಪನಾಯಕ ಮುಸ್ಲಿಂ ಜಾತಿಯ ಕನ್ಯೆಯನ್ನು ಮದುವೆಯಾಗಿ ತನ್ನ ಕುಲದಲ್ಲಿ ಸೇರಿಸಿಕೊಂಡಿದ್ದನು. ಇಂಥ ಶುಭ ಸಮಾರಂಭದಲ್ಲಿ ಪರಕುಲದವರೊಂದಿಗೆ ಊಟ ಮಾಡುವುದು ಈತನಿಗೆ ಸರಿ ಇರಲಿಲ್ಲ. ಹೀಗಾಗಿ ಬಂಧುವರ್ಗದವರು, ಗುರಿಕಾರ, ಸರನೌಬತ್ತೂ ಸರಹವಾಲ್ದಾರ ಮುಂತಾದ ಸ್ಥಳೀಯ ಜನರೂ ಬರಲಿಲ್ಲ. ಇದಕ್ಕೆಲ್ಲ ರಂಗಪ್ಪನಾಯಕ ಕಾರಣನೆಂದು ಭಾವಿಸಿದ ಇಮ್ಮಡಿ ವೆಂಕಟಪ್ಪನಾಯಕ ಎಲ್ಲರ ಜಾಗೀರು ಇನಾಮುಗಳನ್ನು ಕಸಿದುಕೊಂಡನು.

ಅಲ್ಲದೆ ಸಾಸಿವಿಗೇರಿ, ಚಂದನಕೇರಿ ಹಾಗೂ ದೇವದುರ್ಗದ ಪ್ರಮುಖ ಬಂಟರನ್ನು ಕರೆದು ದಂಡಿನ ಮುಖ್ಯಸ್ಥರನ್ನು ನೇಮಕ ಮಾಡಿ ದೇವದುರ್ಗದ ರಂಗಪ್ಪ ನಾಯಕನನ್ನು ಸೆರೆಹಿಡಿದು ತರಬೇಕೆಂದು ಆಜ್ಞೆ ಮಾಡುತ್ತಾನೆ. ನಂತರ ಸುರಪುರದ ಸೈನ್ಯ ದೇವದುರ್ಗದ ಅಂಜಳವನ್ನು ಮುತ್ತಿತ್ತು. ರಂಗಪ್ಪನಾಯಕನ ೮೦೦೦ ಸೈನ್ಯ ಇವರನ್ನೆದುರಿಸಿದರೂ, ತೋಪುಗಳ ಹೊಡೆತ ಸಹಿಸದೆ ಹಿಮ್ಮೆಟ್ಟಿದರು. ಸುರಪುರದವರು ದೇವದುರ್ಗವನ್ನು ಲೂಟಿ ಮಾಡಿದರು. ಈ ಸಮಯದಲ್ಲಿ ರಂಗಪ್ಪನಾಯಕನ ಒಬ್ಬ ಪತ್ನಿ ಪಂದಿಕೋಣಿ ಲಕ್ಷ್ಮಮ್ಮ ಮಾತ್ರ ಹೆರಿಗೆಗಾಗಿ ತವರುಮನೆಗೆ ಹೋಗಿದ್ದಳು.ರಂಗಪ್ಪನಾಯಕ ತಲೆ ಮರೆಸಿಕೊಂಡನಾದರೂ

ಆತನನ್ನು ಶೋಧಿಸ ಹೊರಟ ಸುರಪುರ ಸೈನ್ಯವು ಬೆನ್ನತ್ತಿತ್ತು. ತಪ್ಪಿಸಿಕೊಳ್ಳುವ ಯತ್ನದಲ್ಲಿ ಈತ ಉಳಿದ ಪರಿವಾರದವರನ್ನು ಕರೆದುಕೊಂಡು ದೇವದುರ್ಗ ಬೆಟ್ಟದ ಪೂರ್ವಕ್ಕಿದ್ದ ಮದ್ದಿನಮನೆಗೆ ಹೋಗಿ ತನ್ನ ಕೈಯಲ್ಲಿದ್ದ ಕೊಳ್ಳಿಯಿಂದ ಸಿಡಿಮದ್ದಿಗೆ ಬೆಂಕಿ ಹಚ್ಚಿದಾಗ ತಾನೂ ತನ್ನ ಪರಿವಾರವು ಹಾಗೂ ಈತನನ್ನು ಬೆನ್ನಟ್ಟಿದ್ದ ಸುರಪುರದ ಸೈನ್ಯವೂ ಸಿಡಿಮದ್ದಿಗೆ ಆಹುತಿಯಾಯಿತು. ಈ ಘಟನೆಯಿಂದ ಈತನಿಗೆ ಕೊಳ್ಳಿರಂಗಪ್ಪನೆಂಬ ಹೆಸರು ಪ್ರಾಪ್ತವಾಯಿತು.

ಮುಂದೆ ಹೆರಿಗೆಗೆ ಹೋಗಿದ್ದ ಪಂದಿಕೋನಿ ಲಕ್ಷ್ಮಮ್ಮನ ಹೊಟ್ಟೆಯಲ್ಲಿ ಕೃಷ್ಣಪ್ಪನಾಯಕನೆಂಬ ಮಗ ಜನಿಸಿದ. ಆತನೆ ಮುಂದೆ ದೇವದುರ್ಗದ ಅರಸನಾದನು. ಆದರೆ ದೇವದುರ್ಗ, ಅರಕೇರಿ, ಕ್ಯಾದಿಗೇರಿ, ಜಾಲಿಬೆಂಚಿ, ಗೋನವಾಟ್ಲ, ಐದಭಾವಿ ಈ ಪರಗಣಗಳು ವೆಂಕಟಪ್ಪನಾಯಕನ ಅಧೀನಕ್ಕೊಳಪಟ್ಟವು. ಆಗ ನಿಜಾಮನು ಈ ಪರಗಣಗಳನ್ನು ವೆಂಕಟಪ್ಪನಾಯಕನಿಗೆ ಕೊಟ್ಟು ಸನದು ಬರೆದುಕೊಟ್ಟನು.[೧೫೫]

ನಂತರ ಸುರಪುರದ ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ.೧೮೦೨-೧೮೨೮)ನು ದೇವದುರ್ಗದ ಇಜೇರಿ ಕಿಲ್ಲೆಗಳನ್ನು ಕ್ರಿ.ಶ.೧೮೧೧ರಲ್ಲಿ ಪುನಃ ಜೀರ್ಣೋದ್ಧಾರ ಮಾಡಿದನು. ನಂತರ ಕ್ರಿ.ಶ.೧೮೫೩ ಮೇ ೨೧ರಂದು ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿ ಹಾಕಿದನು. ಆ ಪ್ರಕಾರ ಬೀರಾರ್ ಪ್ರಾಂತ್ಯವನ್ನು ಉಸ್ಮಾನಾಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಡಲಾಯಿತು. ಆಗಿನಿಂದ ಈ ಸಂಸ್ಥಾನವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತ್ತು.[೧೫೬] ಇಲ್ಲಿ ಬ್ರಿಟಿಷರ ಪ್ರತಿನಿಧಿಗಳು ಇರುತ್ತಿದ್ದರು. ಹೀಗಾಗಿ ೬೦ ಸೈನಿಕರೊಂದಿಗೆ ಸುರಪುರದ ಶಿಬಿರದಲ್ಲಿದ್ದ ಕ್ಯಾಂಬೆಲ್‌ನಿಗೆ ಅಲ್ಲಿ ಜೀವಭಯ ಶುರುವಾಗಿ ತಮ್ಮ ಆಳ್ವಿಕೆ ಇರುವ ದೇವದುರ್ಗಕ್ಕೆ ತೆರಳಲು ಅಪೇಕ್ಷೆ ಪಟ್ಟಿದ್ದುದು ಕಂಡುಬರುತ್ತದೆ.[೧೫೭] ನಂತರ ಈ ಮನೆತನದವರು ಬ್ರಿಟಿಷರ ಅಧೀನದಲ್ಲಿ ಮೌನವಾಗಿ ಕಾಲನೂಕಿದರು ಇವರ ಉಪಜೀವನಕ್ಕಾಗಿ ಬ್ರಿಟಿಷರು ಕೆಲವು ಭೂಮಿಗಳನ್ನು ಬಿಟ್ಟಿದ್ದರು.

ಈಗ ಈ ಮನೆತನದ ವಂಶಸ್ಥರು ದೇವದುರ್ಗದಲ್ಲಿಯೇ ನೆಲೆಸಿದ್ದಾರೆ. ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಉತ್ತಮ ಸ್ಥಾನದಲ್ಲಿದ್ದಾರೆ. ಈ ಮನೆತನದ ಹಿರಿಯ ವಕೀಲರಾಗಿದ್ದ ರಾಜಾ ದಿವಂಗತ ಕಿಲಚನಾಯಕರು ೧೯೬೨ರಲ್ಲಿ ಲಿಂಗಸುಗೂರು ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸಿದ್ದರು. ಗೆಲುವು ಆಗಲಿಲ್ಲ. ಕಾರಣ ಇವರು ದೇವದುರ್ಗದ ಕ್ಷೇತ್ರದವರಾಗಿದ್ದರು. ಈ ಮನೆತನದವರಾದ ರಾಜಾ ವೆಂಕಟಪ್ಪನಾಯಕರು, ರಾಜಾ ಚಂದ್ರಹಾಸನಾಯಕರು, ರಾಜ್ಯದ ರಾಜಕಾರಣಿಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದಾರೆ ಹಾಗೂ ಆ ಭಾಗದ ಎಲ್ಲಾ ಜನಾಂಗದ ಪ್ರಜೆಗಳ ಮನದಲ್ಲಿದ್ದಾರೆ. ಈಗಲೂ ಸಮಾಜ ಇವರನ್ನು ಗೌರವದಿಂದ ಗುರುತಿಸುತ್ತದೆ. ಆ ಭಾಗದ ಹಬ್ಬ ಹರಿದಿನಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ ಭಾಗವಹಿಸುತ್ತಾರೆ.

## ೨.೭ ಕನಕಗಿರಿಯ ನಾಯಕ ಅರಸರು

ಕನಕಗಿರಿಯು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಿಂದ ವಾಯುವ್ಯಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿದೆ. ಕನಕಗಿರಿ ಅಶೋಕನ ಕಾಲದ ದಕ್ಷಿಣಪ್ರಾಂತ್ಯದ ಸುವರ್ಣಗಿರಿಯಾಗಿತ್ತು ಎಂಬುದನ್ನು ಅನೇಕ ವಿದ್ವಾಂಸರು ಒಪ್ಪುತ್ತಾರೆ. ಕನಕಗಿರಿಯಲ್ಲಿ ಗುಜ್ಜಲವಂಶದ ನಾಯಕರು ಆಳ್ವಿಕೆ ಮಾಡಿದ್ದಾರೆ. ಕ್ರಿ.ಶ.೧೪೩೭ರಲ್ಲಿ ಪರಸಪ್ಪ ಉಡಿಚನಾಯಕನು ಕನಕಗಿರಿಯನ್ನು ಸ್ಥಾಪಿಸುತ್ತಾನೆ. ಈತನು ಶ್ರೀಶೈಲದಿಂದ ಬಂದವನು. ವಿಜಯನಗರದ ಪ್ರೌಢದೇವರಾಯನು, ಶ್ರೀಲಕ್ಷ್ಮೀನರಸಿಂಹ ಶಾಲಿಗ್ರಾಮಕ್ಕೆ ದೇವಾಲಯವನ್ನು ನಿರ್ಮಿಸಿ ನಿತ್ಯಪೂಜೆ ನೆರವೇರಿಸಿಕೊಂಡು ಹೋಗಲು ಪರಸಪ್ಪ ಉಡಿಚನಾಯಕನಿಗೆ ೧೨ ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಕನಕಗಿರಿಯ ನಾಯಕಮನೆತನ ವಿಜಯನಗರದ ಅರಸರ ಅಧೀನದ ಮೊದಲ ಮನೆತನವಾಗಿತ್ತು. ಹೀಗಾಗಿ ವಿಜಯನಗರದ ಅರಸರು ಇವರಿಗೆ ಮೊದಲ ಪ್ರಾಶಸ್ತ್ಯವನ್ನು ನೀಡುತ್ತಿದ್ದರು. ಕ್ರಿ.ಶ.೧೪೮೮ರಲ್ಲಿ ಸಾಳ್ವ ನರಸಿಂಹ ದೇವರಾಯನು ಕನಕಗಿರಿ ನಾಡದೇವರ ಅಮೃತಪಡಿಗೆಂದು ಮತ್ತೇರಡು ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು.[೧೫೮] ಹೀಗಾಗಿ ಇವರ ಬೆಂಬಲದಿಂದ ೪೦ ಲಕ್ಷ ವರಹಗಳ ಉತ್ಪನ್ನದ ಪ್ರಾಂತ್ಯವಾಗಿ ಕನಕಗಿರಿ ರಾಜಧಾನಿಯ ಪಟ್ಟವನ್ನು ಪಡೆದುಕೊಂಡಿತು.

ಪರಸಪ್ಪನಾಯಕನ ತರುವಾಯ ಈತನ ಮಗನಾದ ನವಾಬ ಉಡಿಚನಾಯಕನಿಗೆ ಕ್ರಿ.ಶ.೧೫೧೦ರಲ್ಲಿ ಪಟ್ಟಾಭಿಷೇಕವಾಯಿತು. ಈತನ ಕಾಲದಲ್ಲಿ ಕನಕಗಿರಿಯ ರಾಜಧಾನಿ ವಿಸ್ತಾರರೂಪ ಪಡೆಯಿತು. ಕೃಷ್ಣದೇವರಾಯ ಕ್ರಿ.ಶ.೧೫೧೦ರಲ್ಲಿ ಕನಕಗಿರಿ ಪೇಟೆಯ ಸುಂಕ, ತಳವರಿಕೆ ಸುಂಕ, ಚಿನ್ನಾಪುರ, ತೊರೆಗಲ್ಲು ಸೀಮೆಯ ಯಡಿಗಲ್ಲ ಕಳಸಗ್ರಾಮ, ನವಲಿಸೀಮೆಯ ಜಾರಾಪುರ ಹೀಗೆ ಒಟ್ಟು ಮೂರು ಗ್ರಾಮಗಳನ್ನು ನೀಡಿದನು.[೧೫೯] ಅಚ್ಯುತದೇವರಾಯನೂ ಕೆಲವು ಗ್ರಾಮಗಳನ್ನು ಕನಕಗಿರಿನಾಥಸ್ವಾಮಿಗೆ ಉಂಬಳಿಯಾಗಿ ನೀಡಿದನು. ಕನಕಾಚಲಪತಿ ದೇವಾಲಯದ ಬಲಭಾಗದಿಂದ ಪಶ್ಚಿಮದ ಕಡೆಗೆ ವಿಸ್ತಾರವಾದ ಬೀದಿಯನ್ನು ನಿರ್ಮಿಸಿದನು. ಹಾಗೂ ಕನಕಾಚಲ ಪತಿ ದೇವಾಲಯದ ಗೋಡೆಯನ್ನು ಹಾಗೂ ನವಲಿಯ ಭೋಗಾಪುರ ದೇವಾಲಯ, ಎಮ್ಮಿಗುಡ್ಡದ ಕನಕಾಚಲಪತಿ ದೇವಾಲಯ, ಶಂಕರಲಿಂಗ, ಮಹಿಷಿಮರ್ದಿನಿ, ವೀರಭದ್ರಮೂರ್ತಿ ನಗರೇಶ್ವರ, ಪಂಪಾಪತಿ, ಗಜಲಕ್ಷ್ಮೀ, ಯಲ್ಲಮ್ಮ, ಮಲ್ಲಿಕಾರ್ಜುನ, ಸಂಜೀವಮೂರ್ತಿ ದೇವಾಲಯಗಳನ್ನು ನಿರ್ಮಿಸಿದನು. ಅಲ್ಲದೆ ಹಂಪೆಯ ವಿರೂಪಾಕ್ಷ ದೇವಾಲಯದ ಉತ್ತರ ಗೋಪುರವನ್ನು ನಿರ್ಮಿಸಿದನು.[೧೬೦] ಇಂದಿಗೂ ಇದನ್ನು ಕನಕಗಿರಿ ಗೋಪುರವೆಂದು ಕರೆಯುತ್ತಾರೆ.

ತರುವಾಯ ಕೆಲವಡಿ ಉಡಿಚನಾಯಕ(ಕ್ರಿ.ಶ.೧೫೩೩-೧೫೭೮)ನು ಅಧಿಕಾರಕ್ಕೆ ಬಂದನು. ಕ್ರಿ.ಶ. ೧೫೬೫ರಲ್ಲಿ ನಡೆದ ತಾಳಿಕೋಟೆ ಕದನದಲ್ಲಿ ಕನಕಗಿರಿಯ ನಾಯಕರು ವಿಜಯನಗರದೊಂದಿಗೆ ಯುದ್ಧಕ್ಕೆ ತೆರಳಿದ್ದರು. ತಾಳಿಕೋಟೆ ಕದನದ ನಂತರ ಷಾಹಿಮನೆತನಗಳು ವಿಜಯನಗರವನ್ನು ಲೂಟಿ ಮಾಡುವಾಗ

ಮೊದಲು ಕನಕಗಿರಿಯನ್ನು ಲೂಟಿಗೈದರು. ಈತನ ನಂತರ, ಕನಕಪ್ಪ ಉಡಿಚನಾಯಕ (ಕ್ರಿ.ಶ.೧೫೭೮-೧೬೧೮)ನು ಅಧಿಕಾರಕ್ಕೆ ಬಂದನು. ಈತ ದೈವತ್ವದ ಬಗ್ಗೆ ಅಪಾರ ನಂಬಿಕೆ ಹೊಂದಿದ್ದನು. ತೊಂಡೆತೆವರಪ್ಪ ದೇವಾಲಯ, ಆಂಜನೇಯ ದೇವಾಲಯವನ್ನು ನಿರ್ಮಿಸಿದನಲ್ಲದೆ ಎರಡು ಪುಷ್ಕರಣೆಗಳನ್ನೂ ಕಟ್ಟಿಸಿದನು. ಈತನ ತಮ್ಮ ವೆಂಕಟಪ್ಪನಾಯಕನು ಲಕ್ಷ ವರಹಗಳ ವೆಚ್ಚದಿಂದ ಊರ ಹೊರಗೆ ಸುಂದರವಾದ ಬಾವಿ ನಿರ್ಮಿಸಿದ್ದಾನೆ. ಇದನ್ನು ವೆಂಕಟಪತಿ ಬಾವಿ ಎಂದು ಕರೆಯುತ್ತಾರೆ.[೧೬೧] ಇದೊಂದು ಕಲಾತ್ಮಕ ಬಾವಿಯಾಗಿದೆ. ತದ ನಂತರ ಇಮ್ಮಡಿ ಉಡಿಚನಾಯಕ(ಕ್ರಿ.ಶ.೧೬೧೮-೧೭೦೮) ಅಧಿಕಾರ ರೂಢನಾದನು. ಈತನನ್ನು ಶಾಸನಗಳಲ್ಲಿ ಗುಜ್ಜಲ ವಂಶೋದ್ಭವ, ಶ್ರೀಮನ್ ಮಹಾನಾಯಕಾಚಾರ್ಯ, ನಾಯಕಶಿರೋಮಣಿ, ಲಕ್ಷ್ಮಿನಾಗತಿ, ಇಮ್ಮಡಿ ವುಡಸಿನಾಯಕ ಎಂದು ಕರೆಯಲಾಗಿದೆ.

ಕ್ರಿ.ಶ.೧೬೫೩ ಬಿಜಾಪುರ ಆದಿಲ್ ಷಾನ ದಂಡನಾಯಕ ಅಫಜಲ್‌ಖಾನ್‌ನು ಕನಕಗಿರಿಯ ಮೇಲೆ ದಾಳಿ ಮಾಡಿದನು. ಅವರನ್ನು ಕನಕಗಿರಿಯ ಅರಸ ಇಮ್ಮಡಿ ಉಡಚನಾಯಕ ಸೋಲಿಸುತ್ತಾನೆ. ಅಫಜಲ್‌ಖಾನ್‌ನೊಂದಿಗೆ ಬಂದಿದ್ದ ಮರಾಠನಾಯಕ ಷಹಜಿಯ ಮಗ ಸಂಬಾಜಿಯು ಧಾಳಿ ಸಂದರ್ಭದಲ್ಲಿ ಮರಣವನ್ನಪ್ಪುತ್ತಾನೆ. ನಂತರ ಬಿಜಾಪುರದ ಆದಿಲ್ ಷಾ, ಷಹಜಿಯನ್ನು ಕನಕಗಿರಿಗೆ ಕಳುಹಿಸಿದನು. ಷಹಜಿ ತನ್ನ ಮಗನ ಸಾವಿನ ಸೇಡನ್ನು ತೀರಿಸಿಕೊಳ್ಳಲು ಕನಕಗಿರಿಯನ್ನು ವ್ಯವಸ್ಥಿತವಾಗಿ ಮುತ್ತುತ್ತಾನೆ. ಷಹಜಿಯ ಧಾಳಿಗೆ ಕನಕಗಿರಿಯ ಸೈನ್ಯ ಸೋಲುವುದರೊಂದಿಗೆ ಕನಕಗಿರಿಯ ಅರಸ ಉಡಿಚನಾಯಕ ಆದಿಲ್‌ಷಾಹಿಗೆ ಕಪ್ಪಕಾಣಿಕೆಯನ್ನು ನೀಡುತ್ತಾನೆ.[೧೬೨] ಹಾಗೂ ಕ್ರಿ.ಶ.೧೬೭೪ರಲ್ಲಿ ದೇವದುರ್ಗದ ಕಿಲ್ಲೆ ಕೆಳಗಿನ ಕೆಲವು ಹಳ್ಳಿಗಳು ಉಡಿಚನಾಯಕನ ವಶದಲ್ಲಿದ್ದವು. ಅವುಗಳನ್ನು ಬಿಜಾಪುರದ ಸುಲ್ತಾನನು ಗೆದ್ದು ಸಹಕರಿಸಿದ ಹಸರಂಗಿ ಪಾಮನಾಯಕನಿಗೆ ಇನಾಮಾಗಿ ಕೊಡುತ್ತಾನೆ.[೧೬೩]

ಔರಂಗಜೇಬನ ಸೈನಿಕರು ವಾಗಿನಗೇರಿಯನ್ನು ಮುತ್ತಿಗೆ ಹಾಕಿದಾಗ ಪೀತಾಂಬರ ಬಹರಿ ಪಿಡ್ಡನಾಯಕನು ಅಲ್ಲಿಂದ ಪರಾರಿಯಾಗಿ ಗುಡಗುಂಟಿಯ ಮೂಲಕ ಕನಕಗಿರಿಗೆ ಬಂದನು. ಕನಕಗಿರಿಯ ಇಮ್ಮಡಿ ಉಡಚನಾಯಕ ಒಂದು ವರ್ಷದವರೆಗೆ ಆತನನ್ನು ರಕ್ಷಣೆ ಮಾಡಿದನು.[೧೬೪] ಈತನ ಕಾಲದಲ್ಲಿ ಕನಕಗಿರಿ ೩೨ ಲಕ್ಷ ಆದಾಯವನ್ನು ಹೊಂದಿತ್ತು.[೧೬೫] ಈತನ ರಾಣಿಯರಲ್ಲಿ ರಾಣಿ ಚಿನ್ನಮ್ಮ ಕನಕರಾಯನ ಕೆರೆಯನ್ನು, ಪೇಟೆ ಬಸವಣ್ಣ ದೇವಾಲಯವನ್ನು[೧೬೬] ಹಾಗೂ ಲಕ್ಷ್ಮೀದೇವಿ ಗುಡ್ಡದಲ್ಲಿ ಒಂದು ಬಾವಿಯನ್ನು ಕಟ್ಟಿಸಿದಳು.[೧೬೭] ಈ ಎಲ್ಲಾ ಸಾಧನೆಗಳಿಂದ ಈತ ಕನಕಗಿರಿಯ ಪ್ರಸಿದ್ಧ ಅರಸ ಎಂದು ಹೇಳಬಹುದು. ಈತನ ಕೀರ್ತಿ ಸುತ್ತಲಿನ ಸುರಪುರ, ಗುಡಗುಂಟಿ, ದೇವದುರ್ಗದವರೆಗೂ ಹಬ್ಬಿತ್ತು.

ಈತನ ತರುವಾಯ ಇಮ್ಮಡಿ ಕನಕಪ್ಪ ಉಡಿಚನಾಯಕ(ಕ್ರಿ.ಶ.೧೭೦೮-೧೭೫೨)ನು ಅಧಿಕಾರಕ್ಕೆ ಬಂದ. ಈತ ಕೂಡಲಿ ಶೃಂಗೇರಿ ಮಠಕ್ಕೆ ತೊಂಡೇಹಾಳ ಗ್ರಾಮವನ್ನು ತಮ್ಮ ತಂದೆ ತಾಯಿಗಳಿಗೆ

ಪುಣ್ಯವಾಗಲೆಂದು ದಾನವಾಗಿ ನೀಡುತ್ತಾನೆ.[೧೨೮] ಕನಕಗಿರಿಯಲ್ಲಿ ಚಿದಾನಂದ ಅವಧೂತರಿಗೆ ಮಠವನ್ನು ಕಟ್ಟಿಸಿದನು. ಹಾಗೂ ಅರಮನೆಯ ಹತ್ತಿರದ ತೋಟದಲ್ಲಿ ಆಶ್ರಮವನ್ನು ನಿರ್ಮಿಸಿಕೊಟ್ಟನು. ಈತನ ನಂತರ ಹಿರೇರಂಗಪ್ಪನಾಯಕ (ಕ್ರಿ.ಶ.೧೭೫೨-೧೭೮೧) ಅಧಿಕಾರರೂಢನಾದನು. ಈತನ ಕಾಲದಲ್ಲಿ ಸುರಪುರದೊಂದಿಗೆ ವೈವಾಹಿಕ ಸಂಬಂಧ ಬೆಳೆಸಲಾಯಿತು. ಚಿತ್ರದುರ್ಗದ ವೀರಮದಕರಿನಾಯಕನ ಸಹಾಯಕ್ಕೆ ಸೈನ್ಯವನ್ನು ಕಳುಹಿಸಿದ್ದನು.[೧೨೯]

ನಂತರದ ಅರಸರಲ್ಲಿ ಮುಮ್ಮಡಿ ಕನಕಪ್ಪ ನಾಯಕ(ಕ್ರಿ.ಶ.೧೭೮೧-೧೭೮೮) ಅಧಿಕಾರಕ್ಕೆ ಬಂದನು. ಈತನ ನಂತರ ಹಿರೇನಾಯಕ(ಕ್ರಿ.ಶ.೧೭೮೮-೧೮೩೩) ಅಧಿಕಾರದಲ್ಲಿದ್ದ ಕುಷ್ಟಗಿ, ಗಂಗಾವತಿ, ಹರಿಹರ ಮತ್ತು ದಾವಣಗೇರಿ ಪ್ರದೇಶಗಳು ಈತನ ಅಧೀನದಲ್ಲಿದ್ದವು. ಈ ಎಲ್ಲಾ ಪ್ರದೇಶಗಳಿಂದ ಈತನ ರಾಜ್ಯಕ್ಕೆ ಒಂಭತ್ತು ಲಕ್ಷ ಆದಾಯ ಬರುತ್ತಿತ್ತು. ಕಾರಣ ಈತ ರೈತರಿಂದ ಬಲತ್ಕಾರವಾಗಿ ಕಂದಾಯವನ್ನು ವಸೂಲಿ ಮಾಡುತ್ತಿದ್ದನು. ಕ್ರೂರ ಸ್ವಭಾವದವನಾದ ಈತ ಮುಂಡರಗಿ ದೇಸಾಯಿಯ ಮಗಳನ್ನೂ, ಬಾದರಬಂಡಿಯ ದೇಸಾಯಿಯ ಹೆಂಡತಿಯನ್ನೂ ಅಪಹರಿಸಿದನು. ಅವರು ಹೈದ್ರಾಬಾದ್ ನಿಜಾಮನಿಗೆ ಮೊರೆ ಹೋದರು. ಹೈದ್ರಾಬಾದ್ ನಿಜಾಮ ತನ್ನ ಮಂತ್ರಿಯನ್ನು ಸುರಪುರಕ್ಕೆ ಪಾಮನಾಯಕನ ಹತ್ತಿರ ಕಳುಹಿಸಿ, ಕನಕಗಿರಿಯ ಹಿರೇನಾಯಕನನ್ನು ಹಿಡಿದು ತರುವಂತೆ ಆದೇಶ ನೀಡಿದನು. ಅದರಂತೆ ಪಾಮನಾಯಕ ಸೈನ್ಯಸಮೇತನಾಗಿ, ಕನಕಗಿರಿಗೆ ದಾಳಿ ಮಾಡಿದನು. ಮೂರು ತಿಂಗಳುವರೆಗೆ ಧಾಳಿ ನಡೆದಾಗ ಹಿರೇನಾಯಕ ಗಂಗಾವತಿಯ ಸಮೀಪದ ಎಮ್ಮಿಗುಡ್ಡವನ್ನು ಪ್ರವೇಶಿಸುತ್ತಾನೆ. ಸುರಪುರದ ಸೈನಿಕರಿಗೆ ಸಿಗುವುದಿಲ್ಲ. ಆಗ ಸುರಪುರದ ಪಾಮನಾಯಕ ದೇವದುರ್ಗದ ಕೃಷ್ಣಪ್ಪನಾಯಕ, ಕೋಸೆಲಪ್ಪ ಸರಸೌಬತ್ತು ಗುರಿಕಾರ ಕುಂಜನಾರಾಯಣಪ್ಪ ರವರನ್ನೂ ಕರೆಯಿಸಿಕೊಂಡನು. ನಿಜಾಮನು ಆಗ ಹೈದ್ರಾಬಾದ್‌ನಿಂದ ಮೂರು ಲಕ್ಷ ಹಾಗೂ ೧೦,೦೦೦ ಜನರುಳ್ಳ ಪಡೆಯನ್ನು ಸಹಾಯಕ್ಕಾಗಿ ಕಳುಹಿಸುತ್ತಾನೆ. ಒಂಬತ್ತು ದಿನಗಳವರೆಗೆ ದಾಳಿ ನಡೆದರೂ ಕನಕಗಿರಿ ಅರಸ ಸಿಗಲಿಲ್ಲ. ಒಂದುದಿನ ಮದ್ಯ ಸೇವಿಸಿ ಮಲಗಿರುವ ಸಂದರ್ಭದಲ್ಲಿ ಸುರಪುರದ ಕೊಟಗಾರರು ಆತನನ್ನು ಸೆರೆಹಿಡಿದು ಪಾಮನಾಯಕನಿಗೆ ಒಪ್ಪಿಸುತ್ತಾರೆ. ಹಿರೇನಾಯಕನನ್ನು ಹೈದ್ರಾಬಾದಿಗೆ ಕಳುಹಿಸಲಾಗುತ್ತದೆ. ನಂತರ ಕನಕಗಿರಿ ಪ್ರದೇಶವೆಲ್ಲ ನಿಜಾಮನಿಂದ ಜಪ್ತಿಯಾಗುತ್ತದೆ. ನಿಜಾಮನ ಫೌಜು ಕನಕಗಿರಿಯಲ್ಲಿಯೇ ಇದ್ದಿತು. ಪಾಮನಾಯಕ ಕನಕಗಿರಿಯನ್ನು ಲೂಟಿ ಮಾಡಿದ. ಹೈದ್ರಾಬಾದ್‌ನಲ್ಲಿ ಕನಕಗಿರಿ ಅರಸ ಹಿರೇನಾಯಕನನ್ನು ತೋಪಿನಬಾಯಿಗೆ ಕಟ್ಟಿ ಹಾರಿಸಲಾಯಿತು.[೧೩೦] ಇಲ್ಲಿಗೆ ಕನಕಗಿರಿಯಲ್ಲಿ ಗುಜ್ಜಲ ವಂಶದವರ ಆಳ್ವಿಕೆ ಕೊನೆಯಾಗುತ್ತದೆ.

ನಂತರ ಇವರು ಕ್ರಿ.ಶ.೧೮೩೩ರಿಂದ ೧೯೪೮ರವರೆಗೆ ಹುಲಿಹೈದರ್‌ನಿಂದ ಆಳ್ವಿಕೆ ಮಾಡುತ್ತಾರೆ. ಕನಕಗಿರಿ ಹೈದ್ರಾಬಾದ್ ನಿಜಾಮನ ಅಧೀನದಲ್ಲಿರುತ್ತದೆ. ಹಿರೇನಾಯಕನ ಎರಡನೆಯ ಮಗ ರಂಗನಾಥಪ್ಪ

ನಾಯಕ ನಿಜಾಮನ ವಿರುದ್ಧ ಬಂಡೆದ್ದಾಗ ನಿಜಾಮನು ಕನಕಗಿರಿಯ ಅಧೀನದ ಹುಲಿಹೈದರ್, ಹಿರೇಮನ್ನಾಪುರ, ಹೊಸಗುಡ್ಡ, ಗೋಡಿನಾಳ, ಹನುಮನಾಳ, ಶಿರವಾರ, ಕನಕಾಪುರ, ಸೋಮಸಾಗರ, ಓಬಳಬಂಡಿ, ಗಾಣದಾಳ, ತಾಳಿಕೇರಿ, ಗುಂತಮಡು, ಗುಳೇವು, ಶಿಡ್ಲಬಾವಿ ಮುಂತಾದ ಹದಿನಾರು ಹಳ್ಳಿಗಳನ್ನು ಜಾಗೀರು ನೀಡಿದನು.[೧೭೧] ಅಲ್ಲದೇ ಹುಲಿಹೈದರ್‌ನಲ್ಲಿ ದರ್ಬಾರನ್ನು ಕಟ್ಟಿಸಿಕೊಳ್ಳಲು ಅನುಮತಿ ನೀಡಿದನು. ಅಂದಿನಿಂದ ಹುಲಿಹೈದರ್ ಸಂಸ್ಥಾನವೆಂದು ಕರೆಯಲಾಯಿತು.

ರಂಗನಾಥಪ್ಪನಾಯಕನಿಗೆ ಒಬ್ಬ ತಮ್ಮನಿದ್ದನು. ಅಣ್ಣನಿಂದ ಗೋಡಿಹಾಳ ಗ್ರಾಮವನ್ನು ಪಡೆಯುವುದರ ಮೂಲಕ ಪ್ರತ್ಯೇಕ ವಾಸಿಸಲು ಪ್ರಾರಂಭಿಸಿದನು. ಹೀಗಾಗಿ ಅಲ್ಲಿರುವ ಮನೆತನದವರನ್ನು ಇಂದಿಗೂ ಗೋಡಿಹಾಳ ದೊರೆಗಳೆಂದು ಕರೆಯುತ್ತಾರೆ. ಕನಕಗಿರಿ ಹೈದ್ರಾಬಾದ್ ನಿಜಾಮನ ವಶದಲ್ಲಿದ್ದರೂ ಜಾತ್ರೆ ನಡೆಸುವ ಅಧಿಕಾರ ಹುಲಿಹೈದರ್‌ನ ಅರಸರಿಗೆ ಇತ್ತು. ಪ್ರತಿ ವರ್ಷ ಜಾತ್ರೆಗಾಗಿ, ನಿಜಾಮ ಸರಕಾರದಿಂದ ೩ ಸಾವಿರ ರೂ.ಗಳನ್ನು ನೀಡುತ್ತಿದ್ದರು. ನಂತರದಲ್ಲಿ ನಿಜಾಮ ೩ ಸಾವಿರ ರೂಪಾಯಿಗಳನ್ನು ಕೊಡುವುದನ್ನು ನಿಲ್ಲಿಸುತ್ತಾನೆ. ಆಗ ರಂಗನಾಥಪ್ಪನಾಯಕ ತನ್ನ ಸ್ವಂತ ಖರ್ಚಿನಿಂದ ಜಾತ್ರೆಯನ್ನು ನಡೆಸಿದನು. ರಂಗನಾಥಪ್ಪನಾಯಕನಿಗೆ ಇಬ್ಬರು ರಾಣಿಯರಿದ್ದರು. ಮೊದಲನೆಯ ರಾಣಿಗೆ ರಂಗಪ್ಪನಾಯಕ, ಕನಕಪ್ಪನಾಯಕ ಎಂಬುವರೂ ಎರಡನೆಯ ರಾಣಿಗೆ ಜುಮ್ಮಾಳನಾಯಕ ಎಂಬ ಮಕ್ಕಳಿದ್ದರು. ರಂಗನಾಥಪ್ಪನಾಯಕನ ಹಿರಿಯ ಮಗ ರಂಗಪ್ಪನಾಯಕ ಅಧಿಕಾರಕ್ಕೆ ಬಂದ. ಈತ ತಮ್ಮ ತಂದೆಯ ಆಡಳಿತದ ಕೆಲಸ ಕಾರ್ಯಗಳನ್ನು ಮುಂದುವರೆಸಿದನು. ಇವರ ತಮ್ಮಂದಿರಾದ ಕನಕಪ್ಪನಾಯಕ ಮತ್ತು ಜುಮ್ಮಾಳನಾಯಕರು ಸೋಮಸಾಗರ ಮತ್ತು ಗುಂತುಮಡುವಿನ ಗ್ರಾಮಗಳನ್ನು ತೆಗೆದುಕೊಂಡು ಪ್ರತ್ಯೇಕರಾದರು.[೧೭೨]

ರಂಗಪ್ಪನಾಯಕನಿಗೆ ಮೂರು ಜನ ರಾಣಿಯರಿದ್ದರು. ಅವರಿಗೆ ಮೂರು ಜನ ಹೆಣ್ಣುಮಕ್ಕಳು. ಹೀಗಾಗಿ ರಂಗಪ್ಪನಾಯಕನ ತಮ್ಮ ಸೋಮಸಾಗರದ ಕನಕಪ್ಪನಾಯಕನ ಮಗ ವುಡಸಿನಾಯಕನನ್ನು ದತ್ತಕ ತೆಗೆದುಕೊಳ್ಳಲಾಯಿತು. ಈತ ಕಾಲವಾದ ಮೇಲೆ ಈತನ ಮಗ ರಾಜಾರಂಗಪ್ಪನಾಯಕ ಚಿಕ್ಕವನಿದ್ದ ಕಾರಣ ಆತನ ತಾಯಿ ರಾಣಿ ಗೌರಮ್ಮ ಸಂಸ್ಥಾನದ ಅಧಿಕಾರ ವಹಿಸಿಕೊಂಡಳು. ಚಿಕ್ಕವಯಸ್ಸಿನಲ್ಲಿಯೇ ಮಗ ತೀರಿಕೊಂಡನು. ಹಿರಿಯರ ಸಲಹೆಯಂತೆ ತನ್ನ ಮೈದುನ ಸೋಮಸಾಗರದ ರಂಗನಾಥಪ್ಪನ ಮಗ ರಂಗಪ್ಪನಾಯಕನನ್ನು ದತ್ತಕ ತೆಗೆದುಕೊಂಡಳು. ರಾಣಿ ಗೌರಮ್ಮಳ ನಿರ್ಲಕ್ಷ್ಯದಿಂದ ಆಡಳಿತವನ್ನು ಮುಜುಮದಾರರು, ಸುಬೇದಾರರು ದುರುಪಯೋಗ ಮಾಡಿಕೊಂಡರು. ಹೈದ್ರಾಬಾದ್ ನಿಜಾಮ ಸಂಸ್ಥಾನದ ಆಡಳಿತ ಕುಸಿದಿದ್ದರಿಂದ ತನ್ನ ವಶಕ್ಕೆ ತೆಗೆದುಕೊಂಡನು. ರಾಣಿ ಗೌರಮ್ಮ ಮತ್ತು ಆಕೆಯ ದತ್ತು ಪುತ್ರ ರಂಗಪ್ಪನಾಯಕನಿಗೆ ಮಾಶಾಸನವನ್ನು ನೀಡಿದರು. ರಾಣಿ ಹೈದ್ರಾಬಾದ್‌ನಲ್ಲಿಯೇ ನಿಧನಳಾದಳು. ನಂತರ

ಈ ಸಂಸ್ಥಾನ ಕ್ರಿ.ಶ.೧೯೪೮ರಲ್ಲಿ ಭಾರತದ ಒಕ್ಕೂಟದೊಂದಿಗೆ ವಿಲೀನವಾದವು. ೧೯೫೭ರಲ್ಲಿ ಇವರ ಜಹಗೀರುಗಳೆಲ್ಲ ರದ್ದಾದವು.

ಈ ಮನೆತನದ ವಂಶಸ್ಥರು ನಾಲ್ಕು ಅಣ್ಣತಮ್ಮಂದಿರ ಕುಟುಂಬಗಳು ಹುಲಿಹೈದರ್‌ನಲ್ಲಿ ವಾಸವಾಗಿದ್ದಾರೆ. ಈ ಮನೆತನದ ರಾಜಾರಂಗಪ್ಪನಾಯಕರು ಹುಲಿಹೈದರ್ ಗ್ರಾಮಪಂಚಾಯತಿಯ ಚೇರಮನ್ನರಾಗಿ ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರು. ೧೯೭೮ರಲ್ಲಿ ಗಂಗಾವತಿ ಎ.ಪಿ.ಎಂ.ಸಿ.ಯ ಅಧ್ಯಕ್ಷರಾಗಿದ್ದರು. ಇವರ ಹಿರಿಯ ಮಗ ಉಡಿಚಪ್ಪನಾಯಕರು ಮಂಡಲ ಪಂಚಾಯತಿಯ ಪ್ರಧಾನರಾಗಿದ್ದರು.

ರಾಜಾ ಚಚ್ಚಪ್ಪನಾಯಕರು ಗಂಗಾವತಿಯ ಎ.ಪಿ.ಎಂ.ಸಿ.ಯ ನಿರ್ದೇಶಕರಾಗಿದ್ದರು. ಪಂಚಾಯತಿಗೆ ಒಂದು ಸಾರಿ ಸ್ಪರ್ಧಿಸಿ ಪರಾಭವಗೊಂಡರು. ಈ ಮನೆತನ ಸ್ಥಳೀಯ ರಾಜಕೀಯದೊಂದಿಗೆ ಉತ್ತಮ ಸಂಪರ್ಕ ಹೊಂದಿದೆ. ಆರ್ಥಿಕವಾಗಿ ಸಾಧಾರಣ ಸ್ಥಿತಿಯಲ್ಲಿದ್ದಾರೆ. ಈ ಮನೆತನದವರನ್ನು ವಾಲ್ಮೀಕಿ ಗುರುಗಳೆಂದು ಗುರುತಿಸುತ್ತಾರೆ. ಈ ಮನೆತನದ ರಾಜಾ ನವೀನಚಂದ್ರನಾಯಕರು ಅನೇಕ ಗ್ರಾಮಗಳಿಗೆ ಸಂಚರಿಸುತ್ತ, ಜನಾಂಗದಲ್ಲಿಯ ಎಡರುತೊಡರುಗಳನ್ನು ನಿವಾರಿಸುತ್ತ, ವಾಲ್ಮೀಕಿ ಜನಾಂಗದ ರೀತಿ-ನೀತಿ ಕಟ್ಟಳೆಗಳನ್ನು ಸಮಾಜಕ್ಕೆ ತಿಳಿಸುತ್ತಾ, ಸಮಾಜದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ.

## ೨.೮ ಗುಡೇಕೋಟೆ ನಾಯಕ ಅರಸರು

ಗುಡೇಕೋಟೆಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ಇಪ್ಪತ್ತೈದು ಕಿ.ಮೀ. ಅಂತರದಲ್ಲಿದೆ. ಇದೊಂದು ನಾಯಕ ಅರಸುಮನೆತನವಾಗಿತ್ತು. ಈ ಅರಸುಮನೆತನದ ಕುರಿತಾಗಿ ಇದ್ದ ಚಾರಿತ್ರಿಕ ಆಕರಗಳಾದ ಕರ್ನಾಟಕದ ಕೈಫಿಯತ್ತುಗಳು, ಶ್ರೀಕುಮಾರದೇವರಕ್ಷೇತ್ರದ ಕೈಫಿಯತ್ತು, ಹಿರೇಹಾಳು ಕೈಫಿಯತ್ತು, ದರೋಜಿ ಗ್ರಾಮದ ಕೈಫಿಯತ್ತು, ಸಂಡೂರು ತಾಲೂಕಿನಲ್ಲಿರುವ ಚೋರನೂರು ಗ್ರಾಮದ ವೀರಭದ್ರ ದೇವಸ್ಥಾನದ ಎದುರಿನಲ್ಲಿರುವ ಶಾಸನ, ಬೊಮ್ಮಲಿಂಗನ ಕೆರೆಯ ಹಿಂಭಾಗದ ರಸ್ತೆ ಬದಿಯ ಹೆಬ್ಬಂಡೆಯ ಮೇಲಿರುವ ಶಾಸನ ಹಾಗೂ ಈ ಮನೆತನದ ವಂಶಸ್ಥರಾದ ಕೃಷ್ಣವರ್ಮರಾಜರಲ್ಲಿಯ ದಾಖಲೆ ಪತ್ರಗಳು. ಇವೆಲ್ಲವುಗಳು ಮಾಹಿತಿ ನೀಡಿದರೂ ಅರಸರ ಕುರಿತಾದ ಚರಿತ್ರೆಯಲ್ಲಿ ಏಕರೂಪತೆ ಕಂಡುಬರುವುದಿಲ್ಲ.

ಗುಡೇಕೋಟೆ ಪಾಳೆಯಪಟ್ಟಿನ ಸ್ಥಾಪಕನ ಕುರಿತಾಗಿ ಭಿನ್ನಾಭಿಪ್ರಾಯಗಳಿವೆ. ಒಂದು ವಂಶಾವಳಿಯಲ್ಲಿ ಹಿರೇಬೊಮ್ಮಣ್ಣನಾಯಕ ಕೃಷ್ಣದೇವರಾಯನಿಂದ ಪಡೆದ ಜಾಗೀರುಭೂಮಿಯಲ್ಲಿ ಗುಡೇಕೋಟೆ ಸಂಸ್ಥಾನವನ್ನು ಸ್ಥಾಪಿಸಿದನೆಂದೂ, ಇನ್ನೊಂದು ವಂಶಾವಳಿಯಲ್ಲಿ ಮೂಲಪುರುಷ ಗಂಡಳನಾಯಕ ಗುಡೇಕೋಟೆ ಸಂಸ್ಥಾನವನ್ನು ಹುಟ್ಟು ಹಾಕಿ ೧೫ ವರ್ಷ ರಾಜ್ಯಭಾರ ಮಾಡಿ ಮಕ್ಕಳಾದ ಪೆನ್ನಪ್ಪರಾಜನಿಗೆ

ಬಿಟ್ಟುಕೊಟ್ಟನೆಂಬುದು. ಆದರೆ ಕುಮಾರರಾಮನ ಕೈಫಿಯತ್ತಿನ ಪ್ರಕಾರ ಇವರ ಮೂಲವನ್ನು ಕಂಪಲಿಯ ಕುಮಾರರಾಮನ ವಂಶಜರೆಂದು, ಮರುಳೆನವರೆಂದು ಕರೆಯಲಾಗಿದೆ. ಗಡಿಯಾಂಕ ಭೀಮನು ಕುಮಾರರಾಮನ ಜೊತೆ ಮುತ್ತಿನ ಚೆಂಡಾಟದಲ್ಲಿ ಭಾಗವಹಿಸಿದ್ದ ಆಪ್ತ ಸ್ನೇಹಿತನಾಗಿದ್ದರಿಂದ ಈತನೇ ಗುಡೇಕೋಟೆಯ ಸ್ಥಾಪಕ[೧೭೩], ಇಲ್ಲವೆ ಆ ಪ್ರದೇಶಕ್ಕೆ ನಾಯಕನಾಗಿರಬೇಕು.

ಈತನ ನಂತರ ವಂಶಾವಳಿಯ ಪ್ರಕಾರ ಗಂಡಳನಾಯಕ(ಕ್ರಿ.ಶ.೧೫೦೬-೧೫೨೧)ನು ಗುಡೇಕೋಟೆಯನ್ನು ಆಳಿದ ಪ್ರಥಮ ಅರಸ. ಸುಮಾರು ಹದಿನೈದು ವರ್ಷಗಳ ಕಾಲ ಆಳ್ವಿಕೆ ಮಾಡಿದ. 'ಲಿಂಗಮ್ಮಹಳ್ಳಿ, ಜಾಜರಕಲ್ಲು, ಮಡೆನಹಳ್ಳಿ, ಲಕ್ಷ್ಮಿಪುರ, ಹಿರೇಹಾಳು(ಆಂಧ್ರಪ್ರದೇಶ) ಮೊದಲಾದ ಪ್ರದೇಶಗಳು ಈತನ ಆಳ್ವಿಕೆಗೆ ಒಳಪಟ್ಟಿದ್ದವು.[೧೭೪] ಈತನ ತರುವಾಯದಲ್ಲಿ ಪೆನ್ನಪ್ಪನಾಯಕ(ಕ್ರಿ.ಶ.೧೫೨೧-೧೫೪೧) ಪಾಪಳ ನಾಯಕ (ಕ್ರಿ.ಶ.೧೫೪೧-೧೫೫೮) ಕೆಮ್ಮಯ್ಯರಾಜ(ಕ್ರಿ.ಶ.೧೫೫೮-೧೬೦೨) ರಾಮಪ್ಪನಾಯಕ (ಕ್ರಿ.ಶ.೧೬೦೨-೧೬೩೭). ಇವರೆಲ್ಲರೂ ಕ್ರಮವಾಗಿ ಆಳ್ವಿಕೆ ಮಾಡಿದವರಾದರೂ, ಇವರ ಸಾಧನೆಯ ಕುರಿತಾಗಿ ಯಾವುದೇ ಆಧಾರಗಳು ಲಭ್ಯವಿಲ್ಲ.

ರಾಮಪ್ಪನಾಯಕನ ನಂತರ, ಆತನ ಹಿರಿಯ ಮಗನಾದ ಬೊಮ್ಮಂತರಾಜ(ಕ್ರಿ.ಶ.೧೬೩೭-೧೬೭೬)ನು ಅಧಿಕಾರಕ್ಕೆ ಬರುತ್ತಾನೆ. ಕೃಷ್ಣದೇವರಾಯನು ಪಟ್ಟಾಭಿಷಿಕ್ತನಾದ ನಂತರ ಕುಮಾರರಾಮನ ವಂಶಜರೆಂದು ಹೇಳಿಕೊಂಡು ಪೂರ್ವದಿಂದಲೂ ಕಾವಲು ನಾಡದಳವಾರಿಕೆಯನ್ನು ಮಾಡಿಕೊಂಡ ಬಗ್ಗೆ ಬೊಮ್ಮಂತರಾಜನು ಕೃಷ್ಣದೇವರಾಯನಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ.[೧೭೫] ಕೃಷ್ಣದೇವರಾಯ ಹಿರೇಬೊಮ್ಮಂತನಾಯಕನಿಗೆ ಏಳು ಸೀಮೆಗಳನ್ನು ದಯಪಾಲಿಸಿದನು. ಅವುಗಳೆಂದರೆ, ಉಜ್ಜಯಿನಿ, ಜರಿಮಲೆ, ಗುಡೇಕೋಟೆ, ಬಾಣಾರಾವಿ, ಸಂಡೂರು, ವಡ್ಡು ಮತ್ತು ಕುಡತಿನಿ. ಅಲ್ಲದೇ ಆದೋನಿಯ ನವಾಬನಿಗೆ ಪೊಗದಿಯನ್ನು ಸಲ್ಲಿಸಿ ಈ ಪ್ರದೇಶಗಳನ್ನು ಆಳಬೇಕಾಗಿತ್ತು.[೧೭೬]

ರಾಯದುರ್ಗ(ಆಂಧ್ರದಲ್ಲಿದೆ), ಚಳ್ಳಕೆರೆ, ಜಗಳೂರು, ಕೂಡ್ಲಿಗಿಗಳೂ ಸಹಿತ ಈತನ ಆಡಳಿತದ ವ್ಯಾಪ್ತಿಗೊಳಪಟ್ಟಿದ್ದವು. ನಂತರದಲ್ಲಿ ತನ್ನ ತಮ್ಮ ಯರಿಬೊಮ್ಮಳ ನಾಯಕನಿಗೆ ರಾಯದುರ್ಗ ಪ್ರದೇಶವನ್ನು ಬಿಟ್ಟುಕೊಡುತ್ತಾನೆ.

ಬೊಮ್ಮಂತರಾಜನ ಮರಣದ ತರುವಾಯ ಆತನ ಮಗ ಚಿನ್ನಯರಾಜ(ಕ್ರಿ.ಶ.೧೬೭೬-೧೬೮೮)ನು ಸಿಂಹಾಸನಕ್ಕೆ ಬಂದ. ಈತ ಗುಡೇಕೋಟೆ, ಸಂಡೂರು, ಬಾಣರಾವಿ ಸೀಮೆಗಳನ್ನು ಆಳುತ್ತಾ ಆದೋನಿ ನವಾಬನಿಗೆ ಪೊಗದಿಯನ್ನು ಸಲ್ಲಿಸುತ್ತಿದ್ದನು. ನೆರೆಹೊರೆಯವರ ಉಪಟಳ ಈತನ ಅಧಿಕಾರಾವಧಿಯಲ್ಲಿ ಹೆಚ್ಚಾಗಿದ್ದುದರಿಂದ ರಾಜ್ಯದ ಸ್ಥಿತಿಗತಿಯಲ್ಲಿ ಯಾವುದೇ ರೀತಿಯ ಸುಧಾರಣೆಯಾಗಲಿಲ್ಲ.

ಚಿನ್ನಯರಾಜನ ಮಗ ಜಟ್ಟಿಂಗರಾಜನು(ಕ್ರಿ.ಶ.೧೬೮೮-೧೭೩೭) ಅಧಿಕಾರಕ್ಕೆ ಬರುವುದರ ಕುರಿತಾಗಿ ಕಾಲಮಾನದಲ್ಲಿ ವ್ಯತ್ಯಾಸವಿದೆ. ಸದ್ಯದ ದಾಖಲೆಯ ಪ್ರಕಾರ ಚಿನ್ನಯರಾಜನ ನಂತರ ಕ್ರಿ.ಶ.೧೬೮೮ರಲ್ಲಿ

ಜಟ್ಟಿಂಗರಾಜನು ಅಧಿಕಾರಕ್ಕೆ ಬರುತ್ತಾನೆ. ಈತ ಗುಡೇಕೋಟೆಯ ಪ್ರಸಿದ್ಧ ಅರಸ. ಕೈಫಿಯತ್ತುಗಳ ಪ್ರಕಾರ ಈತ ಸಂಡೂರು, ಗುಡೇಕೋಟೆ, ಬಾಣಾರಾವಿ ಪ್ರದೇಶಗಳ ಆಳ್ವಿಕೆಯನ್ನು ನಡೆಸುತ್ತಾನೆ ಹಾಗೂ ಆದೋನಿ ನವಾಬರಿಗೆ ಪೂರ್ವಿಕರು ಸಲ್ಲಿಸುತ್ತಿದ್ದ ಪೊಗದಿಯನ್ನು ನೀಡುತ್ತಿದ್ದ. ಈತ ಸ್ವತಂತ್ರನಾಗಲು ಹವಣಿಸುವುದನ್ನು ಅರಿತ ನವಾಬ ೧೨ ವರ್ಷಗಳ ಕಾಲ ಈತನ ಪ್ರದೇಶಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ.

ತರುವಾಯ ಜಟ್ಟಿಂಗರಾಜ ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕನ ನೆರವಿನಿಂದ ತನ್ನ ಪ್ರದೇಶಗಳನ್ನು ಪುನಃ ಪಡೆದುಕೊಳ್ಳುತ್ತಾನೆ. ಕ್ರಿ.ಶ.೧೬೯೦ರಲ್ಲಿ ಚಿತ್ರದುರ್ಗದ ಆಜನ್ಮ ವೈರಿಗಳೆನಿಸಿದ ಹರಪನಹಳ್ಳಿ ಮತ್ತು ಬಿದನೂರಿನವರು ದುರ್ಗದ ಸೀಮೆಯ ಅಣಜಿಯನ್ನು ಮುತ್ತಿ ತೆಗೆದುಕೊಂಡರು. ಈ ಸೀಮೆಯನ್ನು ವಶಪಡಿಸಿಕೊಳ್ಳಲು ಭರಮಣ್ಣನಾಯಕನು ಗುಡೇಕೋಟೆಯ ಜಟ್ಟಿಂಗರಾಜರು, ಜರಿಮಲೆ, ಅನಂತಪುರ, ತರೀಕೆರೆ, ಹಾವನೂರು, ಪಾಳೆಯಗಾರರನ್ನು ಕರೆಸಿಕೊಂಡು ಒಟ್ಟಾಗಿ ಅಣಜಿಗೆ ದಂಡು ತೆಗೆದುಕೊಂಡು ಹೋಗಿ ಅದನ್ನು ಮರು ಆಕ್ರಮಿಸಿಕೊಂಡರು.[೧೭೭] ಕ್ರಿ.ಶ.೧೬೯೮ರಲ್ಲಿ ಭರಮಣ್ಣನಾಯಕನು ಗುಡೇಕೋಟೆಯವರಿಗೆ ಸೇರಿದ ನಾಗಸಮುದ್ರವನ್ನು ಮುತ್ತಿಗೆ ಹಾಕಿದ ಹಾಗೂ ನಾಯಕ ಕುಟುಂಬದ ಬಂಗಾರವ್ವನಾಗತಿಯನ್ನು ಮದುವೆಯಾದನು.[೧೭೮] ಅಂದಿನಿಂದ ಇದು ಚಿತ್ರದುರ್ಗದವರ ಆಳ್ವಿಕೆಗೆ ಒಳಪಡುತ್ತದೆ. ಕ್ರಿ.ಶ.೧೬೯೯ರಲ್ಲಿ ಇಂದೂರಾಯನು ರಾಯದುರ್ಗದವರೂ ನಾಯಕನಹಟ್ಟಿ ಕೋಟೆಯನ್ನು ಮುತ್ತಿದಾಗ ದುರ್ಗದ ಭರಮಣ್ಣನಾಯಕನು ಗುಡೇಕೋಟೆ, ಹಾವನೂರು, ನಿಡಗಲ್ಲು, ರತ್ನಗಿರಿ ಮತ್ತು ಸಿರಾದವರನ್ನು ಹಾಗೂ ಹಟ್ಟಿ ಮಲ್ಲಪ್ಪನಾಯಕನನ್ನು ಜತೆಯಲ್ಲಿ ಕರೆದೊಯ್ದು ನನ್ನೀವಾಳ ಬಳಿ ಇಳಿದು ಶತ್ರುಗಳನ್ನು ಎದುರಿಸಿದನು.[೧೭೯]

ಕ್ರಿ.ಶ.೧೭೩೩ರಲ್ಲಿ ಹಿರೇಮದಕರಿನಾಯಕನು ಗುಡೇಕೋಟೆಗೆ ಸೇರಿದ ಕೆಲವು ಊರುಗಳನ್ನು ವಶಪಡಿಸಿಕೊಂಡನು.[೧೮೦] ತರುವಾಯ ವೆಂಕಟರಾವ್ ಘೋರ್ಪಡೆಯವರು, ಜಟ್ಟಿಂಗರಾಜರ ಅಧೀನದಲ್ಲಿದ್ದ ಪ್ರದೇಶಗಳನ್ನು ಆಕ್ರಮಿಸಿಕೊಂಡು ಜಟ್ಟಿಂಗರಾಜನನ್ನು ಹಿರೇಹಾಳಿನಲ್ಲಿ ಬಂಧನದಲ್ಲಿಟ್ಟರು.

ಜಟ್ಟಿಂಗರಾಜನ ನಂತರ ರಾಮಪ್ಪನಾಯಕ(ಕ್ರಿ.ಶ.೧೭೩೭-೧೭೪೨)ನು ಅಧಿಕಾರಕ್ಕೆ ಬರುತ್ತಾನೆ. ಈತನ ಕುರಿತಾದ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಈತನ ತರುವಾಯ, ಶಿವಪ್ಪನಾಯಕ(ಕ್ರಿ.ಶ.೧೭೪೨-೧೭೫೦)ನು ಆಳ್ವಿಕೆ ನಡೆಸುತ್ತಾನೆ. ತನ್ನ ಹಿರಿಯ ಮಗಳು ಭೀಮವ್ವನಾಗತಿಯನ್ನು ಚಿತ್ರದುರ್ಗದ ವೀರಮದಕರಿನಾಯಕನೊಂದಿಗೆ ಮತ್ತು ಇನ್ನೊಬ್ಬ ಮಗಳಾದ ಪೆದ್ದಕ್ಕಳನ್ನು ಚಿಕ್ಕಮದಕರಿನಾಯಕನಿಗೆ ಕೊಟ್ಟು ವಿವಾಹ ಮಾಡುತ್ತಾನೆ. ನಂತರ ಚಿನ್ನಯರಾಜ ಕ್ರಿ.ಶ.೧೭೫೨ರಲ್ಲಿ ಅಧಿಕಾರಕ್ಕೆ ಬಂದ. ಈತನೇ ಗುಡೇಕೋಟೆಯ ಕೊನೆಯ ಅರಸ. ಈತನ ಅವಧಿಯಲ್ಲಿ ಗುಡೇಕೋಟೆಯ ಚೆಲುವಾದಿ ಚಿನ್ನಪ್ಪನ ಮಗಳೂ, ಮದಲೆ ಹನುಮಯ್ಯನ ಪತ್ನಿಯೂ ಆದ (ಒನಕೆ) ಓಬವ್ವ ನೆಲೆಸಿದ್ದಳು.

ಇದೇ ಸಂದರ್ಭದಲ್ಲಿ ಹೈದರಾಲಿಯ ಧಾಳಿಗಳು ಪ್ರಾರಂಭವಾಗಿದ್ದವು. ಹೈದರಾಲಿ ಗುಡೇಕೋಟೆಯ ಮೇಲೆ ಎರಡು ಬಾರಿ ದಾಳಿ ಮಾಡುತ್ತಾನೆ. ಕ್ರಿ.ಶ.೧೭೭೭ರಲ್ಲಿ ಹೈದರಾಲಿಯು ೨೦೦೦ ಕಾಲ್ದಳ, ೩೦೦ ಅಶ್ವದಳ ತೆಗೆದುಕೊಂಡು ಹರಪನಹಳ್ಳಿಗೆ ಮುತ್ತಿಗೆ ಹಾಕಿ ತನ್ನ ರಾಜಧಾನಿಗೆ ಮರಳುತ್ತಿರುವಾಗ ಗುಡೇಕೋಟೆ, ಜರಿಮಲೆ, ಮೊಳಕಾಲ್ಮೂರುಗಳ ಮೇಲೆ ಧಾಳಿ ಮಾಡಿದನು.[೧೮೧] ಸತತವಾದ ಹನ್ನೊಂದು ದಿನಗಳ ಈ ಧಾಳಿಯಲ್ಲಿ ಬಸವನಕೋಟೆ, ಕಣಕುಪ್ಪೆ, ಬಾಂಡ್ರಾವಿ, ಮೊಳಕಾಲ್ಮೂರು, ಮುತ್ತಿಗಾರಹಳ್ಳಿ, ಓಬನಹಳ್ಳಿ ವಶಪಡಿಸಿಕೊಂಡರು.

ಹೈದರಾಲಿಯ ತರುವಾಯ ಟಿಪ್ಪುಸುಲ್ತಾನನ ಧಾಳಿಗೆ ತುತ್ತಾಗಿ, ಗುಡೇಕೋಟೆ ಕೆಲವು ದಿನಗಳ ಕಾಲ ಆತನ ಅಧೀನದಲ್ಲಿತ್ತು. ಕ್ರಿ.ಶ.೧೭೯೯ರಲ್ಲಿ ಟಿಪ್ಪು ಮರಣ ಹೊಂದಿದ ನಂತರದಲ್ಲಿ ನಿಜಾಮನ ಅಧೀನಕ್ಕೆ ಒಳಪಟ್ಟಿತು. ಕ್ರಿ.ಶ.೧೮೦೩ರ ಮೈಸೂರು ಸಪ್ಲಿಮೆಂಟರಿ ಒಪ್ಪಂದದ ಪ್ರಕಾರ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು.[೧೮೨] ಆಗ ಗುಡೇಕೋಟೆ ನಾಯಕ ಅರಸರ ಆಳ್ವಿಕೆ ಕೊನೆಗೊಂಡಿತು.

ಬ್ರಿಟಿಷರು ಈ ಮನೆತನದವರಿಗೆ ವಿಶ್ರಾಂತಿ ವೇತನ ನೀಡಿದರು. ೧೯೨೯ರವರೆಗೆ ಇವರು ವಿಶ್ರಾಂತಿ ವೇತನ ಪಡೆದ ಕುರಿತಾಗಿ ಕೆಲ ದಾಖಲೆಗಳು ಮಾಹಿತಿಯನ್ನು ಒದಗಿಸುತ್ತವೆ. ಜಟ್ಟಿಂಗರಾಯ(೧೮೫೯-೬೦) ೭೪.೯ ಪೈಸೆ, ಬೊಮ್ಮಂತರಾಜ(೧೮೬೦) ೭೪.೯ ಪೈಸೆ, ಪಂಪಾಪತಿ ರಾಜ(೧೮೭೯) ೯೩.೩೪ ಪೈಸೆ, ವೆಂಕಮ್ಮನಾಗತಿ ಮತ್ತು ಕೇಶವಮ್ಮನಾಗತಿ(೧೮೮೯-೯೦) ೯೩.೩೪ ಪೈಸೆ, ಕೇಶವಮ್ಮ ನಾಗತಿ(೧೯೨೯) ೧೫೯.೧೩೦ ಪೈಸೆ ವಿಶ್ರಾಂತಿ ವೇತನ ಇತ್ತೆಂದು ತಿಳಿದುಬರುತ್ತದೆ. ಜೊತೆಗೆ ಕೆಲವು ಪ್ರದೇಶಗಳ ಕಂದಾಯವನ್ನು ವಸೂಲಿ ಮಾಡಿಕೊಳ್ಳಲು ಗುಡೇಕೋಟೆ ಅರಸರಿಗೆ ಅನುಮತಿ ನೀಡಿದ್ದರು.

ಕ್ರಿ.ಶ.೧೮೨೮ರಲ್ಲಿ ಬರಗಾಲ ಬಿದ್ದಾಗ, ಗುಡೇಕೋಟೆಯ ಬೊಮ್ಮಂತರಾಜ, ಈತನ ತಮ್ಮ ಲಿಂಗಪ್ಪ ಹಾಗೂ ಸಂಬಂಧಿ ರಾಮಪ್ಪಯ್ಯ ಎಂಬುವರುಗಳು ೫೦೦ ಜನ ಬೇಡ ಸಮುದಾಯವನ್ನು ಸಂಘಟಿಸಿ ಬ್ರಿಟಿಷರ ಕಂದಾಯ ನೀತಿಯನ್ನು ವಿರೋಧಿಸಿದರು. ಇದನ್ನು ಪಾಳೆಯಗಾರರ ದಂಗೆ ಎಂದು ಕರೆದರು.[೧೮೩] ಆಗ ಅಲ್ಲಿಯ ಅಮಲ್ದಾರ ಹಡಗಲಿಯಿಂದ ಪೋಲೀಸರನ್ನು ಕರೆಯಿಸಿ ಈ ದಂಗೆಯನ್ನು ಹತ್ತಿಕ್ಕಿದರು.[೧೮೪] ಅನಂತರ ಬ್ರಿಟಿಷ್ ಕಲೆಕ್ಟರ್ ಗುಡೇಕೋಟೆಗೆ ಭೇಟಿ ನೀಡಿ ಅರಸರ ವಂಶಸ್ಥರ ರಾಜಕೀಯ ಸ್ಥಾನಮಾನ ನೀಡಲು ಪರಿಶೀಲಿಸಿದನೆಂದು ತಿಳಿಯುತ್ತದೆ.

ಈ ಅರಸರ ವಂಶಸ್ಥರಾದ ರಾಜಾ ಪಿ.ಜಿ. ಕೃಷ್ಣವರ್ಮರಾಜರು ಗುಡೇಕೋಟೆಯಲ್ಲಿ ನೆಲೆಸಿದ್ದಾರೆ. ಇವರ ತಂದೆಯವರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿದ್ದರಲ್ಲದೇ ಕೂಡ್ಲಿಗಿ ತಾಲೂಕು ಬೋರ್ಡ್ ಅಧ್ಯಕ್ಷರಾಗಿ, ಜಿಲ್ಲಾ ಬೋರ್ಡ್ ಸದಸ್ಯರಾಗಿ ಸೇವೆಯನ್ನು ಸಲ್ಲಿಸಿದ್ದರು. ರಾಜಾ ಪಿ.ಜಿ.ಕೃಷ್ಣವರ್ಮರಾಜರು ಗುಡೇಕೋಟೆಯ ಗ್ರಾಮಪಂಚಾಯತಿಯ ಅಧ್ಯಕ್ಷರಾಗಿ ಕೆಲಸವನ್ನು

ನಿರ್ವಹಿಸಿದ್ದಾರೆ. ಇವರು ತಮ್ಮ ಪೂರ್ವಜರ ೧೦೦ ಎಕರೆ ಆಸ್ತಿಯನ್ನು ಕಾಪಾಡಿಕೊಂಡು ಬಂದವರಾಗಿದ್ದಾರೆ. ಇವರ ಕುಟುಂಬದಲ್ಲಿ ಇಲ್ಲಿಯವರೆಗೂ ಏಕಪುತ್ರ ಸಂತಾನ ಕಂಡುಬಂದಿರುವುದು ವಿಶೇಷ. ಇವರ ಸ್ಥಿತಿ ಸದ್ಯಕ್ಕೆ ತಕ್ಕಮಟ್ಟಿಗೆ ಉತ್ತಮವಾಗಿದೆ ಎಂದು ಹೇಳಬಹುದು. ಕೃಷ್ಣವರ್ಮರಾಜರು ಪ್ರಾಮಾಣಿಕತೆಗೆ ಹೆಸರಾದವರೆಂದು ಆ ಊರಿನ ಜನ ಇವರನ್ನು ಗೌರವದಿಂದ ಕಾಣುತ್ತಿದ್ದಾರೆ. ಸ್ಥಳೀಯವಾಗಿ ನಡೆಯುವ ಸಭೆ ಸಮಾರಂಭಗಳಲ್ಲಿ ಇವರು ಭಾಗವಹಿಸುತ್ತಾರೆ.

## ೨.೯ ಜರಿಮಲೆ ನಾಯಕ ಅರಸರು

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಿಂದ ಆಗ್ನೇಯಕ್ಕೆ ೧೫ ಕಿ.ಮೀ.ದೂರದಲ್ಲಿರುವ ಜರಿಮಲೆ ವಿಜಯನಗರ ಕಾಲಕ್ಕೆ ತಲೆ ಎತ್ತಿದ ಪಾಳೆಯಪಟ್ಟುಗಳಲ್ಲಿ ಒಂದಾಗಿದೆ. ಈ ಮನೆತನದ ಚರಿತ್ರೆಯ ಕುರಿತಾಗಿ ದಾಖಲೆಗಳ ಕೊರತೆ ಇದೆ. ಇದ್ದ ಕೆಲ ದಾಖಲೆಗಳು ಏಕರೂಪದ ಮಾಹಿತಿಗಳನ್ನು ಒದಗಿಸುವುದಿಲ್ಲ. ದಂತಕಥೆಗಳು, ಪುರಾಣ, ನಂಬಿಕೆಗಳು ಕೆಲವು ಮಾಹಿತಿ ಒದಗಿಸಿದರೆ, ಬ್ರಿಟಿಷರ ಕೆಲ ದಾಖಲೆಗಳು, ಜರಿಮಲೆ ಪಾಳೆಯಗಾರರ ವಂಶಾವಳಿಗಳು, ಥಾಮಸ್ ಮನ್ರೋನ ವರದಿಗಳು, ಮೆಕೆಂಜಿ ಹಸ್ತಪ್ರತಿ, ಲೇಖನಗಳು ಇವರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

ಜರಿಮಲೆ ಅರಸರು ಆಂಧ್ರದ ಕದ್ರಿಮೂಲದವರೆಂದು ಕರೆದುಕೊಂಡವರು.[೧೮೫] ಕಾರಾಣಾಂತರಗಳಿಂದ ವಿಜಯನಗರಕ್ಕೆ ಬಂದು ನೆಲೆಸಿದರು. ವಿಜಯನಗರದ ಅರಸನ ಸೇವೆಯನ್ನು ಮಾಡಿಕೊಂಡಿದ್ದ ಇವರಲ್ಲಿ ಮೊದಲಿಗ ಪಾಪಣ್ಣನಾಯಕ.[೧೮೬] ಈತನು ವೀರನರಸಿಂಹ(ಕ್ರಿ.ಶ. ೧೪೯೯-೧೫೦೫)ನ ಸೇವಕರಲ್ಲಿ ಒಬ್ಬನಾಗಿ ಸೇವೆ ಸಲ್ಲಿಸುತ್ತಿದ್ದನು. ವಿಜಯನಗರದಲ್ಲಿ ನಡೆಯುವ ಗಲಭೆ, ಸಂಘರ್ಷಗಳನ್ನು ಅಡಗಿಸಲು ಸದಾ ಸಿದ್ಧನಾಗಿರುತ್ತಿದ್ದನು. ಅರಸ ಕಾಂಚೀಪುರಕ್ಕೆ ತೆರಳಿದಾಗ ಆತನ ಸಂಗಡ ಹೋಗಿ ಸೇವೆಯನ್ನು ಮಾಡಿದ್ದ. ಈ ಸೇವೆಯಿಂದ ವೀರನರಸಿಂಹನ ಪ್ರೀತಿಗೆ ಪಾತ್ರನಾಗಿದ್ದರಿಂದ ಪಾಪಣ್ಣನಾಯಕನಿಗೆ ವಡ್ಡು, ದರೋಜಿ ಗ್ರಾಮಗಳು ಬಳುವಳಿಯಾಗಿ ಬಂದವು. ಹೀಗಾಗಿ ಜರಿಮಲೆಯ ಮೂಲಪುರುಷ 'ಪಾಪಣ್ಣನಾಯಕ'. ಈತನಿಗೆ 'ಪಾಪನಾಯಕ'ನೆಂತಲೂ ಹೆಸರಿತ್ತು. ಜರಿಮಲೆ ಸಂಸ್ಥಾನ ಪಾಪಣ್ಣನಾಯಕನಿಂದಲೇ ಸ್ಥಾಪನೆಯಾದ ಕುರಿತು ಮೆಕೆಂಜಿ ಸಂಗ್ರಹಗಳು ಹೇಳುತ್ತವೆ.

ಈತನ ತರುವಾಯ ಮಗ ಪೆನ್ನಪ್ಪನಾಯಕನು ಅಧಿಕಾರಕ್ಕೆ ಬಂದ. ಈತ ಬಳುವಳಿಯಾಗಿ ಬಂದ ಗ್ರಾಮಗಳಿಗೆ ಒಡೆಯನಾಗಿ ಆಳ್ವಿಕೆ ಮಾಡಿದವನು. ಪುನಃ ವೀರನರಸಿಂಹನು ಗುಡೇಕೋಟೆ, ಭೂಪಸಮುದ್ರ ಗ್ರಾಮಗಳನ್ನು ಪೆನ್ನಪ್ಪನಾಯಕನಿಗೆ ಉಡುಗೊರೆಯಾಗಿ ಕೊಟ್ಟನೆಂದು ತಿಳಿದುಬರುತ್ತದೆ.[೧೮೭] ಅರಸ ಅಚ್ಯುತರಾಯ ಈತನಿಗೆ ಜಹಗೀರು ನೀಡುವುದಲ್ಲದೆ ೫೦೦ ಅಶ್ವದಳ, ೩೦೦೦ ಕಾಲ್ದಳ ಪಡೆ ಹೊಂದಲು ಅನುಮತಿ ನೀಡಿದ್ದನು. ಹಾಗೂ ಆ ಕಾಲದಲ್ಲಿ ಮಹಮದೀಯರ ಧಾಳಿಗಳು ನಡೆಯುವ

ಮುನ್ಸೂಚನೆಗಳು ಕಂಡುಬಂದಾಗ ಆತ ತನ್ನ ಅಧೀನ ಪಾಳೆಯಗಾರರಿಗೆ ಎಚ್ಚರಿಕೆಯಿಂದಿರಲು ಸೂಚನೆಕೊಟ್ಟ. ಆಗ ಪೆನ್ನಪ್ಪನಾಯಕ ಕಣಕುಪ್ಪೆ, ಕೂಡಲಗಿ, ನಾರಾಯಣದೇವರಕೆರೆ, ಡಣಾಯಕನಕೆರೆ, ಸೊಂಡೂರು ಪ್ರದೇಶವನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ. ಹಾಗೂ ೧೫,೩೦೦ ಮಹಮದ್ ಷಾಯಿ ಪಗೋಡ ಆದಾಯವಿರುವ ನಾಲ್ಕು ಮಾಗಣೆಗಳನ್ನು ಜೊತೆಗೆ ೩೫,೧೫೦ ಮಹಮ್ಮದ್‌ಷಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿನ ಮಾಗಣೆಗಳನ್ನು ಹಾಗೂ ೫೦೦ ಅಶ್ವದಳ, ೩೦೦೦ ಕಾಲಾಳು ಪಡೆಯನ್ನು ಇಟ್ಟುಕೊಳ್ಳಲು ಅನುಮತಿ ನೀಡಿದನು.[೧೮೮] ಈ ಅನುಮತಿಯನ್ನು ವಿಜಯನಗರದ ಅರಸರು ಕೆಲವು ಷರತ್ತುಗಳ ಮೇಲೆ ನೀಡುತ್ತಿದ್ದರು. ಆ ಷರತ್ತುಗಳೆಂದರೆ ಯುದ್ಧದ ಕಾಲದಲ್ಲಿ ವಿಜಯನಗರದವರಿಗೆ ಸಹಾಯ ಮಾಡಲು ಸೈನವನ್ನು ಸದಾ ಸಿದ್ಧವಾಗಿಟ್ಟುಕೊಳ್ಳಬೇಕಾಗಿತ್ತು. ಈತನು ಉಜ್ಜಿಯಿನಿಯಲ್ಲಿ ಕೋಟೆ ಕಟ್ಟಿಸಿದನೆಂದು ಮೆಕೆಂಜಿ ಬರಹಗಳು ಹೇಳಿವೆ. ಆದರೆ ಅಲ್ಲಿ ಇಂಥ ಯಾವ ಅವಶೇಷಗಳಿಲ್ಲದಿರುವುದು ಕಂಡುಬರುತ್ತದೆ.

ಪೆನ್ನಪ್ಪನಾಯಕನಿಗೆ ಮೂರು ಜನ ಮಕ್ಕಳಿದ್ದರು. ಅವರೇ ಬಸವಂತರಾಯ, ಭೂಮಿರಾಜ, ಬೂದಿಸಿದ್ದರಾಯ. ಇವರಲ್ಲಿ ಎರಡನೆಯ ಮಗ ಭೂಮಿರಾಜ ತಮ್ಮ ತಂದೆಯ ನಂತರ ಆಳ್ವಿಕೆ ಮಾಡುತ್ತಿದ್ದನು. ಈತನು ಸಾಹಸಿಯಾಗಿದ್ದನು. ಬಿಜಾಪುರದ ಬಾದಷಹನ ಕುದುರೆಯನ್ನು ಪಳಗಿಸಿದ್ದಕ್ಕಾಗಿ 'ಜಮೇದಾರ್ ಗುಡ್ಡಯ್ಯ ಜರಿಮಲ್ಲ' ಬಿರುದನ್ನು ಪಡೆಯುತ್ತಾನೆ. ಆತನಿಂದ ನಾಲ್ಕು ಮಾಗಣೆಗಳನ್ನು ೨೦೦೦ ರೂ. ಕಾಣಿಕೆ, ೨೦೦೦ ಕಾಲಾಳು, ೨೦೦ ಅಶ್ವದಳಗಳನ್ನು ಇಟ್ಟುಕೊಳ್ಳಲು ಅನುಮತಿಯೂ ಸಿಕ್ಕಿತು. ಹೀಗೆ ಸುಲ್ತಾನನೊಡನೆ ಗಾಢ ಸ್ನೇಹ ಬೆಳೆಯಿತು. ರಾಜ್ಯಭಾರದ ಸಂದರ್ಭದಲ್ಲಿ ಸುಲ್ತಾನನಿಗೂ ಮತ್ತು ಭೂಮಿರಾಜನಿಗೂ ಮನಸ್ತಾಪವಾಗಿ ಇಬ್ಬರೂ ವೈರಿಗಳಾಗುತ್ತಾರೆ.

ಈತನ ನಂತರ ಅಧಿಕಾರಕ್ಕೆ ಬಂದವನು ಇಮ್ಮಡಿನಾಯಕ. ಈತನ ಕಾಲದಲ್ಲಿ ಬಿಜಾಪುರದ ಆದಿಲ್‌ಷಾಹಿಯು ಜರಿಮಲೆಯ ಕೆಲವು ಪ್ರದೇಶಗಳನ್ನು ಗೆದ್ದುಕೊಂಡನು, ಸಾಕಷ್ಟು ಸಂಪತ್ತನ್ನು ಕೊಳ್ಳೆ ಹೊಡೆದನು. ಜರಿಮಲೆ ನಾಯಕನು ಮಹ್ಮದ್ ಆದಿಲ್‌ಷಾಹನಿಗೆ ವಾರ್ಷಿಕ ೯೩,೭೫೦ ರೂ.ಗಳನ್ನು ಕಾಣಿಕೆಯೆಂದು ಕೊಡುತ್ತಿದ್ದನು.[೧೮೯]

ಬಿಜಾಪುರ ಸುಲ್ತಾನನು ತನಗೆ ಅವಿಧೇಯತೆಯನ್ನು ಇಮ್ಮಡಿನಾಯಕ ತೋರಿಸುತ್ತಾನೆಂಬ ಕಾರಣಕ್ಕಾಗಿ, ಉಜ್ಜಿಯಿನಿಯ ಮೇಲೆ ದಾಳಿ ಮಾಡಿ ಅದನ್ನು ಹಿಡಿದುಕೊಳ್ಳುತ್ತಾನೆ. ಅಲ್ಲಿ ಸೈನ್ಯವನ್ನಿಟ್ಟು ನಗರದವರ ವಿರುದ್ಧ ಹೋಗಿ ಅವರನ್ನು ಶಿಕ್ಷಿಸಿದನು. ಮಹ್ಮದ್ ಆದಿಲ್‌ಷಾಹಿಯ ನಂತರ ಅಷ್ಟೇನು ಸಾಮರ್ಥ್ಯ ಹೊಂದಿದ ಸುಲ್ತಾನರು ಅಧಿಕಾರಕ್ಕೆ ಬರಲಿಲ್ಲ. ಇಂತಹ ಸನ್ನಿವೇಶದಲ್ಲಿ ಕ್ರಿ.ಶ. ೧೬೭೮ರಲ್ಲಿ ಬಳ್ಳಾರಿ ಸುತ್ತಮುತ್ತಲಿನ ಪ್ರದೇಶವನ್ನು ಬಿಜಾಪುರದ ಸುಲ್ತಾನನಿಂದ ಶಿವಾಜಿ ವಶಪಡಿಸಿಕೊಂಡನು.[೧೯೦]

ಉಜ್ಜಿಯಿನಿಯನ್ನು ಬಿಜಾಪುರದ ಸುಲ್ತಾನರು ವಶಪಡಿಸಿಕೊಂಡಾಗ, ಇಮ್ಮಡಿನಾಯಕ ಪುನಃ ಅದನ್ನು ಪಡೆಯಲಾಗಲಿಲ್ಲ. ಕಾರಣ ಈತನಲ್ಲಿ ಯಾವುದೇ ಆರ್ಥಿಕ ಸುಭದ್ರತೆ ಇರಲಿಲ್ಲ. ಆಗ ಹರಪನಹಳ್ಳಿಯ ನಾಯಕರು ಸುಲ್ತಾನರಿಗೆ ೨೦೦ ಪಗೋಡ ಕೊಟ್ಟು ಉಜ್ಜಿಯಿನಿಯನ್ನು ಪಡೆದುಕೊಳ್ಳುತ್ತಾರೆ. ಇದಕ್ಕೆ ಪೂರಕವಾಗಿ, ಹರಪನಹಳ್ಳಿ ಪಾಳೆಯಗಾರರು ವಿಜಯದ ಸಂಕೇತವಾಗಿ ಮರುಳಸಿದ್ಧೇಶ್ವರ ದೇವಾಲಯಕ್ಕೆ ಗಂಟೆಯನ್ನು ಸಮರ್ಪಿಸಿದರೆಂದು ಅಲ್ಲಿಯ ಶಾಸನ ತಿಳಿಸುತ್ತದೆ.[೯೧]

ಇಮ್ಮಡಿನಾಯಕ ಇದರಿಂದ ಸಿಟ್ಟಿಗೆದ್ದು ಹರಪನಹಳ್ಳಿಯವರ ಆಡಳಿತದ ವ್ಯಾಪ್ತಿಯ ಕೂಡ್ಲಿಗಿಯನ್ನು ಹಿಡಿದುಕೊಳ್ಳುತ್ತಾನೆ. ಇದೇ ಸಮಯದಲ್ಲಿ ಕಣಕುಪ್ಪೆಯನ್ನು ಚಿತ್ರದುರ್ಗದ ನಾಯಕರು ಗೆದ್ದುಕೊಳ್ಳುತ್ತಾರೆ. ಹರಪನಹಳ್ಳಿಯವರು ಕೂಡ್ಲಿಗಿಯನ್ನು ಕಿತ್ತುಕೊಳ್ಳುತ್ತಾರೆ. ಹೀಗೆ ತನ್ನ ಪ್ರದೇಶಗಳನ್ನು ಒಂದೊಂದಾಗಿ ಕಳೆದುಕೊಳ್ಳುತ್ತಾ ಬಂದ ಇಮ್ಮಡಿನಾಯಕನಿಗೆ ದಿಕ್ಕು ತೋಚದಾಯಿತು. ನೆಲೆಯಿಲ್ಲದೆ ಅಲೆದಾಡ ಬೇಕಾಯಿತು. ತನ್ನ ಸುರಕ್ಷೆಗಾಗಿ ಚಿತ್ರದುರ್ಗದವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುವುದರ ಮೂಲಕ ಸ್ನೇಹವನ್ನು ಸಂಪಾದಿಸುತ್ತಾನೆ. ದುರ್ಗದವರೊಂದಿಗೆ ಸ್ನೇಹ ಗಳಿಸಿದ ಈತ ಕೂಡ್ಲಿಗಿಯಿಂದ ಭೂಪಸಮುದ್ರಕ್ಕೆ ರಾಜಧಾನಿಯನ್ನು ವರ್ಗಾಯಿಸಿದ. ಆಗ ಹರಪನಹಳ್ಳಿ ನಾಯಕರು ಕೂಡ್ಲಿಗಿಯನ್ನು ಪಡೆದುಕೊಂಡು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಕೊನೆಗೆ ಇಮ್ಮಡಿನಾಯಕ ಜರಿಮಲೆಗೆ ಬಂದು ತಂಗುತ್ತಾನೆ. ಆಗ ಚಿತ್ರದುರ್ಗದವರ ಅಭಯವೂ ಸಿಗುತ್ತದೆ.

ಭೂಮಿರಾಜನ ನಂತರ ಅಧಿಕಾರಕ್ಕೆ ಬಂದವರು ಕಿರಿ ಇಮ್ಮಡಿನಾಯಕ. ಈತ ಇಮ್ಮಡಿನಾಯಕನ ಎರಡನೆ ಮಗ. ತರುವಾಯ ಬೊಮ್ಮಣ್ಣನಾಯಕನು ಅಧಿಕಾರ ಹಿಡಿದುಕೊಳ್ಳುತ್ತಾನೆ. ಈತನ ಕಾಲಾವಧಿಯಲ್ಲಿ ಹರಪನಹಳ್ಳಿ ಮತ್ತು ಚಿತ್ರದುರ್ಗದ ನಾಯಕರ ಉಪಟಳ ಹೆಚ್ಚಾಗುತ್ತದೆ. ಚಿತ್ರದುರ್ಗದ ಚಿಕ್ಕಣ್ಣನಾಯಕ (ಕ್ರಿ.ಶ.೧೬೭೫-೧೬೮೬)ನು ಉಜ್ಜಿಯಿನಿದುರ್ಗದ ಮೇಲೆ ಆಕ್ರಮಣ ಮಾಡಿದ ನಂತರದ ಒಪ್ಪಂದದಲ್ಲಿ ಮತ್ತೆ ಜರಿಮಲೆಯವರಿಗೆ ಬಿಟ್ಟುಕೊಡುತ್ತಾನೆ. ಹರಪನಹಳ್ಳಿಯವರು ಬಿದನೂರಿಗೆ ಬಂದು ಉಜ್ಜಿಯಿನಿಯನ್ನು ಪಡೆಯಲು ಹವಣಿಸಿದರು. ಚಿತ್ರದುರ್ಗದವರು ಜರಿಮಲೆಯ ಕಡೆಗಿದ್ದರೂ ಕ್ರಿ.ಶ. ೧೬೮೫ರಲ್ಲಿ ಜರಿಮಲೆಗೆ ಸೇರಿದ್ದ ಉಜ್ಜಯಿನಿಯನ್ನು ಚಿತ್ರದುರ್ಗದವರು ಧಾಳಿ ಮಾಡಿದ ಕೆಲವೇ ತಿಂಗಳಿನಲ್ಲಿ ಹರಪನಹಳ್ಳಿಯವರು ಅಕ್ರಮಿಸಿಕೊಳ್ಳವರು. ದಳವಾಯಿ ಮುದ್ದಣ್ಣ ಸೈನ್ಯದೊಂದಿಗೆ ತೆರಳಿದ್ದರು ಜಯ ಫಲಿಸಲಿಲ್ಲ. ಚಿತ್ರದುರ್ಗದ ಸೇನೆ ಮರಳಿತು. ಉಜ್ಜಿಯಿನಿ ಕೋಟೆಯಲ್ಲಿದ್ದ ಜರಿಮಲೆ ಬೊಮ್ಮಣ್ಣನನ್ನು ಹರಪನಹಳ್ಳಿಯವರು ಸೆರೆ ಹಿಡಿದು ಬಿದನೂರಿಗೆ ವರ್ಗಾಯಿಸುತ್ತಾರೆ. ಮೂರ್ನಾಲ್ಕು ತಿಂಗಳುಗಳ ತರುವಾಯ ಬಿಡುಗಡೆ ಮಾಡುತ್ತಾರೆ.

ಲಿಂಗಣ್ಣಕವಿಯು ತನ್ನ ಕೆಳದಿನೃಪವಿಜಯಂನಲ್ಲಿ ಕೆಳದಿ ಸೋಮಶೇಖರನಾಯಕನ ಪತ್ನಿ ಚೆನ್ನಮ್ಮಾಜಿಯು ಜರಿಮಲೆ ರಾಜನ ಪರಾಕ್ರಮವನ್ನು ಕೇಳಿ ಸುಬ್ಬನೀಸ ಹಾಗೂ ಶರಜಾ ಶಂಕರನಾರಾಯಣಯ್ಯನನ್ನು

ಕಳುಹಿಸಿ 'ಮೊಳಕಾಲಬಾಸಿಗ'ನೆಂಬ ಬಿರುದನ್ನು ಧರಿಸಿ ಪರಾಕ್ರಮದಿಂದ ಎದುರಾದ ಜರಿಮಲೆ ರಾಜನನ್ನು ಯುದ್ಧದಲ್ಲಿ ಸೆರೆ ಹಿಡಿದು ಬಾಹುಬಲವನ್ನು ಮೆರೆದಳು. ಅವನ ಮೊಳಕಾಲಬಾಸಿಗ ಬಿರುದನ್ನು ತೆಗೆಸಿ ಅವನನ್ನು ಕಳುಹಿಸಿದಳು. ಇಲ್ಲಿಯ ಜರಿಮಲೆಯ ನಾಯಕ ಈ ಬೊಮ್ಮಣ್ಣನಾಯಕನೇ ಇರಬೇಕೆಂದು ಪ್ರೊ. ಲಕ್ಷ್ಮಣ್ ತೆಲಗಾವಿಯವರು ಅಭಿಪ್ರಾಯ ಪಡುತ್ತಾರೆ.[೯೨]

ಬೊಮ್ಮಣ್ಣನಾಯಕ ರಾಜಕೀಯವಾಗಿ ಹೀನಾಯತೆ ಕಂಡುಕೊಂಡನು ಇದನ್ನು ಅರಿತ ಮರಾಠ ದಂಡನಾಯಕ ಸಿದ್ದಾಜಿ ಘೋರ್ಪಡೆಯು ಕ್ರಿ.ಶ.೧೭೨೮ರಲ್ಲಿ ಸೊಂಡೂರು, ಕುಡತಿನಿಗಳನ್ನು ಪಡೆಯಲು ಮುಂದಾದ. ಅಲ್ಲದೆ ೮ ವರ್ಷಗಳವರೆಗೆ ಚೌಥ್ ನೀಡುವಂತೆ ಒತ್ತಾಯಪಡಿಸಿದರು. ಕ್ರಿ.ಶ.೧೭೪೨ರಲ್ಲಿ ಹರಪನಹಳ್ಳಿಯವರು ಜರಿಮಲೆಯವರ ನಾರಾಯಣದೇವರಕೆರೆ, ಡಣನಾಯಕನಕೆರೆ ಪ್ರದೇಶಗಳನ್ನು ಪಡೆದುಕೊಂಡರು. ಈ ಸಂದರ್ಭದಲ್ಲಿ ಚಿತ್ರದುರ್ಗದವರು ಬೊಮ್ಮಣ್ಣನಾಯಕನಿಗೆ ಸಹಾಯ ಮಾಡಲಿಲ್ಲ.

ಚಿತ್ರದುರ್ಗದ ರಾಜಾ ಹಿರೇಮದಕರಿನಾಯಕರು ಕ್ರಿ.ಶ.೧೭೪೨ರಲ್ಲಿ ಜರಿಮಲೆ ದೊರೆಯ ಎಲ್ಲಾ ಹಕ್ಕುಬಾಧ್ಯತೆಗಳ ಒಡೆತನವನ್ನು ವಶಪಡಿಸಿಕೊಂಡು ಜರಿಮಲೆ ಕೋಟೆಯ ಸುತ್ತಮುತ್ತಲ ಹಲವೊಂದು ಗ್ರಾಮಗಳನ್ನು ಜರಿಮಲೆ ದೊರೆಗೆ ಬಿಟ್ಟರು. ನಂತರ ಹತ್ತು ವರ್ಷಗಳ ತರುವಾಯ ಹದಿನಾಲ್ಕನೇ ದೊರೆ ರಾಜಾ ಇಮ್ಮಡಿ ಕಸ್ತೂರಿರಂಗಪ್ಪನಾಯಕನು ಜರಿಮಲೆ ದೊರೆಯ ವಿಶಿಷ್ಟ ಒಡೆತನವನ್ನೆಲ್ಲಾ ಕಸಿದುಕೊಂಡು ಚಿತ್ರದುರ್ಗದ ಅಧೀನಕ್ಕೆ ಒಳಪಡಿಸಿದರು.[೯೩]

ಬೊಮ್ಮಣ್ಣನಾಯಕನಿಗೆ ಇಬ್ಬರು ಮಕ್ಕಳಿದ್ದರು. ಅವರೇ ಮುಮ್ಮಡಿನಾಯಕ ಮತ್ತು ಇಮ್ಮಡಿ ನಾಯಕರು. ಇಮ್ಮಡಿನಾಯಕ ಜರಿಮಲೆ ಸಂಸ್ಥಾನಕ್ಕೆ ದೊರೆಯಾದ. ಈತ ಚಿತ್ರದುರ್ಗದ ಗಡಿ ಪ್ರದೇಶಗಳಲ್ಲಿ ಉಪಟಳ ಆರಂಭಿಸಿದ. ಸಿಟ್ಟಿಗೆದ್ದ ಚಿತ್ರದುರ್ಗದ ಅರಸ ರಾಜಾವೀರಮದಕರಿನಾಯಕ (ಕ್ರಿ.ಶ.೧೭೫೪-೧೭೭೯)ನು ಜರಿಮಲೆಯ ಮೇಲೆ ದಂಡೆತ್ತಿ ಬರುತ್ತಾನೆ. ಜರಿಮಲೆಯ ರಾಜಪರಿವಾರವನ್ನು ದುರ್ಗದ ಕೋಟೆಗೆ ಕರೆತಂದು ಸೆರೆ ಇಡುತ್ತಾರೆ. ದುರ್ಗದವರು ಅನೇಕ ಷರತ್ತುಗಳನ್ನು ಹಾಕುತ್ತಾರೆ. ಆಗ ಇಮ್ಮಡಿನಾಯಕನ ಮಕ್ಕಳಾದ ಬೊಮ್ಮಣ್ಣನಾಯಕ ಮತ್ತು ಮಲ್ಲಿಕಾರ್ಜುನನಾಯಕರು ಸೆರೆಯಿಂದ ಹೊರಬರುತ್ತಾರೆ.

ಹೈದರಾಲಿ ಚಿತ್ರದುರ್ಗವನ್ನು ಗೆಲ್ಲಬೇಕೆಂದು ಅನೇಕ ಸಾರಿ ಪ್ರಯತ್ನಿಸಿ ವಿಫಲನಾಗಿದ್ದ. ಅನೇಕ ಕುಟಿಲ ತಂತ್ರೋಪಾಯಗಳನ್ನು ಬಳಸಲು ಪ್ರಯತ್ನದಲ್ಲಿದ್ದ. ಚಿತ್ರದುರ್ಗದ ಸಾಮಂತರನ್ನು ಅತೃಪ್ತ ಮನೆತನದವರನ್ನು ಅವರ ಸೈನ್ಯದಲ್ಲಿದ್ದ ಸೇನಾನಿಗಳಿಗೆ ಆಮಿಷವೊಡ್ಡಿ ತನ್ನ ಕಡೆಗೆ ಸೆಳೆಯುವ ಪ್ರಯತ್ನ ಮಾಡುತ್ತಾನೆ. ದಿವಾನ್‌ಪೂರ್ಣಯ್ಯನವರ ಸಲಹೆ ಮೇರೆಗೆ ಜರಿಮಲೆಯವರ ಸಹಾಯವನ್ನು ಪಡೆಯಲು, ಹೈದರಾಲಿ ಅರೊದಿದಿಬ್ಬದಹಳ್ಳಿಯ ಗ್ರಾಮದ ಬಳಿ ಠಾಣ್ಯ ಹಾಕಿದಾಗ ಇವರನ್ನು ಕರೆಕಳುಹಿಸುತ್ತಾನೆ.[೯೪] ಚಿತ್ರದುರ್ಗದವರು ಮಾಡಿದ ದ್ರೋಹವನ್ನು ವಿವರಿಸುತ್ತಾನೆ. ಆಗ ಜರಿಮಲೆಯವರು ಹೈದರಾಲಿಗೆ

ಸಹಾಯ ಮಾಡಲು ಒಪ್ಪಿ ಆತನ ಬಣ ಸೇರುತ್ತಾರೆ. ಕ್ರಿ.ಶ.೧೭೭೭ರಲ್ಲಿ ಹೈದರಾಲಿಯು ಚಿತ್ರದುರ್ಗದ ಮೇಲೆ ಮೂರನೇ ಸಲ ಧಾಳಿ ಮಾಡಿದಾಗ ಆಗ ಜರಿಮಲೆಯ ಪಾಳೆಯಗಾರನು ದೊರೆಯಂತೆ ತನ್ನನ್ನು ಕಾಣಬೇಕೆಂದು ಕೇಳಿಕೊಂಡನು. ಹೈದರಾಲಿಯು ಈ ಸಮಯದಲ್ಲಿ ಪ್ರತಿ ಮಾತನ್ನಾಡದೆ ಅವನ ಬೇಡಿಕೆಯನ್ನು ಈಡೇರಿಸುತ್ತಾನೆ. ಹೈದರಾಲಿಯ ಈ ಸಹಾಯದಿಂದ ಜರಿಮಲೆ ಪಾಳೆಯಗಾರರು ಮತ್ತೆ ತಮ್ಮ ಪೂರ್ವಸ್ಥಿತಿಗೆ ಬಂದರು.[೯೫]

ಕ್ರಿ.ಶ.೧೭೭೯ರಲ್ಲಿ ಹೈದರಾಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡಾಗ ಜರಿಮಲೆ ನಾಯಕರಿಗೆ ಮದಕರಿ ನಾಯಕನ ಸೋಲು ಪೆಟ್ಟು ನೀಡುತ್ತದೆ. ಆಗ ಹೈದರಾಲಿಗೆ ಮೊರೆ ಹೊಕ್ಕು ತಮ್ಮ ರಾಜ್ಯವನ್ನು ಹಿಂದಿರುಗಿಸಲು ಕೋರುತ್ತಾರೆ. ಆಗ ಹೈದರಾಲಿ ಜರಿಮಲೆ ನಾಯಕರಿಗೆ ಪ್ರೋತ್ಸಾಹ ನೀಡಿ, ಜರಿಮಲೆಯ ಅಧಿಕಾರವನ್ನು ನೀಡಿ, ಅವರು ವರ್ಷಕ್ಕೆ ೩೦೦೦ ಪಗೋಡ ಹಣವನ್ನು ನೀಡುವಂತೆ ತಿಳಿಸುತ್ತಾನೆ. ಆಗ ಬೊಮ್ಮಣ್ಣನಾಯಕ ಪುನಃ ಜರಿಮಲೆಯಿಂದ ಅಧಿಕಾರ ಪ್ರಾರಂಭಿಸುತ್ತಾನೆ.

ಹೈದರಾಲಿಯ ಆಪ್ತಮಿತ್ರನಾದ ಜರಿಮಲೆ ಬೊಮ್ಮಣ್ಣನಾಯಕ ಕ್ರಿ.ಶ.೧೭೮೦ರಲ್ಲಿ ಹೈದರಾಲಿ ಪಾಲ್ಗಾಟಿನ ಮೇಲೆ ದಾಳಿ ಮಾಡಿದಾಗ ೧೦೦೦ ಕಾಲಾಳು, ೧೦೦ ಅಶ್ವಗಳೊಂದಿಗೆ ಹೈದರಾಲಿಯನ್ನು ಬೆಂಬಲಿಸಿದ್ದ. ಆಗ ಈತನ ಸಾಹಸ ಕಂಡು ಕರುಬಿದ ಹೈದರ್ ಮುಂದೊಂದು ದಿನ ತನಗೆ ಇವರು ಎದರು ಬರುವರೆಂದು ಜರಿಮಲೆಯ ಏಳುಮಂದಿ ನಾಯಕರನ್ನು ಸೆರೆಮನೆಯಲ್ಲಿಡುತ್ತಾನೆ.[೯೬]

ಕ್ರಿ.ಶ.೧೭೮೭ರಲ್ಲಿ ಟಿಪ್ಪು ಜರಿಮಲೆಯನ್ನು ವಶಪಡಿಸಿಕೊಂಡನು. ಮುಖ್ಯಸ್ಥರನ್ನು ಶ್ರೀರಂಗಪಟ್ಟಣಕ್ಕೆ ಕೊಂಡೊಯ್ದನು. ಮುಸ್ಲಿಂ ಕುಲಕ್ಕೆ ಇವನನ್ನು ಮತಾಂತರಗೊಳಿಸುವನೆಂಬ ದಟ್ಟವಾದ ಸುದ್ದಿಯು ಹಬ್ಬಿತು. ಅರಸನನ್ನು ಇಸ್ಲಾಂಧರ್ಮಕ್ಕೆ ಸೇರಲು ಬಹಳಷ್ಟು ಒತ್ತಾಯಿಸಲಾಯಿತು. ಕೊಲೆ ಬೆದರಿಕೆಯನ್ನು ಹಾಕಲಾಯಿತು. ಆಗ ಜರಿಮಲೆ ನಾಯಕ ಸುರಪುರಕ್ಕೆ ಓಡಿ ಹೋಗಿ ಅಲ್ಲಿಯ ಅರಸರ ಆಶ್ರಯ ಪಡೆಯುತ್ತಾನೆ.

ಎರಡನೆಯ ಮೈಸೂರು ಯುದ್ಧದಲ್ಲಿ ಜರಿಮಲೆ ನಾಯಕ ಮರಾಠರಿಗೆ ೩೦,೦೦೦ ರೂ.ಗಳನ್ನು ಕಪ್ಪವಾಗಿ ನೀಡಿ ತನ್ನ ರಾಜ್ಯವನ್ನು ಮರಳಿ ಪಡೆದುಕೊಂಡನು. ಟಿಪ್ಪುವಿನ ಸಂಗಡ ಕ್ರಿ.ಶ.೧೭೯೨ರ ಶಾಂತಿ ಒಪ್ಪಂದದ ಮೇರೆಗೆ ಜರಿಮಲೆ ರಾಜನು ರಾಜ್ಯದಿಂದ ಹೊರಹಾಕಲ್ಪಟ್ಟನು. ಕ್ರಿ.ಶ.೧೭೯೯ರ ಒಪ್ಪಂದದ ಮೇರೆ ಜರಿಮಲೆಯು ಹೈದ್ರಾಬಾದ್ ನಿಜಾಮನ ವಶವಾಯಿತು. ಅಲ್ಲದೆ ನಿಜಾಮ ಜೆನ್ನೋಡು ಖಾನನನ್ನು ಅಧಿಕಾರಿಯಾಗಿ ನೇಮಿಸುತ್ತಾನೆ. ಜರಿಮಲೆ ರಾಜ ಹೈದ್ರಾಬಾದ್ ನಿಜಾಮನಿಗೆ ಕಪ್ಪವನ್ನು ಕೊಡುವುದಾಗಿಯೂ ತಮಗೆ ತಮ್ಮ ರಾಜ್ಯವನ್ನು ಪುನಃ ನೀಡುವಂತೆ ಕೇಳಿಕೊಂಡರು. ಆಗ ಕ್ರಿ.ಶ.೧೮೦೦ರಲ್ಲಿ ಒಂದು ವರ್ಷಕ್ಕೆ ೨೦೦೦ ರೂಪಾಯಿಗಳನ್ನು, ೧೮೦೧ಕ್ಕೆ ೩೦೦೦ರೂ.ಗಳನ್ನು

ಮುಂದಿನ ವರ್ಷಗಳಲ್ಲಿ ಅದೇ ರೀತಿ ಕೊಡಬೇಕೆಂಬ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಆಗ ಜರಿಮಲೆಯನ್ನು ನಾಯಕರಿಗೆ ಬಿಡಲಾಯಿತು.

ಈ ಹಿಂದೆ ಜರಿಮಲೆಯ ಅಧಿಕಾರಿಯಾಗಿದ್ದ ಖಾನ್‌ನ ಸ್ಥಳದಲ್ಲಿ ಮೀರ್‌ಆಲನ್‌ಬಹದ್ದೂರ್ ನೇಮಕವಾದನು. ಅಲ್ಲದೆ, ಪೇಷ್ಕರ್ ನಾಗಣ್ಣರಾವ್ ಎಂಬ ಅಧಿಕಾರಿಯನ್ನು ಖಂಡಣಿ ಹಣ ವಸೂಲಿಗೆ ಕಳುಹಿಸುತ್ತಾನೆ. ಇವನು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚು ೩೦೦೦ ರೂ.ಗಳನ್ನು ಪಡೆಯುತ್ತಾನೆ. ಆಗ ನಾಯಕನಿಗೆ ಸಮಸ್ಯೆಯಾಗುತ್ತದೆ.

ಟಿಪ್ಪುಸುಲ್ತಾನನು ಮರಣ ಹೊಂದಿದ ಮೇಲೆ ಬಳ್ಳಾರಿ, ಅನಂತಪುರ, ಕರ್ನೂಲ್, ಕಡಪಗಳು ಹೈದ್ರಾಬಾದ್ ನಿಜಾಮನ ಅಧೀನದಲ್ಲಿ ಬಂದವು. ನಿಜಾಮನು ಇಂಗ್ಲಿಷರ ಸಹಾಯಕ ಸೈನ್ಯಪದ್ಧತಿಗೆ ಬದ್ಧನಾದನು. ಆಗ ಆ ಪ್ರದೇಶಗಳನ್ನು ಅವರಿಗೆ ಬಿಟ್ಟುಕೊಡಬೇಕಾಯಿತು. ಆಗ ಕ್ರಿ.ಶ.೧೮೦೦ರಲ್ಲಿ ಸರ್ ಥಾಮಸ್ ಮನ್ರೋ ಈ ಜಿಲ್ಲೆಗಳಿಗೆ ಕಲೆಕ್ಟರ್ ಆಗಿ ನೇಮಕಗೊಂಡನು. ನಂತರ ಮನ್ರೋ ಪ್ರಾಂತ್ಯಗಳ ಉಸ್ತುವಾರಿಗಾಗಿ ಶ್ಯಾಮರಾವ್‌ನನ್ನು ಅಮಲ್ದಾರನನ್ನಾಗಿ ನೇಮಕ ಮಾಡಿದನು. ಲೆಕ್ಕಪತ್ರಗಳನ್ನು ಒಪ್ಪಿಸಲು ಅಮೀಲ್‌ನ ಜೊತೆಯಲ್ಲಿ ಪತ್ರವೊಂದನ್ನು ಜರಿಮಲೆ ರಾಜನಿಗೆ ಕಳುಹಿಸಲಾಯಿತು. ಜರಿಮಲೆ ಅರಸನಿಗೆ ಲೆಕ್ಕಪತ್ರ ಕೊಡಲಾಗಲಿಲ್ಲ. ಆಗ ಜರಿಮಲೆಯನ್ನು ಕಂಪನಿಗೆ ಹಸ್ತಾಂತರಿಸುವುದಾಗಿಯೂ ಹಾಗೂ ತಮಗೆ ವಿಶ್ರಾಂತಿ ವೇತನವನ್ನು ನೀಡಬೇಕೆಂಬ ಕೋರಿಕೆಯನ್ನು ಸಲ್ಲಿಸಿದನು.

ಆಗ ಜರಿಮಲೆ ಕೂಡ್ಲಿಗಿಗೆ ಸೇರಿತು. ಅಮಲ್ದಾರ ವೆಂಕಟರಾವ್ ಆಗಿದ್ದರು. ಅವರು ಪುನಃ ಜರಿಮಲೆ ನಾಯಕರಿಗೆ ಸಂಸ್ಥಾನದ ಲೆಕ್ಕಪತ್ರವನ್ನು ಪಟೇಲ, ಶ್ಯಾನುಭೋಗ, ನಾಡಗೌಡರಿಗೆ, ಧರ್ಮಾವರಂಗೆ ಬಂದು ಒಪ್ಪಿಸುವಂತೆ ಆದೇಶ ಕಳುಹಿಸಿದರು. ಆಗ ಜರಿಮಲೆ ಅರಸ ತನ್ನ ಅಧಿಕಾರಿಗಳೊಂದಿಗೆ ಲೆಕ್ಕಪತ್ರಗಳನ್ನು ಕಂಪನಿಗೆ ಒಪ್ಪಿಸಿದ. ಲೆಕ್ಕಪತ್ರಗಳನ್ನು ಒಪ್ಪಿಸಿದರೂ ನಾಯಕನಿಗೆ ವಿಶ್ರಾಂತಿ ವೇತನ ನಿಗದಿಯಾಗಲಿಲ್ಲ.

ಕ್ರಿ.ಶ.೧೮೦೦ರಲ್ಲಿ ಜರಿಮಲೆ ಈಸ್ಟ್ ಇಂಡಿಯಾ ಕಂಪನಿಗೆ ಸೇರಿತಲ್ಲದೆ, ಕ್ರಿ.ಶ.೧೮೦೧ರಲ್ಲಿ ಜರಿಮಲೆ ಮನೆತನದವರಿಗೆ ಮಾಸಾಶನ ಮಂಜೂರು ಮಾಡಲಾಯಿತು.[೯೭] ಇದು ಈಗಿನ ವಂಶಸ್ಥರಾದ ಪಂಪಾಪತಿನಾಯಕರ ತಂದೆಯವರ ಕಾಲದವರೆಗೆ ೪೨ ರೂ. ೧೨ ಆಣೆ ಬರುತ್ತಿತ್ತು, ನಂತರ ೨೫೦ ರೂ.ಬರುತ್ತಿತ್ತು. ಆನಂತರ ರದ್ದಾಗಿದೆ. ಹೀಗೆ ಜರಿಮಲೆ ನಾಯಕರು ತಮ್ಮ ಸ್ವಸಾಮರ್ಥ್ಯದಿಂದ ಅಧಿಕಾರದ ಉಳಿವಿಗಾಗಿ ಪ್ರಯತ್ನಿಸಿದರು. ರಾಜ್ಯ ವಿಸ್ತರಿಸಲು ಹವಣಿಸಿದರೂ ಆ ಸಂದರ್ಭದಲ್ಲಿ ಚಿತ್ರದುರ್ಗದಂತಹ ಪ್ರಬಲ ನಾಯಕ ಅರಸುಮನೆತನ ಒಂದೆಡೆಯಾದರೆ, ಇನ್ನೊಂದೆಡೆ ಹೈದರಾಲಿ, ಟಿಪ್ಪು, ಮರಾಠರು, ಬ್ರಿಟಿಷರ ಉಪಟಳವೂ ಹೆಚ್ಚಾಗಿತ್ತು. ಆಗ ತಮಗೆ ಸಹಾಯಕರಾದವರಿಗೆ ಸೈನ್ಯ

ಸಹಾಯವನ್ನು ಮಾಡುತ್ತಾ ಚಿತ್ರದುರ್ಗ, ಗುಡೇಕೋಟೆ, ನಾಯಕನಹಟ್ಟಿ, ಹರಪನಹಳ್ಳಿ ಮುಂತಾದ ನಾಯಕ ಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದುವುದರ ಮೂಲಕ ಬಾಂಧವ್ಯವನ್ನು ಬೆಸೆಯಲು ಪ್ರಯತ್ನಿಸಿದರು.

ಜರಿಮಲೆಯ ವಂಶಸ್ಥರು ಇಂದು ಜರಿಮಲೆಯಲ್ಲಿ ವಾಸವಾಗಿದ್ದಾರೆ. ಕರ್ನಾಟಕದ ಉಳಿದ ನಾಯಕ ಅರಸುಮನೆತನಗಳಲ್ಲಿಯ ಆರ್ಥಿಕ ಸ್ಥಿತಿಗಿಂತ ಅತೀ ಕೆಳಮಟ್ಟದ ಸ್ಥಿತಿಯನ್ನು ತಲುಪಿದ ಮನೆತನ ಇದಾಗಿದೆ. ಹಾಗೂ ತಾವು ದೊರೆಗಳ ವಂಶಸ್ಥರು, ರಾಜಕೀಯಕ್ಕೆ ಪ್ರವೇಶಿಸಬಾರದೆಂಬ ಮನೋಭಾವನೆ ಇವರಲ್ಲಿ ಇನ್ನೂ ಮೂಡಿರುವುದರಿಂದ ಜನಪ್ರತಿನಿಧಿ ವ್ಯವಸ್ಥೆಗೆ ತೊಡಗಿಕೊಳ್ಳುವಲ್ಲಿ ನಿರಾಸಕ್ತಿ ಹೊಂದಿದ್ದಾರೆ. ಆದರೂ ಇವರಿಗೆ ರಾಜಕೀಯವಾಗಿ, ಸಾಮಾಜಿಕವಾಗಿ ಇನ್ನೂ ಗೌರವವಿದೆ. ಕೆಲವು ರಾಜಕಾರಣಿಗಳು ಓಟಿಗಾಗಿ ಇವರನ್ನು ಆಶ್ರಯಿಸುವುದುಂಟು. ಸ್ಥಳೀಯವಾಗಿ ಇಲ್ಲಿಯ ಜನತೆ ಇವರು ಬೇಡ ಜನಾಂಗದಲ್ಲಿ ದೊರೆಗಳು ಎಂಬ ಕಾರಣಕ್ಕಾಗಿ ಮೊದಲನೆಯ ಸ್ಥಾನವನ್ನು ನೀಡುತ್ತಾ ಬಂದಿದ್ದಾರೆ.

## ೨.೧೦ ನಾಯಕನಹಟ್ಟಿ ನಾಯಕ ಅರಸರು

'ನಾಯಕನಹಟ್ಟಿ' ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ವ್ಯಾಪ್ತಿಗೊಳಪಟ್ಟಿದೆ. ಹೋಬಳಿ ಕೇಂದ್ರವಾದ ನಾಯಕನಹಟ್ಟಿ ಚಳ್ಳಕೆರೆಯಿಂದ ವಾಯುವ್ಯ ದಿಕ್ಕಿಗೆ ೨೨ ಕಿ.ಮೀ.ಗಳ ಅಂತರದಲ್ಲಿದೆ. ''ನಾಯಕನಹಟ್ಟಿ'ಯ ಪಾಳೆಯಗಾರರ ಚರಿತ್ರೆ ರಾಜಕೀಯ ಮಹತ್ವದ್ದಲ್ಲವಾದರೂ, ಬೇಡಜನಾಂಗದ ಚರಿತ್ರೆಯ ದೃಷ್ಟಿಯಿಂದ ಸಾಕಷ್ಟು ಮಹತ್ವಪೂರ್ಣವಾಗಿದೆ''[೮] ಎಂದು ಇತಿಹಾಸ ಸಂಶೋಧಕ ಎಂ.ವಿ.ಚಿತ್ರಲಿಂಗಯ್ಯ ಅವರು ಅಭಿಪ್ರಾಯಪಟ್ಟಿದ್ದಾರೆ. ಹಟ್ಟಿ ಪಾಳೆಯಗಾರರ ವಂಶಾವಳಿಯ ಕತೆ ಜನಪದ ಕತೆಯಂತೆ ಪ್ರಾರಂಭವಾಗುತ್ತದೆ. ನಾಯಕನಹಟ್ಟಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಒಂದು ಪುಟ್ಟ ಸಂಸ್ಥಾನವಾಗಿತ್ತು. ಇಲ್ಲಿ ಆಡಳಿತ ನಡೆಸಿದ ನಾಯಕರು ಹಟ್ಟಿನಾಯಕರೆಂದು ಪ್ರಸಿದ್ಧಿ ಪಡೆದಿದ್ದಾರೆ.

ಹಟ್ಟಿ ಪಾಳೆಯಗಾರರ ಮೂಲಪುರುಷ ಪಶುಪಾಲನೆಯಲ್ಲಿ ಪರಮಾರ್ಥವನ್ನು ಕಾಣುತ್ತ ಬಂದ ಕಾಟೇ(ಕೋಟೆ) ಮಲ್ಲಪ್ಪನಾಯಕನೊಂದಿಗೆ ಪ್ರಾರಂಭವಾಗುತ್ತದೆ. ಕಾಟೇ ಮಲ್ಲಪ್ಪನಾಯಕ ತೆಲುಗು ಮೂಲದ ಬೇಡ ಜಾತಿಗೆ ಸೇರಿದವನು. ಪ್ರಾರಂಭದಲ್ಲಿ ಶ್ರೀಶೈಲ ಪರ್ವತದ ಕಾಡಿನಲ್ಲಿ ಪಶುಪಾಲನೆ ಮಾಡಿಕೊಂಡಿದ್ದನು. ಅಲ್ಲಿ ತಲೆದೋರಿದ ಭೀಕರ ಬರಗಾಲದಿಂದ ಹೆದರಿ ತನ್ನ ಹನ್ನೆರಡು ಪೆಟ್ಟಿಗೆ ದೇವರು, ದನಕರು, ಐದುನೂರು ಜನ ಮ್ಯಾಸನಾಯಕರು ಸಹಿತ ತನ್ನ ಆರು ಜನ ತಮ್ಮಂದಿರೊಂದಿಗೆ ದನಕರುಗಳಿಗೆ ಹುಲ್ಲು-ನೀರು ಹುಡುಕುತ್ತಾ ವಿಜಯನಗರದ ಕಡೆಗೆ ವಲಸೆ ಬರುತ್ತಾನೆ.[೯೯]

ಕಾಟೇ ಮಲ್ಲಪ್ಪನಾಯಕ ವಲಸೆ ಬಂದ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಎಂ.ಎನ್. ಪ್ರಭಾಕರ್ ಅವರು ಹದಿನಾಲ್ಕನೆಯ ಶತಮಾನದ ಮಧ್ಯಭಾಗವೆಂದರೆ, ಎಂ.ವಿ.ಚಿತ್ರಲಿಂಗಯ್ಯನವರು ಈಗಾಗಲೇ

ದಾಖಲೆಯಲ್ಲಿ ಉಲ್ಲೇಖಿಸಿದ ಕಾಲದೋಷವನ್ನು ಎತ್ತಿ ತೋರಿಸುತ್ತ ಕ್ರಿ.ಶ.ಸು. ೧೫೨೯ ಇರಬೇಕೆಂದು ಹೇಳುತ್ತಾರೆ. ಆದರೆ ಬಹಳ ಜನ ವಿದ್ವಾಂಸರು ಈ ಕಾಲವನ್ನು ಒಪ್ಪದೆ, ಇದು ಹದಿನಾರನೆಯ ಶತಮಾನದ ಕೊನೆಯ ಭಾಗ ಇರಬೇಕೆಂಬ ತರ್ಕವೇ ಸರ್ವಸಮ್ಮತ ಮತ್ತು ಸತ್ಯಕ್ಕೆ ಸಮೀಪವಿದೆ ಎಂದು ವಾದಿಸುತ್ತಿದ್ದಾರೆ. ನಾಯಕನಹಟ್ಟಿ ಪಾಳೇಗಾರರ ಬಖೈರು ಇವರ ಇತಿಹಾಸ ತಿಳಿಸುವ ಪ್ರಮುಖ ದಾಖಲೆ. ಕ್ರಿ.ಶ. ೧೬೨೦ ರಿಂದ ೧೬೮೫ರವರೆಗಿನ ಶಾಸನಗಳು ಈ ಪಾಳೇಗಾರರಿಗೆ ಸಂಬಂಧಿಸಿವೆ.[೨೦೦]

ಕಾಟೇ ಮಲ್ಲಪ್ಪನಾಯಕ ತನ್ನ ಸಮುದಾಯದೊಡನೆ ವಿಜಯನಗರ ಪ್ರದೇಶಕ್ಕೆ ಬಂದು ನೆಲೆಸಿದ. ಆ ಸಂದರ್ಭದಲ್ಲಿ ವಿಜಯನಗರದ ಅರಸರ ಜೊತೆಗೆ ಸಂಬಂಧಗಳು ಅಷ್ಟು ಚೆನ್ನಾಗಿರಲಿಲ್ಲವೆಂದು ತೋರುತ್ತದೆ. ವಿಜಯನಗರದ ಅರಸನು ಮಲ್ಲಪ್ಪನಾಯಕನನ್ನು ಬಂಧಿಸಲು ಒಂದೆರಡು ಸಲ ಪ್ರಯತ್ನಿಸಿ ವಿಫಲನಾಗುತ್ತಾನೆ. ಆದರೆ ಈ ಸಂದರ್ಭದಲ್ಲಿ ಯಾವ ದೊರೆ ವಿಜಯನಗರವನ್ನು ಪಾಲಿಸುತ್ತಿದ್ದನೆಂದು ಸ್ಪಷ್ಟವಾಗುವುದಿಲ್ಲವೆಂಬ ಅಂಶವನ್ನು ತಿಳಿಸಿದರೆ, ಸಂಶೋಧಕ ಎಂ.ವಿ.ಚಿತ್ರಲಿಂಗಯ್ಯ ಅವರ ಪ್ರಕಾರ ಆ ಕಾಲದಲ್ಲಿ ವಿಜಯನಗರದಲ್ಲಿ ಕೃಷ್ಣದೇವರಾಯ ರುಗ್ಣಶಯ್ಯೆಯಲ್ಲಿ ಬಿದ್ದುಕೊಂಡು ತನ್ನ ಕೊನೆಯ ನಿಮಿಷಗಳನ್ನೆಣಿಸುತ್ತಿದ್ದನು. ಅಚ್ಯುತರಾಯನಿಗೆ ಆಗತಾನೆ ಪಟ್ಟವಾದ ಹೊಸದು. ಇದೇ ಕ್ರಿ.ಶ. ೧೫೨೯ರ ಜನವರಿಯಲ್ಲಿ ಮತ್ತಿ ತಿಮ್ಮಣ್ಣನಾಯಕನು ವಿಜಯನಗರದ ಸೆರೆಮನೆಯಲ್ಲಿ ತೀರಿಕೊಂಡನು[೨೦೧] ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಇನ್ನೊಂದು ಹೇಳಿಕೆ ಪ್ರಕಾರ ದೊರೆಗಳ ಅನುಮತಿ ಇಲ್ಲದೆ ಹಟ್ಟಿ ಹಾಕಿಕೊಂಡಿದ್ದ ಮಲ್ಲಪ್ಪನಾಯಕನನ್ನು ವಿಜಯನಗರದವರು ಕೆಣಕುವ ಪ್ರಸಂಗವು ಜನಪದ ಕತೆಯಂತೆ ನಿರೂಪಿತವಾಗಿದೆ. ಮಲ್ಲಪ್ಪನಾಯಕನನ್ನು ಸೆರೆಹಿಡಿಯಲು ಬಂದ ವಿಜಯನಗರದ ಸೈನ್ಯ, ಕಂಪಳದ ದನಗಳ ಆಕ್ರಮಣದಿಂದ ಕಂಗಾಲಾಗಿ ಓಡಿಹೋಗುತ್ತದೆ. ತಮ್ಮ ಮೋಹಪಾಶದಿಂದ ಬಂಧಿಸಲು ಬಂದ ೩೨ ಮಂದಿ ಸೂಳೆಯರು ವಿಫಲಗೊಳ್ಳುತ್ತಾರೆ ಎಂಬ ಮಾತಿದೆ.

ಅಚ್ಯುತರಾಯ ಮತ್ತು ರಾಣಿ ವರದಾಂಬೆಯು, ಮಲ್ಲಪ್ಪನಾಯಕನ ಸ್ಥೈರ್ಯ ಮೆಚ್ಚಿ, ರಾಜಧಾನಿಗೆ ಗೋವುಗಳ ಸಮೇತ ಆತನನ್ನು ಕರೆಯಿಸಿ ಷೋಡಶೋಪಚಾರ ಸಹಿತ ರಾಜ-ರಾಣಿಯರಿಬ್ಬರೂ ಗೋವುಗಳ ಪೂಜೆ ನೆರವೇರಿಸಿ, "ಕುಂದುರ್ಪೆಗುಡ್ಡದ ಬಳಿ ನೆಲೆಸಲು ಮತ್ತು ಬೇಡಕುಲದ ಅವನ ಮುಖಂಡತ್ವವನ್ನು ಬದಲಾಯಿಸದೆ ೫೪ ದೇಶಗಳಲ್ಲಿರುವ ವಾಲ್ಮೀಕಿ ವಂಶಸ್ಥ ಜನರುಗಳ ಮುಖಂಡತ್ವ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಹೋಗುವುದಕ್ಕೆ ಅಪ್ಪಣೆ ಕೊಟ್ಟನು. ಅಪ್ಪಣೆ ಕೊಟ್ಟವನು ಅಚ್ಯುತರಾಯನೆಂದು ಹೇಳಲಾಗಿದೆ. ಅಲ್ಲದೆ ಕುಂದುರ್ಪೆದುರ್ಗದ ಆಡಳಿತವನ್ನು ಇವನಿಗೆ ವಹಿಸಿಕೊಡುವುದರ ಮೂಲಕ 'ಪಾಳೆಯಗಾರ ಪದವಿ' ನೀಡಿದನೆಂದು ತಿಳಿದುಬರುತ್ತದೆ."[೨೦೨]

ದೊರೆ ಅಚ್ಯುತರಾಯನ ಅನುಮತಿ ಪಡೆದು ಕಾಟೇಮಲ್ಲಪ್ಪನಾಯಕ ತನ್ನ ಕಂಪಳ ಮತ್ತು ಪೆಟ್ಟಿಗೆ ದೇವರುಗಳನ್ನು ತೆಗೆದುಕೊಂಡು ವಿಜಯನಗರದ ದಕ್ಷಿಣ ಭಾಗಕ್ಕೆ ಬಂದು ಕುಂದುರ್ಪೆಗುಡ್ಡದ ಸಮೀಪ ದಲ್ಲಿ ಹಟ್ಟಿ ಹಾಕಿ ಕ್ರಿ.ಶ.೧೫೩೦ರ ಸುಮಾರಿಗೆ ನೆಲೆಸಿದನು.

ವಿಜಯನಗರದ ಅರಸರಿಂದ ಮಾನ-ಸನ್ಮಾನ ಹೊಂದಿದ ಕಾಟೇಮಲ್ಲಪ್ಪನಾಯಕ ಕುಂದಿರ್ಪೆಗುಡ್ಡದ ಬಳಿ ಹಟ್ಟಿ ಹಾಕಿಕೊಂಡು ನೆಲೆಸಿದ್ದರೆ, ಜೊತೆಗಿದ್ದ "ಇವನ ತಮ್ಮಂದಿರು ಕುಂದುರ್ಪೆ ಸೇರಿದಂತೆ ಸುತ್ತಲ ಸೀಮೆಗಳಾದ ರತ್ನಗಿರಿ, ಮಿಡಿಗೇಶಿ, ಹೊಸಕೋಟೆ, ನಿಡಗಲ್ಲು ಮತ್ತು ಶಂಕರಕಲ್ಲುಗಳಲ್ಲಿ ಚದುರಿದಂತೆ ನೆಲೆಸುತ್ತಾರೆ.[೨೦೩] ಕ್ರಮೇಣ ಈ ನೆಲೆಗಳೇ ಪಾಳೆಯಪಟ್ಟುಗಳಾಗಿ ವಿಕಾಸಗೊಂಡಂತೆ ಕಾಣುತ್ತವೆ. ಕಾಲಕ್ರಮೇಣ ಮಲ್ಲಪ್ಪನಾಯಕ ಹಟ್ಟಿಯನ್ನು ಕುಂದುರ್ಪೆಯಿಂದ ಗೋಶಿಕೆರೆಗೆ ಸ್ಥಳಾಂತರಿಸುತ್ತಾನೆ.

ಮಲ್ಲಪ್ಪನಾಯಕನಿಗೆ ಮೂವರು ಗಂಡುಮಕ್ಕಳು ಜನಿಸುತ್ತಾರೆ. ಹಿರಿಯವನು ಸೂರದೇವಿನ ಪಾಪನಾಯ್ಕ, ಮಧ್ಯದವನು ತೊರೆಲ ಮಲ್ಲನಾಯ್ಕ ಮತ್ತು ಕೊನೆಯವನು ಗಾದರಿಪಾಲನಾಯ್ಕ. ಈತನು ಗೋಶೀಕೆರೆಯ ಬಳಿ ಪಶುಪಾಲನೆ ಮಾಡುತ್ತಿರುವಾಗ ತನ್ನ ಜೀವರಾಶಿಯನ್ನು ಮುಟ್ಟದಿರುವಂತೆ ಹುಲಿಯೊಂದಿಗೆ ಒಪ್ಪಂದ ಮಾಡಿಕೊಂಡಿರುತ್ತಾನೆ. ಇವನ ದನದ ದೊಡ್ಡಿಯಲ್ಲಿ ಹಸುಕರುಗಳೊಂದಿಗೆ ಹುಲಿಮರಿಗಳೂ ವಾಸವಾಗಿರುತ್ತವೆ. ಹುಲಿಯೊಂದಿಗೆ ನಡೆದ ಒಪ್ಪಂದದ ಬಗ್ಗೆ ಏನೂ ಗೊತ್ತಿಲ್ಲದ ಇವನ ಬಂಧುಗಳು ದೊಡ್ಡಿಯಲ್ಲಿರುವ ಹುಲಿಯ ಮರಿಗಳನ್ನು ಕೊಂದುಬಿಡುತ್ತಾರೆ. ಇದನ್ನು ತಿಳಿದ ಪಾಲನಾಯಕ, ಸಿಟ್ಟಿಗೆದ್ದ ಹುಲಿ ತನ್ನನ್ನು ಬಿಡುವುದಿಲ್ಲವೆಂದು ಭಾವಿಸಿ, ತನ್ನ ಜನ-ಜಾನವಾರು, ಪತ್ನಿ ಕೆಂಚವ್ವ, ಕಾಮವ್ವರೊಂದಿಗೆ ನನ್ನಿವಾಳದ ಕಟ್ಟೆಮನೆಯ ಮೂಲಕ ಗಾದರಿಗುಡ್ಡಕ್ಕೆ ಹೋಗುತ್ತಾನೆ. ಅಲ್ಲಿ ಹುಲಿ ಮತ್ತು ಪಾಲನಾಯಕನ ನಡುವೆ ಭೀಕರ ಯುದ್ಧ ನಡೆದು ಗಾದರಿಪಾಲನಾಯಕ ಹೋರಾಡುತ್ತ ಮಡಿಯುತ್ತಾನೆ. ಈತನನ್ನು ಮ್ಯಾಸಬೇಡ ಜನಾಂಗದ ಪ್ರಥಮ ಸಾಂಸ್ಕೃತಿಕ ವೀರನೆಂದು ಗುರುತಿಸಲಾಗು ತ್ತದೆ.[೨೦೪]

ಮಧ್ಯದ ತೊಕ್ರಿಲ ಮಲ್ಲನಾಯ್ಕನ ಮಗ ಜಗಲೂರ ಪಾಪನಾಯಕ. ಈತನನ್ನೂ ಮ್ಯಾಸಬೇಡ ಜನಾಂಗದ ಮತ್ತೊಬ್ಬ ಸಾಂಸ್ಕೃತಿಕ ವೀರನೆಂದು ಭಾವಿಸಲಾಗಿದೆ. ಈತನ ಸಾಂಸ್ಕೃತಿಕ ನೆಲೆ ಚಳ್ಳಕೆರೆ ಪಟ್ಟಣದ ಹೊರವಲಯದಲ್ಲಿದೆ. ಈ ಪರಿಸರದಲ್ಲೇ ಪಶುಪಾಲನೆ ಮಾಡಿಕೊಂಡಿದ್ದ ಪಾಪನಾಯಕ ಮಂಗಾರದೊಣ್ಣೆ ಚಿಗುರಿಸುವ ಪವಾಡ ಮಾಡಿದ್ದರಿಂದ, ಈತ ಇಲ್ಲಿ ಹುತ್ತದ ರೂಪದಲ್ಲಿ ಆರಾಧನೆಗೊಳ್ಳುತ್ತಿದ್ದಾನೆ. ಜಗಲೂರಿನಲ್ಲಿ ಈತನ ಸಮಾಧಿ ಇರುವುದರಿಂದ ಈತನಿಗೆ 'ಜಗಲೂರಜ್ಜ' ಎಂಬ ಅನ್ವರ್ಥನಾಮವೂ ಚಾಲ್ತಿಯಲ್ಲಿದೆ. ಈತನೂ ಶರಣನಾಗಿದ್ದುದರಿಂದ ಸಂತಾನವಿರಲಿಲ್ಲ. ಇಬ್ಬರೂ ಸಹೋದರರರು ಸಾಂಸ್ಕೃತಿಕ ವೀರರಾಗಿದ್ದು ನಾಯಕನಹಟ್ಟಿ ಪಾಳೆಯಗಾರರ ವಂಶಕ್ಕೆ ಸೇರಿದವರೆಂಬುದು ವಿಶೇಷ ಸಂಗತಿಯಾಗಿದೆ.

ಹಿರಿಯ ಮಗ ಸೂರೆದೇವು ಪಾಪನಾಯಕನಿಗೂ ನಿಡುಗಲ್ಲಿನಲ್ಲಿ ನೆಲೆಸಿದ್ದ ತನ್ನ ಚಿಕ್ಕಪ್ಪನಾಯಕನ ಮಗ ಒಂದನೆಯ ಹೊಟ್ಟಳನಾಯಕನಿಗೂ ಜಿದ್ದುಬಿದ್ದು, ಆ ಜಿದ್ದಿನಲ್ಲಿ ಪಾಪನಾಯಕ ಗೆಲುವು ಪಡೆಯುತ್ತಾನೆ. ಸೋತ ಹೊಟ್ಟಳನಾಯಕ ತನ್ನ ಹಕ್ಕು ಬಿಟ್ಟುಕೊಟ್ಟು ನಿಡುಗಲ್ಲಿಗೆ ಹೋಗುತ್ತಾನೆ. ನಂತರ ೧೨ ಪೆಟ್ಟಿಗೆ ದೇವರುಗಳು, ಇಂದಿನ ಮೊಳಕಾಲ್ಮೂರು ತಾಲೂಕಿನಲ್ಲಿರುವ 'ಚಿಕ್ಕಕುಮ್ಮಿ'ಯಲ್ಲಿ ನೆಲೆಸಿದಂತೆ ತಿಳಿದುಬರುತ್ತದೆ. ಇದನ್ನು ಕಂಪಳದೇವರಹಟ್ಟಿ ಎಂದು ಕರೆಯುವುದು ವಾಡಿಕೆಯಲ್ಲಿದೆ.

ಸೂರದೇವು ಪಾಪನಾಯಕನ ಮಗ ಕಾಕಳನಾಯಕ ಗೋಶೀಕೆರೆಯಿಂದ ತನ್ನ ಕಂಪಳವನ್ನು ೧೨ ಪೆಟ್ಟಿಗೆ ದೇವರೊಂದಿಗೆ ಈಗಿನ ನಾಯಕನಹಟ್ಟಿಗೆ ಬಂದು ನೆಲೆಸುತ್ತಾನೆ. ಈ ನಾಯಕ ಸುತ್ತಲಿದ್ದ ಗಿಡ-ಗಂಟೆ-ವನಾಂತ್ರ ಕಡಿದು, ಅಲ್ಲಿ ತನ್ನ ದನಕರುಗಳನ್ನು ಕಟ್ಟಲು ಹಟ್ಟಿ ನಿರ್ಮಿಸುತ್ತಾನೆ. ಹೀಗೆ ಇದು ಮುಂದೆ 'ನಾಯಕನಹಟ್ಟಿ'ಯಾಗಿ ಕರೆಯಲ್ಪಡುತ್ತದೆ. ಇದರಿಂದಾಗಿ "ಕಾಕಳ ನಾಯಕನನ್ನೆ ಹಟ್ಟಿ ಪಾಳೆಯಗಾರರ ಮೂಲಪುರುಷನೆನ್ನಬೇಕಾಗುತ್ತದೆ. ಈ ಮುಂಚೆ ಈ ಸ್ಥಳವನ್ನು ಬೂದಿಹಳ್ಳಿಯೆಂದೂ, ಬೂದ್ಯಾಳು ಚಂದ್ರಗಿರಿಯೆಂದೂ, ಚಂದ್ರಗಿರಿ ಭಾನುಕೋಟೆಯೆಂದೂ ನಾನಾ ಹೆಸರುಗಳಿಂದ ಕರೆಯುತ್ತಿದ್ದರೆಂದು ಸ್ಥಳೀಯ ಐತಿಹ್ಯಗಳು ಹೇಳುತ್ತವೆ.[೨೦೫] ಈ ಕಾಕಳನಾಯಕನು ನಾಯಕನಹಟ್ಟಿಯಲ್ಲಿ ಕೋಟೆಯನ್ನು ಕಟ್ಟಿಸಿದನು. ಇವನ ಕಾಲದಿಂದ ಹಟ್ಟಿಯ ಪಾಳೆಯಪಟ್ಟು ಅಸ್ತಿತ್ವಕ್ಕೆ ಬಂದಿತು[೨೦೬] ಎಂದು ಎಂ.ಎಸ್. ಪ್ರಭಾಕರ ಅವರು 'ನಾಯಕನಹಟ್ಟಿ ಬಖೈರು' ಪೀಠಿಕಾ ಭಾಗದಲ್ಲಿ ಹೇಳಿದ್ದಾರೆ. ಕಾಲಾಂತರದಲ್ಲಿ ನಾಯಕನಹಟ್ಟಿ ಎಂಬ ಹೆಸರು ನೆಲೆ ನಿಂತಂತೆ ಕಂಡುಬರುತ್ತದೆ. ಹಟ್ಟಿಯ ವಿಸ್ತೀರ್ಣ ಮೊದಲಿಗೆ ಈಗಿನ ಗೌಡಗೆರೆಯವರೆಗೂ ಮಾತ್ರ ಇದ್ದು, ಕ್ರಮೇಣ ಇದು ೩೨ ಹಳ್ಳಿ ಗ್ರಾಮ ಕಸಬೆಗೆ ವಿಸ್ತರಿಸಿದುದನ್ನು ವಂಶಾವಳಿ ಹೇಳುತ್ತದೆ.

ಕಾಕಳನಾಯಕನಿಗೆ ದೊಡ್ಡೆರಪ್ಪನಾಯಕನೆಂಬ ಮಗನಿದ್ದ. ಆದರೆ ಅವನು ಅಂಥ ಸಮರ್ಥನಾಗಿರಲಿಲ್ಲ. ಕಾಕಳನಾಯಕನ ಗಿರಿಮೊಮ್ಮಗ ಜೋಡಿ ಮಲ್ಲಪ್ಪನಾಯಕನಿಗೆ ಆಕಸ್ಮಿಕವಾಗಿ ದೊರೆತನ ಪ್ರಾಪ್ತವಾಗುತ್ತದೆ. ಈತನ ಕಾಲದಲ್ಲಿ ನಾಯಕನಹಟ್ಟಿ ಸರ್ವತೋಮುಖ ಅಭಿವೃದ್ಧಿಯನ್ನು ಕಾಣುತ್ತದೆ. ಮುಂದೆ ಈತ ಚಿತ್ರದುರ್ಗದ ಚಿಕ್ಕಣ್ಣನಾಯಕನ ತಂಗಿ ಸರ್ಜಮ್ಮನಾಗತಿಯನ್ನು ಮದುವೆಯಾಗುತ್ತಾನೆ. ಹಾಗೂ ತನ್ನ ತಂಗಿ ಮಲ್ಲವ್ವನಾಗತಿಯನ್ನು ಚಿಕ್ಕಣ್ಣನಾಯಕನಿಗೆ ಕೊಡುವ ಮೂಲಕ ಸಂಬಂಧವನ್ನು ಗಟ್ಟಿಗೊಳಿಸಿ ಕೊಳ್ಳುತ್ತಾನೆ. ಹೀಗಾಗಿ ವೈವಾಹಿಕ ಸಂಬಂಧಗಳ ಮೂಲಕ ಹಟ್ಟಿ ಮತ್ತು ಚಿತ್ರದುರ್ಗ ಪಾಳೆಯಗಾರರ ಮಧ್ಯೆ ಸೌಹಾರ್ದಯುತ ಮಧುರ ಸಂಬಂಧವೇರ್ಪಡುತ್ತವೆ. ಚಿತ್ರದುರ್ಗ ಪಾಳೆಯಗಾರರ ಸಹಕಾರದಿಂದ ಜೋಡಿಮಲ್ಲಪ್ಪನಾಯಕ ಪ್ರವರ್ಧಮಾನಕ್ಕೆ ಬರುತ್ತಾನೆ.

ಮುಂದೆ ಆನೆಗೊಂದಿ ಅರಸ ರಾಮರಾಯ ತಿರುಮಲರಾಜನಿಗೆ ಸಹಾಯ ಮಾಡಿದ್ದರಿಂದ ಕಳಸಾಪುರ ಮತ್ತು ಕಾಮಲಾಪುರದ ಕೆರೆಯ ಕೆಳಗಿನ ಭೂಮಿಯನ್ನು ಉಂಬಳಿಯಾಗಿ ನೀಡಿರುವುದಾಗಿ ತೆಲುಗು

ಭಾಷೆಯ ತಾಮ್ರಶಾಸನ ತಿಳಿಸುತ್ತದೆಂದು ಹೇಳಲಾಗುತ್ತದೆ. ಇವನಿಗೆ 'ಭೀಮ'ನೆಂದು ಬಿರುದು ನೀಡಲಾಗಿದ್ದು, ಈ ಬಿರುದು ಉಳಿಸಬೇಕೆಂದು 'ಭೀಮಕೆರೆ'ಯ ಜತೆಗೆ ಇತರೆ ಬೇರೆ ಕೆರೆಗಳನ್ನು ಕಟ್ಟಿಸಿದನೆಂದು ವಂಶಾವಳಿ ತಿಳಿಸುತ್ತದೆ. ಅದರ ಜೊತೆಗೆ ಜೋಡಿಮಲ್ಲಪ್ಪನಾಯಕ ಅನೇಕ ಹೊಸ ಗ್ರಾಮಗಳನ್ನು ದೇವಾಲಯಗಳನ್ನು, ಊರ ಹೊರವಲಯದಲ್ಲಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಕಾಶಿಯಿಂದ ಕಾಶಿಬಾಣ ತಂದು ನಾಯಕನಹಟ್ಟಿಯಲ್ಲಿ ಪ್ರತಿಷ್ಠಾಪಿಸಿದನು. ಬೆಟ್ಟದ ಮೇಲೆ ಕೋಟೆಯನ್ನು ನಿರ್ಮಿಸಿದನು. ಹಟ್ಟಿ ಪಾಳೆಯಗಾರರ ಕೀರ್ತಿಯನ್ನು ಎತ್ತರಕ್ಕೇರಿಸಿದ ಜೋಡಿ-ಮಲ್ಲಪ್ಪ ನಾಯಕನ ಕಾಲ ಸುವರ್ಣಯುಗವಾಗಿತ್ತೆಂದು ಹೇಳಲಾಗುತ್ತದೆ. ಜೋಡಿ ಮಲ್ಲಪ್ಪನಿಗೆ ಸಂತಾನವಿಲ್ಲದ ಕಾರಣ, ಅಧಿಕಾರ ಅವನ ಅಣ್ಣ ಬಸವಮಲ್ಲಪ್ಪನಾಯ್ಕನ ಕೈವಶವಾಗುತ್ತದೆ. ಈತನು ರಾಯದುರ್ಗದ ಯರಿಬೊಮ್ಮಳ ನಾಯ್ಕನ ಮಗಳು ಬೊಮ್ಮವ್ವ ನಾಗತಿಯನ್ನು ವಿವಾಹವಾಗುತ್ತಾನೆ. ಇದರ ಕುರುಹಾಗಿ ೩೦೦ ಕುರಿ, ೭೦೦ ಆಕಳು ಪಡೆದ, ಮೊಳಕಾಲ್ಮೂರು ಸೀಮೆಯನ್ನು ಅವರಿಗೆ ಬಿಟ್ಟುಕೊಡುತ್ತಾರೆ.[೨೦೭]

ನಂತರ ಬಂದ ಬಸವ ಮಲ್ಲಪ್ಪನಾಯ್ಕನ ಹಿರಿ ಮಗ ಮೀಸೆ ಮಲ್ಲಪ್ಪ ನಾಯಕ ಚಿತ್ರದುರ್ಗದ ರಾಜಕುವರಿ ಲಕ್ಷ್ಮಮ್ಮನಾಗತಿಯನ್ನು ಮದುವೆಯಾಗುತ್ತಾನೆ. ಈತನ ಮಗ ಕಸ್ತೂರಿ ಮಲ್ಲಪ್ಪನಾಯಕನು ಚಿತ್ರದುರ್ಗದ ಪಾಳೆಯಗಾರರ 'ಕಸ್ತೂರಿ' ಎಂಬ ಅಭಿಧಾನವನ್ನು ತಾನೂ ಬಳಸಿಕೊಂಡಿರಬೇಕೆಂದು ತೋರುತ್ತದೆ ಎಂದು ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಅಭಿಪ್ರಾಯಪಡುತ್ತಾರೆ.[೨೦೮]

ಮೊಳಕಾಲ್ಮೂರು ಪ್ರಾಂತ್ಯದಲ್ಲಿ ದೊರೆತಿರುವ ಈ ಮಲ್ಲಪ್ಪನಾಯಕನ ಶಾಸನಗಳು ತನ್ನ ತಾಯಿ ಲಕ್ಷ್ಮಮ್ಮನಾಗತಿಯ ಹೆಸರಿನಲ್ಲಿ ಕೆರೆ ಕಟ್ಟಿಸಿರುವುದನ್ನೂ, ಬೆಟ್ಟದ ಬಸವನಬಾಗಿಲ ಬಳಿಯಲ್ಲಿ ಯಾರಾದರೂ ಯಾವುದೇ ಅನುಮಾನಾಸ್ಪದ ಕೃತ್ಯಗಳಲ್ಲಿ ತೊಡಗಿದುದಾದರೆ ಅಂಥವರ ಹೊಟ್ಟೆ ಬಗಸಿ ತಲೆ ಹೊಡಿಸಿ ಶೂಲಕ್ಕೆ ಹಾಕಿಸಲಾಗುತ್ತದೆ ಎಂಬ ಕಟ್ಟಪ್ಪಣೆಯನ್ನೂ ತಿಮ್ಮಯ್ಯನಹಳ್ಳಿಮಠದ ರಾಮರಾಯರ ಮಗ ಜಂಗಮ ಚನ್ನಯ್ಯನಿಗೆ ಭೂದತ್ತಿ ಹಾಗೂ ಮುತ್ತೇಗೌಡನೆಂಬ ಶ್ಯಾನುಭೋಗ (ಸೇನಭೋಗ) ಮತ್ತು ೧೨ ಜನ ಆಯಗಾರರ ಬಗ್ಗೆಯೂ ಮಾಹಿತಿ ನೀಡುತ್ತವೆ.[೨೦೯] ಈತನಿಗೆ ಸಂತಾನವಿರಲಿಲ್ಲ. ಮುಂದೆ ಬಸವ ಮಲ್ಲಪ್ಪನಾಯಕನ ಎರಡನೇ ಮಗ ಚಿನ್ನಯರಾಜು ಎಂಬಾತ ಜರಿಮಲೆಯ ಪಾಳೆಗಾರನ ಮಗಳು ಲಿಂಗವ್ವನಾಗತಿಯನ್ನು ಮದುವೆಯಾಗುತ್ತಾನೆ. ಈತನ ಉಪಪತ್ನಿಯಾದ ಲಕ್ಷ್ಮವ್ವಳು ಮಗ ಚಿಕ್ಕಮಲ್ಲಪ್ಪನಿಂದ ಹಟ್ಟಿಯ ಕೀರ್ತಿ ಹಾಳಾಗುತ್ತದೆ.

ಚಿತ್ರದುರ್ಗದ ರಾಜಾ ಭರಮಪ್ಪನಾಯಕನು ಹಟ್ಟಿಯ ಪಾಳೆಯಗಾರರಿಗೆ ಸೇರಿದ್ದ, ಮೊಳಕಾಲ್ಮೂರ ಸೀಮೆಯ ಪ್ರದೇಶವನ್ನು ಆಕ್ರಮಿಸಿದಾಗ, ಅಸಹಾಯಕನಾದ ಚಿನ್ನಯರಾಜು ತನ್ನ ಐದು ಜನ ಮಕ್ಕಳೊಂದಿಗೆ ಆನೆಗೊಂದಿ ಚಿಕ್ಕವೆಂಕಟಪತಿ ರಾಯರಲ್ಲಿಗೆ ಹೋಗಿ, ಅಲ್ಲಿ ಈ ಹಿಂದೆ ಕೊಟ್ಟಿದ್ದ

ಉಂಬಳಿಯನ್ನು ಅನುಭವಿಸಿಕೊಂಡು ಇರತೊಡಗಿದನು. ಈ ಸಂದರ್ಭದಲ್ಲಿ ಚಿಕ್ಕಮಲ್ಲಪ್ಪನಾಯಕ ಆನೆಗೊಂದಿ ಅರಸರ ಸೂಳೆಯನ್ನೇ ಹಾರಿಸಿಕೊಂಡು ಹೋದ ಅಚಾತುರ್ಯ ನಡೆದುಹೋಗುತ್ತದೆ. ಶಿಕ್ಷೆಗೆ ಹೆದರಿ, ಅಲ್ಲಿಂದ ಚಿತ್ರದುರ್ಗಕ್ಕೆ ಬಂದು ರಾಜಾ ಭರಮಪ್ಪನಾಯಕರ ಹತ್ತಿರ ಹಟ್ಟಿಯ ರಾಜವಂಶದವನೆಂದು ನಂಬಿಸಿ ಸಹಪಂಕ್ತಿ ಭೋಜನದ ಗೌರವ ಗಳಿಸುತ್ತಾನೆ. ಕುದುರೆ ಹತ್ತುವ ಸವಾಲಿನಲ್ಲಿ ಗೆದ್ದು, ಭರಮಪ್ಪ ನಾಯಕರ ಮಗಳು ದೇಮವ್ವನಾಗತಿಯನ್ನು ಮದುವೆಯಾಗುತ್ತಾನೆ.

ನಾಯಕನಹಟ್ಟಿ ಪಡೆಯುವ ಪ್ರಯತ್ನದಲ್ಲಿ ಚಿಕ್ಕಮಲ್ಲಪ್ಪನಾಯಕ ವಿಫಲನಾಗಿ, ಚೆನ್ನರಾಜನ ಪಟ್ಟದ ಹೆಂಡತಿ ಜರಿಮಲೆಯ ಲಿಂಗಮ್ಮನಾಗತಿಯ ಮಕ್ಕಳು ತಾವೇ ನಿಜವಾದ ಹಕ್ಕುದಾರರೆಂದು ನಾಯಕನ ಹಟ್ಟಿಯನ್ನು ಪಡೆದು ನಾಲ್ಕು ಜನ ಸೇರಿ ಏಕಪ್ರಕಾರವಾಗಿ ಆಳ್ವಿಕೆ ನಡೆಸುತ್ತಾರೆ. ಈ ಹೊತ್ತಿನಲ್ಲಿ ಚಿಕ್ಕಮಲ್ಲಪ್ಪ ನಾಯಕನ ಚಟುವಟಿಕೆಗಳಿಂದ ತಲೆರೋಸಿ, ದೊಡ್ಡಮದಕರಿನಾಯಕನು ಕ್ರಿ.ಶ. ೧೭೫೪ರಲ್ಲಿ ಅವನನ್ನು ದೊಡ್ಡೇರಿ ಸೆರೆಮನೆಯಲ್ಲಿ ಹಾಕಿ ಕೊಲ್ಲಿಸುತ್ತಾನೆ. ಮುಂದೆ ಚಿಕ್ಕಮಲ್ಲಪ್ಪ ನಾಯಕನ ಮಗ ಪೆದ್ದಯ್ಯನನ್ನು ಚಿತ್ರದುರ್ಗದವರೇ ಸಾಕಿ ಸಲುಹಿ ಸತ್ಯವ್ವ ಎಂಬ ಕನ್ಯೆಯನ್ನು ಕೊಟ್ಟು ಮದುವೆ ಮಾಡಿ, ಎಲೆ ಅಡಿಕೆಗಾಗಿ ಎಂದು 'ಗಾಡಿಗನಹಳ್ಳಿ' ಎಂಬ ಗ್ರಾಮವನ್ನು ಇನಾಮಾಗಿ ಕೊಡುತ್ತಾರೆ.

ಚಿನ್ನಯರಾಜನ ಹಿರಿಮಗ ಬಸವಮಲ್ಲಪ್ಪ II. ಈತನಿಗೆ ಚಿಕ್ಕ ಹೆಂಡತಿಯಲ್ಲಿ ಬಂಗಾರ ಮಲ್ಲಪ್ಪ ಎಂಬ ಮಗ ಜನಿಸಿ, ಈತನಿಗೆ ದೊಡ್ಡಮಲ್ಲಪ್ಪ ಮತ್ತು ಒಬ್ಬ ಮಗಳು ಇದ್ದರು. ಈ ಹುಡುಗಿಯ ವಿವಾಹ ಚಿತ್ರದುರ್ಗದ ಕೊನೆಯ ದೊರೆ ರಾಜವೀರ ಮದಕರಿನಾಯಕನ ಜೊತೆಗೆ ಕ್ರಿ.ಶ. ೧೭೭೮ರಲ್ಲಿ ನಡೆಯುತ್ತದೆ. ಚಿನ್ನಯರಾಜನ ೪ನೇ ಮಗ ಬಂಗಾರ ಮಲ್ಲಪ್ಪ ಎಂದಿದ್ದು ಈತನ ಎರಡನೇ ಹೆಂಡತಿ ಪಾಪಮ್ಮನಾಗತಿ. ಈಕೆಯ ಗಂಡನ ಹೆಸರು ಬಂಗಾರ ಮಲ್ಲಪ್ಪನಾಯ್ಕ II, ಮಗ ಬಂಗಾರಮಲ್ಲಪ್ಪನಾಯ್ಕ IV ಆಗಿದ್ದನು. ಕ್ರಿ.ಶ. ೧೭೭೯ರಲ್ಲಿ ಚಿತ್ರದುರ್ಗದ ದೌಲತ್ತು ಮುಗಿದ ಮೇಲೆ, ದೊಡ್ಡ ಮದಕರಿ ನಾಯಕ ಬಂಗಾರಮಲ್ಲಪ್ಪನ ಜೊತೆ ಸೇರಿ ಶ್ರೀರಂಗಪಟ್ಟಣದ ಹೈದರಾಲಿಯ ಹತ್ತಿರ ಚಾಕರಿಗೆ ನಿಲ್ಲುತ್ತಾನೆ.[೨೧೦]

ಬಂಗಾರಮಲ್ಲಪ್ಪ ದೊಡ್ಡ ಮದಕರಿನಾಯಕನ ಸಹಾಯಕ್ಕಾಗಿ ಸೈನ್ಯದ ಪ್ರಮುಖ ಅಧಿಕಾರಿಯಾಗಿ ಕಲ್ಲಿಕೋಟೆಗೆ ಹೋಗಿದ್ದನು. ಹೈದರಾಲಿಖಾನನು ತೀರಿದ ತರುವಾಯ ಟಿಪ್ಪುಸುಲ್ತಾನನಿಗೂ ತಿರುವಾಂಕೂರ ರಾಜನಿಗೂ ನಡೆದ ಯುದ್ಧದ ಸಂದರ್ಭದಲ್ಲಿ ಚಿತ್ರದುರ್ಗದ ಸೈನ್ಯ ಹೋರಾಡಿತು. ಈ ಯುದ್ಧದಲ್ಲಿ ಬಂಗಾರ ಮಲ್ಲಪ್ಪನಾಯಕ IV ಕ್ರಿ.ಶ. ೧೭೮೧ರ ಫೆಬ್ರವರಿಯಲ್ಲಿ ವೀರಮರಣ ಹೊಂದುತ್ತಾನೆ. ಈ ನಾಯಕನಿಗೆ ಸಂತಾನವಿರಲಿಲ್ಲ. ತರುವಾಯ ಬಂದ ದೊರೆಗಳ ಕುರಿತು ಯಾವುದೆ ಸ್ಪಷ್ಟ ದಾಖಲೆಗಳು ಲಭ್ಯವಾಗುವುದಿಲ್ಲ. ಪ್ರಾರಂಭದಲ್ಲಿ ಶ್ರೀಶೈಲದಲ್ಲಿ ಪಶುಪಾಲಕರಾಗಿದ್ದ ಪಾಳೆಯಗಾರರು "ಕ್ರಿ.ಶ. ೧೫೮೯

ರಿಂದ ಕ್ರಿ.ಶ. ೧೭೯೧ರವರೆಗೆ ರಾಜಕೀಯ ಜೀವನವನ್ನು ನಡೆಸಿ ಮೂಲೆಗುಂಪಾದರು.[೨೧೧] ಸುಮಾರು ೧೯೩ ವರ್ಷಗಳ ಕಾಲ ನಿರಂತರವಾಗಿ ಪಾಳೆಯಗಾರಿಕೆ ಜೀವನವನ್ನು ನಡೆಸುತ್ತಾ ಬಂದ ಇವರ ಆಡಳಿತ ಕ್ರಮವನ್ನು ಚರಿತ್ರೆಯಲ್ಲಿ ಗುರುತಿಸಬಹುದು.

ಇಂದು ನಾಯಕನಹಟ್ಟಿಯ ಒಳಮಠದ ಹಿಂಭಾಗದಲ್ಲಿ ಸಮೀಪದ ದೊರೆಗಳ ಹಟ್ಟಿಯಲ್ಲಿ ಹಾಗೂ ಚಳ್ಳಕೆರೆಯಲ್ಲಿ ಈ ಮನೆತನದ ವಂಶಸ್ಥರು ನೆಲೆಸಿದ್ದಾರೆ. ಇಂದು ಆರ್ಥಿಕವಾಗಿ ದುರ್ಬಲರಾದ ಇವರ್‍ಯಾರು ರಾಜಕೀಯ ಕ್ಷೇತ್ರದಲ್ಲಿ ಕಾಣಿಸಿಕೊಂಡಿಲ್ಲ. ಆದರೆ ಚುನಾವಣೆಗೆ ಸ್ಪರ್ಧಿಸಿದವರು ನಾಯಕರ ಮನೆಗೆ ಬಂದು ಬೆಂಬಲಿಸುವಂತೆ ಕೇಳುತ್ತಾರೆ. ಕಾರಣ ಒಂದು ಕಾಲಕ್ಕೆ ಇವರ ಮಾತುಗಳನ್ನು ಪ್ರಜೆಗಳು ಕೇಳುತ್ತಿದ್ದರು. ಈಗಲೂ ಈ ಮನೆತನದವರ ಹಿಂದೆ ಕೆಲವು ಓಟುಗಳಿರಬಹುದೆಂಬ ಭಾವನೆ ಅವರದಾಗಿದೆ. ಆದರೆ ಜನರು ಮಾತ್ರ ಇವರ ಹಿಡಿತದಲ್ಲಿಲ್ಲದಿರುವುದು ಕಂಡುಬರುತ್ತದೆ.

ಆರ್ಥಿಕವಾಗಿ ತೊಂದರೆಯಲ್ಲಿರುವ ಇವರು ಪಿತ್ರಾರ್ಜಿತ ಯಾವುದೇ ಆಸ್ತಿಯನ್ನು ಉಳಿಸಿಕೊಂಡಿಲ್ಲ. ಇನ್ನೊಬ್ಬರ ಹೊಲದಲ್ಲಿ ಕೂಲಿ ಮಾಡಿ ಬದುಕುವ ಸ್ಥಿತಿ ತಲುಪಿದ್ದಾರೆ. ಜನಸಾಮಾನ್ಯರಂತೆ ಕಾಣುತ್ತಿರುವ ಇವರು ಕೆಲವು ಸಲ ನಾವು ನಾಯಕನಹಟ್ಟಿ ದೊರೆಗಳ ವಂಶಸ್ಥರೆಂದು ಹೇಳಿಕೊಳ್ಳುವ ಅನಿವಾರ್ಯತೆ ಒದಗಿದೆ. ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿಯೂ ಸ್ಥಾನಪಲ್ಲಟಗೊಂಡಿದ್ದಾರೆ.

## ೨.೧೧ ಮತ್ತೋಡು ನಾಯಕ ಅರಸರು

ಮತ್ತೋಡು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನಲ್ಲಿರುವ ಒಂದು ಪ್ರಮುಖ ಚಾರಿತ್ರಿಕ ಸ್ಥಳ. ಇದು ವೇದಾವತಿ ನದಿಯ ಪ್ರದೇಶದಲ್ಲಿ ಹುಟ್ಟಿ ಬೆಳೆದಿದೆ. ಹಿಂದೆ ಈ ಪ್ರದೇಶವನ್ನು ಮತಿವಂತರನಾಡು, ಮುತ್ತೈದೆಯರನಾಡು ಎಂದು ಕರೆಯುತ್ತಿದ್ದರೆಂದು ಮೌಖಿಕ ಆಕರಗಳು ತಿಳಿಯಪಡಿಸುತ್ತವೆ. ಆದರೆ ಶಾಸನಗಳಲ್ಲಿ ಮತ್ತಿನಡು, ಮತ್ತಿನಾಡು, ಮತ್ತನಡು, ಮತನಡು, ಮತ್ತೇಡು, ಮತ್ತೋಡು ಎಂದು ಕರೆಯಲಾಗಿದೆ. ಚರಿತ್ರೆಯ ಪುಟಗಳನ್ನು ಗಮನಿಸಿದರೆ ಮತ್ತೋಡು ಎಂದೇ ದಾಖಲಾಗಿದೆ. ಸುಮಾರು ಎರಡು ಶತಮಾನಗಳ ಕಾಲ ನಾಯಕ ಅರಸರು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಕ್ರಿ.ಶ.೧೬೦೪ ರಿಂದ ೧೭೭೯ರವರೆಗೆ ಆಡಳಿತ ನಡೆಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿದೆ.[೨೧೨] ಈ ನಡುವೆ ಆಕರಗಳ ಕೊರತೆಯಿದ್ದರೂ ಕ್ರಿ.ಶ.೧೬೭೨ರಿಂದ ೧೭೪೭ರವರೆಗಿನ ಶಾಸನಗಳು ಈ ಪಾಳೆಯಗಾರರ ಬಗ್ಗೆ ಬೆಳಕು ಚೆಲ್ಲುತ್ತವೆ. ಮತ್ತೋಡು ಪಾಳೆಯಪಟ್ಟನ್ನು ಸ್ಥಾಪಿಸಿದವನು ಬೇಡ ಜನಾಂಗದವನಾದ ಗಿರಿಯಪ್ಪನಾಯಕ.[೨೧೩] ಇವನು ಪ್ರಸಿದ್ಧ ಬೇಟೆಗಾರನೂ, ಶೂರನೂ ಆಗಿದ್ದನು. ಈತನ ಪರಾಕ್ರಮವನ್ನು ಬೂದಿಹಾಳದ ಪಾಳೆಯಗಾರರಿಂದ ತಿಳಿದ ಪೆನಗೊಂಡೆಯ ಅರಸ

ವೆಂಕಟಪತಿರಾಯನು ಅವನನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಸತ್ಕರಿಸಿದನು. ಒಂದು ದಿನ ಗಿರಿಯಪ್ಪನಾಯಕನು ಮದವೇರಿದ ಹಾಗೂ ಯಾರಿಂದಲೂ ಎದುರಿಸಲಾಗದ ಆನೆಯನ್ನು ನಿಯಂತ್ರಿಸಿದನು. ಇವನ ಸಾಹಸಕ್ಕೆ ಮೆಚ್ಚಿ ಬೆಲೆಬಾಳುವ ಆಭರಣಗಳು ಮತ್ತು ಪ್ರಮುಖ ಆದಾಯದ ಪ್ರದೇಶವಾದ ಲಕ್ಕವ್ವನಹಳ್ಳಿ ಹಾಗೂ ಅದರ ಸುತ್ತಮುತ್ತಲ ಪ್ರದೇಶಗಳನ್ನು ನೀಡಿ ಗೌರವಿಸಿದನು.[೨೧೪] ಇಲ್ಲಿಂದ ಈ ರಾಜಮನೆತನಕ್ಕೆ ಒಂದು ರಾಜವಂಶದ ಪಟ್ಟ ಸಿಗುತ್ತದೆ. ಈ ಘಟನೆ ನಡೆದದ್ದು ಕ್ರಿ.ಶ.೧೬೦೪ರಲ್ಲಿ. ತರುವಾಯ ಅವನು ಮತ್ತೆ ಕೆಲವು ಸಂದರ್ಭಗಳಲ್ಲಿ ಸಾಹಸಗಳನ್ನು ಮಾಡಿ ವೆಂಕಟಪತಿರಾಯನ ಮೆಚ್ಚುಗೆಯನ್ನು ಗಳಿಸಿದನೆಂದು ಅಪ್ರಕಟಿತ ದಾಖಲೆಗಳು ತಿಳಿಸುತ್ತವೆ. ಕೆಲವು ಕನ್ನಡ ಕಾವ್ಯಗಳಲ್ಲಿಯೂ ಸಹ ಈ ಗಿರಿಯಪ್ಪನಾಯಕನ ಬಗ್ಗೆ ಉಲ್ಲೇಖವಾಗಿರುವುದು ಕುತೂಹಲ ಕೆರಳಿಸಿದೆ. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿದ ಸಿರುಮಣ್ಣನಾಯಕನ ಸಾಂಗತ್ಯ, ಗೊಲ್ಲ ಸಿರುಮನಚರಿತೆ ಈ ಸಾಂಗತ್ಯ ಕೃತಿಗಳಲ್ಲಿ ಮತ್ತಿನಡುವಿನ ಗಿರಿಯಣ್ಣ ಎಂಬ ವೀರನ ಉಲ್ಲೇಖವೊಂದು ಬರುತ್ತದೆ. ಪೆನುಗೊಂಡೆಯ ಸಾಳುವ ನರಸಿಂಹನು ಸಿರುಮನಾಯಕನ ವಿರುದ್ಧ ಬೂದಿಹಾಳನ್ನು ಮುಟ್ಟಿದಾಗ ನರಸಿಂಹನ ಸೇನೆಯೊಡನೆ ದಿಟ್ಟತನದಿಂದ ಕಾದಾಡಿದ ಯೋಧರಲ್ಲಿ ಮತ್ತಿನಡುವಿನ ಗಿರಿಯಣ್ಣನೂ ಒಬ್ಬನಾಗಿದ್ದನು. ಈತನ ಸಾಹಸ ಕಂಡು ಮೆಚ್ಚಿದ ಸಾಳುವ ನರಸಿಂಹ ಅವನನ್ನು ಮತ್ತೋಡಿಗೆ ಅಧಿಪತಿಯನ್ನಾಗಿ ಮಾಡಿರಬಹುದು.[೨೧೫]

ಗಿರಿಯಪ್ಪನಾಯಕನ ತರುವಾಯ ಮತ್ತೋಡನ್ನು ಆಳಿದವನು ಅವನ ಮಗನಾದ ದೊಡ್ಡಳನಾಯಕ. ಮತ್ತೋಡಿನಲ್ಲಿ ಒಂದು ಕೋಟೆ, ದೇವಾಲಯ ಮತ್ತು ಅರಮನೆಯನ್ನು ನಿರ್ಮಿಸಿದನು.[೨೧೬] ಮತ್ತೋಡು ನಿರ್ಮಾಣಕ್ಕೆ ಕಾರಣ ಪುರುಷನೇ ಈ ದೊಡ್ಡಳನಾಯಕ. ಇವನ ನಂತರ ಬಂದ ನಾಯಕ ಅರಸರ ಬಗ್ಗೆ ಆಕರಗಳ ಕೊರತೆಯಿಂದ ಸ್ಪಷ್ಟವಾದ ಮಾಹಿತಿ ಲಭ್ಯವಿಲ್ಲದ ಕಾರಣ ಮುಂದೆ ಏನಾಯಿತು ತಿಳಿಯದು. ಆದರೆ ದೊಡ್ಡಳನಾಯಕನ ಕ್ರಿ.ಶ.೧೬೭೨ರ ಒಂದು ಶಾಸನದಲ್ಲಿ ಅವನ ಪಟ್ಟದ ಕುಮಾರ ಚಿನ್ನದ ಗಿರಿಯಪ್ಪನಾಯಕನ ವಿವಾಹ ಸಂದರ್ಭದಲ್ಲಿ ದೊರೆ ಕ್ಷೌರಿಕನ ಮೇಲಿನ ತೆರಿಗೆಯನ್ನು ಬಿಟ್ಟಿದ್ದನ್ನು ತಿಳಿಸುತ್ತದೆ. ದೊಡ್ಡಳನಾಯಕನ ತರುವಾಯ ಮತ್ತೋಡಿನಲ್ಲಿ ಅಧಿಕಾರಕ್ಕೆ ಬಂದವನೇ ಸಂಗಪ್ಪನಾಯಕ. ಇವನ ಸಾಹಸವನ್ನು ಕುರಿತು ಚಾರಿತ್ರಿಕ ದಾಖಲೆಗಳು ಈ ರೀತಿ ವಿವರಿಸುತ್ತವೆ :

ಒಮ್ಮೆ ಶ್ರೀರಂಗಪಟ್ಟಣದ ಒಡೆಯರ ಆಸ್ಥಾನಕ್ಕೆ ಹೋಗಿದ್ದಾಗ ಹುಚ್ಚೆದ್ದು ನಿಯಂತ್ರಿಸಲು ಅಸಾಧ್ಯವಾದ ಕುದುರೆಯೊಂದನ್ನು ನಿಯಂತ್ರಿಸಿ ಸವಾರಿ ಮಾಡಿದ. ಆಗ ಅವನ ಸಾಹಸಕ್ಕೆ ಅಸೂಯೆಪಟ್ಟ ಕೆಲವರು ಅವನೆಡೆಗೆ ನಿಂಬೆಹಣ್ಣು ಮುಂತಾದವುಗಳನ್ನು ಎಸೆದಾಗ ಅವನು ಕುದುರೆಯ ಮೇಲೆ ಕುಳಿತುಕೊಂಡೇ ಕತ್ತಿಯನ್ನು ಝಳಪಿಸುತ್ತಲೇ ಚಾತುರ್ಯದಿಂದ ಎಲ್ಲವನ್ನು ತುಂಡು ಮಾಡಿದನು.[೬] ಈ ಸಂಗಪ್ಪನಾಯಕನು ಕೇವಲ ರಣರಂಗದಲ್ಲಿ ಕಾಲಹರಣ ಮಾಡದೆ ಸಮಾಜದ ಸರ್ವಕ್ಷೇತ್ರಗಳ

ಅಭಿವೃದ್ಧಿಗೆ ಆದ್ಯತೆ ನೀಡಿದನು ಎಂಬುದಕ್ಕೆ ಕ್ರಿ.ಶ.೧೬೮೫ರಲ್ಲಿ ಹೊನ್ನಪ್ಪ ಎಂಬುವನಿಗೆ ಹೊಲವನ್ನು ದಾನವಾಗಿ ನೀಡಿದ ಶಾಸನವೊಂದಿದೆ.[೨೧೮]

ಸಂಗಪ್ಪನಾಯಕನ ನಂತರ ಪಟ್ಟಕ್ಕೆ ಬಂದವನು ಅವನ ಮಗ ದೊಡ್ಡಹಾಲಪ್ಪನಾಯಕನು. ಶಾಸನಗಳು ಇವನನ್ನು ಹಾಲರಾಜ, ಹಿರಿಯ ಹಾಲಪ್ಪನಾಯಕ ಎಂದು ಕರೆದಿದೆ.[೨೧೯] ಹಾಗೆಯೇ ದೊಡ್ಡ ಹಾಲಪ್ಪನಾಯಕ ಎಂದು ಕರೆದಿರುವುದುಂಟು.[೨೨೦] ಮತ್ತೋಡು ನಾಯಕ ಅರಸರಲ್ಲಿಯೇ ಪ್ರಮುಖನಾದ ಇವನು ಧರ್ಮಾಭಿಮಾನಿ, ವಿದ್ಯಾಪ್ರೇಮಿ ಹಾಗೂ ದಕ್ಷ ಆಡಳಿತಗಾರನಾಗಿದ್ದನು. ಇವನ ಆಳ್ವಿಕೆಯಲ್ಲಿ ಮತ್ತೋಡು ಎಲ್ಲ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಸಾಧಿಸುವುದರ ಜೊತೆಗೆ ಉತ್ತುಂಗ ಶಿಖರವನ್ನೇರಿತು. ಈ ಮನೆತನದವರು ಲಿಂಗದೀಕ್ಷೆ ಪಡೆದು ವೀರಶೈವರಾದುದು ಇವನ ಕಾಲದಲ್ಲಿಯೇ ಎಂಬುದು ದಾಖಲಾಗಿದೆ. ಮತ್ತೋಡನ್ನು ಒಂದು ಸುಂದರ ನಗರವನ್ನಾಗಿ ನಿರ್ಮಾಣ ಮಾಡಲು ಶ್ರಮಿಸಿದನು. ಆಡಳಿತ ಸುಗಮವಾಗಿ ನಡೆಯಲೆಂದು ಸಚಿವರುಗಳಿಗೆ, ಹಿರಿಯ ಅಧಿಕಾರಿಗಳಿಗೆ ಸಚಿವಾಲಯಗಳನ್ನು ನಿರ್ಮಿಸಿದನು. ಶೈವಭಕ್ತನಾದ ಇವನು ಅಪಾರ ಧಾರ್ಮಿಕ ಶ್ರದ್ಧೆಯುಳ್ಳವನಾಗಿದ್ದನು. ಈ ಸಂಬಂಧ ಕ್ರಿ.ಶ.೧೭೦೭ರಲ್ಲಿ ಮುರಿಗೆಸ್ವಾಮಿಗಳ ಮಠವೊಂದನ್ನು ಮತ್ತೋಡಿನಲ್ಲಿ ಕಟ್ಟಿಸಿ, ಅದರ ನಿರ್ವಹಣೆಗೆ ಅರೆಹಳ್ಳಿ ಎಂಬ ಹಳ್ಳಿಯೊಂದನ್ನು ದತ್ತಿ ಬಿಟ್ಟನು.[೨೨೧] ಕ್ರಿ.ಶ.೧೭೨೯ರಲ್ಲಿ ಬೇವಿನಹಳ್ಳಿಯ ದೇವತೆ ಕರಿಯಮ್ಮಗೆ ಸಲ್ಲುವ ಕಪ್ಪಕಾಣಿಕೆ ಸರ್ವಸಾಮಾನ್ಯ. ಅದಕ್ಕೆ ಯಾರೂ ತಪ್ಪಬಾರದೆಂದೂ ಕಟ್ಟಳೆ ಮಾಡಿದನು. ವಿವಿಧ ದೇವರ ಪೂಜಾಪಟ್ಟಾಧಿಕಾರವನ್ನು ಹಲವು ಗೌಡರುಗಳಿಗೆ ವಹಿಸಿದುದನ್ನು ಕ್ರಿ.ಶ.೧೭೦೩ರ ಶಾಸನವೊಂದು ತಿಳಿಸುತ್ತದೆ.[೨೨೨] ಇವನು ಕೆಲವು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದನೆಂದು ದಾಖಲೆಗಳು ತಿಳಿಸುತ್ತವೆ.

ಹಾಲಪ್ಪನಾಯಕನಿಗೆ ಇಬ್ಬರು ಮಕ್ಕಳಿದ್ದರು. ಅವರೇ ಸಿದ್ದರಾಮಪ್ಪ ಮತ್ತು ದೊಡ್ಡಣ್ಣ. ಈ ಬಗ್ಗೆ ಶಾಸನವೊಂದು ಬೆಳಕು ಚೆಲ್ಲುತ್ತದೆ.[೨೨೩] ಇವರಿಬ್ಬರು ಅಧಿಕಾರ ಗದ್ದುಗೆ ಹಿಡಿಯಲು ತೆರೆಯ ಹಿಂದೆ ಶತಪ್ರಯತ್ನ ನಡೆಸುತ್ತಿದ್ದರು. ಕೊನೆಗೆ ಸಿದ್ಧರಾಮಪ್ಪನಾಯಕನು ಅಧಿಕಾರಕ್ಕೆ ಬಂದ ಮೇಲೆ ಇವನ ತಮ್ಮನಾದ ದೊಡ್ಡಣ್ಣನಾಯಕನಲ್ಲಿ ಕೋಪವನ್ನು ಹುಟ್ಟಿಸಿತು. ಏನಾದರೂ ಮಾಡಿ ಅಧಿಕಾರ ಹಿಡಿಯಬೇಕೆಂಬ ಒತ್ತಾಸೆಯಿಂದ ಚಿತ್ರದುರ್ಗದ ಪಾಳೆಯಗಾರ ಹಿರೇಮದಕರಿನಾಯಕನ ನೆರವನ್ನು ಯಾಚಿಸಿದನು. ಈ ಹಿನ್ನೆಲೆಯಲ್ಲಿ ಚಿತ್ರದುರ್ಗದ ನಾಯಕನು ಒಪ್ಪಂದದಂತೆ ಮತ್ತೋಡಿನ ಮೇಲೆ ಧಾಳಿ ಮಾಡಿದನು. ಚಿತ್ರದುರ್ಗದ ಒಳಿ ಮೂರು ಸಾವಿರ ಪಗೋಡಗಳ ಕಪ್ಪ ಸಲ್ಲಿಸಬೇಕೆಂಬ ಒಪ್ಪಂದ ಏರ್ಪಟ್ಟಿತ್ತು. ಕೊನೆಗೆ ಹಾಲಪ್ಪನಾಯಕನನ್ನು ಅಧಿಕಾರಕ್ಕೆ ತಂದು ಸಿದ್ದಪ್ಪನಾಯಕನನ್ನು ಸೆರೆಹಿಡಿದು ಚಿತ್ರದುರ್ಗದ ಕಾರಾಗೃಹದಲ್ಲಿಟ್ಟನು. ಸಿದ್ದಪ್ಪನಾಯಕನು ತುಂಬಾ ಚಲುವನಾಗಿದ್ದರಿಂದ ಚಿತ್ರದುರ್ಗದ

ಹಿರೇಮದಕರಿನಾಯಕನ ಪುತ್ರಿ ದ್ಯಾಮವ್ವ ಎಂಬುವಳು ಆಕರ್ಷಿತಳಾದಳು. ಕೊನೆಗೆ ಈ ಆಕರ್ಷಣೆ ವಿವಾಹಕ್ಕೆ ಅವಕಾಶ ಮಾಡಿಕೊಟ್ಟಿತು. ಇದರಿಂದ ಚಿತ್ರದುರ್ಗ ಮತ್ತು ಮತ್ತೋಡು ರಾಜಸಂಬಂಧದಿಂದ ವೈವಾಹಿಕ ಸಂಬಂಧದ ರಾಜಮನೆತನಗಳಾದವು. ಈ ಮೊದಲು ಅಧಿಕಾರದಲ್ಲಿದ್ದ ಹಾಲಪ್ಪನಾಯಕನನ್ನು ಅಧಿಕಾರದಿಂದ ಕೆಳಗಿಳಿಸಿ ಸಿದ್ದಪ್ಪನಾಯಕನನ್ನು ಮತ್ತೋಡು ನಾಯಕ ಅರಸುಮನೆತನದ ರಾಜನನ್ನಾಗಿ ಅಧಿಕಾರಕ್ಕೆ ತರಲಾಯಿತು. ಇದರಿಂದ ಸಹಜವಾಗಿ ಮತ್ತೋಡು ಚಿತ್ರದುರ್ಗದ ಹಿಡಿತಕ್ಕೆ ಒಳಪಟ್ಟಿತು. ಈ ಸಿದ್ದಪ್ಪನಾಯಕನು ದೊರೆಯಾಗಿದ್ದಾಗ ಹಾಕಿಸಿದ ಕ್ರಿ.ಶ. ೧೭೪೭ರ ಶಾಸನವೊಂದು ಅವನು ಕಲ್ಲಯ್ಯ ಎಂಬ ಬಾಲಕನೊಬ್ಬನ ಹಾಲು ಬೆಣ್ಣೆಯ ಸಲುವಾಗಿ ಆನಿಗಟ್ಟೆಹಳ್ಳಿ ಎಂಬ ಗ್ರಾಮದಲ್ಲಿ ಭೂಮಿಯನ್ನು ನೀಡಿದುದಾಗಿ ಹೇಳಿದೆ.[೨೨೪] ಈ ಸಿದ್ದಪ್ಪನಾಯಕನಿಗೆ ಹಾಲಪ್ಪನಾಯಕ, ಸಂಗಪ್ಪನಾಯಕ ಮತ್ತು ದೊಡ್ಡಣ್ಣನಾಯಕ ಎಂಬ ಮಕ್ಕಳು ಇದ್ದು ಹಿರಿಯನಾದ ಹಾಲಪ್ಪನಾಯಕನು ಅಧಿಕಾರಕ್ಕೆ ಬಂದನು. ಸಾಹಿತ್ಯದಲ್ಲಿ ಘನಪಂಡಿತನಾದ ಹಾಲಪ್ಪನಾಯಕ ಚಿತ್ರದುರ್ಗದ ಪಾಳೆಯಗಾರರ ಜೊತೆ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಇವನ ಕಾಲದಲ್ಲಿ ಮದಕರಿನಾಯಕನು ಹಾಲಪ್ಪನಾಯಕನಲ್ಲಿ ತಮಗೆ ಮೊದಲು ಕೊಡುತ್ತಿದ್ದ ಮೂರು ಸಾವಿರ ಪಗೋಡಗಳಿಗೆ ಬದಲಾಗಿ ನಾಲ್ಕು ಸಾವಿರ ಪಗೋಡಗಳನ್ನು ಕೊಡಬೇಕೆಂದು ಕೇಳಲು ಹಾಲಪ್ಪನಾಯಕನು ನಿರಾಕರಿಸಿದನು. ಮದಕರಿನಾಯಕನು ಮತ್ತೋಡಿನ ಗೌಡ ಶಾನುಭೋಗರನ್ನು ಕರೆಸಿ ಲೆಕ್ಕಪತ್ರಗಳನ್ನು ಖುದ್ದಾಗಿ ಪರಿಶೀಲಿಸಲಾಗಿ ನಿಜವಾಗಿ ಮತ್ತೋಡಿನ ನಾಯಕನಿಗೆ ಹೆಚ್ಚು ಕಪ್ಪ ಕೊಡಲು ಸಾಧ್ಯವಿಲ್ಲವೆಂದು ತಿಳಿದು ಮೊದಲಿನ ಕಪ್ಪದ ಮೊತ್ತವನ್ನೇ ಸ್ವೀಕರಿಸಲು ಒಪ್ಪಿದನೆಂದು ತಿಳಿದುಬರುತ್ತದೆ.[೨೨೫] ಇದರಿಂದ ಮತ್ತೋಡು ಮತ್ತು ಚಿತ್ರದುರ್ಗದ ರಾಜತಾಂತ್ರಿಕ ಸಂಬಂಧ ಹದಗೆಟ್ಟಿತು. ಇದೇ ಸಂದರ್ಭದಲ್ಲಿ ಹೈದರಾಲಿಯು ಕ್ರಿ.ಶ.೧೭೭೨ರಲ್ಲಿ ಚಿತ್ರದುರ್ಗದ ಪಾಳೆಯಗಾರರ ಮೇಲೆ ಧಾಳಿ ಮಾಡಿದನು. ಈ ಸಮಯವನ್ನೇ ಉಪಯೋಗಿಸಿಕೊಂಡ ಹಾಲಪ್ಪನಾಯಕ ಹೈದರಾಲಿಯ ಜೊತೆ ಸೇರಿಕೊಂಡನು. ಕೊನೆಗೆ ಹೈದರಾಲಿ ಕಡೆಯವರಿಗೂ ಮತ್ತು ಚಿತ್ರದುರ್ಗದ ಪಾಳೆಯಗಾರರಿಗೆ ಬೂದಿಹಾಳದ ಪ್ರದೇಶದಲ್ಲಿ ಕಾಳಗ ನಡೆಯಿತು. ಈ ಕಾಳಗದಲ್ಲಿ ಹೈದರಾಲಿ ಕಡೆಯವರು ಸೋಲನ್ನಪ್ಪಿದರು. ಹಾಲಪ್ಪನಾಯಕನು ಸಹ ಮತ್ತೋಡಿಗೆ ಓಡಿಹೋದನು. ನಂತರ ಚಿತ್ರದುರ್ಗದವರು ಸಿಟ್ಟಿಗೆದ್ದು ಮತ್ತೋಡನ್ನು ಆಕ್ರಮಿಸಿ ಹಾಳುಗೆಡವಿ ಹಾಲಪ್ಪನಾಯಕನನ್ನು ಸೆರೆಹಿಡಿದು ಚಿತ್ರದುರ್ಗದಲ್ಲಿಟ್ಟರು.[೨೨೬]

ಈ ಹಿಂದೆ ಬೂದಿಹಾಳಿನ ಕಾಳಗದಲ್ಲಿ ಹೈದರಾಲಿ ಸೋಲನ್ನಪ್ಪಿದುದು ಸ್ಮೃತಿಪಟಲದಲ್ಲಿರುವಾಗಲೇ ಸೇಡು ತೀರಿಸಿಕೊಳ್ಳಬೇಕೆಂಬ ಹಂಬಲದಿಂದ ಮತ್ತೆ ಕ್ರಿ.ಶ.೧೭೭೯ರಲ್ಲಿ ಹೈದರಾಲಿ ಚಿತ್ರದುರ್ಗದ ಮೇಲೆ ದಾಳಿ ಮಾಡಿದನು. ಧಾಳಿಗೆ ದೊರೆ ಮದಕರಿನಾಯಕ ಹೈದರಾಲಿಗೆ ಸೆರೆಯಾಗಿ ಹಾಲಪ್ಪನಾಯಕನಿಗೆ ಬಿಡುಗಡೆಯಾಯಿತಾದರೂ ಮತ್ತೋಡಿನ ಪಟ್ಟ ಮತ್ತೆ ದೊರೆಯಲಿಲ್ಲ. ಈ ವೇಳೆಗೆ ಮತ್ತೋಡು

ಮನೆತನ ಪತನದತ್ತ ಸಾಗಿತ್ತು. ಈ ಮನೆತನದ ಕಡೆಯ ದೊರೆಯಾಗಿದ್ದು ಅಧಿಕಾರ ಭ್ರಷ್ಟನಾಗಿದ್ದ ಹಾಲಪ್ಪನಾಯಕನನ್ನು ಬ್ರಿಟಿಷ್ ಸರ್ವೇಕ್ಷಣಾಧಿಕಾರಿ ಬುಕನನ್ ೧೮೦೧ರ ಮೇ ೬ರಂದು ಭೇಟಿಯಾಗಿದ್ದನು. ಹಾಲಪ್ಪನಾಯಕನು ಸೆರೆಯಿಂದ ಬಿಡುಗಡೆಯಾದ ನಂತರ ಅವನಿಗೆ ನ್ಯಾಯಯುತವಾಗಿ ಸಲ್ಲಬೇಕಾಗಿದ್ದ ರಾಜ್ಯಾಧಿಕಾರ ಹಾಗಲವಾಡಿಗೆ ಹೋಗಿ ಅನೇಕ ವರ್ಷ ಅಲ್ಲೇ ಇದ್ದನು. ನಂತರ ಮತ್ತೋಡಿಗೆ ಬರುವಷ್ಟರಲ್ಲಿ ಆತನ ಅರಮನೆ ಹಾಳಾಗಿತ್ತು. ಅದರ ಒಂದು ಭಾಗವನ್ನು ಅಮಲ್ದಾರ ಬಳಸಿಕೊಳ್ಳುತ್ತಿದ್ದನು. ಹೀಗಾಗಿ ಹಾಲಪ್ಪನಾಯಕ ಗುಡಿಸಲಿನಲ್ಲಿ ವಾಸಮಾಡಬೇಕಾದ ಅನಿವಾರ್ಯತೆಯುಂಟಾಯಿತು.

ಈ ಮನೆತನದ ವಂಶಸ್ಥರು ಇಂದು ಮತ್ತೋಡು ಹತ್ತಿರದ ಅರಸಿನ ತೋಟದಲ್ಲಿ ನೆಲೆಸಿದ್ದಾರೆ. ರಾಜಕೀಯದಲ್ಲಿ ಅಷ್ಟೇನೂ ಪ್ರಬಲ ಹುದ್ದೆಗಳನ್ನು ಪಡೆದಿರುವುದಿಲ್ಲ. ಪಿ.ಜಿ. ಮಲ್ಲಿಕಾರ್ಜುನ ಅವರು ಮಾತ್ರ ಗ್ರಾಮಪಂಚಾಯಿತಿಯ ಸದಸ್ಯರಾಗಿದ್ದರು. ಇವರ ಮನೆತನಕ್ಕೆ ಸೇರಿದ್ದ ಕೆಲವರು ಉನ್ನತ ಹುದ್ದೆಯಲ್ಲಿದ್ದರು. ದಿ. ಹಾಲಪ್ಪನಾಯಕ ಪಾಳೈಗಾರ್ ಐ.ಎ.ಎಸ್.ಅಧಿಕಾರಿಗಳು ಹಾಗೂ ಮೈಸೂರು ಕೃಷ್ಣರಾಜೇಂದ್ರ ಮಿಲ್ಸ್‌ನ ಮ್ಯಾನೆಜಿಂಗ್ ಡೈರೆಕ್ಟರ್‌ರಾಗಿದ್ದರು. ದಿ. ಸಿದ್ದರಾಮಣ್ಣನಾಯಕ ಪಾಳೈಗಾರ್ ಕೆ.ಎ.ಎಸ್.ಅಧಿಕಾರಿಯಾಗಿದ್ದರು. ದೊಡ್ಡಣ್ಣ ಪಾಳೈಗಾರ್‌ರವರು ಚಲನಚಿತ್ರದ ನಿರ್ದೇಶಕರಾಗಿದ್ದರು. ಈಗ ಇವರುಗಳ ವಂಶಜರೂ ಸಹ ಉನ್ನತ ಹುದ್ದೆಯಲ್ಲಿದ್ದು ವಿದೇಶಗಳಲ್ಲಿ ಕೆಲವರು ನೆಲೆಸಿದ್ದು ಉನ್ನತ ಹುದ್ದೆಗಳನ್ನು ಹೊಂದಿದ್ದಾರೆ.

ಅರಸಿನ ತೋಟದಲ್ಲಿದ್ದವರು ಕೃಷಿಕರಾಗಿ ಜೀವನವನ್ನು ಸಾಗಿಸುತ್ತಿದ್ದಾರೆ. ರಾಜಕೀಯ ಧುರೀಣರೊಂದಿಗೆ ಸಂಬಂಧವನ್ನು ಈ ಮನೆತನದವರು ಹೊಂದಿದ್ದಾರೆ. ಊರಿನ ಹಾಗೂ ಸುತ್ತಲಿನ ಗ್ರಾಮದ ಜನರು ಇವರನ್ನು ಪಾಳೆಯಗಾರರೆಂದು ಕರೆಯುತ್ತಾ ಗೌರವವನ್ನು ಸೂಚಿಸುತ್ತಾರೆ. ಅನೇಕ ಹಬ್ಬ ಹರಿದಿನ ಜಾತ್ರೆಗಳಲ್ಲಿ ಇವರು ಜನರೊಂದಿಗೆ ಭಾಗವಹಿಸುತ್ತಾರೆ ಹಾಗೂ ಜನರ ಪ್ರೀತಿಗೆ ಪಾತ್ರರಾಗಿದ್ದಾರೆ.

## ೨.೧೨ ಹರತಿ ನಾಯಕ ಅರಸರು

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನಲ್ಲಿರುವ ಹರ್ತಿಕೋಟೆಯಲ್ಲಿ ಹರತಿ ನಾಯಕರು ಆಳ್ವಿಕೆ ಮಾಡಿದ್ದಾರೆ. ಈ ಮನೆತನದವರ ಮೂಲಸ್ಥಳ ಬಿಜಾಪುರ ಅಥವಾ ವಿಜಯಪುರ ಪ್ರದೇಶದ ಹರತಿ-ಸಾರವಾಡ ಎಂದು ಹೇಳುತ್ತಾರೆ. ಇವರು ನಿಡುಗಲ್ಲು, ದೊಡ್ಡೇರಿ, ರತ್ನಗಿರಿ, ಐಮಂಗಲಗಳನ್ನು ತಮ್ಮ ಕೇಂದ್ರಗಳನ್ನಾಗಿಸಿಕೊಂಡು ಆಳ್ವಿಕೆ ನಡೆಸಿದ್ದಾರೆ.[೨೨೭] ಈ ನಾಯಕರು ತಮ್ಮ ಮೂಲದೇವತೆ 'ಹರತಿ'ಯಾಗಿರುವುದರಿಂದ 'ಹರತಿ ನಾಯಕ'ರೆಂತಲೂ 'ಹಾರತೇಯರು' ಎಂತಲೂ ಕರೆದುಕೊಂಡಿದ್ದಾರೆ. ಶಾಸನಗಳು ಇವರನ್ನು 'ಹರತಿ ಐಮಂಗಲ ನಾಯಕರು', 'ಹರತಿ-ನಿಡಗಲ್ ನಾಯಕರು' ಎಂದು ಕರೆದಿವೆ.[೨] ಈ ಮನೆತನದಲ್ಲಿ ೪೫ ಮಂದಿ ನಾಯಕರು ಸುಮಾರು ೨-೩ ಶತಮಾನಗಳ ಕಾಲ ಆಳ್ವಿಕೆ ಮಾಡಿದ್ದಾರೆ.

ಹರತಿ ಮನೆತನದ ಸ್ಥಾಪಕ ತಿಪ್ಪರಾಜ ಈತ ಕ್ರಿ.ಶ.೧೩೪೦ ರಿಂದ ೧೩೫೫ರವರೆಗೆ ಆಳ್ವಿಕೆ ನಡೆಸಿದ್ದಾನೆ. ಈತ ವಿಜಯನಗರದ ಸಂಗಮ ಮನೆತನದ ಹರಿಹರ ಮತ್ತು ಬುಕ್ಕರಾಯರ ಸಮಕಾಲೀನನಾಗಿದ್ದು, ಅವರ ಸೈನ್ಯದಲ್ಲಿ ದಳಪತಿಯಾಗಿದ್ದನು. ನಿಡುಗಲ್ಲಿನ ದುರ್ಗಾಧಿಪತಿ, ಚಿಕ್ಕಬೊಮ್ಮಯ್ಯ ನಾಯಕನನ್ನು ದ್ವಂದ್ವ ಯುದ್ಧದಲ್ಲಿ ಶಿರಚ್ಛೇದನ ಮಾಡಿದ್ದಕ್ಕಾಗಿ ಮೆಚ್ಚಿದ ಹರಿಹರನು ತಿಪ್ಪರಾಜನಿಗೆ 'ಹೊಳಕಲ್ಲು ಬೊಂಮನ ಶಿರತ್ಸೇದನಂ' ಎಂಬ ಬಿರುದನ್ನು ನೀಡಿದನು.[೨೯] ಅದೇ ರೀತಿ ಉಚ್ಚಂಗಿದುರ್ಗವನ್ನು ಗೆದ್ದು, ಸೊಸೆಮಾರನ್ನು ವಶಪಡಿಸಿಕೊಂಡು ಬುಕ್ಕರಾಯನಿಂದ 'ಹೊಯ್ಸಳದಳ ವಿಭಾಡಂ' ಎಂಬ ಬಿರುದನ್ನು ಪಡೆದನು. ಕಠಾರಿ ಕಾಳಗದಲ್ಲಿ ಮಲಿಕ್ ಬಹದ್ದೂರ್‌ನೆಂಬ ತುರ್ಕಿವೀರನನ್ನು ಸೋಲಿಸಿ 'ಭಾದ್ರಮಲುಕ-ಸಪ್ತಾಂಗಹರಣಂ' ಮತ್ತು 'ಕಠಾರಿರಾಯಂ', ಬಹಮನಿಯವರೊಡನೆ ನಡೆಸಿದ ಕಾಳಗದಲ್ಲಿ ಅಸಂಖ್ಯಾತ ಸೈನಿಕರ ತಲೆಗಳನ್ನು ಕಡಿದುರುಳಿಸಿದ್ದರಿಂದ 'ಮೆಸನತಲೆಗುಂಡುಗಂಡಂ' ಬಿರುದುಗಳನ್ನು ಬುಕ್ಕರಾಯನಿಂದ ಪಡೆದುಕೊಂಡ ತಿಪ್ಪರಾಜನಿಗೆ ವೇದಾವತಿಯ ತೀರದ ಭೂಭಾಗವೆಲ್ಲ ಜಹಗೀರಾಗಿ ದೊರೆಯಿತು.[೩೦] ತಿಪ್ಪರಾಜ ತನ್ನ ಪೂರ್ವಿಕರ ಹೆಸರಿನಲ್ಲಿ ಹರ್ತಿಕೋಟೆಯನ್ನು ನಿರ್ಮಿಸಿದನು. ಅದರಂತೆ ಮಧುಗಿರಿ ಸಮೀಪದ ಚಂದಪ್ಪನ ದೊಡ್ಡೇರಿ, ಮಡಕಶಿರಾ ತಾಲ್ಲೂಕಿನ ರತ್ನಗಿರಿ ಮತ್ತು ಚಂದ್ರಗಿರಿಯನ್ನು ತನ್ನ ತಂದೆ ತಾಯಿಯರ ಹೆಸರಿನಲ್ಲಿ ಸ್ಥಾಪಿಸಿದನು.

ನಂತರದಲ್ಲಿ ತಿಪ್ಪರಾಜನ ಮಗ ಕಾಮಯ್ಯನಾಯಕ ಆಳ್ವಿಕೆ ನಡೆಸಿದನು. ಈತನಿಗೆ ಅಬ್ಬಯ್ಯನಾಯಕ ಮತ್ತು ಕೋಟೆನಾಯಕನೆಂಬ ಇಬ್ಬರು ಮಕ್ಕಳು. ಹಿರಿಯ ಮಗ ಅಬ್ಬಯ್ಯನಾಯಕ ಇಮ್ಮಡಿ ಹರಿಹರನ (ಕ್ರಿ.ಶ.೧೩೭೭-೧೪೦೪) ಸಮಕಾಲೀನ. ಪಾವಗಡದ ೫ನೇ ಶಾಸನ ಈತನನ್ನು 'ಶ್ರೀ ಮದ್ವೈಭವನಬ್ಬನಾಯಕ ಮಹಾಲೀರಾ ಸ್ಪುರದ್ವೀಕ್ಷಣೋದ್ಧಾಮ ಜ್ಯೋತಿ ಮಹೇಶನ್' ಎಂದು ಹೇಳುತ್ತದೆ. ಈತ ಕೋಟೆಕೆರೆ ಎಂಬಲ್ಲಿ ನೆಲೆವೀಡನ್ನು ಹೊಂದಿದ್ದ. ಹೀಗಾಗಿ ಕೋಟೆಕೆರೆಯ ಅಬ್ಬಯ್ಯನಾಯಕನೆಂದು ಕರೆಯಲಾಗುತ್ತಿತ್ತು. ಈತನ ಹಿರಿಯ ಮಗ ಪಾಲನಾಯಕ ಕೋಟೆಕೆರೆ ಮತ್ತು ಹರತಿಕೋಟೆಗಳನ್ನು ಎರಡನೇ ಮತ್ತು ಮೂರನೇ ಮಕ್ಕಳಾದ ಕಾಮನಾಯಕ ಮತ್ತು ಬೊಂಮನಾಯಕರು ಹರತಿ, ಸಾರವಾಡ, ಐಮಂಗಲದ ಸುತ್ತಲಿನ ಪ್ರದೇಶಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಬೊಮ್ಮನಾಯಕ ಇಮ್ಮಡಿ ಹರಿಹರನ ಅಪ್ಪಣೆ ಪಡೆದು ಚಳ್ಳಕೆರೆ ತಾಲೂಕಿನ ಗೋಸಿಕೆರೆ, ತಳಕು ಮತ್ತು ದೊಡ್ಡೇರಿಗಳನ್ನು ಸ್ಥಾಪಿಸಿದ.

ತರುವಾಯ ಪಾಲನಾಯಕನ ಮಗ ಬೊಮ್ಮೆಯನಾಯಕನು ಆಳ್ವಿಕೆ ನಡೆಸಿದನು. ಈತನ ಮಗ ಎರಬಾಪೆಯನಾಯಕನು ತನ್ನ ಹೆಸರಿನಲ್ಲಿ ಯರಬಾಪೆನಹಳ್ಳಿ ಅಥವಾ ಇಂದಿನ ಯರಬಳ್ಳಿಯನ್ನು ಸ್ಥಾಪಿಸಿದ. ಎರಬಾಪೆಯ ನಾಯಕ ಮತ್ತು ಅಂಮಮಾಂಬಾ ದಂಪತಿಗಳ ಮಗನೇ ಚಿಕ್ಕ ತಿಪ್ಪರಾಜ. ಈತ ನಿಡಗಲ್ಲು ದುರ್ಗಕ್ಕೆ ಅಧಿಪತಿಯಾಗಿದ್ದು, ವಿಜಯನಗರದ ಸಾಳುವ ನರಸಿಂಹ(ಕ್ರಿ.ಶ.೧೪೮೫-೧೪೯೧)ನ ಸಮಕಾಲೀನ. ಈತ ತನ್ನ ಮೃತ ಪತ್ನಿಯ ಸ್ಮರಣೆಗಾಗಿ ನಿಡಗಲ್ಲು ಬೆಟ್ಟದ ಮೇಲೆ ಕೆರೆಯನ್ನು

ಕಟ್ಟಿಸಿ ಸೀಗಲ ಗುಡ್ಡದಲ್ಲಿ ಅಗ್ರಹಾರ ನಿರ್ಮಿಸಿ, ಲಕ್ಷ್ಮಣೇಶ್ವರ ದೇವಾಲಯ ನಿರ್ಮಿಸಿದ. ಈತನಿಗೆ 'ಸಂಮಟಿ ನಾರಾಯಣಂ' ಎಂಬ ಬಿರುದು ಇತ್ತು. ಈತನು ಅತ್ಯಂತ ಪ್ರಸಿದ್ಧ ಅರಸನೆಂದು ಇತಿಹಾಸ ಹೇಳುತ್ತದೆ.

ಚಿಕ್ಕ ತಿಪ್ಪರಾಜನ ಮಗ ಹರ್ತೆಪ್ಪನಾಯಕ(ಕ್ರಿ.ಶ.೧೪೬೦) ಮದಕರಿನಾಯಕನ ಮಗಳು ರಂಗೂಬಾಯಿ ಯನ್ನು ಮದುವೆಯಾಗಿದ್ದರಿಂದ ಬಳುವಳಿಯಾಗಿ ಕಸ್ತೂರಿ ರಂಗಪ್ಪನಾಯಕನ ಕೋಟೆಯನ್ನು ಪಡೆದು ಕೊಂಡಿದ್ದ. ಇದನ್ನು ನವೀಕರಿಸಿ ತನ್ನ ಹೆಸರಿನಲ್ಲಿ 'ಹರತಿಕೋಟೆ'ಯೆಂದು ಹೆಸರಿಟ್ಟನು. ನಂತರ ಜಕ್ಕನಾಯಕ ನಿಡುಗಲ್ಲನ್ನು ಆಳಿದ. ಕ್ರಿ.ಶ.೧೫೫೪ ರಿಂದ ೧೫೬೪ರವರೆಗೆ ಈತನ ಮಗ ತಿಂಮಣನಾಯಕ ನಿಡುಗಲ್ಲನಾಳಿದ ಕುರಿತು ಶಾಸನಗಳು ವಿವರಣೆ ನೀಡುತ್ತವೆ.[೨೧] ಈತನಿಗೆ ಶ್ರೀಮನ್ ಮಹಾನಾಯ ಕಾಚಾರ್ಯ, ಭಾಷೆಗೆತಪ್ಪದರಾಯರಗಂಡ, ಮರೆಹೊಕ್ಕರೆಕಾವನಿಡಗಲ್ಲ ತಿಂಮಣನಾಯಕನೆಂಬ ಬಿರುದುಗಳಿದ್ದವು.

ಕೋಟೆಕೆರೆ ಅಬ್ಬೆನಾಯಕನ ಎರಡನೆಯ ಮಗನಾದ ಕಾಮನಾಯಕನ ವಂಶದವರು. ಬಹಳ ದಿನಗಳ ಕಾಲ ಹರತಿಕೋಟೆಯಲ್ಲಿ ನೆಲೆಸಿ ಆಡಳಿತ ನೋಡಿಕೊಳ್ಳುತ್ತಿದ್ದರು. ನಂತರ ಈತನ ಮಗ, ಮೊಮ್ಮಕ್ಕಳು, ಮರಿಮಕ್ಕಳು, ಗಡ್ಡದ ಬ್ರಹ್ಮನಾಯಕ, ಈತನ ಮಗ ಹೊಟ್ಟೆಣ್ಣನಾಯಕ. ಈತನ ಮಗ ಇಮ್ಮಡಿ ಬೀರಣ್ಣನಾಯಕ, ಈತನ ಮಗ ಈಶ್ವರದೇವನಾಯಕ, ಈತನ ಮಗ ಬಸದಿನಾಯಕ, ಈತನ ಮಗ ಮುಮ್ಮಡಿ ಬ್ರಹ್ಮನಾಯಕ, ಈತನ ಮಗ ಹರತಿದೊರೆ ಈಶ್ವರ ದೂಳಪ್ಪನಾಯಕ, ನಂತರ ದುಂಡಪ್ಪನಾಯಕ, ಲಕ್ಷ್ಮೀಪತಿನಾಯಕರು. ಲಕ್ಷ್ಮೀಪತಿನಾಯಕ ವಿಜಯನಗರದ ಸದಾಶಿವರಾಯನನ್ನು ತಿರುಮಲರಾಯ ಬಂಧಿಸಿ ಸಿಂಹಾಸನವನ್ನು ಏರಿದ ಸಂದರ್ಭದಲ್ಲಿ ಆತನ ಕಾರ್ಯಕರ್ತನಾಗಿದ್ದ. ಸೀರ್ಯ, ಅಗಳೆ, ದೊಡ್ಡೇರಿಗಳನ್ನು ಚೈವಪ್ಪನಾಯಕನ ಅಧೀನನಾಗಿ ಆಳ್ವಿಕೆ ನಡೆಸುತ್ತಿದ್ದನು. ತನ್ನ ಮಗ ರಂಗಪ್ಪನಾಯಕನಿಗೆ ರತ್ನಗಿರಿ ಮತ್ತು ಅಗಳೆ ಸ್ಥಳಗಳನ್ನೂ ಎರಡನೆಯ ಮಗ ಚಿಕ್ಕರಂಗಪ್ಪನಾಯಕನಿಗೆ ಹರತಿ ಸ್ಥಳದ ಆಳ್ವಿಕೆ ನೀಡಿದನು.

ಶ್ರೀರಂಗರಾಯ ಮತ್ತು ಎರಡನೆಯ ವೆಂಕಟಪತಿಯ ಕಾಲದಲ್ಲಿ ಹಿರಿಯ ರಂಗಪ್ಪನಾಯಕನು ಅಮರನಾಯಕನಾಗಿದ್ದ. ತನ್ನನ್ನು ಯನುಮಲ ವಂಶದ ವಾಮ್ಲಿಕಾ ಗೋತ್ರದ ಬೇಡಜನಾಂಗ ನಾಯಕನೆಂದು ಕರೆದುಕೊಂಡಿರುವನು. ಶ್ರೀ ವೆಂಕಟೇಶ್ವರ ಸಮುದ್ರವೆಂದು ತನ್ನ ಅಧೀನದ ಅಗಳೆ ಹಾಗೂ ಹರತಿಕೋಟೆ ಸೀಮೆಯ ದೊಡ್ಡೇರಿಗೆ ಹೆಸರಿಟ್ಟನು. ಇವನ ತಮ್ಮನಾದ ಚಿಕ್ಕರಂಗಪ್ಪನಾಯಕ ಹರತಿಕೋಟೆಯಲ್ಲಿ ಆಳುತ್ತಿದ್ದು, ಪ್ರಭುವಾದ ವೆಂಕಟಪತಿಯ ಬಗ್ಗೆ ನಿಷ್ಠೆ ತೋರಲು ತನ್ನ ಗುರುಗಳಾದ ಹೊಟ್ಟೆಯೀಶ್ವರಯ್ಯ ನವರ ಸಿಂಹಾಸನ ಮಠಕ್ಕೆ ಹೆಮಡಿಹಾಳು ಗ್ರಾಮವನ್ನು ನೀಡುತ್ತಾನೆ. ಹಾಗೆಯೇ ಕಾಳಾಮುಖಿ ಪೀಠದ

ನಾಗಿವೊಡೆಯರಿಗೆ ೧೬೦೪ರಲ್ಲಿ ಹಿರಿಯ ರಂಗಪ್ಪನಾಯಕನ ಮಗ ಇಮ್ಮಡಿ ರಂಗಪ್ಪನಾಯಕ ತೊಣಸಗೊಂಡನಹಳ್ಳಿ ಮತ್ತು ರಾಚಹಳ್ಳಿಗಳನ್ನು ದಾನವಾಗಿ ನೀಡಿದನಲ್ಲದೆ ಅಗಳೆ ಸೀಮೆಯೊಳಗಳ ಮದುವಿಡಿ ಸ್ಥಳಕ್ಕೆ ಸಲ್ಲುವ ರಾವಿಡಿ ಎಂಬ ಗ್ರಾಮವನ್ನು ಮಕರ ಸಂಕ್ರಾಂತಿಯ ಪರ್ವಕಾಲದಲ್ಲಿ ಉಮಾಪತಿ ಅರಸು ಬ್ರಾಹ್ಮಣನಿಗೆ ದಾನ ಮಾಡಿದನು.[೫೨]

ಇಮ್ಮಡಿ ರಂಗಪ್ಪನಾಯಕನ ಮಗ ಮುಮ್ಮಡಿ ರಂಗಪ್ಪನಾಯಕ ಕಾಳಾಮುಖ ಗುರುಗಳಾದ ಗುರುಕಲ್ಲಪ್ಪ ದೇವರಿಗೆ ೧೬೨೬ರಲ್ಲಿ ಹೊಳಕಲ್ಲು ಗ್ರಾಮವನ್ನು ದಾನ ಮಾಡುತ್ತಾನೆ. ನಂತರ ಕೋಟೆಕೆರೆ ಅಬ್ಬಯ್ಯನಾಯಕನ ೨ನೇ ಮಗ ಕಾಮಿನಾಯಕನ ಸಂತತಿ ಕೊನೆಗೊಂಡು ಕೋಟೆಕೆರೆಯ ಅಬ್ಬಯ್ಯನಾಯಕನ ೩ನೇ ಮಗ ಬೊಮ್ಮನಾಯಕನು ಚಳ್ಳಕೆರೆ, ಪರಶುರಾಮಪುರ, ತಳುಕು, ದೊಡ್ಡೇರಿ ಮತ್ತು ನಿಡುಗಲ್ಲುಗಳಲ್ಲಿ ಆಳಿದನು.

ವಿಜಯನಗರದ ಅರಸರ ಕಾಲದಲ್ಲಿ ಹಿರೇ ಒಡೆಯನಿಂದ ಸಿರಾ ಪಾಳೆಯಗಾರ ಮನೆತನ ಪ್ರಾರಂಭವಾಯಿತು. ಆಗ ಮಡಕಪಲ್ಲೆ ಎಂದು ಕರೆಯಿಸಿಕೊಂಡಿದ್ದ ಊರನ್ನು ಮಡಕಶಿರ್ಯ ಎಂದು ಹೆಸರಿಸಿದರೆಂದು ಅನಂತಪುರ ಜಿಲ್ಲಾ ಗೆಜೆಟಿಯರ್ ಹೇಳುತ್ತದೆ. ೧೨ ಹಳ್ಳಿಗಳು ಈ ಮನೆತನದ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿಸುತ್ತದೆ. ಕ್ರಿ.ಶ.೧೫೨೧ರ ಸುಮಾರಿನಲ್ಲಿ ಸೀರ್ಯದ ಕೋಟೆಯನ್ನು ಕರೀರಂಗಪ್ಪನ ಕಾಲದಲ್ಲಿ ಕಟ್ಟಲಾಯಿತು. ಇದು ಹಿರೇ ಒಡೆಯನ ಸಂತತಿಯವರಿಗೆ ರಾಜಧಾನಿಯಾಯಿತು. ಕ್ರಿ.ಶ. ೧೬೩೮ರಲ್ಲಿ ಬಿಜಾಪುರದ ರಣದುಲ್ಲಾಖಾನ್ ಮತ್ತು ಅಫಜಲ್ಲಾಖ್ಖಾನ್ ಸೇನಾಪತಿಗಳು ಶಿರಾವನ್ನು ಮುತ್ತಿ ಸರ್ಜಾರಂಗಪ್ಪ ನಾಯಕನನ್ನು ಕೊಲ್ಲುತ್ತಾರೆ. ನಂತರ ಸಿರಾ ಪಾಳೆಯಗಾರರ ವಂಶ ೨ ಶಾಖೆಗಳಾಗಿ ಮಿಡಿಗೇಸಿಯಲ್ಲಿ ಮತ್ತು ರತ್ನಗಿರಿಯಲ್ಲಿ ನೆಲೆಸುತ್ತಾರೆ.

ಗುಮ್ಮಳ್ಳಿ ಕದನದ ವಿವರಣೆಯಂತೆ ಪೂವಲ ಕೆಂಗಣ್ಣ ನಾಯಕ ಹಾಗೂ ಸೀರಾದ ರಂಗಪ್ಪನಾಯಕರು ಅಳಿಯ ಮಾವಂದಿರು. ರಂಗಪ್ಪ ತನ್ನ ತಂಗಿಯಿಂದ ಕೆಂಗಣ್ಣನಿಗೆ ಅವಮಾನ ಮಾಡಿಸಿದಾಗ ಕೆಂಗಣ್ಣ ಬಿಜಾಪುರದವರಿಂದ ಶಿರಾಕೋಟೆಯನ್ನು ಮುತ್ತಿಸಿ, ರಂಗಪ್ಪನನ್ನು ದುರಂತಕ್ಕೆ ತಳ್ಳುತ್ತಾನೆ.

ರತ್ನಗಿರಿಯನ್ನು ಮೊದಲು ಲಕ್ಷ್ಮೀಪತಿನಾಯಕನ ಹಿರಿಯಮಗ ಹಿರಿಯರಂಗಪ್ಪನಾಯಕನಿಗೆ ಕೊಡಲಾಗಿತ್ತಾದರೂ, ನಂತರದಲ್ಲಿ ಇಮ್ಮಡಿ ಮತ್ತು ಮುಮ್ಮಡಿ ರಂಗಪ್ಪನಾಯಕರ ಅಧೀನದಲ್ಲಿತ್ತು. ಕ್ರಿ.ಶ.೧೬೨೮ರ ಹೊತ್ತಿಗೆ 'ಹರತಿ ಸಂಮೇಟ' ಎಂಬ ವಿಶಿಷ್ಟ ಮನೆ ಕಸ್ತೂರಿ ರಂಗಪ್ಪನ ವಶವಾಗುತ್ತದೆ. ಆಗ ರತ್ನಗಿರಿ ಪಾಳೆಯಗಾರರು ತಮ್ಮ ಮೂಲ ಬೆಡಗು, ಹಾರಿತಿಗೋತ್ರ ಎನುಮಲವಂಶವನ್ನು ಕೈಬಿಟ್ಟು 'ಆತ್ರೇಯಸ ಗೋತ್ರ ಆಪಸ್ತಂಭ ಸೂತ್ರ ಯಜುಶ್ಶಾಖಾಧ್ಯಾಯಿ ಮಹಾಮಂಡಲೇಶ್ವರರೆಂದು' ಕರೆದುಕೊಳ್ಳುತ್ತಾರೆ. ಈ ರೀತಿ ತಮ್ಮ ಗೋತ್ರವನ್ನು ಬದಲಾಯಿಸಲು, ವಿಜಯನಗರದ ಅಳಿಯ

ರಾಮರಾಯನ ಪ್ರಭಾವ ಕಾರಣ. ಏಕೆಂದರೆ ಆತನಿಗೆ ನಿಷ್ಠರಾಗಿದ್ದ ಇವರು ಆತನ ಗೋತ್ರವನ್ನೇ ಅನುಕರಣೆ ಮಾಡಿದರು.

ರತ್ನಗಿರಿಯ ಕೃಷ್ಣಪ್ಪ ರಾಜನು ಮೈಸೂರಿನ ರಣಧೀರ ಕಂಠೀರವ ನರಸರಾಜ ಒಡೆಯರ ಆಕ್ರಮಣಕ್ಕೆ, ಪುನಃ ದೊಡ್ಡ ಕೃಷ್ಣರಾಜ ಒಡೆಯರ ಧಾಳಿಗೆ ಹಾಗೂ ಕ್ರಿ.ಶ.೧೭೫೨ರಲ್ಲಿ ಪೇಶ್ವೆ ನಾನಾ ಸಾಹೇಬ ಬಾಲಾಜಿರಾವ್ ಆಕ್ರಮಣಕ್ಕೆ ತುತ್ತಾಗುತ್ತಾನೆ. ಆಗ ರತ್ನಗಿರಿಯ ಸುತ್ತಮುತ್ತಲ ಪ್ರದೇಶವನ್ನು ಪೇಶ್ವೆ ವಶಪಡಿಸಿಕೊಂಡನು.[೨೩೨]

ನಂತರ ಬಿಜಾಪುರದ ಸೇನೆ ಧಾಳಿ ಮಾಡಿದ ನಂತರ ಹರತಿಯ ಪಾಳೆಯಗಾರರು ತಮ್ಮ ಬಯಲು ಸೀಮೆಯ ಹರತಿ, ದೊಡ್ಡೇರಿ, ಹಿರಿಯೂರು, ಐಮಂಗಲ ಪಾಳೆಯಪಟ್ಟುಗಳನ್ನು ನೆಪಮಾತ್ರಕ್ಕೆ ಉಳಿಸಿಕೊಳ್ಳುತ್ತಾರೆ. ನಿಡುಗಲ್ಲುದುರ್ಗವನ್ನು ತಮ್ಮ ಆಡಳಿತದ ಕೇಂದ್ರ ಮಾಡಿಕೊಂಡಿದ್ದರೆನ್ನುವುದು, ಅವರ ಕೆಲವು ಶಾಸನಗಳಲ್ಲಿ ಹರತಿ, ನಿಡುಗಲ್ ನಾಯಕರೆಂದು ಕರೆದಿರಲು ಕಾರಣವಿರಬಹುದಾಗಿದೆ.

೧೭೬೧ರಲ್ಲಿ ಹೈದಾರಾಲಿಯು ದಂಡೆತ್ತಿ ಬಂದಾಗ, ತಿಮ್ಮಣ್ಣನಾಯಕ ಆತನಿಗೆ ಸೋತು ೭೦೦೦ ಪಗೋಡಗಳನ್ನು, ೩೦೦ ಜನ ಸೈನಿಕರನ್ನು ಕಾಣಿಕೆಯಾಗಿ ಕೊಡಲು ಒಪ್ಪಿ ಮೈಸೂರಿಗೆ ಅಧೀನನಾಗುತ್ತಾನೆ.[೨೩೪] ಟಿಪ್ಪುವಿನ ಜೊತೆ ತಿಮ್ಮಣ್ಣನಾಯಕ ಮಂಗಳೂರಿನ ಮೇಲೆ ದಂಡೆತ್ತಿ ಹೊರಟಾಗ ಕಾಯಿಲೆಯಾಗುತ್ತದೆ. ಆಗ ಟಿಪ್ಪುವಿನ ಬಲತ್ಕಾರಕ್ಕೆ ಮಣಿದು ತಿಮ್ಮಣ್ಣನಾಯಕ ಮಗ ಹೊಟ್ಟೆಣ್ಣನಾಯಕನಿಗೆ ರಾಜ್ಯವನ್ನು ಚಿತ್ರದುರ್ಗದ ಪಾಳೆಯಗಾರರಿಗೆ ಒಪ್ಪಿಸುವಂತೆ ಪತ್ರ ಬರೆಯುತ್ತಾನೆ. ತಕ್ಷಣವೇ ಟಿಪ್ಪು ಹರತಿ ಪಾಳೆಯಗಾರರ ರಾಜ್ಯವನ್ನು ವಶಪಡಿಸಿಕೊಳ್ಳುತ್ತಾನೆ.[೨೩೫] ಹೊಟ್ಟೆಣ್ಣನಾಯಕನನ್ನು ಆತನ ಸಹೋದರರನ್ನೂ ಬಂಧಿಸಿ, ಚಿತ್ರದುರ್ಗ ನಂತರ ಶ್ರೀರಂಗಪಟ್ಟಣಕ್ಕೆ ಕರೆದೊಯ್ದು ಕೊಲ್ಲಿಸಿದಂತೆ ತಿಳಿಯುತ್ತದೆ. ಅಲ್ಲದೆ ಹರತಿ-ನಿಡುಗಲ್ಲು ಪಾಳೆಯಗಾರಿಕೆ ಕೊನೆಯಾಗುತ್ತದೆ.

ಹೀಗೆ ಹರತಿ ನಾಯಕರು ಸುಮಾರು ೪೬೦ ವರುಷಗಳ ಕಾಲ ವಿಜಯನಗರದ ಅರಸರು ಹಾಗೂ ಅರಸ ಸಾಮಂತರ ಅಧೀನದಲ್ಲಿ ಸೇನಾಧಿಕಾರಿಗಳಾಗಿ, ಜಹಗೀರುದಾರರಾಗಿ, ನಂತರ ಸ್ವತಂತ್ರರಾಗಿ, ಹರತಿ, ರತ್ನಗಿರಿ, ನಿಡುಗಲ್ಲು ಮಿಡಗೇಶಿಗಳಲ್ಲಿ ದೊರೆಗಳಾಗಿ ಉನ್ನತ ಸ್ಥಾನಮಾನಕ್ಕೇರಿದವರು. ವಿಜಯನಗರದ ಪತನಾನಂತರದಲ್ಲಿ ಕರ್ನಾಟಕ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರೆಸಿಕೊಂಡು ಬಂದರು. ಟಿಪ್ಪುಸುಲ್ತಾನನ ಪತನದವರೆಗೂ ಕರ್ನಾಟಕ ಇತಿಹಾಸದಲ್ಲಿ ಉಲ್ಲೇಖಾರ್ಹ ಸ್ಥಾನ ಪಡೆದಿದ್ದರು.

ಇವರ ವಂಶಸ್ಥರು ಇಂದು ಹರತಿಕೋಟೆಯಲ್ಲಿ ನೆಲೆಸಿರುವುದಿಲ್ಲ. ರತ್ನಗಿರಿಯಲ್ಲಿ ವಾಸವಾಗಿದ್ದಾರೆ. ಇವರು ಹರ್ತಿಕೋಟೆಯ ವೀರಭದ್ರಸ್ವಾಮಿಯ ರಥೋತ್ಸವಕ್ಕೆ ಬಂದು ಹೋಗುತ್ತಾರೆ. ಇವರನ್ನು ಹರತಿ

ಗ್ರಾಮದ ಗಣ್ಯರು ಪ್ರತಿವರ್ಷ ಕರೆಯಿಸುತ್ತಾರೆ. ಇವರು ರಾಜಕೀಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿಲ್ಲ. ಆದರೆ ಆರ್ಥಿಕವಾಗಿ ಸಬಲರಾಗಿದ್ದಾರೆ.[೩೬]

**ಟಿಪ್ಪಣಿಗಳು**

೧. ರಂಗರಾಜ ವನದುರ್ಗ, *ಬೇಡ ಜನಾಂಗದ ಉಗಮ ಹಾಗೂ ವಿಕಾಸ,* ಹರ್ತಿಕೋಟೆ ವೀರೇಂದ್ರಸಿಂಹ(ಸಂ), ವಾಲ್ಮೀಕಿ ಕಿರಣ, ೧೯೯೮, ಪು.೫೯.

೨. ಅಬ್ದುಲ್ ಸತ್ತಾರ್ ಪಿ., ತರೀಕೆರೆ ಪಾಳೆಯಗಾರರು, ೧೯೯೭, ಪು.೧೧-೧೨.

೩. ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ೧೯೬೭, ಪು.೬೦.

೪. ಅದೇ, ಪು.೬೩.

೫. Ayyar L.K., The Mysore Tribes and Caste, 1988, Pp.200

೬. ವೀಣಾ ಎಂ.ಪಿ., ಮನೆ, ಸಮಾಜ ಮತ್ತು ಸಂಸ್ಕೃತಿ, ೨೦೦೦, ಪು.೧೩.

೭. ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ತೇಜಸ್ವಿ ಕಟ್ಟಿಮನಿ(ಸಂ), ಘಟ್ಟಿಹೊಸಹಳ್ಳಿ ಘಟ್ಟಿಗ, ಮಲೆಸಿದ್ಧಪ್ಪ ಅವರ ಸಂಸ್ಮರಣ ಗ್ರಂಥ, ೨೦೦೨, ಪು.೩೬.

೮. ಅದೇ, ಪು.೩೬

೯. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ್ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೫೭೫.

೧೦. ನರಸಿಂಹಮೂರ್ತಿಎಂ.ವಿ.(ಕಅನು.ಪ್ರಸಂ), ದೆಹಲಿ ಸುಲ್ತಾನರ ಅಧಿಪತ್ಯ, ೨೦೦೧, ಪು.೯೩.

೧೧. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ್(ಸಂ), ಪೂರ್ವೋಕ್ತ ಪು.೫೭೮.

೧೨. ನರಸಿಂಹಮೂರ್ತಿ ಎಂ.ವಿ., ಪೂರ್ವೋಕ್ತ, ಪು.೯೪.

೧೩. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ್, ಪೂರ್ವೋಕ್ತ, ಪು.೫೦೩.

೧೪. ರಾಜಣ್ಣ ಆರ್., ನಾಯಕ ಜನಾಂಗದ ಇತಿಹಾಸ, ೧೯೮೨, ಪು.೮.

೧೫. ನರಸಿಂಹಮೂರ್ತಿ ಎಂ.ವಿ., ಪೂರ್ವೋಕ್ತ, ಪು.೯೪.

೧೬. ಈಶ್ವರಪ್ಪ ಎಂ.ಜಿ., ಮ್ಯಾಸನಾಯಕರು, ೧೯೮೨, ಪು.೧೪.

೧೭. ಶಿವಶಂಕರಎಂ.ಎಲ್., ಚೆನ್ನಬಸಪ್ಪ, ಎಸ್.ಪಾಟೀಲ್(ಸಂ), ವಿಜಯನಗರ ಅಧ್ಯಯನ ಸಂ.೨, ೧೯೯೬, ಪು.೯೬.

೧೮. ಶಿವಣ್ಣ ಕೆ.ಎಸ್(ಸಂ), ಕರ್ನಾಟಕ ಚರಿತ್ರೆ, ಸಂಪುಟ-೩, ೧೯೯೭, ಪುಟ.೨೪೬.

೧೯. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* ಚಂದ್ರವಳ್ಳಿ, ಭಾಗ ೧, ೧೯೭೭, ಪು.೬೩.

೨೦. ಅದೇ, ಪು.೨೩-೨೪.

೨೧. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ೧೯೯೩, ಪು.೩೩.

೨೨. ವೀರನಾಯಕ ಹೆಚ್.ವಿ., ಹರತಿ, ಕ್ಷಾತ್ರಾಂಶ ಪ್ರಬೋಧ, ೧೯೮೭, ಪು.೧೪.

೨೩. ಹರ್ತಿಕೋಟೆ ವೀರೇಂದ್ರಸಿಂಹ, ವಾಲ್ಮೀಕಿ ಜೋತಿ ಸ್ಮರಣ ಸಂಚಿಕೆ, ಸಂಪಾದಕೀಯ, ೧೯೮೯, ಪು.೭.

೨೪. ರಂಗರಾಜ ದೇವೇಂದ್ರಪ್ಪ, ಸುರಪುರ ಸಂಸ್ಥಾನ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ, ೧೯೯೨, ಪು.೧೬.

೨೫. ಶಿವಶಂಕರ ಎಂ.ಎಲ್., ಚನ್ನಬಸಪ್ಪ, ಎಸ್.ಪಾಟೀಲ್(ಸಂ), ವಿಜಯನಗರ ಅಧ್ಯಯನ, ಸಂ.೨, ೧೯೯೭, ಪು.೨೬.

೨೬. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ನಾಯಕ ಅರಸರು-ರಾಜಕೀಯ ಚಿತ್ರ*, ದವನಸಿರಿ, ೧೯೯೨, ಪು.೭೫.

೨೭. ಶಿವಶಂಕರ ಎಂ.ಎಲ್., ಚನ್ನಬಸಪ್ಪ ಎಸ್.ಪಾಟೀಲ್(ಸಂ), ಪೂರ್ವೋಕ್ತ ಪು.೧೨೭.

೨೮. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೧.

೨೯. ವಸು.ಎಂ.ವಿ(ಸಂ), ದಕ್ಷಿಣ ಕರ್ನಾಟಕದ ಅರಸುಮನೆತನಗಳು, ೨೦೦೧, ಪು.೯೭.

೩೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ದವನಸಿರಿ, ಪು.೭೭.

೩೧. ಅದೇ, ಪು.೭೭.

೩೨. ಪುಟ್ಟಣ್ಣಎಂ.ಎಸ್., ಪೂರ್ವೋಕ್ತ, ಪು.೪೧.

೩೩. ಬಿ.ರಾಜಶೇಖರಪ್ಪ, ಪ್ರಾಚೀನ ಚಿತ್ರದುರ್ಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೪, ಪು.೧೩೯.

೩೪. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೭೭.

೩೫. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ*, ಚಂದ್ರವಳ್ಳಿ, ಭಾಗ-೧, ೧೯೭೬, ಪು.೮೧.

೩೬. ಮುದ್ದಾಚಾರಿ ಬಿ., ಮೈಸೂರು-ಮರಾಠ ಬಾಂಧವ್ಯ, ೧೯೭೫, ಪು.೧೮೭.

೩೭. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ನಾಯಕ ಅರಸರು-ರಾಜಕೀಯ ಚಿತ್ರ*, ದವನಸಿರಿ, ೧೯೯೨, ಪು.೭೯.

೩೮. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡ : ಚಿತ್ರದುರ್ಗದ ಹಿರೇಮದಕರಿ ನಾಯಕ-ಮಡಿದಸ್ಥಳ*, ಚಿತ್ರದುರ್ಗ ಜಿಲ್ಲಾ ಅಭಿವೃದ್ಧಿ ವಾರ್ತೆ, ಆಗಸ್ಟ್ ೧೬, ೧೯೭೪, ಪು.೧೭.

೩೯. ಅದೇ, ಪು.೧೭.

೪೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ದವನಸಿರಿ, ೧೯೯೨, ಪು.

೪೧. ಅದೇ, ಪು.೮೦

೪೨. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕ*, ೧೯೭೬, ಚಂದ್ರವಳ್ಳಿ, ಭಾಗ-೧, ಪು.೮೨.

೪೩. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ನಾಯಕ ಅರಸರು - ರಾಜಕೀಯ ಚಿತ್ರ*, ದವನಸಿರಿ, ೧೯೯೨, ಪು.೮೩.

೪೪. ಷೇಕ್‌ಅಲಿ ಬಿ.(ಸಂ), ಕರ್ನಾಟಕ ಚರಿತ್ರೆ, ಸಂಪುಟ ೫, ೧೯೯೭, ಪು.೨೭.

೪೫. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ೧೯೯೨, ಪು.೮೪.

೪೬. ವೆಂಕಟೇಶಯ್ಯ ಎಂ.ಜಿ., ಚಿತ್ರದುರ್ಗ ಪಾಳೆಯಗಾರರು, ೧೯೭೧, ಪು.೭೧.

೪೭. ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೧೦೪-೧೦೫.

೪೮. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ*, ಚಂದ್ರವಳ್ಳಿ, ೧೯೭೬, ಪು.೮೩.

೪೯. ವಸು.ಎಂ.ವಿ.(ಸಂ), ಪೂರ್ವೋಕ್ತ, ೨೦೦೧, ಪು.೧೦೮.

೫೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ೧೯೭೬, ಪು.೮೩.

೫೧. Rice B.L., **Mysore and Coorg**, 1996, Pp.162

೫೨. Ayyar L.K., **The Mysore Tribes and Caste**, Vol.2, 1988, Pp.200

೫೩. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೩೮೧.

೫೪. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೧೨೧.

೫೫. ಅದೇ, ಪು.೧೨೨-೧೨೩.

೫೬. ಅದೇ, ಪು.೧೨೫.

೫೭. ಸೆಬಾಸ್ಟಿಯನ್ ಜೋಸೆಫ್(ಸಂ), ಕರ್ನಾಟಕ ಚರಿತ್ರೆ, ಸಂಪುಟ ೬, ೧೯೯೭, ಪು.೪೮

೫೮. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೧

೫೯. Colonel philip meadows Taylor, **story of my life**, 1920, Pp.224

೬೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೧೧

೬೧. Aiyyanger S.K., **Sources of the Vijaynagar History**, 1919, Pp.183

೬೨. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೩

೬೩. ಈ ಏಳು ವಿಗ್ರಹಗಳನ್ನು ನಾನೇ ಕ್ಷೇತ್ರಕಾರ್ಯದಲ್ಲಿ ಸಂಶೋಧಿಸಿದ್ದೇನೆ.

೬೪. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನದ ಹಿರಿಮೆ, ಸಾಹಿತ್ಯ, ಸುಧೆ, ೧೯೭೭, ಪು.೨೫.

೬೫. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ ೧೯೯೫, ಪು.೨೦.

೬೬. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೮.

೬೭. ರೇವಣಸಿದ್ದಯ್ಯ ಆರ್., ಶೋರಾಪುರ ತಾಲ್ಲೂಕು ದರ್ಶನ, ೧೯೮೬, ಪು.೧೦.

೬೮. ಅದೇ, ಪು.೧೦.

೬೯. ಅಕ್ಕಿ ಡಿ.ಎನ್., ಶಹಪುರ ತಾಲ್ಲೂಕು ದರ್ಶನ, ೧೯೮೬, ಪು.೧೮.

೭೦. ಕೈಫಿಯತ್ತು ನಂ.೧, ೨, ೩, ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೨೧.

೭೧. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೧೯.

೭೨. ಅದೇ, ಪು.೨೧.

೭೩. Jadunath Sarkar, **Shivaji and his Times**(4th Ed), 1948, Pp.301

೭೪. **Foreign Political Consultation,** 15, oct, 1852, Nov, Pp.4

೭೫. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೩೧.

೭೬. ನಾರಾಯಣರಾವ್ ಕುಲಕರ್ಣಿ, ಬಿಜಾಪುರ, ೧೯೮೧, ಪು.೮.

೭೭. ಶಿವಶರಣ ಅರುಣಿ, ಸಂಯುಕ್ತ ಕರ್ನಾಟಕ ಸಾಪ್ತಾಹಿಕ, ೪-೭-೧೯೯೩.

೭೮. ರೇವಣಸಿದ್ದಯ್ಯ ಆರ್., ಪೂರ್ವೋಕ್ತ, ೧೯೮೬, ಪು.೧೧.

೭೯. Jadunath Sarkar, Modern Review, Nov, 1923

೮೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೪೦.

೮೧. K.Paddayya, Towards the Archaeology of the medieval Shorapur Doa-Deccan, Islamic Culture, Quatearly, Vo-LXIV, No.-3, April-July 1990, Pp.92

೮೨. ರೇವಣಸಿದ್ದಯ್ಯ ಆರ್., ಪೂರ್ವೋಕ್ತ, ೧೯೮೯, ಪು.೧೧.

೮೩. ದೇಸಾಯಿ ಪಿ.ಬಿ., ಮದಗಜಮಲ್ಲ, ೧೯೫೧, ಪು.೫೧.

೮೪. ಪೆರುಮಾಳ ಗುಂಡಾಚಾರ್ಯ, *ಸುರಪುರ ಸಂಸ್ಥಾನದ ಸಂಕ್ಷಿಪ್ತ ಚಾರಿತ್ರಿಕ ದರ್ಶನ,* ಸಗರನಾಡುದರ್ಶನ, ೧೯೮೫, ಪು.೧೯೧.

೮೫. Colonel Philip Meadows Taylor, **story of my life,** 1920, Pp.242.

೮೬. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೭೯.

೮೭. ದೇಸಾಯಿ ಪಿ.ಬಿ., ಪೂರ್ವೋಕ್ತ, ಪು.೭೪.

೮೮. ರೇವಣಸಿದ್ದಯ್ಯ ಆರ್., ಪೂರ್ವೋಕ್ತ, ೧೯೮೯, ಪು.೧೩.

೮೯. ರಂಗರಾಜ ಚೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೫೭

೯೦. ಕೈಫಿಯತ್ತು ನಂ.೪

೯೧. Foreign Secret Consulation, 26 April, 1802, No.32.

೯೨. Ibid- No.41.

೯೩. Ibid-18, Nov 1802, No.32

೯೪. Ibid-18, Nov, 1802, No.32

೯೫. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ ೧೯೭೭, ಪು.೧೩೭.

೯೬. ಕೈಫಿಯತ್ತು-೪.

೯೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೬೯.

೯೮. T.warden chief secretary to Bombay govt, witham chaplin commissioner in the Deccan 8 Nov. 1802, HRC Vol.190

೯೯. Foreign secret consulation, June, 1806, No.44.

೧೦೦. P.C.Gupta, Bajirae II and the East India company II(Edn) Pp.95.

೧೦೧. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೭೦.

೧೦೨. Nawab framurz Jung **Shorapur An Ancient Beyder Raj, 1907** Pp.೮.

೧೦೩. D.A.Melkehms memo on Shorapur, PFC ೧೯ Apr, ೧೮೪೧, No.೧೦೨.

೧೦೪. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೭೨.

೧೦೫. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೧೪೫.

೧೦೬. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೭೭.

೧೦೭. ಅದೇ, ಪು.೭೮-೭೯.

೧೦೮. ಕನ್ನಡ ವಿಶ್ವಕೋಶ, ಸಂ.೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨, ಪು.೧೫೦-೧೫೧.

೧೦೯. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೧೦೭.

೧೧೦. ಅದೇ, ಪು.೧೧೨.

೧೧೧. Foreign political supplementry proceedings, 30, Dec. 1859, No.15-158

೧೧೨. ಕನ್ನಡ ವಿಶ್ವಕೋಶ, ಸಂ. ೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೨, ಪು.೧೫೦-೧೫೧.

೧೧೩. ಪುರುಷೋತ್ತಮ ಬಿಳಿಮಲೆ, ಚಲುವರಾಜು, ಹಂಪಿ ಜಾನಪದ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬, ಪು.೧೦೫

೧೧೪. ಸೂರ್ಯನಾರಾಯಣರಾವ್ ಬಿ.(ಮೂಲ) ಬಾಲಸುಬ್ರಹ್ಮಣ್ಯ (ಕನ್ನಡಕ್ಕೆ), ಮರೆಯಲಾಗದ ಮಹಾಸಾಮ್ರಾಜ್ಯ, ೨೦೦೦, ಪು.೬

೧೧೫. ರಾಜಾ ಅಚ್ಯುತದೇವರಾಯ, ಜೆ.ಆರ್.ರಾಮಮೂರ್ತಿ, ಟಿ.ಪರಮೇಶ್ವರಪ್ಪ, ಆನೆಗೊಂದಿ, ಹಂಪಿ ಉತ್ಸವ ಸಮಿತಿ ೧೯೯೮, ಪು.೯

೧೧೬. ರಾಬರ್ಟ್‌ಸಿವೆಲ್(ಮೂಲ), ಸದಾನಂದ ಕನವಳ್ಳಿ(ಅನು) ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ ೧೯೯೨, ಪು.೨೩

೧೧೭. ವೀರನಾಯಕ ಹೆಚ್.ವಿ., ಕ್ಷಾತ್ರಾಂಶ ಪ್ರಬೋಧ, ೧೯೮೭, ಪು.೯

೧೧೮. ಪದ್ಮಪ್ರಸಾದ್ ಎಸ್.ಪಿ. *ರತ್ನಗಿರಿ ನಾಯಕರು,* ದಕ್ಷಿಣ ಕರ್ನಾಟಕದ ಅರಸುಮನೆತನಗಳು, ೨೦೦೧, ಪು.೨೬೪

೧೧೯. ಮೀರಾಸಾಬಿಹಳ್ಳಿ ಶಿವಣ್ಣ *ನಾಯಕನಹಟ್ಟಿ ಪಾಳೆಯಗಾರರು,* ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೭೯

೧೨೦. ಅಬ್ದುಲ್ ಸತ್ತಾರ್ ಪಿ., ತರೀಕೆರೆ ಪಾಳೆಯಗಾರರು, ೧೯೯೭, ಪು.೩

೧೨೧. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು ಕೆಲವು ವಿಚಾರಗಳು : ಪ್ರತಿಕ್ರಿಯೆ,* ಮಾನವಿಕ ಕರ್ನಾಟಕ, ೧೯೮೭, ಪು.೫೬

೧೨೨. Sewell, Rober., **A Forgotten Empire,** 1998, Pp.290

೧೨೩. Natalie Tobert(Ed), **Anegondi,** 2000, Pp.195

೧೨೪. Ibid, Pp.196

೧೨೫. ರಾಜಾ ಅಚ್ಯುತದೇವರಾಯ ಮತ್ತು ಇತರರು, **ಪೂರ್ವೋಕ್ತ,** ಪು.೧೩

೧೨೬. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ೨೦೦೪, ಪು.೫೬

೧೨೭. ಕಪಟರಾಳ್ ಕೃಷ್ಣರಾವ್, **ಪೂರ್ವೋಕ್ತ,** ೧೯೭೭, ಪು.೭೯-೮೦

೧೨೮. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು : ರಾಜಕೀಯ ಚಿತ್ರ,* ದವನಸಿರಿ, ಸ್ಮರಣ ಸಂಚಿಕೆ, ೧೯೯೨, ಪು.೮೩

೧೨೯. ಲಕ್ಷ್ಮಣ್ ತೆಲಗಾವಿ, **ಮಾಯಕೊಂಡ : ಚಿತ್ರದುರ್ಗದ ಹಿರೇಮದಕರಿ ನಾಯಕ ಮಡಿದ ಸ್ಥಳ,** ಆಗಸ್ಟ್ ೧೯೭೪, ಚಿತ್ರದುರ್ಗ ಜಿಲ್ಲಾ ಅಭಿವೃದ್ಧಿ ವಾರ್ತೆ, ಪು.೧೭

೧೩೦. Sewell, Robert., **A Forgotten Empire,** 1988, Pp.234

೧೩೧. Natalie Robert(Ed), **Sacred lands, Devoted lives Hinduism and daily life in a south Indian village,** 1994, Pp.4

೧೩೨. ಕೃಷ್ಣಮೂರ್ತಿ ಪಿ.ವಿ., *ಆನೆಗೊಂದಿ ಪ್ರಭುಗಳ ಇತಿಹಾಸ : ಶಾಸನಗಳ ಮತ್ತು ಇತರ ಆಕರಗಳ ಹಿನ್ನೆಲೆಯಲ್ಲಿ ಒಂದು ಪರಿಶೀಲನೆ,* **ಸೂರ್ಯಕೀರ್ತಿ,** ಅಭಿನಂದನ ಗ್ರಂಥ ೨೦೦೨, ಪು.೨೫೨

೧೩೩. ಅದೇ, ಪು.೨೫೪

೧೩೪. ಹರ್ತಿಕೋಟೆ ವೀರೇಂದ್ರಸಿಂಹ, ಡಾ.ತೇಜಸ್ವಿ ಕಟ್ಟಿಮನಿ(ಸಂ), **ಘಟ್ಟಿಹೊಸಹಳ್ಳಿ ಗಟ್ಟಿಗ,** ೨೦೦೨, ಪು.೨೪

೧೩೫. ಕೃಷ್ಣಮಾಚಾರ್ಯ ಬಿ., **ಮರೆಯಲಾಗದ ಸುರಪುರ ರಾಜರ ಚರಿತ್ರೆ,** ೨೦೦೨, ಪು.೧೭

೧೩೬. ಹರ್ತಿಕೋಟೆ ವೀರೇಂದ್ರಸಿಂಹ, ಡಾ.ತೇಜಸ್ವಿ ಕಟ್ಟಿಮನಿ(ಸಂ), **ಪೂರ್ವೋಕ್ತ,** ೨೦೦೨, ಪು.೨೫

೧೩೭. ಕಪಟರಾಳ್ ಕೃಷ್ಣರಾವ್, **ಪೂರ್ವೋಕ್ತ,** ೧೯೭೭, ಪು.೭೪

೧೩೮. ಅದೇ, ಪು.೮೪

೧೩೯. ಅದೇ, ಪು.೧೦೨

೧೪೦. ರಂಗರಾಜ ದೇವೇಂದ್ರಪ್ಪ, **ಪೂರ್ವೋಕ್ತ,** ೧೯೯೨, ಪು.೬೨

೧೪೧. ದುರಗಪ್ಪ ಎಂ.ಕೆ., **ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ,** ೨೦೦೪, ಪು.೧೦೭

೧೪೨. ಬಸಣ್ಣ ಜಾವೂರ, ಸಾ.ಗುಂತಗೋಳ ಇವರ ಹೇಳಿಕೆಯಿಂದ

೧೪೩. ಅಮರೇಶ ಯತಗಲ್, *ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದರುಗಳು,* ಇತಿಹಾಸ ದರ್ಶನ, ಸಂ.೧೯, ೨೦೦೪, ಪು.೩೩೨

೧೪೪. ಅದೇ, ಪು.೩೩೨

೧೪೫. ಅದೇ, ಪು.೩೩೨

೧೪೬. ಅದೇ, ಪು.೩೩೨

೧೪೭. ರಾಯಪ್ಪನಾಯಕ, ಗುಂತಗೋಳ ರಾಜವಂಶಸ್ಥರ ಹೇಳಿಕೆಯಿಂದ

೧೪೮. ಅಮರೇಶ್ವರನಾಯಕ, ಗುಂತಗೋಳ ರಾಜವಂಶಸ್ಥರ ಹೇಳಿಕೆಯಿಂದ

೧೪೯. ಕಿಲಚನಾಯಕ, ದೇವದುರ್ಗ ಅರಸು ವಂಶಸ್ಥರ ಹೇಳಿಕೆಯಿಂದ

೧೫೦. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೬೭

೧೫೧. ಅದೇ, ಪು.೭೨ ೭೩

೧೫೨. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ

೧೫೩. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ ೧೯೭೭, ಪು.೮೩-೮೪

೧೫೪. ದುರಗಪ್ಪ ಎಂ.ಕೆ., ಪೂರ್ವೋಕ್ತ, ೨೦೦೩,

೧೫೫. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ ೧೯೭೭, ಪು.೧೨೦

೧೫೬. ಸೆಬಾಸ್ಟಿಯನ್ ಜೋಸೆಫ್(ಸಂ), ೧೯೯೭, ಕರ್ನಾಟಕ ಚರಿತ್ರೆ, ಸಂಪುಟ ೬, ಪು.೧೭೦

೧೫೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೨೦

೧೫೮. ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ೨೦೦೪, ಪು.೩೭೦.

೧೫೯. ಅದೇ, ಪು.೩೭೦

೧೬೦. ಶರಣಬಸಪ್ಪ ಪಿ. ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಎಂ.ಫಿಲ್ ನಿಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪, ಪು.೫೮.

೧೬೧. ಅದೇ, ಪು.೬೦.

೧೬೨. ಅದೇ, ಪು.೬೧.

೧೬೩. ದುರಗಪ್ಪ ಎಂ.ಕೆ., ಪೂರ್ವೋಕ್ತ ೨೦೦೩, ಪು.೧೦೨.

೧೬೪. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ ೧೯೭೭, ಪು.೭೩.

೧೬೫. ಶರಣಬಸಪ್ಪ ಪಿ. ಕೋಲ್ಕಾರ, ಪೂರ್ವೋಕ್ತ, ೧೯೯೪, ಪು.೬೩.

೧೬೬. ದೇವರಕೊಂಡಾರೆಡ್ಡಿ(ಸಂ), ಶಾಸನ ಸಂಪುಟ-೭, ಪೂರ್ವೋಕ್ತ, ಪು.೩೬೭.

೧೬೭. ಅದೇ, ಪು.೩೬೯.

೧೬೮. ಶ್ರೀಮಜ್ಜಗದ್ಗುರುಶ್ರೀಕೂಡ್ಲೀ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ, ಭಾಗ-೧, ೧೯೬೫, ಪು.೮೯.

೧೬೯. ದುರಗಪ್ಪ ಎಂ.ಕೆ., ಪೂರ್ವೋಕ್ತ, ೨೦೦೩, ಪು.೧೦೩.

೧೭೦. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೮೦.

೧೭೧. Raichur District Gaztteer, 1970, Pp.702

೧೭೨. ಶರಣಬಸಪ್ಪ ಪಿ. ಕೋಲ್ಕಾರ, ಪೂರ್ವೋಕ್ತ, ೧೯೯೪, ಪು.೬೯.

೧೭೩. ಬಸವರಾಜ ಎಚ್.ಎಂ., ಗುಡೇಕೋಟೆ : ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ಪ್ರಬಂಧ, ೨೦೦೨, ಪು.೩೩.

೧೭೪. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ೨೦೦೪, ಪು.೨೧.

೧೭೫. ಬಸವರಾಜ ಎಚ್.ಎಂ., ಪೂರ್ವೋಕ್ತ, ೨೦೦೨, ಪು.೪೨.

೧೭೬. ಕಲಬುರ್ಗಿ.ಎಂ.ಎಂ(ಸಂ) ಕರ್ನಾಟಕದ ಕೈಫಿಯತ್ತುಗಳು, ೧೯೯೪, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೪೯.

೧೭೭. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ದವನಸಿರಿ, ೧೯೯೨, ಪು.೭೯.

೧೭೮. ಅದೇ, ಪು.೭೯.

೧೭೯. ಅದೇ

೧೮೦. ಅದೇ, ಪು.೮೦.

೧೮೧. Hayavadana Rao, **History of Mysore,** Vol III, 1993, Pp.250

೧೮೨. ದುರಗಪ್ಪ ಎಂ.ಕೆ.. ಪೂರ್ವೋಕ್ತ, ೨೦೦೩, ಪು.೯೪

೧೮೩. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ೨೦೦೪, ಪು.೨೪.

೧೮೪. ಬಸವರಾಜ ಎಚ್.ಎಂ., ಪೂರ್ವೋಕ್ತ, ೨೦೦೨, ಪು.೪೫.

೧೮೫. ಲಕ್ಷ್ಮಣ್ ತೆಲಗಾವಿ, *ಜರಿಮಲೆ ಸಂಸ್ಥಾನದ ವಂಶಾವಳಿ,* ಚಂದ್ರವಳ್ಳಿ, ಭಾಗ ೪, ಪು.೩೭

೧೮೬. ಯೋಗೀಶ್ವರಪ್ಪ ಡಿ.ಎನ್., *ಜರಿಮಲೆ ನಾಯಕರು,* ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ೨೦೦೨, ಪು.೩೧

೧೮೭. Mekenji The Vamshavallee of Jeremale Samsthan Family

೧೮೮. Memorandom of Patigars of the ceded Dist, dated 1802, Munro Report

೧೮೯. ಕೃಷ್ಣಾ ಕೋಲ್ಹಾರ ಕುಲಕರ್ಣಿ(ಅನು), ಬುಸಾತಿನೆ ಸಲಾತೀನ, ಪು.೩೧೨

೧೯೦. ವಾಸುದೇವ ಬಡಿಗೇರ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ : ಚಾರಿತ್ರಿಕ ಅಧ್ಯಯನ, ೧೯೯೬, ಪು.೧೨

೧೯೧. ದೇವರಕೊಂಡಾರೆಡ್ಡಿ(ಸಂ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧ : ಬಳ್ಳಾರಿ ಜಿಲ್ಲೆ, ೧೯೯೧, ಪು.೨೨೯

೧೯೨. ದುರಗಪ್ಪ ಎಂ.ಕೆ., ಪೂರ್ವೋಕ್ತ, ೨೦೦೩, ಪು.೯೭

೧೯೩. ಶ್ರೀನಿವಾಸನಾಯಕ ಬಿ.ಎಸ್., ಚಿತ್ರದುರ್ಗದ ಕಾಮಗೇತಿ ಅರಸರು, ೧೯೮೪, ಪು.೧೫

೧೯೪. ರವಿಕುಮಾರ ಎಸ್.ಎಂ., ವೃಷಬೇಂದ್ರಚಾರ್(ಸಂ), ಮುನ್ನಡೆಯ ಕೂಡ್ಲಿಗೆ, ೧೯೯೮, ಪು.೨೯

೧೯೫. Bellary District Gaztteer, Vol.3, 1863, Pp.82

೧೯೬. ರವಿಕುಮಾರ ಎಸ್.ಎಂ., ಮತ್ತು ವೃಷಬೇಂದ್ರಚಾರ್ ಎ.(ಸಂ), ಪೂರ್ವೋಕ್ತ, ಪು.೨೯

೧೯೭. Machen C.D., Manual of Administration Madaras Pridence, Vol.3, Pp.87

೧೯೮. ಹರ್ತಿಕೋಟೆ ವೀರೇಂದ್ರಸಿಂಹ, ಬಿಚ್ಚುಗತ್ತಿ, ಸ್ಮರಣ ಸಂಚಿಕೆ-A, ೧೯೮೭, ಪು.೫.

೧೯೯. ಮೀರಾಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ, ೨೦೦೩, ಪು.೫೨.

೨೦೦. ರೈಸ್ ಬಿ.ಎಲ್., ಎಪಿಗ್ರಾಫಿಯಾ ಕರ್ನಾಟಿಕಾ, ಚಿತ್ರದುರ್ಗ ಜಿಲ್ಲೆ, ೧೯೦೩, ಬೆಂಗಳೂರು.

೨೦೧. ಹರ್ತಿಕೋಟೆ ವಿರೇಂದ್ರಸಿಂಹ, ಬಿಚ್ಚುಗತ್ತಿ, ಸ್ಮರಣ ಸಂಚಿಕೆ, ೧೯೮೭, ಪು.೫.

೨೦೨. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ, ಚಂದ್ರವಳ್ಳಿ, ಭಾಗ-೧, ೧೯೭೬, ಪು.೭೦.

೨೦೩. ಮೀರಾಸಾಬಿಹಳ್ಳಿ ಶಿವಣ್ಣ, ಪೂರ್ವೋಕ್ತ, ೨೦೦೩, ಪು.೫೩.

೨೦೪. ಅದೇ, ಪು.೫೩.

೨೦೫. ಅದೇ, ಪು.೮

೨೦೬. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ, ಚಂದ್ರವಳ್ಳಿ, ಪು.೨೨.

೨೦೭. ಮೀರಾಸಾಬಿಹಳ್ಳಿ ಶಿವಣ್ಣ, ಪೂರ್ವೋಕ್ತ ೨೦೦೩, ಪು.೫೭.

೨೦೮. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* ಚಂದ್ರವಳ್ಳಿ, ೧೯೭೬, ಪು.೫.

೨೦೯. ಅದೇ, ಪು.೫

೨೧೦. ಹರ್ತಿಕೋಟೆ ವೀರೇಂದ್ರಸಿಂಹ, ಪೂರ್ವೋಕ್ತ, ೧೯೮೭, ಪು.೧೦

೨೧೧. ಅದೇ, ಪು.೧೦

೨೧೨. ರೈಸ್ ಬಿ.ಎಲ್., ಎಫಿಗ್ರಾಫಿಯಾ ಕರ್ನಾಟಿಕಾ, ಚಿತ್ರದುರ್ಗ ಜಿಲ್ಲೆ, ಹೊಸದುರ್ಗ, ೧೯೦೩

೨೧೩. ವಸು ಎಂ.ವಿ.(ಸಂ), ಪೂರ್ವೋಕ್ತ, ೨೦೦೧, ಪು.೧೭೧

೨೧೪. ಅದೇ, ಪು.೧೭೧

೨೧೫. ಅದೇ, ಪು.೧೭೧

೨೧೬. ಮಲ್ಲಿಕಾರ್ಜುನ ಎಂ.ಕೆ., *ಮತ್ತೋಡಿನ ಇತಿಹಾಸ,* ಚಂದ್ರವಳ್ಳಿ, ಭಾಗ ೩, ೧೯೭೬, ಪು.೨೫

೨೧೭. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೭೩

೨೧೮. ರೈಸ್ ಬಿ.ಎಲ್., ಮೈಸೂರು ಗೆಜೆಟಿಯರ್, ಸಂಪುಟ ೨, ವೆಸ್ಟ್‌ಮಿನಿಸ್ಟರ್, ೧೮೯೭, ಪು.೫೩೧-೫೩೨

೨೧೯. ಎ.ಕ. ಸಂಪುಟ ೧೧, ಹೊಳಲ್ಕೆರೆ ೯೬, ಪು.೭೦

೨೨೦. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಅಪ್ರಕಟಿತ ದಾಖಲೆಯಲ್ಲಿ ಇವನನ್ನು ದೊಡ್ಡಾಲಪ್ಪನಾಯಕನೆಂದೇ ಕರೆದಿದೆ.

೨೨೧. ಎ.ಕ., ಪೂರ್ವೋಕ್ತ, ಹೊಳಲ್ಕೆರೆ ೧೦೧

೨೨೨. ಎ.ಕ., ಪೂರ್ವೋಕ್ತ, ೭೦

೨೨೩. ಎ.ಕ., ಪೂರ್ವೋಕ್ತ, ಹೊಳಲ್ಕೆರೆ ೯೬

೨೨೪. ಎ.ಕ., ಪೂರ್ವೋಕ್ತ, ಹೊಳಲ್ಕೆರೆ ೯೯

೨೨೫. ಹುಲ್ಲೂರು ಶ್ರೀನಿವಾಸ ಜೋಯಿಸ್(ಸಂ), ಚಿತ್ರದುರ್ಗದ ಬಖೈರು, ಮೈಸೂರು, ೧೯೬೮, ಪು.೯೯.

೨೨೬. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* ಚಂದ್ರವಳ್ಳಿ, ಭಾಗ ೧, ೧೯೭೬, ಪು.೭೪.

೨೨೭. ಲಕ್ಷ್ಮಣ್ ತೆಲಗಾವಿ, ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ', ೨೦೦೪, ಪು.೧.

೨೨೮. ಪರಮೇಶ, *ಹರ್ತಿಕೋಟೆ ಇತಿಹಾಸ,* ಚಂದ್ರವಳ್ಳಿ ಭಾಗ-೩, ೧೯೭೬, ಪು.೧೪.

೨೨೯. ಶ್ಯಾಮಲರತ್ನಕುಮಾರಿ ನ, *ಹರತಿ ಪಾಳೆಯಗಾರರು,* ದಕ್ಷಿಣ ಕರ್ನಾಟಕದ ಅರಸುಮನೆತನಗಳು, ೨೦೦೧, ಪು.೧೬೦.

೨೩೦. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೩.

೨೩೧. ಶ್ಯಾಮಲರತ್ನಕುಮಾರಿ ಬಿ.ಎಸ್., ಪೂರ್ವೋಕ್ತ, ಪು.೧೬೧

೨೩೨. ಅದೇ, ಪು.೧೬೨-೧೬೩.

೨೩೩. ದುರಗಪ್ಪ ಎಂ.ಕೆ., ಪೂರ್ವೋಕ್ತ, ೨೦೦೩, ಪು.೯೦

೨೩೪. ಪರಮೇಶ, ಪೂರ್ವೋಕ್ತ, ಪು.೧೭.

೨೩೫. ಅದೇ, ಪು.೧೭.

೨೩೬. ಹರ್ತಿಕೋಟೆ ವೀರೇಂದ್ರಸಿಂಹ ಅವರ ಹೇಳಿಕೆಯಿಂದ.

ಅಧ್ಯಾಯ ೩

# ಧಾರ್ಮಿಕ ನೆಲೆಯ ಆಚರಣೆಗಳು

೩.೧. ರಾಜರ ಪಟ್ಟಾಭಿಷೇಕ

೩.೨. ಪಟ್ಟದರಸಿಯ ನೇಮಕ

೩.೩. ಯುದ್ಧದ ಪೂರ್ವಸಿದ್ಧತೆ

೩.೪. ಹಬ್ಬ-ಉತ್ಸವಗಳು

೩.೫. ಆರಾಧ್ಯ ದೇವರುಗಳ ಪೂಜಾ ವಿಧಾನಗಳು

೩.೬. ನಂಬಿಕೆ-ಸಂಪ್ರದಾಯಗಳು

೩

# ಧಾರ್ಮಿಕ ನೆಲೆಯ ಆಚರಣೆಗಳು

ಕರ್ನಾಟಕವು ವೈವಿಧ್ಯಮಯ ಧರ್ಮ ಹಾಗೂ ಮತಗಳ ಆಗರವಾಗಿದೆ. ವೈವಿಧ್ಯತೆಯಲ್ಲಿ ಏಕತೆಯನ್ನು ಪಾಲಿಸಿಕೊಂಡು ಬಂದಿರುವ ಸ್ಥಳೀಯ (ಪ್ರಾದೇಶಿಕ) ಅರಸುಮನೆತನಗಳು ಮಧ್ಯಕಾಲೀನ ಯುಗದಲ್ಲಿ ಧಾರ್ಮಿಕ ಹಾಗೂ ಮತೀಯ ಸಾಮರಸ್ಯವನ್ನು ಯಶಸ್ವಿಯಾಗಿ ಪರಿಪಾಲಿಸಿಕೊಂಡು ಬಂದಿವೆ. ಅಂಥ ಅರಸುಮನೆತನಗಳ ಸಾಲಿನಲ್ಲಿ ಕರ್ನಾಟಕ ಅರಸುಮನೆತನಗಳೂ ಸೇರುತ್ತವೆ. ಇವರು ಯಾವ ಪಂಥೀಯ ಅರಸರೇ ಆಗಿರಲಿ, ಧಾರ್ಮಿಕ ಹಾಗೂ ಮತೀಯ ಪ್ರಚೋದನೆಗೆ ಸಮಸ್ಯೆಯುಂಟುಮಾಡದೆ ವಿಶಾಲ ತಳಹದಿಯಲ್ಲಿ ಆಡಳಿತವನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿರುವುದು ಇತಿಹಾಸದ ಹೆಗ್ಗಳಿಕೆಯೇ ಸರಿ. ತಮ್ಮ ಪ್ರಾದೇಶಿಕ ವ್ಯಾಪ್ತಿಯ ಜನತೆಯನ್ನು ನಿರ್ದಿಷ್ಟವಾಗಿ, ಮಾನಸಿಕವಾಗಿ ಒಗ್ಗೂಡಿಸುವ ಸಾಂಸ್ಕೃತಿಕ ಶಕ್ತಿಗಳಾಗಿ ಧರ್ಮವನ್ನು ಬಳಸಿಕೊಂಡಿರುವುದಲ್ಲದೆ, ಅವರ ವಿವಿಧ ಧಾರ್ಮಿಕ ಅಂಶಗಳು ಅಲ್ಲಿಯ ಜನಮನವನ್ನು ಹೇಗೆ ಆಳಿದವು ಎಂಬುದನ್ನು ಸಮೀಕ್ಷಿಸಲು, ಈ ಅರಸರ ಪಟ್ಟಾಭಿಷೇಕ, ಪಟ್ಟದರಸಿಯ ನೇಮಕ, ಸಾರ್ವಜನಿಕ ಹಾಗೂ ಕೌಟುಂಬಿಕ ಹಬ್ಬ-ಉತ್ಸವಗಳು, ಆರಾಧ್ಯ ದೇವರುಗಳ ಪೂಜಾವಿಧಾನಗಳು ಹಾಗೂ ಅವರ ನಂಬಿಕೆ-ಸಂಪ್ರದಾಯಗಳು, ಧಾರ್ಮಿಕ ಪುರೋಭಿವೃದ್ಧಿಗೆ, ಸರ್ವಧರ್ಮ ಸಮನ್ವಯತೆಗೆ ಇವರ ರಾಜಕೀಯ ಬದುಕಿನಲ್ಲಿ ಹೇಗೆ ಪ್ರಮುಖ ಪಾತ್ರ ವಹಿಸಿದ್ದವು ಎಂಬುದನ್ನು ಅರಿಯಬಹುದಾಗಿದೆ.

## ೩.೧ ರಾಜರ ಪಟ್ಟಾಭಿಷೇಕ

ಪಟ್ಟಾಭಿಷೇಕಕ್ಕೆ ರಾಜ್ಯವ್ಯವಸ್ಥೆಯಲ್ಲಿ ಮಹತ್ವದ ಸ್ಥಾನವಿದ್ದಿತು. ಪಟ್ಟಾಭಿಷೇಕ ಎನ್ನುವುದನ್ನು ಅಧಿಕಾರ ಗದ್ದುಗೆಯಲ್ಲಿ ಕುಳಿತು ಅಧಿಕಾರ ಚಲಾಯಿಸಲು ಅರ್ಹವಾಗುವುದು ಎನ್ನಬಹುದು. ಈ ಪಟ್ಟಾಭಿಷೇಕಕ್ಕೆ ಹಲವಾರು ಅರ್ಥಗಳಿವೆ. ಮುಕುಟಾಭಿಷೇಕ, ಪಟ್ಟಾಭಿಷೇಚನ, ಪಟ್ಟಗಟ್ಟುವಿಕೆ, ಸ್ನಾನ, ಮಂತ್ರ, ಪ್ರೋಕ್ಷಣೆ ಎನ್ನುವ ಅರ್ಥಗಳಿವೆ. ಇದರ ಮೂಲ ಅರ್ಥ ಸುರಿಸುವುದು(ಅಭಿ+ಷಿಚ್)[೧] ಎಂದು.

ನಮ್ಮ ದೇಶದಲ್ಲಿ ಮಾತ್ರವಲ್ಲದೆ ಜಗತ್ತಿನ ಎಲ್ಲಾ ದೇಶಗಳಲ್ಲೂ ರಾಜರಿಗೂ, ಅಧಿಕಾರಿಗಳಿಗೂ ಇಂಥ ಅಭಿಷೇಚನ ದೀಕ್ಷೆ ಒದಗುತ್ತಿದುದು ತಿಳಿದುಬರುತ್ತದೆ.[೨] ಮೊದಮೊದಲು ರಾಜಸೂಯ ಯಾಗಕ್ಕೆ

ಸಂಬಂಧಪಟ್ಟಂತೆ ಅಭಿಷೇಕದ ವಿಧಿಯನ್ನು ಕೃಷ್ಣಯಜುರ್ವೇದದಲ್ಲಿ, ಕೆಲವು ಬ್ರಾಹ್ಮಣರಲ್ಲೂ ಕಾಣಬಹುದಾಗಿತ್ತು. ನಂತರ ರಾಜಾಧಿರಾಜ, ಚಕ್ರವರ್ತಿಗಳು ಮಾತ್ರ ಅಭಿಷೇಕ ದೀಕ್ಷೆಗೆ ಒಳಗಾಗುತ್ತಿದ್ದರು. ಆದರೆ ಬರುಬರುತ್ತಾ ಸಾಮಾನ್ಯ ರಾಜರು, ಸಾಮಂತರು, ಚಕ್ರವರ್ತಿಗಳು ಅಭಿಷಿಕ್ತರಾಗುವ ಪದ್ಧತಿ ಬೆಳೆಯಿತು. ಅಭಿಷೇಕ ಎನ್ನುವುದು ಸ್ನಾನ ದೇವತಾ ವಿಗ್ರಹಗಳಿಗೆ ಮಾಡಿಸುವ ನೀರಿನ ಅಥವಾ ಇತರ ದ್ರವ್ಯಗಳ ಸ್ನಾನ, ಪ್ರೋಕ್ಷಣೆ, ನೀರನ್ನು ಚಿಮುಕಿಸುವುದು, ರಾಜರಿಗೆ ಮಾಡಿಸುವ ಪಟ್ಟಾಭಿಷೇಕ. ಇಲ್ಲಿ ಷಿಚ್ ಎನ್ನುವುದು ಧಾತು. ಅಭಿ ಎನ್ನುವುದು ಉಪಸರ್ಗ.[೩] ಪಟ್ಟಾಭಿಷೇಕ ಎನ್ನುವುದು ಪಟ್ಟ + ಅಭಿಷೇಕ; ರಾಜರನ್ನಾಗಲಿ, ಗುರುಗಳನ್ನಾಗಲಿ, ಪೀಠದ ಮೇಲೆ ಕುಳ್ಳಿರಿಸಿ ಪವಿತ್ರ ಜಲ ಮುಂತಾದವುಗಳನ್ನು ಅವರ ತಲೆಯ ಮೇಲೆ ವಿಧ್ಯುಕ್ತವಾಗಿ ಅಭಿಷೇಕ ಮಾಡುವ ಕ್ರಿಯೆಯೆ ಪಟ್ಟಾಭಿಷೇಕ.[೪] ಇದನ್ನೇ ಪಟ್ಟಬಂಧೋತ್ಸವ, ಪಟ್ಟಗಟ್ಟುವ ಉತ್ಸವವೆಂದು ಕರೆಯಲಾಗುತ್ತಿತ್ತು. ಇದು ಕೇವಲ ಅರಸನಾದವನಿಗೆ ಮಾತ್ರ ಸಲ್ಲುತ್ತಿರಲಿಲ್ಲ. ಆತನ ಹಿರಿಯ ರಾಣಿ, ಸೇನಾಪತಿ, ಮಹಾದಂಡನಾಯಕ, ಯುವರಾಜ ಮುಂತಾದವರಿಗೂ ಅವರವರ ಯೋಗ್ಯತೆಗೆ ತಕ್ಕಂತೆ ಪಟ್ಟಾಭಿಷೇಕವನ್ನು ನಡೆಸಲಾಗುತ್ತಿತ್ತು. ಇದೊಂದು ದುಬಾರಿ ವೆಚ್ಚದ ಅದ್ದೂರಿ ಸಮಾರಂಭ ಆಗಿರುತ್ತಿತ್ತು.[೫]

ರಾಜನ ಹಿರಿಯ ಮಗ ರಾಜ್ಯದ ಉತ್ತರಾಧಿಕಾರಿಯಾಗುವುದು ಸರ್ವಸಾಮಾನ್ಯವಾಗಿತ್ತು. ರಾಜ ದೈವಾಂಶ ಸಂಭೂತನೆಂದು ಪರಿಗಣಿಸಲ್ಪಟ್ಟರೂ ರಾಜನಿಗೆ ಉತ್ತಮ ಶಿಕ್ಷಣ ಹೊಂದಿ ಸುಗುಣಗಳನ್ನು ಕಲಿಯಲು ಅವನಿಗೆ ಗುರುಗಳನ್ನು ನೇಮಿಸಲಾಗುತ್ತಿತ್ತು. ರಾಜನಾಗಬೇಕಾದವನು ಯುದ್ಧಕಲೆಯಲ್ಲಿ ಪರಿಣತನಾಗಿರಬೇಕಾಗಿತ್ತಲ್ಲದೆ, ನ್ಯಾಯ-ಅನ್ಯಾಯಗಳ ವಿವೇಚನಾಶಕ್ತಿ, ಒಳ್ಳೆಯ ಶೀಲವೂ ಮುಖ್ಯವಾಗಿತ್ತು.[೬] ರಾಜ್ಯದ ಯುದ್ಧಗಳಲ್ಲಿ ರಾಜನೇ ಮುಂದಾಳತ್ವ ವಹಿಸಬೇಕಾಗಿರುವುದರಿಂದ ಆತ ಶೂರ ಮತ್ತು ಕ್ಷಾತ್ರ ವಿದ್ಯೆಗಳಲ್ಲಿ ಪಾರಂಗಿತನಾಗಿರಬೇಕಲ್ಲದೆ ಸಾಮ, ದಾನ, ಭೇದ ಮತ್ತು ದಂಡಗಳನ್ನು ಬಲ್ಲವನಾಗಿರಬೇಕಿತ್ತು.

ಸಾಮಾನ್ಯವಾಗಿ ಅರಸೊತ್ತಿಗೆ ಅನುವಂಶೀಯವಾಗಿತ್ತು. ತಂದೆಯ ನಂತರ ಮಗನಿಗೆ ಅಧಿಕಾರ ಸಿಗುತ್ತಿತ್ತು. ಕೆಲವು ಸಲ ಅನುವಂಶೀಯತೆಯಲ್ಲಿಯೂ ಅರ್ಹತೆಗೆ ಪ್ರಾಮುಖ್ಯತೆ ಇತ್ತು. ಅರಸರು ಪಟ್ಟಕ್ಕೆ ಬರುವ ಸಂದರ್ಭದಲ್ಲಿ ಆಂತರಿಕ ಹೋರಾಟ, ಯುದ್ಧಗಳು ಅಣ್ಣ-ತಮ್ಮಂದಿರುಗಳಲ್ಲಿ ಸಾಮಾನ್ಯ ವಾಗಿರುತ್ತಿತ್ತು. ಹಿಂದೂ ರಾಜಮನೆತನಗಳಿಗಿಂತ ಮುಸ್ಲಿಂ ಮನೆತನಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಕಾರಣ ಉತ್ತರಾಧಿಕಾರತ್ವದ ಬಗ್ಗೆ ನಿಶ್ಚಿತ ಕಾನೂನುಗಳಿರಲಿಲ್ಲ.

ಅರಸರ ಹಿರಿಯ ಹೆಂಡತಿಯನ್ನು ಪಟ್ಟದರಾಣಿಯೆಂದು ಕರೆಯಲಾಗುತ್ತಿತ್ತು. ಇಂತಹ ರಾಣಿಯರ ಗರ್ಭದಲ್ಲಿ ಜನಿಸಿದವರೇ ರಾಜ್ಯದ ಉತ್ತರಾಧಿಕಾರಕ್ಕೆ ಅರ್ಹರಾಗಿರುತ್ತಿದ್ದರು. ಪಟ್ಟದರಾಣಿಯರನ್ನು 'ನಾಗತಿ' ಎಂದು ಕರೆಯಲಾಗುತ್ತಿತ್ತು. ಉಳಿದ ಹೆಂಡಂದಿರನ್ನು 'ಸಾಗತಿ' ಎಂದು ಕರೆಯದೆ ಬಂಗಾರ

ನಾಗತಿ ಅಥವಾ ಬಂಗಾರಸ್ತ್ರೀಯರೆಂದು ಕರೆಯಲಾಗುತ್ತಿತ್ತು. ಬಂಗಾರಸ್ತ್ರೀಯರ ಮಕ್ಕಳಿಗೆ ರಾಜ್ಯದ ಹಕ್ಕು ದಕ್ಕುತ್ತಿರಲಿಲ್ಲ. ಬೇರೆ ಜಾತಿಯ ಹೆಂಗಸರನ್ನು ಮದುವೆ ಮಾಡಿಕೊಂಡ ದೊರೆಗಳು ಸಮಾಜದಲ್ಲಿ ಅರಸುವರ್ಗದಲ್ಲಿ ಕೆಳಸ್ಥಾನವನ್ನು ಪಡೆದುಕೊಳ್ಳುತ್ತಿದ್ದರು.[೭] ಇದಕ್ಕೆ ಉದಾಹರಣೆಯೆಂದರೆ ಸುರಪುರದ ಪಿಡ್ಡನಾಯಕನು ಪಾಮನಾಯಕನ ಚಿಕ್ಕಮಗನಾದ ಜಕ್ಕಪ್ಪನಾಯಕನನ್ನು ಮರಾಠಿ ಸ್ತ್ರೀಗೆ ಜನಿಸಿದವನು ಎಂಬ ಕಾರಣಕ್ಕೆ ಅವನಿಗೆ ಪಟ್ಟ ಸಿಗದಂತೆ ನೋಡಿಕೊಂಡನಲ್ಲದೆ ಅವನನ್ನು ಓಡಿಸಿದನು.[೮]

ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಅವರ ವಂಶಿಕರು ಪಟ್ಟವೇರಿದ ಸಂದರ್ಭಗಳನ್ನು ಅವಲೋಕಿಸಿದಾಗ ಕೆಲವೊಂದು ಸ್ಪಷ್ಟಚಿತ್ರಣವು ನಮಗೆ ದೊರಕುತ್ತದೆ. ಚಿತ್ರದುರ್ಗದ ಅರಸು ಮನೆತನದಲ್ಲಿ ಮತ್ತಿತಿಮ್ಮಣ್ಣನಾಯಕ(ಕ್ರಿ.ಶ.೧೫೬೮-೧೫೮೯)ನ ನಂತರ ಆತನ ಮಗ ದಧ್ಯನ್ನದ ಓಬಣ್ಣನಾಯಕ(I ಮದಕರಿ) (ಕ್ರಿ.ಶ.೧೫೮೮-೧೬೦೩)ನೂ, ಈತನ ನಂತರ ಈತನ ಮಗ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ.೧೬೦೩-೧೬೫೨)ನೂ ಪಟ್ಟವೇರುತ್ತಾನೆ. ಈತನಿಗೆ ಮೂರು ಜನ ಮಕ್ಕಳು. ಮೊದಲಿನ ಇಬ್ಬರು ತೀರಿಕೊಂಡಿದ್ದರಿಂದ ಮೂರನೇ ಮಗ ಇಮ್ಮಡಿ ಮದಕರಿನಾಯಕ(ಕ್ರಿ.ಶ.೧೬೫೨-೧೬೭೪)ನೇ ಅಧಿಕಾರಕ್ಕೆ ಬಂದನು. ಈತನ ಮರಣದ ತರುವಾಯ ಈತನ ತಮ್ಮ (ಸಾಕುಮಗ) ಓಬಣ್ಣ(ಮದಕರಿ)ನಾಯಕ (ಇಮ್ಮಡಿ ಓಬಣ್ಣನಾಯಕ ಕ್ರಿ.ಶ.೧೬೭೪-೧೬೭೫)ನಿಗೆ ಪಟ್ಟವಾಯಿತು. ಈತ ಅಲ್ಪಾವಧಿಯ ಆಳ್ವಿಕೆ ನಡೆಸುವಷ್ಟರಲ್ಲಿಯೇ ದಳವಾಯಿಗಳ ತೊಂದರೆಯಿಂದ ಕಣಕುಪ್ಪೆಗೆ ಓಡಿ ಹೋಗಿದ್ದ ಕಸ್ತೂರಿ ರಂಗಪ್ಪನಾಯಕನ ಹಿರಿಯಮಗ ಸರ್ಜೆರಾಯನ ಪುತ್ರ ಚಿಕ್ಕಣ್ಣನಾಯಕ(ಕ್ರಿ.ಶ.೧೬೭೫-೧೬೮೬)ನನ್ನು ಕಣಕುಪ್ಪೆಯಿಂದ ಚಿತ್ರದುರ್ಗಕ್ಕೆ ಕರೆಯಿಸಿ ಪಟ್ಟಾಭಿಷೇಕ ಮಾಡಲಾಯಿತು. ಈತನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಈತನ ಅಣ್ಣ ಮುಮ್ಮಡಿ(ಲಿಂಗಣ್ಣ) ಮದಕರಿನಾಯಕ(ಕ್ರಿ.ಶ.೧೬೮೬-೧೬೮೯)ನಿಗೆ ಪಟ್ಟವಾಯಿತು. ಈತ ಪಟ್ಟಕ್ಕೆ ಬಂದಾಗ ದಳಪತಿಗಳ ಪ್ರಾಬಲ್ಯ ಹೆಚ್ಚಿ, ಮತ್ತಿ ತಿಮ್ಮಣ್ಣ ನಾಯಕನ ಚಿಕ್ಕಪ್ಪ ಬುಳ್ಳ ಸಂತತಿಯ ಬಿಚ್ಚುಗತ್ತಿ ಭರಮಣ್ಣನಾಯಕ(ಕ್ರಿ.ಶ.೧೬೮೯-೧೭೨೧)ನನ್ನು ಬಿಳಿಚೋಡಿನಿಂದ ಕರೆತಂದು ಆತನಿಗೆ ಪಟ್ಟ ಕಟ್ಟಿದರು.

ಬಿಳಿಚೋಡು ಭರಮಣ್ಣನಾಯಕನ ತರುವಾಯ ಆತನ ಹಿರಿಯಮಗ ಹಿರೇ ಮದಕರಿನಾಯಕ (ಕ್ರಿ.ಶ.೧೭೨೧-೧೭೪೮)ನಿಗೆ ಪಟ್ಟವಾಯಿತು. ಹಿರೇ ಮದಕರಿನಾಯಕನ ತರುವಾಯ ಆತನ ಹಿರಿಯ ಮಗ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನಿಗೆ ಪಟ್ಟಾಭಿಷೇಕವಾಯಿತು. ಈತನಿಗೆ ಮಕ್ಕಳಿರಲಿಲ್ಲ. ಬಿಳಿಚೋಡು ವಂಶದ ಜಾನಕಲ್ಲು ತೊದಲ ಭರಮಣ್ಣನಾಯಕನ ಪುತ್ರ ವೀರಮದಕರಿನಾಯಕ ೧೨ ವಯಸ್ಸಿನಲ್ಲಿಯೇ ಚಿತ್ರದುರ್ಗದ ರಾಜಗದ್ದುಗೆಯನ್ನು ಏರಿದ.[೯] ಆದರೆ ರಾಜ್ಯಭಾರವನ್ನು ತಾತ್ಕಾಲಿಕವಾಗಿ ಓಬಳಮ್ಮ ನಾಗತಿ ಮುಂದುವರೆಸಿದಳು. ಈತ ಕೊನೆಯ ಗಳಿಗೆಯಲ್ಲಿ ತನ್ನ ಹಿರಿಯ ಮಗ ಭರಮಪ್ಪನಾಯಕನಿಗೆ ಪಟ್ಟವನ್ನು ಕಟ್ಟಿ ಅರಮನೆಯಿಂದ ಯುದ್ಧರಂಗಕ್ಕೆ ಹೊರಟನು.[೧೦]

ಸುರಪುರದ ನಾಯಕ ಮನೆತನದಲ್ಲಿ ಜಕ್ಕಪ್ಪದೇಸಾಯಿಯ ಎರಡನೇ ಮಗನಾದ ಗಡ್ಡಿಪಿಡ್ಡನಾಯಕ (ಕ್ರಿ.ಶ.೧೬೩೬-೧೬೬೬)ನಿಗೆ ಮಕ್ಕಳಾಗಲಿಲ್ಲ. ತನ್ನ ಅಣ್ಣ ಗುಡಗುಂಟಿಯ ಲಿಂಗನಾಯಕನ ಮಗನಾದ ಹಸರಂಗಿ ಪಾಮನಾಯಕ(ಕ್ರಿ.ಶ.೧೬೬೬-೧೬೮೭)ನನ್ನು ದತ್ತಕ ತೆಗೆದುಕೊಂಡನು. ಈತನಿಗೆ ಐದು ಜನ ಮಡದಿಯರಿದ್ದರೂ ಮಕ್ಕಳಾಗಲಿಲ್ಲ. ಹೀಗಾಗಿ ಮತ್ತೆ ಗುಡಗುಂಟಿಯ ಮೊರೆ ಹೋಗಬೇಕಾಯಿತು. ತನ್ನ ಹಿರಿಯ ಅಣ್ಣನಾದ ಗುಡಗುಂಟಿಯ ಪೆದ್ದ ಅನ್ನದಾನಿ ಸೋಮಪ್ಪನಾಯಕನ ಆರು ಮಕ್ಕಳ ಪೈಕಿ ಒಬ್ಬ ಮಗನಾದ ಪೀತಾಂಬರ ಬಹರಿ ಪಿಡ್ಡನಾಯಕ(ಕ್ರಿ.ಶ.೧೬೮೭-೧೭೨೬)ನೆಂಬುವನನ್ನು ದತ್ತಕ ಪುತ್ರನನ್ನಾಗಿ ಸ್ವೀಕರಿಸಿದನು. ಈತನ ನಂತರ ಈತನ ಹಿರಿಯ ಮಗನಾದ ಇಮ್ಮಡಿ ಪಾಮನಾಯಕ (ಕ್ರಿ.ಶ.೧೭೨೭-೧೭೪೧)ನು ಪಟ್ಟಕ್ಕೇರಿದನು. ಈತನಿಗೆ ಇಬ್ಬರು ಮಕ್ಕಳಿದ್ದರು. ಅವರೇ ಮುಮ್ಮಡಿ ಪಿಡ್ಡನಾಯಕ ಹಾಗೂ ವೆಂಕಟಪ್ಪನಾಯಕ. ಹಿರಿಯ ಮುಮ್ಮಡಿ ಪಿಡ್ಡನಾಯಕ(ಕ್ರಿ.ಶ.೧೭೪೨-೧೭೪೬)ನು ತನ್ನ ತಂದೆಯಾದ ಪಾಮನಾಯಕನ ನಂತರ ನಾಲ್ಕು ವರ್ಷ ರಾಜ್ಯಭಾರ ಮಾಡಿದನು. ಈತ ಕಾಲವಾದ ಮೇಲೆ. ಸಂತಾನವಿಲ್ಲದ ಕಾರಣ ಈತನ ತಮ್ಮ ಮೊಂಡುಗೈ ವೆಂಕಟಪ್ಪನಾಯಕ(ಕ್ರಿ.ಶ.೧೭೪೭-೧೭೫೨)ನು ಪಟ್ಟಕ್ಕೇರಿದನು. ಈತನಿಗೆ ಇಬ್ಬರು ಮಡದಿಯರಿದ್ದರೂ ಮಕ್ಕಳಾಗಲಿಲ್ಲ. ಆಗ ಮುಮ್ಮಡಿ ಪಿಡ್ಡನಾಯಕನ ಮಗನಾದ ರಮಣಪ್ಪನಾಯಕನಿಗೆ ಮುಮ್ಮಡಿ ಪಾಮನಾಯಕ (ಕ್ರಿ.ಶ.೧೭೫೨-೧೭೭೩)ನೆಂಬ ಮಗನಿದ್ದ. ಈತನಿಗೆ ಪಟ್ಟಗಟ್ಟಲಾಯಿತು. ನಂತರ ಈತನ ಮಗ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨)ನಿಗೆ ಪಟ್ಟಗಟ್ಟಲಾಯಿತು. ಈತನ ಮರಣದ ನಂತರ ಸುರಪುರದ ಉತ್ತರಾಧಿಕಾರತ್ವಕ್ಕೆ ಸಂಬಂಧಿಗಳಲ್ಲಿ ಕೋಲಾಹಲ ವಾತಾವರಣವೆದ್ದಿತು. ಇದ್ದೊಬ್ಬ ಮಗನನ್ನು ಕೈಯ್ಯಾರೆ ಕೊಂದ ವೆಂಕಟಪ್ಪನಾಯಕ ತನ್ನ ವಂಶದ ಕುಡಿಯನ್ನು ತಾನೆ ಕೊನೆ ಮಾಡಿಕೊಂಡಿದ್ದ. ನಂತರ ಸಂಸ್ಥಾನದಲ್ಲಿ ನಿಜವಾದ ಹಕ್ಕುದಾರರ ಸಲುವಾಗಿ ಗೊಂದಲವೆದ್ದಿತು. ಆಗ ಪೀತಾಂಬರ ಬಹರಿ ಪಿಡ್ಡನಾಯಕನ ಕಾಲಕ್ಕೆ ಸುರಪುರ ಬಿಟ್ಟು ಕರ್ನೂಲು ಸೇರಿದ್ದ ಮದನಗೋಪಾಲನಾಯಕನ ಮಗನಾದ ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ.೧೮೦೨-೧೮೧೮)ನು ಪತ್ತಿಕೊಂಡ ತಾಲೂಕಿನ ಕಪಟ್ರಾಳು ಎಂಬ ಗ್ರಾಮದಲ್ಲಿದ್ದ. ಈತನಿಗೆ ಸುರಪುರ ಗಾದಿ ಸಲ್ಲಬೇಕೆಂದು ಪಟ್ಟಕಟ್ಟಲಾಯಿತು. ನಂತರ ಈತನ ಹಿರಿಯ ಮಗನಾದ ಮುಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ.೧೮೧೮-೧೮೨೭) ಪಟ್ಟವೇರಿದ. ನಂತರದಲ್ಲಿ ಈತನ ಇಬ್ಬರು ಮಕ್ಕಳಾದ ಕೃಷ್ಣಪ್ಪನಾಯಕ ಮತ್ತು ಹನುಮಪ್ಪನಾಯಕರ ಮಧ್ಯೆ ಅಧಿಕಾರಕ್ಕಾಗಿ ತೀವ್ರ ಸ್ಪರ್ಧೆ ಏರ್ಪಟ್ಟಿತು. ಇಬ್ಬರು ತೋಳ್ಬಲ ಪ್ರದರ್ಶಿಸುವ ಮಟ್ಟಿಗೆ ಇಳಿದರು. ಕೊನೆಗೆ ಹೈದ್ರಾಬಾದ್ ನಿಜಾಮನ ತೀರ್ಪಿನಂತೆ ಹಿರಿಯ ಮಗ ಕೃಷ್ಣಪ್ಪನಾಯಕ(ಕ್ರಿ.ಶ.೧೮೨೭-೧೮೪೩)ನಿಗೆ ಪಟ್ಟ ದಕ್ಕಿತು. ಈತನಿಗೆ ಇಬ್ಬರು ಮಡದಿ ಯರಿದ್ದರೂ ಬಹುದಿನಗಳ ಕಾಲ ಮಕ್ಕಳಾಗಲಿಲ್ಲ. ತನ್ನ ತಮ್ಮನ ಮಗನಾದ ಕೃಷ್ಣಪ್ಪನಾಯಕನನ್ನು ದತ್ತಕ ತೆಗೆದುಕೊಳ್ಳಲು ನಿರ್ಧರಿಸಿದನು. ಇದಕ್ಕೆ ಎಲ್ಲರ ಸಮ್ಮತಿಯೂ ದೊರಕಿತು. ಉತ್ತರಾಧಿಕಾರಿಯನ್ನಾಗಿ

ಘೋಷಿಸಲಾಗಿತ್ತು. ಆದರೆ ಕೆಲವೇ ದಿನಗಳಲ್ಲಿ ರಾಣಿ ಈಶ್ವರಮ್ಮನವರ ಉದರದಿಂದ ನಾಲ್ವಡಿ ವೆಂಕಟಪ್ಪನಾಯಕ ಜನಿಸಿದ. ಇದರಿಂದಾಗಿ ದತ್ತಕ ಸಮಸ್ಯೆಗೆ ಕಡಿವಾಣ ಬಿದ್ದಂತಾಯಿತು. ನಂತರ ಕೃಷ್ಣಪ್ಪನಾಯಕನ ತಮ್ಮನಾದ ಪಿಡ್ಡನಾಯಕನು ಸಿಡಿದೇಳಲು ಕಾರಣವಾಯಿತು. ಸಂಪ್ರದಾಯದ ಪ್ರಕಾರ ಹಿರಿಯ ರಾಣಿಯಾದ ಈಶ್ವರಮ್ಮ ಅಧಿಕಾರ ಹಿಡಿದಳು. ತನ್ನ ಎಂಟು ವರ್ಷದ ಮಗನಾದ ನಾಲ್ವಡಿ ವೆಂಕಟಪ್ಪನಾಯಕನನ್ನು ಮುಂದಿಟ್ಟುಕೊಂಡು ರಾಜ್ಯಭಾರ ಮಾಡಿದಳು. ಮಗ ನಾಲ್ವಡಿ ವೆಂಕಟಪ್ಪನಾಯಕನಿಗೆ (ಕ್ರಿ.ಶ.೧೮೪೨-೧೮೫೮) ಪಟ್ಟ ಕಟ್ಟಲಾಯಿತು.

ಹೀಗೆ ಆನೆಗೊಂದಿ, ಗುಡಗುಂಟಿ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಹರತಿ ಮುಂತಾದ ಮನೆತನಗಳಲ್ಲಿ ವಂಶಪಾರಂಪರ್ಯವಾದ ಅಧಿಕಾರವಿತ್ತು. ಅರಸನಿಗೆ ಮಕ್ಕಳಿಲ್ಲದಿದ್ದರೆ ಆತ ತಮ್ಮ ಸಂಬಂಧಿಗಳನ್ನು ಅಧಿಕಾರಕ್ಕೆ ತರಬಹುದಾಗಿತ್ತು. ಅವರನ್ನು ದತ್ತು ತೆಗೆದುಕೊಳ್ಳಬೇಕಾಗಿತ್ತು.

### ೩.೧.೧ ದತ್ತು ಸ್ವೀಕಾರ

ದತ್ತು ಸ್ವೀಕಾರ ಸಂತಾನಹೀನರಿಗೆ ತಂದೆ-ತಾಯಿಯರಾಗುವ ಅನುಕೂಲ ಪ್ರಧಾನ ಮಾಡುವ ವಿಧಾನವೇ ದತ್ತು ಸ್ವೀಕಾರ. ವಾಸ್ತವತಃ ಇಲ್ಲವೇ ಕಾನೂನುರೀತ್ಯ ಒಬ್ಬ ವ್ಯಕ್ತಿಯ ಸಂತಾನವಾಗಿಲ್ಲದವನನ್ನು ಆ ವ್ಯಕ್ತಿಯ ಸಂತಾನವಾಗಿ ಸ್ಥಾಪಿಸುವ ಕ್ರಿಯೆ.[೧೧] ಪುತ್ರಹೀನನಾದಾತ ಮತ್ತೊಬ್ಬರ ಪುತ್ರನನ್ನು ಶಾಸ್ತ್ರರೀತ್ಯ, ಪುತ್ರನಂತೆ ಸ್ವೀಕಾರ ಮಾಡುವ ಕರ್ಮಕ್ಕೆ ದತ್ತು ಅಥವಾ ದತ್ತ ಸ್ವೀಕಾರ ಎನ್ನುತ್ತಾರೆ.[೧೨] ದತ್ತು ಸ್ವೀಕಾರದ ಸಂದರ್ಭಗಳಲ್ಲಿ ಅಯಾ ರಾಜ ಮನೆತನಗಳಲ್ಲಿ ದತ್ತು ಸ್ವೀಕರಿಸುವುದು ಮತ್ತು ದತ್ತು ಕೊಡುವುದರ ಕುರಿತಾಗಿ ಕೆಲವು ನಿಯಮಗಳಿರುತ್ತಿದ್ದವು. ದತ್ತು ತೆಗೆದುಕೊಳ್ಳುವ ಯುವರಾಜನಿಗೆ ಕೆಲವು ಅರ್ಹತೆಗಳಿರಬೇಕಾಗಿತ್ತು :

೧. ಅವನು ಸ್ವಸ್ಥ ಚಿತ್ತದವನಾಗಿರಬೇಕಾಗಿತ್ತು.

೨. ದತ್ತು ಸ್ವೀಕಾರಕ್ಕೆ ಒಳಗಾಗುವವನಿಗೆ ವಿವಾಹವಾಗಿದ್ದರೆ ಆತನ ಮಡದಿಯ ಒಪ್ಪಿಗೆ ಅವಶ್ಯವಾಗಿತ್ತು.

೩. ದತ್ತು ಮಗನನ್ನು ನೀಡುವಾಗ ಅವರ ತಂದೆ-ತಾಯಿಯರು ಒಪ್ಪಿಗೆ ನೀಡಬೇಕಾಗಿತ್ತು. ತಂದೆ ತೀರಿದ್ದರೆ ತಾಯಿ, ತಾಯಿ ತೀರಿದ್ದರೆ ತಂದೆ ಒಪ್ಪಿಗೆಯನ್ನು ನೀಡಬೇಕಿತ್ತು. ದತ್ತು ನೀಡುವ ತಂದೆ-ತಾಯಿಗಳಿಗೆ ದತ್ತು ತೆಗೆದುಕೊಳ್ಳುವವರು ಉಡುಗೊರೆ ಕೊಡಬೇಕಾಗಿತ್ತು.[೧೩]

೪. ಒಂದು ಮಗುವನ್ನು ಎರಡು ಮನೆತನದವರು ದತ್ತಕ ತೆಗೆದುಕೊಳ್ಳಲು ಬರುತ್ತಿರಲಿಲ್ಲ.

೫. ದತ್ತು ಸ್ವೀಕರಿಸುವಾಗ ಮತ್ತು ಕೊಡುವಾಗ ದತ್ತಕ ಹೋಮ ಜರುಗುತ್ತಿತ್ತು.

೬. ದತ್ತು ಸ್ವೀಕಾರದ ದಿನದಿಂದ, ದತ್ತಕ ರಾಜನ ಮತ್ತು ರಾಣಿಯ ಮಗನೆಂದು ಪರಿಗಣಿಸಲ್ಪಡುತ್ತಿದ್ದ.

ಆ ಮಗುವಿಗೆ ಆನಂತರ ತನ್ನ ಮೊದಲಿನ ಕುಟುಂಬದಲ್ಲಿ ಯಾವುದೇ ಹಕ್ಕು ಉಳಿಯಲಾರದು. ದತ್ತಕ ಬಂದ ಮನೆತನದ ಮೇಲೆ ಹಕ್ಕು ಪ್ರಾಪ್ತವಾಗುತ್ತದೆ. ಹೆಚ್ಚಾಗಿ ತಮ್ಮ ವಂಶದವರಲ್ಲೇ(ಗೋತ್ರ) ದತ್ತು ತೆಗೆದುಕೊಳ್ಳುವ ರೂಢಿ.

ಚೌಲ ಮತ್ತು ಉಪನಯನವನ್ನು ದತ್ತಕ ತಂದೆ ಮಾಡುವುದರ ಮೂಲಕ ತಮ್ಮ ಸ್ವಗೋತ್ರಕ್ಕೆ ಸೇರಿಸಿಕೊಳ್ಳುತ್ತಿದ್ದರು. ಆದರೆ ದತ್ತಕ ಬಂದ ರಾಜ ಸ್ವಗೋತ್ರ ಮತ್ತು ದತ್ತಕ ಬಂದ ಮನೆಗೋತ್ರದ ಗೋತ್ರಗಳಲ್ಲಿ ವಿವಾಹವಾಗುವಂತಿರಲಿಲ್ಲ. ಆತ ಬೇರೆ ಗೋತ್ರದ ರಾಜಮನೆತನದ ಕನ್ಯೆಯರೊಂದಿಗೆ ವಿವಾಹವಾಗಬೇಕಿತ್ತು.[೧೪]

ಕೆಲವು ಸಲ ಒಂದು ಮನೆತನದಿಂದ ದತ್ತಕ ತೆಗೆದುಕೊಂಡಾಗ, ದತ್ತು ಸ್ವೀಕಾರ ಮಾಡಿದ ರಾಜರಿಗೆ ಔರಸಪುತ್ರ ಜನಿಸಿದರೆ ದತ್ತುಪುತ್ರನಿಗೆ ಆ ರಾಜಮನೆತನದ ಎಲ್ಲಾ ಸಂಸ್ಕಾರಗಳನ್ನು ಮಾಡಿದ್ದರೆ ಔರಸ ಪುತ್ರನಿಗೆ ಸಿಗುವ ಸೌಲಭ್ಯ ಅಥವಾ ಆಸ್ತಿ ಈತನಿಗೂ ಲಭ್ಯವಾಗುತ್ತಿತ್ತು.[೧೫]

ದತ್ತುಪುತ್ರನನ್ನು ಪಡೆಯುವ ಸಂದರ್ಭದಲ್ಲಿ ಆ ಮನೆತನದ ಮಂತ್ರಿಗಳು, ಬಂಧುವರ್ಗದವರು, ಸಭೆ ಸೇರಿ ಮುಂದೆ ರಾಜತ್ವ ನಡೆಯುವ ಕುರಿತು ಮುಂದಾಲೋಚನೆಗೈದು ಅವರೆಲ್ಲರ ತೀರ್ಮಾನದಂತೆ ದತ್ತುಪುತ್ರ ತೆಗೆದುಕೊಂಡ ಮೇಲೆ ಆ ವ್ಯಕ್ತಿಯ ಮೂಲನಾಮವನ್ನು ಬದಲಿಸಿ, ದತ್ತಕ ಬಂದ ರಾಜ ಮನೆತನದ ಪದ್ಧತಿಯಂತೆ ಪರಂಪರೆಯ ಹೆಸರನ್ನೇ ನೀಡಿ ಪಟ್ಟಾಭಿಷೇಕ ಮಾಡಲಾಗುತ್ತಿತ್ತು. ಆದರೆ ತಂದೆಯ ಹೆಸರನ್ನೇ ಮಕ್ಕಳಿಗೆ ಅವರಿರುವಾಗ ಇಡುವ ಪದ್ಧತಿಯು ಹೆಚ್ಚಾಗಿ ಕಂಡುಬರುವುದಿಲ್ಲ.[೧೬]

ಈ ಮನೆತನಗಳಲ್ಲಿ ದತ್ತಕ ತೆಗೆದುಕೊಂಡ ಪ್ರಸಂಗಗಳು ಇಂತಿವೆ. ಚಿತ್ರದುರ್ಗ ಅರಸರಲ್ಲಿ ಇಮ್ಮಡಿ ಮದಕರಿನಾಯಕ(ಕ್ರಿ.ಶ.೧೬೫೨-೧೬೭೪)ನಿಗೆ ಗಂಡು ಸಂತಾನವಿಲ್ಲದ್ದರಿಂದ ಈತನ ತಮ್ಮ(ಸಾಕುಮಗ) ಓಬಣ್ಣ(ಮದಕರಿ)ನಾಯಕನಿಗೆ ಪಟ್ಟಗಟ್ಟಲಾಯಿತು.[೧೭] ಸ್ವಲ್ಪ ದಿನದಲ್ಲಿ ಸೈನಿಕರು ಈತನ ತಲೆಹೊಯ್ದರು. ನಂತರದಲ್ಲಿ ಚಿಕ್ಕಣ್ಣನಾಯಕನನ್ನು(ಕ್ರಿ.ಶ.೧೬೭೫-೧೬೮೬) ಕಣಕುಪ್ಪೆಯಿಂದ ಚಿತ್ರದುರ್ಗಕ್ಕೆ ಕರೆಯಿಸಿ ಪಟ್ಟಾಭಿಷೇಕ ಮಾಡಿದರು. ಈತನಿಗೆ ಮಕ್ಕಳಿರಲಿಲ್ಲ. ಆಗ ಅಧಿಕಾರವು ಚಿಕ್ಕಣ್ಣನಾಯಕನ ತಮ್ಮ ಚಿಕ್ಕ ಮದಕರಿನಾಯಕ (ಮುಮ್ಮಡಿ ಮದಕರಿನಾಯಕ ಕ್ರಿ.ಶ.೧೬೮೬-೧೬೮೯) ಅಧಿಕಾರಕ್ಕೆ ಬಂದನು. ಆಗ ದಳಪತಿಗಳ ಪ್ರಾಬಲ್ಯದಿಂದ ಮತ್ತಿ ತಿಮ್ಮಣ್ಣನಾಯಕನ ಚಿಕ್ಕಪ್ಪ ಬುಳ್ಳನಾಯಕನ ಸಂತತಿಯ ಭರಮಣ್ಣನಾಯಕ(ಕ್ರಿ.ಶ.೧೬೮೯-೧೭೨೧)ನಿಗೆ ಪಟ್ಟಗಟ್ಟಲಾಯಿತು.

ಇಮ್ಮಡಿ ಕಸ್ತೂರಿ ರಂಗಪ್ಪನಾಯಕ(ಕ್ರಿ.ಶ.೧೭೪೯-೧೭೫೪) ಸಂತಾನಹೀನವಾಗಿ ಕಾಲವಾದಾಗ ಆಗ ಈತನ ತಾಯಿ ಗಂಡಿಲ ಓಬಳಮ್ಮ ನಾಗತಿಯು ತನ್ನ ಸಹೋದರನಾದ ನರಸಪ್ಪನಾಯಕ ಮತ್ತು ನೀಲಪ್ಪನಾಯಕನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಪ್ರಯತ್ನಿಸಿದಳು. ಆದರೆ ಅದು ಫಲಿಸಲಿಲ್ಲ.

ಈಕೆಯು ಸಾಯುವ ಕಾಲದಲ್ಲಿ ತನ್ನ ಗಂಡನು ದತ್ತು ತೆಗೆದುಕೊಂಡಿದ್ದ ದೊಡ್ಡ ಮದಕರಿನಾಯಕನಿಗೆ ಪಟ್ಟದಕತ್ತಿ ಕೊಡಿಸಿ, ಜ್ಞಾತಿ ಪುತ್ರನಾದ ಚಿಕ್ಕ ಮದಕರಿನಾಯಕ(ತೊದಲು ಭರಮಪ್ಪನಾಯಕನ ಮಗ)ನಿಗೆ ಮೊಹರು ಕೊಡಿಸಿ ಫೌಜಿನ ಮೇಲೆ ಯಜಮಾನತ್ವ ಮತ್ತು ರಾಜ್ಯದ ಆಡಳಿತ ನೋಡಿಕೊಳ್ಳುವಂತೆ ಏರ್ಪಡು ಮಾಡಿದಳು.[೧೮]

ಅದೇ ರೀತಿ ಸುರಪುರ ಅರಸುಮನೆತನದಲ್ಲಿ ಮೊದಲನೆಯ ಅರಸ ಗಡ್ಡಿಪಿಡ್ಡನಾಯಕನಿಗೆ ಆರು ಜನ ಹೆಂಡಂದಿರಿದ್ದರೂ ಮಕ್ಕಳಿರಲಿಲ್ಲ. ಗುಡಗುಂಟಿ ಸಂಸ್ಥಾನದ ತನ್ನ ಅಣ್ಣನ ಮಗ ಪಾಮನಾಯಕನನ್ನು (ಕ್ರಿ.ಶ.೧೫೭೮-೧೬೮೮) ದತ್ತಕ ತೆಗೆದುಕೊಂಡನು. ಈತನಿಗೂ ಮಕ್ಕಳಾಗದಿದ್ದಾಗ ಅದೇ ಗುಡಗುಂಟಿ ಸಂಸ್ಥಾನದ ಅನ್ನದಾನಿ ಸೋಮಪ್ಪನಾಯಕನ ಮಗ ಪೆದ್ದ ಪಿಡ್ಡನಾಯಕ(ಕ್ರಿ.ಶ.೧೬೯೫-೧೭೨೫)ನನ್ನು ದತ್ತಕ ತೆಗೆದುಕೊಂಡನು. ಈ ರೀತಿ ದತ್ತಕ ಕೊಟ್ಟ ಗುಡಗುಂಟಿ ಮತ್ತು ಸುರಪುರ ಅರಸರ ಗೋತ್ರ 'ಗೋಸಲ' ಆಗಿತ್ತು. ಈ ರೀತಿಯಾದ ಉಳಿದ ಮನೆತನಗಳಲ್ಲಿಯೂ ದತ್ತಕ ತೆಗೆದುಕೊಳ್ಳುವ ಸಂಪ್ರದಾಯವಿದ್ದಿತು.

### ೩.೧.೨ ಪಟ್ಟಾಭಿಷಿಕ್ತನಾಗುವ ಅರಸನ ಅರ್ಹತೆಗಳು

ಸಾಮಾನ್ಯವಾಗಿ ರಾಜನಾಗಿ ಪಟ್ಟಕ್ಕೆ ಬರಬೇಕಾದವನು ಆಡಳಿತಕ್ಕೆ ಬೇಕಾದ ವಿದ್ಯೆಯನ್ನು ಪಡೆದವನಾಗಿರಬೇಕಿತ್ತು. ವೇದ, ಪುರಾಣ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಯುದ್ಧಶಾಸ್ತ್ರ, ಅಶ್ವಶಾಸ್ತ್ರ, ವಿಜ್ಞಾನ, ಸಂಗೀತ, ಭಾಷೆ ಮುಂತಾದವುಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದಿರಬೇಕು.[೧೯] ಆದರೆ ನಾಯಕ ಅರಸುಮನೆತನಗಳಲ್ಲಿ ಸಾಕಷ್ಟು ವಿದ್ಯೆಯನ್ನು ಪಡೆದವರ ಕೊರತೆ ಇತ್ತು. ಹೀಗಾಗಿ ಅವನು ತನ್ನ ರಾಜ್ಯವನ್ನು ಸರಿಯಾಗಿ ನೋಡಿಕೊಂಡು ಹೋಗುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದರೆ ಸಾಕಾಗುತ್ತಿತ್ತು. ಆದರೆ ಪಟ್ಟಕ್ಕೆ ಕೂಡುವ ಪೂರ್ವದಲ್ಲಿಯೇ ಯುವರಾಜನಾದವನಿಗೆ ಎಲ್ಲಾ ವಿದ್ಯೆಗಳಲ್ಲಿ ತರಬೇತಿ ನೀಡಲಾಗುತ್ತಿತ್ತು. ಆಡಳಿತದಲ್ಲಿ ಅನುಭವ ಗಳಿಸಲು ರಾಜನು ಯುವರಾಜನಿಗೆ ಹಲವು ಜವಾಬ್ದಾರಿಗಳನ್ನು ಕೊಡುತ್ತಿದ್ದನು.[೨೦]

ಅರಸನಾಗುವ ಯುವರಾಜ ಶಾಸ್ತ್ರೋಕ್ತವಾಗಿ ೨೪ ವರ್ಷದವನಿರಬೇಕಾಗಿತ್ತು[೨೧] ಎಂಬ ನಿಯಮವಿದ್ದರೂ, ಕೆಲವು ಬಾರಿ ಅನಿವಾರ್ಯವಾಗಿ ಚಿಕ್ಕವಯಸ್ಸಿನಲ್ಲಿಯೇ ಪಟ್ಟಕ್ಕೆ ಕೂಡಿಸಿದ ಉದಾಹರಣೆಗಳು ಈ ಮನೆತನದಲ್ಲಿವೆ. ಚಿತ್ರದುರ್ಗದ ಕಸ್ತೂರಿ ರಂಗಪ್ಪನಾಯಕನಿಗೆ ಮಕ್ಕಳಿಲ್ಲದಿದ್ದಾಗ, ಆತನ ತಾಯಿ ಓಬಳಮ್ಮ ನಾಗತಿ ಬಿಳಿಚೋಡು ನಾಯಕನಿಗೆ ೧೨ನೇ ವಯಸ್ಸಿನಲ್ಲಿ ಪಟ್ಟಾಭಿಷೇಕ ಮಾಡಿದಳು.[೨೨]

ಹಾಗೆಯೇ ಸುರಪುರದಲ್ಲಿ ಕೃಷ್ಣಪ್ಪನಾಯಕನ ನಂತರ ಆತನ ಮಗ ನಾಲ್ವಡಿ ವೆಂಕಟಪ್ಪನಾಯಕನಿಗೆ ಕೇವಲ ೧೧ ವರ್ಷದವನಿರುವಾಗಲೇ ಪಟ್ಟಾಭಿಷೇಕ ಮಾಡಲಾಯಿತು.[೨೩] ಇಂಥ ಕೆಲವು ಉದಾಹರಣೆಗಳನ್ನು ನೋಡಬಹುದಾದರೂ ಹೆಚ್ಚಾಗಿ ಪ್ರೌಢಾವಸ್ಥೆಗೆ ಬಂದವರೇ ಅಧಿಕಾರಕ್ಕೆ ಬರುತ್ತಿದ್ದರು.

### ೩.೧.೩ ಪಟ್ಟಾಭಿಷೇಕ ಸಮಾರಂಭದ ಹಂತಗಳು

ರಾಜರ ಪಟ್ಟಾಭಿಷೇಕವು ಸಾಮಾನ್ಯವಾಗಿ ವಿಜೃಂಭಣೆಯಿಂದ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ವಿವಿಧ ವಿಧಿ ವಿಧಾನಗಳನ್ನು ನಡೆಸಲಾಗುತ್ತಿತ್ತು. ಸಂಸ್ಥಾನದ ಇತರೆಡೆಗಳ ದೇವಾಲಯಗಳಲ್ಲಿ ಉತ್ಸವ ಹಾಗೂ ವಿಶೇಷ ಪೂಜಾದಿ ಕಾರ್ಯಕ್ರಮಗಳು ಹೆಚ್ಚಾಗಿ ನಡೆಯುತ್ತಿದ್ದವು.[೨೪] ಪಟ್ಟಾಭಿಷೇಕ ಸಮಾರಂಭದ ಹಂತಗಳು ಈ ಕೆಳಗಿನಂತಿವೆ :

### ೩.೧.೩.೧ ಉಪನಯನ ಮಹೋತ್ಸವ

ಪಟ್ಟಾಭಿಷೇಕದ ಪೂರ್ವದಲ್ಲಿ ಮುಖ್ಯವಾಗಿ ಪಟ್ಟಕ್ಕೆ ಕೂಡುವ ಅರಸನಿಗೆ ಉಪನಯನವನ್ನು ನಡೆಸಲಾಗುತ್ತಿತ್ತು. ವೈಷ್ಣವ ಮತದ ಅನುಸರಣೆ ಮಾಡಿದ ಚಿತ್ರದುರ್ಗ, ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ ಮುಂತಾದ ಮನೆತನಗಳಲ್ಲಿ ಉಪನಯನ ಕಾರ್ಯಕ್ರಮ ಜರುಗಿದರೆ, ಶೈವ ಮತದ ಆಚರಣೆಗೆ ಒಳಪಟ್ಟ ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಹರತಿ ಮನೆತನಗಳಲ್ಲಿ ಲಿಂಗಧಾರಣೆಯ ಮೂಲಕ ಸಮಾರಂಭ ಜರುಗುತ್ತಿತ್ತು.[೨೫] ಒಂದು ಶುಭದಿನವನ್ನು ನಿಶ್ಚಯ ಮಾಡಿದ ನಂತರ ಹೋಮವನ್ನು ಮಾಡಲು ಪಾತ್ರೆಯಲ್ಲಿ ಜಲವನ್ನು ತುಂಬಿ, ಆ ಜಲದ ಮಧ್ಯಭಾಗದಲ್ಲಿ ಗಳಿಗೆ ಬಟ್ಟಲನ್ನು ಪಾತ್ರೆಯಲ್ಲಿ ಬಿಡಲಾಗುತ್ತಿತ್ತು. ನಂತರ ಪಟ್ಟಾಭಿಷೇಕ ಮಂಟಪದ ಮಧ್ಯೆ ಭಾಗದಲ್ಲಿ ಪಟ್ಟಾಭಿಷೇಕದ ಸಮಾರಂಭಕ್ಕೆ ಒಂದೊಂದು ಮಂಟಪವನ್ನು ಸಜ್ಜುಗೊಳಿಸಲಾಗಿರುತ್ತಿತ್ತು. ಆ ಮಂಟಪದಲ್ಲಿಯೇ ಪಟ್ಟಾಭಿಷೇಕ ಜರುಗುತ್ತಿತ್ತು.

ಚಿತ್ರದುರ್ಗ ನಾಯಕ ಅರಸರ ಪಟ್ಟಾಭಿಷೇಕ ಮಹೋತ್ಸವವು ಸಂಪಿಗೆ ಸಿದ್ದೇಶ್ವರನ ದೇವಾಲಯದಲ್ಲಿ ಜರುಗುತ್ತಿದ್ದರೆ[೨೬] ಆನೆಗೊಂದಿಯಲ್ಲಿ ಶ್ರೀರಂಗನಾಥ ದೇವಾಲಯದ[೨೭] ಪ್ರಾಂಗಣದಲ್ಲಿ ನೆರವೇರಿಸುತ್ತಿದ್ದರು. ಸುರಪುರದ ಅರಸರು ಮೊದಲು ವನದುರ್ಗದಲ್ಲಿದ್ದಾಗ, ಅಲ್ಲಿಯ ಹನುಮ ದೇವಾಲಯದ ಮುಂದೆ, ಸುರಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಮೇಲೆ ಅರಮನೆಯ ಮುಂಭಾಗದಲ್ಲಿ ಪೀಠಾಧಿಕರಣವನ್ನು ನಡೆಸುತ್ತಿದ್ದರು. ಹಾಗೆಯೇ ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಹರತಿ ಮನೆತನದವರು ತಮ್ಮ ಅರಮನೆಯ ಪ್ರಾಂಗಣದಲ್ಲಿಯೇ ನಡೆಸುತ್ತಿದ್ದು, ಅಲಂಕಾರದಿಂದ ಕೂಡಿದ ಮಂಟಪಗಳನ್ನು ನಿರ್ಮಿಸಲಾಗುತ್ತಿತ್ತೆನ್ನಲಾಗಿದೆ. ಆ ಮಂಟಪದ ಮಧ್ಯಭಾಗದ ವೇದಿಕೆಯ ಮೇಲೆ ಕುಳಿತು ಪುರೋಹಿತರು ವ್ರತಬಂಧದ ವಿಧಿನಿಯಮಗಳನ್ನು ಉಪನಯನಕ್ಕೊಳಗಾಗುವವನಿಗೆ ಹೇಳಿಕೊಡುತ್ತಿದ್ದರು. ಮಂತ್ರೋಚ್ಚಾರಗಳನ್ನು ಪಠಿಸುವುದರ ಮೂಲಕ ಯಜ್ಞೋಪವೀತದೊಂದಿಗೆ ನೂಲಿನೆಳೆಯ ಯಜ್ಞೋಪವೀತವನ್ನು ಅಗ್ನಿಸಾಕ್ಷಿಯಾಗಿ ರಾಜನಿಗೆ ತೊಡಿಸುತ್ತಿದ್ದರು. ಈ ರೀತಿ ಪುರೋಹಿತರು ಉಪನಯನ ಕಾರ್ಯಕ್ರಮವನ್ನು ಮುಗಿಸಿ ವೇದೋಕ್ತ ಆಶೀರ್ವಾದ ಮಂತ್ರ ಪಠಿಸುತ್ತಿದ್ದರು.

### ೩.೧.೩.೨ ವಿಧಿಪೂರ್ವಕ ವಿವಾಹ

ಪಟ್ಟಕ್ಕೆ ಬರುವ ಮೊದಲು ಲಗ್ನವಾಗಿದ್ದರೆ, ಮತ್ತೆ ಆತನಿಗೆ ಉಪನಯನದ ಮರುದಿನ ವಿವಾಹ ಮಹೋತ್ಸವ ವಿಧಿಪೂರ್ವಕವಾಗಿ ನಡೆಯುತ್ತಿತ್ತು. ಈ ವಿವಾಹದಲ್ಲಿ ರಾಜನ ರಾಣಿಗೆ ಹಿರಿಯ ರಾಣಿಯ ಸ್ಥಾನಮಾನ ದೊರಕುತಿತ್ತು. ಮೊದಲು ಶಾಸ್ತ್ರಪದ್ಧತಿಯಂತೆ ಪಟ್ಟದ ಹಿರಿಯ ರಾಣಿಯ ವಿವಾಹ ಕಾರ್ಯಕ್ರಮ ಮುಗಿಸಿಕೊಂಡ ನಂತರ ಇನ್ನುಳಿದ ರಾಣಿಯರೊಂದಿಗೆ ಅರಸನ ವಿವಾಹಶಾಸ್ತ್ರ ವಿಧಿಪೂರ್ವಕ ವಾಗಿ ಜರುಗುತ್ತಿತ್ತು.

### ೩.೧.೩.೩ ತುಲಾಭಾರ ಕಾರ್ಯಕ್ರಮ

ಇದು ಪಟ್ಟಾಭಿಷೇಕದಲ್ಲಿಯೇ ಒಂದು ಬಹುಮುಖ್ಯ ಕಾರ್ಯಕ್ರಮವಾಗಿತ್ತು. ಈ ತುಲಾಭಾರಕ್ಕಾಗಿ ತಕ್ಕಡಿಯ ಪರಡಿಗಳು ಸರಪಳಿಯಿಂದ ಜೋಡಿಸಲ್ಪಟ್ಟಿರುತ್ತಿದ್ದವು. ಈ ಕಾರ್ಯಕ್ರಮದಲ್ಲಿ ಭಾಗವಹಿಸಲು ರಾಜ್ಯದ ಸಾಮಂತರು, ಸರದಾರರು, ರಾಜಪ್ರತಿನಿಧಿಗಳು, ರಾಯಭಾರಿಗಳು ಸೇರಿರುತ್ತಿದ್ದರು. ತುಲಾಭಾರದ ಸಂದರ್ಭದಲ್ಲಿ ಅದಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಸಾಲಾಗಿ ಜೋಡಿಸುತ್ತಿದ್ದರು. ಪಟ್ಟಾಭಿಷಿಕ್ತನಾಗುವ ಅರಸ ತುಲಾಭಾರ ಕಾರ್ಯಕ್ರಮದಲ್ಲಿ ಭಾಗವಹಿಸುವುದಕ್ಕಿಂತ ಮುಂಚೆ ತಾಯಿಯ ಅಂತಃಪುರಕ್ಕೆ ತೆರಳಿ ನಮಸ್ಕರಿಸುತ್ತಿದ್ದನು. ನಂತರ ಅರಸ ತುಲಾಭಾರದ ಸಭಾಭವನಕ್ಕೆ ಬರುವಾಗ ಬ್ರಾಹ್ಮಣರು, ಆತನ ಎಡಬಲದಲ್ಲಿ ನಿಂತು ವೇದಮಂತ್ರಗಳನ್ನು ಪಠಿಸುತ್ತಿದ್ದರು. ತುಲಾಭಾರದ ತಕ್ಕಡಿಗೆ ಪಂಡಿತರಿಂದ ಪೂಜೆಯಾಗುತ್ತಿತ್ತು. ಅರಸನನ್ನು ಒಂದು ತಕ್ಕಡಿಯಲ್ಲಿ ಕೂಡಿಸುತ್ತಿದ್ದರು. ಇನ್ನೊಂದು ತಕ್ಕಡಿಗೆ ಅಕ್ಕಿ, ಬೆಲ್ಲ ಮತ್ತು ಬೆಳ್ಳಿಯ ನಾಣ್ಯಗಳನ್ನಿಡುತ್ತಿದ್ದರು. ಆಗ ಕೊಂಬು, ಕಹಳೆ, ಶಂಖ, ಜಾಗಟೆ, ತುತ್ತೂರಿ, ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದವು. ಎರಡು ತಕ್ಕಡಿಗಳು ಸಮನಾಗಿ ನಿಂತ ಮೇಲೆ, ಪ್ರಜೆಗಳು ಅರಸನಿಗೆ ಜಯಕಾರ ಹಾಕುತ್ತಿದ್ದರು. ತುಲಾಭಾರದಲ್ಲಿ ಬಳಸಿದ ಧನಕನಕಾದಿ ವಸ್ತುಗಳನ್ನು ಅರಸ ಪಂಡಿತೋತ್ತಮರಿಗೆ, ದೇವಮಂದಿರಗಳಿಗೆ ದಾನ ಮಾಡುತ್ತಿದ್ದನು. ಇದು ವೇದೋಕ್ತ ರೀತಿಯಲ್ಲಿ ಮುಗಿಯುತ್ತಿತ್ತು.

### ೩.೧.೩.೪ ರಾಜಪರಿವಾರದ ತುಲಾಭಾರ

ರಾಜಪರಿವಾರದವರು ಮತ್ತು ರಾಣಿವಾಸದವರು ಪ್ರೀತ್ಯರ್ಥವಾಗಿ ಅರಸನಿಗೆ ಪುನಃ ತುಲಾಭಾರ ಮಾಡುತ್ತಿದ್ದರು. ಈ ಸಂಪತ್ತನ್ನು ಬಡಬಗ್ಗರಿಗೆ ದಾನ ಮಾಡುತ್ತಿದ್ದರು. ಈ ಕಾರ್ಯಕ್ರಮದಲ್ಲಿ ಎಲ್ಲಾ ಪ್ರಜೆಗಳು ಭಾಗವಹಿಸುತ್ತಿದ್ದರು.

### ೩.೧.೩.೫ ದಾನ - ಧರ್ಮ

ಸಿಂಹಾಸನಾರೋಹಣ ಕಾರ್ಯಕ್ರಮ ಜರುಗುವವರೆಗೆ ಪ್ರತಿನಿತ್ಯ ಅರಸನಿಂದ ಸುವರ್ಣದಾನ, ಪಂಚಲೋಹದಾನ, ಧನದಾನ್ಯದಿಗಳ ದಾನ, ಗೋದಾನ, ಭೂದಾನ ನಡೆಯುತ್ತಿದ್ದವು. ಪ್ರತಿದಿನ

ಸಾವಿರಾರು ಸಂಖ್ಯೆಯ ದೀನ ದಲಿತರಿಗೆ ಸುಗ್ರಾಸ ಭೋಜನ ನಡೆಯುತ್ತಿತ್ತು. ಈ ದಾನ ಧರ್ಮಗಳು ಆಯಾ ಮನೆತನದ ಆರ್ಥಿಕ ಸ್ಥಿತಿಯನ್ನವಲಂಬಿಸಿರುತ್ತಿದ್ದುವು. ಪಟ್ಟಾಭಿಷೇಕದ ಸವಿನೆನಪಿಗಾಗಿ, ರಾಜರು ದೇವಾಲಯಗಳನ್ನು ಕಟ್ಟಿಸುವುದು, ಇಲ್ಲವೇ ಜೀರ್ಣೋದ್ಧಾರ ಮಾಡುವುದು ಇಲ್ಲವೇ ದೇವರಿಗೆ ಸ್ವರ್ಣಕಮಲ, ನೈವೇದ್ಯ ಮಾಡಲು ಹರಿವಾಣ, ಆರತಿ-ಹಲಗೆ, ಬೆಳ್ಳಿಯ ಆರತಿಗಳನ್ನು ದಾನ ಮಾಡುತ್ತಿದ್ದರು.[೨೮] ಹಾಗೂ ತಮ್ಮ ಪೂರ್ವಜರ ಹೆಸರಿನಲ್ಲಿ (ತಂದೆ-ತಾಯಿ) ದೇವರ ನೈವೇದ್ಯಕ್ಕೆ ರಥೋತ್ಸವಗಳಿಗೆ ಗ್ರಾಮಗಳನ್ನು ಆಭರಣಗಳನ್ನು ನೀಡಿದ ಉದಾಹರಣೆಗಳಿವೆ.

ಚಿತ್ರದುರ್ಗದ ಭರಮಣ್ಣನಾಯಕನು ತನ್ನ ಪಟ್ಟಾಭಿಷೇಕವಾದ ವಿಜಯದಶಮಿಯ ದಿನದಂದು ಮುರಿಗೆಸ್ವಾಮಿಗಳಿಗೆ ಮಠ ನಿರ್ಮಾಣ ಮಾಡಲು ಶಂಕುಸ್ಥಾಪನೆ ಮಾಡಿದ ಬಗ್ಗೆ ವಂಶಾವಳಿಗಳು ಹೇಳುತ್ತವೆ.[೨೯] ಸುರಪುರದ ಪಾಮನಾಯಕನ ಪಟ್ಟಾಭಿಷೇಕವಾಗುವಾಗ ತನ್ನ ಹಿರಿಯ ರಾಣಿ ಅವ್ವನಾಗತಿಯರ ಹೆಸರಿನಿಂದ ಅಮ್ಮಾಪುರ ಅಗ್ರಹಾರವನ್ನು ಬೋನಾಳಕೆರೆಯನ್ನು ಅಲ್ಲಲ್ಲಿ ಧರ್ಮಶಾಲೆಗಳು, ಅರವಟ್ಟಿಗೆಗಳು ಹಾಗೂ ರಾಜ್ಯದ ರಕ್ಷಣೆಗಾಗಿ ಬೆನಕನಹಳ್ಳಿಯಲ್ಲಿ ಎತ್ತರವಾದ ಹುಡೆಯನ್ನು ಕಟ್ಟಲಾಯಿತು.

### ೩.೧.೩.೬ ಪ್ರಾಯಶ್ಚಿತ್ತಾದಿ ಕಾರ್ಯಕ್ರಮ

ಇವರು ತಮ್ಮ ಜೀವನಾವಧಿಯ ಕಾಲದಲ್ಲಿ ತಿಳಿದೋ, ತಿಳಿಯದೆಯೋ, ನಡೆದುಹೋದ ಪಾಪಕರ್ಮಗಳ ನಿವಾರಣಾರ್ಥವಾಗಿ ಅನೇಕ ರೀತಿಯಲ್ಲಿ ಪ್ರಾಯಶ್ಚಿತ್ತಾದಿ ವಿಧಿಗಳನ್ನು ಮಾಡಿಸಲಾಗುತ್ತಿತ್ತು. ಆಗ ಪ್ರತಿಯೊಂದು ಕಾರ್ಯಕ್ರಮಗಳು ವೇದೋಕ್ತವಾದ ರೀತಿಯಲ್ಲಿ ನಡೆಯುತ್ತಿದ್ದವು.

### ೩.೧.೩.೭ ಐಂದ್ರಶಾಂತಿಯ ಕಾರ್ಯಕ್ರಮ

ಈ ಕಾರ್ಯಕ್ರಮ ಬೆಳಗಿನ ಜಾವದಲ್ಲಿ ನಡೆಯುತ್ತಿತ್ತು. ಇದಾದ ನಂತರ ಅರಸನಿಗೆ ವಿಶ್ರಾಂತಿ ಪಡೆಯಲು ಅವಕಾಶ ನೀಡಲಾಗುತ್ತಿತ್ತು. ಏಕೆಂದರೆ ಸಾಯಂಕಾಲದ ಸಿಂಹಾಸನಾರೋಹಣ ಸಮಾರಂಭದಲ್ಲಿ ರಾಜದರ್ಶನ, ದೇವತಾದರ್ಶನ ಮುಂತಾದ ಕಾರ್ಯಕ್ರಮಗಳು ಜರುಗುವುದರಿಂದ ಆತನಿಗೆ ಆಯಾಸವಾಗದಂತೆ ನೋಡಿಕೊಳ್ಳುವುದಾಗಿತ್ತು.

### ೩.೧.೩.೮ ಸಿಂಹಾಸನಾರೋಹಣ ಸಮಾರಂಭ

ಸಾಯಂಕಾಲದ ಸಂದರ್ಭದಲ್ಲಿ ವಿಘ್ನ ಪರಿಹಾರಕ ಗಜಾನನ ಪೂಜೆಯಾದ ನಂತರ, ಮಾತೃಕಾ ಪೂಜೆ, ವಂಶೋದ್ಧಾರ ಪೂಜೆ ನಡೆದು ಹೋಮಾದಿಗಳನ್ನು ಪೂರೈಸಲಾಗುತ್ತಿತ್ತು. ನಂತರ ಅರಸ ಪಟ್ಟದ ರಾಣಿಯೊಂದಿಗೆ ಮಂಟಪದಲ್ಲಿ ಆಸೀನನಾಗುತ್ತಿದ್ದ. ಆಗ ಎತ್ತರವಾದ ಪೀಠದ ಮೇಲೆ ಪ್ರತಿಯೊಂದು ದಿಕ್ಕುಗಳಲ್ಲಿಯೂ ನಾಲ್ಕು ನಾಲ್ಕು ತುಂಬಿದ ಕಲಶಗಳನ್ನಿಡುತ್ತಿದ್ದರು. ಈ ಕಲಶಗಳಲ್ಲಿ ಹಾಲು, ತುಪ್ಪ, ಮೊಸರು ಮತ್ತು ಜಲ ತುಂಬಿರುತ್ತಿದ್ದರು. ಪೂರ್ವದಿಕ್ಕಿನ ಕಲಶಗಳಲ್ಲಿ ಜೇನುತುಪ್ಪವನ್ನಿಡುತ್ತಿದ್ದರು.

ಇನ್ನುಳಿದ ಕಲಶಗಳಲ್ಲಿ ಪವಿತ್ರತೀರ್ಥಗಳ ಜಲರಾಶಿಯನ್ನು ತುಂಬಿರುತ್ತಿದ್ದರು. ಈ ಜಲ ತುಂಬಿದ ಕಲಶಗಳಲ್ಲಿ ಅನೇಕ ವನಸ್ಪತಿಗಳನ್ನೂ, ನಾನಾತರಹದ ಹೂಗಳನ್ನು ಹಾಕಿರುತ್ತಿದ್ದರು. ಅವುಗಳಿಗೆ ರೇಶ್ಮೆ ಬಟ್ಟೆಗಳನ್ನು ಹೊದಿಸುತ್ತಿದ್ದರು. ಈ ಕಲಶಗಳಲ್ಲಿದ್ದ ತೀರ್ಥ ಬಳಸಿ ಪೂಜೆ ಜರುಗುತ್ತಿತ್ತು. ತೀರ್ಥಾದಿಗಳ ಅಭಿಷೇಕ ಮಾಡಲು ಅತ್ತಿಯಮರದ ವಿಶಾಲವಾದ ಮಣೆ ಮಾಡಿಸಿರುತ್ತಿದ್ದರು.

ಜಲದೇವತೆಯನ್ನು ಧೂಪ, ದೀಪ, ನೈವೇದ್ಯಾದಿಗಳಿಂದ ಪೂಜೆ ಮಾಡಿದ ನಂತರ ಅಗ್ನಿದೇವತೆ ಗೃಹ ದೇವತೆಗಳ ಪ್ರತಿಷ್ಠಾಪನೆಯನ್ನು ಮಾಡುತ್ತಿದ್ದರು. ನಂತರ ಸರ್ವಪ್ರಧಾನ ಹೋಮ ಜರುಗುತ್ತಿತ್ತು. ನಂತರ ಪುರೋಹಿತ ವರ್ಗದವರು, ರಾಜನಿಗೆ ಮಂತ್ರಸ್ನಾನವನ್ನು ಮಾಡಿಸಿ ಸಭಾಮಂಟಪಕ್ಕೆ ಕರೆತರುತ್ತಿದ್ದರು.[೩೦] ರಾಜನ ಆಸ್ಥಾನದ ಪ್ರಧಾನರು, ಇತರ ಹುದ್ದೆಯಲ್ಲಿದ್ದವರು ತಮ್ಮ ತಮ್ಮ ಸ್ಥಳದಲ್ಲಿ ನಿಲ್ಲುತ್ತಿದ್ದರು. ಪ್ರಧಾನ ಅಮಾತ್ಯರು ಪೂರ್ವಭಾಗದಲ್ಲಿ ತುಪ್ಪದ ಕೊಡ ಹಿಡಿದು ನಿಂತಿರುತ್ತಿದ್ದರು. ನಾಲ್ಕು ದಿಕ್ಕುಗಳಲ್ಲಿ ತುಪ್ಪ, ಮೊಸರು, ಹಾಲು ಮುಂತಾದ ಕಲಶ ಹಿಡಿದು ನಿಲ್ಲುತ್ತಿದ್ದರು.

ಅರಸುಮನೆತನದ ಕುಲಪುರೋಹಿತರು ಪರ್ಜನ್ಯಮಂತ್ರದಿಂದ, ಪವಿತ್ರಜಲದಿಂದ ರಾಜನಿಗೆ ಸ್ನಾನ ಮಾಡಿಸುತ್ತಿದ್ದರು. ಅಮೂಲ್ಯವಾದ ವಸ್ತ್ರಾಭರಣಗಳನ್ನು ನೀಡುತ್ತಿದ್ದರು. ವಸ್ತ್ರಾಭರಣ ಧರಿಸಿದ ರಾಜ ವೀರಾಸನ ಹಾಕಿ ಕುಳಿತು, ಶಸ್ತ್ರಪೂಜೆ ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಮುತ್ತೈದೆಯರಿಂದ ಆರತಿ ಬೆಳಗಲಾಗುತ್ತಿತ್ತು. ನಂತರ ಎತ್ತರವಾದ ಸಿಂಹಾಸನದ ಮೇಲೆ ರಾಜ ಆಸೀನನಾಗುತ್ತಿದ್ದನು. ಸಿಂಹಾಸನದ ಬಲಭಾಗಕ್ಕೆ ರಾಣಿವಾಸದವರು ಕೂಡಲು ಪರದೆ ವ್ಯವಸ್ಥೆ ಇರುತ್ತಿತ್ತು.[೩೧] ಅರಸನಿಗೆ ವಿಧಿಪೂರ್ವಕವಾಗಿ ಪಟ್ಟದ ಕತ್ತಿ, ಪಟ್ಟದ ಉಂಗುರ ನೀಡಿ ಪಟ್ಟದ ಹೆಸರನ್ನು ಇಡುತ್ತಿದ್ದರು. ಏಕೆಂದರೆ, ಪಟ್ಟದ ಆನೆ, ಪಟ್ಟದ ಕುದುರೆ, ಪಟ್ಟದ ಕತ್ತಿ, ಪಟ್ಟದ ಉಂಗುರ(ಮುದ್ರೆ) ಇವು ಪಟ್ಟಾಭಿಷಿಕ್ತ ಅರಸ, ಪಟ್ಟಾಭಿಷಿಕ್ತ ರಾಣಿಯವರಷ್ಟೇ ಪ್ರಾಶಸ್ತ್ಯ ಪಡೆದಿರುತ್ತವೆ. ಇವು ರಾಜ ಪ್ರಭುತ್ವದ ಸಂಕೇತ. ಇವುಗಳಲ್ಲಿ ಯಾವುದಾದರೊಂದು ಲಯವಾದರೆ ಪ್ರಭುತ್ವವೇ ಲಯವಾದಂತೆ ಎಂಬ ಭಾವನೆ ಆಗಿನದು.[೩೨]

ನಂತರ ಮಂತ್ರಘೋಷಗಳು ಮುಗಿದು ಪ್ರಜೆಗಳು ಒಕ್ಕೊರಲಿನಿಂದ ರಾಜನನ್ನು ಜಯಕಾರ ಮಾಡುತ್ತಿದ್ದರು. ಸುರಪುರದ ಅರಸರ ಪಟ್ಟಾಭಿಷೇಕದ ಸಂದರ್ಭದಲ್ಲಿ ಚೋಬದಾರರು ಹೊಗಳುತ್ತಿದ್ದ ಬಿರುದಾವಳಿಗಳೆಂದರೆ ಮಹಾರಾಜಾಧಿರಾಜ, ರಾಜಕಂಠೀರವ, ರಾಜಾಧಿಶಿರೋಮುಕುಟ, ಗೋಸಾಲ ಪಾದೋದಕ, ಶತತೂರ್ಣೋಮಜನೀತ, ಶಶಾಂಕೋಪತೇಜ, ಪುಂಜವಿರಾಜಿತ, ಶ್ರೀಮಂತ ವೆಂಕಟಪ್ಪನಾಯಕ ಬಹರಿ, ಬಲವಂತ ಬಹಾದ್ದೂರ ಬಿರುದಾಂಕಿತ, ದಿಲ್ಲಿಕಾಧೀಶ, ದುಮದುಮಧ್ವನಿ ಕೋಲಾಹಲ, ಹನುಮಧ್ವಜ, ಸುವರ್ಣ ಪಂಚಕಳಶ, ಏಕದಂತ, ರಾಮಬಾಣ, ಸುವರ್ಣಪಂಜ, ರವಾಬಜಂಗ, ಮುತಹರುದ್ದೌಲಾ, ಬಬರುಲ್ಮುಲುಕ, ಸರಸರದೇಸಾಯಿ ಮಾಮಲಿನಸರತಾಬಾಬಾದ, ಮಾಮಲಿಹಸನಾ ಬಾದ, ದಾರುಲ್ಮುಜಫರ ಬಿಜಾಪುರ, ಕಿಲ್ಲೆವಾಗಿನಗೇರಿ, ಸಂಸ್ಥಾನ ಸುರಪುರ ಎಂದು ಹೊಗಳಿದ ಬಗ್ಗೆ

ದರ್ಬಾರದ ದಾಖಲೆಗಳಲ್ಲಿ ಉಲ್ಲೇಖವಿದೆ.[೩೩] ಆಗ ಕೋಟೆಯ ಬತೇರಿಗಳ ಮೇಲೆ ತೋಪುಗಳು ಪಟ್ಟಾಭಿಷೇಕದ ವಿಷಯವನ್ನು ಸಾರಿ ಹೇಳುವಂತೆ ಧ್ವನಿ ಮಾಡುತ್ತಿದ್ದವು.

### ೩.೧.೩.೯ ಕಾಣಿಕೆ ಸಮರ್ಪಣೆ

ಅರಸನ ಪುತ್ರ ಸಂತಾನೋತ್ಸವ, ವಿವಾಹೋತ್ಸವ, ಪಟ್ಟಾಭಿಷೇಕಗಳಲ್ಲಿ ಇತರ ಸಾಮಂತ ಅರಸರು, ಮಾಂಡಲಿಕರು ಕಾಣಿಕೆಯನ್ನು ನೀಡುತ್ತಿದ್ದರು.[೩೪] ಕೆಲವರು ತಮ್ಮ ಪ್ರತಿನಿಧಿಗಳಿಂದ ಕಳುಹಿಸುತ್ತಿದ್ದರು. ಚಿತ್ರದುರ್ಗದ ಹಿರೇ ಮದಕರಿನಾಯಕನ ಪಟ್ಟಾಭಿಷೇಕಕ್ಕೆ ಈತನ ಸಮಕಾಲೀನನಾದ ಮೈಸೂರಿನ ಮೊದಲನೆ ಕೃಷ್ಣರಾಜಒಡೆಯರು ಉಡುಗೊರೆಗಳನ್ನು ಕಳುಹಿಸಿ ಸನ್ಮಾನಿಸಿರುತ್ತಾರೆ.[೩೫] ಸುರಪುರದ ಇಮ್ಮಡಿ ಪಾಮನಾಯಕ(ಕ್ರಿ.ಶ.೧೭೨೭-೧೭೪೧)ನ ಪಟ್ಟಾಭಿಷೇಕದ ಕಾಲಕ್ಕೆ ಹೈದ್ರಾಬಾದ್ ನಿಜಾಮ ಆಸಿಫ್ ಜಾಹನು ಕಲ್ಕಿ, ಶಿರಪೇಚು, ಆನೆ, ಅಂಬಾರಿ ಮುಂತಾದ ಕಾಣಿಕೆಗಳನ್ನು ಕಳುಹಿಸಿಕೊಟ್ಟು ತನ್ನ ಸ್ನೇಹವನ್ನು ತೋರಿಸಿದ್ದನು.[೩೬]

ಕೆಲವು ಸಲ ಇವರ ಮೇಲಿನ ಅರಸರು, ಇವರ ಪಟ್ಟಾಭಿಷ್ಕದ ಸಂದರ್ಭದಲ್ಲಿ ಕಾಣಿಕೆಯನ್ನು(ನಜರಾಣಿ ರೂಪದಲ್ಲಿ) ನೀಡುವ ಷರತ್ತನ್ನು ಹಾಕಿರುವುದುಂಟು. ಹೈದ್ರಾಬಾದ್ ನಿಜಾಮನು ಕೃಷ್ಣಪ್ಪನಾಯಕನ ಪಟ್ಟಾಭಿಷೇಕದ ಕಾಲಕ್ಕೆ ೧೫ ಲಕ್ಷಗಳ ನಜರಾಣಿ ಕೊಡಬೇಕೆಂಬ ಬೇಡಿಕೆ ಮುಂದಿಟ್ಟನು. ಈ ಮೊದಲೇ ಸಂಸ್ಥಾನವು ಆರ್ಥಿಕ ಬಿಕ್ಕಟ್ಟುಗಳನ್ನೆದುರಿಸುತ್ತ ಜರ್ಝರಿತವಾಗಿತ್ತು. ಇಷ್ಟಾದರೂ ಕೃಷ್ಣಪ್ಪನಾಯಕನು ೪,೫೦,೦೦೦ ರೂ ಕೊಟ್ಟು ಉಳಿದ ಹಣವನ್ನು ಪ್ರತಿವರ್ಷ ೧,೨೫,೦೦೦ ರೂ.ನಂತೆ ಕೊಡುವೆನೆಂದು ಒಪ್ಪಿಕೊಂಡನು.[೩೭] ಹಾಗೆಯೇ ಪಟ್ಟಾಭಿಷೇಕಗೊಂಡ ಅರಸನಿಗೆ ಪ್ರಧಾನರು ಸರದಾರರು ಕಾಣಿಕೆಯನ್ನು ಸಮರ್ಪಿಸುತ್ತಿದ್ದರು. ಅರಸನು ಸಹ ಸೇನೆಗೆ ಸೇರಿದ ಜನಕ್ಕೆಲ್ಲಾ ಒಂದು ತಿಂಗಳ ಸಂಬಳವನ್ನು ಪಟ್ಟಕಾಣಿಕೆಯಂತೆ ಕೊಡುವ ರೂಢಿ ಇತ್ತು. ಕೆಲವು ಸಲ ರಾಜ್ಯದ ಭಂಡಾರದಲ್ಲಿ ಹಣ ಕಡಿಮೆ ಇದ್ದಾಗ ಅರ್ಧ ಪಟ್ಟಕಾಣಿಕೆ ಕೊಡುತ್ತಿದ್ದರು. ಒಬ್ಬ ಹೊಸ ದೊರೆಗೆ ಪಟ್ಟವಾದರೆ ದಂಡಿನವರಿಗೆ ಪಟ್ಟಕಾಣಿಕೆ ಎಂದು ಇನಾಂ ಕೊಡುವ ಪದ್ಧತಿ ಇತ್ತು.[೩೮]

ಶ|| ೧೫೯೬ನೇ ಆನಂದ ಸಂ|| ಮಾಘ ಶು|| ೭ ರಲ್ಲಿ ಇಮ್ಮಡಿ ಮದಕರಿನಾಯಕನ ಸಾಕುಮಗ ಓಬಣ್ಣನಿಗೆ ಪಟ್ಟಕಟ್ಟಿದರು. ಆದರೆ ರಾಕ್ಷಸ ಸಂ||ದ ವೈಶಾಖ ಶುದ್ಧ ೫ ದಿವಸ ಠಾಣೇಗುರಿಕಾರರು ತಮಗೆ ಪಟ್ಟದ ಕಾಣಿಕೆಯಾಗಿ ಪದ್ಧತಿ ಪ್ರಕಾರ ಒಂದು ತಿಂಗಳ ಸಂಬಳ ಇನಾಮಾಗಿ ಕೊಡಲಿಲ್ಲವೆಂದು ತಿರುಗಿಬಿದ್ದು ಚಿಕ್ಕಬಾಗಿಲ ಬಳಿಯಲ್ಲಿ ಹೊಸ ದೊರೆ ಓಬಣ್ಣನಾಯಕ ತಲೆ ಹೊಡೆದರು.[೩೯]

ಸುರಪುರದ ಅರಸ ಇಮ್ಮಡಿ ಪಾಮನಾಯಕರ ಪುತ್ರ ಪಿಡ್ಡನಾಯಕರ ಪಟ್ಟಾಭಿಷೇಕದ ಸಂದರ್ಭದಲ್ಲಿ ಬಂದ ಜನಸಮೂಹಕ್ಕೂ ಸಮಸ್ತ ಹಾರೇಕಾರ ಜನಕ್ಕೂ, ಸರ್ನೌಬತ್ತು ಸರಹವಾಲ್ದಾರರು, ಗುರಿಕಾರರು, ಸುಬೇದಾರರು, ದಖನೀ ಇಂದೋಲೇಕಾರ್ ಮರಾಠೀ, ಕೊಟಗಾರರು, ಝುರ್ಟು ರಾಂಬಾಣ, ಮಾಶಾಳೆ,

ತಳವಾರ, ಚೋರಗಸ್ತಿಗೋಳಿವಗೈರಾ ಇವರೆಲ್ಲರಿಗೂ ಪಾತ್ರವಗೈರಾ ಮಾನ ಮರ್ಯಾದೆ ಕೊಟ್ಟು ಕಳುಹಿಸಿದರು ಎಂದು ಲೋಕಯ್ಯನ ಗ್ರಂಥ ಪುಟ ೧೭ರಲ್ಲಿ ಹೇಳಲಾಗಿದೆ.[೪೦] ನಂತರ ಪಟ್ಟಾಭಿಷೇಕ ಮಹೋತ್ಸವಕ್ಕೆ ಆಗಮಿಸಿದ ಬ್ರಾಹ್ಮಣ ಶ್ರೇಷ್ಠರಿಗೆ, ಪುರೋಹಿತರಿಗೆ, ಮುಕ್ತ ಹಸ್ತದಿಂದ ರಾಜ ಧರ್ಮಾದಿಗಳನ್ನು ಮಾಡಿದ ನಂತರ, ಊರಲ್ಲಿಯ ಎಲ್ಲಾ ದೇವಾಲಯಗಳಲ್ಲಿ ಪೂಜೆ ಪುನಸ್ಕಾರಗಳು ಜರುಗುತ್ತಿದ್ದವು.

### ೩.೧.೩ ಯುವರಾಜ ಪಟ್ಟಾಭಿಷೇಕ

ಸಾಮಾನ್ಯವಾಗಿ ರಾಜನ ಹಿರಿಯ ಮಗನೇ ಯುವರಾಜ ಪಟ್ಟಕ್ಕೆ ಅರ್ಹನಾಗಿರುತ್ತಿದ್ದನು. ಮಕ್ಕಳಿಲ್ಲದಿದ್ದಾಗ ದತ್ತಕ ತೆಗೆದುಕೊಳ್ಳುವುದು ಸಾಮಾನ್ಯವಾಗಿತ್ತು. ಈಗಾಗಲೇ ಚರ್ಚಿಸಿದಂತೆ ಇಂಥ ಅನೇಕ ಘಟನೆಗಳು ಈ ನಾಯಕ ಅರಸುಮನೆತನಗಳಲ್ಲಿ ನಡೆದಿವೆ. ರಾಜನು ತಾನು ಜೀವಿಸಿದ್ದಾಗಲೇ ತನ್ನ ಸ್ಥಾನಕ್ಕೆ ಉತ್ತರಾಧಿಕಾರಿಯನ್ನಾಗಿ ಯೋಗ್ಯ ರಾಜಕುಮಾರನನ್ನು ಆರಿಸುತ್ತಿದ್ದ. ಅಂಥ ರಾಜಕುಮಾರನನ್ನು ಯುವರಾಜ ಎಂದು ಕರೆಯಲಾಗುತ್ತಿತ್ತು. ಯುವರಾಜ ಪದವಿ ಸಾಮಾನ್ಯವಾಗಿ ಹಿರಿಯ ಮಗನಿಗೆ ಸಲ್ಲುತ್ತಿದ್ದರೂ ಕೆಲವು ಸಲ ಈ ಕ್ರಮದಲ್ಲಿ ವಿಪರ್ಯಾಸವಾಗಿ ಸಮರ್ಥನಾದ ರಾಜಕುಮಾರ(ಹಿರಿಯ ಮಗನಲ್ಲದವನು) ಯುವರಾಜ ಪಟ್ಟವನ್ನು ಪಡೆಯುತ್ತಿದ್ದುದಕ್ಕೆ ಆಧಾರಗಳಿವೆ.[೪೧]

ಯುವರಾಜನಾದವನು ಉತ್ತಮ ಶಿಕ್ಷಣ ಪಡೆದು ಮುಂದೆ ರಾಜ್ಯಭಾರವನ್ನು ಹೊರಲು ಯೋಗ್ಯನಾಗ ಬೇಕಾಗಿದ್ದಿತು. ಆ ಕಾರಣಕ್ಕಾಗಿಯೇ ಯುವರಾಜನಿಗೂ ಸಹ ಆಸ್ಥಾನದಲ್ಲಿ ಪ್ರಮುಖ ಸ್ಥಾನಮಾನಗಳನ್ನು ನೀಡಲಾಗುತ್ತಿತ್ತು. ಜೊತೆಗೆ ಪ್ರಮುಖ ಆಡಳಿತ ಭಾಗಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಯುವರಾಜನಿಗೆ ವಹಿಸಿಕೊಡಲಾಗುತ್ತಿತ್ತು. ಯುವರಾಜನಾಗುವ ರಾಜಕುಮಾರನಿಗೆ ಯೋಗ್ಯ ದಿನ ಗೊತ್ತುಪಡಿಸಿ ರಾಜನಿಗೆ ಪಟ್ಟಕಟ್ಟಿದ ರೀತಿಯಲ್ಲಿಯೇ ಪಟ್ಟಕಟ್ಟಲಾಗುತ್ತಿತ್ತು. ಅರಸನ ಪಟ್ಟಾಭಿಷೇಕದಷ್ಟು ಸಂಭ್ರಮವಿಲ್ಲದಿದ್ದರೂ, ಪಟ್ಟಕಟ್ಟುವಾಗಿನ ವಿಧಿವಿಧಾನಗಳು ಸಾಂಗವಾಗಿ ಜರುಗುತ್ತಿದ್ದವು. ಆದರೆ ಈ ಯುವರಾಜ ಪಟ್ಟಾಭಿಷೇಕವನ್ನು ಪಟ್ಟದರಸ, ಪಟ್ಟದ ರಾಣಿ ಮುಂದೆ ನಿಂತು ನಡೆಸಿಕೊಡುತ್ತಿದ್ದರು. ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ರಾಜನ ಹಿರಿಯ ಮಗನಿಗೆ ಯುವರಾಜ ಪಟ್ಟಾಭಿಷೇಕ ವಾಗುತ್ತಿರಲಿಲ್ಲ. ಯುವರಾಜ ಅಂಗ ಊನನಾಗಿದ್ದರೆ, ಬುದ್ಧಿಮಾಂದ್ಯ, ವಾಸಿಯಾಗದ ರೋಗವಿದ್ದರೆ, ಆತನಿಗೆ ಯುವರಾಜ ಪಟ್ಟ ನೀಡುತ್ತಿರಲಿಲ್ಲ.

ಹಿರೇ ಮದಕರಿ ನಾಯಕನ ತಾರಾವಳಿಯಲ್ಲಿ ಶಕ ೧೬೬೨ನೆಯ ಕಾದ್ರಿ ಸಂವತ್ಸರದಲ್ಲಿ(ಕ್ರಿ.ಶ.೧೭೪೦) ನಡೆದ ಹಿರಿಯ ಮಗ ಕಸ್ತೂರಿ ರಂಗಪ್ಪ ನಾಯಕನ ಯುವರಾಜ್ಯಾಭಿಷೇಕದ ವಿವರಣೆ ಇಂತಿದೆ : "ಕೈಲಾಸ ಶಿಖರದಲ್ಲಿ ಈಶ್ವರನು ಗಣಸಮೂಹಗಳ ಮಧ್ಯದಲ್ಲಿ ಮಂಡಿಸಿರುವಂತೆ ಚಿನ್ಮೂಲಾದ್ರಿಯಲ್ಲಿ ಬೆಳಗುವ ರತ್ನಪೀಠದ ಮೇಲೆ ವೀರಮದಕರಿರಾಜೇಂದ್ರನು ಮಾಂಡಳೀಕರು, ಸರದಾರರು, ಪರಿವಾರದವರು

ಮುಂತಾದವರ ಸಭೆಯ ಮಧ್ಯದಲ್ಲಿ, ಮಂದಹಾಸದಿಂದ ಕುಳಿತಿರುವನು. ಶ್ರೀ ಗುರು ಮುರಿಗೆಯ ಶಾಂತನ ಕರುಣಾಕಟಾಕ್ಷವು ಈ ರಾಜನ ಮೇಲೆ ಬೀರಿದೆ. ಬಂಗಾರದ ಬಣ್ಣದ ಕಂಧರವು, ಮುತ್ತಿನಂತೆ ಹೊಳೆಯುವ ರದನ ಪಂಗ್ತಿಗಳು, ಕಿರುಬೆರಳಲ್ಲಿ ಮುದ್ರೆಯುಂಗುರವನ್ನಿಟ್ಟಿದ್ದಾನೆ. ಮುತ್ತಿನ ಒಂಟಿ ಮುಂತಾದ ಕರ್ಣಾಭರಣಗಳನ್ನು ಧರಿಸಿದ್ದಾನೆ. ಧವಳಾಂಗ ಧರಿಸಿ ಝರಿಯ ತಾನು ಸುತ್ತಿಕೊಂಡು, ಮುತ್ತಿನ ತುರಾಯಿವಿಟ್ಟುಕೊಂಡು ಸುಖಾಸೀನನಾಗಿರುವನು. ಚತುರಂಗ ಮಾರ್ಬಲವು ಬಂದು ರಾಜನನ್ನು ವಂದಿಸಿತು. ಸರದಾರರೂ, ಆಶ್ರಿತರಾಜರೂ ಮುಜುರೆ ಮಾಡಿ ಪಟ್ಟದ ಕಾಣಿಕೆಯನ್ನೊಪ್ಪಿಸಿದರು.[೪೨]

ಈ ವಿವರಣೆಯ ಮೂಲಕ ಯುವರಾಜನ ಪಟ್ಟಾಭಿಷೇಕದ ಸಂದರ್ಭವನ್ನು ಅರಿಯಬಹುದು. ಹಾಗೆಯೇ ಮುಂದುವರೆದು, ಅರಸ ಯುವರಾಜನಿಗೆ ರಾಜ್ಯಸೂತ್ರದ ಕೆಲವು ಎಚ್ಚರಿಕೆಯ ಮಾತುಗಳನ್ನಾಡು ತ್ತಿದ್ದನು. ಹೀಗೆ ಯುವರಾಜ ಪಟ್ಟ ಕಟ್ಟಿಸಿಕೊಂಡ ತರುವಾಯ ರಾಜನ ನಂತರ ಯುವರಾಜನೇ ರಾಜ್ಯದ ಮುಖ್ಯಾಧಿಕಾರಿಯಾಗಿದ್ದನು. ಯುವರಾಜ ಹಾಗೂ ಇತರ ಗಂಡು ಸಂತಾನ ರಾಜ್ಯದ ದೊಡ್ಡ ದೊಡ್ಡ ಪ್ರಾಂತಗಳ ಮಾಂಡಲೇಶ್ವರರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಸಾಮಾನ್ಯವಾಗಿ ಯುವರಾಜ ರಾಜಧಾನಿಯಲ್ಲಿಯೇ ನಿಂತು ಮಹಾರಾಜನಿಗೆ ನೆರವಾಗುತ್ತಿದ್ದನು. ಪ್ರತಿಯೊಬ್ಬ ಯುವರಾಜ ತಂದೆಯ ದಿಗ್ವಿಜಯದಲ್ಲಿ ನೆರವಾಗುತ್ತಿದ್ದನು.[೪೩]

ಸಾಮಾನ್ಯವಾಗಿ ಸೇನೆಯ ಮುಖ್ಯ ಹುದ್ದೆಯಲ್ಲಿರುವ ಸೇನಾಧಿಕಾರಿಗೂ ಸೇನಾಪತಿಯ ಪಟ್ಟವನ್ನು ಈ ನಾಯಕ ಅರಸುಮನೆತನದವರು ಕಟ್ಟುತ್ತಿದ್ದರು. ಹೀಗೆ ರಾಜರ ಪಟ್ಟಾಭಿಷೇಕವು ಇಡೀ ರಾಜ್ಯದ ತುಂಬೆಲ್ಲಾ ಸಡಗರ ಸಂಭ್ರಮದ ವಾತಾವರಣವನ್ನು ಸೃಷ್ಟಿಸುತ್ತದಲ್ಲದೆ, ಪ್ರಜೆಗಳು ಭಾವಿರಾಜನ ಕಾರ್ಯ ಚಟುವಟಿಕೆಗಳೆಡೆಗೆ ನೋಡುವಂತೆ ಮಾಡುವುದಾಗಿತ್ತು. ಇಂದಿಗೂ ಈ ವಂಶಜರಲ್ಲಿ ಹಿರಿಯ ರಾಜನು ತೀರಿದರೆ, ಆತನ ಶವ ಸಂಸ್ಕಾರವಾಗುವ ಪೂರ್ವದಲ್ಲಿ ಎಲ್ಲರ ಸಮ್ಮುಖದಲ್ಲಿ ಆ ರಾಜನ ತಲೆಯ ಮೇಲಿನ ಪಟ್ಟವನ್ನು ಕೈಯಲ್ಲಿಯ ಉಂಗುರವನ್ನು ಹಿರಿಯ ಮಗನಿಗೆ ತೊಡಿಸುವ ಪದ್ಧತಿ ಇದೆ. ಕೆಲವು ದಿನಗಳ ನಂತರದಲ್ಲಿ ಆ ಯುವರಾಜನಿಗೆ ಅರಮನೆಯ ಪ್ರಾಂಗಣದಲ್ಲಿ ಪಟ್ಟಕ್ಕೆ ಕೂಡಿಸುವ ಪದ್ಧತಿಯು ಸುರಪುರನಾಯಕ ಅರಸು ಮನೆತನದಲ್ಲಿ ೧೯೪೮ರವರೆಗೆ ಮುಂದುವರೆದಿತ್ತು. ಅಂದು ಪ್ರಜೆಗಳು ಹೊರಡಿಸಿದ ಭಿನ್ನವತ್ತಳೆಯನ್ನು ಹೊರಡಿಸುತ್ತಿದ್ದರು. ಈಗ ಈ ಪದ್ಧತಿ ನಿಂತುಹೋಗಿದೆ.

## ೩.೨ ಪಟ್ಟದರಸಿಯ ನೇಮಕ

ಯಾವುದೇ ಒಂದು ಸಂಸ್ಥಾನ, ರಾಜ್ಯ, ಸಾಮ್ರಾಜ್ಯಕ್ಕೆ ಅರಸರಿರುವಂತೆ, ಅರಸಿಯರೂ ಇರುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಹುಪತ್ನಿತ್ವ ಸಹಜವೆಂಬಂತೆ ಜಾರಿಯಲ್ಲಿದೆ. ಈ ಶತಮಾನದ ಹಳೆತಲೆಮಾರಿನ ಜಮೀನ್ದಾರರು ಹಾಗೂ ಇತರೆ ಸ್ಥಿತಿವಂತರು ಬಹುಪತ್ನಿತ್ವವನ್ನು ಕಾಯ್ದುಕೊಂಡು

ಬಂದಿದ್ದನ್ನು ಕಾಣಬಹುದಾಗಿದೆ. ಹಾಗೆಯೇ ಅರಸುಮನೆತನಗಳಲ್ಲಿ ಅರಸನಾದವನು ಹಲವಾರು ಹೆಣ್ಣುಗಳನ್ನು ವಿವಾಹವಾಗಬಹುದಾಗಿತ್ತು ಎಂಬುದನ್ನು ಇತಿಹಾಸದಿಂದ ಅರಿಯಬಹುದು. ರಾಜನನ್ನು ವಿವಾಹವಾದ ಅಂತಹ ಹೆಣ್ಣುಗಳನ್ನೆಲ್ಲಾ ಅರಸಿಯರೆಂದು ಕರೆಯಲಾಗುತ್ತಿತ್ತು. ಅದರಲ್ಲಿ ಹಿರಿಯಳಾದವಳು ಮತ್ತು ಎಲ್ಲಾ ರೀತಿಯಲ್ಲಿಯೂ ಅರ್ಹತೆ ಹೊಂದಿದವಳು ಪಟ್ಟದ ಅರಸಿಯಾಗುತ್ತಿದ್ದಳು. ಇವಳಿಗಿರುವ ಅಧಿಕಾರ ಇತರೇ ಅರಸಿಯರಿಗೆ ಇರುತ್ತಿರಲಿಲ್ಲ.

ಪಟ್ಟದರಸಿ ಎನ್ನುವಲ್ಲಿ ಪಟ್ಟ ಮತ್ತು ಅರಸಿ ಎನ್ನುವ ಎರಡು ಪದಗಳು ಬಳಕೆಗೊಂಡಿವೆ. ಪಟ್ಟ ಎಂದರೆ ಶುದ್ಧವಾದ, ಮಡಿವಸ್ತ್ರವಾದ ರೇಷ್ಮೆ, ಸಿಂಹಾಸನ, ಅಧಿಕಾರ, ಪದವಿ ಎಂದು; ಅರಸಿ ಎಂದರೆ ರಾಜನ ಪತ್ನಿ ಎಂದರ್ಥ. ಅಂದರೆ ಶುದ್ಧವಾದ ಮಡಿವಸ್ತ್ರವನ್ನು ಹಣೆಗೆ ಕಟ್ಟಿಕೊಂಡ ಪತ್ನಿ ಹಾಗೂ ಅಧಿಕಾರ, ಸಿಂಹಾಸನ, ಪದವಿಯನ್ನು ಪಡೆದ ರಾಜನ ಪತ್ನಿಯೇ ಪಟ್ಟದರಸಿ[೪೪] ಎಂಬ ಅರ್ಥವನ್ನು ಸೂಚಿಸುತ್ತದೆ. ರಾಣಿಯರನ್ನು ಸಾಮಾನ್ಯವಾಗಿ ಅರಸಿ, ಪಿರಿಯರಸಿ, ಪಟ್ಟಮಹಾದೇವಿ, ಅಗ್ರಸತಿ, ರಾಣಿ ಎಂದು ಕರೆಯಲಾಗುತ್ತಿದ್ದಿತು.[೪೫] ಪಟ್ಟಮಹಾದೇವಿ ಅಂದರೆ ರಾಜನ ಕೂಡ ಪಟ್ಟಕಟ್ಟಿಸಿಕೊಂಡ ರಾಣಿ[೪೬] ಪಟ್ಟಕಟ್ಟು, ಎಂದರೆ ಪಟ್ಟಂಗಟ್ಟು; ಅಧಿಕಾರ ವಹಿಸಿಕೊಡುವುದು.[೪೭] ಪಟ್ಟ ಎನ್ನುವುದಕ್ಕೆ ಅಧಿಕಾರ ಎಂಬ ಅರ್ಥವನ್ನು ನೀಡಬಹುದು. ಪಟ್ಟದರಸಿ ಎಂದರೆ ಅಧಿಕಾರವುಳ್ಳ ಅರಸಿ ಎಂದು ಭಾವಿಸಬಹುದಾಗಿದೆ. ಒಟ್ಟಿನಲ್ಲಿ ಪಟ್ಟ ಎನ್ನುವುದು ಒಂದು ಮೇಲುಸ್ಥಾನವನ್ನು ಸೂಚಿಸುವ ಪದವಾಗಿದೆ. ಪಟ್ಟದರಸ, ಪಟ್ಟದರಸಿ, ಪಟ್ಟದಾನೆ, ಪಟ್ಟದ ಕುದುರೆ ಇವೆಲ್ಲವುಗಳೆಲ್ಲವೂ ಇತರ ಪ್ರಾಣಿಗಳಿಗಿಂತ ಅಥವಾ ಅರಸ, ಅರಸಿಯರಿಗಿಂತ ಭಿನ್ನ ಎಂಬುದನ್ನು ಸೂಚಿಸುವ, ಶುದ್ಧತೆಯನ್ನು ತಿಳಿಸುವ ಪದವಾಗಿ ಬಳಕೆಗೊಂಡಿರುವುದು ಕಂಡುಬರುತ್ತದೆ.

ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಪಟ್ಟದ ರಾಣಿಯಾಗುವವಳು ಹಲವು ಪ್ರಮುಖ ಲಕ್ಷಣಗಳನ್ನು ಉಳ್ಳವರಾಗಿರಬೇಕೆಂಬ ನಿಯಮ ಇದ್ದಿತು. ಮುಖ್ಯವಾಗಿ ಪಟ್ಟದರಸಿಯಾಗುವವಳು ಸ್ವಜಾತಿಯವಳಾಗಿರಬೇಕು ಹಾಗೂ ವಿಜಾತಿ ಬೆಡಗಿನವಳಾಗಿರಬೇಕು. ನಾಯಕ ಅರಸುಮನೆತನಗಳಲ್ಲಿ ನಾಯಕ ಜಾತಿಯವಳೇ ಆಗಿರಬೇಕು. ವಿಜಾತಿ ಬೆಡಗು ಎಂದರೆ ನಾಯಕ ಅರಸುಮನೆತನಗಳಲ್ಲಿ ಉದಾಹರಣೆಗೆ ಸುರಪುರದ ಅರಸರು ಗೋಸಲವರು, ಗುಡಗುಂಟಿ ಅರಸರೂ ಗೋಸಲವರು, ಇವರೀರ್ವರಿಗೂ ಕೊಡುಕೊಳ್ಳುವಿಕೆ(ವೈವಾಹಿಕ ಸಂಬಂಧ) ನಡೆಯುತ್ತಿರಲಿಲ್ಲ. ಅದೇ ದೇವದುರ್ಗದವರು ಜಂಪಲ ಬೆಡಗಿನವರು ಅವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳಸಬಹುದಾಗಿತ್ತು. ಸಾಮಾನ್ಯ ಬೇಡರಲ್ಲಿಯೂ ಈ ಪದ್ಧತಿ ಇದೆ. ಪಟ್ಟದರಸಿಯಾಗುವವಳು ಅಂಗ ಊನತೆಯುಳ್ಳವಳಾಗಿರಬಾರದು, ಎಲ್ಲಾ ರೀತಿಯಿಂದಲೂ ಸುಲಕ್ಷಣವುಳ್ಳವಳಾಗಿರಬೇಕು. ಅಂದರೆ ಆಚಾರ ವಿಚಾರಗಳಲ್ಲಿ ರೂಪಲಾವಣ್ಯ ಗಳಲ್ಲಿ ಎತ್ತರದ ಸ್ಥಾನದಲ್ಲಿರಬೇಕು. ರಾಜನಿಗೆ ಸಮಾನವಾದ ಅಂತಸ್ತಿನ ಇಲ್ಲವೆ ಗೌರವಯುತ

ಮನೆತನದವಳಾಗಿರಬೇಕು. ವಿವೇಕವುಳ್ಳವಳು, ಕಲೆಯ ಜ್ಞಾನ ಅರಿತವಳು, ಧಾರ್ಮಿಕ ಸಹಿಷ್ಣುತೆಯುಳ್ಳವಳೂ ಆಗಿರಬೇಕಿತ್ತು. ಈ ಎಲ್ಲಾ ನಿಯಮಗಳನ್ನೂ ಕಡ್ಡಾಯವಾಗಿ ಪಾಲಿಸಲಾಗುತ್ತಿತ್ತು.

ನಾಯಕ ಅರಸು ಮನೆತನದವರ ಹೆಂಡತಿಯರಿಗೆ(ರಾಣಿಯರಿಗೆ) ನಾಗತಿಯರೆಂದು ಕರೆಯುತ್ತಿದ್ದರು. ನಾಗತಿ ಎಂಬುದಕ್ಕೆ ನಿಘಂಟುವಿನಲ್ಲಿ ಬೇರೆ ಬೇರೆ ಅರ್ಥಗಳುಂಟು. ನಾಗತಿ ಎಂಬುದಕ್ಕೆ ಅಮ್ಮ ಎಂಬ ಸಂಬಂಧ ವಾಚಿ, ವಾರ್ಗಿಕ ಸೇರಿ 'ನಾಗತಿಯಮ್ಮ' ಎಂಬ ಹೆಸರಾಗಿ ಬಳಕೆಯಾಗಿದೆ.[೪೫]

ಮತ್ತಿತಿಮ್ಮಣ್ಣ ನಾಯಕನ ಪಟ್ಟದರಾಣಿ ಚದುರೆ ತಿಮ್ಮವ್ವನಾಗತಿ ಕಸ್ತೂರಿರಂಗಪ್ಪನ ಮಗಳು ಓಬವ್ವನಾಗತಿ, ಗಡ್ಡದ ಮದಕರಿನಾಯಕನ ಪತ್ನಿ ಲಿಂಗಮ್ಮನಾಗತಿ, ಬಿಚ್ಚುಗತ್ತಿ ಭರಮಣ್ಣನ ಹೆಂಡತಿ ಸಿದ್ದವ್ವನಾಗತಿ, ಹಿರೇಮದಕರಿನಾಯಕನ ಹೆಂಡತಿ ಓಬಳಮ್ಮನಾಗತಿ ಹೀಗೆ ಅವರ ಹೆಸರಿನ ಕೊನೆಗೆ ನಾಗತಿ ಎಂಬ ಪದ ಬಳಕೆಯಾಗಿದೆ.

'ನಾಗತಿ' ಎಂಬುದು 'ರಾಜ' 'ಗೌಡ' 'ಅರಸ' ಎಂಬ ಪುಲ್ಲಿಂಗ ಸೂಚಕ ಹಾಗೂ ವೃತ್ತಿವಾಚಿ ಪದಗಳಿಗೆ ಸಂವಾದಿಯಾಗಿ ಅವರ ಹೆಂಡತಿಯರಿಗೆ 'ರಾಣಿ', 'ಗೌಡತಿ', 'ಅರಸಿ' ಎಂಬ ಪದಗಳು ಅಂಟುವುದು ಸಹಜ. ಅದೇ ರೀತಿ 'ನಾಗತಿ' ಎಂಬುದು ನಾಯಕ ಎಂಬುದರ ಸ್ತ್ರೀಲಿಂಗ ರೂಪವಾಗಿ ಪಾಳೆಯಗಾರರ ಹೆಂಡತಿಯರ ಹೆಸರುಗಳಿಗೆ ಅಂಟಿಕೊಂಡಿರುವುದುಂಟು. ನಾಗತಿ ಎಂಬುದು ನಾಯಂಕಿತಿ, ನಾಯಕಿತಿನಿ, ನಾಯಿಕಿತಿ, ನಾಗತಿ ಎಂಬ ರೂಪಗಳಲ್ಲಿ ಬಳಕೆಯಾಗಿದೆ.

ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿ ಅರಸರ ಮಡದಿಯರಿಗೆ ಹೆಚ್ಚಾಗಿ ರಾಣಿಯರೆಂದೇ ಕರೆಯುವ ರೂಢಿಯಿದ್ದಿತು. ಸುರಪುರದ ಮೊಂಡಗೈ ವೆಂಕಟಪ್ಪನ ಪತ್ನಿ ರಾಣಿ ಓಂಕಾರಮ್ಮ, ಮುಮ್ಮಡಿಪಾಮನಾಯಕನ ಪತ್ನಿ ರಾಣಿ ತಿಮ್ಮಮ್ಮ, ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ ರಾಣಿ ಲಕ್ಷ್ಮಮ್ಮ ಹೀಗೆ ಮುಂದುವರೆಯುತ್ತದೆ. ಈ ಮನೆತನಗಳಲ್ಲಿ ಈಗಲೂ ಚಾಲ್ತಿಯಲ್ಲಿರುವುದನ್ನು ಕಾಣಬಹುದು.

ಪಟ್ಟದರಾಣಿಯನ್ನು ಆಯ್ಕೆ ಮಾಡುವಾಗ ರಾಜನು ಯುವರಾಜನಾಗಿದ್ದಾಗಲೇ ಯುವರಾಜ ಪಟ್ಟಕಟ್ಟಿ ಅವನಿಗೊಬ್ಬಳು ಯುವರಾಣಿಯನ್ನು ಹಿರಿಯರು ಆಯ್ಕೆ ಮಾಡಿ ಯುವರಾಣಿ ಪಟ್ಟ ಕಟ್ಟುತ್ತಿದ್ದರು. ಇವರೇ ಮುಂದೆ ಪಟ್ಟದರಸ ಹಾಗೂ ಪಟ್ಟದರಾಣಿಯರಾಗುತ್ತಿದ್ದರು. ಸಾಮಾನ್ಯವಾಗಿ ರಾಜನ ಹಿರಿಯ ಮಗನೇ ಪಟ್ಟದರಸನಾಗಲು ಅರ್ಹನಾಗಿರುತ್ತಿದ್ದನು.

ಪಟ್ಟದರಸಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ ಪಟ್ಟದರಸಿಯ ಬದಲಿಗೆ ಮತ್ತೊಬ್ಬ ರಾಣಿಯನ್ನು ಪಟ್ಟಕ್ಕೆ ಕೂಡಿಸಲಾಗುತ್ತಿತ್ತು. ಸಾಮಾನ್ಯವಾಗಿ ಅರಸನ ಪಟ್ಟವನ್ನು ಬಾಲ್ಯದಲ್ಲಿಯೆ ಕಟ್ಟಿದಾಗ ಇಂತಹ ಸಮಸ್ಯೆ ಗಳು ತಲೆದೋರುವುದುಂಟು. ಆದರೆ ಯುವರಾಜ, ಯುವರಾಣಿಯರಿಗೆ ಪಟ್ಟಕಟ್ಟಿ, ಹಲವಾರು ವರ್ಷ

ಅವರು ಯುವರಾಜ, ಯುವರಾಣಿಯರಾಗಿಯೇ ಬಾಳಬೇಕಾಗುತ್ತದೆ. ಯುವರಾಜ ರಾಜನಾಗಿ ಪಟ್ಟಕ್ಕೆ ಕೂಡುವಹೊತ್ತಿಗೆ ಪಟ್ಟದ ಯುವರಾಣಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ ಬೇರೊಬ್ಬಳನ್ನು ಪಟ್ಟದರಿಸಿಯಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಕೆಲವು ಅರಸರಿಗೆ ಇಬ್ಬರು ಪಟ್ಟದ ರಾಣಿಯರಿದ್ದ ಬಗ್ಗೆ ತಿಳಿಯುತ್ತದೆ. ಚಿತ್ರದುರ್ಗದ ರಾಜಾ ಬಿಚ್ಚುಗತ್ತಿ ಭರಮಪ್ಪನಾಯಕರಿಗೆ ದೊಡ್ಡಸಿದ್ಧಮ್ಮನಾಗತಿ ಮತ್ತು ಸಣ್ಣ ಸಿದ್ಧಮ್ಮರೆಂಬುವರಿದ್ದರು. ಇನ್ನೂ ಕೆಲವು ಸಲ ಪಟ್ಟದರಾಣಿ ಮಡಿದರೆ ಎರಡನೆಯ ರಾಣಿ, ಪಟ್ಟದರಾಣಿಯಾಗಿ ಬಡ್ತಿ ಹೊಂದುತ್ತಿದ್ದಳು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ಪಟ್ಟದ ರಾಣಿ ಲಕ್ಷಮ್ಮ ಮಡಿದ ಮೇಲೆ ರಾಣಿ ಕಾಟಮ್ಮ ಪಟ್ಟದ ರಾಣಿಯಾಗಿ ಬಡ್ತಿ ಹೊಂದುತ್ತಾಳೆ. ಸಾಮಾನ್ಯವಾಗಿ ಪಟ್ಟದರಸನೊಂದಿಗೆ ರಾಣಿಗೂ ಪಟ್ಟಕಟ್ಟಲಾಗುತ್ತಿದ್ದರೂ ಕೆಲವು ಸಂದರ್ಭಗಳಲ್ಲಿ ಮಾತ್ರ ರಾಜನಿಗೆ ಮೊದಲು ಪಟ್ಟಾಭಿಷೇಕವಾಗಿ ತರುವಾಯ ರಾಣಿಯ ಆಯ್ಕೆ ನಡೆದು ಆಕೆಗೆ ಪಟ್ಟಕಟ್ಟಿ ಪಟ್ಟದರಸಿಯಾಗಿ ನೇಮಿಸಲಾಗುತ್ತಿತ್ತು.

ಅರಸ ಚಿಕ್ಕವಯಸ್ಸಿನವನಾಗಿದ್ದಾಗಲೇ ಪಟ್ಟಕಟ್ಟಿದ್ದರೆ ನಂತರ ಅವರಿಗೆ ವಿವಾಹವಾಗುತ್ತಿತ್ತು. ಚಿತ್ರದುರ್ಗದ ರಾಜಾ ವೀರ ಚಿಕ್ಕಮದಕರಿನಾಯಕರಿಗೆ ಪಟ್ಟಕಟ್ಟುವಾಗ ಅವರಿಗೆ ಕೇವಲ ಹನ್ನೆರಡು ವರ್ಷಗಳು. ಹೀಗಾಗಿ ನಂತರದಲ್ಲಿ ತರೀಕೆರೆ ಸಂಸ್ಥಾನದ ಇಮ್ಮಡಿ ಹನುಮಪ್ಪನಾಯಕರ ಪುತ್ರಿ ಕುಮಾರಿ ಲಕ್ಕಾಂಬಿಕೆಯೊಂದಿಗೆ ವಿವಾಹ ನಡೆಯುವುದು.[೪೯] ಸುರಪುರದ ಕೊನೆಯ ಅರಸ ನಾಲ್ವಡಿ ವೆಂಕಟಪ್ಪನಾಯಕನಿಗೆ ಪಟ್ಟಾಭಿಷೇಕಗೊಂಡಾಗ ಕೇವಲ ಹತ್ತುವರ್ಷಗಳು.[೫೦] ಹೀಗಾಗಿ ಈತನಿಗೂ ನಂತರದಲ್ಲಿ ರಾಣಿ ರಂಗಮ್ಮನೊಂದಿಗೆ ವಿವಾಹವಾಯಿತು. ಪಟ್ಟದ ರಾಣಿಯಾದವಳಿಗೆ ಸಾಮಾನ್ಯವಾಗಿ ಧವಳ, ಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರಸೇವೆಗಳು, ಅವರ ಚಿಹ್ನೆಗಳಾಗಿರುತ್ತಿದ್ದವು.[೫೧] ಈ ಚಿಹ್ನೆಗಳೆಲ್ಲಾ ರಾಜನ ಇತರ ಅರಸಿಯರಿಗೆ ಸಲ್ಲುತ್ತಿರಲಿಲ್ಲ. ಸುರಪುರ ರಾಣಿಯರ ಪಟ್ಟದ ಸಂದರ್ಭದಲ್ಲಿ ರಾಜಗುರು, ಪುರೋಹಿತ, ರಾಜಜೋಯಿಸ, ನಿಷ್ಠಿಯವರು, ದಪ್ತರದಾರ, ವಿದ್ಯಾಗುರು, ಫಳಗಿಯವರು, ಮುಜುಮದಾರ ಮತ್ತು ೧೮ ಮಹಲಿನ ಕಾಸಖಾಸೆ ಜನರಿಗೆ ಧೋತರ ಜೋಡು, ಮುಂಡಾಸ ಅವರವರ ಯೋಗ್ಯತೆ ಮತ್ತು ಮರ್ಯಾದೆಗನುಸರಿಸಿ ಉಡುಗೊರೆ ಕೊಡಲಾಗುತ್ತಿತ್ತು.[೫೨]

## ೩.೨.೧ ಪಟ್ಟದರಸಿಯ ಕಾರ್ಯಗಳು

ಪಟ್ಟದರಸಿಯು ರಾಜಕಾರ್ಯಗಳಲ್ಲಿ ಭಾಗವಹಿಸುವ ಗುಣವುಳ್ಳವಳಾಗಿರುತ್ತಿದ್ದಳಲ್ಲದೇ, ಮುಖ್ಯವಾದ ರಾಜತಂತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ಹಾಗೂ ಪ್ರಮುಖ ಹಬ್ಬ-ಉತ್ಸವಗಳಿಗೆ ಸಂಬಂಧಿಸಿದ ವಿಷಯಗಳನ್ನು ಸ್ವತಃ ರಾಜನು ಪಟ್ಟದರಸಿಯವರೊಂದಿಗೆ ಸಮಾಲೋಚಿಸುತ್ತಿದ್ದನು. ರಾಜ್ಯಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಕಾರ್ಯಗಳಲ್ಲಿ ನೇರವಾಗಿ ಭಾಗವಹಿಸುವ ಹಕ್ಕು ಪಟ್ಟದರಸಿಗೆ ಇತ್ತು. ದತ್ತು ಸ್ವೀಕಾರದ ಸಂದರ್ಭದಲ್ಲಿ ಈಕೆಯ ಪಾತ್ರವು ಪ್ರಮುಖವಾಗಿರುತ್ತಿತ್ತು.

ಚಿತ್ರದುರ್ಗದ ಹಿರೇ ಮದಕರಿನಾಯಕರ ಮರಣಾನಂತರ, ಈತನ ಮಗ ಕಸ್ತೂರಿರಂಗಪ್ಪನಾಯಕ ಪಟ್ಟವೇರಿದ ಆರು ವರ್ಷದಲ್ಲಿ ತೀರಿಕೊಂಡಾಗ, ಈತನ ತಾಯಿ ಓಬಳಮ್ಮನಾಗತಿ ಜಾನಕಲ್ಲು ತೊದಲು ಭರಮಪ್ಪನಾಯಕನ ಪುತ್ರ ಮದಕರಿನಾಯಕನಿಗೆ ಪಟ್ಟಾಭಿಷೇಕವನ್ನು ಮಾಡಲು ಕಾರಣಕರ್ತಳಾದಳು. ಸುರಪುರದ ಗಡ್ಡಿಪಿಡ್ಡನಾಯಕನಿಗೆ ಆರುಜನ ಹೆಂಡಂದಿರಿದ್ದರೂ ಮಕ್ಕಳಾಗಲಿಲ್ಲ. ಅಣ್ಣ ಲಿಂಗನಾಯಕನ ಮಗನಾದ ಪಾಮನಾಯಕನನ್ನು ದತ್ತಕ ತೆಗೆದುಕೊಳ್ಳುವಾಗ ಗಡ್ಡಿಪಿಡ್ಡನಾಯಕನ ಪಟ್ಟದ ರಾಣಿ ಅವ್ವಮ್ಮಳ ಪಾತ್ರ ಪ್ರಮುಖವಾಗಿತ್ತು.

ಪಟ್ಟದರಸಿಯಾದವಳು ರಾಜ್ಯದ ಕೆಲವು ಭಾಗಗಳನ್ನು ಆಯ್ಕೆ ಮಾಡಿಕೊಂಡು ಆಳಬಹುದಾಗಿತ್ತು. ಪಟ್ಟದರಸನ ಸ್ಥಾನದ ನಂತರದ ಸ್ಥಾನವೇ ಈಕೆಯದಾಗಿರುತ್ತಿತ್ತು. ನಂತರ ಮಹಾಪ್ರಧಾನ, ದಂಡನಾಯಕ, ಸಾಮಂತ ಅರಸರು ಮುಂತಾದವರಿರುತ್ತಿದ್ದರು. ಪಟ್ಟದರಾಣಿ ರಾಜನ ಅನುಪಸ್ಥಿತಿಯಲ್ಲಿ ರಾಜ್ಯವಾಳುವ ಅಧಿಕಾರವನ್ನು ಪಡೆದಿದ್ದಳು. ಇಂಥಾ ಉದಾಹರಣೆಗಳು ಕರ್ನಾಟಕ ನಾಯಕ ಅರಸುಮನೆತನದಲ್ಲಿ ನಡೆದಿಲ್ಲ. ಆದರೆ ತಮ್ಮ ಮಕ್ಕಳನ್ನು ಮುಂದಿಟ್ಟುಕೊಂಡು ಚಿತ್ರದುರ್ಗದ ಓಬಳಮ್ಮನಾಗತಿ, ಸುರಪುರದ ರಾಣಿ ಅವ್ವಮ್ಮ, ರಾಣಿ ಕಾಂತಮ್ಮ, ರಾಣಿ ಈಶ್ವರಮ್ಮ, ಕನಕಗಿರಿಯ ರಾಣಿ ಗೌರಮ್ಮ, ರಾಣಿ ವೆಂಕಟಮ್ಮ, ಗುಡಗುಂಟಿಯ ರಾಣಿ ಗೌರಮ್ಮ ಅಧಿಕಾರ ನಡೆಸಿದವರಲ್ಲಿ ಪ್ರಮುಖರಾಗಿದ್ದಾರೆ. ಆದರೂ ನಮ್ಮ ಐತಿಹಾಸಿಕ ದಾಖಲೆಗಳು ರಾಣಿಯರು ಅಥವಾ ಸ್ತ್ರೀಯರು ರಾಜ್ಯಕ್ಕೆ ಅದರ ಶ್ರೇಯೋಭಿವೃದ್ಧಿಗೆ ನೀಡಿದ ಕೊಡುಗೆಯನ್ನು, ಅವರ ವಿಶೇಷವಾದ ಶ್ರಮವನ್ನೂ ಕಡೆಗಣಿಸಿವೆ. ಒಂದು ರಾಜ್ಯದ ಅಭಿವೃದ್ಧಿಗೆ ರಾಜರಂತೆಯೇ ತಮ್ಮ ಅಮೂಲ್ಯವಾದ ಸೇವೆಯನ್ನು ತೆರೆಮರೆಯಲ್ಲಿ ಸಲ್ಲಿಸಿದ ಅದೆಷ್ಟೋ ರಾಣಿಯರ ಚರಿತ್ರೆಯು ದಾಖಲಾಗಬೇಕಿದೆ. ನಾಯಕ ಅರಸರ ರಾಣಿಯರೂ ಕೂಡ ಇಂತಹ ತೆರೆಮರೆಯ ಸೇವೆಯನ್ನು ಅಪಾರವಾಗಿ ಮಾಡಿದ್ದಾರೆ. ಘೋಷಾದಂತಹ ಪದ್ಧತಿಯಿದ್ದರೂ ಅವರು ರಾಜ್ಯದ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡದ್ದುಂಟು.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ. ೧೭೭೩-೧೮೦೨) ಕೆಲ ಆಪ್ತರ ಸಹಾಯದಿಂದ ಮಧ್ಯಪಾನ ಸೇವನೆಗೆ ಅಂಟಿಕೊಂಡಾಗ, ಪಟ್ಟದರಾಣಿ ಕನಕಗಿರಿಯ ರಂಗಪ್ಪನಾಯಕನ ಮಗಳು ಲಕ್ಷ್ಮಮ್ಮ, ಅರಸನನ್ನು ಕುಡಿಯುವ ಚಟದಿಂದ ದೂರಮಾಡಲು ಪ್ರಯತ್ನಿಸಿದರೂ ಆಕೆಯಿಂದ ಆಗಲಿಲ್ಲ. ಆಗ ಆಕೆ ವಯಸ್ಸಾದ ಮುಜುಮದಾರನಿಗೆ ಹೇಳಿದಾಗ, ಮುಜುಮದಾರ ರಾಜನ ಕುಡಿತವನ್ನು ಬಿಡಿಸಿದ. ಆಗ ಅರಸ ಎಲ್ಲಾ ಕುಡಿಯುವ ಪದಾರ್ಥಗಳನ್ನು ಒಡೆಯಿಸಿ ತನ್ನ ಆಪ್ತರಾದ ಕುಡುಕರಿಗೆ ಬರಕೂಡದೆಂದು ಅಪ್ಪಣೆಗೈದನು. ಅರಸನು ಈ ದುಶ್ಚಟವನ್ನು ಬಿಟ್ಟಿದ್ದಕ್ಕಾಗಿ ಪಟ್ಟದರಾಣಿ ಲಕ್ಷ್ಮಮ್ಮ ಮುಜುಮದಾರನಿಗೆ ಉಡುಗೊರೆ ನೀಡಿ ಮರ್ಯಾದೆ ಮಾಡಿದಳು.[೫೩] ಈ ರೀತಿ ಪಟ್ಟದ ರಾಣಿಯಾದವಳೂ ತನ್ನ ಕುಟುಂಬದ ಕುರಿತಾಗಿ ಅಪಾರ ಕಾಳಜಿಯನ್ನು ವಹಿಸಬೇಕಾಗಿದ್ದಿತು.

ಅರಸರು ಬಹುಪತ್ನಿಯರನ್ನು ಹೊಂದಿರುತ್ತಿದ್ದರು. ಕನಿಷ್ಠ ಇಬ್ಬರು ಪತ್ನಿಯರನ್ನಾದರೂ ಹೊಂದಿದ್ದಾರೆಂದು ದಾಖಲೆಗಳಿಂದ ಗೊತ್ತಾಗುತ್ತದೆ. ಚಿತ್ರದುರ್ಗದ ಓಬಣ್ಣನಾಯಕನಿಗೆ ೫ ಜನ, ಕಸ್ತೂರಿರಂಗಪ್ಪನಾಯಕನಿಗೆ ೧೨ ಜನ, ಇಮ್ಮಡಿ ರಂಗಪ್ಪನಾಯಕನಿಗೆ ೨೦ ಜನ, ರಾಜಾ ಭರಮಣ್ಣ ನಾಯಕನಿಗೆ ೩೩ ಜನ ಹಾಗೆಯೇ ಸುರಪುರದ ಮೊದಲ ಅರಸ ಗಡ್ಡಿಪಿಡ್ಡನಾಯಕನಿಗೆ ೬ ಜನ, ಹಸರಂಗಿ ಪಾಮನಾಯಕನಿಗೆ ೫ ಜನ, ಪೀತಾಂಬರ ಬಹಿರಿ ಪಿಡ್ಡನಾಯಕನಿಗೆ ೪ ಜನ, ಇಮ್ಮಡಿ ಪಾಮನಾಯಕನಿಗೆ ಇಬ್ಬರು, ಮುಮ್ಮಡಿ ಪಿಡ್ಡನಾಯಕನಿಗೆ ೩ ಜನ, ಇಮ್ಮಡಿ ವೆಂಕಟಪ್ಪನಾಯಕನಿಗೆ ೧೬ ಜನ ಪತ್ನಿಯರಿದ್ದರು. ಸುರಪುರದ ಅರಸರಲ್ಲಿ ಈತನೇ ಅತಿ ಹೆಚ್ಚು ರಾಣಿಯರನ್ನು ಹೊಂದಿದ್ದನು. ಈ ರೀತಿ ಅಂತಃಪುರದಲ್ಲಿ ರಾಣಿಯರಿದ್ದಾಗ ಸವತಿ ಮತ್ಸರಕ್ಕೂ ಅವಕಾಶವಿರುತ್ತಿತ್ತು. ಆ ಸಂದರ್ಭದಲ್ಲಿ ಎಲ್ಲರನ್ನೂ ಸಮಜಾಯಿಸಿಕೊಂಡು ಹೋಗುವ ಜವಾಬ್ದಾರಿ ಪಟ್ಟದರಸಿಯ ಮೇಲೆ ಇರುತ್ತಿತ್ತು. ಹೀಗಾಗಿ ಈಕೆ ಸಮತೋಲನ ದೃಷ್ಟಿಕೋನವನ್ನು ಹೊಂದಿರಬೇಕಾಗುತ್ತಿತ್ತು.

### ೩.೨.೨ ಕರ್ನಾಟಕ ನಾಯಕ ಅರಸುಮನೆತನಗಳ ಪ್ರಮುಖ ಪಟ್ಟದರಸಿಯರು

ಚಿಕ್ಕವಯಸ್ಸಿನ ಅರಸರು ಅಧಿಕಾರಕ್ಕೆ ಬಂದಾಗ, ಅವರ ಆಡಳಿತದಲ್ಲಿ ಸಹಭಾಗಿಯಾಗಿ ಆಡಳಿತವನ್ನು ಮುಂದುವರೆಸಿಕೊಂಡು ಹೋದ ಅನೇಕ ಜನ ಪಟ್ಟದರಾಣಿಯರು ನಾಯಕ ಅರಸುಮನೆತನಗಳಲ್ಲಿ ಆಗಿ ಹೋಗಿದ್ದಾರೆ. ಅವರಲ್ಲಿ ಚಿತ್ರದುರ್ಗ, ಸುರಪುರ ಕನಕಗಿರಿ, ಗುಡಗುಂಟಿ ಅರಸುಮನೆತನದ ರಾಣಿಯರು ಪ್ರಮುಖರಾಗಿದ್ದಾರೆ.

#### ೩.೨.೨.೧ ಚಿತ್ರದುರ್ಗದ ಓಬಳಮ್ಮನಾಗತಿ

ರಾಜಾ ಮದಕರಿನಾಯಕ(ಕ್ರಿ.ಶ. ೧೭೫೪-೧೭೭೯)ನು ದುರ್ಗದ ಸಿಂಹಾಸನ ಏರಿದಾಗ ಆತನಿಗೆ ೧೨ ವರ್ಷ ವಯಸ್ಸಾಗಿತ್ತು. ರಾಜ್ಯಭಾರ ಹೊರುವ ಸಾಮರ್ಥ್ಯ ಆತನಲ್ಲಿ ಇರಲಿಲ್ಲ. ಹೀಗಾಗಿ ಆತನ ಪರವಾಗಿ ಹಿರಿಯ ಮದಕರಿನಾಯಕ(ಕ್ರಿ.ಶ. ೧೭೨೧-೧೭೪೮)ನ ಪಟ್ಟದರಾಣಿ ಇಮ್ಮಡಿ ಕಸ್ತೂರಿ ರಂಗಪ್ಪ ನಾಯಕ(ಕ್ರಿ.ಶ. ೧೭೪೮-೧೭೫೪)ನ ತಾಯಿ ಓಬಮ್ಮನಾಗತಿ ಎರಡು ವರ್ಷಗಳವರೆಗೆ ಚಿತ್ರದುರ್ಗದ ಸರ್ವಾಧಿಕಾರಿಯಾಗಿ ಆಡಳಿತ ನಡೆಸಿದಳು. ಈ ನಾಗತಿಯನ್ನು ವಂಶಾವಳಿ ಮತ್ತು ಬಖೈರ್‌ನ ಕೆಲವು ಪ್ರತಿಗಳಲ್ಲಿ ಓಬವ್ವನಾಗತಿ, ಓಬಳವ್ವನಾಗತಿ, ಓಬಕ್ಕನಾಗತಿ ಮುಂತಾಗಿ ಸಂಬೋಧಿಸಿದೆ.[೫೪] ರಾಜಾ ಮದಕರಿನಾಯಕನಿಗೆ ಪಟ್ಟ ನೀಡಿದವಳು ಈಕೆಯೇ. ಈಕೆಯ ಮಗ ಮೃತಪಟ್ಟಾಗ, ಮುಂದಿನ ಪಟ್ಟಾಭಿಷೇಕದ ಕುರಿತಾಗಿ ಸಾಕಷ್ಟು ಚರ್ಚೆಗಳು ನಡೆದವು. ಆಗ ಓಬಳಮ್ಮನಾಗತಿಯವರು, ರಾಜಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರು, ಸಮಸ್ತ ದಳವಾಯಿಗಳು, ಪ್ರಧಾನಿಗಳು, ಬಲನಾಯಕರು, ಗುರಿಕಾರರು ರಾಹುತ ಠಾಣ್ಯದ ಸೇರುವೇಗಾರರು, ಪೇಟೆಶೆಟ್ಟಿ, ಪಟ್ಟಣಶೆಟ್ಟಿ ಪ್ರಮುಖ ವರ್ತಕರು

ಮುಂತಾದವರು ಹೊಸದುರ್ಗದ ಸೇನಾಪತಿ ಹಾಗೂ ಹಿರೇ ಮದಕರಿನಾಯಕನ ಸೋದರನಾದ ದಂಡಿನ ಜಂಪಣ್ಣನಾಯಕನ ಪುತ್ರ ಭರಮಪ್ಪನಾಯಕನಿಗೆ ಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಿಸಿದರು. ಆದರೆ ಹಿಂದಿನ ರಾತ್ರಿಯೇ ಓಬಳಮ್ಮನಾಗತಿಯ ಸ್ವಪ್ನದಲ್ಲಿ ಹಿರೇ ಮದಕರಿನಾಯಕನು ಕಾಣಿಸಿಕೊಂಡು ಜಾನಕಲ್ಲು ತೊದಲು ಭರಮಪ್ಪನಾಯಕರ ಪುತ್ರ ಮದಕರಿನಾಯಕರಿಗೆ ಪಟ್ಟ ಆಗಬೇಕು ಎಂಬುದಾಗಿ ಹೇಳಿದರೆಂದು ಮಾರನೆಯ ದಿನ ಓಬಳಮ್ಮನಾಗತಿ ಸ್ವಜನರನ್ನು ಬರಮಾಡಿಕೊಂಡು ವೀರಚಿಕ್ಕ ಮದಕರಿನಾಯಕರನ್ನು ಪಟ್ಟಗಟ್ಟುವಂತೆ ಮಾಡಿದ ಸಂಗತಿ ಆಕೆಯ ರಾಜಕೀಯದ ಜಾಣ್ಮೆಯನ್ನು ತೋರಿಸುತ್ತದೆ. ಈಕೆ ಅಧಿಕಾರದಲ್ಲಿದ್ದಾಗ ರಾಜದುರ್ಗದ ಸಂಸ್ಥಾನಿಕರು ಚಿತ್ರದುರ್ಗದ ಪ್ರಾಬಲ್ಯವನ್ನು ನೋಡಿ ಸಹಿಸಲಾರದೆ ಈ ಸೀಮೆ ಮೇಲೆ ಬಿದ್ದಾಗ, ಗಂಡೋಬಳವ್ವ ನಾಗತಿ ವೃದ್ಧಾಪ್ಯದಲ್ಲೂ ರಾಯದುರ್ಗ ಕೃಷ್ಣಪ್ಪನೊಡನೆ ಹೋರಾಡಿದಳು[೫೫] ಎಂಬುದು ಗಮನಿಸಬೇಕಾದ ಅಂಶ.

ಹೀಗೆ ಚಿತ್ರದುರ್ಗದ ಇತಿಹಾಸದಲ್ಲಿ ರಾಜಕೀಯ ಮುತ್ಸದ್ದಿತನ ತೋರಿ ಅಧಿಕಾರ ಮಾಡಿದ ಕೀರ್ತಿ, ಈಕೆಗೆ ಸಲ್ಲುತ್ತದೆ. ತನ್ನ ಎರಡು ವರ್ಷದ ಆಡಳಿತದಲ್ಲಿ ಸುಧಾರಣೆಗಾಗಿ ತನ್ನ ನಿಷ್ಠುರ ಮತ್ತು ಕಠೋರ ವಾದವನ್ನು ಆಡಳಿತದಲ್ಲಿ ತೋರಿಸಿಕೊಟ್ಟಿದ್ದಲ್ಲದೆ ರಾಜ್ಯಾಡಳಿತ ಹಿಡಿತಕ್ಕೆ ಬಾರದಿದ್ದಾಗ ಕಟ್ಟಾಜ್ಞೆ ಜಾರಿಗೆ ತರುತ್ತಾಳೆ.

**೩.೨.೨.೨ ಸುರಪುರದ ರಾಣಿ ಅಮ್ಮಾನಾಗತಿ(ಅವ್ವನಾಗತಿ)**

ಪಾಮನಾಯಕನು ಕ್ರಿ.ಶ.೧೬೮೭ರಲ್ಲಿ ನಿಧನನಾದ ಮೇಲೆ ಅವನ ಅಣ್ಣನ ಮಗನಾದ ಪೀತಾಂಬರ ಬಹರಿ ಪಿಡ್ಡನಾಯಕನು ಅಧಿಕಾರಕ್ಕೆ ಬಂದನು. ಈತನ ಪ್ರಾರಂಭದ ಆಳ್ವಿಕೆಯ ಅವಧಿಯಲ್ಲಿ ಅಮ್ಮಾನಾಗತಿಯು ಸುಮಾರು ಎರಡು ವರ್ಷಗಳ ಕಾಲ ಆಡಳಿತ ಮಾಡಿದಳೆಂದು ಕೈಫಿಯತ್ತುಗಳಿಂದ ತಿಳಿದುಬರುತ್ತದೆ.[೫೬] ಈ ಮಹಾರಾಣಿಯು ಸೌಂದರ್ಯದ ಖಣಿಯಾಗಿದ್ದಳೆಂದು, ಚತುರ ಬುದ್ಧಿಯುಳ್ಳವಳೂ ಆಗಿದ್ದಳೆಂದು ತಿಳಿಯುತ್ತದೆ. ಈಕೆಯ ಅಧಿಕಾರಾವಧಿಯಲ್ಲಿ ಸುರಪುರ ಸಂಸ್ಥಾನದ ಬೇಡ ಸೈನಿಕರ ಗುಂಪು ಈಕೆಯನ್ನು ಆರಾಧ್ಯದೈವ ಹಾಗೂ ತಾಯಿಯ ಸಮಾನವೆಂದು ಭಾವಿಸಿದ್ದರು.

**೩.೨.೨.೩ ರಾಣಿ ಕಾಂತಮ್ಮ(ಕ್ರಿ.ಶ. ೧೮೦೧-೧೮೦೩)**

ರಾಜಾ ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ ರಾಣಿ ಕಾಂತಮ್ಮ ತನ್ನ ಮಗ ಬಾಪುಸಾಹೇಬನ ಮಗಳಾದ ವೆಂಕಟರಂಗಮ್ಮಳನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜ್ಯಭಾರವನ್ನು ತಾನೇ ವಹಿಸಿಕೊಂಡಿದ್ದಳು.[೫೭] ಆಗ ರಾಜಪರಿವಾರ ಮತ್ತು ಸೈನಿಕ ಸರದಾರರು ಸುತ್ತಮುತ್ತ ವೈರಿಗಳಿರುವಾಗ ಸ್ತ್ರೀ ಸಂಸ್ಥಾನದ ಗದ್ದುಗೆಯೇರುವುದರಿಂದ ತೊಂದರೆಯಾಗುತ್ತದೆಂದು ತಿಳಿದು ಸುರಪುರದಿಂದ ಹೋಗಿ ಕರ್ನೂಲದಲ್ಲಿ ನೆಲೆಸಿದ್ದ ಮಗ ರಮಣಪ್ಪನಾಯಕನ ಮಗ ಪಿಡ್ಡನಾಯಕನಿಗೆ ಪಟ್ಟಗಟ್ಟಲು ಎಲ್ಲರೂ ಒಪ್ಪಿಸಿದ ಮೇಲೆ,

ರಾಜಾ ಪಿಡ್ಡನಾಯಕ ಅಧಿಕಾರಕ್ಕೆ ಬಂದು ರಾಣಿ ಕಾಂತಮ್ಮಳ ಅನುಮತಿಯಂತೆ ರಾಜ್ಯಭಾರವನ್ನು ಪ್ರಾರಂಭಿಸಿದ.

### ೩.೨.೨.೪ ರಾಣಿ ಈಶ್ವರಮ್ಮ

ಕೃಷ್ಣಪ್ಪನಾಯಕರು ಕ್ರಿ.ಶ. ೧೮೪೩ರಲ್ಲಿ ಅನಾರೋಗ್ಯ ಹಾಗೂ ಚಿಂತೆಯಿಂದ ತೀರಿಕೊಂಡಾಗ, ಮಗ ನಾಲ್ವಡಿ ವೆಂಕಟಪ್ಪನಾಯಕನಿಗೆ ಕೇವಲ ಏಳು ವರ್ಷ. ಆಗ ಸಂಸ್ಥಾನದ ಆಡಳಿತವನ್ನು ರಾಣಿ ಈಶ್ವರಮ್ಮ ವಹಿಸಿಕೊಂಡಳು. ಆಕೆಯ ಪತಿ ಕೃಷ್ಣಪ್ಪನಾಯಕನು ಕ್ಯಾ.ಗ್ರಿಸ್ಲೆಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡಿದ್ದ. ಕೃಷ್ಣಪ್ಪನಾಯಕ ನಿಜಾಮ ಮತ್ತು ಇತರರೊಂದಿಗೆ ಹಣದ ವ್ಯವಹಾರ ಮಾಡಿದ್ದನು. ಬಹಳಷ್ಟು ಒತ್ತಡಕ್ಕೊಳಗಾಗಿದ್ದ. ಆಗ ನಿಜಾಮ ಪ್ರತಿವರ್ಷ ರೆಸಿಡೆಂಟನ ದ್ವಾರ ರೂ.೪೦,೦೦೦ ಕೊಡತಕ್ಕದ್ದು. ಇದರ ಜಮಾನತಗಾಗಿ ನೆಲೋಗಿ ಹಾಗೂ ಅಂದೋಲಾ ಒತ್ತಿ ಇಡತಕ್ಕದ್ದು. ಹಣಮಪ್ಪನಾಯಕನಿಗೆ ತಿಂಗಳ ರೂ. ೫೦೦ ಕೊಡತಕ್ಕದ್ದು. ಝುಲ್ಲಿ ಪಾಳಿ ಅಂಕಪ್ಪನಾಯಕನಿಗೆ ಆತನ ಜಾಗೀರ ಕೊನೆಯವರೆಗೂ ನಡೆಸಬೇಕು. ಸುರಪುರವನ್ನು ನಿಜಾಮ ಹಾಗೂ ಬ್ರಿಟಿಷ್ ಸರಕಾರದ ಮಾಂಡಲೀಕರೆಂದೂ ಒಪ್ಪಿಕೊಳ್ಳತಕ್ಕದ್ದು ಎಂದು ಠರಾವಾಗಿತ್ತು.[೫೮] ಈ ಒಪ್ಪಂದವನ್ನು ಈಕೆ ಧಿಕ್ಕರಿಸಿದಳು. ರೆಸಿಡೆಂಟನಾದ ಗ್ರಿಸ್ಲೆಯ ವಿರುದ್ಧ ತನ್ನ ೧೨೦೦೦ ಬೇಡರ ಪಡೆಯನ್ನು ಅವರ ವಿರುದ್ಧ ಸಜ್ಜುಗೊಳಿಸಿದಾಗ, ಗ್ರಿಸ್ಲೆ ಸುರಪುರದಿಂದ ನಿರ್ಗಮಿಸಿದ.

ನಂತರ ಮೇಡೋಸ್ ಟೇಲರ್ ಸುರಪುರಕ್ಕೆ ಆಗಮಿಸುತ್ತಾನೆ. ನಯವಿನಯದಿಂದ ರಾಣಿ ಈಶ್ವರಮ್ಮನೊಂದಿಗೆ ನಡೆದುಕೊಳ್ಳುತ್ತಾನೆ. ಮಗ ನಾಲ್ವಡಿ ವೆಂಕಟಪ್ಪನಾಯಕನ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತೇನೆಂದು ಹೇಳುತ್ತಾನೆ. ಜೊತೆಗೆ ಆಕೆಯನ್ನು ತನ್ನ ತವರು ಮನೆಯಾದ ರತ್ನಗಿರಿಗೆ ಹೋಗುವಂತೆ ಮಾಡುತ್ತಾನೆ. ನಂತರ ಆಕೆ ಸುರಪುರಕ್ಕೆ ಮರಳಿ ಆಗಮಿಸುವ ಹೊತ್ತಿಗೆ ಟೇಲರ್ ನಾಲ್ವಡಿ ವೆಂಕಟಪ್ಪನಾಯಕನನ್ನು ತನ್ನ ಅಧೀನದಲ್ಲಿಟ್ಟುಕೊಂಡು, ಮರಳಿ ಬಂದ ರಾಣಿ ಈಶ್ವರಮ್ಮ ರಾಜಕೀಯ ಅಧಿಕಾರದಲ್ಲಿ ಕೈಹಾಕಕೂಡದೆಂದು, ಆಕೆಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳನ್ನು ಖರ್ಚು ವೆಚ್ಚಕ್ಕಾಗಿ ಕೊಡುವುದಾಗಿ ಹೇಳಿದಾಗ, ಸಿಡಿಮಿಡಿಗೊಂಡ ಆಕೆ ತನ್ನ ಮಗನಲ್ಲಿ ಸ್ವಾತಂತ್ರ್ಯದ ಕಿಡಿ ಪ್ರಜ್ವಲಿಸುವಂತೆ ಮಾಡುತ್ತಾಳೆ. ತಾಯಿಯ ಪ್ರಭಾವವೇ ಮುಂದೆ ನಾಲ್ವಡಿ ವೆಂಕಟಪ್ಪನಾಯಕನಿಗೆ ಪ್ರೇರಣೆಯಾಗಿ ದಕ್ಷಿಣಭಾರತದಲ್ಲಿಯೇ ಬ್ರಿಟಿಷರ ವಿರುದ್ಧ ಕ್ರಾಂತಿಯ ಕಹಳೆ ಊದಿದ ರಾಜನೆಂಬ ಕೀರ್ತಿಗೆ ಪಾತ್ರನಾಗುತ್ತಾನೆ.

ಹೀಗೆ ತನ್ನ ಜೀವನದುದ್ದಕ್ಕೂ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ ಈಕೆ ೨೭.೫.೧೮೫೨ರಲ್ಲಿ ತೀರ್ಥಯಾತ್ರೆಗೆ ತೆರಳುವಾಗ ಲಿಂಗಸುಗೂರಿನಲ್ಲಿ ನಿಧನ ಹೊಂದುತ್ತಾಳೆ.[೫೯] ನಿಜಾಮ ಹಾಗೂ ಬ್ರಿಟಿಷರ ಅಧಿಕಾರವನ್ನು

ಧಿಕ್ಕರಿಸಿದ್ದ ಈ ಮಹಿಳೆಯ ಚಾಣಾಕ್ಷತೆಯನ್ನು ಮೆಚ್ಚಲೇಬೇಕು. ಈಕೆಯ ವ್ಯಕ್ತಿತ್ವವನ್ನು ಸಾರುವ ಜನಪದ ನುಡಿಯೊಂದು 'ಮೃಗಜಾತಿ ಶೂರ, ಅವ್ವಾ ಈಶ್ವರಮ್ಮನ ವರವೀರಪುತ್ರ'[೬೦] ಎನ್ನುತ್ತಿದೆ. ಎಲ್ಲರ ಬಾಯಲ್ಲೂ ರಾಣಿ ಈಶ್ವರಮ್ಮ ಅವ್ವ ಆಗಿದ್ದಳು, ಪ್ರಜೆಗಳನ್ನು ತನ್ನ ಮಕ್ಕಳಂತೆ ಕಂಡಿದ್ದಳು.

### ೩.೨.೨.೫ ರಾಣಿ ವೆಂಕಟಮ್ಮ

ಕನಕಗಿರಿಯನ್ನು ಹೈದ್ರಾಬಾದ್ ನಿಜಾಮನು ಕ್ರಿ.ಶ. ೧೮೩೩ರಲ್ಲಿ ವಶಪಡಿಸಿಕೊಂಡ. ಆಗ ಕನಕಗಿರಿ ಅರಸರು ಹುಲಿಹೈದರ್‌ಗೆ ಬಂದು ಇಲ್ಲಿಂದ ಆಡಳಿತ ಪ್ರಾರಂಭಿಸಿದರು. ಅರಸ ರಂಗಪ್ಪನಾಯಕನಿಗೆ ೪ ಜನ ರಾಣಿಯರಿದ್ದರೂ ಸಂತಾನವಿರಲಿಲ್ಲ. ಆಗ ರಾಣಿ ವೆಂಕಟಮ್ಮ ಸಂಸ್ಥಾನದ ಹಿರಿಯರನ್ನೆಲ್ಲಾ ಕರೆಯಿಸಿ ಮೈದುನ ಸೋಮಸಾಗರದ ಕನಕಪ್ಪನಾಯಕನ ಮಗ ವುಡಸಿನಾಯಕನನ್ನು ದತ್ತು ತೆಗೆದುಕೊಂಡಳು.[೬೧] ಈತ ಚಿಕ್ಕವನಿದ್ದ ಕಾರಣ ಈಕೆಯೇ ಆಡಳಿತ ನಡೆಸಿದಳು. ಆ ಸಂದರ್ಭದಲ್ಲಿ ತನ್ನ ಆಡಳಿತದ ಹಳ್ಳಿಗಳ ಜನತೆಯ ಕಲ್ಯಾಣಕ್ಕಾಗಿ ಶ್ರಮಿಸಿದಳು.

### ೩.೨.೨.೬ ಕನಕಗಿರಿಯ ರಾಣಿ ಗೌರಮ್ಮ

ವುಡಸಿನಾಯಕ(ಕ್ರಿ.ಶ.೧೭೦೮-೧೭೫೨)ನ ಮರಣಾನಂತರ ಆತನ ಮಗ ರಾಜಾರಂಗಪ್ಪನಾಯಕ ಅಪ್ರಾಪ್ತನಾಗಿದ್ದ, ಆಗ ರಾಣಿ ಗೌರಮ್ಮ ತಾನೇ ಅಧಿಕಾರ ವಹಿಸಿಕೊಂಡಳು. ನಂತರ ಮಗ ಅಧಿಕಾರಕ್ಕೆ ಬರುವ ಮೊದಲೇ ತೀರಿಕೊಂಡ. ಆಗ ರಾಣಿ ಗೌರಮ್ಮ ತನ್ನ ಮೈದುನನ ಮಗನಾದ ರಂಗಪ್ಪನಾಯಕನನ್ನು ದತ್ತಕ ತೆಗೆದುಕೊಂಡಳು. ಈತ ಇನ್ನು ಸಣ್ಣವನಿದ್ದರಿಂದ ಆಡಳಿತವನ್ನೆಲ್ಲಾ ರಾಣಿ ಗೌರಮ್ಮ ನಡೆಸುತ್ತಿದ್ದಳು. ಆಗ ಹೈದ್ರಾಬಾದ್ ನಿಜಾಮರು ಸಂಸ್ಥಾನದಲ್ಲಿ ಆಡಳಿತ ಸರಿಯಾಗಿ ನಡೆಯುತ್ತಿಲ್ಲವೆಂದು ತಮ್ಮ ಸ್ವಾಧೀನಕ್ಕೆ ಒಳಪಡಿಸಿಕೊಳ್ಳಲು ಪ್ರಯತ್ನಿಸಿದಾಗ ಈಕೆ ತನ್ನ ಬಂಧುಗಳಾದ ಸುರಪುರ, ಗುಡಗುಂಟಿ, ದೇವದುರ್ಗದವರ ಸಹಾಯವನ್ನು ಬೇಡಿದಳು. ಅವರಾರೂ ಸಹಾಯ ಮಾಡದಿದ್ದಕ್ಕಾಗಿ ಈಕೆಯನ್ನು ಮತ್ತು ದತ್ತು ಪುತ್ರ ರಾಜಾರಂಗಪ್ಪನಾಯಕನನ್ನು ವರ್ಷಾಸನ ಗೊತ್ತುಪಡಿಸಿ ಹೈದ್ರಾಬಾದ್‌ನಲ್ಲಿ ಇಟ್ಟರು. ರಾಣಿ ಅಲ್ಲಿಯೇ ಮರಣ ಹೊಂದಿದಳು.[೬೨]

### ೩.೨.೨.೭ ಗುಡಗುಂಟಿಯ ರಾಣಿ ಗೌರಮ್ಮ

ಗುಡಗುಂಟಿಯ ರಾಜಾ ಜಡಿಸೋಮಪ್ಪನಾಯಕ ತೀರಿಕೊಂಡ ನಂತರ ಮಗ ತಿಪ್ಪರಾಜ ಜಡಿಸೋಮಪ್ಪ ನಾಯಕ ಚಿಕ್ಕವನಿದ್ದರಿಂದ ರಾಣಿ ಗೌರಮ್ಮ ಆಡಳಿತದ ಸೂತ್ರ ಹಿಡಿದಳು.[೬೩] ಈಕೆ ತನ್ನ ಅಧಿಕಾರಾವಧಿಯಲ್ಲಿ ರಾಯದುರ್ಗದ ಸಮೀಪದಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದಾಳೆ. ಅದನ್ನು ರಾಣಿ ಗೌರಮ್ಮನ ಕೆರೆ ಎಂದು ಕರೆಯುತ್ತಾರೆ.

ಹೀಗೆ ಅಲ್ಪಾವಧಿಯವರೆಗೆ ಅಧಿಕಾರದಲ್ಲಿದ್ದ ನಾಯಕ ಅರಸುಮನೆತನದ ರಾಣಿಯರು ತಮ್ಮ ಸಾಮರ್ಥ್ಯಕ್ಕೆ ನಿಲುಕಿದಷ್ಟು ಅಧಿಕಾರವನ್ನು ಚಲಾಯಿಸಲು ಪ್ರಯತ್ನಿಸಿದರು. ತಮ್ಮ ಅಧಿಕಾರಾವಧಿಯಲ್ಲಿ ಜನೋಪಯೋಗಿ ಕೆಲಸಗಳನ್ನು ಮಾಡುತ್ತಾ, ಅಧಿಕಾರದ ಮುಂದುವರಿಕೆಗಾಗಿ ಅನುಕೂಲ ಮಾಡಿಕೊಟ್ಟರು.

ಕೆಲವು ಮನೆತನದ ರಾಣಿಯರು ರಾಜಕೀಯ ಅಧಿಕಾರದಲ್ಲಿರದಿದ್ದರೂ, ದೇವಾಲಯ, ಮಠ ಮಂದಿರ, ಬಾವಿ, ಕೆರೆಗಳನ್ನು ನಿರ್ಮಿಸಿದ್ದುಂಟು. ಅನೇಕ ದೇವಾಲಯಗಳಿಗೆ ಕಾಣಿಕೆಗಳನ್ನು ಅರ್ಪಿಸಿದ್ದುಂಟು. ಉಚ್ಚಂಗಿದುರ್ಗದ ಕೋಟೆಯಲ್ಲಿರುವ ಉಚ್ಚಂಗಮ್ಮನ ದೇವಾಲಯದಲ್ಲಿರುವ ಗಂಟೆಗಳಲ್ಲಿ ಕೆಲವನ್ನು ಹರಪನಹಳ್ಳಿ ಪಾಳೆಯಗಾರರು ಕಾಣಿಕೆಯಾಗಿ ನೀಡಿದ್ದಾರೆ. ಅದರಲ್ಲಿಯ ಒಂದು ಗಂಟೆಯನ್ನು ಚಿತ್ರದುರ್ಗದ ಹೊನ್ನಮ್ಮನಾಗತಿಯು ಉಚ್ಚಂಗಮ್ಮನಿಗೆ ಭಕ್ತಿಯ ಕಾಣಿಕೆಯಾಗಿ ಅರ್ಪಿಸಿದಂತೆ ತಿಳಿದು ಬರುತ್ತದೆ.[೬೪]

ಚಿತ್ರದುರ್ಗದ ೧ನೇ ಕಸ್ತೂರಿ ರಂಗಪ್ಪ(ಕ್ರಿ.ಶ. ೧೬೦೨-೧೬೫೨)ನ ನಾಗತಿ ಕಾಟವ್ವನಾಗತಿ ಎಂಬುವಳು ಚಿತ್ರದುರ್ಗ ತಿಮ್ಮಣ್ಣನಾಯಕನ ಕೆರೆಯ ಹಿಂದೆ ತನ್ನ ಹೆಸರಿನಲ್ಲಿ 'ಕಾಟಿಮಠ' ಮತ್ತು ಒಂದು ತೋಪನ್ನು ನಿರ್ಮಿಸಿದಳು.[೬೫] ಓಬಣ್ಣನಾಯಕನ ಸೊಸೆ ತನ್ನ ಗಂಡ ನರಸಿಂಹನು ಮರಣ ಹೊಂದಿದ್ದಕ್ಕಾಗಿ ಅವನ ಹೆಸರಿನಲ್ಲಿ 'ನರಸಪುರ' ಎಂಬ ಗ್ರಾಮವನ್ನು ನಿರ್ಮಿಸಿ ಅವನ ನೆನಪಿಗಾಗಿ ಆಂಜನೇಯ ಗುಡಿಯನ್ನು ನಿರ್ಮಿಸಿದಳು.[೬೬]

ಕನಕಗಿರಿಯ ನಾಯಕ ಅರಸರು ವೈಷ್ಣವರಾಗಿದ್ದರೂ ಶೈವಧರ್ಮಕ್ಕೆ ಆದ್ಯತೆಯನ್ನು ನೀಡಿದ್ದರು. ಈ ಮನೆತನದ ರಾಣಿಯರೂ ಶೈವಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದ್ದರು. ಕೆಲವಡಿ ಉಡಚ ನಾಯಕ(ಕ್ರಿ.ಶ. ೧೫೩೩-೧೫೭೮)ನ ರಾಣಿ ಕೊನಾಟಮ್ಮಳು(ಕಾಟಮ್ಮ) ಕನಕಗಿರಿಯ ಮೌನೇಶ್ವರ ಮಠವನ್ನು ಕಟ್ಟಿಸಿದಳು.[೬೭] ಇದೇ ಮನೆತನದ ಇಮ್ಮಡಿ ಉಡಚನಾಯಕ(ಕ್ರಿ.ಶ.೧೬೧೮-೧೭೦೮)ನ ಪಟ್ಟದರಾಣಿ ಚೆನ್ನಮ್ಮ ಕನಕಾಚಲಪತಿ ದೇವಾಲಯದ ಪ್ರಾಕಾರದಲ್ಲಿ ನೆಲಕ್ಕೆ ಕಲ್ಲುಗಳನ್ನು ಹಾಕಿಸಿದಳು. ಅಲ್ಲದೇ ಕ್ರಿ.ಶ. ೧೬೭೯ರಲ್ಲಿ ಪೇಟೆ ಬಸವಣ್ಣ ದೇವಾಲಯವನ್ನು ಕಟ್ಟಿಸಿದ ಕುರಿತಾಗಿ ಆ ಗುಡಿಯ ಗರ್ಭಗೃಹದ ಬಾಗಿಲ ಎಡಪಟ್ಟಿಯ ಮೇಲಿನ ಶಾಸನ ಈ ವಿವರ ನೀಡುತ್ತದೆ.[೬೮] ಅಲ್ಲದೆ ಊರ ಹೊರಗಿನ ಕೆರೆಯನ್ನು ನಿರ್ಮಿಸಿದಳು. ಈಗಲೂ ಈ ಕೆರೆಗೆ ಚಿನ್ನಾದೇವಿಕೆರೆ ಎಂದು ಕರೆಯುವರು. ಈತನ ಇನ್ನೊಬ್ಬ ರಾಣಿ ಕನಕಮ್ಮ ಲಕ್ಷ್ಮೀದೇವಿಗುಡ್ಡದ ಬುಡದಲ್ಲಿ ದೊಡ್ಡ ಬಾವಿಯೊಂದನ್ನು ತೋಡಿಸಿ ಅದನ್ನು ಆಕರ್ಷಕವಾದ ಕಲ್ಲಿನಿಂದ ಕಟ್ಟಿಸಿದಳು. ಇನ್ನೊಬ್ಬ ರಾಣಿ ಅಚ್ಚಮ್ಮ ಕನ್ನೇರುಮಡು ಗ್ರಾಮದ ದಾರಿಯಲ್ಲಿ ಸುಂದರವಾದ ಬಾವಿಯನ್ನು ನಿರ್ಮಿಸಿದ್ದಾಳೆ. ಈ ಬಾವಿಯನ್ನು ಈಗಲೂ ರಾಣಿ ಅಚ್ಚಮ್ಮನಬಾವಿ ಎಂದು ಕರೆಯುತ್ತಾರೆ.[೬೯]

ಈ ರೀತಿ ರಾಣಿಯರು ಆಡಳಿತದಲ್ಲಿ ಹಾಗೂ ಸಾರ್ವಜನಿಕ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು. ಇದಕ್ಕೆ ಅರಸರು ರಾಣಿಯರಿಗೆ ಇಂಥ ಕೆಲಸಗಳಿಗೆ ಸ್ವಾತಂತ್ರ್ಯವನ್ನು ನೀಡಿದ್ದರಿಂದ, ಕೆರೆಗಳನ್ನು,

ಬಾವಿಗಳನ್ನು, ದೇವಾಲಯಗಳನ್ನು ನಿರ್ಮಿಸಿದ್ದಲ್ಲದೇ, ದಾನದತ್ತಿ ನೀಡಿ, ಸಾರ್ವಜನಿಕ ಕೆಲಸಗಳಲ್ಲಿ ರಾಣಿಯರು ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಅಲ್ಲದೇ ಧಾರ್ಮಿಕ ವಿಷಯಗಳಲ್ಲಿಯೂ ಇವರು ಯಾವುದೇ ಅಡ್ಡಿ ಆತಂಕಗಳನ್ನು ಒಡ್ಡುತ್ತಿರಲಿಲ್ಲ ಎಂಬುದಕ್ಕೆ ಚಿಕ್ಕಣ್ಣನಾಯಕ(ಕ್ರಿ.ಶ. ೧೬೭೫-೧೬೮೬) ನು ವೀರಶೈವ ಧರ್ಮಕ್ಕೆ ಮತಾಂತರ ಹೊಂದಿ ಕೆಲವು ದಿನಗಳ ನಂತರ ಮೂಲ ಜಾತಿಗೆ ಹಿಂದಿರುಗಿದನ್ನು ಗಮನಿಸಬಹುದು. ಆದರೆ ಆತನ ರಾಣಿ ನಾಯಕನಹಟ್ಟಿ ಮಲ್ಲವ್ವನಾಗತಿ ಮಾತ್ರ ತಾನು ಧರಿಸಿದ ಲಿಂಗವನ್ನು ತೆಗೆಯದೇ ವೀರಶೈವ ಧರ್ಮದಲ್ಲಿಯೇ ಉಳಿದುಕೊಂಡಳು.[20] ತಮ್ಮ ಹೆಸರಿನಲ್ಲಿ ತಮ್ಮ ಮಕ್ಕಳ ಹೆಸರಿನಲ್ಲಿ ಮತ್ತು ರಾಣಿಯರ ಹೆಸರಿನಲ್ಲಿ ಅನೇಕ ಗ್ರಾಮಗಳನ್ನು, ಕೋಟೆಗಳನ್ನು, ಬಾಗಿಲುಗಳನ್ನು ನಿರ್ಮಿಸಿದ್ದಾರೆ. ಓಬನಹಳ್ಳಿ, ಕಸ್ತೂರಿರಂಗಪ್ಪನಹಳ್ಳಿ, ವೀರಮದಕೇರಿಪುರ, ಮದಕೇರಿಹಳ್ಳಿ, ಮದಕರಿನಾಯಕನಹಳ್ಳಿ, ಮದಕರಿನಾಯಕಕೋಟೆ, ಭರಮಣ್ಣನಾಯಕನದುರ್ಗ, ಭರಮನಹಳ್ಳಿ, ಪರಶುರಾಮಪುರ, ಓಬವ್ವನಾಗತಿಹಳ್ಳಿ, ವೀರನಾಗತಿಹಳ್ಳಿ, ಲಿಂಗವ್ವನಾಗತಿಹಳ್ಳಿ, ರಂಗಮ್ಮನಹಳ್ಳಿ, ಬೊಮ್ಮವ್ವ ನಾಗತಿಹಳ್ಳಿ, ಕೆಂಚವ್ವನಾಗತಿಹಳ್ಳಿ, ಬಸವ್ವನಾಗತಿಹಳ್ಳಿ, ರಂಗವ್ವನಹಳ್ಳಿ, ಕಲ್ಲವ್ವನಾಗತಿಹಳ್ಳಿ, ಚಿಕ್ಕವ್ವನಾಗತಿಹಳ್ಳಿ, ದ್ಯಾಮವ್ವನಾಗತಿಹಳ್ಳಿ, ಯರ್ರವ್ವನಾಗತಿಹಳ್ಳಿ, ಚಿಕ್ಕಸಿದ್ದವ್ವನಾಗತಿಹಳ್ಳಿ, ದೊಡ್ಡಸಿದ್ದವ್ವನಹಳ್ಳಿ, ಚಿಕ್ಕಪಾಲವ್ವನಹಳ್ಳಿ, ಕೊಮಾರನಹಳ್ಳಿ, ಕೊಮಾರ ಮದಕರಿನಾಯಕನ ಕೋಟೆ[21] ಹೀಗೆ ಅವುಗಳನ್ನು ನಿರ್ಮಿಸಿದ್ದಾರೆ.

ಇಮ್ಮಡಿ ಮದಕರಿನಾಯಕ (ಕ್ರಿ.ಶ.೧೬೫೨-೧೬೭೪)ನು ತನ್ನ ಪಟ್ಟದ ನಾಗತಿ ಚಿಕ್ಕಮ್ಮ ಎಂಬುವಳ ಹೆಸರಿನಲ್ಲಿ ಕಟ್ಟೆ ಬಸವಯ್ಯನ ಮಗ ಕೆಂಚಯ್ಯನ ಮುಖಾಂತರ ನೆಲ್ಲಿಕಟ್ಟೆಯಲ್ಲಿ ಕೆರೆಯೊಂದನ್ನು ಕಟ್ಟಿಸಿದನು.[22]

ಸಿದ್ದವ್ವನದುರ್ಗ ಚಿತ್ರದುರ್ಗದಿಂದ ಜಗಳೂರಿಗೆ ಹೋಗುವ ರಸ್ತೆಯಲ್ಲಿ ೧೫ ಕಿ.ಮೀ ಅಂತರದಲ್ಲಿದೆ. ಚಿತ್ರದುರ್ಗದ ಅರಸರು ತಮ್ಮ ರಾಣಿಯ ಹೆಸರಿನಲ್ಲಿ ನಿರ್ಮಿಸಿರುವ ದುರ್ಗಗಳಲ್ಲಿ ಇದೂ ಒಂದಾಗಿದೆ. ಹಾಗೆಯೇ ಚಿತ್ರದುರ್ಗದ ಕೋಟೆಯ ಒಂದು ಬಾಗಿಲಿಗೆ 'ನಾಗತಿಯ ಬಾಗಿಲು' ಎಂದಿದೆ.

ಸುರಪುರದ ರಾಜಧಾನಿಯ ಸುತ್ತಲಿನ ಹಳ್ಳಿಗಳು ಅರಸರ ಮಾತೆ ಮತ್ತು ಮಡದಿಯರ ಹೆಸರಿನಲ್ಲಿಯೇ ಹುಟ್ಟಿಕೊಂಡಿವೆ. ಅವುಗಳಲ್ಲಿ ಹಸರಂಗಿ ಪಾಮನಾಯಕನು ತನ್ನ ರಾಣಿ ಅಮ್ಮಾನಾಗತಿ ನೆನಪಿಗಾಗಿ ಅಮ್ಮಾಪುರವನ್ನೂ, ಪೀತಾಂಬರ ಬಹರಿ ಪಿಡ್ಡನಾಯಕನು ತನ್ನ ತಾಯಿ ಲಕ್ಷ್ಮಮ್ಮನ ಸ್ಮರಣೆಗಾಗಿ ಲಕ್ಷ್ಮೀಪುರವನ್ನು, ಮೊಂಡುಗೈ ವೆಂಕಟಪ್ಪನಾಯಕ ತನ್ನ ತಾಯಿ ರುಕ್ಮಣಿಯಮ್ಮನ ಹೆಸರಿನಲ್ಲಿ ರುಕ್ಮಾಪುರವನ್ನು ಹಾಗೂ ಅತ್ತಿಗೆ ಸತ್ಯಮ್ಮನ ಹೆಸರಿನಲ್ಲಿ ಸತ್ಯಂಪೇಟೆಯನ್ನು, ಮುಮ್ಮಡಿ ವೆಂಕಟಪ್ಪನಾಯಕನು ತನ್ನ ರಾಣಿ ರಂಗಮ್ಮನ ಸವಿನೆನಪಿಗಾಗಿ ರಂಗಂಪೇಟೆ ಗ್ರಾಮವನ್ನು ಅಲ್ಲದೇ ಸಿದ್ದಾಪುರ, ವೆಂಕಟಾಪುರ ಗ್ರಾಮಗಳೂ ಇದೇ ನಿಟ್ಟಿನಲ್ಲಿ ನಿರ್ಮಾಣವಾದವು. ಶಾಲಿವಾಹನ ಶಕೆ ೧೭೨೬

ರಕ್ತಾಕ್ಷಿ ಸಂವತ್ಸರದ ಮಾರ್ಗಶಿರ ಅಷ್ಟಮಿಯ ಗೋಧೂಳಿ ಶುಭ ಸಮಯದ ಸೋಮವಾರದಂದು ಪಿಡ್ಡನಾಯಕನು ವೆಂಕಮಾಂಬಳ ಮನವಿ ಮೇರೆಗೆ ವನದುರ್ಗ ಕೋಟೆಯನ್ನು ನಿರ್ಮಾಣ ಮಾಡಿದನು.[೭೩] ಹೀಗೆ ಈ ಅರಸರು ತಮ್ಮ ರಾಣಿಯರ ಹೆಸರಿನಲ್ಲಿ ನಿರ್ಮಿಸಿದ ಗ್ರಾಮ, ದೇಗುಲ, ಕೆರೆ, ಬಾವಿಗಳು ಅವರ ಗೌರವಾದರಗಳ ಪ್ರತಿಬಿಂಬವಾಗಿದ್ದವಲ್ಲದೆ ಜನರ ಮನದಾಳದಲ್ಲಿ ಯಾವತ್ತೂ ನೆಲೆಯೂರಿರಲಿ ಎಂಬ ಭಾವನೆಯೂ ಇವರಲ್ಲಿತ್ತು.

### ೩.೨.೩ ಅಂತಃಪುರ

ಪಟ್ಟದರಸಿಯರಿಗೆ ಸ್ವತಂತ್ರವಾದ ಅಂತಃಪುರವಿರುತ್ತಿತ್ತು. ಅದರಂತೆ ಸವತಿ ಮತ್ಸರ ತೋರಿಸಬಾರದು ಎಂಬ ಕಾರಣಕ್ಕೆ ಪ್ರತಿಯೊಬ್ಬ ಅರಸಿಗೂ ಪ್ರತ್ಯೇಕ ಅಂತಃಪುರಗಳನ್ನು ಅರಸರು ವ್ಯವಸ್ಥೆ ಮಾಡಿರುತ್ತಿದ್ದರು. ಅಂತಃಪುರವನ್ನು ಕಾಯಲು ಕಾವಲುಭಟ್ಟರು, ಹಲವಾರು ರಕ್ಷಣಾ ಸ್ತ್ರೀಯರು, ದಾಸಿಯರು, ರಾಣಿಯ ಆಪ್ತಸಖಿಯರು, ಪರಿಚಾರಕರು ಇರುತ್ತಿದ್ದರು. ಅಂತಃಪುರಕ್ಕೆ ಹೋಗಲು ಈ ಸಿಬ್ಬಂದಿಗಳಲ್ಲದೇ ಅರಸ, ಯುವರಾಜ ಮತ್ತು ಕೆಲವು ಬಾರಿ ರಾಜಪುರೋಹಿತರಿಗೆ ಮಾತ್ರ ಅವಕಾಶವಿರುತ್ತಿತ್ತು.

ರಾಣಿಯರ ಅಂತಪುರದ ಖರ್ಚುವೆಚ್ಚಗಳನ್ನು ರಾಜನು ನಿಯಂತ್ರಿಸುತ್ತಿದ್ದ. ಅದರ ನಿರ್ವಹಣೆಗೆ ಬೇಕಾಗುವ ಒಟ್ಟು ಬಾಬ್ತುಗಳು ಪಟ್ಟದ ರಾಣಿಯ ಸ್ವಾಧೀನದಲ್ಲಿರುತ್ತಿದ್ದವು. ಆಕೆಯು ಎಲ್ಲರಿಗೂ ಅವರವರ ಭಾಗಗಳನ್ನು ತಲುಪಿಸುವ ವ್ಯವಸ್ಥೆ ಮಾಡುತ್ತಿದ್ದಳು. ಇದರ ವಿವರವನ್ನು ಕಪಟರಾಳ ಕೃಷ್ಣರಾವ್ ಅವರು ಸುರಪುರದ ಅಂತಃಪುರದ ಖರ್ಚನ್ನು ಈ ರೀತಿ ಹೇಳುತ್ತಾರೆ :

| | |
|---|---|
| ನಾಗರಪಂಚಮಿ | ರೂ. ೫೦೦ |
| ಗೋಕುಲಾಷ್ಟಮಿ | ರೂ. ೨೫೦ |
| ವೃಂದಾವನಪೂಜೆ | ರೂ. ೨೫೦ |
| ಸಂಕ್ರಾಂತಿಹಬ್ಬ | ರೂ. ೨೦೦ |
| ರಾಮನವಮಿ | ರೂ. ೧೫೦ |
| ಮಾರ್ನವಮಿ(ಮಹಾನಮಿ) | ರೂ. ೪೫೦ ಈ ಹಬ್ಬದ ಇನಾಮಿನ ಸಲುವಾಗಿ ರೂ. ೨೭೫ಗಳು. |
| ಗೌರಿ ಮತ್ತು ದವನದ | |
| ಹುಣ್ಣಿಮೆಗಳ ಉಪವಾಸ | |
| ಪಾರಣೆಗಳ ಸಲುವಾಗಿ | ರೂ. ೧೦೮ |
| ದೀಪಾವಳಿ | ರೂ. ೧೨೦೦ ಮತ್ತು ಸೀರೆ ಕುಪ್ಪಸಗಳು |
| ಯುಗಾದಿ | ರೂ. ೧೫೦೦ ಮತ್ತು ಸೀರೆ ಕುಪ್ಪಸಗಳು |
| ಗ್ರಹಣಕಾಲದಲ್ಲಿ ದಕ್ಷಿಣೆ | |

ಕೊಡಲು ರೂ. ೧೦೦

ಶುಕ್ರವಾರ ಲಕ್ಷ್ಮೀಪೂಜೆಗಾಗಿ ರೂ. ೪೦

ಶ್ರಾವಣದ ಲಕ್ಷ್ಮೀಪೂಜೆಗಾಗಿ ರೂ. ೩೦೦

ಇದಲ್ಲದೆ ಪಟ್ಟದ ರಾಣಿ ಮತ್ತು ಇತರ ರಾಣಿಯರಿಗೆ, ದಾಸಿಯರು, ಪ್ರತಿಯೊಬ್ಬ ರಾಣಿಯ ತೋಷಾಖಾನಿ, ಸೀರೆ, ಕುಪ್ಪಸ, ಒಡವೆ, ಆಭರಣಗಳು, ಕಸ್ತೂರಿ, ಕೇಸರಿ, ಕುಂಕುಮ, ಹಲ್ಲುಪುಡಿ, ಚಿಕ್ಕಅಂಟು, ಚದರಂಗ, ಗಂಜೀಪು, ಹಣಗಿಗಳು, ಕನ್ನಡಿ, ಪುಸ್ತಕಗಳು, ಬೆಳ್ಳಿತಾಟು, ಬಟ್ಟಲು ಮಂತಾದವುಗಳನ್ನು ಬೈತಲಕಡ್ಡಿ, ಎಲೆ, ಅಡಿಕೆ ಮುಂತಾದವುಗಳ ವ್ಯವಸ್ಥೆಯ ಸಲುವಾಗಿ ಸಾತಾನಿ ಹೆಣ್ಣುಮಕ್ಕಳನ್ನು ನೇಮಿಸಲಾಗುತ್ತಿತ್ತು.[೨೪] ಅಲ್ಲದೆ ರಾಣಿವಾಸದ ಪರಿಚಾರಕರಿಗೂ ವಿವಿಧ ರೀತಿಯ ಖರ್ಚನ್ನು ನೀಡಲಾಗುತ್ತಿತ್ತು.

ಇಷ್ಟೆಲ್ಲಾ ಪಟ್ಟದ ರಾಣಿಯರಿಗೆ ಸಕಲ ಸವಲತ್ತುಗಳಿದ್ದರೂ ಘೋಷಾಪದ್ಧತಿಯನ್ನು ಅನುಸರಿಸಬೇಕಾಗಿದ್ದಿತು. ಅಂತಃಪುರದಿಂದ ಹೊರಬರಬೇಕಾದರೆ ಅವರಿಗಾಗಿ ಮೀಸಲಿಸಿದ ಮೇಣೆಗಳಲ್ಲಿಯೇ ಬರಬೇಕಾಗಿದ್ದಿತು. ಹೊರಗಿನ ಗಾಳಿ ಬೆಳಕು ಕಾಣದಾಗಿತ್ತು. ಅಪರೂಪಕ್ಕೊಂದು ಬಾರಿ ವಿಹಾರಕ್ಕೆ ಹೋಗುತ್ತಿದ್ದರು. ಸುರಪುರದ ಪಟ್ಟದರಸಿಗೆ ಬೋನ್ಹಾಳ ಕೆರೆಯಲ್ಲಿ ರಾಣಿಯರಿಗಾಗಿ ಮತ್ತು ಬಾಲವೆಂಕಟ ನಾಲ್ವಡಿ ವೆಂಕಟಪ್ಪನಾಯಕನಿಗಾಗಿ ನೌಕಾವಿಹಾರ ಸೌಲಭ್ಯ ಒದಗಿಸಲಾಗಿತ್ತು. ಬೇಸಿಗೆ ಕಾಲಕ್ಕೆ ಜಲದುರ್ಗಕ್ಕೆ ಜಲವಿಹಾರಕ್ಕೆಂದು ಬರುತ್ತಿದ್ದ ಬಗ್ಗೆ ಮೆಡೋಸ್ ಟೇಲರ್ ಬರೆದಿದ್ದಾನೆ.[೨೫]

### ೩.೨.೪ ಸಹಗಮನ

ಕರ್ನಾಟಕದಲ್ಲಿ ಈ ಪದ್ಧತಿ ಅತ್ಯಂತ ಪ್ರಾಚೀನ ಕಾಲದಿಂದಲೇ ಪ್ರಚಲಿತವಿದ್ದಿತು. ಕ್ರಿ.ಶ. ೪೫೦ರ ಸುಮಾರಿಗೆ ಅಗ್ನಿಪ್ರವೇಶ ಮಾಡಿರಬಹುದಾದ ರವಿವರ್ಮನ ರಾಣಿಯ ಉಲ್ಲೇಖ ನಮ್ಮ ನಾಡಿನ ಸಹಗಮನದ ಪ್ರಥಮ ಉದಾಹರಣೆಯೆನಿಸಿದೆ.[೨೬] ಅಲ್ಲಿಂದ ಮುಂದೆ ಕ್ರಿ.ಶ.೯ನೆಯ ಶತಮಾನದವರೆಗೆ ಸಹಗಮನಗೊಂಡ ಉದಾಹರಣೆಗಳ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ. ಮುಂದೆ ೯ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಸಹಗಮನ ಪದ್ಧತಿ ಹೆಚ್ಚು ಬೆಳೆಯಿತು. ೧೨ನೆಯ ಶತಮಾನದ ವಚನ ಕ್ರಾಂತಿಯಿಂದಾಗಿ ಈ ಪದ್ಧತಿ ಉತ್ತರ ಕರ್ನಾಟಕದಲ್ಲಿ ಕ್ಷೀಣಿಸಿತ್ತಾದರೂ ಮುಂದೆ ಮುಸಲ್ಮಾನ, ವಿಜಯನಗರ ಅರಸರ ಕಾಲಕ್ಕೆ ಮತ್ತೆ ಪ್ರಬಲವಾಯಿತು. ವಿದೇಶಿ ಪ್ರವಾಸಿಗರು ವಿಜಯನಗರಕ್ಕೆ ಭೇಟಿ ನೀಡಿದಾಗ ಸಹಗಮನದ ಬಗ್ಗೆ ಕೆಲವು ಮಾಹಿತಿಗಳನ್ನು ನೀಡುತ್ತಾರೆ.[೨೭]

ಮುಸ್ಲಿಂ ಧಾಳಿಗಳ ಹಿನ್ನೆಲೆಯಲ್ಲಿ ಉತ್ತರಭಾರತದಲ್ಲಿ ಸಹಗಮನ ಘಟನೆಗಳು ಹೆಚ್ಚಾಗಿದ್ದವು. ಹಾಗಾಗಿ ಕರ್ನಾಟಕದಲ್ಲೂ ವಿಜಯನಗರೋತ್ತರ ಕಾಲದಲ್ಲಿ ಮುಸ್ಲಿಂ ಧಾಳಿಗಳಿಂದ ಹಿಂದೂ ಸ್ತ್ರೀಯರ

ಸಹಗಮನದ ಸಂಖ್ಯೆ ತುಂಬಾ ವೃದ್ಧಿಸಿತು. ಇದು ಹಾಗೆಯೇ ಎಲ್ಲಾ ಮನೆತನಗಳಿಗೂ ವ್ಯಾಪಿಸಿತು. ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಚಿತ್ರದುರ್ಗದ ಅರಸು ಮನೆತನದಲ್ಲಿ ಮಾತ್ರ ಈ ಪದ್ಧತಿ ಕಂಡುಬರುತ್ತದೆ. ಉಳಿತ ನಾಯಕ ಅರಸು ಮನೆತನಗಳಲ್ಲಿ ಸಹಗಮನ ಪದ್ಧತಿ ಇರುವುದರ ಕುರಿತಾಗಿ ಇಲ್ಲಿಯವರೆಗೆ ಯಾವುದೇ ದಾಖಲೆಗಳು ಲಭ್ಯವಿರುವುದಿಲ್ಲ.

ಚಿತ್ರದುರ್ಗದ ಓಬಣ್ಣನಾಯಕ (ಕ್ರಿ.ಶ. ೧೫೮೯-೧೬೦೨)ನು ಸ್ವರ್ಗಸ್ಥನಾದ ಸುದ್ದಿ ಕೇಳಿ ಐದು ಜನ ನಾಗತಿಯರು ಸಹಗಮನ ಮಾಡಿದರು. ಇಬ್ಬರು ನಾಗತಿಯರು ಉಳಿದುಕೊಂಡರು.[೨೮] ಕಸ್ತೂರಿ ರಂಗಪ್ಪನಾಯಕ ಕ್ರಿ.ಶ. ೧೬೫೨ರಲ್ಲಿ ದೈವಾಧೀನನಾದಾಗ ಆತನ ಹನ್ನೆರಡು ಜನ ನಾಗತಿಯರಲ್ಲಿ ಏಳುಜನ ನಾಗತಿಯರು ಸಹಗಮನ ಮಾಡಿದರು.[೨೯]

ಇಮ್ಮಡಿ ಮದಕರಿನಾಯಕನ ಮರಣದ ನಂತರ ಅವನ ಮೂವತ್ತು ಜನ ರಾಣಿಯರಲ್ಲಿ ಇಪ್ಪತ್ತೇಳು ರಾಣಿಯರು ಸಹಗಮನ ಮಾಡಿದರು.[೪೦] ಕೊನೆಯ ಮದಕರಿನಾಯಕ ಶತ್ರುವಿನ ವಶವಾದ ಸುದ್ದಿಕೇಳಿ ರಾಣಿವಾಸದವರು ಮೇಲು ದುರ್ಗದ ಹೊಂಡಗಳ ಮಡುವಿನಲ್ಲಿ ಹಾರಿ ಆತ್ಮಾರ್ಪಣೆ ಮಾಡಿಕೊಂಡರೆನ್ನಲಾಗುತ್ತದೆ.

ಹೀಗೆ ಈ ಮನೆತನದ ರಾಣಿಯರು ತನ್ನ ಪತಿ ತೀರಿದ ಬಳಿಕ ಮನಃಪೂರ್ವಕವಾಗಿ ಸಹಗಮನ ಮಾಡುತ್ತಿದ್ದರು. ಆದರೆ ಈ ಪದ್ಧತಿ ಹೆಚ್ಚಾಗಿ ರಾಜಾ ವೀರಮದಕರಿನಾಯಕನ ಕಾಲದಿಂದ ಕಾಣಬರುವುದಿಲ್ಲ. ಈ ಮನೆತನಗಳಲ್ಲಿ ಸಹಗಮನ ಪದ್ಧತಿ ಒತ್ತಾಯಪೂರ್ವಕವಾಗಿ ಜರುಗುತ್ತಿರಲಿಲ್ಲ. ಅದನ್ನು ಅವರವರ ಇಚ್ಛೆಗೆ ಬಿಟ್ಟಿರುತ್ತಿದ್ದರು. ಮೊದಮೊದಲು ಘನತೆ ಗೌರವಗಳ ಪ್ರತೀಕವಾಗಿ ಅರಸು ವರ್ಗಗಳಲ್ಲಿ ಈ ಪದ್ಧತಿ ಬೆಳೆದು ಬಂದಿತಾದರೂ ನಂತರದಲ್ಲಿ ಮಧ್ಯಮವರ್ಗವನ್ನು ಅಕ್ರಮಿಸಿಕೊಂಡಿತು. ಮರಣದ ತರುವಾಯ ತನ್ನ ರಾಣಿ ಮನಸ್ಸಿಲ್ಲದೆ ಅನ್ಯರಿಗೆ ವಶವಾಗಬಾರದೆಂಬ ಅರಸನ ಪ್ರತಿಷ್ಠೆ ಈ ಸಂಪ್ರದಾಯವನ್ನು ರಾಣಿಯರಿಗೆ ರೂಪಿಸಿಕೊಟ್ಟಿರಬಹುದು. ಇಲ್ಲವೇ ಅರಸನ ಮರಣದ ನಂತರ ತನ್ನ ಬದುಕುವಿಕೆ ಮತ್ತು ಪಾವಿತ್ರ್ಯಗಳ ಅನಿಶ್ಚಿತತೆ ಕಾರಣವಾಗಿ ರಾಣಿಯರ ವರ್ಗವೇ ಇದನ್ನು ರೂಪಿಸಿಕೊಂಡಿರಬಹುದು. ಇಲ್ಲವೆ ಅರಸನ ಮರಣದ ತರುವಾಯ ರಾಣಿಯನ್ನು ಮರಣದ ಕೂಪಕ್ಕೆ ತಳ್ಳಿ ಅವಳ ಆಸ್ತಿಯನ್ನು ಸೆಳೆಯಲು ಉಳಿದ ಅರಸುವರ್ಗ ಇಲ್ಲವೇ ಪುರೋಹಿತವರ್ಗ ಈ ಪದ್ಧತಿಯನ್ನು ರೂಪಿಸಿರುವ ಸಾಧ್ಯತೆಗಳಿವೆ. ಈ ಪದ್ಧತಿಯು ಕರ್ನಾಟಕದ ಇನ್ನಿತರ ನಾಯಕ ಅರಸು ಮನೆತನಗಳಲ್ಲಿ ಆಚರಣೆಯಲ್ಲಿದ್ದುದರ ಕುರಿತಾಗಿ ಯಾವುದೇ ಆಧಾರಗಳು ಲಭ್ಯವಿಲ್ಲ. ಆದರೆ ಪಟ್ಟದ ರಾಣಿ ವಿಧವೆಯಾದ ಮೇಲೆ ಯಾವುದೇ ಶುಭಕಾರ್ಯದಲ್ಲಿ ಭಾಗವಹಿಸುವಂತಿಲ್ಲ. ಈಗಲೂ ಈ ಮನೆತನದವರು ವಿಧವೆ ಮತ್ತು ವಿಧುರರಿಗೆ ಸಂಬಂಧಿಸಿದಂತೆ ಈ ನಿಯಮ ಇದೆ.

ಏನೇ ನಿರ್ಬಂಧಗಳಿದ್ದರೂ ಒಬ್ಬ ಪಟ್ಟದರಾಣಿ ಪಟ್ಟಾಭಿಷಿಕ್ತ ಅರಸನೊಂದಿಗೆ ತಾನೂ ಪಟ್ಟಾಭಿಷಿಕ್ತಳಾಗಿ, ಆತನ ಏಳ್ಗೆಯಲ್ಲಿ ಸಹಕರಿಸುತ್ತಾ ಅಂತಃಪುರದ ಸಹರಾಣಿಯರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾ ಪ್ರಜೆಗಳ ಹಾಗೂ ರಾಜ್ಯದ ಹಿತಕ್ಕಾಗಿ ಆಕೆ ಶ್ರಮಿಸಬೇಕಾಗಿದ್ದಿತು. ಆಕೆಗೆ ಅರಸ ಹಾಗೂ ಇತರ ರಾಣಿಯರು, ರಾಜ್ಯದ ಪ್ರಜೆಗಳೂ ಪ್ರಥಮ ಪ್ರಾಧಾನ್ಯತೆಯನ್ನು ನೀಡುತ್ತಿದ್ದರಲ್ಲದೇ ಪಟ್ಟದರಸನನ್ನು ಪ್ರತ್ಯಕ್ಷ ದೇವರು ಎಂದು ಭಾವಿಸಿದಂತೆ ಪಟ್ಟದರಸಿಯನ್ನು ಪ್ರತ್ಯಕ್ಷ ದೇವತೆಯೆಂದು ಭಾವಿಸಲಾಗುತ್ತಿತ್ತು.

## ೩.೩ ಯುದ್ಧದ ಪೂರ್ವಸಿದ್ಧತೆ

ಮಾನವ ಸಂತತಿಗಳಲ್ಲಿ ಸ್ಪರ್ಧೆ ಮತ್ತು ನೈಸರ್ಗಿಕ ಆಯ್ಕೆಯ ಅಂತಿಮರೂಪವೇ ಯುದ್ಧ.[೮೧] ಯುದ್ಧ ಅಥವಾ ಸ್ಪರ್ಧೆ ಸರ್ವವಸ್ತುಗಳ ಜನಕ, ವಿಚಾರಗಳ, ಸೃಷ್ಟಿಗಳ ಸಂಸ್ಥೆಗಳ ಹಾಗೂ ರಾಜ್ಯಗಳ ಶಕ್ತಿಯುತ ಮೂಲ. ಹೀಗಾಗಿ ಒಂದು ರಾಜ್ಯದ ಅಸ್ತಿತ್ವ ನಿಂತಿರುವುದು ಅವರ ಯುದ್ಧಶಕ್ತಿಯ ಮೇಲೆ. ಹೀಗಾಗಿ ಬರ್ನ್‌ಹಾರ್ಡ್ ಎಂಬುವರು war is a biological necessity an indispensable regulator in the life of mankind[೮೨] ಎನ್ನುತ್ತಾರೆ. ಯುದ್ಧವನ್ನು ಸಮರ, ಕದನ, ಕಾಳಗ, ಹೋರಾಟ ಮತ್ತು ಜಗಳಗಳೆಂದು ಕರೆಯಲಾಗಿದೆ. ಯುದ್ಧ ವ್ಯವಸ್ಥೆಯು ಆರಂಭ, ಘಟನೆ ಅಂತ್ಯ ಮತ್ತು ಪರಿಣಾಮಗಳ ಜೊತೆಗೆ ಪರಿಹಾರಗಳನ್ನು ಒಳಗೊಂಡಿರುತ್ತದೆ. ಬಿ. ಷೇಕ್‌ಅಲಿ ಅವರು ಯುದ್ಧವೆಂದರೆ ಪ್ರಬಲ ಅರಸರಿಗೆ ಯುದ್ಧ ಒಂದು ಬಗೆಯ ಕ್ರೀಡೆ. ಬೇರೊಂದು ರೂಪದ ಬೇಟೆ ಎನ್ನುತ್ತಾರೆ. ಅವರು ಮುಂದುವರೆದು ಯುದ್ಧರಂಗವನ್ನು ಪ್ರವೇಶಿಸಲು ಕಾರಣಗಳಿಗೆ ಕೊರತೆಯಿರಲಿಲ್ಲ. ಎರಡರಲ್ಲಿ ಯಾವುದೇ ಒಂದು ಆಸ್ಥಾನವು ತೆಗೆದುಕೊಳ್ಳುತ್ತಿದ್ದ ಮುಖ್ಯವಾದ ನಿರ್ಣಯ ಇನ್ನೊಬ್ಬನ ಮೇಲೆ ಹೇಗೆ ಯುದ್ಧಮಾಡಿ ಎಂಥ ಪೆಟ್ಟುಕೊಡುವುದು ಎನ್ನುವುದಾಗಿದೆ.[೮೩]

ಅರಸರ ರಾಜ್ಯ ವಿಸ್ತರಣೆಯ ಆಕಾಂಕ್ಷೆಯು ಯುದ್ಧಕ್ಕೆ ಮೂಲಭೂತ ಕಾರಣವಾಗಿದೆಯಾದರೂ ಕ್ಲಾಸ್ ವಿಟ್ಜ್‌ರವರು ಯುದ್ಧ ಎನ್ನುವುದು ಹಿಂಸೆಯ ಪ್ರಕಟರೂಪವಾಗಿದೆ. ಅದು ಗರ್ವ, ದುರಹಂಕಾರ, ಇನ್ನೊಬ್ಬನನ್ನು ಗುಲಾಮರನ್ನಾಗಿಸುವ ಪಾಳೆಯಗಾರಿಕೆ ಮನಸ್ಸಿನ ಅಭಿವ್ಯಕ್ತ ರೂಪ. ಸ್ಪರ್ಧೆಯಲ್ಲಿ ಇಲ್ಲದ ಹಿಂಸಾತ್ಮಕ ರೂಪ ಯುದ್ಧದಲ್ಲಿ ಕಾಣಿಸಿಕೊಳ್ಳುತ್ತದೆ. ಸಂಪಾದನೆ, ಜಗಳಗಂಟತನ, ಗರ್ವ, ಆಹಾರ, ಜಮೀನು, ಸರಕುಗಳು ಮತ್ತು ಯಾಜಮಾನ್ಯದ ಆಸೆಯಿಂದ ಯುದ್ಧಗಳು ಘಟಿಸುತ್ತವೆ[೮೪] ಎಂದಿದ್ದಾರೆ. ಅನೇಕ ಯುದ್ಧಗಳನ್ನು ಕರ್ನಾಟಕದ ನಾಯಕ ಅರಸುಮನೆತನದವರು ಮಾಡಿದ್ದಾರೆ. ಇವರು ಯುದ್ಧದಲ್ಲಿ ಜಯಿಸಬೇಕಾದರೆ ಅನೇಕ ರೀತಿಯ ವ್ಯವಸ್ಥೆಗಳನ್ನು ಮಾಡಿಕೊಳ್ಳಬೇಕಾಗಿತ್ತು. ಅದರಲ್ಲಿ ಬಹುಮುಖ್ಯವಾದದ್ದು ಸೈನ್ಯವ್ಯವಸ್ಥೆ. ಕೌಟಿಲ್ಯನ ಸಪ್ತಾಂಗಗಳಲ್ಲಿ ಒಂದಾಗಿರುವ ಸೈನ್ಯವು ಎಲ್ಲಾ ರಾಜ್ಯದ ಅವಿಭಾಜ್ಯ ಅಂಗವಾಗಿತ್ತು. ಜೊತೆಗೆ ರಾಜ್ಯದ ಆಡಳಿತವನ್ನು ಬಲಪಡಿಸಿ ಶಾಂತಿ ಸುವ್ಯವಸ್ಥೆಗಳನ್ನು

ಸ್ಥಾಪಿಸುವಲ್ಲಿ ಅರಸನಿಗೆ ನೆರವಾಗುವಂತಹದ್ದು ಇದೇ ಸೈನ್ಯವಾಗಿತ್ತು. ಹೀಗಾಗಿ ರಾಜಕೀಯ ಮನೆತನದ ಅವಿಭಾಜ್ಯ ಅಂಗವಾಗಿ ಸೈನ್ಯವು ಪ್ರಾಮುಖ್ಯತೆಯನ್ನು ಪಡೆದಿತ್ತು.

ಸನ್-ತ್ಸು(sun-Tzu) ಎಂಬ ವಿದ್ವಾಂಸ ಯಾವುದೇ ಸೈನ್ಯವು ಯುದ್ಧದಲ್ಲಿ ಯಶಸ್ಸು ಸಾಧಿಸಲು ಹೊಂದಿರಬೇಕಾದ ಏಳು ಅಂಶಗಳನ್ನು ನೀಡುತ್ತಾನೆ. ಇವು ಯುದ್ಧದ ಪೂರ್ವಸಿದ್ಧತೆಯಲ್ಲಿ ಅಳವಡಿಸಿ ಕೊಳ್ಳಬೇಕಾದ ಅಂಶಗಳಾಗಿವೆ. ಅವುಗಳೆಂದರೆ "ನೈತಿಕ ಬಲ, ಸಶಕ್ತ ದಂಡನಾಯಕ, ಅನುಕೂಲಕರ ಭೂ ಮತ್ತು ವಾತಾವರಣ, ಕಾಯಿದೆ ಕಟ್ಟಳೆಗಳಿಂದ ಕೂಡಿದ ಸೈನ್ಯ, ಧೀರರನ್ನೊಂದಿದ ಕಾಲ್ದಳ, ಹರಿತ ಆಯುಧಗಳು, ತರಬೇತಿ ಹೊಂದಿದ ಸೈನಿಕರು ಮತ್ತು ಅಧಿಕಾರಿಗಳು."[೮೫] ರಾಜನನ್ನು ಒಳಗೊಂಡು ಎಲ್ಲಾ ಪಡೆಗಳು ತರಬೇತಿಯಿಂದ ಸಜ್ಜುಗೊಳ್ಳುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು. ಸೇನೆಯನ್ನು ಒಂದುಗೂಡಿಸುವ, ಮುನ್ನಡೆಸುವ, ಸಂಘಟಿಸುವ ತರಬೇತಿ ನೀಡಲಾಗುತ್ತಿತ್ತು. ಸದಾ ಸೈನ್ಯವನ್ನು ಯುದ್ಧಕ್ಕಾಗಿ ತಯಾರಿಯಲ್ಲಿಟ್ಟುಕೊಳ್ಳಬೇಕಾಗುತ್ತಿತ್ತು.

ಚಿತ್ರದುರ್ಗದ ನಾಯಕ ಅರಸರು ಆಗಾಗ್ಗೆ ಬಿದನೂರು, ಸಿರಾದ ನವಾಬ, ಮರಾಠ ಸಿದ್ಧೋಜಿರಾವ್, ಹಿಂದೂರಾವ್, ರತ್ನಗಿರಿ, ಹಾವನೂರು, ಆನೆಗೊಂದಿ, ಹಾಗಲವಾಡಿ ಇವರೇ ಮೊದಲಾದ ಪಾಳೆಯಗಾರರ ಧಾಳಿಯನ್ನು ಎದುರಿಸಬೇಕಾಗುತ್ತಿತ್ತು. ಹೀಗಾಗಿ ಈ ಧಾಳಿಗಳನ್ನು ಎದುರಿಸಲು ಸದಾ ಸಿದ್ಧವಾಗಿ ಸೈನ್ಯವನ್ನು ಇಟ್ಟುಕೊಂಡಿರುತ್ತಿದ್ದರು. ಇವರು ತಮ್ಮ ಸೈನಿಕರಿಗೆ ಸರಿಯಾದ ಸಂಬಳವನ್ನು, ಜೀವನೋಪಾಯ ಕ್ಕಾಗಿ ಸಕಲ ವ್ಯವಸ್ಥೆಯನ್ನು ಮಾಡುತ್ತಿದ್ದರು. ಸೇನೆಯವರಿಗೆ ಸಂಬಳ ಕೊಡಲಿಲ್ಲವೆಂಬ ದೂರು ಈ ಅರಸರ ದಂಡಿನಲ್ಲಿ ಎಂದೂ ಕೇಳಿಬರಲಿಲ್ಲ. ಯುದ್ಧಕಾಲದಲ್ಲಿ ಭಟರಿಗೂ ಸೇನಾನಾಯಕರಿಗೂ ಚಿತ್ರದುರ್ಗದವರು ಕೊಡುತ್ತಾ ಇದ್ದ ಇನಾಮು ಅವರಲ್ಲಿ ಧೈರ್ಯವನ್ನು, ಯುದ್ಧದಲ್ಲಿ ಮುಂದುವರಿಯು ವೆನೆಂಬ ಮನಸ್ಸನ್ನು ಹುಟ್ಟಿಸುತ್ತಲಿತ್ತು. ಇಂಥ ಉತ್ತೇಜನಕ್ಕೆ ಆಸೆಪಟ್ಟ ಸ್ವದೇಶದ ವಿಶಿಷ್ಟ ಬೇಡರು, ಅಲ್ಲದೆ ದೇಶಾಂತರದಿಂದ ಮರಾಠೆಯವರು, ರಜಪೂತರು, ರೋಹಿಲೆಯರು, ತುರುಕರು, ಪೂರಭಯ್ಯ ಜನರು ಬಂದು ದುರ್ಗದ ಸೇನೆ ಸೇರುತ್ತಿದ್ದರು.[೮೬]

ಅರಸರು ಸೈನ್ಯಕ್ಕೆ ಸೇರಲು ಜನರಲ್ಲಿ ಅನೇಕ ಧಾರ್ಮಿಕ, ಲೌಕಿಕ ಅಲೌಕಿಕ ಕಲ್ಪನೆಗಳನ್ನು ಸೃಷ್ಟಿಸಿ, ಸೈನ್ಯಕ್ಕೆ ಹೆಚ್ಚಾಗಿ ಸೇರುವಂತೆ ಪ್ರೇರೇಪಿಸುತ್ತಿದ್ದರಲ್ಲದೆ ಅನೇಕ ಮಾರ್ಗಗಳನ್ನು ಅನುಸರಿಸುತ್ತಿದ್ದರು. ಸೈನ್ಯಕ್ಕೆ ಸೇರುವಂತೆ ಮಾಡಲು ವೀರತ್ವ ಮತ್ತು ಶೌರ್ಯವನ್ನು ಮೌಲ್ಯವಾಗಿಸಲು ಹಲವಾರು ಶಾಸ್ತ್ರ-ಧರ್ಮಗಳನ್ನು ಹೆಣೆದರು. ಸಂಪ್ರದಾಯಗಳನ್ನು ಸೃಷ್ಟಿಸಿದರು. ಇಹಲೋಕ ಸುಖದ ಹತ್ತುಪಟ್ಟು ಹೆಚ್ಚಿರುವ ಪರಲೋಕದ ಸುಖ-ಸಂತೋಷಗಳ ಆಮಿಷ ಒಡ್ಡುತ್ತಿದ್ದರು.[೮೭] ಶಾಸನಗಳೂ ಈ ಹಿನ್ನೆಲೆಯಲ್ಲಿಯೇ ಪ್ರೇರಣೆಯನ್ನು ನೀಡುತ್ತಿದ್ದವು. ಜಿತೇನ ಲಭ್ಯತೇ ಲಕ್ಷ್ಮೀ; ಮೃತೇನಾಪಿ ಸುರಾಂಗನಾಕ್ಷಣ

ವಿಧ್ವಂಸಿನೀಕಾಯೇಕೌ ಚಿಂತಾರಮಣೇರಣೆ[೭೮] ಎಂದಿರುವುದು. (ಯುದ್ಧದಲ್ಲಿ ಗೆದ್ದರೆ ಲಕ್ಷ್ಮೀ, ಸತ್ತರೆ ದೇವಲೋಕದ ಅಪ್ಸರೆಯರು ಕ್ಷಣದಲ್ಲಿ ನಾಶವಾಗುವ ಈ ದೇಹಕ್ಕಾಗಿ ಚಿಂತಿಸಬಾರದು).

ಇನ್ನು ಕೆಲವು ಸಲ ಸೈನಿಕರಿಗೆ ಹಣ, ಅಧಿಕಾರ, ಅವರ ಬಂಧುಗಳನ್ನು ರಕ್ಷಿಸುವ ಆಸೆ ತೋರಿಸಿದರೆ ಯುದ್ಧದಲ್ಲಿ ಹೋರಾಡುವಂತೆ ಛಲ ಹುಟ್ಟುತ್ತಿತ್ತು. ಚಿತ್ರದುರ್ಗದ ಕಡೇ ಮದಕರಿನಾಯಕ ಹೈದರನೊಂದಿಗೆ ಹೋರಾಡಬೇಕಿದ್ದ ಸೈನಿಕರಿಗೆ ಈ ರೀತಿ ಪ್ರೇರೇಪಿಸುತ್ತಾನೆ ಮತ್ತು ಆಸೆ ತೋರಿಸುತ್ತಾನೆ : ಲಡಾಯಿಯಲ್ಲಿ ಮಡಿದವರ ಹೆಂಡರು ಮಕ್ಕಳಿಗೆ ಸಂಬಳ ಮಾಡಿರುತ್ತೇವೆ. ಕುದುರೆ ಬಿದ್ದವರಿಗೆ ಕುದುರೆ ಕೊಡುತ್ತೇವೆ. ಶತ್ರುಜನರ ತಲೆ ತಂದವರಿಗೆ ೫೦ ವರಹ ಕೊಡುತ್ತೇವೆ. ಗೋಲಿಯಿಂದ ಹೊಡೆದವರಿಗೆ ೫ ರೂಪಾಯಿ, ಕೋಟೆ ಮೇಲಿನಿಂದ ಗೋಲಿ ಹೊಡೆದವರಿಗೆ ಒಂದು ರೂಪಾಯಿ. ಬಹಲೆ ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂ ಕೊಡುತ್ತೇವೆ.[೭೯]

ಶಿವತತ್ವರತ್ನಾಕರದಲ್ಲಿ ಇದೇ ರೀತಿ ಅರಸನೋರ್ವ ಸೈನಿಕ ಯೋಧರನ್ನು ಹುರಿದುಂಬಿಸುವ ಬಗೆ ಉಲ್ಲೇಖಗೊಂಡಿದೆ. ರಾಜನನ್ನು ಕೊಂದವನಿಗೆ ಹತ್ತುಲಕ್ಷ ಸುವರ್ಣನಾಣ್ಯಗಳನ್ನು ಕೊಡುತ್ತೇನೆ. ಅವನ ಸಾಮಂತರನ್ನು ಕೊಂದವರಿಗೆ ಹತ್ತುಸಾವಿರ ಕೊಡುತ್ತೇನೆ. ಆನೆಗಳ ವ್ಯೂಹ ಭೇದಿಸಿದವರಿಗೆ ೨ ಸಾವಿರ ಕೊಡುತ್ತೇನೆ. ರಥಸಮೂಹವನ್ನು ನಾಶ ಮಾಡಿದವರಿಗೆ ಒಂದುಸಾವಿರ ಕೊಡುತ್ತೇನೆ. ಸತ್ತವನ ತಲೆ ತಂದವರಿಗೆ ನೂರು ಕೊಡುತ್ತೇವೆಂದು[೮೦] ಹೇಳುತ್ತಾನೆ.

ಯುದ್ಧದಲ್ಲಿ ಮಡಿದ ಸೈನಿಕರ ಮಕ್ಕಳಿಗೆ ಹಾಲು, ಬೆಣ್ಣೆ, ಹಣವೆಂದು ಆ ಮಕ್ಕಳು ದೊಡ್ಡವರಾಗುವವರೆಗೆ ಅವರ ಪೋಷಣೆಗಾಗಿ ಚಿತ್ರದುರ್ಗದ ಅರಸರು ನೀಡುತ್ತಿದ್ದರು. ಅವರು ದೊಡ್ಡವರಾದ ಮೇಲೆ ಅವರಿಗೆ ದಂಡಿನಲ್ಲಿ ಚಾಕರಿ ಕೊಡಿಸುತ್ತಿದ್ದರು. ಕದನ ನಡೆಯುವಾಗ ಇಂಥಾ ಭಟರು ಓಡಿಹೋದರೆ ಅವರನ್ನು ಹಿಡಿಯಿಸಿ ಅವರ ಕಾಲಿಗೆ ಸರಪಣಿಯನ್ನು ಕಟ್ಟಿಸಿ ಯುದ್ಧರಂಗಕ್ಕೆ ಅವರನ್ನು ಹಿಡಿದುಕೊಂಡು ಹೋಗುತ್ತಿದ್ದರು. ಶತ್ರುಪಕ್ಷದವರು ಇದೇನೆಂದು ಪ್ರಶ್ನೆ ಮಾಡಿದರೆ, ಇಂಥಾ ಜನರನ್ನು ಬಿಟ್ಟರೆ ಅವರು ಮನುಷ್ಯರನ್ನು ಕೊಂದು ತಿಂದುಬಿಡುತ್ತಾರೆಂದು ಹೆದರಿಸುತ್ತಿದ್ದರು. ಶತ್ರುಸೇನೆಯವರು ಇವರನ್ನು ಕಂಡು ಭಯದಿಂದ ಓಡಿ ಹೋಗುತ್ತಿದ್ದರು.[೮೧]

ಸುರಪುರದ ಪಾಮನಾಯಕನು ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದುದು ಹೀಗೆ : ಯುದ್ಧ ಮಾಡುವುದು ವೀರರ ಲಕ್ಷಣ, ಹೆದರುವವರು ಹೇಡಿಗಳು, ಯುದ್ದದಲ್ಲಿ ಗೆದ್ದವರಿಗೆ ಯೋಗ್ಯತಾನುಸಾರ ಬೆಳ್ಳಿಯ ಖಡೆ, ವಸ್ತ್ರ, ತಕ್ಕಮಟ್ಟಿಗೆ ಜಮೀನು, ಇನಾಮು ರೂಪದಲ್ಲಿ ಕೊಡಲಾಗುವುದು[೮೨] ಎಂದು ಹೇಳುತ್ತಿದ್ದನು. ಅಲ್ಲದೇ ಯುದ್ಧದಲ್ಲಿ ಶಿಸ್ತುಪಾಲನೆ, ಗುಪ್ತಚಾರಿಕೆ, ಅಧಿಕಾರಿಗಳ ಹೇಳಿಕೆಯನ್ನು ಪಾಲಿಸುವ ಮತ್ತು ಹನುಮದ್ಧ್ವಜಕ್ಕೆ ಕೀರ್ತಿಯನ್ನು ಸಂಪಾದಿಸಿಕೊಂಡು ಬರುವ ವೀರಪ್ರತೀಕದ ಮಾತುಗಳನ್ನು ಹೇಳುತ್ತಿದ್ದನು.

ಮೊಂಡಗ್ಯೆ ವೆಂಕಟಪ್ಪನಾಯಕನ ಕಾಲದಲ್ಲಿ ಸುರಪುರ ಸಂಸ್ಥಾನದ ಸೀಮೆಯಲ್ಲಿ ಎಲ್ಲಾ ಸಮಾಜದ ಕುಟುಂಬದಲ್ಲಿ ಹುಟ್ಟಿದ ಗಂಡುಮಗುವಿನ ಹೆಸರನ್ನು ಗುರಿಕಾರನು ಬರೆದುಕೊಂಡು ಬರುತ್ತಿದ್ದನು. ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳು ಆ ಮಗುವಿನ ಪೋಷಣೆಗಾಗಿ ಐದು ರೂಪಾಯಿಗಳಂತೆ ಪ್ರೌಢನಾಗುವವರೆಗೆ ಕೊಡಲಾಗುತ್ತಿತ್ತು. ಆ ವೀರಬಾಲಕ ಗರಡಿ ಮನೆಯಲ್ಲಿ ಮಲ್ಲವಿದ್ಯೆ, ಶಸ್ತ್ರಾಸ್ತ್ರದ ವಿದ್ಯೆ, ತರುವಾಯ ಕುದುರೆ ಸವಾರಿ, ಈಜುವಿಕೆ, ಮುಷ್ಠಿಯುದ್ಧ, ತುಪಾಕಿ ಉಪಯೋಗಿಸುವ, ಜಟ್ಟಿಕಾಳಗ ಮುಂತಾದ ಕಲೆಗಳನ್ನು ಕಲಿಸಲಾಗುತ್ತಿತ್ತು. ಹೀಗೆ ಅನೇಕ ಕಲೆಗಳಲ್ಲಿ ಪ್ರವೀಣನಾದಂತಹ ಯುವಕರನ್ನು ಅರಸನ ಸಮ್ಮುಖದಲ್ಲಿ ಒಂದುಗೂಡಿಸಿ ಅವರಿಗೆ ಸಾಮೂಹಿಕವಾಗಿ ಲಗ್ನ ಮಾಡುವುದು, ಲಗ್ನ ಮಾಡುವಾಗ ಸಚಿವ ಸಂಪುಟದಲ್ಲಿ ಸಂಬಂಧಪಟ್ಟವರು ವರನ ಮತ್ತು ಕನ್ಯೆಯ ಮೂರು ತಲೆಮಾರಿನಿಂದ ಅವರ ವಂಶವು ಶೂರರಾಗಿರುವವರನ್ನೇ ಗುರುತಿಸಲಾಗುತ್ತಿತ್ತು. ಲಗ್ನವಾದ ದಂಪತಿಗಳಿಗೆ ಶಸ್ತ್ರಾಸ್ತ್ರ ಮತ್ತು ಉಡುಗೊರೆ ಕೊಟ್ಟು ಅವರಿಂದ ವಿಪತ್ತು ಬಂದಾಗ ಅಥವಾ ಅರಸನಿಂದ ಕರೆ ಬಂದಾಗ ರಾಜಾಜ್ಞೆ ತಲುಪಿದಾಗ, ಶಸ್ತ್ರಸಮೇತರಾಗಿ ರಾಜಧಾನಿಗೆ ಅಥವಾ ಗುರುತಿಸಿದ ಸ್ಥಳಕ್ಕೆ ಧಾವಿಸಿ ಬರುವುದು, ಗೌಪ್ಯ ಪ್ರತಿಜ್ಞೆಗಳನ್ನು ರಾಜನ ಸಮ್ಮುಖದಲ್ಲಿ ಮಾಡಿಸಿ ಕಳಿಸುವುದು ರೂಢಿಗೆ ತಂದನು.[೬೩]

ಹೈದ್ರಾಬಾದ್‌ನ ನಾಸರಜಂಗನು ಪಾಂಡಿಚೇರಿ ಕಾಳಗದಲ್ಲಿ ಫ್ರೆಂಚರನ್ನು ಸೋಲಿಸಲು ಕಾರಣರಾದ ಸುರಪುರದ ಮೊಂಡಗ್ಯೆ ವೆಂಕಟಪ್ಪನಾಯಕನನ್ನು ಪಾಂಡಿಚೇರಿ ಕಾಳಗದಲ್ಲಿ ನಾವು ಅನೇಕ ಸಾರಿ ಸೋಲಬೇಕಾಯಿತು. ಆದರೆ ನೀನು ಕೇವಲ ಒಂದೇ ಬಾರಿಗೆ ಫ್ರೆಂಚರನ್ನು ಸೋಲಿಸಿ, ನಮಗೆ ಪಾಂಡಿಚೇರಿಯನ್ನು ವಶಪಡಿಸಿಕೊಟ್ಟದುದರ ಗುಟ್ಟೇನು ಎಂದು ಕೇಳಿದಾಗ, ಮೊಂಡಗ್ಯೆ ವೆಂಕಟಪ್ಪನಾಯಕನು ನಾಸರಜಂಗನಿಗೆ ಅವರ ಸೇನೆಯ ದಂಡನಾಯಕನನ್ನು ಕರೆಯಿಸಲು ಹೇಳಿದನು. ನಾಸರಜಂಗನ ದಂಡನಾಯಕನನ್ನು, ಕರೆಯಿಸಿದನು. ಆಗ ಮೊಂಡಗ್ಯೆ ವೆಂಕಟಪ್ಪನಾಯಕನು ಒಂದು ಗಿಡದ ಕೆಳಗೆ ಬೆಂಕಿ ಹೊತ್ತಿಸಿ, ಆ ದಂಡನಾಯಕನನ್ನು ಗಿಡಹತ್ತಿ ಆ ಬೆಂಕಿಯಲ್ಲಿ ಜಿಗಿಯಲು ಹೇಳಿದರು, ಅವನು ಬೆಂಕಿಯಲ್ಲಿ ಸುಟ್ಟುಹೋಗುವೆ, ನೆಲಕ್ಕೆ ಬಿದ್ದರೆ ತಲೆ ಹೊಡೆಯುತ್ತದೆ ದಯಮಾಡಿ ಕ್ಷಮಿಸಿ ಎಂದನಂತೆ. ಆಗ ಮೊಂಡಗ್ಯೆ ವೆಂಕಟಪ್ಪನಾಯಕನು ತನ್ನ ಸೈನ್ಯದ ಒಬ್ಬ ಸೈನಿಕ ವೀರಕೊಟಗಾರನನ್ನು ಕರೆದು ಮರ ಹತ್ತಿ ಬೆಂಕಿಯಲ್ಲಿ ಹಾರಲು ಹೇಳಿದನು. ತಕ್ಷಣವೇ ವೀರಕೋಟಗಾರ ಮರ ಹತ್ತಿ ಬೆಂಕಿಯಲ್ಲಿ ಜಿಗಿಯಲು ಸಿದ್ಧನಾದ. ಇನ್ನೇನು ಜಿಗಿಯುವಷ್ಟರಲ್ಲಿಯೇ ಅವನನ್ನು ರಕ್ಷಿಸಲಾಯಿತು.[೬೪]

ಈ ರೀತಿ ಸುರಪುರದ ಅರಸರು ತಮ್ಮ ಸೈನಿಕರನ್ನು ಯುದ್ಧಕ್ಕೆ ಸನ್ನದ್ಧರಾಗುವಂತೆ, ಅವರಲ್ಲಿ ತಮ್ಮ ರಾಜ್ಯದ ಕುರಿತಾಗಿ ಅಭಿಮಾನ ಹುಟ್ಟಿ, ಪ್ರಾಮಾಣಿಕವಾಗಿ ಹೋರಾಡುವಂತೆ ಪ್ರೇರೇಪಿಸುತ್ತಿದ್ದರು. ಸೇನಾಮುಖಂಡರು ಮತ್ತು ಸೈನಿಕರನ್ನು ಯುದ್ಧಕ್ಕಾಗಿ ಪ್ರೇರೇಪಿಸುವುದರ ಜೊತೆಗೆ ಅವರಿಗೆ ವೀಳ್ಯವನ್ನು ನೀಡುತ್ತಿದ್ದರು. ಇದೂ ಸಹಿತ ಯುದ್ಧಪ್ರೇರಕ ತಂತ್ರವಾಗಿದೆ. ಈ ತಾಂಬೂಲವು ಭಾರತೀಯ

ಸಂಸ್ಕೃತಿಯಲ್ಲಿ ವಿಶೇಷ ಪಾತ್ರ ವಹಿಸಿದೆ. ಹಿಂದೂಧರ್ಮದ ಎಲ್ಲಾ ಬಗೆಯ ಶುಭ ಸಂದರ್ಭಗಳಲ್ಲೂ ಬಳಕೆಗೊಂಡಿದೆ. ಇದು ಗೌರವ ಸಂಕೇತವೂ ಹೌದು. ಇದನ್ನು ಯುದ್ಧದ ಪೂರ್ವಸಿದ್ಧತೆಯಲ್ಲೂ ವಿಶ್ವಾಸದ ದ್ಯೋತಕವಾಗಿ ಬಳಸಿದ್ದಾರೆ. ಕಡೇ ಮದಕರಿನಾಯಕ ಹೈದರನೊಂದಿಗಿನ ಯುದ್ಧ ಸನ್ನಾಹದ ಸಭೆಯು ಮುಕ್ತಾಯವಾದ ನಂತರ ಎಲ್ಲರಿಗೂ ವೀಳ್ಯವನ್ನು ನೀಡಿ ದರಬಾರನ್ನು ಮುಗಿಸುತ್ತಾನೆ.[೯೫]

ನಾಯಕ ಅರಸರು ತಾವು ಅಧಿಕಾರ ನಡೆಸಿದ ಪ್ರದೇಶಗಳಲ್ಲಿ ಗರಡಿ ಮನೆಗಳನ್ನು ಪ್ರಾರಂಭಿಸಿ, ಅಲ್ಲಿ ಯುದ್ಧ ತಯಾರಿ ತರಬೇತಿಗಳನ್ನು ನೀಡುತ್ತಿದ್ದರು. ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿಗಳಲ್ಲಿ ಈ ಗರಡಿಮನೆಗಳು ಇಂದಿಗೂ ಸುಸ್ಥಿತಿಯಲ್ಲಿವೆ. ಇಲ್ಲಿ ಸೈನಿಕರನ್ನು ದೈಹಿಕವಾಗಿ ಸದೃಢರನ್ನಾಗಿ ಮಾಡುವಲ್ಲಿ ಗರಡಿಮನೆಗಳು ಮಹತ್ವ ಪಡೆದಿದ್ದವು.

ಸುರಪುರದ ಅರಸರೂ ಸಹಿತ ಸುವ್ಯವಸ್ಥಿತ ಸೈನ್ಯವನ್ನು ಹೊಂದಿದ್ದರು. ಬೇಡರ ಪಡೆಯದೇ ಸೈನ್ಯವಿತ್ತು. ಮೊಗಲ್ ಅರಸ ಔರಂಗಜೇಬನು ಪಟ್ಟವೇರಿದ ೩೦ನೇ ವರ್ಷದಲ್ಲಿ ಪಾಮನಾಯಕನ ಮಗನಾದ ಜಕ್ಕಪ್ಪನಾಯಕನೆಂಬುವನಿಗೆ ಮನಸಬನ್ನು ಕೊಟ್ಟು ಒಂದು ಸನದಿನಲ್ಲಿ "ಪ್ಯಾದಹಾ ಕರ್ನಾಟಕಿಯಾಂ' ಅಂದರೆ 'ಕರ್ನಾಟಕ ಪಾಯದಳ'ವನ್ನು ತಿಂಗಳಿಗೆ ೭ ರೂಪಾಯಿಗಳ ಸಂಬಳದಂತೆ ಇಡುವುದೆಂದು ಹೇಳಲಾಗಿದೆ. ಅಂದು ಪಿಡ್ಡನಾಯಕ ಮತ್ತು ಪಾಮನಾಯಕರ ಸೈನ್ಯಕ್ಕೆ ಕರ್ನಾಟಕದ ಪಾಯದಳವೆಂದು ಆ ಕಾಲಕ್ಕೆ ಕರೆಯಲಾಗಿತ್ತು. ಪ್ರೊ.ಜಾದೂನಾಥ್ ಸರ್ಕಾರ್ ಅವರು ತಮ್ಮ ಔರಂಗಜೇಬನ ಇತಿಹಾಸದಲ್ಲಿ ಪಾಮನಾಯಕನ ಸೈನ್ಯವನ್ನು ಕುರಿತು, "His Berads clansmen who were reputed. as the bravest foot soldiers and best shots[೯೬] Berads were then reputed as the bravest soldiers of southern India, sure shots and hardly huntrs, these strong athletic and patriotic Berad infantry[೯೭] PamNaik commanded. 12000 cavalary and a hundred thousands infantry mostly militia, but also including many hardy accurate & sturdy marksmen.[೯೮] Their gallanty in war and contempt for wound and death.[೯೯] ಪಾಮನಾಯಕನ ಬೇಡ ಪಡೆಗೆ ಜಾದೂನಾಥ್ ಸರ್ಕಾರ್ ಹೇಳಿದ ಮಾತುಗಳಿವು.

ಹಸರಂಗಿ ಪಾಮನಾಯಕನ ಬಳಿಯಲ್ಲಿ ೧೨೦೦೦ ಕುದುರೆ ಸವಾರರು, ಸುಮಾರು ಒಂದು ಲಕ್ಷ ಸಿಪಾಯಿಗಳಿದ್ದರು. ಇವನ ಸೈನಿಕರು ಗುಂಡು ಹೊಡೆಯುವುದರಲ್ಲಿ ನಿಪುಣರೂ, ಶೂರರೂ ಆಗಿ ಪ್ರಸಿದ್ಧಿಯನ್ನು ಪಡೆದಿದ್ದರು. ಪಾಮನಾಯಕನಲ್ಲಿ ಇಂಥ ಸೈನ್ಯವಿದ್ದುದರಿಂದಲೇ ನೆರೆಹೊರೆಯವರು ಈತನ ಸ್ನೇಹವನ್ನು ಬಯಸುತ್ತಿದ್ದರು. ಔರಂಗಜೇಬನು ಈತನಿಗೆ ಮೇಲಿಂದ ಮೇಲೆ ಉಪಟಳವನ್ನು ಕೊಡಲಾರಂಭಿಸಿದಾಗ, ಯುದ್ಧದ ಪೂರ್ವಸಿದ್ಧತೆಗಾಗಿ ಪಾಮನಾಯಕನು ಫೌಜಿನ ವ್ಯವಸ್ಥೆಯನ್ನು ಹೊಸದಾಗಿ ಏರ್ಪಡಿಸಿ ಕಲ್ಪಿಸಿದನು. ಗುರಿಕಾರ, ಸರನೌಬತ್, ಸರಹವಾಲ್ದಾರ, ಸಬ್‌ನವೀಸ್, ಗರ್ಡೀ

ಸವಾರ, ದುಂಡೇಕಾರ, ಮರಾಠಿ ಸವಾರ, ಹದ್ದು ದಖನಿ, ಇವರನ್ನೆಲ್ಲಾ ಇಲಾಖೆಯಲ್ಲಿ ಸುಬೇದಾರರನ್ನಾಗಿ ಗೊತ್ತುಪಡಿಸಿದನು. ಅಲ್ಲದೇ ಕೆಲವು ಗ್ರಾಮಗಳಲ್ಲಿ ಗೋಗಿ ಸುಬೇದಾರ, ದೇವಪುರದ ಸುಬೇದಾರ, ತಿಂಥಣಿ ಸುಬೇದಾರ, ವಜ್ಜಲ ಸುಬೇದಾರ, ಕೊಡೇಕಲ್ ಸುಬೇದಾರ, ಅಮಲೀಹಾಳ ಸುಬೇದಾರ, ನರಗೋಳಿ ಸುಬೇದಾರ, ದೋರನಹಳ್ಳಿ ಸುಬೇದಾರ ಈ ರೀತಿ ರಾಜ್ಯದಲ್ಲಿ ಸುಬೇದಾರರನ್ನು ನೇಮಿಸಿ ಅವರ ಕೈಕೆಳಗೆ ಸೈನ್ಯವನ್ನು ಇಟ್ಟು ಸಗರ ಪ್ರಾಂತ್ಯ ವಾಗಿನಗೇರಿ ಮತ್ತು ಸಗರ ಕಿಲ್ಲೆಗಳನ್ನು ಸಂರಕ್ಷಿಸುವ ವ್ಯವಸ್ಥೆ ಮಾಡಿದನು.[೧೦೦]

ಪೀತಾಂಬರಿ ಬಹರಿ ಪಿಡ್ಡನಾಯಕ (ಕ್ರಿ.ಶ.೧೬೮೭-೧೭೨೬)ನು ತನ್ನ ರಾಜಧಾನಿ ಸುರಪುರದಲ್ಲಿ ರಾಜಧಾನಿಯ ರಕ್ಷಣೆಗಾಗಿ ೧೪ ಸಮತುಗಳಿರುವಂತೆ ಕೇರಿಗಳನ್ನು ನಿರ್ಮಿಸಿ, ಅಲ್ಲಿ ಸೈನ್ಯವನ್ನು ಕಾವಲಿರಿಸಿರುತ್ತಿದ್ದನು :

ನಡುಗೇರಿ - ೩೦೦ ಬೇಡರ ಕಾವಲು

ಮ್ಯಾಗೇರಿ - ೩೦೦ ಬೇಡರ ಕಾವಲು

ಹಂಡೇವಜೀರಗೇರಿ - ೨೫೦ ಹಂಡೆ ಕುರುಬರ ಕಾವಲು

ಡೊಣ್ಣೆಗೇರಿ - ೨೦೦ ಬೇಡರ ಮತ್ತು ೧೦೦ ಕೊಟಗಾರರ ಕಾವಲು(ಕೊಟಗಾರರು ಹರಿಜನರಾಗಿದ್ದರು)

ಜಗ್ಗದಗೇರಿ - ೪೫೦ ಬೇಡರ ಕಾವಲು

ಹುಲಕಲ್ಲಗೇರಿ - ೬೦೦ ಕೊಟಗಾರರು

ಭೋಯಿಗೇರಿ - ೬೦೦ ಮ್ಯಾದಾರರು ಮತ್ತು ೨೦೦ ಭೋಯೇರರು

ರಾಮಪುರಿಕೇರಿ - ೮೦೦ ಬೇಡರು ಮತ್ತು ೬೦೦ ಕೊಟಗಾರರು

ಕುರುಬಗೇರಿ - ೫೦೦ ಕುರುಬರು

ಗುರಿಕಾರಗೇರಿ - ೬೦೦ ಬೇಡರು

ಸರಸಬಡಗೇರಿ - ೬೦೦ ಬೇಡರು

ಗಂಟಿನಾಯಕನಗೇರಿ - ೩೦೦ ಬೇಡರು ಮತ್ತು ೨೦೦ ಕೊಟಗಾರರು

ಗೋನಾಲಕೇರಿ - ೪೫೦ ಬೇಡರು

ಪಲ್ಲೆದಕೇರಿ - ೩೦೦ ಬೇಡರು. ಇದಲ್ಲದೆ ಗುಡ್ಡದ ಕೆಳಗೆ ಸುತ್ತಮುತ್ತ ೭ ಚೌಕಿಗಳನ್ನಿಟ್ಟು, ಪ್ರತಿಯೊಂದು ಚೌಕಿಯಲ್ಲಿ ೧೫ ಕುದುರೆ ಸವಾರರು, ೫೦ ಕಾಲಾಳುಗಳನ್ನು ಇರುವಂತೆ ಗೊತ್ತುಮಾಡಿದನು. ಅಲ್ಲದೇ ವಾಗಿನಗೇರಿ ಕಿಲ್ಲೆಯಲ್ಲಿ ೨೦೦ ಮರಾಠರನ್ನು ನೇಮಿಸಿ, ಪ್ರತಿಯೊಬ್ಬರಿಗೆ ೭ ಬಿಘ ಇನಾಮು ಭೂಮಿಯನ್ನು ಕೊಟ್ಟು ೧೦ ರೂಪಾಯಿಗಳ ಸಂಬಳ ಗೊತ್ತುಮಾಡಿದ್ದನು.[೧೦೧] ಇವರೆಲ್ಲರೂ ಅರಸ ಯುದ್ಧಕ್ಕೆ ಕರೆದ ತಕ್ಷಣವೇ ಬರುತ್ತಿದ್ದರು. ಯಾವತ್ತೂ ಯುದ್ಧದ ಪೂರ್ವಸಿದ್ಧತೆಯಲ್ಲಿರುತ್ತಿದ್ದರು.

ಸುರಪುರದ ಅರಸರಲ್ಲಿಯೇ ಅತ್ಯಂತ ಪ್ರಖ್ಯಾತಿ ಪಡೆದ ಮುಮ್ಮಡಿ ಪಾಮನಾಯಕ ವಿಶೇಷವಾಗಿ ದಂಡಿನ ವ್ಯವಸ್ಥೆ ಇಟ್ಟಿದ್ದ. ಅನೇಕ ಕುದುರೆ ಸವಾರರು ಯಾವತ್ತೂ ಯುದ್ಧಕ್ಕೆ ಸನ್ನದ್ಧರಾಗಿರುತ್ತಿದ್ದರು. ದೇವಪುರದಲ್ಲಿ-೧೨೦, ಗೋಗಿಠಾಣೆ-೧೦೦, ನಗನೂರು-೧೫೦, ವಡಿಗೇರಿ-೧೦೦, ತಿಂಥಣಿ-೧೦೦, ಕಕ್ಕೇರಿ-೧೨೫, ರಾಯನಪಾಳ್ಯ-೫೦, ಕೋಡಿಹಾಳ-೧೫೦, ಭಂಟನೂರು-೫೦, ಅಂಬಲಿಹಾಳ-೭೫, ವಾಗಿನಗೇರಿ-೧೭೫, ಮುಳ್ಳಿ-೨೫, ಇಟ್ಟಗಿಗೋತಣಿಠಾಣಿ-೧೫೦, ನರಬೋಳಿ-೫೦, ದೋರನಹಳ್ಳಿ-೫೦, ಇಷ್ಟು ಕುದುರೆ ಸವಾರರನ್ನು ಸದಾ ತಯಾರಿಯಲ್ಲಿಟ್ಟಿರುತ್ತಿದ್ದನು.[೧೦೨] ದೇವದುರ್ಗದ ಕೊಳ್ಳಿ ರಂಗಪ್ಪನಾಯಕನ ಸೈನ್ಯ ೮೦೦೦ ಇತ್ತು. ಹಾಗೆಯೇ ಹೈದರಾಲಿಯ ಆಪ್ತಮಿತ್ರನಾದ ಮಲೆಬೊಮ್ಮಣ್ಣನಾಯಕ ಕ್ರಿ.ಶ.೧೭೮೦ರಲ್ಲಿ ಹೈದರ ಅಲಿ ಪಾಲ್ಗಾಟಿನ ಮೇಳೆ ಧಾಳಿ ಮಾಡಿದಾಗ ೧೦೦೦ ಕಾಲಾಳು, ೧೦೦ ಅಶ್ವಗಳೊಂದಿಗೆ ಹೈದರಾಲಿಯನ್ನು ಬೆಂಬಲಿಸಿದ್ದನು.

ಈ ರೀತಿ ನಾಯಕ ಮನೆತನದವರು ಸೈನ್ಯ ವ್ಯವಸ್ಥೆಯನ್ನು ಮಾಡಿಕೊಳ್ಳುವುದರ ಜೊತೆಗೆ ಯಾವತ್ತೂ ಯುದ್ಧೋಪಕರಣಗಳನ್ನು ತಯಾರಿಯಲ್ಲಿಟ್ಟಿರುತ್ತಿದ್ದರು. ಅವುಗಳನ್ನು ಮಸೆದು ಯುದ್ಧಕ್ಕೆ ತಯಾರಾಗಿರುತ್ತಿದ್ದರು. ಈ ಯುದ್ಧೋಪಕರಣಗಳನ್ನು ಆಕ್ರಮಣಕಾರಿ ಆಯುಧಗಳು ಮತ್ತು ರಕ್ಷಣಾತ್ಮಕ ಆಯುಧಗಳೆಂದು ವಿಭಾಗಿಸಬಹುದಾಗಿದೆ. ಆಕ್ರಮಣಕಾರಿ ಆಯುಧಗಳಲ್ಲಿ ದೂರದಿಂದ ಆಕ್ರಮಣಮಾಡುವ ಆಯುಧಗಳಾದ ಬಿಲ್ಲು, ಬಾಣ, ಬಂದೂಕು, ಫಿರಂಗಿಗಳು, ಕಲ್ಲುಬೀಸುವ ಯಂತ್ರಗಳು ಸೇರುತ್ತಿದ್ದವು. ಮುಖಾಮುಖಿಯಾಗಿ ಹೋರಾಡುವ ಆಯುಧಗಳಲ್ಲಿ ಕಠಾರಿ, ಚಾಕು, ಈಟಿ, ಭರ್ಜಿ, ಗದೆ ಮುಂತಾದವುಗಳಾಗಿವೆ. ಸೀರ್ಯದ ಕೃಷ್ಣಪ್ಪನಾಯಕ ದುರ್ಗಕ್ಕೆ ರಾತ್ರೋರಾತ್ರಿ ಮುತ್ತಿಗೆ ಹಾಕಿ ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ, ೨ನೇ ಮದಕರಿನಾಯಕ ಮತ್ತು ಆತನ ಸಂಗಡಿಗರು ಶತ್ರುಗಳನ್ನು ಗಂಡು ಗೊಡಲಿಯಿಂದ ಕಡಿಯುತ್ತಾ ಬಂದರು. ಆಗ ಕೋಟೆಯ ಒಂದು ಬಾಗಿಲಿನಿಂದ ಇನ್ನೊಂದು ಬಾಗಿಲಿಗೆ ರಕ್ತದ ಕೋಡಿ ಹರಿಯಿತು ಎಂದು ವಂಶಾವಳಿಗಳು ಹೇಳುತ್ತವೆ.

ಕೊನೆಯ ಮದಕರಿನಾಯಕ(ಕ್ರಿ.ಶ.೧೭೫೪-೧೭೭೯)ನ ಕಾಲದಲ್ಲಿ ಅತಿಮುಖ್ಯ ಯುದ್ಧೋಪಕರಣವಾಗಿ ಫಿರಂಗಿ ಮತ್ತು ಬಂದೂಕುಗಳು ಬಳಕೆಯಾದವು. ಚಿತ್ರದುರ್ಗದ ಬಖೈರು ಫಿರಂಗಿಗಳ ವಿವರವನ್ನು ನೀಡುತ್ತದೆ. ಗಾತ್ರ, ಸಾಮರ್ಥ್ಯದಲ್ಲಿ ವೈವಿಧ್ಯಮಯವಾದ ಫಿರಂಗಿಗಳನ್ನು ಇವರು ಸಂಗ್ರಹಿಸುತ್ತಿದ್ದರು. ಇಂದಿಗೂ ದೊಡ್ಡಗಾತ್ರದ ಫಿರಂಗಿಯೊಂದು ಬಸವನಬುರುಜಿನ ಎದುರಿನಲ್ಲಿ, ಮತ್ತೊಂದು ಚಿತ್ರದುರ್ಗದ ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ, ಭಾರತ ಪುರಾತತ್ವ ಸರ್ವೇಕ್ಷಣ ಇಲಾಖೆಯ ಉಗ್ರಾಣದಲ್ಲಿ ಒಂದು ಫಿರಂಗಿ ಇದೆ. ಈಚೆಗೆ ಇನ್ನೂ ಕೆಲವು ಫಿರಂಗಿಗಳು ದೊರೆತಿವೆ. ಶ್ರೀ ಮುರುಘರಾಜೇಂದ್ರ ಬೃಹನ್ಮಠದ ಆವರಣದಲ್ಲಿ ದೊಡ್ಡ ಫಿರಂಗಿಯ ಮುಂಭಾಗದ ಮುರಿದ ತುಂಡೊಂದಿದೆ. ಈ ಎಲ್ಲಾ

ಫಿರಂಗಿಗಳನ್ನು ಚಿತ್ರದುರ್ಗದ ಅರಸರು ಯುದ್ಧದ ಪೂರ್ವಸಿದ್ಧತೆಗಾಗಿ ಇಟ್ಟುಕೊಂಡಿರುತ್ತಿದ್ದರು. ಇವುಗಳಿಗೆ ಏಳು ಮಕ್ಕಳ ತಾಯಿ, ಹುಚ್ಚ ಹನುಮ, ವೀರಹನುಮ, ಉಚ್ಚಂಗಿ ಮುಂತಾದ ಹೆಸರುಗಳಿದ್ದವು.

ಆನೆ, ಕುದುರೆ, ಒಂಟೆ, ಕಾಲುಬಲದೊಂದಿಗೆ, ಕತ್ತಿ, ಕಠಾರಿ, ಭರ್ಜಿ, ಅಂಬು, ಬಿಲ್ಲು, ಕವಣೆ, ಕರ್ನಾಟಕ ಕೋವಿ, ಹರಪನಹಳ್ಳಿ ಬಾಣ, ಸುರಂಗ, ಸುಮಾರಾಗಿ ಇವುಗಳೇ ಚಿತ್ರದುರ್ಗದ ಅರಸರ ಆಯುಧಗಳಾಗಿದ್ದವು. ಕರ್ನಾಟಕ ಕೋವಿ ಉದ್ದವಾಗಿರುತ್ತಿತ್ತು. ಅದರ ಕೊಳವಿಯೊಳಕ್ಕೆ ಮದ್ದನ್ನೂ, ಗುಂಡನ್ನೂ ಹಾಕಿ ಗಜಕಡ್ಡಿಯಿಂದ ಜಡತಮಾಡಿ ಅದರ ಕಿವಿಗೆ ರಂಜಕದ ಮದ್ದನ್ನು ಹಾಕಿ ಜಾವಿಗೆ ಬತ್ತಿಯನ್ನು ತೂರಿಸಿ ತುಪಾಕಿಯನ್ನು ಹಾರಿಸುತ್ತಿದ್ದರು. ಕುದುರೆ ಸೇನೆಯವರು ಕತ್ತಿ, ಭರ್ಜಿಗಳನ್ನು, ಆನೆಯ ಮೇಲೆ ಕೂತವರು ಅಂಬು, ಬಿಲ್ಲು, ತುಪಾಕಿ, ಭರ್ಜಿಗಳಿಂದ ಕಾದಾಡುತ್ತಿದ್ದರು.[೧೦೩] ಸುರಪುರದ ಅರಸರುಗಳು ಯಾವತ್ತೂ ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿಟ್ಟಿರುತ್ತಿದ್ದರು. ಇವರಲ್ಲಿ ತುಬಾಕಿ, ತೋಪ, ಜಝೀಲಿ, ಮದ್ದುಗುಂಡುಗಳ ಸಂಗ್ರಹ ಸಾಕಷ್ಟಿತ್ತು.[೧೦೪]

ಯುದ್ಧದಲ್ಲಿ ತೊಡಗಿದ ಸೈನಿಕರು ತಮ್ಮ ದೇಹವನ್ನು ಮಾರಾಕಾಸ್ತ್ರಗಳಿಂದ ಸಂರಕ್ಷಿಸಿಕೊಳ್ಳಲು ರಕ್ಷಣಾತ್ಮಕ ಪರಿಕರಗಳನ್ನು ಬಳಸುತ್ತಿದ್ದರು. ಸೈನಿಕರಷ್ಟೇ ಅಲ್ಲದೆ, ಆನೆ, ಕುದುರೆಗಳಿಗೂ ರಕ್ಷಣೆಗೆಂದು ರಕ್ಷಾಕವಚಗಳನ್ನು ತೊಡಿಸುತ್ತಿದ್ದರು. ಹಿರೇಮದಕರಿನಾಯಕನು ಮಾಯಕೊಂಡದ ಕಾಳಗದಲ್ಲಿ ಆನೆಯ ಕಾಲಿಗೆ ದಬಕವನ್ನಾಕಿಸಿ ನಿಂತು ಹೋರಾಟವನ್ನು ಮಾಡಿದನು.[೧೦೫] ತಲೆಗೆ ಶಿರಸ್ತ್ರಾಣ, ಔಳಿ, ಎದೆಗೆ ಕವಚ, ತೋಳುಗಳಿಗೆ ಬಾಹುರಕ್ಷೆ, ಕೈಗಳಿಗೆ ಚರ್ಮ, ಹತ್ತಿಗಳಿಂದ ಮಾಡಿದ ಚೀಲಗಳು, ಕಾಲುಗಳಿಗೆ ಚರ್ಮದ ಜೋಡುಗಳು, ವೈರಿಗಳ ಧಾಳಿಯಿಂದ ರಕ್ಷಿಸಿಕೊಳ್ಳಲು ಗುರಾಣಿ ಮುಂತಾದವುಗಳನ್ನು ಸಂಗ್ರಹಿಸುತ್ತಿದ್ದರು.

ಸೈನಿಕರಿಗೆ ಉತ್ಸಾಹ ಹುಮ್ಮಸ್ಸುಗಳನ್ನು ತುಂಬಲು, ಯುದ್ಧಗಳಲ್ಲಿ ನಾನಾ ಬಗೆಯ ವಾದ್ಯಗಳನ್ನು ಬಾರಿಸಬೇಕಾಗುತ್ತಿತ್ತು.[೧೦೬]ಅವುಗಳನ್ನು ಯುದ್ಧದ ಪೂರ್ವದಲ್ಲಿಯೇ ತಯಾರಿಯಲ್ಲಿಟ್ಟುಕೊಳ್ಳಬೇಕಾಗುತ್ತಿತ್ತು. ರಣಕಹಳೆ, ಕೊಂಬು, ಜಾಗಟೆ, ನಗಾರಿ, ದುಂದುಬಿ, ಹೆಬ್ಬರ, ಢಕ್ಕೆ, ಮೃದಂಗಿ, ತಮಟೆ, ಪ್ರಮುಖ ವಾದವುಗಳಾಗಿದ್ದವು. ಸೈನಿಕರು ಧರ್ಮಕಹಳೆ ಎಂದು ಒಂದು ಬಗೆಯ ಕೊಂಬನ್ನು ಊದಿದರೆ, ಅದು ಯುದ್ಧ ನಿಲ್ಲುವುದಕ್ಕೆ ಸೂಚನೆ. ಕೂಚುನಗಾರಿ ಎಂದು ಒಂದು ಬಗೆಯ ನಗಾರಿಯನ್ನು ಬಡಿಸಿದರೆ ಮುಂದಕ್ಕೆ ಹೊರಡಬೇಕೆಂದು ಸೂಚನೆ. ಹೀಗೆ ಚಿತ್ರದುರ್ಗದ ಸೇನೆಯಲ್ಲಿ ತರಬೇತಿಯ ಸೂಚನೆಗಳಿದ್ದವಲ್ಲದೆ, 'ನ್ಯಾಪ್ ಚಾಕ್' (Knapsack) ಎಂಬ ಚಕ್ಕಳದ ಚೀಲಗಳಲ್ಲಿ ಸಾಮಾನುಗಳನ್ನು ಇಟ್ಟುಕೊಂಡು ಸಿಪಾಯಿಗಳು ಹೊರಡುತ್ತಿದ್ದರು.[೧೦೭] ಸುರಪುರದ ಅರಸರು ಯುದ್ಧಕ್ಕೆ ಹೊರಟರೆ ಸರದಾರರು ರಣಕೊಂಬನ್ನು ಊದಿಸಿ ಎಲ್ಲಾ ಸೈನಿಕರನ್ನು ಗೊತ್ತುಪಡಿಸಿದ ಸ್ಥಳದಲ್ಲಿ ಸೇರಿಸುತ್ತಿದ್ದರು.[೧೦೮]

ಈಗಲೂ ಆ ಮನೆತನದಲ್ಲಿ ರಣಕೊಂಬುಗಳಿವೆ. ಕ್ರಿ.ಶ.೧೭೦೯ರಲ್ಲಿ ಭರಮಣ್ಣನಾಯಕ ಹರಪನಹಳ್ಳಿ ಪೇಟೆಯನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಧರ್ಮಕಹಳೆ'(ಯುದ್ಧದಲ್ಲಿ ಗೆದ್ದವರು ಕರುಣೆಯಿಂದ ಯುದ್ಧವನ್ನು ನಿಲ್ಲಿಸುವ ಸೂಚನೆಗಾಗಿ ಊದಿಸುವ ಕಹಳೆ) ಹಿಡಿಸಿ ಯುದ್ಧವನ್ನು ನಿಲ್ಲಿಸಿದುದು ಗಮನಾರ್ಹ.[೧೦೯]

ಚಿತ್ರದುರ್ಗದ ಅರಸರು ಯುದ್ಧದ ಸಂದರ್ಭದಲ್ಲಿ ಬತೇರಿಯ ಮೇಲಿನಿಂದ ರಣಕಹಳೆಯನ್ನು ಊದುತ್ತಿದ್ದರು. ರಣಕಹಳೆ ಊದುತ್ತಿದ್ದ ಸ್ಥಳವನ್ನು ರಣಬತೇರಿ ಎಂದು ಕರೆಯುತ್ತಿದ್ದರು. ಚಿತ್ರದುರ್ಗದ ಪಶ್ಚಿಮದಿಕ್ಕಿನ ಕೋಟೆಯ ಕೊನೆಯಲ್ಲಿ ವ್ಯವಸ್ಥಿತವಾದ ಬತೇರಿಯನ್ನು ಕಟ್ಟಿಸಿದ್ದಾರೆ. ಈ ಬತೇರಿಗೆ ರಣಮಂಡಲದ ಬತೇರಿ ಎಂದೂ ಕರೆಯುತ್ತಾರೆ.[೧೧೦] ಹಾಗೂ ಭೀಮನಕಲ್ಲು ಬೆಟ್ಟದ ಪೂರ್ವಭಾಗದಲ್ಲಿ ಝುಂಡಾ ಬತೇರಿಯಿದೆ. ಏಕನಾಥೇಶ್ವರಿ ಮಂದಿರದ ಹಿಂಭಾಗದಲ್ಲಿರುವ ಕಾಲುಹಾದಿಯ ಮೂಲಕ ಇಲ್ಲಿಗೆ ತಲುಪಬಹುದು. ಚಂದ್ರಗಾವಿ ಬಣ್ಣದ ಹನುಮದ್ಗರುಡ ಚಿಹ್ನೆಯ ಧ್ವಜವನ್ನು ಪಾಳೆಯಗಾರರು ಇಲ್ಲಿ ಹಾರಿಸುತ್ತಿದ್ದರಂತೆ. ಇದನ್ನು ಝುಂಡಾ ಬತೇರಿ ಎಂದು ಕರೆಯುತ್ತಾರೆ. ಶತ್ರುಸೈನಿಕರು ಎಷ್ಟೇ ಹೋರಾಟ ಮಾಡಿದರೂ ತಾವು ಗೆದ್ದಂತೆ ಆಗುತ್ತಿರಲಿಲ್ಲ. ಈ ರೀತಿಯ ಧ್ವಜಗಳನ್ನು ಕೆಳಗಿಳಿಸಿ ಅವರ ಧ್ವಜವನ್ನು ಹಾರಿಸಿದಾಗಲೇ ಅವರು ಕೋಟೆಯನ್ನು ವಶಪಡಿಸಿಕೊಂಡಂತಾಗುತ್ತಿತ್ತು. ಆದ್ದರಿಂದ ಇಂತಹ ಧ್ವಜವೇದಿಕೆ ಅಥವಾ ಬತೇರಿಗಳನ್ನು ವಿಶೇಷವಾಗಿ ಶತ್ರು ಸೈನಿಕರು ಇಲ್ಲಿಗೆ ನುಸುಳದಂತೆ ಅಪಾಯಕಾರಿ ದುರ್ಗಮ ಪ್ರದೇಶಗಳಲ್ಲಿ ನಿರ್ಮಿಸುತ್ತಿದ್ದರು.[೧೧೧] ಯುದ್ಧಕ್ಕೆ ತೆರಳುವ ಮುನ್ನ ೨೧ ತೋಪುಗಳನ್ನು ಹಾರಿಸಲಾಗುತ್ತಿತ್ತು.

ಅಲ್ಲದೇ ಎಣ್ಣೆ ಮತ್ತು ತುಪ್ಪಗಳನ್ನು ಸದಾ ಭರ್ತಿ ಮಾಡಿಕೊಂಡಿರುತ್ತಿದ್ದರು. ಏಕೆಂದರೆ ಯುದ್ಧದ ಸಮಯದಲ್ಲಿ ತುಪಾಕಿಗಳಿಗೆ, ಫಿರಂಗಿಗಳಿಗೆ, ಕೋವಿಗಳಿಗೆ ಸವರಲು ಹಾಗೂ ಗಾಯಗೊಂಡ ಸೈನಿಕರ ಶಸ್ತ್ರಚಿಕಿತ್ಸೆ ಸಮಯದಲ್ಲಿ ಉಪಯೋಗಿಸಲಾಗುತ್ತಿತ್ತು. ಅದಕ್ಕಾಗಿ ಚಿತ್ರದುರ್ಗದ ಅರಸರು ಕಾಮನಬಾಗಿಲಿನ ಮುಂದೆ ಎಡಭಾಗದಲ್ಲಿಯ ಗುಹಾನೆಲೆಯ ಮುಂದಿನ ಬಂಡೆಯಲ್ಲಿ ತೋಡಿದ ಎರಡು ತುಪ್ಪದಕೊಣಗಳನ್ನು ಕಾಣಬಹುದು. ಇನ್ನೊಂದು ಸಂಪಿಗೆ ಸಿದ್ದೇಶ್ವರ ದೇವಾಲಯದ ಬೆಟ್ಟದ ಪಶ್ಚಿಮಕ್ಕೆ ಅಂದರೆ ಗೋಪಾಲಸ್ವಾಮಿ ಹೊಂಡಕ್ಕೆ ಇಳಿಯುವಲ್ಲಿ ತುಪ್ಪದ ಕೊಣ ಇದೆ. ಇದನ್ನು ಎಂ.ಎಚ್.ಕೃಷ್ಣ ಅವರು ಮದ್ದುಗುಂಡುಗಳ ಉಗ್ರಾಣವೆಂದಿದ್ದಾರೆ. ಆದರೆ ಲಕ್ಷ್ಮಣ್ ತೆಲಗಾವಿ ಅವರು ಈ ಬಾವಿಗೆ ತುಪ್ಪದ ಕೊಳವೆಂದು ಅನೇಕ ಆಧಾರಗಳ ಸಮೇತ ದೃಢಪಡಿಸಿದ್ದಾರೆ.

ವಂಶಾವಳಿಗಳಲ್ಲಿ ಪಚ್ಚೆಕಣವೆಯಲ್ಲಿ ಅರೆ ಮೇಲೆ ತುಪ್ಪದ ಕಣಜ ೧ ಎಂದು ತುಪ್ಪದ ಕಣಜದ ಪ್ರಸ್ತಾಪವಿದ್ದು, ಕ್ರಿ.ಶ.೧೬೬೩ರಲ್ಲಿ ಇಮ್ಮಡಿ ಮದಕರಿನಾಯಕನ ಕಾಲದಲ್ಲಿ ನಿರ್ಮಾಣವಾದುವೆಂದು ತಿಳಿದುಬರುತ್ತದೆ. ಹೈದರಾಲಿ ದುರ್ಗಕ್ಕೆ ಮುತ್ತಿಗೆ ಹಾಕಿದ್ದಾಗ, ಮುಂದೆ ಯುದ್ಧದ ಪ್ರಸಂಗ ಬಂದರೆ

ತುಪ್ಪದಕೊಣ ಹತ್ತು, ಎಣ್ಣೆಕೊಣ ಹತ್ತು, ತುಂಬಿರುವುದಾಗಿ ಸಿಬ್ಬಂದಿಯವರು ಕೊನೆಯ ಮದಕರಿನಾಯಕನಿಗೆ ಭರವಸೆ ನೀಡಿದಂತೆ 'ಚಿತ್ರದುರ್ಗದ ಬಖೈರ್'ನಲ್ಲಿ ಹೇಳಿದೆ. ಹಾಗೆಯೇ ಗುಡೇಕೋಟೆಯ ಅರಸರು ಸಹ ಗುಡೇಕೋಟೆಯ ಕೋಟೆಯಲ್ಲಿ ರಾಗಿಕಣಜ ಮತ್ತು ತುಪ್ಪದ ಕಣಜಗಳನ್ನು ಕಟ್ಟಿಸಿದ್ದಾರೆ.

ಇಷ್ಟೆಲ್ಲಾ ಸೈನಿಕರನ್ನು ಹಾಗೂ ಆಯುಧೋಪಕರಣಗಳನ್ನು ಇತರ ವ್ಯವಸ್ಥೆಯನ್ನು ಯುದ್ಧದ ಪೂರ್ವಸಿದ್ಧತೆಗಾಗಿ ಯಾವತ್ತೂ ತಯಾರಿಸಿಟ್ಟುಕೊಂಡಿರುತ್ತಿದ್ದರು. ಯಾರಾದರೂ ಇವರ ಮೇಲೆ ಯುದ್ಧ ಸಾರಿದರೆ, ಅಥವಾ ಇವರೇ ಇನ್ನೊಬ್ಬರ ಮೇಲೆ ಯುದ್ಧ ಸಾರಿದರೆ, ರಾಜನು ಮಂತ್ರಾಲೋಚನೆಗಾಗಿ ಮಂತ್ರಿಗಳ, ದಂಡನಾಯಕರುಗಳ ಸಭೆಯನ್ನು ಮಂತ್ರಶಾಲೆಯಲ್ಲಿ ಕರೆಯುತ್ತಿದ್ದನು. ಅಲ್ಲಿ ಗಹನವಾದ ಮತ್ತು ರಹಸ್ಯವಾದ ವಿಷಯಗಳನ್ನು ಚರ್ಚಿಸುತ್ತಿದ್ದರು.

ಚಿತ್ರದುರ್ಗದ ಕಡೇ ಮದಕರಿ ನಾಯಕರು ಹೈದರನೊಡನೆ ಯುದ್ಧ ಮಾಡಬೇಕಾದಾಗ, ಸೇನೆಯ ಸರದಾರರನ್ನು ಇತರ ಮಂತ್ರಿಗಳನ್ನು ಕರೆಯಿಸಿ ಹೈದರ ಅಲಿಯ ಕಡೆಯಿಂದ ಬಂದಿರುವ ರಾಜಿಯ ವಿಚಾರವಾಗಿ ಆಲೋಚನೆ ಮಾಡಲು, ಸರದಾರರು ಹಾಗೂ ಮಂತ್ರಿಗಳು ಯುದ್ಧದ ಸಾಮಗ್ರಿಗಳಿಗೆ ಕೊರತೆಯಿಲ್ಲ, ಚಿತ್ರದುರ್ಗದ ಸೈನ್ಯ ಇಲ್ಲಿಯವರೆಗೂ ಸೋತ ಉದಾಹರಣೆಗಳಿಲ್ಲ, ನಮಗೆ ನವಾಬನು ಸಹಾಯ ಮಾಡುತ್ತಾನೆ. ಹೀಗಾಗಿ ಯುದ್ಧವನ್ನು ಮಾಡೋಣವೆಂದು ಹೇಳುತ್ತಾರೆ. ನಂತರ ಮುಖಂಡ ಜನರಲ್ಲಿ ಆಲೋಚನೆ ಮಾಡಲು ಕೋಟೆ, ಚೌಕಿ ಬಂದೋಬಸ್ತು ಮಾಡಿಸಿ, ಬಕ್ಷಿ ಚನ್ನಮಲ್ಲಪ್ಪ, ಊರಲ್ಲಿಯ ಸಾಹುಕಾರ ಸೆಟ್ಟಿಯನ್ನು ಕರೆಯಿಸಿ, 'ಹೈದರ್ ಚಿತ್ರದುರ್ಗದ ಮೇಲೆ ದಂಡೆತ್ತಿ ಬರುವುದನ್ನು ತಿಳಿಸಿ, ಯುದ್ಧ ಭೀಕರತೆಯನ್ನು ತಾಳುವ ಸಂದರ್ಭವಿರುವುದರಿಂದ, ಊರಿನ ಹೆಂಗಸರು, ಮಕ್ಕಳು, ದನಕರುಗಳ ಸಮೇತ ನಾಲ್ಕು ದಿವಸ ಹೊರಗೆ ಹೋಗಿ ಇರಬೇಕು' ಎಂಬ ವಿಚಾರವನ್ನು ಹೇಳಿದ್ದನು. ನಂತರ ತುಂಬಿದ ದರ್ಬಾರಿನಲ್ಲಿ ಹೈದರ್ ಕಳುಹಿಸಿದ ವಕೀಲನಿಗೆ ಉತ್ತರವನ್ನು ನೀಡುತ್ತಾರೆ.[೧೧೨] ಅದೇ ರೀತಿ ಸುರಪುರಕ್ಕೆ ಮೊಗಲ್ ಸೇನೆಯು ಮುತ್ತಿಗೆ ಹಾಕುವ ವಿಚಾರ ತಿಳಿದು ರಾಜಾ ಪಿಡ್ಡನಾಯಕರು ತಕ್ಷಣವೇ ಪರಮಾಪ್ತರೊಂದಿಗೆ ಏಕಾಂತಸಭೆಯನ್ನು ನಡೆಸಿದರು.[೧೧೩]

ಯುದ್ಧಗಳಿಗೆ ನಿಗದಿಪಡಿಸಿರುವ ಕಾಲಗಳಂತೆ ಸೈನ್ಯದೊಂದಿಗೆ ಅರಸರು ಯುದ್ಧಕ್ಕೆ ಹೊರಡುವಾಗ ಜ್ಯೋತಿಷಿ ಅಥವಾ ಜೋಯಿಸರಿಂದ ಮುಹೂರ್ತಗಳನ್ನು ಕೇಳುವ ಪದ್ಧತಿ ಇತ್ತು. ಕೆಲವು ಸಲ ಶುಭ-ಅಶುಭ ದಿನಗಳನ್ನು ಪರಿಗಣಿಸುವ ರೂಢಿ ಹಿಂದಿನಿಂದಲೂ ಬಂದಿದೆ. ಆದರೆ ಕೆಲವು ಸಲ ಯುದ್ಧ ಅನಿವಾರ್ಯವಾದಾಗ, ಶುಭ-ಅಶುಭ ದಿನಗಳಿಗಾಗಿ ಕಾಯುತ್ತಿರಲಿಲ್ಲ. ಯಾವುದೇ ಸೂಚನೆಗಳಿಲ್ಲದೆ ಯುದ್ಧಗಳು ಜರುಗುತ್ತಿದ್ದವು. ಹಾಗೂ ದೇವಾಲಯಗಳಿಗೆ ಭೇಟಿ ನೀಡಿ, ದೇವರು, ಬ್ರಾಹ್ಮಣರ ಹಾಗೂ

ಹಿರಿಯರ ಆರ್ಶೀವಾದವನ್ನು ಪಡೆಯುತ್ತಿದ್ದರು. ಬ್ರಾಹ್ಮಣರಿಗೆ ಹಣ, ಇಲ್ಲವೆ ಒಡವೆ ರೂಪದಲ್ಲಿ ದೇಣಿಗೆ ನೀಡುತ್ತಿದ್ದರು. ಸರ್ವರೂ ಯುದ್ಧದ ಯಶಸ್ಸಿಗೆ ಶುಭ ಕೋರುತ್ತಿದ್ದರು.

ನಾಯಕ ಅರಸರು ದೇವರ ಆಶೀರ್ವಾದವಿಲ್ಲದೆ ಯಾವ ಕಾರ್ಯವನ್ನೂ ಮಾಡಿದವರಲ್ಲ. ಯುದ್ಧ ಭೂಮಿಗೆ ಹೋಗುವ ಮುನ್ನ ದೇವಿಯ ಅಪ್ಪಣೆಯನ್ನು ಪಡೆದುಕೊಳ್ಳಲು ದೇವಿಗೆ ವಿಶೇಷ ಪೂಜೆ ಸಲ್ಲಿಸುವ ಸಂಪ್ರದಾಯವಿತ್ತು. ಚಿತ್ರದುರ್ಗದ ನಾಯಕ ಅರಸರು ತಮ್ಮ ಕುಲದೇವತೆಯಾದ ಏಕನಾಥೇಶ್ವರಿಗೆ. ಮನೆದೇವತೆಯಾದ ಉತ್ಸವಾಂಬೆಗೆ ಅಲ್ಲದೆ ಚೌಡಮ್ಮ, ಚಳ್ಳಕೇರಮ್ಮ. ಸುರಪುರದವರ ಕುಲದೇವ ಶ್ರೀವೇಣುಗೋಪಾಲಸ್ವಾಮಿ ಮತ್ತು ಕುಲದೇವತೆ ದಂಡಿನ ಮರಗಮ್ಮನಿಗೆ, ಆನೆಗೊಂದಿಯವರು ಮೇಗೋಟಾದ ದುರ್ಗಾದೇವಿಯನ್ನು, ಗುಡಗುಂಟಿಯವರು ಮಾರಿಕಾಂಬಳನ್ನು, ಗುಂತಗೋಳ ಮತ್ತು ಕನಕಗಿರಿಯವರು ಹಿರೇ ದೇವತೆಯನ್ನು, ದೇವದುರ್ಗದವರು ಚೌಡಮ್ಮಳನ್ನು ಮತ್ತೋಡಿನವರು ಕರಿಯಮ್ಮ, ಬಾರಿಮರದಮ್ಮಳನ್ನು ಜರಿಮಲೆಯವರು ದಂಡಿನ ದುರಗಮ್ಮನನ್ನು ಪೂಜಿಸುತ್ತಿದ್ದರು. ಈ ದೇವರಿಗೆ ಬಲಿಕೊಡುತ್ತಿದ್ದರು. ಇಲ್ಲವೇ ಬಲಿ ಕೊಡುವ ಹರಕೆಯನ್ನು ಹೊರುತ್ತಿದ್ದರು.

ಮಾಯಕೊಂಡದ ಕಾಳಗಕ್ಕೆ ತೆರಳುವಾಗ ಹಿರೇ ಮದಕರಿನಾಯಕ ಬೆಟ್ಟದ ಮೇಲಿರುವ ಕುಲದೇವತೆ ಏಕನಾಥೇಶ್ವರಿಯ ದರ್ಶನ ಪಡೆದು ಆಕೆಯ ವಾಕ್ಯ ಕೇಳುತ್ತಾನೆ. 'ಹೋದ ಕೆಲಸ ಜಯಪ್ರದವಾದರೆ ದಾವಣೆ ಕುರಿಕ್ವಾಣ ಕಡಿಸೇನೆ' ಎಂದು ಹರಕೆ ಹೋರುತ್ತಾನೆ. ನಂತರ ಮನೆದೇವತೆ ಉತ್ಸವಾಂಬೆಯ (ಉಚ್ಚಂಗಮ್ಮ) ದೇವಾಲಯಕ್ಕೆ ತೆರಳುತ್ತಾನೆ. ಏಕನಾಥೇಶ್ವರಿಗೆ ಸಲ್ಲಿಸಿದ ಪ್ರಾರ್ಥನೆಯನ್ನು ಇಲ್ಲಿಯೂ ಸಲ್ಲಿಸುತ್ತಾನೆ. ನಂತರ ಆನೆಯನ್ನೇರಿ ನೀರ್ಥಡಿಯನ್ನು ತಲುಪಿ, ಮನೆ ದೇವರಾದ ರಂಗನಾಥಸ್ವಾಮಿಗೆ ಮಂಗಳಾರತಿ ಮಾಡಿದನೆಂದು[೧೧೪] ತಿಳಿಯುತ್ತದೆ.

ಗಡ್ಡಿಪಿಡ್ಡನಾಯಕ, ಪಾಮನಾಯಕ, ಮೊಂಡಗ್ಯೆ ವೆಂಕಟಪ್ಪನಾಯಕರು ಯುದ್ಧಕ್ಕೆ ಹೋಗುವಾಗ ಸುರಪುರದ ದಂಡಿನ ಮರಗಮ್ಮನಿಗೆ ಪ್ರಾಣಬಲಿಯನ್ನು ನೀಡಿ ತೆರಳುತ್ತಿದ್ದರು. ಇದನ್ನು ನಂತರದ ಸುರಪುರದ ಎಲ್ಲಾ ಅರಸರು ಪಾಲಿಸಿದ್ದಾರೆ.[೧೧೫]

ಚಿತ್ರದುರ್ಗದ ನಾಯಕ ಅರಸರು ಎಲ್ಲಾ ದೇವರುಗಳ ದರ್ಶನವನ್ನು ಪಡೆದು ರಣೋತ್ಸಾಹದಿಂದ ಯುದ್ಧಭೂಮಿಗೆ ಹೊರಡುವಾಗ ಸೇನಾ ಸಮೂಹವನ್ನು ಹುರಿದುಂಬಿಸಲು ಜನಪದಗೀತೆಗಳನ್ನು ಹಾಡಿಸುತ್ತಿದ್ದರು. ಯುದ್ಧದ ಹಿಂದಿನ ದಿನ ಸೈನ್ಯಗಳು ಶಿಬಿರವನ್ನು ಹೂಡಬೇಕಾಗುತ್ತಿತ್ತು. ತಮ್ಮ ತಮ್ಮ ಶಿಬಿರಗಳಲ್ಲಿ ಯುದ್ಧಕ್ಕೆ ಬೇಕಾದ ಪೂರ್ವತಯಾರಿಗಳು ನಡೆಯುತ್ತಿದ್ದವು. ಶಿಬಿರವು ಯುದ್ಧಭೂಮಿಯ ಸಮೀಪದಲ್ಲಿ ಏರ್ಪಡಿಸಿದ ಸೇನೆಯ ವಾಸಸ್ಥಳವಾಗಿ ಪರಿಣಮಿಸಲ್ಪಡುತ್ತಿತ್ತು. ಇದನ್ನು ಕೌಟಿಲ್ಯನು 'ಸ್ಕಂದಾವಾರ'ವೆಂದು ಕರೆದಿರುವನು. ಸೇನಾಶಿಬಿರದ ಆಕಾರ, ರಚನೆ ಕುರಿತು ಅರ್ಥಶಾಸ್ತ್ರದಲ್ಲಿ

ಹೇಳುತ್ತಾನೆ. "ಶಿಬಿರದಲ್ಲಿ ರಾಜನ ಸ್ಥಾನ, ಕೋಶ, ಶಾಸನ, ವ್ಯವಹಾರಗಳನ್ನು ವಿಚಾರಿಸುವ ಸ್ಥಳ, ಆನೆ, ಕುದುರೆ, ರಥಗಳಿಗೆ ಸ್ಥಾನ, ಆಯುಧಾಗಾರ, ಅಡಿಗೆಶಾಲೆ, ಸೇನಾಧಿಪತಿಯ ಸ್ಥಾನ ಹೀಗೆ ಸೈನ್ಯದೊಂದಿಗೆ ಬರುವ ಎಲ್ಲಾ ಜನರಿಗೂ ಪ್ರತ್ಯೇಕ ಸ್ಥಳಗಳಿರಬೇಕು[೧೧೬] ಎನ್ನುತ್ತಾನೆ. ಆಹಾರಕ್ಕೆ ಬೇಕಾದ ಆಹಾರ ಸಾಮಗ್ರಿಗಳು, ಆನೆ-ಕುದುರೆಗಳಿಗೆ ಬೇಕಾದ ಹುಲ್ಲು-ಸೊಪ್ಪು ಸಂಗ್ರಹ, ಯುದ್ಧದಲ್ಲಿ ಗಾಯಗಳಾದವರಿಗೆ ಶುಶ್ರೂಷೆ ಮಾಡಲು ರಾಜವೈದ್ಯರು ಹಾಗೂ ಔಷಧಿಗಳಿಗಾಗಿ, ಯುದ್ಧ ಸಾಮಗ್ರಿಗಳನ್ನಿಡಲು ಹೀಗೆ ಪ್ರತ್ಯೇಕವಾದ ಶಿಬಿರಗಳಿರುತ್ತಿದ್ದವು.

ಕ್ರಿ.ಶ.೧೬೯೯ರಲ್ಲಿ ಇಂದೂರಾಯನೂ, ರಾಯದುರ್ಗದವರೂ ನಾಯಕನಹಟ್ಟಿ ಕೋಟೆಯನ್ನು ಮುತ್ತಿದಾಗ, ಚಿತ್ರದುರ್ಗದ ಭರಮಣ್ಣನಾಯಕನು ಆ ಶತ್ರುಗಳೊಂದಿಗೆ ಕಾಳಗ ಮಾಡಿದ. ಆ ಕಾಳಗ ಮೂರು ದಿನಗಳವರೆಗೆ ನಡೆಯಿತು. ಆಗ ಚಿತ್ರದುರ್ಗದವರಿಗೆ ದಂಡಿನಲ್ಲಿ ಅಡಿಗೆ ಮಾಡುವುದಕ್ಕೆ ಅವಕಾಶವಿರಲಿಲ್ಲ. ಹೀಗಾಗಿ ಚಿತ್ರದುರ್ಗದಿಂದ ರೊಟ್ಟಿಗಳನ್ನು ಮಾಡಿಸಿ ಹೇರುಗಳ ಮುಖಾಂತರ ರಾಣಿಯೇ ರಾವುತರಿಗೆಲ್ಲಾ ಕೊಟ್ಟರಂತೆ.[೧೧೭]

ಅರಸರು ಯುದ್ಧದಲ್ಲಿ ಭಾಗವಹಿಸುವಾಗ ತಮ್ಮೊಂದಿಗೆ ಪತ್ನಿಯರನ್ನು ಕರೆದುಕೊಂಡು ಹೋಗಿ, ಅವರಿಗಾಗಿಯೇ ನಿರ್ಮಿಸಿದ ಪ್ರತ್ಯೇಕ ಶಿಬಿರದಲ್ಲಿ ಬಿಡುತ್ತಿದ್ದರು. ಹಿರೇಮದಕರಿನಾಯಕ ಕ್ರಿ.ಶ. ೧೭೪೮-೪೯ರಲ್ಲಿ ನಡೆದ ಮಾಯಕೊಂಡದ ಕಾಳಗಕ್ಕೆ ಹೋದಾಗ, ತನ್ನ ನಾಗತಿಯನ್ನು ಕುಮಾರ ಕುಮಾರಿಯರನ್ನು ನೀರ್ಥಡಿಯ ಶಿಬಿರದಲ್ಲಿ ಇಳಿಸಿ ಹೋಗುತ್ತಾನೆ.[೧೧೮]

ಶಿಬಿರದಲ್ಲಿ ಔಷಧಿಯ ವ್ಯವಸ್ಥೆ ಇರುತ್ತಿತ್ತು. ಅನೇಕ ಸಲ ಸೈನಿಕರಿಗೆ ಗಾಯಗಳಾದಾಗ ಶಿಬಿರದಲ್ಲಿಯೇ ಅವರ ಗಾಯಗಳಿಗೆ ಚಿಕಿತ್ಸೆ ನೀಡಲಾಗುತ್ತಿತ್ತು. ಮಲೆನಾಡಿನವರು ಮೋಸದಿಂದ ಚಿತ್ರದುರ್ಗಕ್ಕೆ ಸೇರಿದ ರಾಮಗಿರಿಯ ಮೇಲೆ ಮುತ್ತಿಗೆ ಹಾಕಿದಾಗ ಚಿತ್ರದುರ್ಗದವರು ಅವರನ್ನು ಎದುರಿಸಿದರು. ಹಿರೇ ಮದಕರಿ ನಾಯಕನಿಗೆ ಬಲಗಡೆ ದವಡೆಯ ಮೇಲೆ ಅಂಬಿನ ಗಾಯವಾದಾಗ ಆತ ಶಿಬಿರಕ್ಕೆ ಬಂದು ಗಾಯಕ್ಕೆ ಔಷಧಿ ಹಾಕಿಸಿಕೊಂಡು, ಹೋಗಿ ಮತ್ತೆ ಯುದ್ಧಮಾಡುತ್ತಾನೆ.[೧೧೯] ಸುರಪುರದ ಮುಮ್ಮಡಿ ಪಾಮನಾಯಕನು ಯುದ್ಧಕ್ಕೆ ತೆರಳುವಾಗ ಗಾಯಗೊಂಡ ಯೋಧರ ಶುಶ್ರೂಷೆಗಾಗಿ, ದೊಡ್ಡದಾದ ಪ್ರತ್ಯೇಕ ಶಿಬಿರದ ವ್ಯವಸ್ಥೆ ಮಾಡುತ್ತಿದ್ದನಲ್ಲದೆ, ಆ ವೈದ್ಯರಿಗೆ ವಾಗನಗೇರಿ ಗ್ರಾಮವನ್ನು ಜಹಗೀರು ಹಾಕಿಕೊಟ್ಟಿದ್ದಾನೆ.[೧೨೦] ವೈದ್ಯರಷ್ಟೆ ಅಲ್ಲದೇ ಜಟ್ಟಿಗಳೂ ಸಹಿತ ವೈದ್ಯಕೀಯದಲ್ಲಿ ಪಾರಂಗತರಾಗಿರುತ್ತಿದ್ದರು. ಗುಡಗುಂಟಿಯಲ್ಲಿ ಈ ಮನೆತನದವರು ಇಂದಿಗೂ ಇದ್ದಾರೆ. ಅವರಿಗೆ ಗುಡಗುಂಟಿ ಅರಸರು ಭೂಮಿಯನ್ನು ನೀಡಿದ್ದಾರೆ.

ಈ ರೀತಿ ನಾಯಕ ಅರಸುಮನೆತನಗಳು ಸುವ್ಯವಸ್ಥಿತವಾಗಿ ಯುದ್ಧದ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದವು. ಈ ಮನೆತನದವರಲ್ಲಿ ಮೂಲತಃ ಕ್ಷತ್ರಿಯ ಗುಣ ರಕ್ತಗತವಾಗಿ ಬಂದಿದ್ದರಿಂದ ಸ್ವತಃ ರಾಜರುಗಳೇ ಯುದ್ಧಭೂಮಿಯಲ್ಲಿ ಧುಮುಕುತ್ತಿದ್ದರು. ಹೀಗಾಗಿ ಸೈನಿಕರಿಗೆ ಪ್ರೇರಣೆ ಸಿಕ್ಕಂತಾಗಿ,

ಜಯದ ಮೇಲೆ ಜಯ ಸಂಪಾದಿಸಿದ ಕೀರ್ತಿ ಈ ಮನೆತನಗಳಿಗಿದೆ. ಹೀಗಾಗಿ ಪರಾಕ್ರಮದಿಂದ ಮಾತ್ರವಲ್ಲದೆ ಧರ್ಮಬುದ್ಧಿಯಿಂದಲೂ ಇವರು ಕೈಗೊಂಡ ಯುದ್ಧಗಳೇ ನಿದರ್ಶನಗಳಾಗಿವೆ. ಒಂದು ರಾಜ್ಯ ಇವರ ಮೇಲೆ ಅನ್ಯಾಯವೆಸಗಿದಾಗ, ಅವರನ್ನು ಹಿಮ್ಮೆಟ್ಟಿಸುವವರೆಗೆ ಇವರು ಒಂದಲ್ಲ ಒಂದು ರೀತಿಯಿಂದ ಪ್ರಯತ್ನಿಸುತ್ತಿದ್ದರು. ಯುದ್ಧಗಳು ಯಾವ ಪ್ರಮಾಣದ್ದೇ ಆದರೂ ಯುದ್ಧಕ್ಕೆ ಬೇಕಾದ ಎಲ್ಲಾ ಬಗೆಯ ಸಿದ್ಧತೆಗಳು ಅನಿವಾರ್ಯವಾಗಿದ್ದವು. ಕೆಲವು ಸಲ ರಾಜನ ಬೊಕ್ಕಸದಲ್ಲಿ ಹಣವಿಲ್ಲದೆ ಜನರಿಂದ ತೆರಿಗೆ ರೂಪದ ಹಣವೂ ಯುದ್ಧ ಸಿದ್ಧತೆಗೆ ವಿನಿಯೋಗವಾಗುತ್ತಿತ್ತು. ಯುದ್ಧಕ್ಕೆ ತರಬೇತಿ ಹೊಂದಿದ ನುರಿತ ಮೂಲ ಸೇನೆಯ ಜೊತೆಗೆ ಮಿತ್ರ ಅಥವಾ ಸಾಮಂತ ಸೇನೆಗಳೂ ಬಂದು ಕೂಡುತ್ತಿದ್ದವು.

## ೩.೪ ಹಬ್ಬ-ಉತ್ಸವಗಳು

ಹಬ್ಬಗಳು ಧಾರ್ಮಿಕ ಭಾವನೆಯ ಪಡಿಯಚ್ಚುಗಳು. ಈ ಹಬ್ಬಗಳ ಸಂದರ್ಭದಲ್ಲಿನ ಆಚರಣೆಗಳು, ನಂಬಿಕೆಗಳು, ಜಾತ್ರೆ, ಉತ್ಸವಗಳು, ನಾಯಕ ಅರಸರು ಇರಿಸಿಕೊಂಡಿರುವ ಧಾರ್ಮಿಕ ಶ್ರದ್ಧೆಯನ್ನು ಮನದಟ್ಟು ಮಾಡಿಕೊಡುತ್ತವೆ. 'ಹಬ್ಬ', ಸಂಸ್ಕೃತದ 'ಪರ್ವ'ಪದದ ತದ್ಭವವಾಗಿದೆ. ಪರ್ವವೆಂದರೆ ಸಂಸ್ಕೃತದಲ್ಲಿ ಉತ್ಸವ ಎಂಬ ಅರ್ಥವಿದೆ. ಹಾಗೆಯೇ ಉತ್ಸವಕ್ಕೆ ಹಬ್ಬ, ಸಮಾರಂಭ, ಸಂಭ್ರಮ, ಮೆರವಣಿಗೆ ಎಂಬ ಅರ್ಥಗಳಿವೆ.[೧೨೧] ಹೀಗಾಗಿ ಹಬ್ಬ-ಉತ್ಸವಗಳು ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಹೊಂದಿವೆ. ಸಾಮಾನ್ಯವಾಗಿ ಎಲ್ಲಾ ಉತ್ಸವಗಳು ಹಾಗೂ ಹಬ್ಬಗಳ ನಡುವೆ ಪರಸ್ಪರ ಸಂಬಂಧವಿದೆ. ಹೀಗಾಗಿ ಹಬ್ಬ-ಜಾತ್ರೆ-ಉತ್ಸವಗಳು ಒಂದೇ ರೀತಿಯಾದವು. ಹೆಚ್ಚಾಗಿ ಜಾತ್ರೆಗಳು ಸಹ ಹಬ್ಬವಿದ್ದಂತೆಯೇ. ಅವು ಆಯಾ ಹಬ್ಬಗಳನ್ನು ಅನುಸರಿಸಿಯೇ ಆಯಾ ಕಾಲದಲ್ಲಿ ಬರುತ್ತವೆ. ಆದರೂ ಕೆಲವು ಸಲ ಹಬ್ಬಗಳಿಲ್ಲದೆ ಜಾತ್ರೆಗಳು ನಡೆಯುತ್ತವೆ.

ಒಂದು ನಾಡಿನ ಸಂಸ್ಕೃತಿಯನ್ನು ಪರಿಚಯಿಸುವ ಹಬ್ಬ-ಉತ್ಸವಗಳು ಭಕ್ತಿ, ಧರ್ಮ, ಮತ, ದಿನಾಚರಣೆ, ವ್ರತಾಚರಣೆ ಜಯಂತಿಗಳಿಗೆ ಸಂಬಂಧಿಸಿದ ದಿನಗಳಾಗಿದ್ದು ಸಾಮೂಹಿಕವಾಗಿ ಸಂತೋಷವನ್ನು ಹಂಚಿಕೊಳ್ಳಲು ಸಹಾಯಕಾರಿಯಾಗಿವೆ. ಅಲ್ಲದೆ ಸಾಂಸ್ಕೃತಿಕ ಪರಂಪರೆಯ ಪ್ರಮುಖ ಆಧಾರಸ್ತಂಭಗಳಾಗಿವೆ. ಕಾಲಕಾಲಕ್ಕೆ ದೇವರ ಹೆಸರಿನಲ್ಲಿ ಸೇರುವ ಜಾತ್ರೆಗಳೂ-ಉತ್ಸವಗಳೂ ಅರಸರ ಸಾಂಸ್ಕೃತಿಕ ಸಂಬಂಧವನ್ನು ಶ್ರೀಮಂತಗೊಳಿಸುತ್ತವೆ. ಇವುಗಳ ಮುಖೇನ ಹಿಂದೂ ಸಂಸ್ಕೃತಿಯ ಎಲ್ಲಾ ವೈಶಿಷ್ಟ್ಯಗಳನ್ನು ಸಂರಕ್ಷಿಸಿ ಪುನಃಶ್ಚೇತನಗೊಳಿಸಿ ವೈಭವೋಪೇತವಾಗಿ ಮಾಡುವುದು ಅರಸರ ಪ್ರಮುಖ ಧ್ಯೇಯವಾಗಿತ್ತು. ಈ ನಿಟ್ಟಿನಲ್ಲಿ ಕರ್ನಾಟಕದ ನಾಯಕಅರಸರು ತಮ್ಮದೇ ಆದ ವಿಧಿ ವಿಧಾನಗಳನ್ನು ಒಳಗೊಂಡಂತೆ ಅನೇಕ ಹಬ್ಬ-ಉತ್ಸವಗಳನ್ನು ಆಚರಿಸುತ್ತಾ ಬಂದಿದ್ದಾರೆ. ಇವುಗಳಲ್ಲಿ ಕೆಲವು ಅವರ ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದವುಗಳಾದರೆ, ಕೆಲವು ಅವರ ಸಾರ್ವಜನಿಕ ಬದುಕಿನೊಂದಿಗೆ ಮಿಳಿತಗೊಂಡಿವೆ. ಆದರೆ ಅವರ

ಕೌಟುಂಬಿಕ ಹಬ್ಬಗಳು ಸಾರ್ವಜನಿಕ ಹಬ್ಬಗಳಾದರೂ, ಅವರು ಅವುಗಳನ್ನು ತಮ್ಮ ಅರಮನೆಯಲ್ಲಿ ಆಚರಿಸುವಂತಹ ರೀತಿಯೇ ಬೇರೆಯಾಗಿತ್ತು. ಆ ಸಂದರ್ಭದಲ್ಲಿ ಅವರು ಸಾರ್ವಜನಿಕವಾಗಿ ಬೆರೆತರೂ, ಇಲ್ಲಿಯ ಆಚರಣೆಗಳೇ ಬೇರೆಯಾಗಿರುತ್ತಿದ್ದವು.

### ೩.೪.೧ ಹಬ್ಬಗಳು

ಹಬ್ಬಗಳು ವರ್ಷಾದ್ಯಂತ ಹಂಚಿಕೊಂಡಿರುತ್ತಿದ್ದವು. ಅವು ಹಿಂದೂ ಸಂಸ್ಕೃತಿಯ ಪ್ರತಿಬಿಂಬಗಳಾಗಿದ್ದವು. ಈ ಹಬ್ಬಗಳಲ್ಲಿ ವಿಜಯದಶಮಿ, ದೀಪಾವಳಿ, ಯುಗಾದಿ, ರಥಸಪ್ತಮಿ, ಮಕರ ಸಂಕ್ರಾಂತಿ ಗೋಕುಲಾಷ್ಟಮಿ, ಶ್ರೀಜಯಂತಿ, ರಾಮನವಮಿ, ಏಕಾದಶಿ, ಚತುರ್ಮಾಸವ್ರತ, ಕಾರ್ತೀಕಮಾಸ, ಧನುರ್ಮಾಸ, ಸೋಮವಾರ ವ್ರತಗಳು, ಪ್ರತಿ ತಿಂಗಳಿನಲ್ಲಿ ಬರುವ ಅಮವಾಸ್ಯೆ, ಹುಣ್ಣಿಮೆಗಳಲ್ಲಿ ಆಚರಿಸಲ್ಪಡುವ ಹಬ್ಬಗಳು ಪ್ರಮುಖವಾದವು.

ಕರ್ನಾಟಕದ ನಾಯಕ ಅರಸುಮನೆತನಗಳಾದ ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಅರಸರು ಕೌಟುಂಬಿಕವಾಗಿ ಯುಗಾದಿ, ದಸರಾ(ಮಾರ್ನವಮಿ), ದೀಪಾವಳಿ, ಮಹಾಶಿವರಾತ್ರಿ ಹಬ್ಬಗಳನ್ನು ವಿಶಿಷ್ಟವಾಗಿ ಆಚರಿಸುತ್ತಿದ್ದರಲ್ಲದೇ ಇನ್ನುಳಿದ ವರ್ಷದಾದ್ಯಂತ ಬರುವ ಹಬ್ಬ ಹರಿದಿನಗಳನ್ನು ಸಾಮಾನ್ಯ ಜನರು ಆಚರಿಸುವಂತೆ ಆಚರಿಸುತ್ತಿದ್ದರು. ಹೀಗಾಗಿ ಇವರು ಆಚರಿಸುವ ವಿಶಿಷ್ಟ ಹಬ್ಬಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

#### ೩.೪.೧.೧ ಯುಗಾದಿ

ಯುಗಾದಿ ಹಬ್ಬವು ಹಿಂದೂಗಳಿಗೆ ಪವಿತ್ರವಾದ ಹಬ್ಬವಾಗಿದೆ. ಇದನ್ನು ಹೊಸವರುಷದ ಆರಂಭದ ದಿನವೆಂದು ಪರಿಗಣಿಸಿ ಚಂದ್ರಮಾನದ ರೀತ್ಯ ಆಚರಿಸಲಾಗುವುದು. ಶಾಲಿವಾಹನ ಶಕೆಯ ಆರಂಭವನ್ನು ಅಂದಿನಿಂದ ಲೆಕ್ಕ ಹಾಕುತ್ತಾರೆ. ಈ ಹಬ್ಬವನ್ನು ಕರ್ನಾಟಕದ ನಾಯಕ ಅರಸುಮನೆತನದವರು ವಿಶಿಷ್ಟ ರೀತಿಯಿಂದ ಆಚರಿಸುತ್ತಿದ್ದರು. ಹಬ್ಬದ ಮುನ್ನ ಅರಮನೆಗಳಿಗೆ ಸುಣ್ಣಬಣ್ಣ ಬಳಿಸುವುದು, ಬಾಗಿಲಿಗೆ ತಳಿರುತೋರಣ, ಬಾಳೇಕಂಬಗಳಿಂದ ಅಲಂಕರಿಸುತ್ತಿದ್ದರು. ಇಂದಿಗೂ ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ಅರಸುಮನೆತನದವರು ತಮ್ಮ ಅರಮನೆಯನ್ನು ಇದೇ ರೀತಿ ಶೃಂಗರಿಸುತ್ತಾರೆ. ಅರಸರು ಮತ್ತು ರಾಣಿಯರು ಬೆಳಿಗ್ಗೆ ಅಭ್ಯಂಜನ ಸ್ನಾನ ಮಾಡಿ ಹೊಸಬಟ್ಟೆಗಳನ್ನು ಧರಿಸುತ್ತಿದ್ದರು. ಅರಮನೆಯಲ್ಲಿ ದೇವತಾಕಾರ್ಯ ಮಾಡುವ ಮುನ್ನ ದಿವ್ಯವಸ್ತ್ರಗಳನ್ನಿಟ್ಟು ನಿತ್ಯಪೂಜೆಯನ್ನು ಮುಗಿಸುತ್ತಿದ್ದರು. ನಂತರ ತಮ್ಮ ಮನೆದೇವರು ಮತ್ತು ಆರಾಧ್ಯದೇವರುಗಳಿಗೆ ವಿಶೇಷ ಪೂಜೆಗಳು ಜರುಗುವಂತೆ ಏರ್ಪಾಡು ಮಾಡುತ್ತಿದ್ದರು. ಚಿತ್ರದುರ್ಗದ ಅರಸರು ತಮ್ಮ ಮನೆದೇವರಾದ ನೀರ್ಥಡಿ ರಂಗನಾಥನಿಗೆ,

ಕುಲದೇವತೆ ಉತ್ಸವಾಂಬೆಗೆ, ಮನೆದೇವತೆಯಾದ ಏಕನಾಥೇಶ್ವರಿಗೆ, ಸಂಪಿಗೆ ಸಿದ್ಧೇಶ್ವರನಿಗೆ ಮೊದಲು ಕಾಯಿ ಕರ್ಪೂರಗಳನ್ನು ಕಳುಹಿಸುತ್ತಿದ್ದರು. ನಂತರ ಊರಿನ ಉಳಿದ ದೇವಾಲಯಗಳಾದ ಹಿಡಿಂಬೇಶ್ವರ, ಫಲ್ಗುಣೇಶ್ವರ, ಗೋಪಾಲಸ್ವಾಮಿ, ಪಾತಾಳೇಶ್ವರ, ಪಂಚಲಿಂಗೇಶ್ವರ, ಹುಲೆಗೊಂದಿ ಸಿದ್ದೇಶ, ಓಬಳ ನರಸಿಂಹ, ಆಂಜನೇಯ ಮುಂತಾದ ದೇವರುಗಳಿಗೆ ಪೂಜೆ ಸಲ್ಲಿಸುತ್ತಿದ್ದರು. ಸುರಪುರದವರು, ವೇಣುಗೋಪಾಲಸ್ವಾಮಿ, ಆಂಜನೇಯ, ರಾಘವೇಂದ್ರ, ಬಸವಣ್ಣ, ವೆಂಕಟೇಶ್ವರ ಮುಂತಾದ ದೇವರುಗಳಿಗೆ; ಆನೆಗೊಂದಿಯವರು ಶ್ರೀರಂಗನಾಥ, ಗಣೇಶ, ಸೂರ್ಯನಾರಾಯಣ, ಗುಡ್ಡದ ತಿಮ್ಮಪ್ಪ, ವಿರೂಪಾಕ್ಷ, ವೆಂಕಟರಾಮ ಮುಂತಾದ ದೇವಾಲಯಗಳಿಗೆ, ಫಲಸಮರ್ಪಣೆ ಮಾಡುತ್ತಿದ್ದರು.

ಗುಡಗುಂಟಿ ಅರಸರು ತಮ್ಮ ಮನೆದೇವರಾದ ಕಕ್ಕೇರಿ ಸೋಮನಾಥನಿಗೆ ಮತ್ತು ಆರಾಧ್ಯದೇವವಾದ ಗುಡಗುಂಟಿ ಅಮರೇಶ್ವರನಿಗೆ ಸ್ವತಃ ತಾವೇ ಹೋಗಿ, ಪೂಜೆ ಸಲ್ಲಿಸಿ ಬರುತ್ತಿದ್ದರು. ಗುಂತಗೋಳದವರು ತಮ್ಮ ಮನೆದೇವರು ಅಮರೇಶ್ವರನಿಗೆ; ದೇವದುರ್ಗದವರು, ಮಾನಸಗಲ್ ರಂಗನಾಥನಿಗೆ; ಕನಕಗಿರಿಯವರು ಕನಕಾಚಲ ನರಸಿಂಹನಿಗೆ, ಗುಡೇಕೋಟೆಯವರು ಮಾಕನಡಕು ನರಸಿಂಹಸ್ವಾಮಿಗೆ, ಹಾಗೂ ಜಟ್ಟಿಂಗ ರಾಮೇಶ್ವರನಿಗೆ; ನಾಯಕನಹಟ್ಟಿಯವರು ತಿಪ್ಪೇಸ್ವಾಮಿಗೆ; ಹರತಿಯವರು ಆಂಜನೇಯ, ವೆಂಕಟಸ್ವಾಮಿಗೆ ಕಾಯಿಕರ್ಪೂರಗಳನ್ನು ತಪ್ಪದೇ ಕಳುಹಿಸುತ್ತಿದ್ದರು. ಅಲ್ಲಿ ವಿಶೇಷ ಪೂಜೆಗಳು ನಡೆಯುತ್ತಿದ್ದವು.

ಅರಮನೆಯಲ್ಲಿ ಮೂರು ಮುಖ್ಯ ಕಾರ್ಯಕ್ರಮಗಳು ಅಂದು ಜರುಗುತ್ತಿದ್ದವು. ಮೊದಲನೆಯದು ಬೇವು-ಬೆಲ್ಲ ಸೇವನೆ. ಅರಮನೆಯವರೆಲ್ಲ ಬೇವು ಬೆಲ್ಲ ಸೇವಿಸುತ್ತಿದ್ದರು. ಜೊತೆಗೆ ಅರಮನೆಗೆ ರಾಜದರ್ಶನಕ್ಕಾಗಿ ಬರುವ ಪ್ರಜೆಗಳಿಗೂ ಬೇವು-ಬೆಲ್ಲ ನೀಡುತ್ತಿದ್ದರು. ಸುರಪುರದ ಅರಸುಮನೆತನದಲ್ಲಿ ಅಂದು ಪ್ರಜೆಗಳು ರಾಜದರ್ಶನ ಪಡೆದು ಅರಮನೆಯ ಬೇವನ್ನು ಕುಡಿದು ಸುರಪುರದ ಎಲ್ಲಾ ಕೇರಿಗಳ ಜನರು ಚಂಡಿನಾಟವಾಡಲು ಹೋಗುತ್ತಿದ್ದರು.[೧೨೨] ದೇವದುರ್ಗದ ಅರಸರ ಸಮ್ಮುಖದಲ್ಲಿ ಕಲ್ಲನ್ನು ಎತ್ತುವ ಸ್ಪರ್ಧೆ ನಡೆಯುತ್ತಿತ್ತು ಹಾಗೂ ಈ ಹಬ್ಬದಲ್ಲಿ ಓಕುಳಿಯನ್ನು ಆಡುತ್ತಿದ್ದರು.[೧೨೩]

ಎರಡನೆಯದು ಪಂಚಾಂಗ ಶ್ರವಣ. ಸುರಪುರ, ಆನೆಗೊಂದಿ, ಗುಡಗುಂಟಿ ಅರಸರು ಅರಮನೆಯಲ್ಲಿ ನಡೆಯುವ ಸಾಯಂಕಾಲದ ವಿಶೇಷ ಪೂಜೆಗೆ ಒಬ್ಬ ಸ್ಮಾರ್ತ ಮತ್ತೊಬ್ಬ ವೈಷ್ಣವ ಬ್ರಾಹ್ಮಣರನ್ನು ಕರೆಯಿಸಿ, ಪಂಚಾಂಗ ಶ್ರವಣವನ್ನು ಮಾಡಿಸುತ್ತಿದ್ದರು. ಈ ಕಾರ್ಯಕ್ರಮಕ್ಕೆ ಅರಸರ ಪರಿವಾರ ಮತ್ತು ಆಡಳಿತದ ವರ್ಗವೆಲ್ಲ ಉಪಸ್ಥಿತರಿರುತ್ತಿದ್ದರು. ಅಂದು ಪ್ರಮುಖ ಸ್ಥಳಗಳಲ್ಲಿ ಪಂಚಾಂಗ ಶ್ರವಣದ ಏರ್ಪಾಡು ಮಾಡಿರುತ್ತಿದ್ದರು. ಗುಂತಗೋಳದ ಅರಸ ರಾಜಾ ರಾಯಪ್ಪನಾಯಕರು ಸ್ವತಃ ತಾವೇ ಪಂಚಾಂಗವನ್ನು ಪಠಿಸುತ್ತಿದ್ದರು.[೧೨೪] ದೇವದುರ್ಗದ ಅರಸರು ಶ್ರೀಸತ್ಯನಾರಾಯಣ ದೇವರ ಕಥೆಯನ್ನು ಹೇಳಿಸುತ್ತಿದ್ದರು.[೧೨೫]

ಮೂರನೆಯದು ಚಂದ್ರದರ್ಶನ ಸಾಯಂಕಾಲದ ಸಂದರ್ಭದಲ್ಲಿ ಅರಮನೆಯ ಪರಿವಾರವೆಲ್ಲ ಚಂದ್ರದರ್ಶನವನ್ನು ಪಡೆಯುತ್ತಿದ್ದರು. ಅಂದು ಕೆಲವರು ಉಪವಾಸವಿರುತ್ತಿದ್ದರಲ್ಲದೇ ಚಂದ್ರದರ್ಶನವಾದ ಮೇಲೆ ಊಟ ಮಾಡುತ್ತಿದ್ದರು. ಸುರಪುರದ ಮುಮ್ಮಡಿ ಪಾಮನಾಯಕರಿಗೆ ಆಕಾಶದಲ್ಲಿ ಮೋಡ ಕವಿದಿದ್ದರಿಂದ ಚಂದ್ರನ ದರ್ಶನ ಸಿಗಲಿಲ್ಲವಂತೆ. ಹೀಗಾಗಿ ಮರುದಿನ ಚಂದ್ರದರ್ಶನವಾಗುವವರೆಗೂ ಊಟ ಮಾಡಲಿಲ್ಲವಂತೆ.[೧೨೬]

ಯುಗಾದಿಯ ಮರುದಿನ ಹಾಗೂ ಮೂರನೆಯ ದಿನ ಅರಸನು ಬೇಟೆಗೆಂದು ಕಾಡಿಗೆ ತೆರಳುತ್ತಿದ್ದನು. ಯುಗಾದಿ ಬೇಟೆಯನ್ನು ಅರಸರ ಬೇಟೆಯೆಂದು ಕರೆಯುತ್ತಿದ್ದರು. ಸುರಪುರದ ಪಾಮನಾಯಕ, ಇಮ್ಮಡಿ ವೆಂಕಟಪ್ಪನಾಯಕ, ಗುಡಗುಂಟಿಯ ಜಡಿಸೋಮಪ್ಪನಾಯಕ, ಗುಂತಗೋಳದ ನರಸಿಂಹನಾಯಕರು ಯುಗಾದಿ ಬೇಟೆಗೆ ಹೋದ ಅನೇಕ ಉದಾಹರಣೆಗಳಿವೆ. ಆ ಬಗೆಗೆ ಮುಂದಿನ ಬೇಟೆಯ ಪದ್ಧತಿ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಗುಡೇಕೋಟೆ ಅರಸರು ಗುಡೇಕೋಟೆಯ ತಣ್ಣೀರಿನ ಉಸಕಿನ ಹೊಂಡದ ಹತ್ತಿರ ಓಕುಳಿ ಹೊಂಡವನ್ನು ನಿರ್ಮಿಸಿದ್ದಾರೆ. ಇಲ್ಲಿ ಯುಗಾದಿಯ ಹಬ್ಬದ ಸಂದರ್ಭದಲ್ಲಿ ಮನರಂಜನಾ ಕ್ರೀಡೆಗಳನ್ನು ಏರ್ಪಡಿಸುತ್ತಿದ್ದರು.[೧೨೭]

### ೩.೪.೧.೨ ಮಹಾನವಮಿ

ಕರ್ನಾಟಕದ ನಾಯಕ ಅರಸುಮನೆತನಗಳು ಆಚರಿಸುವ ಹಬ್ಬಗಳಲ್ಲಿ ಮಹಾನವಮಿ ಹಬ್ಬವು ಪ್ರಮುಖವಾದ ಹಬ್ಬವಾಗಿದೆ. ಒಂಬತ್ತು ದಿನಗಳ ಕಾಲ ಆಚರಿಸುವ ಈ ಹಬ್ಬವನ್ನು ನವರಾತ್ರಿ ಎಂತಲೂ ಕರೆಯುವರು. ಇದು ಆಶ್ವಯುಜ ಮಾಸ ಶುಕ್ಲ ಪ್ರತಿಪದೆ ಪಾಡ್ಯದಿಂದ ಒಂಬತ್ತು ದಿನಗಳವರೆಗೆ ಆಚರಿಸಲ್ಪಡುತ್ತದೆ. ಈ ಹಬ್ಬಕ್ಕೆ ಹತ್ತನೆಯ ದಿನವು ವಿಜಯದಶಮಿ ಇರುತ್ತದೆ. ಆದ್ದರಿಂದ ಇದನ್ನು ದಶರಾತ್ರಿ, ದಸರಾ ಎಂತಲೂ ಕರೆಯುತ್ತಾರೆ. ದೇವತೆ ಮತ್ತು ದಾನವರಿಗೆ ನಡೆದ ಸಮರದಲ್ಲಿ ದೇವತೆಗಳು ದಾನವರನ್ನು ಸಂಹರಿಸಿ ವಿಜಯ ಪಡೆದ ಪ್ರತೀಕವಾಗಿ ಈ ಹಬ್ಬದ ಕೊನೆಯ ದಿನ ವಿಜಯದಶಮಿ ಆಚರಿಸಲ್ಪಡುತ್ತದೆ.

ಈ ಹಬ್ಬವನ್ನು ಕರ್ನಾಟಕದ ನಾಯಕ ಅರಸುಮನೆತನಗಳಾದ ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ಮತ್ತೋಡು, ಹರತಿಕೋಟೆ ಅರಸು ಮನೆತನದವರೆಲ್ಲ ಆಚರಿಸುತ್ತಿದ್ದರು. ಚಿತ್ರದುರ್ಗದ ಅರಸರು ಒಂಬತ್ತು ದಿನಗಳ ಕಾಲ ತಮ್ಮ ಕುಲದೇವತೆಯಾದ ಉಚ್ಚಂಗಮ್ಮನಿಗೆ ವಿಶೇಷ ಪೂಜೆ ಸಲ್ಲಿಸುತ್ತಿದ್ದರು. ಅಂದು ಉತ್ಸವಾಂಬೆಯ ಮೂರ್ತಿಯನ್ನು ಗರ್ಭಗೃಹದಿಂದ ಹೊರತಂದು ನವರಂಗ ಮಂಟಪದಲ್ಲಿ ಸ್ಥಾಪಿಸುತ್ತಿದ್ದರು. ಪ್ರತಿದಿನ ಅರಸರು ದೇವಿಪುರಾಣ, ಹರಿಕಥೆ, ಸಂಗೀತಗಳನ್ನು ನಡೆಸುವಂತೆ ಏರ್ಪಾಡು ಮಾಡಿರುತ್ತಿದ್ದರು.

ವಿಜಯದಶಮಿಯ ದಿನ ಕೆಂಡಾರ್ಚನೆ ನಡೆಯುತ್ತಿತ್ತು. ಈ ಕೆಂಡಾರ್ಚನೆ ಮುಗಿದ ನಂತರ ದೇವಿಯನ್ನು ಮತ್ತೆ ಗರ್ಭಗುಡಿಗೆ ತಂದು ಇರಿಸುತ್ತಿದ್ದರು.[೧೨೮] ಈ ಸಂದರ್ಭದಲ್ಲಿ ಚಿತ್ರದುರ್ಗದ ಅರಸರು ಭಾಗವಹಿಸುತ್ತಿದ್ದರು.

ಎಲ್ಲ ನಾಯಕ ಅರಸರು ಅರಮನೆಯಲ್ಲಿ ದೇವಿಯನ್ನು ಪ್ರತಿಷ್ಠಾಪಿಸುತ್ತಿದ್ದರು. ಈಕೆ ಒಂದೊಂದು ದಿನ ಒಂದೊಂದು ಹೆಸರಿನಿಂದ ಪೂಜೆಗೊಳ್ಳುತ್ತಿದ್ದಳು. ತ್ರಿಮೂರ್ತಿ, ಭದ್ರೆ, ಅಪರ್ಣೆ, ಅಭಯೆ, ಶರ್ವಾಣಿ, ಭೂತದಾಯಿನಿ, ಶಾಕಾಂಬರಿ, ದುರ್ಗಿ, ಭವಾನಿ, ಗೌರಿ, ಮುಂತಾಗಿ. ಇದರಲ್ಲಿ ಏಳು, ಎಂಟು, ಒಂಬತ್ತು ಮತ್ತು ಹತ್ತನೆಯ ದಿನಗಳು ವಿಶಿಷ್ಟವಾಗಿದ್ದವು. ಅಂದು ಅರಮನೆಯಲ್ಲಿ ವಿಶೇಷ ಪೂಜೆ ಜರುಗುತ್ತಿತ್ತು. ಹಲವು ವಿಧಿವಿಧಾನಗಳ ಮೂಲಕ ಅರಮನೆಯಲ್ಲಿ ರಾಜಪುರೋಹಿತರಿಂದ ಪೂಜೆ ಪುರಸ್ಕಾರಗಳು ಜರುಗುತ್ತಿದ್ದವು.[೧೨೯] ಕನಕಗಿರಿ ಅರಸರು ಮಾತ್ರ ಹಿರೇ ದೇವತೆಯನ್ನು ಪ್ರತಿಷ್ಠಾಪಿಸು ತ್ತಿದ್ದರು.[೧೩೦]

ದೇವಿಭಾಗವತ ಪಠಣ, ಸಪ್ತಸತಿ ಪಾರಾಯಣವನ್ನು ಮಾಡಲಾಗುತ್ತಿತ್ತು. ಅರಸರು ಪಾಡ್ಯದ ದಿನದಂದು ಪ್ರಾತಃಕಾಲ ಬ್ರಾಹ್ಮೀಮುಹೂರ್ತದಲ್ಲಿ ಎದ್ದು ವಿಧಿಪೂರ್ವಕವಾಗಿ ಅಷ್ಟ ದ್ರವ್ಯಗಳನ್ನು ಬಳಸಿ ಎಣ್ಣೆ ಅರಿಶಿಣಶಾಸ್ತ್ರವನ್ನು ಮಾಡುತ್ತಿದ್ದರು. ರಾಣಿಯರು ಇವರಿಗೆ ಆರತಿ ಬೆಳಗಿದ ನಂತರ, ರಾಜರು ಅರಮನೆಯಲ್ಲಿಯ ಆದಿಶಕ್ತಿಯ ಪೂಜೆ, ಗಣೇಶಪೂಜೆ, ಅಷ್ಟದಿಕ್ಪಾಲಕರು, ಗ್ರಾಮದೇವರು, ನವಗ್ರಹಗಳನ್ನು ವಿಧಿಬದ್ಧವಾಗಿ ಪೂಜಿಸುತ್ತಿದ್ದರು. ಗುಡಗುಂಟಿ ಅರಸರು ಆ ಸಂದರ್ಭದಲ್ಲಿ ಕಂಕಣವನ್ನು ಪೂಜಿಸಿ ಅದನ್ನು ಧರಿಸುತ್ತಿದ್ದರು.[೧೩೧] ನವರಾತ್ರಿಯ ಏಳನೇ ದಿವಸದಂದು ಸರಸ್ವತಿಯ ಪೂಜೆಯನ್ನು ನಡೆಸಲಾಗುತ್ತಿತ್ತು. ಸುರಪುರದ ಅರಸರು ಆ ಸಂದರ್ಭದಲ್ಲಿ ವಿದ್ಯಾದಾನಕ್ಕೆ ಸಂಬಂಧಿಸಿದ ಪುಸ್ತಕಗಳು, ಹಸ್ತಪ್ರತಿಗಳು, ಸಂಗೀತ ವಾದ್ಯಗಳನ್ನು ಪೂಜಿಸುತ್ತಿದ್ದರು. ಅಂದೇ ರಾತ್ರಿ ದೇವಿಮಹಾತ್ಮೆಯನ್ನು ವಾಚನ ಮಾಡಲಾಗುತ್ತಿತ್ತು.[೧೩೨] ಅದನ್ನೇ ಕಾಳರಾತ್ರಿ ಎಂದು ಕರೆಯುತ್ತಿದ್ದರು.

ನವರಾತ್ರಿಯ ಎಂಟನೆಯ ದಿವಸ ದುರ್ಗಾಪೂಜೆ ಕಾರ್ಯಕ್ರಮವನ್ನು ನಡೆಸುತ್ತಿದ್ದರು. ಈ ದಿನವನ್ನು ದುರ್ಗಾಷ್ಟಮಿ ಎಂದು ಕರೆಯುತ್ತಿದ್ದರು. ಇದು ದುರ್ಗೆಗೆ ಮಾಡುವ ವಿಶಿಷ್ಟ ಪೂಜೆಯಾಗಿರುತ್ತಿತ್ತು. ಕನಕಗಿರಿ ನಾಯಕ ಅರಸರು ತಮ್ಮ ಅರಮನೆಯಲ್ಲಿ ಹಿರೇದೇವತೆಯನ್ನು ಪೂಜಿಸುತ್ತಿದ್ದರು. ನಂದಾದೀಪವು ೯ ದಿನಗಳವರೆಗೆ ಉರಿಸುತ್ತಿದ್ದರು. ಇಂದಿಗೂ ಈ ಸಂಪ್ರದಾಯ ಅವರ ಮನೆಯಲ್ಲಿದೆ.

#### ೩.೪.೧.೩ ಆಯುಧಪೂಜೆ

ಮಹಾನವಮಿಯ ದಿನ ಈ ಕಾರ್ಯಕ್ರಮ ನಡೆಯುತ್ತದೆ. ಅಂದು ಶುಭಮುಹೂರ್ತದಲ್ಲಿ ಅರಮನೆಯ ಶಸ್ತ್ರಾಗಾರದಲ್ಲಿರುವ ಖಡ್ಗಗಳು, ಕತ್ತಿಗಳು, ಕಠಾರಿ, ಬಿಲ್ಲು, ಕೋವಿ ಮುಂತಾದ ಯುದ್ಧೋಪಕರಣಗಳಿಗೆ

ಪೂಜೆ ನಡೆಯುತ್ತಿತ್ತು. ಅಂದೇ ಅರಸರ ಪಟ್ಟದಕತ್ತಿಗೆ ಪೂಜೆಯಾಗುತ್ತಿತ್ತು. ಅದನ್ನು ಅರಮನೆಯ ಪಲ್ಲಕ್ಕಿಯಲ್ಲಿ ಇಡಲಾಗುತ್ತಿತ್ತು. ನಂತರ ಪಟ್ಟದ ಆನೆ, ಪಟ್ಟದ ಕುದುರೆ, ಮತ್ತು ಪಟ್ಟದ ಹಸುವನ್ನು ಪೂಜಿಸುತ್ತಿದ್ದರು. ಇಂದು ಈ ಮನೆತನದವರಲ್ಲಿ ಕೆಲವೇ ಕೆಲವು ಆಯುಧಗಳಿವೆ. ಅವುಗಳನ್ನು ಪೂಜಿಸುವ ಸಂಪ್ರದಾಯವಿಟ್ಟುಕೊಂಡಿದ್ದಾರೆ. ಸುರಪುರದ ಅರಮನೆಯಲ್ಲಿ ಮೊಂಡಗೈ ವೆಂಕಟಪ್ಪನಾಯಕನ ಕಬ್ಬಿಣದ ಕೈಯನ್ನು ಸಹಿತ ಈ ಸಂದರ್ಭದಲ್ಲಿ ಪೂಜಿಸುವುದು ವಿಶೇಷ.[೧೩೩]

ಗುಡಗುಂಟಿಯ ಅರಸರು ಶ್ರೀವೆಂಕಟೇಶ್ವರ ದೇವಸ್ಥಾನದಲ್ಲಿ ನವರಾತ್ರಿಯಂದು ಉತ್ಸವಗಳನ್ನು ನಡೆಸುತ್ತಿದ್ದರು.[೧೩೪] ನವರಾತ್ರಿಯ ಆಚರಣೆ ಒಂಬತ್ತು ದಿನಗಳ ಕಾಲ ನಡೆದು ಹತ್ತನೆಯ ದಿನ ವಿಜಯದಶಮಿ ಆಚರಣೆ ಜರುಗುತ್ತಿತ್ತು. ಅದು ಸೀಮೋಲ್ಲಂಘನದ ಪ್ರತೀಕವೆಂಬ ನಂಬಿಕೆಯೂ ಇದೆ. ಅಂದು ಅರಸರು ಬೆಳಿಗ್ಗೆ ಮಿಂದು ಮಡಿಯುಟ್ಟು ಪಟ್ಟದಕತ್ತಿಗೆ ಪೂಜೆಯನ್ನು ಹಾಗೂ ಇತರ ಆಯುಧಗಳಿಗೆ ಸಾಂಕೇತಿಕವಾಗಿ ಕುಂಕುಮ ಬೆರೆಸಿದ ಕುಂಬಳಕಾಯಿಯನ್ನು ಬಲಿ ಕೊಡುತ್ತಿದ್ದರು. ನಂತರ ಸಾಯಂಕಾಲ ಸಾರ್ವಜನಿಕವಾಗಿ, ಬನ್ನಿಮಂಟಪಕ್ಕೆ ತೆರಳುತ್ತಿದ್ದರು. ಮೊದಲು ಸುರಪುರದ ಅರಸರು ಖಂಡೇಪೂಜೆಯ ದಿನದಂದು ಪ್ರಾಣಿ ಬಲಿಕೊಡುತ್ತಿದ್ದರು. ಆಗ ೧೪ ಕೇರಿಯ ಜನ ಬಂದು ರಾಜರ ಸಮ್ಮುಖದಲ್ಲಿ ಬಲಿ ನೀಡಿ ಅವುಗಳನ್ನು ತಮ್ಮ ಮನೆಗೆ ಒಯ್ಯುತ್ತಿದ್ದರು. ದರಬಾರಿನಲ್ಲಿ ಮಾಂಸವನ್ನು ಮಾಡಲಾಗುತ್ತಿತ್ತು. ಇಮ್ಮಡಿ ವೆಂಕಟಪ್ಪ ನಾಯಕ(ಕ್ರಿ.ಶ.೧೭೭೩-೧೮೦೨)ರ ಕಾಲದವರೆಗೂ ಇದು ಇತ್ತು. ನಂತರದಲ್ಲಿ ಇದನ್ನು ನಿಲ್ಲಿಸಲಾಯಿತು.[೧೩೫]

ಸುರಪುರ ಅರಸು ಮನೆತನದಲ್ಲಿ ಸಾಯಂಕಾಲ ಪ್ರಜೆಗಳೆಲ್ಲಾ ವೇಣುಗೋಪಾಲಸ್ವಾಮಿಯ ಉತ್ಸವದೊಂದಿಗೆ ಕೊಂಬು, ಕಹಳೆಗಳ ಸಮೇತವಾಗಿ ಅರಮನೆಗೆ ಬರುತ್ತಾರೆ. ಅರಮನೆಯಲ್ಲಿ ಅರಸ ಸಮಸ್ತ ಪರಿವಾರದೊಂದಿಗೆ ವೇಣುಗೋಪಾಲಸ್ವಾಮಿಯ ಉತ್ಸವಕ್ಕೆ ಪೂಜೆಯನ್ನು ಸಲ್ಲಿಸಿದ ನಂತರ, ಉತ್ಸವದ ಮುಂದೆ ಅರಸ ಆನೆ, ಇಲ್ಲವೆ ಕುದುರೆಯ ಮೇಲೆ ಕುಳಿತು ಹೋಗುತ್ತಿದ್ದನು. ಪ್ರಧಾನಿ ಮನೆತನದವರು ಬನ್ನಿಕಟ್ಟೆಗೆ ತಲವಾರ ಹಿಡಿದು ನಡೆಯುತ್ತಿದ್ದರು. ಊರ ಹೊರಗಿನ ಶಮೀವೃಕ್ಷಕ್ಕೆ ತೆರಳಿ, ಅಲ್ಲಿ ಧಾರ್ಮಿಕ ವಿಧಿ ವಿಧಾನಗಳು ಮುಗಿದ ಮೇಲೆ ವೇಣುಗೋಪಾಲಸ್ವಾಮಿಗೆ ಬನ್ನಿಯನ್ನು ಕೊಡಲಾಗುತ್ತಿತ್ತು. ನಂತರ ಕುಂಭಾರತಿಯಾಗುತ್ತಿತ್ತು. ಅರಸ ಬ್ರಾಹ್ಮಣರ ಸಮೂಹಕ್ಕೆ ದಕ್ಷಿಣೆಯನ್ನು ಕೊಟ್ಟು, ನಂತರ ರಥ ಪಲ್ಲಕ್ಕಿಯೊಡನೆ ಹಿಂದಿರುಗುತ್ತಿದ್ದ. ಪುನಃ ಅರಮನೆಯ ಎದುರಿನಲ್ಲಿ ಪೂಜೆ ನಡೆಯುತ್ತಿತ್ತು. ಉತ್ಸವ ದೇವಾಲಯಕ್ಕೆ ತೆರಳುತ್ತಿತ್ತು. ಆಗ ಅರಸ ರಾಜಗುರುಗಳ ನಿವಾಸಕ್ಕೆ ತೆರಳಿ ಅವರಿಗೆ ವಂದಿಸಿ ಬನ್ನಿ ನೀಡಿದ ಬಳಿಕವೇ ಸಾರ್ವಜನಿಕರು ಅರಸನಿಗೆ ಬನ್ನಿಯನ್ನು ಕೊಡುತ್ತಿದ್ದರು. ನಂತರವೇ ಸಾರ್ವಜನಿಕರು ಬನ್ನಿ ಮುಡಿಯುತ್ತಿದ್ದರು. ಈ ಸಂಪ್ರದಾಯ ಇಂದಿಗೂ ಸುರಪುರ, ಗುಡಗುಂಟಿಗಳಲ್ಲಿ ಜೀವಂತವಾಗಿದೆ, ಬಹಳ ಅದ್ದೂರಿಯಿಂದ ನಡೆಯುತ್ತಿದೆ. ಹಿಂದಿನ ಆನೆ ಕುದುರೆಗಳ

ಮೇಲೆ ಅರಸರ ಮೆರವಣಿಗೆ ಇದ್ದಿತ್ತಾದರೂ ಈಗ ಇಲ್ಲಿ ಇಲ್ಲದಿದ್ದರೂ, ಅರಸುಮನೆತನದ ವಂಶಜರು ಪಲ್ಲಕ್ಕಿಯೊಂದಿಗೆ ಛತ್ರಿ ಚಾಮರಗಳೊಂದಿಗೆ ಈ ಹಬ್ಬದಲ್ಲಿ ಭಾಗವಹಿಸುವುದು ಬಹಳ ವಿಶಿಷ್ಟವಾಗಿದೆ. ಈ ಹಬ್ಬದಲ್ಲಿ ಪಟ್ಟದಾನೆ, ಪಟ್ಟದಕುದುರೆ, ಖಾಸಾಪಾಗಾ, ಎಲ್ಲ ತೋಪುಗಳು, ಕಿಲ್ಲೆಗಳಲ್ಲಿಯ ತೋಪುಗಳ ಪೂಜೆಗಾಗಿ ದರ್ಬಾರದ ಖರ್ಚಿನಿಂದ ಠರಾವಿನಂತೆ ಕುರಿಗಳು ಕಡಿಯಲ್ಪಡುತ್ತಿದ್ದವು. ವೈದ್ಯರಿಗೆ ಧೋತರ ಜೋಡು, ಸೀರೆ, ಕುಪ್ಪಸಗಳು ಮತ್ತು ೨೫ ಜನರ ಪಡಿಯು ಕೊಡಲಾಗುತ್ತಿತ್ತು. ಆನೆಗೊಂದಿಯ ಅರಸರು ಅಂಬಿಗರಿಗೆ ದಸರಾ ಹಬ್ಬದಲ್ಲಿ ಹೊಸಬಟ್ಟೆಯನ್ನು ಮತ್ತು ಕುರಿಗಳನ್ನು ಕೊಡುತ್ತಿದ್ದರು. ಆದರೆ ಇಂದು ಕೇವಲ ಅವರಿಗೆ ಹೊಸ ಬಟ್ಟೆಗಳನ್ನು ಮಾತ್ರ ಕೊಡಲಾಗುತ್ತಿದೆ. ದೇವದುರ್ಗದ ಅರಸರು ಶ್ರೀಮಂಗಳ ಗೌರಿ ಕಥೆಯನ್ನು ಹೇಳಿಸುತ್ತಿದ್ದರು.[೧೩೬]

೩.೪.೧.೪ ದೀಪಾವಳಿ

ದೀಪಗಳ ವೈಭವವನ್ನು ಸಾರುವ ದೀಪಾವಳಿ ಹಬ್ಬವು ಅಶ್ವಯುಜ ಬಹುಳ ದ್ವಾದಶಿ, ಇಲ್ಲವೇ ವಸುದ್ವಾದಶಿಯಂದು ಪ್ರಾರಂಭಗೊಳ್ಳುತ್ತದೆ. ನಾಯಕ ಅರಸುಮನೆತನಗಳವರು ಇದನ್ನು ಮೂರು ದಿನಗಳವರೆಗೆ ಆಚರಿಸುತ್ತಿದ್ದರು. ಚತುರ್ದಶಿಯಂದು ಪ್ರಾರಂಭವಾಗಿ ಕಾರ್ತಿಕಮಾಸದ ಶುಕ್ಲಪಕ್ಷದ ಪಾಡ್ಯದಂದು ಮುಗಿಯುತ್ತದೆ. ದೀಪಾವಳಿಯ ಮೊದಲ ದಿನವೇ ನರಕ ಚತುರ್ದಶಿ. ಅಂದು ಅರಸು ಪರಿವಾರದವರು ಅಭ್ಯಂಜನ ಸ್ನಾನ ಮಾಡಿ ಮನೆದೇವರಿಗೆ ಪೂಜೆಯನ್ನು ಸಲ್ಲಿಸುತ್ತಿದ್ದರು. ಮಾರನೆಯ ದಿನ ಅಮಾವಾಸ್ಯೆ. ಅಂದು ತಮ್ಮ ದಿನನಿತ್ಯದ ಪೂಜೆಯೊಂದಿಗೆ ಪಿತೃಗಳಿಗೆ ತಿಲಕ ದರ್ಪಣ ನೀಡಿ, ಬ್ರಾಹ್ಮಣರಿಗೆ ಭೂದಕ್ಷಿಣೆ ನೀಡುವ ಸಂಪ್ರದಾಯ ಹೊಂದಿದ್ದರು. ಸುರಪುರದ ಅರಸ ಪಾಮನಾಯಕ ತನ್ನ ಮಾತಾಪಿತೃಗಳಿಗೆ ಪುಣ್ಯಲಭಿಸಲೆಂದು ಬ್ರಾಹ್ಮಣರಿಗೆ ದೀಪಾವಳಿಯ ದಿನದಂದು ಭೂಮಿಯನ್ನು ಇನಾಮಾಗಿ ನೀಡಿದ್ದನು. ಈ ಪದ್ಧತಿ ಕೊನೆಯ ಅರಸ ರಾಜಾ ಕೃಷ್ಣಪ್ಪನಾಯಕರವರೆಗೂ ಮುಂದುವರೆದಿತ್ತು.[೧೩೭]

ಮೂರನೆಯ ದಿನ ಬಲಿಪಾಡ್ಯಮಿ. ಇದನ್ನು ಅರಮನೆಯಲ್ಲಿ ಬಹಳ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಪೂರ್ಣಪ್ರಮಾಣದಲ್ಲಿ ಅರಮನೆಯನ್ನು ದೀಪದಿಂದ ಬೆಳಗಿಸಲಾಗುತ್ತಿತ್ತು. ಅರಮನೆಯ ಆವರಣದಲ್ಲಿನ ಎಲ್ಲಾ ದೇವಾಲಯಗಳಲ್ಲಿ ವಿಶೇಷ ಪೂಜೆಗಳು ಜರುಗುತ್ತಿದ್ದವು. ಅರಮನೆಯ ಕಲ್ಯಾಣ ಮಂಟಪದಲ್ಲಿ ಒಂದು ಭದ್ರಾಸನವನ್ನು ನಿರ್ಮಿಸುತ್ತಿದ್ದರು. ಅದರ ಮೇಲೆ ಬಲೀಂದ್ರನನ್ನು ಸ್ಥಾಪಿಸಿ ಪೂಜಿಸುತ್ತಿದ್ದರು. ಸುರಪುರ, ಕನಕಗಿರಿ, ಗುಡಗುಂಟಿಯಲ್ಲಿ ಬಲೀಂದ್ರನ ಕಥೆಯನ್ನು ಅರಮನೆಯಲ್ಲಿ ಪುರೋಹಿತರಿಂದ ವಾಚಿಸುತ್ತಿದ್ದರು. ಬಲೀಂದ್ರನಿಗೆ ಅರಸರು ರಾಜಮರ್ಯಾದೆಯಿಂದ ಪೂಜೆ ಸಲ್ಲಿಸುವಾಗ ಎಕ್ಕದಹೂವನ್ನು ಬಳಸುತ್ತಿದ್ದರು. ಕೊನೆಯಲ್ಲಿ ಎಲ್ಲರಿಗೂ ತೀರ್ಥ ಪ್ರಸಾದ ವಿನಿಯೋಗ ನಡೆಯುತ್ತಿತ್ತು.

ಗುಡಗುಂಟಿಯ ಅರಸ ರಾಜಾಸೋಮಪ್ಪನಾಯಕರು ದೀಪಾವಳಿಯ ದಿನ ಬ್ರಾಹ್ಮಣರಿಗೆ ಒಂದು ಹಿತ್ತಾಳೆಯ ದೀಪವನ್ನು ಹತ್ತಿಸಿ ದಾನ ನೀಡಿದ್ದನು. ಇಂದಿಗೂ ಇದು ಆ ವಂಶಜರಲ್ಲಿ ಇದೆ.[೧೩೮] ಇದನ್ನು ಚಂದ್ರದೀಪದಾನ ಎಂದು ಕರೆಯುತ್ತಾರೆ. ತಮ್ಮ ಮನೆತನದ ಪಾಪಕರ್ಮಗಳು ನಿವಾರಣೆಯಾಗಲಿ ಎಂಬುದೇ ಇದರ ಉದ್ದೇಶವಾಗಿತ್ತು. ಲಕ್ಷ್ಮಿ ಪೂಜೆಯ ಪ್ರತೀಕವಾಗಿ ಆಚರಿಸಲ್ಪಡುವ ಈ ಹಬ್ಬದ ದಿನದಂದು ಅರಸೊತ್ತಿಗೆಯ ಖಜಾನೆಗೂ ವಿಶೇಷ ಪೂಜೆಯನ್ನು ಸಲ್ಲಿಸಲಾಗುತ್ತಿತ್ತು. ಸುರಪುರದ ಅರಸರು ಜಮದರಖಾನಿ, ಜಕಾತಿಮಹಲು, ಪಾಗಾ, ದಫ್ತರಖಾನಿ ಮುಂತಾದ ಆಡಳಿತದ ಅಧಿಕಾರ ವರ್ಗದವರಿಗೆ ಲಕ್ಷ್ಮಿ ಪೂಜೆಯ ಕಾಲದಲ್ಲಿ ಧೋತರಜೋಡು, ಸೀರೆ, ಕುಪ್ಪಸಗಳು ಮತ್ತು ಊಟದ ಸಲುವಾಗಿ ಪಡಿಯನ್ನು ದರ್ಬಾರದಿಂದ ನೀಡಲಾಗುತ್ತಿತ್ತು. ಒಂದುಕಾಲಕ್ಕೆ ಅರಸು ಮನೆತನದವರು ವಿಶೇಷ ರೀತಿಯಿಂದ ಆಚರಿಸಲ್ಪಡುತ್ತಿದ್ದ ಈ ಹಬ್ಬ ಇಂದು ಒಂದು ಸಾಮಾನ್ಯ ಹಬ್ಬವಾಗಿ ಉಳಿದಿದೆ.

### ೩.೪.೧.೫ ಮಹಾಶಿವರಾತ್ರಿ

ಶಿವನ ಆರಾಧನೆಗೆ ಮೀಸಲಾಗಿದ್ದ ಈ ಹಬ್ಬವನ್ನು ನಾಯಕ ಅರಸರು ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಿದ್ದರು. ಅದರಲ್ಲೂ ಚಿತ್ರದುರ್ಗ, ಆನೆಗೊಂದಿ, ಸುರಪುರ, ಕನಕಗಿರಿ, ದೇವದುರ್ಗದವರು ಶ್ರೀವೈಷ್ಣವರಾದರೂ ಈ ಹಬ್ಬದ ದಿನದಂದು, ಅರಮನೆಯಲ್ಲಿ ಅರಸರು ಮತ್ತು ರಾಣಿಯರು ಬೆಳಿಗ್ಗೆ ಅಭ್ಯಂಜನ ಸ್ನಾನ ಮಾಡಿ ಶಿವಪೂಜೆಯನ್ನು ನೆರವೇರಿಸುತ್ತಿದ್ದರು. ಸುರಪುರದ ಅರಸ ರಾಜಾ ಮುಮ್ಮಡಿ ಪಾಮನಾಯಕ ಬ್ರಾಹ್ಮಣರಿಗೆ ಜೋಡಿ ಬೆಳ್ಳಿದೀಪಗಳನ್ನು ದಾನಮಾಡಿದ್ದರು. ಶಿವರಾತ್ರಿಯ ಉತ್ಸವಕ್ಕಾಗಿ, ದೇವದುರ್ಗದ ಅರಸರು, ದೊಂಡಂಬಳಿ ಕರಿಗುಡ್ಡ, ನವಿಲುಗುಡ್ಡ ಹಳ್ಳಿಗಳನ್ನು ದಾನ ಮಾಡಿದ್ದರು.[೧೩೯]

ರಾತ್ರಿಯಿಡೀ ಶಿವಧ್ಯಾನದೊಂದಿಗೆ ಜಾಗರಣೆ ಮಾಡುತ್ತಿದ್ದರು. ಉಪವಾಸ ವ್ರತಗಳನ್ನು ಆಚರಿಸುತ್ತಿದ್ದರು. ಗುಡಗುಂಟಿಯ ಅರಸರು, ಶಿವರಾತ್ರಿಯ ಸಂದರ್ಭದಲ್ಲಿ ಸಕಲ ಧರ್ಮದವರನ್ನು ಆಮಂತ್ರಿಸಿ ಶಿವಯೋಗದಂದು ಭಜನೆ, ಕೀರ್ತನೆ, ಜಾಗರಣೆಗಳನ್ನು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ತಮ್ಮ ಸಂಸ್ಥಾನದ ನಾನಾ ಭಾಗದ ಜನರು ಉಂಡು ತಣಿಯುತ್ತಿದ್ದರು. ಈ ಸಂದರ್ಭದಲ್ಲಿ ಸರ್ವಧರ್ಮದ ಪಂಡಿತರಿಗೂ ವಿದ್ವಾಂಸರಿಗೂ ಕಲಾವಿದರಿಗೂ ಬಹುಮಾನಗಳನ್ನು ಕೊಟ್ಟು ಸತ್ಕರಿಸುತ್ತಿದ್ದರು.[೧೪೦]

### ೩.೪.೧.೬ ಶ್ರೀರಾಮನವಮಿ

ಚೈತ್ರಶುದ್ಧ ನವಮಿಯು ಶ್ರೀರಾಮನ ಜನ್ಮದಿನವಾಗಿರುವುದರಿಂದ ಶ್ರೀರಾಮನವಮಿಯನ್ನು ನಾಯಕ ಜನಾಂಗದ ಅರಸುಮನೆತನಗಳಲ್ಲಿ ಆಚರಿಸುತ್ತಿದ್ದರು. ಚಿತ್ರದುರ್ಗ, ಆನೆಗೊಂದಿ, ಗುಡೇಕೋಟೆ, ಕನಕಗಿರಿ ನಾಯಕ ಅರಸರು ಶ್ರೀರಾಮನ ಭಜನೆ, ಪೂಜಾಕಾರ್ಯಗಳನ್ನು ಯುಗಾದಿಯಿಂದ ಒಂಬತ್ತು ದಿನಗಳವರೆಗೆ ನಡೆಸುತ್ತಿದ್ದರು. ಆದರೆ ಸುರಪುರ, ದೇವದುರ್ಗ, ಗುಡಗುಂಟಿ, ಗುಂತಗೋಳದವರು

ನವಮಿಯಿಂದ ಮುಂದಿನ ಒಂಬತ್ತು ದಿನಗಳವರೆಗೆ ಶ್ರೀರಾಮನ ವ್ರತವನ್ನು ಆಚರಿಸುತ್ತಿದ್ದರು. ಸುರಪುರದವರು ಮತ್ತು ಆನೆಗೊಂದಿ ಅರಸರು ಪ್ರತಿವರುಷ ಸಂಗೀತ, ಹರಿಕಥೆಗಳ ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ಚಿತ್ರದುರ್ಗದ ಅರಸುಮನೆತನದಲ್ಲಿ ರಾಮಪಟ್ಟಾಭಿಷೇಕವನ್ನು ಮಾಡಿಸಿ, ರಾಮಾಯಣವನ್ನು ಪಾರಾಯಣ ಮಾಡಿಸುತ್ತಿದ್ದರು. ಪಾನಕ, ಕೋಸಂಬರಿ, ನೀರು, ಮಜ್ಜಿಗೆ ಪಂಚಾಮೃತಗಳನ್ನು ಅರಮನೆಯಲ್ಲಿ ಹಂಚುತ್ತಿದ್ದರು.[೧೪೧]

ಚೈತ್ರಮಾಸದ ಶುದ್ಧ ಪೂರ್ಣಿಮೆಯಂದು 'ಫಲಭೂಮಿ ಪೂರ್ಣಿಮೆ'ಯೆಂದು, ರಾಣಿಯರು ತುಳಸೀ ಪೂಜೆಯನ್ನು ಮಾಡುತ್ತಿದ್ದರು. ಪ್ರತೀಕವಾಗಿ ಇಂದಿಗೂ ಆನೆಗೊಂದಿ, ಸುರಪುರ, ಗುಡಗುಂಟಿ ಅರಸು ಮನೆತನದವರ ಮನೆಯ ಮುಂದೆ ವಿಶಾಲವಾದ ತುಳಸಿಕಟ್ಟೆ ಇರುವುದನ್ನು ಕಾಣಬಹುದಾಗಿದೆ. ಇವುಗಳಿಗೆ ಹಿಂದಿನ ರಾಣಿಯರು ಪೂಜೆ ಸಲ್ಲಿಸುತ್ತಿದ್ದರು. ಅದನ್ನು ಈಗಿನ ಅರಸುಮನೆತನದವರು ಮುಂದುವರೆಸಿರುವುದನ್ನು ನೋಡಬಹುದಾಗಿದೆ.

ಗೌರಿಹಬ್ಬ, ಮಂಗಳಗೌರಿ ಹಬ್ಬ, ಸೀಗೆ ಹುಣ್ಣಿಮೆ, ಶ್ರಾವಣ ಶನಿವಾರ, ಪ್ರಥಮ ಏಕಾದಶಿ, ಉತ್ಥಾನದ್ವಾದಶಿ, ನಾಗರಪಂಚಮಿ, ಮಣ್ಣೆತ್ತಿನ ಅಮಾವಾಸ್ಯೆ, ಎಳ್ಳು ಅಮಾವಾಸ್ಯೆ, ಮಕರ ಸಂಕ್ರಮಣ ಹಬ್ಬಗಳನ್ನು ಎಲ್ಲಾ ನಾಯಕ ಜನಾಂಗದ ಅರಸರು ಆಚರಿಸುತ್ತಿದ್ದರು. ಸುರಪುರ ನಾಯಕ ಅರಸರು ನಾಗಪಂಚಮಿ ಹಬ್ಬಕ್ಕೆ ಎಲ್ಲ ೧೪ ಕೇರಿಯ ಬೇಡರಿಗೆ ಕೇರಿ ಒಂದಕ್ಕೆ ೨ ಮಣ ಕೊಬ್ಬರಿ ಮತ್ತು ೪ ಮಣ ಬೆಲ್ಲ ಕೊಡುತ್ತಿದ್ದರು. ಅಲ್ಲದೆ ಇದರಂತೆ ಯುಗಾದಿ, ಮಹಾನವಮಿ, ಗ್ರಾಮದೇವತೆಯ ಉತ್ಸವದ ಕಾಲದಲ್ಲಿ ಸಂಸ್ಥಾನದ ಠರಾವಿನ ಪ್ರಕಾರ ಎಲ್ಲರಿಗೂ ಪಡಿಕೊಡಲಾಗುತ್ತಿತ್ತು. ಅದರಲ್ಲೂ ವಿಶೇಷವಾಗಿ ಅಂತಃಪುರದ ರಾಣಿವಾಸದವರು ಇವುಗಳನ್ನು ಆಚರಿಸುತ್ತಿದ್ದುದು ಅವರಿಗೆ ಖರ್ಚಿನ ಸಲುವಾಗಿ ಸುರಪುರದ ಅರಸರು ಈ ರೀತಿ ಹಬ್ಬದ ಠರಾವನ್ನು ನಿಗದಿಗೊಳಿಸಿದುದು ತಿಳಿದುಬರುತ್ತದೆ.

ನಾಗರಪಂಚಮಿ - ರೂ.೫೦೦, ಗೋಕುಲ ಅಷ್ಟಮಿ - ರೂ.೨೫೦, ವೃಂದಾವನ ಪೂಜೆ - ರೂ.೨೫೦, ಸಂಕ್ರಾಂತಿ ಹಬ್ಬ - ರೂ.೨೦೦, ರಾಮನವಮಿ - ರೂ.೧೫೦, ಮಾರ್ನವಮಿ - ರೂ.೪೫೦, ಗೌರಿ ಮತ್ತು ದವನದ ಹುಣ್ಣಿಮೆಗಳ ಉಪವಾಸ ಪಾರಣೆಗಳ ಸಲುವಾಗಿ - ರೂ.೧೦೮, ದೀಪಾವಳಿ - ರೂ.೧೨೦೦, ಯುಗಾದಿ - ರೂ.೧೫೦೦, ಗ್ರಹಣ ಕಾಲದಲ್ಲಿ ದಕ್ಷಿಣೆ ಕೊಡಲು - ರೂ.೧೦೦, ಶುಕ್ರವಾರ ಲಕ್ಷ್ಮಿ ಪೂಜೆಗಾಗಿ - ರೂ.೪೦, ಶ್ರಾವಣದ ವರಮಹಾಲಕ್ಷ್ಮೀ ಪೂಜೆಗಾಗಿ - ರೂ.೩೦೦[೧೪೨] ಒಟ್ಟು ೫೩೦೩ರೂ.ಗಳು.

ಈ ಹಬ್ಬಗಳೆಲ್ಲ ನಾಯಕ ಅರಸು ಮನೆತನದವರ ಕುಟುಂಬದಲ್ಲಿ ವಿಶಿಷ್ಟ ರೀತಿಯಿಂದ ಆಚರಿಸುವಂತಹವುಗಳಾಗಿವೆ. ವರ್ಷದಲ್ಲಿ ಬರುವ ಅಮಾವಾಸ್ಯೆ, ಹುಣ್ಣಿಮೆಗಳನ್ನು ಸಾಮಾನ್ಯ ರೀತಿಯಲ್ಲಿ ಆಚರಿಸುತ್ತಿದ್ದರು. ಇಂದಿನ ವಂಶಸ್ಥರು ತಮ್ಮ ಹಿರಿಯ ಸಂಪ್ರದಾಯವನ್ನು ಇಂದು ತಮ್ಮ ಸಾಮರ್ಥ್ಯಕ್ಕೆ ನಿಲುಕಿದಷ್ಟು ಮುಂದುವರೆಸಿಕೊಂಡು ಹೊರಟಿರುವುದು ವಿಶೇಷವಾಗಿದೆ.

## ೩.೪.೨ ಉತ್ಸವಗಳು

ಸಾರ್ವಜನಿಕವಾಗಿ ಅನೇಕ ಉತ್ಸವಗಳಲ್ಲಿ ಈ ಮನೆತನದವರು ಪಾಲ್ಗೊಂಡು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದುದುಂಟು. ಚಿತ್ರದುರ್ಗದ ಅರಸರ ಪೂರ್ವದಲ್ಲಿ ಪ್ರಾರಂಭವಾಗಿ, ಅರಸರ ಕಾಲದಲ್ಲೂ ಮುಂದುವರೆದು ಇಂದಿಗೂ ನಡೆಯುತ್ತ ಬಂದಿರುವ ಏಕನಾಥೇಶ್ವರಿಯ 'ಸಿಡಿ' ಉತ್ಸವ ಪ್ರಮುಖವಾದುದು. ಇದು ಪ್ರತಿವರ್ಷ ಯುಗಾದಿಯ ನಂತರ ೧೫ ದಿನಗಳಿಗೆ ಬರುವ ಶನಿವಾರದಂದು ಜಾತ್ರೆ ನಡೆಯುತ್ತದೆ. ಆ ಜಾತ್ರೆಯ ಅಂಗವಾಗಿ, 'ಸಿಡಿ' ಉತ್ಸವ ನಡೆಯುತ್ತದೆ. ಸಿಡಿ ಎಂದರೆ ಸುಮಾರು ಆರೇಳು ಅಡಿ ಎತ್ತರದ ಬಲವಾದ ಮರದ ಕಂಬವನ್ನು ನೆಟ್ಟು ಅದರ ಮೇಲೆ ಸುಲಭವಾಗಿ ತಿರುಗಬಲ್ಲ ಚೌಕಾಕಾರದಿಂದ ಮಾಡಿದ ತಿರುಗಣೆಗೆ ಸುಮಾರು ಮೂವತ್ತು ಅಡಿ ಉದ್ದದ ಮರದ ತೊಲೆಯೊಂದನ್ನು ಅಡ್ಡವಾಗಿ ಅಳವಡಿಸಿರುತ್ತಾರೆ. ಇದನ್ನು ಹೂವು ಸೊಪ್ಪುಗಳಿಂದ ಶೃಂಗರಿಸಿರುತ್ತಾರೆ. ಇದರ ಕೆಳಭಾಗದಲ್ಲಿ ಮುಖ ಅಡಿಮಾಡಿ ಸಿಡಿ ಆಡುವ ಭಕ್ತನ ಸೊಂಟಕ್ಕೂ ಕಂಬಕ್ಕೂ ಬಟ್ಟೆಗಳ ಸಹಾಯದಿಂದ ಮೂರು ಸುತ್ತು ತಿರುಗಿಸುತ್ತಾರೆ. ಸಿಡಿ ಆಡುವ ಭಕ್ತನು ಬೇವಿನ ಉಡುಗೆ ತೊಟ್ಟಿದ್ದು ಸುತ್ತು ಬರುತ್ತಾ ದೇವಿಗೆ ವಂದನೆಗಳನ್ನು ಮಾಡುತ್ತಾ ಕೈಕಾಲುಗಳನ್ನು ಆಡಿಸುತ್ತಿರುತ್ತಾನೆ.[೧೪೩] ಆ ಸಂದರ್ಭದಲ್ಲಿ ನೆರೆದ ಭಕ್ತರು ತಮಟೆ, ಕಹಳೆ, ಡೋಲುಗಳನ್ನು ಬಾರಿಸುತ್ತಿರುತ್ತಾರೆ. ಇದರಿಂದ ಭಕ್ತರಲ್ಲಿಯ ಭಯ ಮಾಯವಾಗಿ ಭಕ್ತಿ-ಭಾವಗಳು ತುಂಬುತ್ತವೆ. ಸಿಡಿಯಲ್ಲಿ ಪಾಲ್ಗೊಂಡ ಭಕ್ತರಲ್ಲದೆ ಹರಕೆ ಮಾಡಿಕೊಂಡ ಅನೇಕರೂ ಸಿಡಿಯಾಡುತ್ತಾರೆ. ಪ್ರಾಯಶಃ ಚಿತ್ರದುರ್ಗವನ್ನಾಳಿದ ನಾಯಕರಿಗಿಂತ ಮುಂಚೆ ನೆಲೆಸಿದ್ದ ನಾಥರ, ಸಿದ್ಧರ ಸಂಸ್ಕೃತಿ ಇದಾಗಿರಬೇಕೆಂಬ ಅಭಿಪ್ರಾಯವನ್ನು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಚಿತ್ರದುರ್ಗದ ಅರಸರು ವಿಶೇಷವಾಗಿ ಉಚ್ಚಂಗಮ್ಮ ಮತ್ತು ಏಕನಾಥೇಶ್ವರಿ ದೇವತೆಗಳಿಗೆ ನಡೆದುಕೊಂಡಿರುವುದುಂಟು. ಇಮ್ಮಡಿ ಮದಕರಿನಾಯಕನ ಕಾಲದಲ್ಲಿ ಏಕನಾಥಮ್ಮದೇವಿಗೆ ಮರವಂಜಿ ಗ್ರಾಮದಿಂದ ಬಾಣದ ಲಿಂಗಯ್ಯನ ಮೂಲಕ ಸಿಡಿಕಂಬವನ್ನು ತರಿಸಿ ಚೈತ್ರಮಾಸದಲ್ಲಿ ಸಿಡಿ ಆಚರಿಸಲಾಯಿತು.[೧೪೪] ಭರಮಣ್ಣನಾಯಕನ ಕಾಲದಲ್ಲಿ ಏಕನಾಥಮ್ಮನ ಪಾದದ ಗುಡಿ ಆದಾಗ, ಅಮ್ಮನವರಿಗೆ ರಥೋತ್ಸವ ಬಂಡಿಸಿಡಿ ಕೂಡಾ ಆಚರಿಸಲಾಯಿತು. ಬೆನ್ನಿಗೆ ಕೊಂಡಿ ಚುಚ್ಚಿಕೊಂಡು ಉಚ್ಚಂಗಮ್ಮನ ಸಿಡಿ ಆಡುವ ಸೇವೆಗಾಗಿ ಭರಮಣ್ಣನಾಯಕ ದಾನದತ್ತಿ ನೀಡಿ ಹಿತ್ತಾಳೆ ಚೌಡಿಕೆಯನ್ನು ಮಾಡಿಸಿಕೊಟ್ಟಿದ್ದಾನೆ. ಅದರ ಮೇಲೆ ೩೩ ಸಾಲಿನ ಶಾಸನ ಕೆತ್ತಲಾಗಿದೆ.[೧೪೫] ಚಿತ್ರದುರ್ಗ ರಾಜವಂಶಸ್ಥರಾದ ಪಿ.ಆರ್.ವೀರಭದ್ರನಾಯಕರು, ಚಿತ್ರದುರ್ಗದ ಅರಸರೂ ಈ ಉತ್ಸವದಲ್ಲಿ ಭಾಗವಹಿಸುತ್ತಿದ್ದರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಸಿಡಿ ಉತ್ಸವದ ನಂತರ ಮಂಗಳವಾರದಂದು ನಡೆಯುವುದೇ ಭೇಟಿ ಉತ್ಸವ. ಚಿತ್ರದುರ್ಗ ನಗರದ ಇನ್ನೆರಡು ಮುಖ್ಯ ಶಕ್ತಿದೇವತೆಗಳಾದ ಬರಗೇರಮ್ಮ (ಈಕೆ ಶಕ್ತಿ ಹಾಗೂ ಕ್ರೌರ್ಯ ದೇವತೆಯಂತೆ)

ಹಾಗೂ ತಿಪ್ಪನಗಟ್ಟಮ್ಮ (ಈಕೆ ಶಾಂತಿ ಮತ್ತು ಸೌಮ್ಯದೇವತೆ). ಈ ಎರಡೂ ದೇವತೆಗಳು ಚಿತ್ರದುರ್ಗದ ಬೇರೆ ಬೇರೆ ದಿಕ್ಕಿಗೆ ಇವೆ. ತಲಾ ಎರಡೆರಡು ದೇವಾಲಯಗಳಿವೆ. ತಿಪ್ಪನಗಟ್ಟಮ್ಮ ದೇವಾಲಯ ಚಿತ್ರದುರ್ಗದ ಪೂರ್ವಭಾಗದ ಜೋಗಿಮಟ್ಟಿ ರಸ್ತೆಯ ಬದಿಯಲ್ಲಿದೆ. ಬರಗೇರಮ್ಮನ ದೇವಾಲಯ ಚಿತ್ರದುರ್ಗದ ಪಶ್ಚಿಮಭಾಗದಲ್ಲಿ ಹೊಳಲ್ಕೆರೆರಸ್ತೆಯ ಬದಿಯಲ್ಲಿದೆ. ಈ ಎರಡು ದೇವತೆಗಳು ವರ್ಷಕ್ಕೊಮ್ಮೆ ಮೆರವಣಿಗೆಯಲ್ಲಿ ಎದುರುಬದುರಾಗಿ ಭೇಟಿಯಾಗಿ ಅಗಲುವ ವಿಶಿಷ್ಟ ಜನಪದ ಹಬ್ಬ ಭೇಟಿ ಉತ್ಸವ. ಈ ದೇವತೆಗಳು ಪ್ರಾಯಶಃ ಪಾಳೆಯಗಾರರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಜಾನಪದ ಮೂಲದ ದೇವತೆಗಳೆಂದು ಕಾಣುತ್ತದೆ.[೧೪೬] ಅಂದಿನ ಈ ಹಬ್ಬದಲ್ಲಿಯೂ ಚಿತ್ರದುರ್ಗದ ಅರಸರ ಭಾಗವಹಿಸುವಿಕೆ ಇರಬಹುದಾಗಿದೆ. ಏಕೆಂದರೆ ಈ ದೇವತೆ ಚಿತ್ರದುರ್ಗದ ಪಾಳೆಯಗಾರರ ಕಾಲದಿಂದ (ಕ್ರಿ.ಶ. ೧೫೬೮ರಿಂದ) ಚಿತ್ರದುರ್ಗದ ದುರ್ಗಾಭಿಮಾನಿ ದೇವತೆಯಾಗಿದ್ದಳು.

ಉಚ್ಚಂಗಮ್ಮ ಅಥವಾ ಉತ್ಸವಾಂಬೆ ಚಿತ್ರದುರ್ಗ ನಾಯಕ ಅರಸರ ಕುಲದೇವತೆ ಹಾಗೂ ಮನೆದೇವತೆಯಾಗಿದ್ದಾಳೆ. ಈಕೆ ಮೊದಲು ಉಚ್ಚಂಗಿಯಲ್ಲಿದ್ದಳು. ಚಿತ್ರದುರ್ಗದ ಮೊದಲ ಅರಸ ಮತ್ತಿತಿಮ್ಮಣ್ಣನಾಯಕ (ಕ್ರಿ.ಶ. ೧೫೬೮-೧೫೮೮) ತನ್ನ ಮಗಳಾದ ಹೊನ್ನಮ್ಮನಾಗತಿಯನ್ನು ಹರಪನಹಳ್ಳಿಯ ಮೂಲಪುರುಷ ದಾದನಾಯಕನಿಗೆ ಕೊಟ್ಟಾಗ ಮದುವೆಯ ಉಡುಗೊರೆಯಾಗಿ ಉಚ್ಚಂಗಿಯನ್ನು ನೀಡುತ್ತಾನೆ. ತದನಂತರದಲ್ಲಿ ಆಕೆ ದುರ್ಮರಣಕ್ಕೀಡಾಗುತ್ತಾಳೆ. ಆಗ ಚಿತ್ರದುರ್ಗ ಹರಪನಹಳ್ಳಿಯವರ ನಡುವಿನ ಬಾಂಧವ್ಯ ಕೆಡುತ್ತದೆ. ಆಗ ಚಿತ್ರದುರ್ಗದ ಅರಸರಿಗೆ ಆರಾಧ್ಯ ದೇವತೆಯ ದರ್ಶನವಿಲ್ಲದಂತಾಗುತ್ತದೆ. ಕೆಲದಿನಗಳಾದ ಮೇಲೆ ಇಮ್ಮಡಿ ಮದಕರಿನಾಯಕ (ಕ್ರಿ.ಶ. ೧೬೫೨-೧೬೭೪)ನಿಗೆ ಮಕ್ಕಳಿಲ್ಲದಾಗ ಉಚ್ಚಂಗಮ್ಮನಿಗೆ 'ಇದಿರೆತ್ತಿ' ಪೂಜೆ ಮಾಡುತ್ತಾನೆ. ಆತನ ಮಡದಿ ಬೇವಿನ ಸೀರೆಯ ಹರಕೆ ಒಪ್ಪಿಸುತ್ತಾಳೆ. ಆಗ ಅವರಿಗೆ ಒಂದು ಹೆಣ್ಣುಮಗು ಜನಿಸುತ್ತದೆ. ಆಗ ಅವರಿಗೆ ಉಚ್ಚಂಗಮ್ಮ ಕನಸಿನಲ್ಲಿ ಬಂದು ದುರ್ಗಕ್ಕೆ ಕರೆದುಕೊಂಡು ಹೋಗಲು ಹೇಳುತ್ತಾಳೆ. ಆಗ ನಾಯಕ ಉಚ್ಚಂಗಿಯಲ್ಲಿದ್ದ ಉತ್ಸವ ಮೂರ್ತಿಯನ್ನು ಚಿತ್ರದುರ್ಗಕ್ಕೆ ತರಿಸಿ ಮರದ ಗುಡಿಯನ್ನು ಕಟ್ಟಿಸುತ್ತಾನೆ. ನಂತರದಲ್ಲಿ ಭರಮಣ್ಣನಾಯಕ (ಕ್ರಿ.ಶ. ೧೬೮೯-೧೭೨೧) ಮತ್ತು ಹಿರೇ ಮದಕರಿನಾಯಕ (ಕ್ರಿ.ಶ. ೧೭೨೧-೧೭೪೮) ದೇವಾಲಯವನ್ನೂ ಕಟ್ಟಿಸುತ್ತಾರೆ. ಹೀಗಾಗಿ ಈ ದೇವತೆ ಅಂದಿನಿಂದ ಚಿತ್ರದುರ್ಗದ ಅರಸರಿಗೆ ಕುಲದೇವತೆ ಮತ್ತು ನಗರ ದೇವತೆಯಾಗುತ್ತಾಳೆ.[೧೪೭] ಈಕೆಯನ್ನು ರೇಣುಕಾ, ಎಲ್ಲಮ್ಮ ಎಂತಲೂ ಕರೆಯುವುದುಂಟು. ಉಚ್ಚಂಗಮ್ಮನಿಗೆ ದಸರಾಹಬ್ಬದ ಒಂಬತ್ತುದಿನಗಳಲ್ಲಿ ವಿಶೇಷಪೂಜೆ ನಡೆಯುತ್ತಿತ್ತು. ದೇವಿಯ ಮೂರ್ತಿಯನ್ನು ನವರಂಗ ಮಂಟಪದಲ್ಲಿ ಸ್ಥಾಪಿಸಿ ಈಕೆಗೆ ವಿಜಯದಶಮಿಯ ದಿನದಂದು ಕೆಂಡಾರ್ಚನೆ ಉತ್ಸವ ನಡೆಸುತ್ತಿದ್ದರು.

ದುರ್ಗದ ಉತ್ಸವಗಳಲ್ಲಿ ವೆಂಕಟರಮಣ ಉತ್ಸವವೂ ಪ್ರಾಮುಖ್ಯತೆಯನ್ನು ಪಡೆದಿದೆ. ನವರಾತ್ರಿಯ ವಿಜಯದಶಮಿಯಂದು ನಡೆಯುವ ಈ ರಥೋತ್ಸವದಲ್ಲಿ ಜಾತಿ-ಮತ-ಭೇದವಿಲ್ಲದೆ ಅಸಂಖ್ಯಾತ ಜನ

ಪಾಲ್ಗೊಳ್ಳುತ್ತಾರೆ. ಇದರ ಒಂದು ವಿಶೇಷವೆಂದರೆ ನಾಯಕ ಜನಾಂಗದವರು ನಿಶಾನಿಗಳನ್ನಿಡಿಯದೆ ಈ ರಥೋತ್ಸವವು ಜರುಗುವುದಿಲ್ಲ. ಇದು ಚಿತ್ರದುರ್ಗ ನಾಯಕ ಅರಸರ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ.[೧೪೮] ಚಿತ್ರದುರ್ಗದ ಅರಸರು ಈ ಉತ್ಸವದಲ್ಲಿ ಭಾಗವಹಿಸುತ್ತಿದ್ದರು.

ಹಾಗೆಯೇ ಚಿತ್ರದುರ್ಗದ ಅರಸರ ಆರಾಧ್ಯದೇವ ಬೆಟ್ಟದ ಮೇಲಿರುವ ಶ್ರೀವೇಣುಗೋಪಾಲ ರಥೋತ್ಸವ. ಪ್ರತಿವರ್ಷ ಮಾಘ ಪೌರ್ಣಿಮೆಯ ದಿನ ನಡೆಯುತ್ತದೆ. ಮರಗಾಲು ಉತ್ಸವವನ್ನು ಚಿತ್ರದುರ್ಗದ ದೊಡ್ಡಗರಡಿಯವರು ಪ್ರತಿವರ್ಷ ನೂಲುಹುಣ್ಣಿಮೆಯ ದಿನ ಮಾಡುತ್ತಾರೆ. ಉತ್ಸಾಹಿ ಯುವಕರು ೫ ಅಡಿಯಿಂದ ೨೦ ಅಡಿ ಎತ್ತರದ ಮರಗಾಲುಗಳನ್ನು ಕಟ್ಟಿಕೊಂಡು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೋಗುವರು. ಪಲ್ಲಕ್ಕಿಯಲ್ಲಿ ಶ್ರೀಕೃಷ್ಣ, ಹನುಮಂತ ದೇವರುಗಳ ಮೂರ್ತಿಗಳಿರುತ್ತವೆ. ಚಿತ್ರದುರ್ಗದ ಅರಸರಿಂದ ಪೋಷಿಸಲ್ಪಟ್ಟ ಉತ್ಸವ ಇದಾಗಿದೆ.[೧೪೯] ಹಾಗೆಯೇ ಗಣಪತಿ ಉತ್ಸವ, ಶ್ರೀದೇವಿಯ ಉತ್ಸವ, ಮೊಹರಂ, ಮುಂತಾದವುಗಳನ್ನು ಚಿತ್ರದುರ್ಗದ ನಾಯಕ ಅರಸರು ನಾನಾ ಪಂಥದವರು ಜನಾಂಗದವರ ದೇವರುಗಳ ಉತ್ಸವಗಳನ್ನು ನಡೆಯಲು ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸಿದ್ದಾರೆ.[೧೫೦]

ಹಾಗೆಯೇ ಇಂದು ರಾಜ ಬಿಚ್ಚುಗತ್ತಿ ಭರಮಣ್ಣನಾಯಕ(ಕ್ರಿ.ಶ. ೧೬೮೯-೧೭೨೧)ನು ಮುರುಘರಾಜೇಂದ್ರ ಸ್ವಾಮಿಗಳವರಿಗೆ 'ಬೃಹನ್ಮಠ'ವನ್ನು ಕಟ್ಟಿಸಿಕೊಟ್ಟಂದಿನಿಂದ[೧೫೧] ಅವರು ಚಿತ್ರದುರ್ಗದ ಅರಸರಿಗೆ ರಾಜಗುರುಗಳಾದರು. ಈ ಮಠದಲ್ಲಿ ದಸರಾದ ಅವಧಿಯಲ್ಲಿ ಪ್ರತಿವರ್ಷ ಶರಣ ಸಂಸ್ಕೃತಿ ಉತ್ಸವವನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಕೋಟೆಯೊಳಗಿನ ಶ್ರೀಮುರುಘರಾಜೇಂದ್ರಮಠದ ಆವರಣದಲ್ಲಿ ಚಿತ್ರದುರ್ಗದ ರಾಜವಂಶಸ್ಥರು ಮಹಾಸ್ವಾಮಿಗಳಿಗೆ ಭಕ್ತಿ ಸಮರ್ಪಣೆ ಮಾಡುವರು. ಸ್ವಾಮೀಜಿಯವರೂ ಆ ಮನೆತನದವರಿಗೆ ಸನ್ಮಾನಿಸಿ ಗೌರವಿಸುವ ಸಂಪ್ರದಾಯ ಇಂದಿಗೂ ಮುನ್ನಡೆದಿದೆ. ಇದು ಅರಮನೆ ಮತ್ತು ಗುರುಮನೆಗಳಿಗಿದ್ದ ಅಂದಿನ ಅನ್ಯೋನ್ಯ ಸಂಬಂಧವನ್ನು ತಿಳಿಸುತ್ತದೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯಲ್ಲಿಯ ಚಳ್ಳಕೇರಮ್ಮನ ಉತ್ಸವವು ಪ್ರತಿವರ್ಷ ವೈಶಾಖಮಾಸದಲ್ಲಿ ನಡೆಯುತ್ತದೆ. ಈ ದೇವಿಯು ಬ್ರಾಹ್ಮಣಿಯಾದ್ದರಿಂದ ಊರ ಬ್ರಾಹ್ಮಣರು ಜಾತ್ರೆಗೆ ಎರಡು ದಿನ ಮೊದಲೇ ದೇವಿಗೆ ಪೂಜೆ ಸಲ್ಲಿಸುವರು. ಕೀಳುಜಾತಿಯವನು ಈಕೆಯನ್ನು ಮದುವೆಯಾದ್ದರಿಂದ ಊರಿನ ಬ್ರಾಹ್ಮಣೇತರರು ಜಾತ್ರೆಯ ದಿನ ದೇವಿಗೆ ಬಲಿ ಅರ್ಪಿಸಿ, ಕಡಿದ ಕೋಣದ ಕೊಬ್ಬಿನಿಂದ ಜೋತಿರ್ಗಂಬದ ಮೇಲೆ ಜ್ಯೋತಿಯನ್ನು ಬೆಳಗಿಸುತ್ತಾರೆ. ಇದರಿಂದ ಮೋಸ ಮಾಡಿ ತನ್ನನ್ನು ಮದುವೆಯಾದ ಗಂಡನಿಗೆ ತಕ್ಕ ಶಿಕ್ಷೆಯಾಯಿತೆಂದು ದೇವಿಗೆ ತೃಪ್ತಿಯಾಗುವುದಂತೆ. ಜಾತ್ರೆಯ ದಿನ ದೇವಿಯ ಮಾಂಗಲ್ಯ ತೆಗೆಯುತ್ತಾರೆ. ಆಗ ಚಿತ್ರದುರ್ಗದ ನಾಯಕ ಅರಸರ ವಂಶಸ್ಥರ ಮನೆತನದ ದೇವತೆ ಚಳ್ಳಕೇರಮ್ಮನನ್ನು

ತಮ್ಮ ಕುಲದ ಮಗಳೆಂದು ಭಾವಿಸಿ, ತಾಳಿ ಕಳಿಸಿ ಕಟ್ಟಿಸುವ 'ತಾಳಿಭಾಗ್ಯ'ವನ್ನು ಈ ಮನೆತನದವರು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ.[೧೫೨] ಇದೊಂದು ವಿಶಿಷ್ಟ ಆಚರಣೆ. ಹಾಗೂ ಚಳ್ಳಕೇರಮ್ಮನ ಉತ್ಸವದಲ್ಲಿ ಮೊದಲನೆಯ ಪೂಜೆ ಚಿತ್ರದುರ್ಗದವ ಅರಸು ಮನೆತನದವರಿಂದಲೇ ನಡೆಯುತ್ತದೆ. ನಂತರ ಅರಸರ ಪಾಲೆಂದು ಬೇಳೆ, ಬೆಲ್ಲ, ಎಣ್ಣೆ, ಅಕ್ಕಿ, ಗೋಧಿ ಮುಂತಾದವುಗಳನ್ನು ರಾಜವಂಶಸ್ಥರಿಗೆ ಅರ್ಪಿಸುತ್ತಾರೆ.

ಹಿಂದೆ ವರ್ಷಕ್ಕೊಮ್ಮೆ ಚಿತ್ರದುರ್ಗದಲ್ಲಿ ವಸಂತೋತ್ಸವ ಎಂಬ ಹಬ್ಬವನ್ನು ಆಚರಿಸಲಾಗುತ್ತಿತ್ತು. ಆಗ ದೀಪಸ್ತಂಭದ ಪಕ್ಕದಲ್ಲಿರುವ ಕಲ್ಲುತೋರಣ ಅಥವಾ ಉಯ್ಯಾಲೆ ಕಂಬಕ್ಕೆ ಸರಪಳಿಯ ಸಹಾಯದಿಂದ ತೂಗುಮಣೆ ಕಟ್ಟಿ, ಅದರಲ್ಲಿ ಏಕನಾಥೇಶ್ವರಿ ವಿಗ್ರಹವನ್ನು ಕೂಡಿಸಿ ಸಂಭ್ರಮದಿಂದ ತೂಗುತ್ತಿದ್ದರು. ಉಯ್ಯಾಲೆ ಕಟ್ಟಲು ಬಳಸುತ್ತಿದ್ದ ಭಾರಿ ಸರಪಳಿಗಳನ್ನು ಈಗ ಏಕನಾಥೇಶ್ವರಿ ಗುಡಿಯಲ್ಲಿಡಲಾಗಿದೆ.[೧೫೩] ಅಲ್ಲದೇ ವಿಜಯನಗರದ ಇಮ್ಮಡಿ ಹರಿಹರನ ಕಾಲದಲ್ಲಿ ಮಾಂಡಲಿಕ ರಾಜರು ವಿರೂಪಾಕ್ಷ ವಸಂತೋತ್ಸವಕ್ಕೆ ಭಾಗವಹಿಸಿದ ಬಗ್ಗೆ ಅಹೋಬಲ ಪಂಡಿತನು ತನ್ನ 'ವಿರೂಪಾಕ್ಷ ವಸಂತೋತ್ಸವ ಚಂಪೂ' ಎಂಬ ಕಾವ್ಯದಲ್ಲಿ ಮಾಹಿತಿ ನೀಡುತ್ತಾನೆ. ಅದರಲ್ಲಿ ಚಿತ್ರದುರ್ಗದ ಅರಸನೂ ಭಾಗವಹಿಸಿದ್ದನು. ಇದರಿಂದ ಚಿತ್ರದುರ್ಗದ ಅರಸರು ವಸಂತೋತ್ಸವದಲ್ಲಿಯೂ ಭಾಗವಹಿಸುತ್ತಿದ್ದರೆಂಬುದನ್ನು ತಿಳಿಯಬಹುದಾಗಿದೆ.

ಸುರಪುರ ನಾಯಕ ಅರಸು ಮನೆತನದವರು ಆಚರಿಸುವ ಉತ್ಸವಗಳಲ್ಲಿ ಗೋಕುಳ ಅಷ್ಟಮಿಯ ಉತ್ಸವ ಬಹಳ ಪ್ರಮುಖವಾದುದು. ಇದರಲ್ಲಿ ಸ್ವತಃ ಸುರಪುರದ ಅರಸರು ತಮ್ಮ ರಾಜಕೀಯ ವೈಭವಗಳಿಂದ ಭಾಗವಹಿಸುತ್ತಿದ್ದರು. ಇದು ಸುರಪುರ ಸಂಸ್ಥಾನದ ಕಾಲದಿಂದಲೂ ಇಂದಿಗೂ ಅವಿಚ್ಛಿನ್ನವಾಗಿ ಮುಂದುವರೆದುಕೊಂಡು ಬಂದಿದೆ. ಶಾಲಿವಾಹನ ಶಕೆ ೧೬೩೫ ವಿಜಯನಾಮಿ ಸಂವತ್ಸರದ ಗೌರಿಹುಣ್ಣಿಮಯೆ ದಿನದಂದು (ಕ್ರಿ.ಶ. ೧೭೧೩) ಗುರುವಾರ, ಪೀತಾಂಬರ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೯೩-ಕ್ರಿ.ಶ. ೧೭೨೬)ನ ಕಾಲದಲ್ಲಿ ಸುರಪುರ ಸಂಸ್ಥಾನದ ಅರಸುಮನೆತನದ ಕುಲದೈವ ಶ್ರೀವೇಣು ಗೋಪಾಲಸ್ವಾಮಿಯ ದೇವಾಲಯ ನಿರ್ಮಾಣವಾಯಿತು. ಸುರಪುರದ ಅರಸರು ಶ್ರೀವೈಷ್ಣವ ಅನುಯಾಯಿಗಳಾದ್ದರಿಂದ ಸುರಪುರದಲ್ಲಿ ಕೃಷ್ಣಜನ್ಮಾಷ್ಟಮಿಗೆ ಮಹತ್ವ ನೀಡಿದರು. ಅತ್ಯಂತ ವಿಜೃಂಭಣೆಯಿಂದ ನಡೆಯುವ ಈ ಹಬ್ಬವನ್ನು 'ಹಾಲೋಕುಳಿ ಉತ್ಸವ' ಎಂತಲೂ ಕರೆಯುವರು.

ಶ್ರೀಕೃಷ್ಣ ಜಯಂತಿಯು ಶ್ರಾವಣಮಾಸದ ಕೃಷ್ಣಪಕ್ಷದಲ್ಲಿ ನಡೆಯುತ್ತದೆ. ಇದು ಕೆಲವು ನಿಯಮಾನುಗಳಿಗನುಸಾರ ನಿರ್ಣಯಿಸಲ್ಪಟ್ಟಿರುತ್ತದೆ. ಈ ನಿಯಮಗಳ ಪ್ರಕಾರ, ಸಿಂಹ ಸಂಕ್ರಮಣವಾಗಿರುವ ಶ್ರಾವಣಮಾಸದ ಕೃಷ್ಣಪಕ್ಷದ ರೋಹಿಣಿಯುಕ್ತ ಅಷ್ಟಮಿಯ ದಿನ ಚಂದ್ರೋದಯದ ಕಾಲಕ್ಕೆ ಶ್ರೀಹರಿಯ

ಅವತಾರವಾದ ಕಾರಣ ಅಂದೇ ಜಯಂತಿ ಆಚರಿಸತಕ್ಕದ್ದು. ಅಷ್ಟಮಿ ಅಥವಾ ರೋಹಿಣಿ ಇವುಗಳಿಗೆ ಯಾವುದಕ್ಕಾದರೂ ಕೂಡ ಸಪ್ತಮಿ ಇರಕೂಡದು. ಹಾಗಿದ್ದಾಗ ನವಮಿ ಅಥವಾ ದಶಮಿಯಂದು ಕಲಾಮಂತ್ರವಾದರೂ ಇರುವ ಅಷ್ಟಮಿ ರೋಹಿಣಿಗಳು ಪ್ರಾಪ್ತವಿದ್ದರೆ ಗ್ರಾಹ್ಯವೆಂದು ತಿಳಿಸಬೇಕು. ಒಂದು ವೇಳೆ ಶ್ರಾವಣ ಮಾಸದಲ್ಲಿ ಸಿಂಹ ಸಂಕ್ರಾಂತಿಯು ಸಂಭವಿಸದಿದ್ದಲ್ಲಿ ಸಂಕ್ರಾಂತಿ ಸಂಭವಿಸಿದ ತರುವಾಯ ಕೃಷ್ಣ ಪಕ್ಷದಲ್ಲಿ ಮೇಲಿನ ನಿಯಮಗಳಂತೆ ಆಚರಿಸತಕ್ಕದ್ದು.[೧೫೪]

ಈ ನಿರ್ಣಯವನ್ನು ಸುರಪುರ ಅರಸರ ಕಾಲದಿಂದ ಮುಂದುವರೆಸಿಕೊಂಡು ಬರಲಾಗಿದೆ. ಈ ಉತ್ಸವ ಎರಡು ದಿನಗಳಂದು ಎರಡು ರೀತಿಯಲ್ಲಿ ನಡೆಯುತ್ತಿದ್ದು ಮೊದಲನೆಯ ದಿನ ಸ್ತಂಭಾರೋಹಣ ಮತ್ತು ಎರಡನೆಯ ದಿನ ರಣಗಂಭ ಹರಿಯುವುದು ಎಂದು ಕರೆಯುತ್ತಾರೆ. ಸುರಪುರದಲ್ಲಿಯ ಈ ಉತ್ಸವದಂತೆ ಶ್ರೀರಂಗ, ಕಂಚಿಗಳಲ್ಲಿಯೂ ನಡೆಯುವುದುಂಟು.

### ೩.೪.೨.೧ ಉತ್ಸವಾಚರಣೆ

ಶ್ರೀಕೃಷ್ಣ ಜಯಂತಿಯ ದಿನ ಸಾಯಂಕಾಲ ನಿತ್ಯಸೇವೆ ಜರುಗುತ್ತದೆ. ನಂತರ ಉತ್ಸವದ ನಿಮಿತ್ತ ವಿಶೇಷ ಪೂಜೆಯಾಗುವುದು. ಅಲ್ಲಿಯವರೆಗೆ ಸುರಪುರದ ಅರಸರು ಉಪೋಷಣೆಗೈಯ್ಯುತ್ತಾರೆ. ರಾತ್ರಿ ಉತ್ಸವದ ಸಂದರ್ಭದಲ್ಲಿ ಅರಸ ಪ್ರತಿನಿಧಿ ಪರಿವಾರದವರು ಉಪಸ್ಥಿತರಿರುತ್ತಿದ್ದರು. ಪೂಜೆಯಾದ ಮೇಲೆ ಅರ್ಚಕರು ಸಕಲ ಗೌರವಗಳೊಡನೆ ತೀರ್ಥಪ್ರಸಾದಗಳನ್ನು ವಿತರಿಸುತ್ತಿದ್ದರು. ಸಮಾಶ್ರಮಣ ಹೊಂದಿದ್ದ(ತಪ್ತಚಕ್ರಾಂಕನ ಮಾಡಿಸಿಕೊಂಡು ಉಪದೇಶ ಪಡೆಯುವುದು) ಶಿಷ್ಯರೆಲ್ಲ ರಾಜಗುರುಗಳಿಂದಲೇ ಅಂದು ತೀರ್ಥಪ್ರಸಾದಗಳನ್ನು ಪಡೆಯುತ್ತಿದ್ದರು. ಮರುದಿನ ಸ್ತಂಭಾರೋಹಣೋತ್ಸವ ಜರುಗುತ್ತಿತ್ತು.

ಸ್ತಂಭಾರೋಹಣವನ್ನು ಹಾಲೋಕುಳಿ ಜಾತ್ರೆ ಎಂದು ಕರೆಯುತ್ತಾರೆ. ಇಂದು ಸುರಪುರ ಹಾಗೂ ಸಗರ ನಾಡಿನ ಸಾಮಾನ್ಯಜನರೂ ವಿಶೇಷವಾಗಿ ಬೇಡ ಜನಾಂಗದವರು, ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ಉಪೋಷಣೆಗೈಯ್ಯುತ್ತಿದ್ದರು. ಸುರಪುರದ ಅರಸರು ತನ್ನ ಬಂಧು ಬಳಗದವರೊಡನೆ ಪೀತ (ಹಳದಿ) ವಸ್ತ್ರಗಳನ್ನುಟ್ಟು ಛತ್ರಿ, ಚಾಮರಗಳೊಂದಿಗೆ ಅರಮನೆಯಿಂದ ದೇವಾಲಯಕ್ಕೆ ಹೋಗಲು ತಯಾರಿಯಲ್ಲಿರುತ್ತಿರುವಾಗಲೇ ದೇವಾಲಯದಿಂದ ಬಾಜಭಜಂತ್ರಿ ಸಮೇತ ಹಗಲುದೀವಟಿಗೆಯವರು ಅರಮನೆಗೆ ಬಂದು ಅರಸನನ್ನು ಕರೆತರುತ್ತಿದ್ದರು. ಅರಸ ಬಜಂತ್ರಿ, ಕೊಂಬು, ಹಲಗೆ, ಶ್ವೇತಛತ್ರ, ಬೆಳ್ಳಿಹೊತ್ತ ಚೌಬ್‌ದಾರರೊಂದಿಗೆ ಬರಿಗಾಲಿನಲ್ಲಿ ದೇವಾಲಯಕ್ಕೆ ಬರುತ್ತಿದ್ದನು. ಅರಸರ ಶ್ವೇತಛತ್ರ ಕಾಣಿಸಿದ ಕೂಡಲೇ ಅರಸನ ಆಗಮನದ ಸಂಕೇತವಾಗಿ ನಗಾರಿ ಬಾರಿಸಲ್ಪಡುತ್ತಿತ್ತು. ಅರಸ ವೇಣುಗೋಪಾಲನಿಗೆ ಪ್ರದಕ್ಷಿಣೆ ಹಾಕಿದ ತರುವಾಯ ಮಂಗಳಾರತಿ ಜರುಗುತ್ತಿತ್ತು. ಆಚಾರ್ಯ ಪುರುಷರಿಗೂ, ರಾಜನಿಗೂ ತೀರ್ಥವಿನಿಯೋಗದ ನಂತರ ಅರಸನಿಗೆ ರಾಜಗೌರವದ ಸಂಕೇತವಾಗಿ ತೋಮಾಲೆ(ತುಲಸಿಹಾರ)

ಹಾಕುತ್ತಿದ್ದರು. ಆಗ ದೇವಾಲಯದ ಒಂದು ಭಾಗದಲ್ಲಿ ರಾಜಪರಿವಾರದೊಡನೆ ಅರಸ ಆಸೀನನಾಗುತ್ತಿದ್ದನು.[೧೫೫]

ವೇಣುಗೋಪಾಲಗುಡಿಯ ಬಯಲಿನಲ್ಲಿ ೪೦ರಿಂದ ೫೦ ಅಡಿ ಉದ್ದವಿರುವ ಐದು ಕಂಬಗಳನ್ನು ನೆಡಿಸುತ್ತಿದ್ದರು. ಹಾಗೆಯೇ ರಮಣಪ್ಪನಾಯಕನಕಟ್ಟೆಯ ಹತ್ತಿರವೂ ಐದು ಕಂಬಗಳನ್ನೂ ನೆಡಲಾಗುತ್ತಿತ್ತು. ಕಂಬಗಳ ತುದಿಯಲ್ಲಿ ಇಬ್ಬರು ಕುಳಿತುಕೊಳ್ಳಬಹುದಾದ ಮಂಟಪ ಮತ್ತು ಆ ಮಂಟಪದ ಕೆಳಗೆ ಕುಂಬಳಕಾಯಿ ಇಲ್ಲವೇ ಬಾಳೇಹಣ್ಣುಗಳು ಜೋತಾಡುವಂತೆ ಕಟ್ಟಿರುತ್ತಿದ್ದರು. ಕೆಳಗಿನ ಜನರು ಆ ಕಂಬವೇರಿ ಅವುಗಳನ್ನು ಹರಿಯಬೇಕಾಗಿತ್ತು. ಈ ಕಂಬಗಳಿಗೆ ಬೆಣ್ಣೆ, ಎಣ್ಣೆ, ಕೆಲಹಣ್ಣಿನ ರಸ ಹಚ್ಚಿರುತ್ತಿದ್ದರು. ಹತ್ತಲು ಹೋದರೆ ಜಾರುತ್ತಿತ್ತು. ಅಲ್ಲದೆ ಕೆಳಗೆ ನಾಲ್ಕಾರು ನೀರುತುಂಬಿದ ಕೊಡಗಳಿರುತ್ತಿದ್ದವು.

ಕಂಬ ಏರುವ ಸ್ಪರ್ಧೆ ನಡೆಯುತ್ತಿತ್ತು. ಸ್ಪರ್ಧಾಳುಗಳು ಕಂಬ ಏರುವಾಗ ಮಗಿಗಳಿಂದ ನೀರನ್ನು ಸುರುವುತ್ತಿದ್ದರು. ಆ ಕಂಬಗಳು ಒಬ್ಬರ ತೆಕ್ಕೆಗೆ ನಿಲುಕುತ್ತಿರಲಿಲ್ಲ. ಒಬ್ಬನು ಮೇಲಕ್ಕೆ ಏರುವಾಗ ಇನ್ನೊಬ್ಬನು ಆತನಿಗೆ ಹೆಗಲು ಕೊಡುತ್ತಿದ್ದ. ಹೀಗೆ ಒಬ್ಬರನ್ನೊಬ್ಬರು ಸಹಾಯ ತೆಗೆದುಕೊಂಡು ಅನೇಕ ಸಾರಿ ಹತ್ತಿ ಇಳಿದು ಕೊನೆಗೊಮ್ಮೆ ಕಂಬ ಹತ್ತಿ ಜೋತುಬಿದ್ದಿರುವ ಹಣ್ಣುಗಳನ್ನು ಹರಿದಾಗ, ಜನರ ಕರತಾಡನ, ಕೇಕೇ ಹಾಕುತ್ತಿದ್ದರು. ವಿಜಯಿಯಾದವನು ಕಟ್ಟೆಯ ಮೇಲೆ ಆಸೀನನಾದ ಅರಸನ ಹತ್ತಿರ ಬಂದು ಸಲಾಮು ಹಾಕುತ್ತಿದ್ದ. ರಾಜ ಅವನನ್ನು ಸನ್ಮಾನ ಮಾಡುತ್ತಿದ್ದ. ಕೆಲವರಿಗೆ ಅರಸ ಇನಾಮು ಭೂಮಿಗಳನ್ನು ನೀಡುತ್ತಿದ್ದ. ಅರಸ ಮೊಂಡುಗೈ ವೆಂಕಟಪ್ಪನಾಯಕ, ಮುಮ್ಮಡಿ ಪಾಮನಾಯಕ, ಇಮ್ಮಡಿ ವೆಂಕಟಪ್ಪನಾಯಕ, ಮುಮ್ಮಡಿ ವೆಂಕಟಪ್ಪನಾಯಕ, ಕೃಷ್ಣಪ್ಪನಾಯಕರು ನೀಡಿದ ಭೂಮಿಗಳನ್ನು ಇಂದಿಗೂ ಸ್ತಂಭಾರೋಹಣದಲ್ಲಿ ವಿಜಯಿಗಳಾದವರು ಅನುಭವಿಸುತ್ತಿದ್ದಾರೆ. ಅವುಗಳನ್ನು 'ಕಂಬದ ಹೊಲ', 'ಹಾಲೋಕುಳಿ ಹೊಲ' ಎಂದು ಈಗಲೂ ಕರೆಯುತ್ತಾರೆ.[೧೫೬] ಈಗ ಈ ಅರಸುಮನೆತನದವರು ಕೇವಲ ಸನ್ಮಾನವನ್ನು ಮಾಡುತ್ತಾರೆ.

### ೩.೪.೨.೨ ಓಕುಳಿಯಾಟ

ಸ್ತಂಭಾರೋಹಣದ ತರುವಾಯ ಅರಸ ವೇಣುಗೋಪಾಲಸ್ವಾಮಿಯ ಗುಡಿಯೊಳಕ್ಕೆ ಬರುತ್ತಾನೆ. ಮಂಗಳಾರತಿ ಆದ ಮೇಲೆ, ಶ್ರೀ ವೇಣುಗೋಪಾಲಸ್ವಾಮಿಯ ಉತ್ಸವಮೂರ್ತಿಯಿದ್ದ ಪಲ್ಲಕ್ಕಿಯನ್ನು ಸ್ವತಃ ಅರಸನೇ ಹೆಗಲಮೇಲೆ ಹೊತ್ತು ಮನ್ನೆಡೆಯುತ್ತಿದ್ದ. ಈಗ ಶ್ವೇತಚ್ಛತ್ರವು ದೇವರಿಗೆ ಮಾತ್ರ ಹಿಡಿದಿರುತ್ತದೆ. ಕೆಳಗಿನ ಬಯಲಿಗೆ ಬಂದ ಮೇಲೆ ಅರಸ ತನ್ನ ರಾಜಲಾಂಛನಗಳಾದ ಕಲ್ಕಿ, ಶಿರಪೇಚುಗಳನ್ನು ಆರ್ಥಿಕ ಶಾಖೆಯ ಅಧಿಕಾರಿಗೊಪ್ಪಿಸುತ್ತಿದ್ದನು. ಪೀತವಸ್ತ್ರಗಳಿಂದ ಅಲಂಕೃತವಾಗಿ,

ಬಗಲಿಗೆ ತೊಗಲಿನ ನೀರಿನ ತಿದಿಯನ್ನು ಹಾಕಿಕೊಂಡು, ಓಕುಳಿಯಾಡುತ್ತಾ ಕಬಾಡಗೇರಿಯ ಹನುಮಂತ ದೇವರಗುಡಿಗೆ ಬಂದು, ಕೈಯಲ್ಲಿ ನೀರಿನ ಚಿಕ್ಕಪಾತ್ರೆಯೊಂದನ್ನು ಹಿಡಿದು ನೀರಾಟವಾಡುತ್ತ ನಡೆಯುತ್ತಿದ್ದನು. ಜನರು ಅರಸನೊಂದಿಗೆ ಓಕುಳಿಯಾಡುತ್ತಾ ನೀರನ್ನು ಎರಚುತ್ತಿದ್ದರು. ಅರಸ ಅವರಿಗೂ ಓಕುಳಿನೀರನ್ನು ಎರಚುತ್ತಿದ್ದ. ಅತ್ಯಂತ ಸ್ಫೂರ್ತಿ, ಹುಮ್ಮಸ್ಸಿನಿಂದ ಕೂಡಿದ ಈ ಉತ್ಸವದ ದೃಶ್ಯವನ್ನು ಅಂದು ಸುರಪುರದ ಅರಸರ ಆಸ್ಥಾನದಲ್ಲಿದ್ದ ದಾಸವರ್ಯ ಆನಂದದಾಸರು

> "ವೈಭವ ನೋಡಿರೇ ಸಖಿ ವೇಣುಗೋಪಾಲನ
> ತುಂಬುರುನಾರದರೆಂಬುವಂತೆ ತನ್ನ
> ಶೃಂಗಾರಗಾನ ಸಂಭ್ರಮಿಸುವ
> ಶೃಂಗಾರದಿ ವಾರಾಂಗನೆಯರು, ನ
> ಟ್ಯಾಂಗ ರಂಗದಿ ಶುಭಾಂಗ ಬರುವ
> ಬಿಳಿಕೊಡೆಗಳ ಥಳಥಳಿಸುವ ದೀಪಾ
> ವಳಿಗಳ ಬೆಳಕಿಲಿ ಚೆಲುವ ಬರುವ
> ವಿಲಸಿತ ಶ್ರೀ ಕೋಸಲನೃಪಾಲನೊಳ್
> ಚಲುವ ಕಮಲೇಶ ವಿಠ್ಠಲ ಬರುವ"[೧೫೭]

ಎಂದು ಹೇಳುತ್ತಾರೆ.

ಅರಸ ಮುಂದಕ್ಕೆ ಹೋಗುತ್ತಿದ್ದನು. ಹನುಮಂತದೇವರಗುಡಿಯ ಹತ್ತಿರವೂ ಸ್ತಂಭಾರೋಹಣ, ಪೂಜೆ ಆರತಿಯಾಗುತ್ತಿತ್ತು. ಅದನ್ನು ಮುಗಿಸಿಕೊಂಡು ಮೆರವಣಿಗೆಯ ಜೊತೆಗೆ ಅರಮನೆಯ ಹತ್ತಿರ ಬಂದು ವೇಣುಗೋಪಾಲಸ್ವಾಮಿಯ ಪಲ್ಲಕ್ಕಿಗೆ ಮಂಗಳಾರತಿ ಮಾಡಿ ಬೀಳ್ಕೊಡುತ್ತಿದ್ದನು. ಆ ಪಲ್ಲಕ್ಕಿಯೊಂದಿಗೆ ರಾಜಪರಿವಾರದವರು ಬಂದು ವೇಣುಗೋಪಾಲಸ್ವಾಮಿಯ ಪೂಜೆ ಮುಗಿಸಿಕೊಂಡು ಗೌರವದೊಂದಿಗೆ ಅರಮನೆಗೆ ಹಿಂದಿರುಗುತ್ತಿದ್ದರು. ನಂತರ ನಿತ್ಯಸೇವಾ ಕಾರ್ಯಕ್ರಮದ ತರುವಾಯ ಉತ್ಸವ ಮುಗಿಯುತ್ತಿತ್ತು.

### ೩.೪.೨.೩ ರಣಗಂಭ ಹರಿಯುವುದು

ದೇವರಕಂಬ ಹರಿದ ಮರುದಿನ ರಮಣಪ್ಪನಾಯಕನಕಟ್ಟೆಯ ಎದುರಿಗೆ ರಣಗಂಬ ಹರಿಯುವ ಕಾರ್ಯಕ್ರಮ ಜರುಗುತ್ತಿತ್ತು. ಈ ದಿನ ಹಿಂದಿನ ದಿನಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದರು. ದೇವಾಲಯದಲ್ಲಿ ನಡೆದ ಸ್ತಂಭಾರೋಹಣದಲ್ಲಿ ರಾಜಗುರುಗಳು ಭಾಗವಹಿಸಿದ್ದಕ್ಕಾಗಿ ಅವರನ್ನು ಕರೆತರಲು ಅರಸನ ಪಲ್ಲಕ್ಕಿಯು ರಾಜಗುರುಗಳ ಮನೆಗೆ ಹೋಗುತ್ತಿತ್ತು. ಅಲ್ಲಿ ರಾಜಗುರುಗಳು ದೇವರಿಗೆ ಪೂಜೆ ಸಲ್ಲಿಸಿ ಪಲ್ಲಕ್ಕಿಯಲ್ಲಿ 'ರಣಗಂಭ' ಸ್ಥಳಕ್ಕೆ ಬರುತ್ತಿದ್ದರು. ಆಗ ಅರಸ ಅವರಿಂದ

ಆಶೀರ್ವಾದ ಪಡೆದ ನಂತರ ಸ್ತಂಭಾರೋಹಣ ಕಾರ್ಯಕ್ರಮ ಜರುಗುತ್ತಿತ್ತು. ನಂತರ ದೇವಾಲಯದ ಬಯಲಿನಲ್ಲಿ ಕುಸ್ತಿಸ್ಪರ್ಧೆ ಏರ್ಪಡುತ್ತಿತ್ತು. ಅದನ್ನು 'ಜಟ್ಟಿಯರ ಕಾಳಗ' ಎಂದು ಕರೆಯುತ್ತಿದ್ದರು.

ಸುರಪುರ ಸಂಸ್ಥಾನದಲ್ಲಿ ತೆಲುಗುದೇಶದಿಂದ ಬಂದ ಜಟ್ಟಿಗಳಿದ್ದರು. ಇವರು ಅರಸರಿಗೆ ಮತ್ತು ಇನ್ನಿತರರಿಗೆ ಗರಡಿ ಮತ್ತು ಮಲ್ಲಯುದ್ಧವನ್ನು ಕಲಿಸುತ್ತಿದ್ದರು. ರಣಗಂಭದ ದಿನ ಅರಸರ ಸಮ್ಮುಖದಲ್ಲಿ ನಡೆಯುವ ಕಾಳಗದಲ್ಲಿ ಭಾಗವಹಿಸುತ್ತಿದ್ದರು. ಮೈಸೂರು, ಕಿತ್ತೂರು, ಗುಡಗುಂಟಿ, ಕನಕಗಿರಿ, ದೇವದುರ್ಗ ಗುಂತಗೋಳ ಮುಂತಾದ ಸ್ಥಳಗಳಿಂದ ಈ ಕಾಳಗದಲ್ಲಿ ಭಾಗವಹಿಸಲು ಬರುತ್ತಿದ್ದರು. ಈ ಕಾಳಗದ ಬಣದಲ್ಲಿ ಕಾಲಿಡುವುದಕ್ಕಿಂತ ಮೊದಲು ಅರಸರಿಗೆ ಸಲಾಮು ಹೊಡೆಯುತ್ತಿದ್ದರು. ಅರಸನ ಅಪ್ಪಣೆ ದೊರೆತ ಮೇಲೆ ಕಾಳಗ ಜರುಗುತ್ತಿತ್ತು. ಈ ಕಾಳಗದಲ್ಲಿ ಜಯಶಾಲಿಗಳಾದ ಜಟ್ಟಿಗಳಿಗೆ ಸುರಪುರದ ರಾಜರು ತಮ್ಮವರು, ಬೇರೆಯವರೆನ್ನದೆ ಸತ್ಕಾರ ಸನ್ಮಾನಗಳನ್ನು ಮಾಡುವ ಪದ್ಧತಿ ಜಾರಿಯಲ್ಲಿತ್ತು.

### ೩.೪.೨.೪ ಮಹಾನವಮಿ ಉತ್ಸವ

ಸುರಪುರದ ಅರಸರು ಮಹಾನವಮಿಯನ್ನು ಅರಮನೆಯಲ್ಲಿ ಆಚರಿಸಿದಂತೆ ಸಾರ್ವಜನಿಕವಾಗಿಯೂ ಅದ್ದೂರಿಯಿಂದ ಆಚರಿಸುತ್ತಿದ್ದರು. ಅಶ್ವಯುಜ ಶುದ್ಧಪ್ರತಿಪದೆಯಿಂದ ವಿಜಯದಶಮಿಯವರೆಗೆ ಪ್ರತಿದಿನ ದೇವಾಲಯದಲ್ಲಿ ಶ್ರೀವೇಣುಗೋಪಾಲಸ್ವಾಮಿಯನ್ನು ಒಂದೊಂದು ವಾಹನದಲ್ಲಿ ಅಂದರೆ ಹಂಸ, ಸಿಂಹ, ಹನುಮಂತ, ಶೇಷ, ಗರುಡ, ಗಜ, ಅಶ್ವಾದಿಗಳ ಮೇಲೆ ಕೂಡಿಸಿ, ರಾತ್ರಿಯ ನಿತ್ಯಸೇವೆಯ ನಂತರದಲ್ಲಿ ವಿಶೇಷ ಉತ್ಸವವನ್ನೂ ಆಚರಿಸುತ್ತಿದ್ದರು. ಅರಸನು ಪ್ರತಿದಿನ ಈ ಉತ್ಸವದಲ್ಲಿ ಭಾಗವಹಿಸಿರುತ್ತಿದ್ದನು. ಹನುಮಂತ ಮತ್ತು ಗರುಡೋತ್ಸವದಲ್ಲಿ ತಪ್ಪದೇ ಭಾಗವಹಿಸುತ್ತಿದ್ದನು.

ನಂತರದ ವಿಜಯದಶಮಿಯ ದಿನ ಗೋಪಾಲಸ್ವಾಮಿಯ ಉತ್ಸವದೊಂದಿಗೆ ಅರಸರು ಶಮೀವೃಕ್ಷದವರೆಗೆ ಹೋಗಿ ಶಮಿಗೆ ಪೂಜೆಸಲ್ಲಿಸಿದ ನಂತರ, ಅರಸರು ಶ್ರೀವೇಣುಗೋಪಾಲಸ್ವಾಮಿಗೆ ಬನ್ನಿ ಸಮರ್ಪಿಸಿದ ಮೇಲೆ ರಾಜಗುರುಗಳ ಮನೆಗೆ ಹೋಗಿ ಅವರಿಗೂ ಬನ್ನಿ ಸಮರ್ಪಿಸಿದ್ದರು. ತರುವಾಯ ಊರಲ್ಲಿ ಬನ್ನಿ ಮುಡಿಯುವ ಕಾರ್ಯಕ್ರಮ ಜರುಗುತ್ತಿತ್ತು. ಹೀಗೆ ಈ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸುವ ಸುರಪುರದ ಅರಸರಿಗೆ ಅವರ ಬಿರುದಾವಳಿಗಳನ್ನು ಸಂಬೋಧಿಸುವ ಮೂಲಕ ಗೌರವ ಸೂಚಿಸಲಾಗುತ್ತಿತ್ತು.[೧೫೮] ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಸುರಪುರದ ಅರಸು ಮನೆತನದವರು ಇಂದಿಗೂ ಭಾಗವಹಿಸುತ್ತಾ ಬಂದಿದ್ದಾರೆ. ಆದರೆ ಮೊದಲಿನ ವೈಭವ ಇಂದು ಕಂಡುಬರುತ್ತಿಲ್ಲ.

ಆನೆಗೊಂದಿಯ ನಾಯಕ ಅರಸುಮನೆತನದಲ್ಲಿ ಶ್ರೀರಂಗನಾಥದೇವರ ರಥೋತ್ಸವ ಜರುಗುತ್ತಿತ್ತು. ಶ್ರೀರಂಗನಾಥ ಆನೆಗೊಂದಿ ನಾಯಕ ಅರಸರ ಮನೆದೇವರು. ಪ್ರತಿವರ್ಷ ಚಿತ್ರಭಾನು ನಾಮ ಸಂವತ್ಸರದ

ಚೈತ್ರ ಕೃಷ್ಣಪಂಚಮಿಯ ದಿನದಿಂದ ಐದು ದಿನಗಳವರೆಗೆ ಈ ಉತ್ಸವ ನಡೆಯುತ್ತದೆ. ಈ ಉತ್ಸವದಲ್ಲಿ ಆನೆಗೊಂದಿ ಅರಸರು ಭಾಗವಹಿಸುತ್ತಾರೆ. ಮೊದಲನೇ ದಿನ, ಅಂಕುರಾರ್ಪಣ, ಧ್ವಜಾರೋಹಣ, ಕಲ್ಯಾಣೋತ್ಸವ ಜರುಗುತ್ತದೆ. ಅಂದು ಶ್ರೀರಂಗನಾಥ ದೇವಸ್ಥಾನದಲ್ಲಿ ದೇವರಿಗೆ ರಾಜಜೋಯಿಸರು ಕಂಕಣವನ್ನು ಕಟ್ಟಿದ ನಂತರ ಅರಸರಿಗೂ ಕಂಕಣ ಕಟ್ಟುತ್ತಿದ್ದರು. ಇದರ ಉದ್ದೇಶ ಅರಸರಿಗೆ ಕಂಕಣ ಕಟ್ಟಿದ ಮೇಲೆ ಅವರು ಈ ಜಾತ್ರೆ ಮುಗಿಯುವವರೆಗೂ ಇದ್ದು ಯಶಸ್ವಿಯಾಗಿ ನಡೆಸಿಕೊಡಬೇಕೆಂಬುದೇ ಆಗಿತ್ತು. ನಂತರ ನವಧಾನ್ಯಗಳಿಂದ ಕುಂಭವನ್ನು ಸ್ಥಾಪಿಸಿ ಪೂಜೆ ನಡೆಯುತ್ತಿತ್ತು. ತರುವಾಯ ೧೮ ಅಡಿ ಬಿಳಿಬಟ್ಟೆಯನ್ನು ಅರಿಶಿಣದಲ್ಲಿ ನೆನೆಸಿ ಒಣಗಿದ ಮೇಲೆ ಅದರ ಮೇಲೆ ಕೆಂಪುಬಣ್ಣದಿಂದ ಗರುಡನನ್ನು ಚಿತ್ರಿಸಿರುತ್ತಾರೆ. ಈ ಪಟವನ್ನು ಊರಲ್ಲಿ ಮೆರವಣಿಗೆ ಮಾಡಲಾಗುತ್ತಿತ್ತು. ಅರಸರು ಅದರಲ್ಲಿ ಭಾಗವಹಿಸುತ್ತಿದ್ದರು. ನಂತರ ಪುನಃ ಶ್ರೀರಂಗನಾಥ ದೇವಸ್ಥಾನಕ್ಕೆ ಬಂದಮೇಲೆ ಅಷ್ಟದಿಕ್ಪಾಲಕರಿಗೆ ಪೂಜೆ ಸಲ್ಲಿಸಿದ ನಂತರ ಅರಸರು ಧ್ವಜಸ್ತಂಭಕ್ಕೆ ಧ್ವಜವನ್ನು ಏರಿಸುತ್ತಿದ್ದರು. ನಂತರ ಸಾಯಂಕಾಲದ ಕಾರ್ಯಕ್ರಮದಲ್ಲಿ ಶ್ರೀರಂಗನಾಥನಿಗೆ ಶ್ರೀದೇವಿ, ಭೂದೇವಿಯೊಂದಿಗೆ ಕಲ್ಯಾಣೋತ್ಸವ ಕಾರ್ಯಕ್ರಮ ಜರುಗುತ್ತದೆ. ಅರಸರು ಕನ್ಯಾದಾನವನ್ನು ಮಾಡುತ್ತಿದ್ದರು ಹಾಗೂ ತಾಳಿಯನ್ನೂ ಇವರೇ ನೀಡುವ ಸಂಪ್ರದಾಯ ಇಂದಿಗೂ ಇದೆ.[೧೫೯]

ಎರಡನೇ ದಿನ ಗರುಡೋತ್ಸವ ಕಾರ್ಯಕ್ರಮ ಜರುಗುತ್ತಿತ್ತು. ಬೆಳಿಗ್ಗೆ ಶ್ರೀರಂಗನಾಥಸ್ವಾಮಿಯನ್ನು ಗರುಡೋತ್ಸವ ಚಟ್ಟ(ಪೀಠ)ದ ಮೇಲೆ ಕೂಡಿಸಿ ಅರಸರು ಸಮೇತವಾಗಿ ಊರಲ್ಲಿ ಮೆರವಣಿಗೆ ನಡೆಯುತ್ತಿತ್ತು. ಮೆರವಣಿಗೆ ಅರಮನೆಯ ಹತ್ತಿರ ಹೋದಾಗ ಅರಮನೆಯ ಪರಿವಾರದಿಂದ ಪೂಜೆ ನಡೆಯುತ್ತಿತ್ತು. ನಂತರ ಗರುಡೋತ್ಸವ ದೇವಾಲಯಕ್ಕೆ ಮರಳುತ್ತಿತ್ತು. ಸಾಯಂಕಾಲ ಅರಸರ ಸಮ್ಮುಖದಲ್ಲಿ ರಥಾಂಗಹೋಮ ನಡೆಯುತ್ತಿತ್ತು.

ಮೂರನೇ ದಿನ ಗುಡಿಯಲ್ಲಿ ನಿತ್ಯಪೂಜೆಯಾದ ತರುವಾಯ ಅರಸರ ಸಮ್ಮುಖದಲ್ಲಿ ರಾಮಬಲಿ ಕಾರ್ಯಕ್ರಮ ಜರುಗುತ್ತಿತ್ತು. ಆರು ಬಗೆಯ ಅನ್ನವನ್ನು ಬಲಿ ಅನ್ನವೆಂತಲೂ, ಅದನ್ನು ಊರಿನ ಸುತ್ತಲೂ ರಾಜರ ಸಮ್ಮುಖದಲ್ಲಿ ಚೆಲ್ಲಲಾಗುತ್ತಿತ್ತು. ನಂತರ ತೇರಿನ ಹತ್ತಿರ ಬಂದು ಜಾತ್ರೆಗಾಗಿ ತೇರಿನ ತಯ್ಯಾರಿ ನಡೆಯುತ್ತಿತ್ತು. ಸಾಯಂಕಾಲ ಆನೆಗೊಂದಿ ಅರಸರ ಸಮ್ಮುಖದಲ್ಲಿ ಅರಸರು ಮೊದಲು ತೇರಿಗೆ ಪೂಜೆ ಸಲ್ಲಿಸಿ, ತೇರಿನ ಗಾಲಿಗೆ ಕಾಯಿ ಹೊಡೆದ ನಂತರ ಉಳಿದ ಪ್ರಜೆಗಳು ಕಾಯಿ ಹೊಡೆಯುತ್ತಿದ್ದರು. ಆಗ ತೇರು ಎಳೆಯುತ್ತಿತ್ತು. ಇದನ್ನೇ ಧೂಳೋತ್ಸವ ಎಂದು ಕರೆಯುತ್ತಾರೆ.[೧೬೦]

ನಾಲ್ಕನೇ ದಿನ ಪಾರ್ವತೋತ್ಸವ ನಡೆಯುತ್ತದೆ. ಶ್ರೀರಂಗನಾಥಸ್ವಾಮಿಯನ್ನು ಆನೆಗೊಂದಿ ಅರಸರ ಅರಮನೆಯ ಬಯಲಿನ ಕಟ್ಟೆಯ ಮೇಲೆ ಕೂಡಿಸಲಾಗುತ್ತಿತ್ತು. ಅರಸರ ಸಮ್ಮುಖದಲ್ಲಿ ಅನೇಕ ಕುಸ್ತಿ,

ಕಲ್ಲುಎತ್ತುವುದು, ಉಸುಕಿನಚೀಲ ಎತ್ತುವುದು ಮುಂತಾದ ಶಕ್ತಿಪ್ರದರ್ಶನ ಆಟೋಟಗಳು ಜರುಗುತ್ತಿದ್ದವು. ಗೆದ್ದವರಿಗೆ ಅರಸರು ಬೆಳ್ಳಿಯ ಕಡಗಗಳನ್ನು ನೀಡಿ ಸನ್ಮಾನಿಸುತ್ತಿದ್ದರು. ನಂತರ ಅಲ್ಲಿಯೇ ಸ್ಥಳೀಯ ಮೋಜಿನ ಆಟಗಳು ಜರುಗಿದ ಮೇಲೆ ಶ್ರೀರಂಗನಾಥನ ಉತ್ಸವಕ್ಕೆ ಪೂಜೆಯಾಗುತ್ತಿತ್ತು. ಅರಮನೆಯ ಪರಿವಾರದವರೇ ಆ ಪೂಜೆಯನ್ನು ಸಲ್ಲಿಸುತ್ತಿದ್ದರು. ನಂತರದಲ್ಲಿ ಶ್ರೀರಂಗನಾಥನ ಉತ್ಸವ, ದೇವಾಲಯಕ್ಕೆ ಬರುತ್ತಿತ್ತು.

ಐದನೇ ದಿನ ಬೆಳಗ್ಗೆ ವಸಂತೋತ್ಸವ ಜರುಗುತ್ತಿತ್ತು. ಅರಸರು ಶ್ರೀರಂಗನಾಥನ ಉತ್ಸವದ ಪಲ್ಲಕ್ಕಿಯೊಂದಿಗೆ ಊರಲ್ಲಿ ಬಣ್ಣವನ್ನು ಆಡುತ್ತಾ ಶ್ರೀರಂಗನಾಥನ ಉತ್ಸವಮೂರ್ತಿಯೊಂದಿಗೆ ತುಂಗಭದ್ರಾನದಿಗೆ ತೆರಳುತ್ತಿದ್ದರು. ಅಲ್ಲಿ ಶ್ರೀರಂಗನಾಥನಿಗೆ ಸ್ನಾನಮಾಡಿಸಿ, ಅರಸರು ಹಾಗೂ ಪ್ರಜೆಗಳೆಲ್ಲರೂ ಮೂರುನಾಮವನ್ನು ಹಣೆಗೆ ಧರಿಸುತ್ತಿದ್ದರು. ಶ್ರೀರಂಗನಾಥನಿಗೆ ಪೂಜೆಯಾದ ತರುವಾಯ ಊರೊಳಗಿನ ಎಲ್ಲಾ ದೇವಾಲಯಗಳಲ್ಲಿ, ಅರಮನೆಯಲ್ಲಿ ಪೂಜೆ ಸಲ್ಲಿಸಿ ಕೊನೆಗೆ ಶ್ರೀರಂಗನಾಥ ತನ್ನ ಮೂಲ ದೇವಾಲಯದಲ್ಲಿ ಆಸೀನನಾಗುತ್ತಿದ್ದನು. ಮಧ್ಯಾಹ್ನದ ಸಂದರ್ಭದಲ್ಲಿ ಧ್ವಜಪಟವನ್ನು ಇಳಿಸುತ್ತಿದ್ದರು. ಅರಸರು ಕಟ್ಟಿದ ಕಂಕಣದ ವಿಸರ್ಜನೆಯಾಗುತ್ತಿತ್ತು.

ಅಂದೇ ಸಾಯಂಕಾಲ ಪುಷ್ಪಯಾಗ ಜರುಗುತ್ತಿತ್ತು. ಎಲ್ಲ ಅಷ್ಟಾದಿಕ್ಪಾಲಕರನ್ನು ಮರಳಿ ಕಳುಹಿಸುತ್ತಿದ್ದರು. ನಂತರ ಶ್ರೀರಂಗನಾಥನ ಶಯನೋತ್ಸವ ಜರುಗುತ್ತಿತ್ತು. ಆಗ ಈ ದೇವಸ್ಥಾನದಿಂದ ಅರಸು ಮನೆತನದವರಿಗೆ ಪ್ರಸಾದ, ವಸ್ತ್ರಗಳನ್ನು ನೀಡಿ ಅವರನ್ನು ಮೆರವಣಿಗೆಯೊಂದಿಗೆ ಅರಮನೆಗೆ ತಲುಪಿಸುತ್ತಿದ್ದರು.[೧೬೧] ಇಂದಿಗೂ ಆನೆಗೊಂದಿ ಅರಸು ಮನೆತನದವರು ಈ ಉತ್ಸವದಲ್ಲಿ ಭಾಗವಹಿಸುತ್ತಿದ್ದಾರೆ. ಈ ಪರಂಪರೆ ಯಥಾಪ್ರಕಾರ ಮುನ್ನಡೆದಿದೆ. ಅಂದಿನ ಅರಸರ ಕಾಲದ ವೈಭವ ಇಂದಿಲ್ಲ. ಇಂದು ಈ ಜಾತ್ರೆಯ ದೇವಸ್ಥಾನ ಸಮಿತಿಯ ಅಧ್ಯಕ್ಷರಾಗಿ ಈ ಮನೆತನದ ವಂಶಸ್ಥರಾದ ರಾಜಾ ಶ್ರೀರಾಮದೇವರಾಯರು ಸೇವೆ ಸಲ್ಲಿಸುತ್ತಿದ್ದಾರೆ.

ಗುಡಗುಂಟಿ ಅರಸು ಮನೆತನದವರು ಅವರ ಮನೆದೇವರಾದ ಕಕ್ಕೇರಿ ಸೋಮನಾಥನ ಜಾತ್ರೆಯು ಪ್ರತಿವರ್ಷ ಸಂಕ್ರಮಣದಲ್ಲಿ ಜರುಗುತ್ತದೆ. ಈ ಜಾತ್ರೆಗೆ ಗುಡುಗುಂಟಿಯ ಅರಸು ಮನೆತನದವರು ಬಹಳ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಮಡಿಮೈಲಿಗೆಯಿಂದ ಆ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು. ಈ ಜಾತ್ರೆಗೆ ಅರಸರು ತೆರಳುವಾಗ ಹಗಲುದೀವಟಿಗೆಯನ್ನು ಹಿಡಿದಿರುತ್ತಿದ್ದರು ಹಾಗೂ ಶ್ವೇತ ಛತ್ರಿಯೊಂದಿಗೆ ತೆರಳುತ್ತಿದ್ದರು. ಈ ದೇವರಿನ ಪೂಜಾರಿಗಳು ಕುರುಬರಾದರೆ ಅಂದು ಜಾತ್ರೆಯಲ್ಲಿ ಡೊಳ್ಳು ಬಾರಿಸುವವರು ನಾಯಕ ಜನಾಂಗದವರಾಗಿದ್ದರು. ಗುಡಗುಂಟಿ ಅರಸರು ಹೋಗಿ ತೇರಿಗೆ ಪೂಜೆ ಸಲ್ಲಿಸಿದ ಬಳಿಕವೇ ತೇರು ಎಳೆಯುತ್ತಿತ್ತು. ಇಂದಿಗೂ ಈ ಸಂಪ್ರದಾಯ ಮುಂದುವರೆದಿದೆ.

ಗುಡಗುಂಟಿ ಅರಸರ ಆರಾಧ್ಯದೈವ ಗುಡಗುಂಟಿಯ ಶ್ರೀ ಅಮರೇಶ್ವರ, ಗುಂತಗೋಳದ ಅರಸರಿಗೆ ಮನೆದೇವರು. ಈಗ ಈ ಜಾತ್ರೆಯಲ್ಲಿ ಗುಂತಗೋಳದ ಅರಸರು ಭಾಗವಹಿಸುವುದಿಲ್ಲ. ಕಾರಣ ಗುಡಗುಂಟಿ ರಾಜಾಸೋಮಪ್ಪನಾಯಕರ ಕಾಲದಲ್ಲಿ ಆತನ ಮಡದಿ ಗುಂತಗೋಳದವಳಾಗಿದ್ದಳು. ಆಕೆ ತವರುಮನೆಗೆ ಹೋಗುವಾಗ ಆಕೆಯ ಗಂಡ ಅರಸ ರಾಜಾಸೋಮಪ್ಪನಾಯಕ ಗುಡಗುಂಟಿಯ ಅಮರೇಶ್ವರನ ಜಾತ್ರೆಯಲ್ಲಿ ನಿಮ್ಮ ಮನೆತನದವರು ನಡೆಸಿಕೊಡುವ ಕಾರ್ಯಕ್ರಮಗಳನ್ನೆಲ್ಲಾ ನಮಗೆ ಬಿಟ್ಟುಕೊಡಲು ಕೇಳಿಕೊಂಡು ಬಾ ಎಂದು ತಾಕೀತು ಮಾಡಿ ಕಳುಹಿಸಿದ್ದರಂತೆ. ಆ ಪ್ರಕಾರ ರಾಣಿ ತಮ್ಮ ತಂದೆಯಿಂದ ಗುಡಗುಂಟಿ ಅಮರೇಶ್ವರನ ಜಾತ್ರೆಯಲ್ಲಿ ಗುಂತಗೋಳದ ಅರಸರಿಗೆ ಸಲ್ಲುವ ಎಲ್ಲಾ ಮರ್ಯಾದೆಗಳನ್ನು ಪಡೆದುಕೊಂಡು ಬಂದಂದಿನಿಂದ ಗುಡಗುಂಟಿ ಅರಸರೇ ಈ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು.[೧೨]

ಪ್ರತಿವರ್ಷ ಫಾಲ್ಗುಣಮಾಸದ ಶುಕ್ಲಪೌರ್ಣಿಮೆಯಂದು ಅಮರೇಶ್ವರನ ಜಾತ್ರೆ ಜರುಗುತ್ತದೆ. ಜಾತ್ರೆಯ ಮುನ್ನಾದಿನ ಅಮರೇಶ್ವರನ ಕಳಸವು ಗುಡಗುಂಟಿ ಅರಸರು ಕಟ್ಟಿಸಿದ ಗುಡಗುಂಟಿಯ ಕಳಸದ ಗುಡಿಯಲ್ಲಿ ರಾತ್ರಿ ತಂಗಿದ್ದು, ನಂತರ ಬೆಳಗ್ಗೆ ಗುಡಗುಂಟಿಗೆ ಅರಸರ ದರ್ಬಾರಿಗೆ ಬರುತ್ತಿತ್ತು. ಜೊತೆಗೆ ಅಮರೇಶ್ವರನ ರಾಜಗುರುಗಳಾದ ಶ್ರೀಗಜದಂಡ ಮಹಾಸ್ವಾಮಿಗಳು ದೇವರಭೂಪೂರವರು ಬರುತ್ತಿದ್ದರು. ಅರಸರ ಸಮ್ಮುಖದಲ್ಲಿ ಕಳಸಕ್ಕೆ ಪೂಜೆಯಾದ ತರುವಾಯ ಕಳಸವು ಪುನಃ ಅಮರೇಶ್ವರಕ್ಕೆ ಹೋಗುತ್ತಿತ್ತು. ಅಲ್ಲಿಂದ ಸಾಯಂಕಾಲ ಗುಂತಗೋಳದ ಅರಸರ ಅರಮನೆಗೆ ಹೋಗುತ್ತಿತ್ತು. ಜೊತೆಗೆ ದೇವರಭೂಪೂರದ ಶ್ರೀಗಜದಂಡ ಸ್ವಾಮಿಗಳೂ ತೆರಳುತ್ತಿದ್ದರು. ಗುಂತಗೋಳದ ಅರಸರು ಶ್ರೀ ಅಮರೇಶ್ವರನ ಕಳಸಕ್ಕೆ ಹಾಗೂ ಸ್ವಾಮಿಗಳನ್ನು ಬರಮಾಡಿಕೊಳ್ಳಲು ಹಸಿರು ಛತ್ರಿಯೊಂದಿಗೆ ಸ್ವತಃ ಅರಸರೇ ದೀವಟಿಗೆಯನ್ನು ಹಿಡಿದುಕೊಂಡು ಊರ ಹೊರಗೆ ಬರುತ್ತಿದ್ದರು. ಕಳಸ ಬಂದ ಮೇಲೆ ಪೂಜೆಸಲ್ಲಿಸಿ ಅರಮನೆಗೆ ಕರೆದುಕೊಂಡು ಹೋಗುವಾಗ ಗುಂತಗೋಳ ಅರಸರ ಹಸಿರು ಛತ್ರಿಯನ್ನು ಶ್ರೀಗಜದಂಡ ಸ್ವಾಮಿಗಳಿಗೆ ಹಿಡಿಯಲಾಗುತ್ತಿತ್ತು. ಅರಮನೆ ತಲುಪಿದ ನಂತರ ಪೂಜೆಯಾಗುತ್ತಿತ್ತು. ತರುವಾಯ ಕೃಷ್ಣಾನದಿಗೆ ತೆರಳಿ ಅಲ್ಲಿ ಕಳಸಕ್ಕೆ ಸ್ನಾನಮಾಡಿಸಿ ಪೂಜೆ ನಡೆಯುತ್ತಿತ್ತು. ಅಲ್ಲಿಂದ ಮರಳಿ ಅರಮನೆಯ ಆವರಣದ ಕಟ್ಟೆಯ ಮೇಲೆ ಅಮರೇಶ್ವರ ಕಳಸವನ್ನು ಇಡಲಾಗುತ್ತಿತ್ತು.

ಇಡೀ ರಾತ್ರಿ ಭಜನೆ ಕಾರ್ಯಕ್ರಮ ಜರುಗುತ್ತಿತ್ತು. ಬೆಳಗ್ಗೆ ಗುಂತಗೋಳದ ಊರಹೊರಗಿರುವ ಶ್ರೀಗಂಗಾಧರ ದೇವಾಲಯದ ಬಲಭಾಗದ ಶ್ರೀ ಅಮರೇಶ್ವರನ ಕಟ್ಟೆಗೆ ಅರಸರ ಸಮ್ಮುಖದಲ್ಲಿ ಊರಿನ ಸಮಸ್ತ ಜನರೊಂದಿಗೆ ಮೆರವಣಿಗೆಯು ಅದ್ದೂರಿಯಿಂದ ನಡೆಯುತ್ತಿತ್ತು. ಅಲ್ಲಿ ಪೂಜೆಯಾದ ಬಳಿಕ ಕಳಸವು ಪುನಃ ಅರಮನೆಗೆ ಬರುತ್ತಿತ್ತು. ಅರಮನೆಯ ಪರಿವಾರ ಪೂಜೆ ಸಲ್ಲಿಸಿದ ಬಳಿಕ ಸಾರ್ವಜನಿಕರು ಪೂಜೆ ಸಲ್ಲಿಸುತ್ತಿದ್ದರು. ಆನಂತರ ಅಮರೇಶ್ವರಕ್ಕೆ, ಅಮರೇಶ್ವರನ ಕಳಸವು ಹೋಗುತ್ತಿತ್ತು. ಗುಂತಗೋಳದ

ಅರಸರು ಕಳಸವನ್ನು ಊರ ಹೊರಗಿನ ದಕ್ಷಿಣದ ಅಗಸಿಯವರೆಗೆ ಹೋಗಿ ಬೀಳ್ಕೊಡುತ್ತಿದ್ದರು. ಈ ಸಂಪ್ರದಾಯವು ಇಂದಿಗೂ ಮುಂದುವರೆದುಕೊಂಡು ಬಂದಿದೆ. ಈ ಅರಸುಮನೆತನದವರು ಈ ಕಳಸದ ಉತ್ಸವದಲ್ಲಿ ಭಾಗವಹಿಸಿ ಹಿಂದಿನಿಂದ ನಡೆದುಕೊಂಡು ಬಂದಿರುವ ವಿಧಿವಿಧಾನಗಳನ್ನು ಚಾಚೂ ತಪ್ಪದೇ ಪಾಲಿಸಿಕೊಂಡು ಬರುತ್ತಿದ್ದಾರೆ. ಅಂದು ಸಾಯಂಕಾಲ ಅಮರೇಶ್ವರದಲ್ಲಿ ಅಮರೇಶ್ವರನ ರಥೋತ್ಸವ. ಈ ರಥೋತ್ಸವಕ್ಕೆ ಗುಡಗುಂಟಿಯ ಅರಸರು ಆಗಮಿಸುತ್ತಿದ್ದರು. ಅವರ ಸಮ್ಮುಖದಲ್ಲಿಯೇ ಈ ರಥೋತ್ಸವ ಜರುಗುತ್ತಿತ್ತು. ಇವರು ಮೊದಲು ತೇರಿಗೆ ಪೂಜೆ ಸಲ್ಲಿಸಿ, ತೇರಿನ ಗಾಲಿಗೆ ಕಾಯಿಯನ್ನು ಹೊಡೆದ ನಂತರವೇ ರಥೋತ್ಸವ ನಡೆಯುತ್ತಿತ್ತು. ಇಂದಿಗೂ ಈ ರಥೋತ್ಸವದಲ್ಲಿ ಗುಡಗುಂಟಿ ಅರಸು ಮನೆತನದವರು ಭಾಗವಹಿಸಿ ಜಾತ್ರೆಯನ್ನು ನಡೆಸಿಕೊಡುತ್ತಾರೆ.

ದೇವದುರ್ಗದ ಅರಸು ಮನೆತನದವರ ಮನೆದೇವರು ಮಾನಸಗಲ್ ರಂಗನಾಥ. ಪ್ರತಿವರ್ಷ ಅಗಿ ಹುಣ್ಣಿಮೆಗೆ ಈ ಜಾತ್ರೆ ಜರುಗುತ್ತದೆ. ಈ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದ ಅರಸರು ಮಾನಸಗಲ್‌ನಲ್ಲಿ ನಿಗದಿಪಡಿಸಿದ ಮಂಟಪದಲ್ಲಿ ತಂಗುತ್ತಿದ್ದರು. ಆಗ ಪುರೋಹಿತರು, ಬಾಜಭಜಂತ್ರಿ ಸಮೇತ ಇವರನ್ನು ದೇವಾಲಯಕ್ಕೆ ಕರೆದೊಯ್ಯುತ್ತಿದ್ದರು. ಇವರ ಮೆರವಣಿಗೆಯ ಸಂದರ್ಭದಲ್ಲಿ ಆ ಭಾಗದ ಜನರೆಲ್ಲಾ ಇವರ ಪಾದಮುಟ್ಟಿ ನಮಸ್ಕರಿಸುವ ಪದ್ಧತಿ ಇತ್ತು. ಶ್ರೀರಂಗನಾಥನಿಗೆ ಇವರಿಂದ ಪೂಜೆ ಸಂದ ಬಳಿಕ, ರಥೋತ್ಸವಕ್ಕೆ ಪೂಜೆ ಸಲ್ಲಿಸಿದ ಮೇಲೆ ಇವರು ತೇರಿನ ಗಾಲಿಗೆ ಕಾಯಿ ಹೊಡೆದ ನಂತರ ತೇರು ಸಾಗುತ್ತಿತ್ತು. ಈ ತೇರನ್ನು ಉಪ್ಪಾರ ಜನಾಂಗದವರು ಮತ್ತು ನಾಯಕ ಜನಾಂಗದವರು ಎಳೆಯುವ ರೂಢಿಯಿತ್ತು. ಈಗ ಎಲ್ಲಾ ಜನಾಂಗದವರು ಭಾಗವಹಿಸಿ ತೇರನ್ನು ಎಳೆಯುತ್ತಿದ್ದಾರೆ. ಈ ಮನೆತನದವರು ಇಂದಿಗೂ ಈ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಮಾನಸಗಲ್, ದೇವದುರ್ಗಕ್ಕೆ ಸುಮಾರು ೧೦. ಕಿ.ಮೀ ದೂರದಲ್ಲಿದೆ. ರಾಜಾ ಕಿಲಚನಾಯಕರು ಈ ಜಾತ್ರೆಗೆ ನಡೆದುಕೊಂಡೇ ಹೋಗುತ್ತಿದ್ದರು. ಈಗ ಈ ಮನೆತನದವರು ವಾಹನದಲ್ಲಿ ಹೋಗುತ್ತಾರೆ.

ಕನಕಗಿರಿ ನಾಯಕ ಅರಸರ ಆರಾಧ್ಯ ದೈವ ಕನಕಗಿರಿ ಲಕ್ಷ್ಮೀಕನಕಾಚಲಪತಿಯ ಜಾತ್ರೆಯು ಪ್ರತಿವರ್ಷ ಮಾಘ ಮಾಸ ಚತುರ್ದಶಿಯಂದು ಪ್ರಾರಂಭವಾಗಿ ಒಂಭತ್ತು ದಿನಗಳ ಕಾಲ ಪ್ರತಿದಿನ ಒಂದೊಂದು ಉತ್ಸವಗಳು ಜರುಗುತ್ತವೆ. ಕನಕಗಿರಿ ನಾಯಕ ಪರಸಪ್ಪ ಉಡಚನಾಯಕನ ಕಾಲದಿಂದ ಈ ಜಾತ್ರೆ ಮುಂದುವರೆದಿದೆ.[೧೬೩] ಮೊದಲನೆಯ ದಿನ ಈ ಮನೆತನದ ಅರಸರು ತಮ್ಮ ಮನೆಗೆ ದಾಸಮ್ಮ ಮತ್ತು ದಾಸಪ್ಪರನ್ನು ಆಹ್ವಾನಿಸುತ್ತಾರೆ. ಇವರು ಗೋಪಾಳಪುಟ್ಟಿಯೊಂದಿಗೆ ಅರಸರ ಮನೆಗೆ ಬಂದಾಗ ಮನೆಯಲ್ಲಿ ಕನಕಾಚಲ ಪತಿಯ ಹೆಸರಿನಲ್ಲಿ ಪೂಜೆ ಜರುಗುವುದು. ನಂತರ ದಾಸಪ್ಪ-ದಾಸಮ್ಮರಿಗೆ ಇವರು ಹಣದ ಮುಡುಪನ್ನು ನೀಡಿ ಕಳುಹಿಸುತ್ತಿದ್ದರು. ಅಂದು ಸಾಯಂಕಾಲ ಅಂಕುರಾರ್ಪಣ ನಡೆಯುತ್ತಿತ್ತು. ನಂತರ ಮುಂದಿನ ಒಂದೊಂದು ದಿನ ಧ್ವಜಾರೋಹಣ, ಪುಷ್ಪಮಂಟಪಾರೋಹಣ,

ಹಂಸಾರೋಹಣ, ಸಿಂಹಾರೋಹಣ, ಹನುಮಂತೋತ್ಸವ, ಕಲ್ಯಾಣೋತ್ಸವದ ನಂತರ ಗರುಡೋತ್ಸವ ನಡೆಯುತ್ತಿತ್ತು. ಆ ದಿನ ಅರಸರು ಗೋಪಾಳವನ್ನು ಆಡಲು ಹೋಗುತ್ತಿದ್ದರು. ರಥೋತ್ಸವದ ದಿನದಂದು ರಥಕ್ಕೆ ಇವರು ಪೂಜೆ ಸಲ್ಲಿಸಿದ ನಂತರವೇ ರಥ ಎಳೆಯುತ್ತಿತ್ತು. ಈ ಸಂದರ್ಭವನ್ನು ವಿವರಿಸುವ ಜನಪದ ನುಡಿಯೊಂದು ಇಂತಿದೆ :

ಅಪ್ಪನ ತೇರಿಗೆ, ಇಪ್ಪತ್ತು ಮಿಣಿ ಬಂದು,
ಚಿಕ್ಕನಾಮದ ದೊರಿ ಬಂದು | ಉಡಚಪ್ಪನಾಯ್ಕ
ಚಪ್ಪಾಳೆ ಇಟ್ಟ ತೇರ ಎಳಿಸ್ಯಾನ.[೧೬೪]

ಮಹಾರಥಕ್ಕೆ ಪೂಜೆಯಾದ ನಂತರ ಅರಸ ಕನಕಾಚಲನನ್ನು ಸ್ಮರಿಸುತ್ತಾ, ಚಪ್ಪಾಳೆ ತಟ್ಟಿದಾಗಲೇ ತೇರು ಮುಂದಕ್ಕೆ ಸಾಗುತ್ತಿದ್ದಿತ್ತು. ಆದರೆ, ಇಂದು ಈ ಅರಸುಮನೆತನದವರು ಈ ಜಾತ್ರೆಯಲ್ಲಿ ಭಾಗವಹಿಸುವುದಿಲ್ಲ. ಈ ದೇವರಿಗೆ ತಮ್ಮ ಪ್ರತಿನಿಧಿಯಿಂದ ಕಾಯಿಕರ್ಪೂರಗಳನ್ನು ಕಳುಹಿಸುತ್ತಾರೆ.

ಹಾಗೆಯೇ ಜರಿಮಲೆ ಪಾಳೆಯಗಾರರು ದಂಡಿನ ದುರಗಮ್ಮ ಜಾತ್ರೆಯಲ್ಲಿ ಭಾಗವಹಿಸಿ ಮೊದಲ ಕಾರ್ಯವನ್ನು ಮಾಡುತ್ತಿದ್ದರು.[೧೬೫] ಪ್ರತಿವರ್ಷ ವೈಶಾಖಶುದ್ಧ ೫ರಂದು ನಡೆಯುವ ಉಜ್ಜಿಯನಿಯ ಮರುಳಸಿದ್ಧೇಶ್ವರ ಜಾತ್ರೆಯ ಸಂದರ್ಭದಲ್ಲಿ ಶಿಖರಕ್ಕೆ ಎಣ್ಣೆ ಕಳುಹಿಸಿಕೊಡುತ್ತಿದ್ದರು. ಈ ಸಂಪ್ರದಾಯ ಮುಂದುವರಿದಿದೆ. ಈಗಲೂ ಹರ್ತಿಕೋಟೆಯಲ್ಲಿ ನಡೆಯುವ ವೀರಭದ್ರೇಶ್ವರಸ್ವಾಮಿಯ ಜಾತ್ರೆಯಲ್ಲಿ ಅಗ್ನಿಕುಂಡ, ಮರುದಿನ ಹೂವಿನ ತೇರು, ಮೂರನೇ ದಿನ ರಥೋತ್ಸವ ಜರುಗುವುದು.[೧೬೬] ಹರ್ತಿಕೋಟೆಯ ಅರಸರು ಈ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು. ಇಂದು ಈ ಮನೆತನದ ವಂಶಸ್ಥರು ರತ್ನಗಿರಿಯಲ್ಲಿದ್ದು ಜಾತ್ರೆಗೆ ಬಂದುಹೋಗುತ್ತಾರೆ.

ಈ ರೀತಿಯಲ್ಲಿ ಕರ್ನಾಟಕದ ನಾಯಕ ಅರಸು ಮನೆತನದ ಅರಸರು, ತಮ್ಮ ತಮ್ಮ ಮನೆತನದಲ್ಲಿ ಸಾರ್ವಜನಿಕವಾಗಿ ಆಚರಿಸಲ್ಪಡುವ ಹಬ್ಬ ಉತ್ಸವಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅಂದು ತಮ್ಮ ರಾಜ್ಯದ ಜನತೆಯಲ್ಲಿಯ ಧಾರ್ಮಿಕ ಅಂಶಗಳೊಂದಿಗೆ ಸಮ್ಮಿಳಿತಗೊಂಡು ಸರ್ವಧರ್ಮ, ಮತಗಳನ್ನು ಸಮಾನದೃಷ್ಟಿಯಿಂದ ನೋಡುತ್ತಿದ್ದರು. ಮೊಹರಂ, ಈದ್‌ಮಿಲಾದ್‌ಗಳಂತಹ ಮುಸ್ಲಿಂ ಹಬ್ಬಗಳಲ್ಲಿ ಭಾಗವಹಿಸುತ್ತಿದ್ದರು. ಈ ನಾಯಕ ಅರಸುಮನೆತನದವರಲ್ಲಿ ಚಿತ್ರದುರ್ಗ, ಆನೆಗೊಂದಿ, ಸುರಪುರ, ದೇವದುರ್ಗ, ಕನಕಗಿರಿಯವರು ಶ್ರೀವೈಷ್ಣವಪಂಥಕ್ಕೆ ಮಾರುಹೋಗಿದ್ದರೂ ಶೈವಸಂಪ್ರದಾಯದ ಹಬ್ಬ-ಉತ್ಸವಗಳನ್ನು ತಮ್ಮ ಅರಮನೆಯಲ್ಲಿ ಮತ್ತು ಸಾರ್ವಜನಿಕವಾಗಿ ಆಚರಿಸಿದರು. ಅದರಂತೆ ಶೈವ ಸಂಪ್ರದಾಯಸ್ಥ ಮನೆತನಗಳಾದ ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ಮತ್ತೋಡು, ಹರತಿ ಅರಸುಮನೆತನದವರೂ ಅವುಗಳಿಗೆ ಹೊಂದಿಕೊಂಡಿದ್ದರು. ಹೀಗಾಗಿ ಇವರಲ್ಲಿಯ ಧರ್ಮ ಹಾಗೂ ಮತ ಸಮನ್ವಯದ ದೃಷ್ಟಿಕೋನವು ಧಾರ್ಮಿಕ-ಸಾಮರಸ್ಯವನ್ನು ಯಶಸ್ವಿಯಾಗಿ ಪರಿಪಾಲಿಸಿಕೊಂಡು ಬರುವಂತಾಯಿತು.

## ೩.೫ ಆರಾಧ್ಯ ದೇವರುಗಳ ಪೂಜಾ ವಿಧಾನಗಳು

ಧರ್ಮ ಸರ್ವವ್ಯಾಪಕವಾದ ವಿದ್ಯಮಾನ. ಇದು ಸಹಜ ಸ್ವಭಾವಕ್ಕಿಂತ ವಿಭಿನ್ನವಾಗಿರಲೂಬಹುದು. ಮಾನವ ಅತಿಮಾನುಷ ಶಕ್ತಿಗಳಲ್ಲಿಟ್ಟಿರುವ ನಂಬಿಕೆ-ಶ್ರದ್ಧೆಯೇ ಇದಕ್ಕೆ ಮುಖ್ಯ ಕಾರಣವಾಗಿದೆ. ಅಗೋಚರವೂ, ಅದ್ಭುತವೂ, ಅಲೌಕಿಕವೂ ಆದ ಶಕ್ತಿಯೊಂದು ಸದಾಕಾಲ ರಕ್ಷಿಸುವುದೆಂಬ ನಂಬಿಕೆಯನ್ನಿಟ್ಟುಕೊಂಡು, ತನ್ನ ದಿನನಿತ್ಯದ ಕಾರ್ಯಚಟುವಟಿಕೆಗಳು ಸುಗಮವಾಗಿ ನಡೆಯುವಂತೆ ತನಗೆ ಸಂಬಂಧವಿದ್ದ ಅತಿಮಾನುಷವಾದ ದಿವ್ಯಶಕ್ತಿಯನ್ನು ಪೂಜಿಸುವ ಕ್ರಮವನ್ನು ಹುಟ್ಟುಹಾಕಿದನು. ಈ ದಿವ್ಯಶಕ್ತಿಯನ್ನು ದೇವರು ಎಂಬ ರೂಪದಲ್ಲಿ ಓಲೈಸಿಕೊಳ್ಳಲು ಪೂಜೆ ಪುನಸ್ಕಾರ, ಜಪತಪಗಳು, ಯಜ್ಞಯಾಗಾದಿಗಳು ಆರಂಭವಾದವು. ನಂತರ ಭಕ್ತಿಪೂರ್ವಕವಾಗಿ ಪೂಜಿಸುವ ವಿಧಿವಿಧಾನಗಳು ಹುಟ್ಟಿಕೊಂಡವು. ಇವು ಆಯಾ ಮತ, ಧರ್ಮಗಳೋಪಾದಿಯಲ್ಲಿ ವಿಶಿಷ್ಟ ಹಾಗೂ ವಿಭಿನ್ನವಾದ ನಿಯಮಗಳನ್ನು ಒಳಗೊಂಡಿವೆ. ಈ ನಿಟ್ಟಿನಲ್ಲಿ ಕರ್ನಾಟಕದ ನಾಯಕ ಅರಸುಮನೆತನಗಳವರು ತಮ್ಮ ಮನೆದೇವರು, ಕುಲದೇವರು, ಆರಾಧ್ಯದೇವರುಗಳ ಪೂಜಾ ವಿಧಾನಗಳಲ್ಲಿ ತಮ್ಮದೇ ಆದ ರೀತಿ-ನೀತಿಗಳನ್ನು ಅಳವಡಿಸಿಕೊಂಡರು. ನಂತರದಲ್ಲಿ ಬೇರೆ ಬೇರೆ ಮತಗಳ ಪ್ರೇರಣೆಯಿಂದ ತಮ್ಮ ಪೂಜಾ ವಿಧಾನಗಳಲ್ಲಿಯ ದೃಷ್ಟಿಕೋನಗಳನ್ನು ಬದಲಾಯಿಸಿಕೊಳ್ಳಲು ಪ್ರಯತ್ನಿಸಿದರು. ಅದಕ್ಕೊಂದು ವಿಶಿಷ್ಟ ಮಾರ್ಗವನ್ನು ಹುಡುಕಿದರು. ಅವು ತಮ್ಮ ಮನೆತನದ ಸ್ವಾಸ್ಥ್ಯ ಕಾಪಾಡುವ ಸಾಧನವೆಂದು ನಂಬಿದರು. ಬಹುದೇವತಾ ಆರಾಧಕರಾಗಿ ಗುರುತಿಸಲ್ಪಟ್ಟರು.

ನಾಯಕ ಅರಸುಮನೆತನಗಳು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ತಮ್ಮ ಅಸ್ತಿತ್ವವನ್ನು ಭದ್ರಪಡಿಸಿಕೊಂಡವು ಎಂಬುದು ವಿದಿತ. ಆ ಸಂದರ್ಭದಲ್ಲಿ ಮಧ್ಯಕಾಲೀನಯುಗದ ಧಾರ್ಮಿಕ ಹಾಗೂ ಮತೀಯ ಸಾಮರಸ್ಯಗಳನ್ನು ಇವರು ತಮ್ಮ ಆಡಳಿತಾವಧಿಯ ಧಾರ್ಮಿಕ ಕಾರ್ಯಚಟುವಟಿಕೆಗಳಲ್ಲಿ ತೋರ್ಪಡಿಸಿಕೊಳ್ಳುವಲ್ಲಿ ಪ್ರಯತ್ನಿಸಿದ್ದುಂಟು.

ವಿಜಯನಗರೋತ್ತರಕಾಲೀನ ರಾಜ್ಯಗಳಲ್ಲಿ ಆಗಮ ಸಂಪ್ರದಾಯದ ಪ್ರಭಾವ ಹಿಂದಿನಷ್ಟು ಸ್ಪಷ್ಟವಾಗಿ ಕಾಣಿಸಿಕೊಳ್ಳುವುದಿಲ್ಲ. ಜೊತೆಗೆ ಪೂಜಾರಾಧನೆಯ ಸಂಪ್ರದಾಯಗಳಲ್ಲಿ ಸಾಕಷ್ಟು ಏಳು-ಬೀಳುಗಳು ಉಂಟಾಗಿದ್ದವು. ಹದಿನಾಲ್ಕನೆಯ ಶತಮಾನದ ನಂತರ ಶೈವ, ಜೈನ ಸಂಪ್ರದಾಯಗಳ ಸ್ಥಾನವನ್ನು ವೈಷ್ಣವ ಸಂಪ್ರದಾಯ ಆಕ್ರಮಿಸಿಕೊಂಡಿತು. ಅದರಲ್ಲಿ ಶ್ರೀವೈಷ್ಣವ ಸಂಪ್ರದಾಯವು ವೆಂಕಟೇಶ್ವರ ಮತ್ತು ರಂಗನಾಥ ಎಂಬ ವಿಷ್ಣುವಿನ ಎರಡು ರೂಪಗಳ ಮೂಲಕ ಕರ್ನಾಟಕದ ಒಳನಾಡಿನಲ್ಲಿ ಪ್ರಚಲಿತವಾಯಿತು. ವಿಜಯನಗರ ಕಾಲದಲ್ಲಿ ಗುಡ್ಡಗಾಡಿನ ಬುಡಕಟ್ಟುಗಳ ಹಿನ್ನೆಲೆಯನ್ನು ಹೊಂದಿದ ನಾಯಕ ಜನಾಂಗ ಅರಸರು ಈ ಮೇಲಿನ ದೇವತೆಗಳನ್ನು ಪೂಜಿಸಿದ್ದು ಕಂಡುಬರುತ್ತದೆ. ಜೊತೆಗೆ ಹನುಮಂತನೂ ಒಂದು

ಮಹತ್ವದ ದೇವರಾಗಿ ಮಾಧ್ವ ಸಂಪ್ರದಾಯದಿಂದ ಪ್ರಸಿದ್ಧಿ ಗಳಿಸಿದನು.[೧೬೭] ಹಾಗಾಗಿ ಕೆಲವು ನಾಯಕ ಅರಸರು ಹನುಮಂತನನ್ನು ತಮ್ಮ ಕುಲದೈವನನ್ನಾಗಿ ಮಾಡಿಕೊಂಡರು.

ಚಿತ್ರದುರ್ಗ ಕಾಮಗೇತಿ ಅರಸರ ಮನೆದೇವರು ಅಹೋಬಲ ನರಸಿಂಹ. ಇದು ಕರ್ನೂಲು ಜಿಲ್ಲೆಯ ಅಲ್ಲಗಡ್ಡ ತಾಲೂಕಿನಲ್ಲಿದೆ. ಮೂಲ ನೆಲೆಯಿಂದ ಹೊರಟ ಕಾಮಗೇತಿ ಅರಸರ ಮೂಲಪುರುಷರು ತಾವು ಹೋದ ಕಡೆಗಳಲ್ಲೆಲ್ಲ ಮನೆದೇವರಾದ ಅಹೋಬಲನನ್ನು ಕೊಂಡೊಯ್ಯುತ್ತಾರೆ. ಹೋಬಲ ಅಥವಾ ಓಬಳ ಹಾಗೂ ಯೋಬಳ(ತಮಿಳು)ಗಳೂ, ಅಹೋಬಲ ಎನ್ನುವುದರ ರೂಪಾಂತರವಾಗಿದ್ದು, ಈ ಅರಸರ ಮೂಲಪುರುಷರೂ ಅವರ ಪೀಳಿಗೆಯವರೂ ಈ ದೈವದ ಹೆಸರನ್ನೇ ಹೊಂದಿದ್ದನ್ನು ಲಕ್ಷಿಸಬೇಕು. 'ತಿಮ್ಮಣ್ಣ' ಎಂಬ ಹೆಸರು ಸಹ "ತಿರುಪತಿ ದೈವದ" ಬಗೆಗೆ ಈ ಅರಸರು ಇರಿಸಿಕೊಂಡಿದ್ದ ಭಕ್ತಿಯ ಸಂಕೇತವಾಗಿದೆ[೧೬೮] ಎಂಬುದನ್ನು ಇತಿಹಾಸತಜ್ಞರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಅಭಿಪ್ರಾಯ ಪಡುತ್ತಾರೆ. ಹೀಗೆ ತಮ್ಮ ಕುಲದೇವರ ಹೆಸರನ್ನೇ ತಮ್ಮ ಹೆಸರುಗಳನ್ನಾಗಿ ಇಟ್ಟುಕೊಳ್ಳುವ ಪರಂಪರೆ ಮನೆತನಗಳಲ್ಲಿ ಕಂಡುಬರುತ್ತದೆ. ಅಲ್ಲದೇ ಚಿತ್ರದುರ್ಗದ ಅರಸರು ಮನೆದೇವರುಗಳಾದ ಅಹೋಬಲ ನರಸಿಂಹಸ್ವಾಮಿ, ಕಂಪಳದೇವರು, ಸಿದ್ಧಯ್ಯ, ರಂಗಯ್ಯ, ಚಿತ್ರದೇವರುಗಳ ಹೆಸರಿನಲ್ಲಿ ಗ್ರಾಮಗಳನ್ನು ಕಟ್ಟಿಸಿದ್ದಾರೆ. ಚಿತ್ರದುರ್ಗದ ಮೊದಲನೆಯ ಸುತ್ತಿನ ಕೋಟೆಯ ಹೆಬ್ಬಾಗಿಲುಗಳಿಗೆ ನರಸಿಂಹನ ಬಾಗಿಲು, ರಂಗಯ್ಯನ ಬಾಗಿಲು, ಸಿದ್ಧಯ್ಯನ ಬಾಗಿಲು(ಸಂತೇಬಾಗಿಲು) ಎಂದು ಹೆಸರಿಟ್ಟಿದ್ದಾರೆ. ಈ ದೇವರುಗಳಿಗೆ ಕಟ್ಟಿಸಿಕೊಟ್ಟ ದೇವಾಲಯಗಳನ್ನು, ಬಿಟ್ಟುಕೊಟ್ಟ ದತ್ತಿಗಳನ್ನು[೧೬೯] ಈಗಲೂ ನಾವು ನೋಡಬಹುದು.

ಚಿತ್ರದುರ್ಗ - ದಾವಣಗೆರೆಯ ಮಾರ್ಗದ ಭರಮಸಾಗರದಿಂದ ಸುಮಾರು ಎರಡು ಮೈಲಿ ದೂರದಲ್ಲಿಯ ನೀರ್ಥಡಿ ರಂಗನಾಥನನ್ನು ಚಿತ್ರದುರ್ಗದ ಅರಸರು ಮನೆದೇವರನ್ನಾಗಿ ಸ್ಥಾಪಿಸುತ್ತಾರೆ. ಈ ದೇವರಿಗೆ ವಿಶಿಷ್ಟ ಹಬ್ಬ-ಹರಿದಿನಗಳಲ್ಲಿ ಹಾಗೂ ಮನೆತನದಲ್ಲಿ ಶುಭಕಾರಣಗಳನ್ನು ಕೈಗೊಳ್ಳುವಾಗ, ಯುದ್ಧ ಮೊದಲಾದ ರಾಜಕಾರ್ಯಗಳಿಗೆ ಹೊರಡುವಾಗ ಪೂಜಿಸುವ ಪರಂಪರೆಯನ್ನಿಟ್ಟುಕೊಂಡಿದ್ದರು. ಕ್ರಿ.ಶ. ೧೬೩೪ರಲ್ಲಿ ಮೊಗಲರ ಸೈನ್ಯ ದಕ್ಷಿಣಭಾರತದ ಮೇಲೆ ಧಾಳಿ ಮಾಡಿ, ಅನೇಕ ದೇವಾಲಯವನ್ನು ನಾಶ ಮಾಡುವಾಗ ನೀರ್ಥಡಿಯ ಗುಡಿಯನ್ನು ಮತ್ತು ದೇವರ ಮೂರ್ತಿಯನ್ನು ಧ್ವಂಸಗೊಳಿಸಿದವು. ನಂತರ ಅಧಿಕಾರಕ್ಕೆ ಬಂದ ಚಿತ್ರದುರ್ಗದ ಅರಸ ಭರಮಣ್ಣನಾಯಕನು ಕ್ರಿ.ಶ. ೧೬೯೪ರಲ್ಲಿ ಈ ದೇವಾಲಯವನ್ನು ದುರಸ್ತಿಗೊಳಿಸಿದನಲ್ಲದೆ ದತ್ತಿ ಕೊಡುವುದರ ಮೂಲಕ ಜೀರ್ಣೋದ್ಧಾರ ಮಾಡಿದನು.[೧೭೦]

ಚಿತ್ರದುರ್ಗದ ಅರಸರ ಇನ್ನೊಂದು ದೈವ ಸಂಪಿಗೆ ಸಿದ್ಧೇಶ್ವರ. ಇವರ ಕಾಲದಲ್ಲಿ ಸೋಮವಾರ ದಿನ ಈ ದೇವರ ಸೇವೆ ಜರುಗುತ್ತಿತ್ತು. ಆಗ ಚಿತ್ರದುರ್ಗ ಅರಸರ ಸಮ್ಮುಖದಲ್ಲಿಯೇ ಕೋಲು

ಹೊಯ್ಯುತ್ತ ರಸಸಿದ್ಧರ ಪದಗಳನ್ನು ಹಾಡುತ್ತಿದ್ದರು. ಚಿತ್ರದುರ್ಗದ ಅರಸರ ಪಟ್ಟಾಭಿಷೇಕ ಇದೇ ದೇವಾಲಯ ಆವರಣದಲ್ಲಿ ಜರುಗುತ್ತಿದ್ದುದರಿಂದ ಆ ದಿನದಂದು ಅರಮನೆಯ ಪರಿವಾರವೆಲ್ಲ ಈ ದೇವರಪೂಜೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಈ ದೇವಾಲಯದ ಮುಂಭಾಗದಲ್ಲಿ ನವಿಲು ಉಯ್ಯಾಲೆಗಳು ಇವೆ.

ಚಿತ್ರದುರ್ಗದ ನಾಯಕ ಅರಸರು ದೇವಿಗಳಿಗೆ ದೇವಾಲಯಗಳನ್ನು ಕಟ್ಟಿಸಿಕೊಟ್ಟರಲ್ಲದೆ ಹರಕೆ ಹೊರುವ, ಬಲಿಕೊಡುವ, ಮುಡಿಕಟ್ಟುವ ಪದ್ಧತಿಗಳನ್ನು ರೂಢಿಸಿಕೊಂಡಿದ್ದರು. ಚಿತ್ರದುರ್ಗದ ದುರ್ಗಾಭಿಮಾನಿ ದೇವತೆ ಏಕನಾಥೇಶ್ವರಿ ಗುಹಾಂತ ದೇವಾಲಯದ ಮುಂಭಾಗದಲ್ಲಿ ಶಿಲಾಮಂಟಪವನ್ನು ಚಿತ್ರದುರ್ಗದ ಅರಸರು ಕಟ್ಟಿಸಿರುವರು. ಅದಕ್ಕಿಂತ ಮುಂಚೆ ಏಕನಾಥೇಶ್ವರಿ ದೇವತೆಯಿರುವ ಗುಹೆಯು ಮುಳ್ಳುಪೊದೆಗಳಿಂದ ಮುಚ್ಚಿಹೋಗಿತ್ತೆಂದು ಹೇಳುತ್ತಾರೆ. ಒಂದುಕಾಲಕ್ಕೆ ಬೌದ್ಧದೇವತೆಯಾದ ಇದು ಆದಿಬುದ್ಧನಿಗೆ ಏಕನಾಥ ಎಂಬ ಹೆಸರಿರುವುದು. ನಂತರ ಏಕನಾಥನ ಈಶ್ವರಿಯು ಏಕನಾಥೇಶ್ವರಿಯಾದಳು. ಬೌದ್ಧಧರ್ಮವು ದಕ್ಷಿಣಾಪಥದಲ್ಲಿ ನಶಿಸಿಹೋದ ತರುವಾಯ ವೈದಿಕರು ಬೌದ್ಧ ದೇವತೆಗಳನ್ನು ತಮ್ಮ ಅನುಕೂಲಕ್ಕಾಗಿ ತಮ್ಮ ಧರ್ಮದ ದೇವತೆಗಳನ್ನಾಗಿ ಮಾರ್ಪಡಿಸಿಕೊಂಡು ದೇವಾಲಯಗಳನ್ನೆಲ್ಲ ತಮ್ಮದೆಂದೇ ಕರೆದರು. ಬೌದ್ಧರ ವಿಹಾರಗಳೂ, ಚೈತ್ಯಗಳೂ ಬ್ರಾಹ್ಮಣರ ದೇವಾಲಯಗಳಾದವು. ಏಕನಾಥೇಶ್ವರಿ ದೇವಾಲಯವು ಇಂತಹವುಗಳಲ್ಲಿ ಒಂದು.[೧೭೧]

ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಎಕ್ಕನಾಥಿ, ಎಕ್ಕನಾಧಿ, ಏಕನಾತಿ ಎಂದು ಈ ದೇವತೆಯನ್ನು ಕರೆಯಲಾಗಿದೆ. ಆದರೆ ನಾಯಕರ ಕಾಲದಲ್ಲಿ ಏಕನಾಥಮ್ಮ ಎಂಬ ಹೆಸರು ಪ್ರಚಲಿತಕ್ಕೆ ಬಂದಿತು. ಈ ದೇವಾಲಯದಲ್ಲಿ ಯುಗಾದಿಯ ೧೫ ದಿನಗಳ ನಂತರ ನಡೆಯುವ ಸಿಡಿ ಆಕರ್ಷಣೀಯ. ಎರಡನೆಯ ಇಮ್ಮಡಿ ಮದಕರಿನಾಯಕನು ಬಾಣದ ಲಿಂಗಯ್ಯನ ಮೂಲಕ ಮರವಂಜಿ ಗ್ರಾಮದಿಂದ ಸಿಡಿಕಂಬವನ್ನು ತರಿಸಿ ಚೈತ್ರ ಮಾಸದಲ್ಲಿ ಸಿಡಿ ಆಚರಿಸಲು ಏರ್ಪಾಡು ಮಾಡಿದನು. ಭರಮಣ್ಣನಾಯಕನ ಕಾಲದಲ್ಲಿ ಏಕನಾಥಮ್ಮನಿಗೆ, ಸಿಡಿ ಆಡುವ ಸೇವೆಗಾಗಿ ದಾನದತ್ತಿ ನೀಡಿ ಹಿತ್ತಾಳೆ ಚೌಡಿಕೆಯನ್ನು ಮಾಡಿಸಿಕೊಟ್ಟರಲ್ಲದೆ,[೧೭೨] ಏಕನಾಥಮ್ಮನ ಉಚ್ಛ್ರಾಯ ಕೂಡಿಸುವ ಸಲುವಾಗಿ ಒಂದು ಗಾಳಿಮಂಟಪ ನಿರ್ಮಿಸಿ, ಚೈತ್ರಶುದ್ಧ ಹತ್ತರಂದು ಏಕನಾಥಮ್ಮನ ರಥೋತ್ಸವ ಆಚರಿಸುತ್ತಿದ್ದರು. ಆಗ ವಿಶೇಷ ಪೂಜೆಯನ್ನು ಅರಸುಮನೆತನದಿಂದ ಸಲ್ಲಿಸಲಾಗುತ್ತಿತ್ತು.

ಚಿತ್ರದುರ್ಗ ಅರಸರ ಕುಲದೇವತೆ ಮತ್ತು ಮನದೇವತೆಯಾದ ಉಚ್ಚಂಗಮ್ಮನನ್ನು ಮತ್ತಿ ತಿಮ್ಮಣ್ಣ ನಾಯಕ (ಕ್ರಿ.ಶ. ೧೫೬೭-೧೫೮೮) ಹರಪನಹಳ್ಳಿಯ ಮೂಲಪುರುಷ ದಾದಾನಾಯಕನಿಗೆ ತನ್ನ ಮಗಳಾದ ಹೊನ್ನಮ್ಮನಾಗತಿಯನ್ನು ಕೊಟ್ಟು ಮದುವೆಯ ಉಡುಗೊರೆಯಾಗಿ ಉಚ್ಚಂಗಮ್ಮನನ್ನು ನೀಡಿದ್ದನು.

ಹೊನ್ನಮ್ಮ ನಾಗತಿ ಕೆಲದಿನಗಳ ನಂತರ ದುರ್ಮರಣಕ್ಕೀಡಾದಳು. ಆಗ ಚಿತ್ರದುರ್ಗ ಮತ್ತು ಹರಪನಹಳ್ಳಿಯ ನಡುವಿನ ಸಂಬಂಧ ಕೆಡುತ್ತದೆ. ಚಿತ್ರದುರ್ಗದ ಅರಸರು ಉಚ್ಚಂಗಮ್ಮನ ದರ್ಶನಕ್ಕೂ ಹೋಗದಂತಾಗುತ್ತದೆ.

ಇಮ್ಮಡಿ ಮದಕರಿನಾಯಕ (ಕ್ರಿ.ಶ. ೧೬೫೨-೧೬೭೪)ನಿಗೆ ಮಕ್ಕಳಿರಲಿಲ್ಲ. ಸಂತಾನಾಪೇಕ್ಷೆಯಿಂದ ಉತ್ಸವಾಂಬೆಗೆ 'ಇದಿರೆತ್ತಿ' ಪೂಜೆ ಮಾಡುತ್ತಾನೆ. ಈತನ ಮಡದಿ ಬೇವಿನಸೀರೆಯ ಹರಕೆ ನೀಡಿ ಪೂಜಿಸಿದಳು. ಆಗ ಈತನಿಗೆ ಕೆಂಚವ್ವಳೆಂಬ ಮಗಳು ಹುಟ್ಟಿದಳಂತೆ. ನಂತರ ಪೂಜಾರಿ ಕೆಂಚಯ್ಯ, ಚೌಡಿಕೆ ಸಿದ್ಧಯ್ಯ ಎಂಬುವರ ಸಹಾಯದಿಂದ ಉತ್ಸವಾಂಬೆಯನ್ನು ಚಿತ್ರದುರ್ಗಕ್ಕೆ ಕರೆತಂದು, ಮರದ ಒಂದು ಗುಡಿಯನ್ನು ಕಟ್ಟಿಸಿ ಪ್ರತಿಷ್ಠಾಪಿಸುತ್ತಾನೆ.[೭೩] ನಂತರ ಭರಮಣ್ಣನಾಯಕ(ಕ್ರಿ.ಶ. ೧೬೮೯-೧೭೨೧)ನು ಹಾಗೂ ಹಿರೇ ಮದಕರಿನಾಯಕ(ಕ್ರಿ.ಶ. ೧೭೨೧-೧೭೪೮) ಈಗಿನ ದೇವಾಲಯವನ್ನು ನಿರ್ಮಾಣ ಮಾಡುತ್ತಾರೆ. ಅಂದಿನಿಂದ ಈ ದೇವತೆಯನ್ನು ಭಕ್ತಿಭಾವದಿಂದ ಪೂಜೆಮಾಡಲು ಪ್ರಾರಂಭಿಸುತ್ತಾರೆ. ಈ ದೇವತೆಯನ್ನು ಪೂಜಿಸುತ್ತಿದ್ದ ಮೇಲುದುರ್ಗದ ಹಿರೇಮಠ ವಂಶದ ಜಂಗಮರಿಗೆ ಬಸಾಪುರ ಎಂಬ ಗ್ರಾಮವೊಂದನ್ನು ದಾನವಾಗಿ ನೀಡುತ್ತಾರಲ್ಲದೆ, ಸಿಡಿಸೇವೆ ನಡೆಯಲು ಭರಮಣ್ಣ ನಾಯಕ ಪ್ರೋತ್ಸಾಹ ನೀಡಿದನು. ಮುಂದೆ ಅರಸರೆಲ್ಲರೂ ಇದಕ್ಕೆ ಬೇರೆಯ ವಿಸ್ತರಣೆ ಸೇವೆಮಾಡುತ್ತ ಭಕ್ತಿಯಿಂದ ನಡೆದುಕೊಂಡಂತೆಯೂ ತಿಳಿದುಬರುತ್ತದೆ.

ಇದೇ ಭರಮಣ್ಣನಾಯಕನ ಕಾಲದಲ್ಲಿ ಒಮ್ಮೆ ಇಲಿಗಳಿಂದ ಸಾಂಕ್ರಾಮಿಕ ರೋಗ ಹರಡಿದಾಗ ಅರಸ, ನಾಗತಿಯರು, ಮಕ್ಕಳು, ಪ್ರಜೆಗಳೆಲ್ಲ ದುರ್ಗವನ್ನು ಬಿಟ್ಟು ಜೋಳಗಟ್ಟದ ಹತ್ತಿರ ೩ ತಿಂಗಳಿನವರೆಗೆ ವಾಸವಾಗಿದ್ದು, ಆ ರೋಗದ ನಿವಾರಣೆಗಾಗಿ ದುರ್ಗಮ್ಮ, ಮರಿಯಮ್ಮ ಪ್ರತಿಮೆಗಳನ್ನು ಮಾಡಿಸಿ ವಿಶೇಷ ಪೂಜೆ ಮಾಡಿಸಿದರು. ಆಗ ಊರೊಳಗಿನ ದೇವರುಗಳಿಗೆ ಪೂಜೆ ನಡೆಯದಾಗಿತ್ತು.[೭೪] ಪ್ರತಿವರ್ಷ ಮಹಾಲಯ ಅಮಾವಾಸ್ಯೆಯ ದಿನ ಚಿತ್ರದುರ್ಗದ ಅರಸರ ಕುಟುಂಬದವರೆಲ್ಲ ಕಣಕುಪ್ಪೆಗೆ ಹೋಗುತ್ತಿದ್ದರು. ಭರಮಣ್ಣನಾಯಕನು ಭಾರತದ ಹುಣ್ಣಿಮೆ ದಿನ ಹೋಗಲು ಪ್ರಾರಂಭಿಸುತ್ತಾನೆ. ಆ ಕಾಲದಲ್ಲಿ ಅರಸರ ಪರಿವಾರವೆಲ್ಲ ಬೇವಿನ ಉಡಿಗೆ ಉಟ್ಟು, ಉತ್ಸವಾಂಬಳಿಗೂ, ಕಾಟಮ್ಮಳಿಗೂ ಸೇವೆ ಮಾಡಿ ಬರುತ್ತಿದ್ದರು.[೭೫]

ಚಿತ್ರದುರ್ಗದ ಕೊನೆಯ ಅರಸ ರಾಜಾ ವೀರಮದಕರಿಯು ಉತ್ಸವಾಂಬೆಯ ಪರಮಭಕ್ತನಾಗಿದ್ದು ಉದಯಕಾಲದಲ್ಲಿ ದೇವಿಯ ಭಂಡಾರವನ್ನು ಧರಿಸಿ, ದೇವಿಯ ಧ್ಯಾನ ಮಾಡುತ್ತಿದ್ದನು. ಈ ಅರಸನು ಯುದ್ಧಕ್ಕೆ ಹೊರಡುವ ಮೊದಲು ದೇವಿಯ ಸಮ್ಮುಖದಲ್ಲಿ ನಿಂತು,

ಕಂಡೆ ನಿಮ್ಮಯ ಪಾದವ ಶ್ರೀ ಉತ್ಸವಾಂಬ
ಕಂಡೆ ನಿಮ್ಮಯ ಪಾದವ
ಧರಣೀಶ ಮದಕರಿರಾಜೇಂದ್ರನ ಕರುಣಾದಿ ರಕ್ಷಿಸಮ್ಮ

ದುರುಳ ಶತ್ರುಗಳ ಸಂಹರಿಸಿ ಸಂಸ್ಥಾನವ, ಪರಿಪಾಲಿಸಬೇಕು
ಬಿರುದು ನಿನ್ನದು ತಾಯೆ[೧೭೬]

ಎಂದು ಪ್ರಾರ್ಥಿಸುತ್ತಿದ್ದನಂತೆ.

ಈ ಮನೆತನದವರು ಈ ದೇವಿಯನ್ನು ಪೂಜೆ ಮಾಡುವ ಸಂದರ್ಭದಲ್ಲಿಯ ವಿಧಾನವನ್ನು ಜನಪದ ಗೀತೆಯೊಂದು

ಹಾಲಲ್ಲಿ ಅಭಿಷೇಕ ಎಳನೀರು ಮಜ್ಜನ
ಸಣ್ಣ ಮಲಿಗೇಲಿ ಶಿವಪೂಜೆ | ಆದಾವಲ್ಲೆ
ಕನ್ನಡಿ ಮೊಕದ ಚೆಲುವೀಗೆ[೧೭೭]

ಎಂದು ಹೇಳುತ್ತದೆ. ಮತ್ತೊಂದು ನುಡಿಯಲ್ಲಿ, ಯುದ್ಧಕ್ಕೆ ಹೊರಟಾಗ ದೇವಿಯ ಅಪ್ಪಣೆ ಪಡೆಯಲು ಬಂದುದ್ದನ್ನು

ಅಲ್ಲಿಂದ ಮದಕರಿ ಮತ್ತೆಲ್ಲಿಗೆ ಹೋದಾನೆ
ಹೋದಾನೆ ಏಕನಾಥಿ ಗುಡಿತನಕ | ಮೆದಕೇರಣ್ಣ
ತಂದಾನೆ ಹಣ್ಣುಕಾಯಿಗಳು,[೧೭೮]

ಇನ್ನೊಂದು ನುಡಿಯಲ್ಲಿ

ಹಣ್ಣುಕಾಯಿಗಳ ತಂದು ಮಂಗಳಾರತಿ ಮಾಡಿಸ್ಯಾನೇ
ಅಪ್ಪಣೆಕೊಡು ನನ್ನ ಮನೆದೇವಿ | ಅಂದಾರೆ
ಅಪ್ಪಣೆ ಕೊಡಲಿಲ್ಲ ಪುಷ್ಪಾವ ಕೊಡಲಿಲ್ಲ[೧೭೯]

ಅಲ್ಲದೇ ಚಿತ್ರದುರ್ಗದ ಅರಸರು ಈ ದೇವತೆಗಳನ್ನು ಒಲಿಸಿಕೊಳ್ಳಲು ಪೂಜೆ ಮಾಡುತ್ತಿದ್ದರಲ್ಲದೇ, ಸಂತೃಪ್ತಗೊಳಿಸಲು ಬಲಿಕೊಡುವ ಕಾರ್ಯಕ್ರಮವನ್ನು ಮಾಡುತ್ತಿದ್ದರು. ಇದು ಒಂದು ಕೋಲಾಟದಲ್ಲಿ

ವರುಷ ವರುಷಕೆ ಬರುವೊ
ಹರಕೆ ಏಕನಾಥವ್ವೆ | ಕೋಲು.....
ಹರಕೆಗಾಗಿ ಕುರಿ ಕೋಣನ್ನ ಕಡಿಸ್ಯೇನೆ | ಕೋಲು[೧೮೦]

ಎಂಬ ವಿವರಣೆ ಬರುತ್ತದೆ. ಅಲ್ಲದೆ ಯುದ್ಧಭೂಮಿಗೆ ಹೋಗುವಾಗ ದೇವಿಯ ಅಪ್ಪಣೆಯನ್ನು ಪಡೆದುಕೊಳ್ಳುವ ಮತ್ತು ಯುದ್ಧದಲ್ಲಿ ಗೆಲುವು ದೊರೆತ ನಂತರ ದೇವಿಗೆ ವಿಶೇಷ ಪೂಜೆ ಸಲ್ಲಿಸುವ ಸಂಪ್ರದಾಯಗಳು ಈ ಅರಸು ವರ್ಗದಲ್ಲಿದ್ದುದು ಕಂಡುಬರುತ್ತದೆ. ಇದನ್ನು ಹೇಳುವ ಜಾನಪದ ನುಡಿಯೊಂದು ಇಂತಿದೆ.

ನಾಹೋದ ಕಾರಿಯವು ಗೆಲುವುಂಟಾದ್ರೆ

ಬಾನದ ಕುರಿಕೋಣ ಕಡಿಸುವೆ | ಕರಿಯಮ್ಮ ತಾಯಿ

ಬಲಗಡೆಗೆ ಕೊಪ್ಪು ಕೊಡು ನನಗೆ[೧೮೧]

ಎಂದು ಅರಸ ಬೇಡುತ್ತಾನೆ.

ಚಳ್ಳಕೆರೆಯ ಗ್ರಾಮದೇವತೆ ಚಳ್ಳಕೇರಮ್ಮ ಚಿತ್ರದುರ್ಗದ ಅರಸರ ಆರಾಧ್ಯದೈವ. ದೊಡ್ಡ ಮದಕರಿನಾಯಕ ತಮ್ಮ ಮನೆದೇವತೆ ಉತ್ಸವಾಂಬೆಯನ್ನು ಚಳ್ಳಕೆರೆಯಲ್ಲಿ ಪ್ರತಿಷ್ಠಾಪಿಸಲು ಪ್ರಯತ್ನಿಸಿರುವುದು ಚಳ್ಳಕೇರಮ್ಮನ ಸ್ಥಾಪನೆಗೆ ಕಾರಣವಾಯಿತು. ಈಕೆಯ ಜಾತ್ರೆ ಪ್ರತಿವರುಷ ವೈಶಾಖ ಮಾಸದಲ್ಲಿ ನಡೆಯುತ್ತದೆ. ಜಾತ್ರೆಯ ದಿನ ಈ ದೇವಿಯ ಮಾಂಗಲ್ಯ ತೆಗೆಯುವ ಸಂಪ್ರದಾಯವಿದೆ. ಆಗ ಚಿತ್ರದುರ್ಗದ ರಾಜವಂಶಸ್ಥರು ಚಳ್ಳಕೇರಮ್ಮನನ್ನು ತಮ್ಮ ಕುಲದ ಮಗಳೆಂದು ಭಾವಿಸಿ ತಾಳಿ ಕಳಿಸಿ ಕಟ್ಟಿಸುವ ತಾಳಿಭಾಗ್ಯ ಸಂಪ್ರದಾಯವನ್ನು[೧೮೨] ಅಂದಿನಿಂದಲೂ ನಡೆಸಿಕೊಂಡು ಬಂದಿದ್ದಾರೆ. ಈ ತಾಳಿಯನ್ನು ಚಳ್ಳಕೇರಮ್ಮನಿಗೆ ಕಳುಹಿಸುವ ಮೊದಲು, ಈ ಅರಸರ ವಂಶಸ್ಥರ ಮನೆಯಲ್ಲಿ ತಾಳಿಗೆ ಮತ್ತು ಚಳ್ಳಕೇರಮ್ಮನಿಗೆ ಮೊದಲನೆಯ ಪೂಜೆಯಾಗುತ್ತದೆ. ಈ ಪೂಜೆಯಾದ ನಂತರವೇ ಆಕೆಯ ಮುಂದಿನ ಕಾರ್ಯಕ್ರಮಗಳು ಜರುಗುತ್ತವೆ. ಚಳ್ಳಕೇರಮ್ಮನ ಪ್ರಸಾದವೆಂದು ಬೇಳೆ, ಬೆಲ್ಲ, ಎಣ್ಣೆ, ತುಪ್ಪ ಮುಂತಾದವುಗಳು ಈ ರಾಜವಂಶಸ್ಥರಿಗೆ ಗುಡಿಯಿಂದ ಬರುವ ಸಂಪ್ರದಾಯವೂ ಇದೆ. ಹೀಗೆ ಈ ಮನೆತನದವರು ಈ ದೇವತೆಗಳಿಗೆ ಈಗಲೂ ಉತ್ಸವಗಳಲ್ಲಿ ಉಡಿ ತುಂಬುವುದು, ವರ್ಷಕ್ಕೊಮ್ಮೆ ಹರಕೆಯನ್ನು ಸಲ್ಲಿಸುವ ಇಲ್ಲವೇ ಕಾಣಿಕೆಗಳನ್ನು ಅರ್ಪಿಸುವ ಮೂಲಕ ಪೂಜೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಈ ಅರಸರು ಸ್ತ್ರೀ ದೇವತೆಗಳಲ್ಲದೇ ಇನ್ನು ಅನೇಕ ದೇವರುಗಳನ್ನೂ ಪೂಜಿಸುತ್ತಿದ್ದರು.

ಚಿತ್ರದುರ್ಗದ ಮಧ್ಯಭಾಗದಲ್ಲಿರುವ ನೀಲಕಂಠೇಶ್ವರ ದೇವಾಲಯವನ್ನು ಬಿಚ್ಚುಗತ್ತಿ ಭರಮಣ್ಣ ನಾಯಕನು ಕಟ್ಟಿಸಿದನು. ಶಿವರಾತ್ರಿ, ವಿಜಯದಶಮಿಯಲ್ಲಿ ನೀಲಕಂಠೇಶ್ವರ ದೇವಾಲಯದಲ್ಲಿ ವಿಶೇಷ ಪೂಜೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತಿದ್ದವು.[೧೮೩] ಬಿಚ್ಚುಗತ್ತಿ ಭರಮಣ್ಣನಾಯಕ ಚಿತ್ರದುರ್ಗದ ತುರುವನೂರು ರಸ್ತೆಯಲ್ಲಿರುವ ಶ್ರೀವೆಂಕಟೇಶ್ವರನಿಗೆ ಅನನ್ಯ ಭಕ್ತನಾಗಿದ್ದು ಕ್ರಿ.ಶ. ೧೭೧೫ರಲ್ಲಿ ಕಾರ್ತಿಕಮಾಸದಲ್ಲಿ ಈ ದೇವರಿಗೆ ಅಮೃತಪಡಿ, ನಂದಾದೀಪ, ಮಂತ್ರಪುಷ್ಪಾರ್ಚನೆಯ ಸೇವೆಗಾಗಿ ಪಿಳ್ಳೇಕೇರನಹಳ್ಳಿಯನ್ನು ಉಂಬಳಿ ಹಾಕಿದ ವಿಷಯವನ್ನು ಅಲ್ಲಿಯ ಆಂಜನೇಯ ದೇವಾಲಯದ ಮುಂದಿನ ಶಾಸನ ವಿವರ ನೀಡುತ್ತದೆ.[೧೮೪] ಈ ರಥೋತ್ಸವದಲ್ಲಿ ನಾಯಕ ಜನಾಂಗದವರೆ ನಿಶಾನಿ ಹಿಡಿಯುವ ಪದ್ಧತಿ ಇದೆ. ಒಮ್ಮೊಮ್ಮೆ ನಾಯಕ ಅರಸರೇ ನಿಶಾನಿ ಹಿಡಿದು ಸೇವೆ ಸಲ್ಲಿಸುತ್ತಿದ್ದರಂತೆ.[೧೮೫]

ಚಿತ್ರದುರ್ಗದ ಅಣ್ಣಯ್ಯನಪೇಟೆಯ ಆಂಜನೇಯಸ್ವಾಮಿಯ ದೇವಾಲಯದಲ್ಲಿ ಕೊನೆಯ ಮದಕರಿನಾಯಕ ತಾನು ಯುದ್ಧಕ್ಕೆ ತೆರಳುವಾಗ ತನ್ನ ಮಗನ ಪಟ್ಟಾಭಿಷೇಕ ನಡೆಸಿದ. ಅದರ ಸವಿನೆನಪಿಗಾಗಿ ಅಶ್ವತ್ಥಮರವನ್ನು ನೆಟ್ಟಿದ್ದನೆಂಬ ಪ್ರತೀತಿ ಇದೆ. ಆ ಮರ ಈಗಲೂ ಇದೆ.

ಕಾಮನಬಾಗಿಲಿನ ಬೆಟ್ಟದ ಕಂದಕದ ಮಾರ್ಗದಲ್ಲಿ ಕರಿವರ್ತಿ ಈಶ್ವರ ದೇವಾಲಯವಿದೆ. ಇಲ್ಲಿ ಬೇಸಿಗೆಯ ಕಾಲದಲ್ಲಿ ಅರಸರು ತಂಪನೆಕೊಳದ ಮಂಚದ ಮೇಲೆ ಮಲಗಿ ಸೆಕೆಯನ್ನು ನಿವಾರಿಸಿಕೊಂಡು, ಸೂರ್ಯೋದಯಕ್ಕೆ ಮೊದಲೆದ್ದು ಶಿವಲಿಂಗ ದರ್ಶನವನ್ನು ಪಡೆಯುತ್ತಿದ್ದನಂತೆ.[೧೮೬] ಬಾಳೇಕಾಯಿ ಸಿದ್ಧೇಶ್ವರನ ಅನನ್ಯ ಭಕ್ತನಾಗಿದ್ದ ಹಿರೇಮದಕರಿನಾಯಕ ಈ ದೇವರ ಹೆಸರಿನಲ್ಲಿ 'ಫಿರಂಗಿ'ಯೊಂದನ್ನು ಕೊಟ್ಟಿದ್ದನು. ಹಿರೇಮದಕರಿನಾಯಕ ಹಾಗೂ ಈತನ ಮಡದಿ ಓಬವ್ವನಾಗತಿ ಅಪಾರ ದೈವಭಕ್ತಿಯುಳ್ಳವರಾಗಿದ್ದರು. ಇವರು ಚಂದ್ರಮೌಳೇಶ್ವರನೆಂಬ ಸ್ಫಟಿಕಲಿಂಗವನ್ನು ಮಾಡಿಸಿದ್ದರು. ಗುರುಗಳ ಮುಖಾಂತರ ಮಂತ್ರೋಪದೇಶವನ್ನು ಮಾಡಿಸಿಕೊಳ್ಳುತ್ತಿದ್ದರು. ತಮ್ಮ ಅಡುಗೆಯನ್ನು ಬ್ರಾಹ್ಮಣರಿಂದಲೇ ಮಾಡಿಸುತ್ತಿದ್ದರು. ಅವರಿಂದಲೇ ರುದ್ರಾಭಿಷೇಕವನ್ನು ಮತ್ತು ಸಹಸ್ರನಾಮಾರ್ಚನೆಯನ್ನು ಮಾಡಿಸಿ ಧೂಪ-ದೀಪ ನೈವೇದ್ಯಾಧಿಗಳು ಆದ ನಂತರ ಊಟ ಮಾಡುತ್ತಿದ್ದರು. ಪ್ರತಿ ಸೋಮವಾರವು ನಕ್ತ ಭೋಜನ, ಪಕ್ಷ ಪ್ರದೋಷ, ನವರಾತ್ರಿ ಒಂಬತ್ತು ದಿವಸ, ಉಚ್ಚಂಗಮ್ಮನ ರಥೋತ್ಸವದಲ್ಲಿ, ಕಂಕಣ ಕಟ್ಟಿದ ದಿವಸ ಮೊದಲು ಮಾಡಿಕೊಂಡು ಮಹೋತ್ಸವವಾಗುವವರೆಗೂ, ಭಾರತದ ಹುಣ್ಣಿಮೆ ಒಂಬತ್ತು ದಿವಸ ನವರಾತ್ರಿ ಸಹವಕ್ತ ಭೋಜನ, ಶಿವರಾತ್ರಿ ಉಪವಾಸ ಈ ಪ್ರಕಾರ ನಡೆಸುತ್ತಿದ್ದರು.[೧೮೭]

ಚಿತ್ರದುರ್ಗ ಅರಸರು ಮೂಲತಃ ವೈಷ್ಣವಮತವನ್ನು ಸ್ವೀಕರಿಸಿದವರು. ಇವರ ಹೆಸರುಗಳು ವಂಶಾವಳಿಯಲ್ಲಿ ಕಾಣುವ ಹಿನ್ನೆಲೆಯಿಂದ ಹೇಳುವುದಾದರೆ ಇವರು ಶ್ರೀವೈಷ್ಣವ ಪಂಥದ ಪ್ರಭಾವಕ್ಕೆ ಒಳಗಾದವರೆಂದು ತಿಳಿಯುತ್ತದೆ. ಈ ಧರ್ಮಕ್ಕೆ ಸಂಬಂಧಿಸಿದ ಮಠಗಳನ್ನು ಕಟ್ಟಿಸಿದರಲ್ಲದೇ ಭಕ್ತಿಯಿಂದ ನಡೆದುಕೊಂಡರು. ದಾನದತ್ತಿಗಳನ್ನು ನೀಡಿದರು. ಅವುಗಳಲ್ಲಿ ರಾಘವೇಂದ್ರಸ್ವಾಮಿಮಠ, ತಾತಾಚಾರ್ಯರಮಠ, ಮಧ್ವಾಚಾರ್ಯರಮಠ, ಮುಖ್ಯವಾದವು. ಕ್ರಿ.ಶ. ೧೬೭೮ರಲ್ಲಿ ಕಸ್ತೂರಿ ಚಿಕ್ಕಣ್ಣನಾಯಕನು ತಮ್ಮ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ರಾಮಾನುಜಕೂಟದ ತಿರುಪತಿ ಪೆದ್ದಜೀಯರಯ್ಯನವರಿಗೆ ಗ್ರಾಮವೊಂದನ್ನು ಉಂಬಳಿ ಹಾಕಿದನು. ರಾಮಾನುಜಪಂಥದವರಿಗೆ ಇದೇ ನಾಯಕನು ಕಂದಾಯವನ್ನು ಮನ್ನಾ ಮಾಡಿದ ವಿಚಾರ ತಿಳಿಯುತ್ತದೆ.[೧೮೮]

ಭರಮಣ್ಣನಾಯಕನು ವ್ಯಾಸರಾಯರಮಠದ ಶ್ರೀಮದ್ ರಘುತೀರ್ಥಪಾದಂಗಳವರಿಗೆ ಚಿತ್ರದುರ್ಗ ಸಂಸ್ಥಾನಕ್ಕೆ ಸೇರಿದ ಕೊಡಗನೂರುಸೀಮೆಯ ದೇಮಲವನ(ದ್ಯಾಮವ್ವನ) ಹಳ್ಳಿಯನ್ನು ಬಿಟ್ಟುಕೊಡುವುದರ ಮೂಲಕ ತನ್ನ ಗೌರವವನ್ನು ತೋರಿದನು.[೧೮೯]

ಚಿತ್ರದುರ್ಗದ ಅರಸರು ಶ್ರೀ ಕೂಡಲೀ ಶೃಂಗೇರಿ ಮಠದೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದಾರೆ. ಚಿತ್ರದುರ್ಗದ ಪೂರ್ವದಿಕ್ಕಿನಲ್ಲಿರುವ ಶ್ರೀ ಕೂಡಲೀ ಶೃಂಗೇರಿ ಮಠವು ಇವರಿಂದಲೇ ನಿರ್ಮಾಣಗೊಂಡಿತು. ಶ್ರೀ ಕೂಡಲೀ ಶೃಂಗೇರಿ ಮಠದೊಂದಿಗೆ ಚಿತ್ರದುರ್ಗದ ನಾಯಕ ಅರಸರ

ಸಂಬಂಧವು ಐದನೇ ಕಸ್ತೂರಿ ಚಿಕ್ಕಣ್ಣನಾಯಕನ ಕಾಲದಿಂದ (ಕ್ರಿ.ಶ. ೧೬೭೫-೧೬೮೬) ಪ್ರಾರಂಭವಾಗುತ್ತದೆ. ಕಡೆಯ ರಾಜಾ ವೀರಮದಕರಿನಾಯಕನವರೆಗೂ ಮುಂದುವರೆಯುತ್ತದೆ.[೯೦]

ಕ್ರಿ.ಶ. ೧೬೭೮ರಲ್ಲಿ ಕಸ್ತೂರಿ ಚಿಕ್ಕಣ್ಣನಾಯಕನು ಶ್ರೀ ಶಂಕರಭಾರತಿಸ್ವಾಮಿಗಳಿಗೆ ಬಾಗೂರು ಸೀಮೆಯೊಳಗಿನ ಮಾರಬಗಟ್ಟೆ ಗ್ರಾಮವನ್ನು ದಾನ ಮಾಡುತ್ತಾನೆ.[೯೧] ಭರಮಣ್ಣನಾಯಕನು (ಕ್ರಿ.ಶ. ೧೬೮೯-೧೭೨೧) ಕ್ರಿ.ಶ. ೧೬೮೯ರಲ್ಲಿ ದುರ್ಗದ ಸೀಮೆಯ ಜಾಜೂರು ಹೋಬಳಿಯೊಳಗಿನ ಹನುಮಳ್ಳಿ ಗ್ರಾಮವನ್ನು ದಾನ ಮಾಡುತ್ತಾನೆ. ಹಿರೇಮದಕರಿನಾಯಕ(ಕ್ರಿ.ಶ. ೧೭೨೧-೧೭೪೮)ನು ಶ್ರೀಶಂಕರಭಾರತಿ ಸ್ವಾಮಿಗಳನ್ನು ಕ್ರಿ.ಶ.೧೭೨೯ರಲ್ಲಿ ಚಿತ್ರದುರ್ಗಕ್ಕೆ ಬರಮಾಡಿಕೊಂಡು ಬಾಗೂರುಸೀಮೆಯ ಮಾರಬಗಟ್ಟೆ ಗ್ರಾಮವನ್ನು ದಾನ ಮಾಡುತ್ತಾನೆ.[೯೨] ಅಲ್ಲದೇ ಕ್ರಿ.ಶ. ೧೪೪೬ರಲ್ಲಿ ಮಲೇಬೆನ್ನೂರುಸೀಮೆ. ಮೂಗನಗೊಂದಿ ಗ್ರಾಮದ ದೇಸಾಯಿಕೆ, ಸರದೇಸಾಯಿಕೆ, ನಾಡ ತಳವಾರಿಕೆ ಮುಂತಾದ ವರ್ತನೆ ಹೊಲಗಳನ್ನು ಮಠಕ್ಕೆ ನಡೆಯುವಂತೆ ಏರ್ಪಾಡು ಮಾಡುತ್ತಾನೆ.[೯೩] ಕಡೇ ಮದಕರಿನಾಯಕ(ಕ್ರಿ.ಶ. ೧೭೫೪-೧೭೭೮)ನು ವಿವಾಹ ಮಹೋತ್ಸವದ ಸಂದರ್ಭದಲ್ಲಿ ಗುಂಟನೂರು ಮಲ್ಲಪ್ಪನ ಬಾವಿ, ತೋಟದ ಭೂಮಿಗಳನ್ನು ದಾನ ಮಾಡುತ್ತಾನೆ.[೯೪] ತನ್ನ ಸಹೋದರ ಪರಶುರಾಮನಾಯಕನ ವಿವಾಹ ಸಂದರ್ಭದಲ್ಲಿ ತದಂಗವಸ್ತ್ರ ಕಳುಹಿಸುವನು.[೯೫]

ಶ್ರೀ ಶಂಕರಭಾರತೀ ಸ್ವಾಮಿಗಳು ಚಿತ್ರದುರ್ಗದಲ್ಲಿ ಬ್ರಹ್ಮೀಭೂತರಾದಾಗ ನಾಯಕನು ಅವರ ಸಮಾಧಿಗೆ ಏರ್ಪಾಡು ಮಾಡುತ್ತಾನೆ.[೯೬] ಹೀಗೆ ಶ್ರೀವೈಷ್ಣವ ಮಠಗಳೊಂದಿಗೆ ತಮ್ಮ ಸಂಬಂಧವನ್ನು ಹೊಂದಿದ್ದ ಚಿತ್ರದುರ್ಗದ ಅರಸರು, ಶೈವಧರ್ಮಕ್ಕೂ ಸಮಾನ ಸ್ಥಾನಮಾನ ನೀಡಿದ್ದರು. ದೊರೆ ಒಂದನೇ ಕಸ್ತೂರಿರಂಗಪ್ಪನ ಕಾಲದಲ್ಲಿ ಈತನ ಪತ್ನಿ ನಾಗತಿ ಕಾಟವ್ವ 'ಕಾಟಿಮಠ'ವನ್ನು ಕಟ್ಟಿಸಿ[೯೭] ಅದಕ್ಕೆ ಸಂಬಂಧಿಸಿದ ಒಂದು ತೋಪು ನಿರ್ಮಿಸಿದಳು.

ಚಿತ್ರದುರ್ಗದ ಚರಿತ್ರೆಯಲ್ಲಿ ಚಿಕ್ಕಣ್ಣನಾಯಕನ ಕಾಲ ಧಾರ್ಮಿಕವಾಗಿ ಪ್ರಮುಖವಾದದ್ದು. ಇಡೀ ಅರಮನೆಯ ಪರಿವಾರ ಉಗ್ರಚನ್ನವೀರಸ್ವಾಮಿಗಳಿಂದ ದೀಕ್ಷೆ ಪಡೆದುಕೊಂಡು ವೀರಶೈವಕ್ಕೆ ಮತಾಂತರ ಹೊಂದಿದರು. ಇವರಿಗೆ ಕೋಟೆಯ ನರಸಿಂಹನ ಬಾಗಿಲಿನ ಹತ್ತಿರ ಕಲ್ಲುಮಠವನ್ನು ಕಟ್ಟಿಸಿಕೊಟ್ಟರು. ಆದರೆ ಕೆಲವೇ ದಿನಗಳಲ್ಲಿ ಲಿಂಗವನ್ನು ತೆಗೆದುಹಾಕಿ ಮೂಲ ಜಾತಿಗೆ ಮರಳಿದರು. ಮಲ್ಲವ್ವನಾಗತಿ ಮಾತ್ರ ಲಿಂಗ ತೆಗೆಯದೇ ಬೇರೊಂದು ಅರಮನೆಯಲ್ಲಿ ನೆಲೆಸಿ ಕೊನೆಯ ಕಾಲದವರೆಗೂ ವೀರಶೈವ ಧರ್ಮದಲ್ಲಿ ಮುಂದುವರೆದಳು.

ನಂತರ ಬಿಚ್ಚುಗತ್ತಿ ಭರಮಪ್ಪನಾಯಕನು ಶೈವಧರ್ಮಕ್ಕೆ ರಾಜಾಶ್ರಯ ನೀಡಿದನು. ತಾನು ಇಮ್ಮಡಿ ಶ್ರೀ ಶಾಂತವೀರ ಸ್ವಾಮಿಗಳ ಸಹಾಯದಿಂದ ಚಿತ್ರದುರ್ಗದ ಅರಸನಾದನೆಂದು ಬೆಟ್ಟದ ಮೇಲೆ ಮಠವನ್ನು

ಕಟ್ಟಿಸಿಕೊಟ್ಟನಲ್ಲದೆ ಅವರಿಗೆ ೭೨ ಬಿರುದುಗಳನ್ನು ಕೊಟ್ಟು ರಾಜಗುರುಗಳನ್ನಾಗಿ ಮಾಡಿಕೊಂಡನು. ಮಠದ ಬಗ್ಗೆ ಅನನ್ಯಭಕ್ತಿಯನ್ನು ಹೊಂದಿದ್ದ ಈತ ತನ್ನ ಏಳು ಜನ ಮಕ್ಕಳಲ್ಲಿ ಗಂಗಣ್ಣನಾಯಕ ನೆಂಬುವನನ್ನು ಮಠದ ಸೇವೆಗಾಗಿ ನೇಮಿಸಿದನು. ಕ್ರಿ.ಶ. ೧೭೧೨ರ ನವೆಂಬರ್ ೧೧ ಸೋಮವಾರದಂದು ಮುರಿಗಾಗುರುಸಿದ್ಧರಿಗೆ ದೊಡ್ಡ ತೂಗುಗಂಟೆಯನ್ನು ಭಕ್ತಿಪೂರ್ವಕವಾಗಿ ನೀಡಿದನು.[೧೯೮] ನಂತರ ಚಿತ್ರದುರ್ಗವನ್ನಾಳಿದ ಹಿರೇಮದಕರಿನಾಯಕ, ರಾಜಾ ವೀರಮದಕರಿನಾಯಕನ ಕಾಲದಲ್ಲಿ ಈ ಬೃಹನ್ಮಠದೊಂದಿಗೆ ಒಳ್ಳೆಯ ಬಾಂಧವ್ಯ ಮುಂದುವರೆಯಿತು. ಇಂದಿಗೂ ಸಹಿತ ಈ ಮನೆತನದ ವಂಶಸ್ಥರು ಈ ಮಠದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದಾರೆ.

ಚಿತ್ರದುರ್ಗದ ಅರಸರು ಶ್ರೀವೈಷ್ಣವ ಮತ್ತು ಶೈವಕ್ಕೆ ಪ್ರಾಶಸ್ತ್ಯ ನೀಡಿದಂತೆ ಮಾಧ್ವಮತಕ್ಕೂ ಆಕರ್ಷಿತರಾಗಿದ್ದುಂಟು. ಭರಮಣ್ಣನಾಯಕನ ಕಾಲದಲ್ಲಿ ರಾಘವೇಂದ್ರಸ್ವಾಮಿಗಳ ನಂತರ ೩ನೇ ಪೀಠಾಧಿಕಾರಿಗಳಾಗಿದ್ದ ಸುಮತೀಂದ್ರಸ್ವಾಮಿಗಳು ಕ್ರಿ.ಶ. ೧೭೦೦ ಹಾಗೂ ೧೭೧೧ರಲ್ಲಿ ಚಿತ್ರದುರ್ಗಕ್ಕೆ ಆಗಮಿಸಿದಾಗ, ಭರಮಣ್ಣನಾಯಕ ಬಿದರಕೆರೆ ಹೋಬಳಿ (ಜಗಲೂರು ತಾಲ್ಲೂಕು) ದೇಮಲವನ ಹಳ್ಳಿಯನ್ನು ರಘುಪತಿದೇವರ ಪೂಜೆಯ ಸಲುವಾಗಿ ನೀಡಿದನು.[೧೯೯] ಅಲ್ಲದೇ ಚಿತ್ರದುರ್ಗದ ಅರಸರ ಕಾಲದಲ್ಲಿ ಸತ್ಯ ಬೋಧಾಚಾರ್ಯರ ಹೆಸರಿನ ಮಠ, ವ್ಯಾಸರಾಯರ ಮಠ, ಬೋಧರಾಮಾಚಾರ್ಯರ ಮಠ ಮುಂತಾದ ಮಠಗಳು ಇವರ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ಹೀಗೆ ಚಿತ್ರದುರ್ಗದ ಅರಸರು ಶ್ರೀವೈಷ್ಣವ, ಶೈವ, ಮಾಧ್ವಮತಗಳೊಂದಿಗೆ ಉತ್ತಮ ಸಂಬಂಧವನ್ನು ಹೊಂದಿ ಪೂಜೆ-ಪುನಸ್ಕಾರಗಳನ್ನು ಸಲ್ಲಿಸುತ್ತಿದ್ದರು. ಈಗಲೂ ಈ ಮಠಗಳಿಗೆ ಈ ವಂಶಜರು ನಡೆದುಕೊಳ್ಳುವುದನ್ನು ಕಾಣಬಹುದಾಗಿದೆ.

ಸುರಪುರದ ನಾಯಕ ಅರಸರು ವಿಜಯನಗರದ ಧಾರ್ಮಿಕ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಬಂದ ನಾಯಕ ಅರಸುಮನೆತನದವರಲ್ಲಿ ಪ್ರಮುಖರಾಗಿದ್ದಾರೆ. ರಾಮಾನುಜಪಂಥವನ್ನು ಸ್ವೀಕರಿಸಿ ತಿರುಪತಿ ತಿಮ್ಮಪ್ಪನನ್ನು ವಿಜಯನಗರದವರು ಪೂಜಿಸಿದರೆ, ಸುರಪುರದವರು ತಿಮ್ಮಪ್ಪನನ್ನು(ಹನುಮ) ತಮ್ಮ ಕುಲದೈವವನ್ನಾಗಿರಿಸಿಕೊಂಡರು. ಇವರು ಪೂರ್ವಜರು ಮುದಗಲ್‌ಗೆ ಬಂದು ನೆಲೆನಿಂತಾಗ ಅಲ್ಲಿ ಏಳು ಹನುಮನ ಮೂರ್ತಿಗಳನ್ನು ಸ್ಥಾಪಿಸಿ ಪೂಜಿಸಿದ್ದುಂಟು. ಕಲ್ಲಪ್ಪನಾಯಕ ತನ್ನ ಏಳು ಜನ ಮಕ್ಕಳಿಗೆ ಹನುಮಪ್ಪ ನಾಯಕನೆಂದೇ ಹೆಸರಿಸಿದ್ದ. ನಂತರದ ಅರಸರು ವಾಗಿನಗೇರಿ, ವನದುರ್ಗ ಮುಂತಾದೆಡೆಗಳಲ್ಲಿ ಹನುಮಂತ ದೇವಾಲಯಗಳನ್ನು ನಿರ್ಮಿಸಿ ಪೂಜಾಕ್ರಮಗಳನ್ನು ಕೈಗೊಂಡರು.

ವನದುರ್ಗದ ಕೋಟೆಯ ಒಳಗೆ ಹನುಮಂತ ದೇವರ ದೇವಾಲಯವಿದೆ. ಈ ಭವ್ಯವಾದ ವಿಗ್ರಹ ಸಂಸ್ಥಾನದಲ್ಲಿಯೇ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಅಲ್ಲದೇ ಸಂಸ್ಥಾನದ ಸುತ್ತಲಿನ ಸಿದ್ದಾಪುರ, ವೆಂಕಟಾಪುರ, ಲಕ್ಷ್ಮಾಪುರ, ರುಕ್ಮಾಪುರ, ಅಮ್ಮಾಪುರ, ಶಾಂತಪುರ, ಬೋನ್ನಾಳ, ರತ್ನಾಳ, ಹೆಬ್ಬಾಳ,

ಬೈಚರಾಳ, ಸಿರವಾಳ, ಕೋಳಿಹಾಳ, ಅಂಬಲಿಹಾಳ, ಚಿಕ್ಕಹ್ಯೆಯಾಳ, ರಬಸಿಹಾಳ, ಬೇವಿನಾಳ, ಆಲ್ದಾಳ, ನಗನೂರು, ಹರನೂರು, ಹೇಮನೂರು, ಐಕೂರು, ಒಡಗೇರಿ, ತಳವಾರಗೇರಿ, ಗುಂಡಲಗೇರಿ, ದೇವಿಕೇರಿ ದೋರನಹಳ್ಳಿ, ಶಾರದಳ್ಳಿ, ಮಂಡಿಗಿಹಳ್ಳಿ, ಬೊಮ್ಮನಳ್ಳಿ, ತಳ್ಳಳ್ಳಿ ಭೀಮರಾಯನ ಗುಡಿ ಮುಂತಾದ ಗ್ರಾಮಗಳಲ್ಲಿ ಹನುಮಂತ ದೇವಾಲಯಗಳನ್ನು ನಿರ್ಮಿಸಿ, ಅರ್ಚನಾ ಉತ್ಸವಗಳಿಗಾಗಿ ಅರಸರು ಬಿಟ್ಟ ದತ್ತಿ ದಾನಗಳು ಸಾಂಸ್ಕೃತಿಕ ಪರಂಪರೆಯನ್ನು ಹುಟ್ಟುಹಾಕಿವೆ. ಪ್ರತಿ ಶನಿವಾರ ಎಲ್ಲಾ ಕಡೆ ಪೂಜೆ ನಡೆಯುವಂತೆ ವ್ಯವಸ್ಥೆ ಮಾಡಲಾಗಿತ್ತು.[೨೦೦] ಅರಮನೆಯಿಂದ ಎಲೆಕಾಯಿಕರ್ಪೂರ ಎಲ್ಲಾ ಕಡೆ ಕಳುಹಿಸಲಾಗುತ್ತಿತ್ತು. ಈ ಹನುಮನ ಪ್ರತೀಕವಾಗಿಯೇ ಸುರಪುರದ ಅರಸರು ಹನುಮಧ್ವಜವನ್ನು ತಮ್ಮ ಧ್ವಜವನ್ನಾಗಿ ಸ್ವೀಕರಿಸಿದರು.

ತಿರುಪತಿಯ ವೆಂಕಟರಮಣ ಇವರ ಆರಾಧ್ಯ ದೈವವೆಂದು ಪೂಜಿಸಿದ ಸುರಪುರದ ಅರಸರು ದೂರದ ತಿರುಮಲೆಗೆ ಹೋಗುವುದು ಅಲ್ಲಿಯ ಉತ್ಸವಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವುದಕ್ಕೆ ತೊಂದರೆಯಾದಾಗ, ತಿರುಪತಿ ವೆಂಕಟರಮಣನ ಇನ್ನೊಂದು ರೂಪವಾದ ವೇಣುಗೋಪಾಲನನ್ನು ಹಸರಂಗಿ ಪಾಮನಾಯಕ (ಕ್ರಿ.ಶ. ೧೬೬೬-೧೬೮೭)ನು ಕ್ರಿ.ಶ. ೧೬೭೦ರಲ್ಲಿ ವಾಗಿನಗೇರಿಯಲ್ಲಿ ವೇಣುಗೋಪಾಲ ಮಂದಿರವನ್ನು ನಿರ್ಮಿಸಿದನಲ್ಲದೆ ನಿತ್ಯಪೂಜೆಗಾಗಿ ವ್ಯವಸ್ಥೆ ಮಾಡಿದ್ದನು. ನಂತರ ಪೀತಾಂಬರಿ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೮೭-೧೭೨೬)ನು ವಾಗಿನಗೇರಿಯ ಗೋಪಾಲಸ್ವಾಮಿಯ ಪೂಜೆಗಾಗಿ ಪೂಜಾರಿಗೆ ರೂ. ೩೦೦ ಬಿಘ, ೮ ಗದ್ದಿ, ೯೦ ಬಿಘಖುಷ್ಕಿ ಜಮೀನು ಇನಾಮು ಕೊಟ್ಟು ವ್ಯವಸ್ಥೆಗೊಳಿಸಿದನು.[೨೦೧] ನಂತರ ಕೊಡೇಕಲ್, ಹಿರೇಮುದನೂರು ಮುಡಬೂಳಗಳಲ್ಲಿ ಈ ದೇವಸ್ಥಾನಗಳು ನಿರ್ಮಾಣವಾದವು. ಅಲ್ಲಿಯೂ ದಿನನಿತ್ಯ ಅರ್ಚನಾದಿಗಳು ನಡೆಯುವಂತೆ ವ್ಯವಸ್ಥೆ ಮಾಡಲಾಯಿತು.

ಸುರಪುರದ ಅರಸರು ತಮ್ಮ ರಾಜಧಾನಿಯನ್ನು ಸುರಪುರಕ್ಕೆ ವರ್ಗಾಯಿಸಿದ ಮೇಲೆ, ಪೀತಾಂಬರಿ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೮೭-೧೭೨೬) ನಡುಗೇರಿಯಲ್ಲಿ ಗೋಪಾಲಸ್ವಾಮಿಯ ಗುಡಿಯನ್ನು ನಿರ್ಮಿಸಿದನು. ಈ ದೇವಾಲಯದಲ್ಲಿ ವೈಖಾನಸ ಮತ್ತು ಪಾಂಚರಾತ್ರ ಆಗಮಗಳಿಗನುಗುಣವಾಗಿ ಪೂಜೆಯನ್ನು ಮಾಡಲಾಗುತ್ತಿತ್ತು.[೨೦೨]

ಪ್ರಾತಃಕಾಲದಲ್ಲಿ ಅಭಿಗಮನಾರಾಧನೆ ಜರುಗಿ ದೇವರ ದರ್ಶನಕ್ಕಾಗಿ ಸಾರ್ವಜನಿಕರಿಗೆ ಅವಕಾಶ ಮಾಡಿಕೊಡುವುದು. ಮಧ್ಯಾಹ್ನದಲ್ಲಿ ಇಜ್ಯಾಕಾಲಾರಾಧನೆ ಜರುಗುತ್ತದೆ. ಈ ಸೇವೆಯ ಸಂದರ್ಭದಲ್ಲಿ ಅರ್ಚಕರಿಗೆ ಪರಿಚಾರಕರು ಅಭಿಷೇಕ, ಅರ್ಚನೆ, ಧೂಪದೀಪಾದಿಗಳು, ನೈವೇದ್ಯಗಳು ಮತ್ತು ಬಲಿಹರಣಕ್ಕೆ ಸಹಾಯಕವಾಗಿರುವರು. ಸಾಯಂಕಾಲದ ಸಂದರ್ಭದಲ್ಲಿ ನಗಾರಿ, ನೌಬತ್ತು, ತುತ್ತೂರಿ ಗೌರಿಗಾಳು, ಸನಾದಿಯವರು, ದೀವಟಿಗೆಯವರು, ಜಾಗಟೆ ಮತ್ತು ಉಸ್ತುವಾರಿ ನೋಡಿಕೊಳ್ಳುವ ಹವಾಲ್ದಾರರು ಮುಂತಾದವರಿರುತ್ತಾರೆ.

ಪ್ರತಿ ಶನಿವಾರ ಸಾಯಂಕಾಲದ ಸೇವೆ ಮುಗಿದ ಮೇಲೆ ಅರಮನೆಯ ಕಡೆಯಿಂದ ವಿಶೇಷ ಸೇವೆ ಜರುಗುತ್ತದೆ. ಇದರಲ್ಲಿ ಸುರಪುರದ ಅರಸರು ಭಾಗವಹಿಸುತ್ತಿದ್ದರು. ಬೆಳಿಗ್ಗೆ ಮತ್ತು ಸಾಯಂಕಾಲದ ಸೇವೆ ಮುಗಿದ ನಂತರ ಪ್ರಸಾದ ವಿತರಣೆ ಜರುಗುತ್ತಿತ್ತು. ಅದನ್ನು ಅಭಿಗಮನಾರಾಧನೆ ಎಂದು ಕರೆಯುತ್ತಿದ್ದರು.[೨೦೩]

ವೇಣುಗೋಪಾಲಸ್ವಾಮಿಯ ಪೂಜೆಯಲ್ಲಿ ಭಾಗವಹಿಸುತ್ತಿದ್ದ ಸೇವಾವರ್ಗಕ್ಕೆ ಸುರಪುರ ಸಂಸ್ಥಾನದಿಂದ ಸಂಬಳವನ್ನು ನೀಡಲಾಗುತ್ತಿತ್ತು :

ಪುರಾಣ ಹೇಳುವ ೮ ಜನರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೫ ರೂ.

ಪಲ್ಲಕ್ಕಿ ಸೇವೆ ಮಾಡುವ ಎಂಟು ಜನರಲ್ಲಿ ಪ್ರತಿಯೊಬ್ಬರಿಗೆ ತಿಂಗಳಿಗೆ - ೦೨ ರೂ.

ಸೂರ್ಯ ಚಂದ್ರ ಪ್ರಭಾವಳಿ ಸೇವಕರಿಗೆ ಪ್ರತಿಯೊಬ್ಬರಿಗೆ ತಿಂಗಳಿಗೆ - ೧೨ ಆಣೆ.

ದ್ರಾವಿಡವೇದ ಪಾರಾಯಣ ಮಾಡುವ ನಾಲ್ವರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೫ ರೂ.

ನಗಾರಖಾನೆಯ ೫ ಜನರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೨ ರೂ.

ತುಳಸಿ ಒದಗಿಸಿದವರಿಗೆ ಜನರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೨ ರೂ.

ನಾಲ್ವರು ಪರಿಚಾರಕರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೨ ರೂ.

ತಾಸು ಬಡಿಯುವ ೪ ಜನರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೪ ರೂ.

ಜಾಗಟೆ ಹೊಡೆಯುವವನಿಗೆ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೮ ಆಣೆ

ದೇವರಿಗೆ ಬೆತ್ತ ಹಿಡಿಯುವ ಇಬ್ಬರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೧/೨ ರೂ.

ಚಾಮರ ಬೀಸುವ ಇಬ್ಬರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೧/೨ ರೂ.

ಭಜಂತ್ರಿ ಬಾರಿಸುವ ಪ್ರತಿಯೊಂದು ಮೇಳಕ್ಕೆ ತಿಂಗಳಿಗೆ - ೦೮ ರೂ.

ಕೋಠಿಖಾನೆಯ ಇಬ್ಬರು ಮೇಲ್ವಿಚಾರಕರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೨ ರೂ.

ಕೋಠಿಖಾನೆಯ ಸಾಮಾನು ಸಿದ್ಧಗೊಳಿಸುವ ಇಬ್ಬರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ -೦೪ ರೂ.

ಕೋಠಿಖಾನೆಯ ಹವಾಲ್ದಾರನಿಗೆ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೪ ರೂ.

ಏಕಾಂತ ಸೇವೆ ಮಾಡುವವನಿಗೆ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೨ ರೂ.

ಅಡುಗೆ ಮಾಡುವ ಇಬ್ಬರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ - ೦೮ ರೂ.

ದೇವರಿಗೆ ದರ್ಪಣ ಹಿಡಿಯುವವರಿಗೆ ಪ್ರತಿಯೊಬ್ಬರಿಗೂ ತಿಂಗಳಿಗೆ - ೧/೨ ರೂ.

ತೋಮಾಲ ಸೇವೆಗಾಗಿ ಇರುವ ಒಬ್ಬಳಿಗೆ ತಿಂಗಳಿಗೆ - ೨ ರೂ.

ಈ ರೀತಿ ತಿರುಪತಿಯ ಸೇವೆಯ ಮಾದರಿಯನ್ನೇ ಅನುಸರಿಸಲಾಗುತ್ತಿತ್ತು.[೨೦೪]

ಅಲ್ಲದೇ ದೊಡ್ಡಲಕ್ಷ್ಮಾಸಾನಿ ಎಂಬ ಮಹಿಳೆಗೆ (ಕುಂಭ ಆರತಿಗೆ, ಮೆರವಣಿಗೆ ಹೊರಟಾಗ ಮುಂದೆ ಇರುತ್ತಿದ್ದಳು) ಕೊಳ್ಳೂರು ಹಾಗೂ ಸಿರಿವಾಳದಲ್ಲಿ ೬- ಬಿಘೆ ಜಮೀನು ಇನಾಮು ನೀಡಿದ್ದರು. ಶೆಟ್ಟಿಗೇರಿ, ಹಾರಣಗೇರಿ, ಹತ್ತಿಗೂಡೂರು, ಹರವಾಳ, ಹದ್ನೂರು ಗ್ರಾಮಗಳನ್ನು ದೇವಾಲಯದ ಖರ್ಚಿಗಾಗಿ ನೀಡಲಾಗಿತ್ತು.[೨೦೫] ಈ ರೀತಿ ಸುರಪುರದ ಅರಸರು ವೇಣುಗೋಪಾಲಸ್ವಾಮಿಗೆ ಪೂಜೆಯ ವಿಧಾನವನ್ನು ಅಳವಡಿಸಿದ್ದರು. ಇವರು ಶ್ರೀರಾಮನವಮಿ, ಕೃಷ್ಣ ಜನ್ಮಾಷ್ಟಮಿ, ದಸರಾ ಉತ್ಸವದ ಸಂದರ್ಭದ ವಿಶೇಷ ಪೂಜೆಯಲ್ಲಿ ಭಾಗವಹಿಸುತ್ತಿದ್ದರು.

ಸುರಪುರದ ಅರಸ ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೦-೭೩)ನ ಕಾಲದಿಂದ ತಿರುಪತಿಯ ಮಂದಿರಕ್ಕೆ ಐಕೂರು ಎಂಬ ಗ್ರಾಮವನ್ನು ನೀಡಿ, ಪ್ರತಿವರುಷ ಪುರೋಹಿತರೋರ್ವರನ್ನು ತಿರುಪತಿಯಲ್ಲಿ ನಡೆಯುವ ಪೂಜಾವಿಧಾನಗಳಲ್ಲಿ ಭಾಗವಹಿಸುವ ಏರ್ಪಾಡು ಮಾಡಿದನು. ಅರಸು ತಿರುಪತಿ ವೆಂಕಟರಮಣನಿಗೆ ನೀಡಿದ ಐಕೂರು ಗ್ರಾಮಕ್ಕೆ ಹೋದರೆ ಚಪ್ಪಲಿಗಳನ್ನು ಹಾಕುತ್ತಿರಲಿಲ್ಲ. ಇಂದಿಗೂ ಈ ಪದ್ಧತಿಯನ್ನು ಆ ವಂಶಸ್ಥರು ಅನುಸರಿಸುತ್ತಿದ್ದಾರೆ. ತಿರುಪತಿಯಲ್ಲಿಯೂ ವೈಖಾನಸ ಆಗಮದಂತೆ ಪೂಜೆ ನಡೆಯುತ್ತಿದ್ದು, ಕೆಲವು ಸೇವೆಗಳಲ್ಲಿ ಸುರಪುರದ ಅರಸರ ಹೆಸರಿನಿಂದ ಪೂಜೆ ಮಾಡುತ್ತಿರುವುದು ಇಂದಿಗೂ ಮುಂದುವರೆದಿದೆ. ದಿನನಿತ್ಯದ ಸೇವೆಯಲ್ಲಿ ವೆಂಕಟೇಶ್ವರನ ಮಹಾದ್ವಾರ ತೆಗೆಯುವ ಮುನ್ನ ಸುಪ್ರಭಾತದೊಂದಿಗೆ ಸೇವೆ ಪ್ರಾರಂಭವಾಗುವುದು, ನಂತರ ಮೊದಲ ಮಂಗಳಾರತಿಯನ್ನು ಸುರಪುರದ ಹೆಸರಿನಿಂದ ಮಾಡುವರು. ನಂತರದಲ್ಲಿ ನಡೆಯುವ ಸೇವೆ ತೋಮಾಲ ಸೇವೆ ಸುರಪುರದ ಅರಸರು ತೋಮಾಲಸೇವೆಗೆ ವಿಶೇಷವಾದ ತೋಟವನ್ನು ನಿರ್ಮಿಸಿರುವರು. ಈ ತೋಟದಿಂದಲೇ ಪ್ರತಿದಿನ ನಡೆಯುವ ಪೂಜೆಗೆ ತುಳಸಿ, ಹೂಗಳನ್ನು ಪಡೆಯಲಾಗುತ್ತದೆ.

ನಂತರ ಅಖಂಡಸೇವೆ, ಅರ್ಚನಾಸೇವೆಯಲ್ಲಿ ಸುರಪುರದ ತೋಟದಲ್ಲಿ ಬೆಳೆಸಿದ ತುಳಸಿಯಿಂದ ಈ ಸೇವೆ ಪ್ರಾರಂಭವಾಗುತ್ತದೆ. ಅರ್ಚನೆ ಮುಗಿದ ಬಳಿಕ ಸುರಪುರದ ಅರಸು ಮನೆತನದ ಪ್ರತಿನಿಧಿಗಳಿಗೆ ಆಶೀರ್ವಾದ ಕಾರ್ಯಕ್ರಮವಾದ ನಂತರ ಉಳಿದವರಿಗೆ ಆಶೀರ್ವಾದ ಮಾಡುವ ಪದ್ಧತಿ ಇಂದಿಗೂ ಮುಂದುವರೆದಿದೆ. ನೈವೇದ್ಯ ಸೇವೆಯಲ್ಲಿ ಸುರಪುರದ ಅರಸರ ಪ್ರತಿನಿಧಿಗಳಿಗೆ ಮೊದಲು ಪ್ರಸಾದ ನೀಡಿ, ಕರ್ನಾಟಕದ ಸುರಪುರದವರ ಛತ್ರದಲ್ಲಿ ತಂಗಿದ್ದ ಭಕ್ತರಿಗೆ ಪ್ರಸಾದ ನೀಡಿದ ಬಳಿಕ ಉಳಿದವರಿಗೆ ಪ್ರಸಾದ ಹಂಚುತ್ತಾರೆ. ಅದೇ ರೀತಿ ವಾರದ ಸೇವೆ, ಮಾಸಸೇವೆಗಳು ಜರುಗುತ್ತವೆ.[೨೦೬]

ನಂತರ ವರ್ಷದಲ್ಲಿ ವಾರ್ಷಿಕೋತ್ಸವ ನಡೆಯುತ್ತದೆ. ಈ ಉತ್ಸವವನ್ನು ತೋಟೋತ್ಸವ ಅಥವಾ ಪಲ್ಲವೋತ್ಸವ ಎಂದು ಕರೆಯುತ್ತಾರೆ. ಪ್ರತಿವರುಷ ಉತ್ತರಾಯಣ ಗ್ರೀಷ್ಮ ಋತುವಿನ ಆಷಾಢಮಾಸದ ಉತ್ತರಾಭಾದ್ರ ನಕ್ಷತ್ರದಲ್ಲಿ ನಡೆಯುತ್ತದೆ. ಹಸರಂಗಿ ಪಾಮನಾಯಕನ ಕಾಲದಿಂದ ತಿರುಪತಿಯ

ವೆಂಕಟೇಶ್ವರ ದೇವರ ಹಾಸಿಗೆಯ ಸೇವೆಗಾಗಿ ಮಂಚ, ಅದರ ನವಾರವು ಸುರಪುರ ಸಂಸ್ಥಾನದಿಂದ ಕಳುಹಿಸಲ್ಪಡುತ್ತಿತ್ತು. ಇದನ್ನು ತೆಗೆದುಕೊಂಡು[೨೦೭] ಈ ಉತ್ಸವಕ್ಕೆ ಸುರಪುರದ ಅರಸರ ಪ್ರತಿನಿಧಿಗಳು ನಾಲ್ಕು ದಿನ ಮುಂಚೆಯೇ ತಿರುಪತಿಗೆ ಹೋಗಿ ಉತ್ಸವದ ಪೂಜೆಯ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಈ ಉತ್ಸವದ ಮೊದಲನೆ ದಿನದ ಪೂಜೆ ಸುರಪುರದ ಅರಸರ ಹೆಸರಿನಿಂದಲೇ ನಡೆಯುತ್ತದೆ. ನಂತರ ತಿರುಗಿ ಬರುವಾಗ ಅರಸರ ಪ್ರತಿನಿಧಿ ತಂದ ನವಾರವನ್ನು ರಾಣಿ ವಾಸದವರು ದೇವರ ಪ್ರಸಾದವೆಂದು ಮಡಿಕುಪ್ಪಸಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು.[೨೦೮] ಈಗ ಮಂಚವನ್ನು ಒಯ್ಯುವ ಪದ್ಧತಿ ನಿಂತಿದೆ. ಆದರೆ ನವಾರವನ್ನು ಮಾತ್ರ ಒಯ್ಯುವ ಸಂಪ್ರದಾಯವಿದೆ.

ಪ್ರತಿ ಮೂರು ವರ್ಷಗಳಿಗೊಮ್ಮೆ ಬರುವ ಅಧಿಕ ಮಾಸದಲ್ಲಿ ಎರಡು ಸಲ ಬ್ರಹ್ಮೋತ್ಸವ ಪೂಜೆ ನಡೆಯುತ್ತದೆ. ಮೊದಲನೆಯ ಬ್ರಹ್ಮೋತ್ಸವ ಪೂಜೆ ಪ್ರತಿವರ್ಷವೂ ನಡೆಯುವಂತೆ ನಡೆದರೆ, ಎರಡನೆಯದು ನಿಜ ಆಶ್ವೀಜ ಶುದ್ಧ(ಅಕ್ಟೋಬರ್ ತಿಂಗಳು)ದಲ್ಲಿ ಜರುಗುವುದು. ಈ ಸಂದರ್ಭದಲ್ಲಿಯೂ ಸುರಪುರದ ಅರಸರ ಪ್ರತಿನಿಧಿಗಳು ಭಾಗವಹಿಸಿರುತ್ತಾರೆ. ಸುರಪುರದ ಅರಸರ ಹೆಸರಿನಿಂದಲೇ ಮೊದಲ ಪೂಜೆ ನಡೆಯುತ್ತಿತ್ತು. ಇಂದಿಗೂ ಇದು ಮುಂದುವರೆದಿದೆ. ತಿರುಪತಿಯಲ್ಲಿರುವ ಸುರಪುರದ ಅರಸರ ಛತ್ರವನ್ನು ದೇವಾಲಯದ ಸಮಿತಿಯವರು ನಿರ್ನಾಮ ಮಾಡಿ ಅಲ್ಲಿ ಅಂಗಡಿಗಳನ್ನು ಕಟ್ಟಿದ್ದಾರೆ. ಹೂದೋಟ ಮಾತ್ರ ಇಂದಿಗೂ ಇದ್ದು ಪೂಜೆಯ ಕಾಲಕ್ಕೆ ಆ ಹೂದೋಟದ ಹೂಗಳನ್ನೇ ಬಳಸುತ್ತಿದ್ದಾರೆ.[೨೦೯]

ಸುರಪುರದ ಅರಸು ಮನೆತನದಲ್ಲಿ ಇನ್ನೊಂದು ವಿಶಿಷ್ಟ ಪೂಜೆ ಜರುಗುತ್ತದೆ. ಅದೇ ಇವರ ಆರಾಧ್ಯ ದೈವ ತಿಂಥಣಿ ಮೌನೇಶ್ವರನದು. ಪ್ರತಿವರ್ಷ ಮಾಘಶುದ್ಧ ದಶಮಿಯಿಂದ ಪೌರ್ಣಿಮೆಯವರೆಗೆ ನಡೆಯುವ ಜಾತ್ರೆಯಲ್ಲಿ ನವಮಿಯಂದು ಅಂಬಲಿಪೂಜೆ ತಿಂಥಣಿಯಲ್ಲಿ ಜರುಗಿದರೆ, ಎರಡನೆಯ ದಿನ ದಶಮಿಯಂದು ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೨-೧೭೭೩)ನು ಮೌನೇಶ್ವರನಿಗೆ ನೀಡಿದ ಪಲ್ಲಕ್ಕಿಯು ಸುರಪುರದ ಅರಮನೆಗೆ ಬರುತ್ತಿತ್ತು. ಸುರಪುರದ ಅರಸರಿಂದ ಪೂಜೆ ಸಲ್ಲಿಸಿದ ಬಳಿಕ ಅದು ತಿಂಥಣಿಗೆ ಹೋಗುತ್ತಿತ್ತು. ನಂತರ ಅಲ್ಲಿಯ ಜಾತ್ರೆಯ ಕಾರ್ಯಕ್ರಮಗಳು ಜರುಗುತ್ತಿದ್ದವು. ಈ ಪದ್ಧತಿ ಇಂದಿಗೂ ಸುರಪುರದ ಅರಸು ಮನೆತನದಲ್ಲಿ ಜೀವಂತವಾಗಿದೆ.[೨೧೦]

ಸುರಪುರದ ಅರಸರಾದ ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೨-೧೭೭೩) ಹಾಗೂ ಇಮ್ಮಡಿ ವೆಂಕಟಪ್ಪನಾಯಕರ (ಕ್ರಿ.ಶ. ೧೭೭೩-೧೮೦೨) ಆಸ್ಥಾನದಲ್ಲಿ ಮಂತ್ರಿಯಾಗಿದ್ದ ನಿಷ್ಠಿ ಕಡ್ಲಪ್ಪನಿಗೆ ಜವಾಬ್ದಾರಿಯನ್ನು ವಹಿಸಿ[೨೧೧] ಶೈವಮಠಗಳನ್ನು ಸುರಪುರದಲ್ಲಿ ನಿರ್ಮಾಣ ಮಾಡಿಸಿದರು. ಆ ಮಠಗಳಲ್ಲಿಯೂ ದಿನನಿತ್ಯದ ಪೂಜೆಯ ವ್ಯವಸ್ಥೆಯನ್ನು ಮಾಡಿದ್ದರು. ಆ ಮಠಗಳಲ್ಲಿ ಹುಣಸಗಿಮಠ,

ಬಳಬಟ್ಟಿಮಠ, ನಾಯಕಲ್‌ಮಠ, ಯಾಳಗಿಮಠ, ರಂಗಂಪೇಟೆಮಠಗಳಲ್ಲಿ ರುದ್ರಸ್ವಾಮಿಮಠ, ಚೌಕಿಮಠ, ಅಣ್ಣಾಯ್ಯನಮಠ, ಹಿರೇಮಠ, ಸುರಪುರದ ಮಠಗಳಲ್ಲಿ ಕಡ್ಲಪ್ಪನವರ ದಾಸೋಹಮಠ, ಬಿಲ್ಲಂಕೊಂಡಿಮಠ, ಪಂಚಾಂಗಮಠ, ಸೂಗೊರೇಶ್ವರಮಠ, ಕರಿವಳಿಮಠ, ದೇವಾಪುರಮಠ, ನಾಗೂರುಮಠ, ಸಗರ ಮಠ, ಖಾನಾಪುರಮಠ, ಷಣ್ಮುಖ ಶಿವಯೋಗಿಮಠ, ಮುದ್ರಕಿಮಠ, ಬೆಳೆಸೆಟ್ಟ್ಯಾಳಮಠ, ನಾಕಾಪುರ ಅಮ್ಮಾಪುರ ಮಠಗಳು ಪ್ರಮುಖವಾದವುಗಳಾಗಿವೆ.[೨೦೨] ಅರಸರು ಇಲ್ಲಿ ನಡೆಯುತ್ತಿದ್ದ ಅನ್ನದಾಸೋಹ, ಧರ್ಮದಾಸೋಹ, ಜ್ಞಾನದಾಸೋಹಗಳಲ್ಲಿ ಭಾಗವಹಿಸುತ್ತಿದ್ದರು. ಅಲ್ಲದೇ ಸಂಸ್ಥಾನಕ್ಕೆ ಆಗಮಿಸಿದ ಸ್ವಾಮೀಜಿಗಳನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ಚಿತ್ತರಗಿ ಇಲಕಲ್‌ಮಠದ ಶ್ರೀ ಗುರುಮಹಾಂತ ಶಿವಯೋಗಿಗಳು ಹೈದ್ರಾಬಾದ್ ನವಾಬನ ರಾಜಗುರುಗಳಾಗಿದ್ದರು. ಅವರು ಹೈದ್ರಾಬಾದ್‌ಗೆ ಹೋಗುವಾಗ ಸುರಪುರದ ಅರಸ ಕೃಷ್ಣಪ್ಪನಾಯಕ(ಕ್ರಿ.ಶ. ೧೮೨೭-೧೮೪೩)ನ ಆಸ್ಥಾನಕ್ಕೆ ಬಂದರು. ಆಗ ಅರಸ ಅವರನ್ನು ಭಕ್ತಿ-ಭಾವದಿಂದ ಪೂಜಿಸಿದರು.[೨೧೩]

ಸುರಪುರದ ಅರಸರು ದ್ವೈತಮತಕ್ಕೂ ಆಶ್ರಯ ನೀಡಿದ್ದರು. ಇಮ್ಮಡಿ ವೆಂಕಟಪ್ಪನಾಯಕನ(ಕ್ರಿ.ಶ. ೧೭೭೩-೧೮೦೨)ನ ಕಾಲದಲ್ಲಿ ವೀರಘಟ್ಟದಲ್ಲಿ ಕಣ್ವಮಠವನ್ನು ಸ್ಥಾಪಿಸಿದರು ಹಾಗೂ ಈ ಮಠಕ್ಕೆ ಪೂಜ್ಯ ಭಾವನೆಯಿಂದ ನಡೆದುಕೊಂಡರು.[೪೮] ಹೀಗೆ ಸುರಪುರದ ಅರಸರು ಶ್ರೀವೈಷ್ಣವರಾದರೂ ಶೈವ, ಮಾಧ್ವ ಮತಗಳನ್ನು ಸಮಾನ ದೃಷ್ಟಿಯಿಂದ ಕಂಡು ಎಲ್ಲಾ ಆರಾಧ್ಯ ದೇವರುಗಳಿಗೆ ಪೂಜೆ ಸಲ್ಲಿಸುತ್ತಿದ್ದರು. ಅಲ್ಲದೆ ಇವರು ದೇವರ ಹೆಸರಿನಲ್ಲಿ ನೀಡಿದ ಇನಾಮು ಭೂಮಿಗಳಿಗೆ ಕಂದಾಯ ಹಾಕುತ್ತಿರಲಿಲ್ಲ.

ಆನೆಗೊಂದಿ ಅರಸರ ಕುಲದೈವ ತಿರುಪತಿ ತಿಮ್ಮಪ್ಪ. ತಿರುಪತಿ ದೂರವಿರುವುದರಿಂದ ಆತ ಇಲ್ಲಿಯೇ ಪ್ರತ್ಯಕ್ಷನಾಗಿದ್ದಾನೆ ಎಂಬ ಭಾವನೆಯಿಂದ ಗುಡ್ಡದ ತಿಮ್ಮಪ್ಪನಿಗೆ ನಡೆದುಕೊಳ್ಳುತ್ತಾರೆ. ಪ್ರತಿ ಶನಿವಾರ ಇವರು ಗುಡ್ಡದ ತಿಮ್ಮಪ್ಪನಿಗೆ ಪೂಜೆ ಸಲ್ಲಿಸಿಯೇ ಮುಂದಿನ ಕೆಲಸಕಾರ್ಯಗಳನ್ನು ಮಾಡುತ್ತಿದ್ದರು. ಶನಿವಾರ ಒಪ್ಪತ್ತು ಇರುತ್ತಿದ್ದರು. ಈಗಲೂ ಈ ಸಂಪ್ರದಾಯವಿದೆ. ಇವರ ಆರಾಧ್ಯದೈವ ಶ್ರೀರಂಗನಾಥ ಸ್ವಾಮಿ. ಅರಮನೆಯ ಪಕ್ಕದಲ್ಲಿಯೇ ಈತನ ದೇವಾಲಯವನ್ನು ನಿರ್ಮಿಸಿದ್ದರು. ಈತನಿಗೆ ಮೊದಲು ಗವಿರಂಗನಾಥ ಎಂಬ ಹೆಸರಿತ್ತು. ಪಶ್ಚಿಮ ಗುಡ್ಡದ ಹಿಂದೆ ಪೊದೆಯಲ್ಲಿದ್ದನಂತೆ. ಆನೆಗೊಂದಿಯ ಅರಸ ತಿರುಮಲ ದೇವರಾಯ ಪ್ರತಿನಿತ್ಯ ಬೆಳಗ್ಗೆ ಈತನ ದರ್ಶನವನ್ನು ಪಡೆಯುತ್ತಿದ್ದನು.[೨೧೫] ಕೆಲವು ದಿನಗಳ ನಂತರ ಗುಡ್ಡದಿಂದ ಆನೆಗೊಂದಿಗೆ ಕರೆದುಕೊಂಡು ಪ್ರತಿಷ್ಠಾಪಿಸಲಾಯಿತು. ಈ ದೇವರಿಗೆ ವೈಷ್ಣವ ಸಂಪ್ರದಾಯದಂತೆ ಪೂಜೆ ಜರುಗುತ್ತದೆ. ಪ್ರತಿವರ್ಷ ಚಿತ್ರಭಾನುನಾಮ ಸಂವತ್ಸರದ ಚೈತ್ರ ಕೃಷ್ಣ ಪಂಚಮಿಯಿಂದ ಪ್ರಾರಂಭವಾಗುವ ಉತ್ಸವದ ದಿನಗಳಂದು ಅರಸರು ಈ ದೇವರಿಗೆ ಪೂಜೆ ಸಲ್ಲಿಸುತ್ತಿದ್ದರು. ಪಲ್ಲಕ್ಕಿಯೊಂದಿಗೆ ದಿನಕ್ಕೆ ಒಂದು ಬಾರಿಯಾದರೂ ಊರನ್ನು ಸುತ್ತುವ ನಿಯಮವಿತ್ತು.

ಶ್ರೀಲಕ್ಷ್ಮೀದೇವಿಗೆ ತಾಳಿ ಭಾಗ್ಯ ನೀಡುವುದು, ಶ್ರೀರಂಗನಾಥನ ತೇರಿನ ಮುಂದೆ ರಥಾಂಗ ಹೋಮ ಜರುಗಿಸುವುದು ಪ್ರಮುಖವಾಗಿತ್ತು.

ಶ್ರಾವಣಮಾಸದಲ್ಲಿ ವರಮಹಾಲಕ್ಷ್ಮಿದೇವಿಗೆ ೨ನೇ ಶುಕ್ರವಾರದಂದು ಹೊಸ ಸೀರೆ ಉಡಿಸಿ, ಸಂಕಲ್ಪ ಪೂಜೆ ಮಾಡುತ್ತಿದ್ದರು. ಸಾಯಂಕಾಲ ಲಕ್ಷ್ಮೀಕಥೆಯನ್ನು ಹೇಳಿಸುವುದರ ಮುಖಾಂತರ ರಾಜರ ಸಮ್ಮುಖದಲ್ಲಿಯೇ ತೀರ್ಥಪ್ರಸಾದ ವಿತರಣೆ ಕಾರ್ಯಕ್ರಮ ಜರುಗುತ್ತಿತ್ತು. ಕಾರ್ತಿಕ ಮಾಸದಲ್ಲಿ ಶ್ರೀರಂಗನಾಥಸ್ವಾಮಿಯಗುಡಿಯ ಮುಂದೆ ಒಂದು ಸಾವಿರದ ಒಂದು ಪಣತಿದೀಪಗಳನ್ನು ಹಚ್ಚಿ ಪೂಜಿಸುವ ವಿಧಾನ ರಾಜಾಕೃಷ್ಣದೇವರಾಯಲು ಅವರು ಜಾರಿಗೆ ತಂದರು. ಅದು ದರ್ಬಾರ ಕೃಷ್ಣದೇವರಾಯರಿಗೆ ಕೊನೆಯಾಯಿತು. ಈಗ ಅದರ ನೆನಪಿಗಾಗಿ ಕೇವಲ ಐದು ದೀಪಗಳನ್ನು ಹಚ್ಚುವುದರ ಮೂಲಕ ಈ ಪೂಜೆಯನ್ನು ಮುಗಿಸುತ್ತಾರೆ.[೨೧೬]

ಆನೆಗೊಂದಿಯ ಮೇಗೋಟಾದ ದುರ್ಗಾದೇವಿಯ ಬೆಟ್ಟದಲ್ಲಿ ಸುಂದರವಾದ ಬಾವಿ ಇದೆ. ಇದನ್ನು ಕನ್ನೇರಮ್ಮನಬಾವಿ ಎಂದು ಕರೆಯುತ್ತಾರೆ. ಆನೆಗೊಂದಿಯ ಅರಸರು, ಈ ಬಾವಿಯ ನೀರನ್ನು ದುರ್ಗಾಷ್ಟಮಿಯ ದಿನದಂದು ನಡೆಯುವ ದುರ್ಗಾದೇವಿಯ ವಿಶೇಷ ಪೂಜೆಗೆ ಮಾತ್ರ ಬಳಸುತ್ತಿದ್ದರು. ಸಾರ್ವಜನಿಕರು ಈ ನೀರನ್ನು ಬಳಸಬಾರದೆಂಬ ಕಟ್ಟಳೆ ಇತ್ತು. ದುರ್ಗಾದೇವಿಯನ್ನು ಪ್ರತಿಯುಗಾದಿ ಹಬ್ಬದಂದು ಹಾಗೂ ವಿಜಯದಶಮಿಯಂದು ಬಾವಿಯಲ್ಲಿ ಸ್ನಾನ ಮಾಡಿಸಿ ಪೂಜಿಸುತ್ತಿದ್ದರು.[೨೧೭] ಈಕೆಗೆ ದಸರಾದಲ್ಲಿ ಕೋಣವನ್ನು ಬಲಿ ಕೊಡುವುದರ ಮೂಲಕ ಅರಸರು ರಾಜ್ಯದ ಕ್ಷೇಮವನ್ನು ಬಯಸುತ್ತಿದ್ದರು.

ಮನೆಯಲ್ಲಿ ಕಾರ್ತಿಕ ಶುದ್ಧಪಾಡ್ಯದಿಂದ ಮೊದಲ್ಗೊಂಡು ಬಹುಳ ಅಮಾವಾಸ್ಯೆಯ ತನಕ ತುಳಸಿಗೆ ವಿಶೇಷ ಪೂಜೆಯನ್ನು ಸಲ್ಲಿಸುತ್ತಿದ್ದರು. ಶೈವಮತದ ದೇವರಾದ ಹಂಪಿಯ ಬಡವಿಲಿಂಗ ದೇವರಿಗೆ ದಿನಾಲು ಆನೆಗೊಂದಿ ಅರಸರ ಹೆಸರಿನಿಂದ ಪೂಜೆ ನಡೆಯುತ್ತಿತ್ತು ಹಾಗೂ ಪ್ರತಿವರ್ಷ ಶಿವರಾತ್ರಿಗೆ ಅಭಿಷೇಕವನ್ನು ಮಾಡಿಸುತ್ತಿದ್ದರು. ಅಂದು ಅರಸರು ಮನೆ ಮನೆಗೆ ತೆರಳಿ ಜೋಳಿಗೆಗೆ ಅಕ್ಕಿಯನ್ನು ಹಾಕಿಸಿಕೊಳ್ಳುವ ಸಂಪ್ರದಾಯವಿತ್ತು. ಈಗ ಈ ಸಂಪ್ರದಾಯ ಇಲ್ಲ. ಆನೆಗೊಂದಿ ಅರಸರ ಧರ್ಮಗುರುಗಳು ಶ್ರೀವೈಷ್ಣವಪಂಥದ ತೋಳಪ್ಪಾಚಾರ್ಯರಾಗಿದ್ದರು. ಆನೆಗೊಂದಿಯ ಅರಸ ಶ್ರೀವೀರವೆಂಕಟಪತಿ ರಾಯದೇವ ಮಹಾರಾಯರು ಕ್ರಿ.ಶ. ೧೭೫೦ರಲ್ಲಿ ಕಾಮಲಾಪುರದ ಮಜಿರೆ ಸಣ್ಣಕ್ಕಿ ಓಬಳಾಪುರ ಗ್ರಾಮವನ್ನು ಶ್ರೀಶಂಕರಭಾರತೀ ಶ್ರೀಗಳಿಗೆ ದಾನ ಮಾಡುತ್ತಾರೆ. ನಂತರ ಶ್ರೀವೀರವೆಂಕಟಪತಿ ತಿರುಮಲರಾಯದೇವರು ಶ್ರೀನರಸಿಂಹಭಾರತೀಸ್ವಾಮಿಗಳನ್ನು ತಮ್ಮ ಸಂಸ್ಥಾನಕ್ಕೆ ಆಹ್ವಾನಿಸುತ್ತಾರೆ. ಅಂದಿನಿಂದ ಈ ಮನೆತನದವರು, ಆ ಮಠಕ್ಕೆ ನಡೆದುಕೊಳ್ಳುತ್ತಾರೆ.[೨೧೮] ಇಂದಿಗೂ ಈ ಮನೆತನದವರು, ಕೂಡಲೀ ಶೃಂಗೇರಿಮಠದ ಸ್ವಾಮಿಗಳನ್ನು ಪ್ರತಿವರ್ಷ ಆಹ್ವಾನಿಸಿ ಪೂಜೆಯನ್ನು ಸಲ್ಲಿಸುತ್ತಿದ್ದಾರೆ.

ಗುಡಗುಂಟಿ ಅರಸು ಮನೆತನದವರ ಮನೆದೇವರು ಕಕ್ಕೇರಿಯ ಸೋಮನಾಥ. ಈತನ ದರ್ಶನಕ್ಕಾಗಿ ಅರಸ ಜಡಿಸೋಮಪ್ಪನಾಯಕ ಕೃಷ್ಣಾನದಿಯಲ್ಲಿ ಮಿಂದು ಬೆಳಗ್ಗೆ ಸೂರ್ಯೋದಯಕ್ಕೆ ನದಿ ದಾಟಿ ಕಕ್ಕೇರಿಗೆ ಕಾಲ್ನಡಿಗೆಯಿಂದ ಹೋಗಿ ದರ್ಶನ ಪಡೆಯುತ್ತಿದ್ದ.[೨೯] ಇವರ ಆರಾಧ್ಯದೈವ ಅಮರೇಶ್ವರನ ಪೂಜೆಯನ್ನು ಪ್ರತಿಶನಿವಾರ ಹಾಗೂ ಪ್ರತಿ ಅಮಾವಾಸ್ಯೆಗೆ ಮಾಡುತ್ತಾರೆ. ಈ ದೇವರ ಪೂಜೆಯ ಕುರಿತಾದ ಮಂಗಳಾರತಿ ಪದದ ನುಡಿಯೊಂದು ಇಂತಿದೆ :

ಆಸೀನ ಮಲೆಯೆ, ಮುತ್ತಿನ ಜಡಿಯೇ
ಅಮರೇಶ್ವರನ ಗುಡಿಯೆ | ಬೆಳಗ್ಯಾನೆ
ಬಂಗಾರದ ಕಳಸ ಗುಡಗುಂಟಿ ದೊರೆಯೇ[೩೦]

ಎಂಬ ವಿವರಣೆ ನೀಡುತ್ತದೆ.

ಅಂದು ಉಪವಾಸವನ್ನು ಆಚರಿಸುತ್ತಾರೆ. ಪ್ರತಿವರ್ಷ ಹೋಳಿ ಹುಣ್ಣಿಮೆಯ ದಿನ ನಡೆಯುವ ಅಮರೇಶ್ವರ ರಥೋತ್ಸವಕ್ಕೆ ಇವರು ಫಲಪುಷ್ಪಗಳನ್ನು ಸಮರ್ಪಿಸಿ ಪೂಜೆ ಸಲ್ಲಿಸಿದ ಬಳಿಕವೇ ರಥ ಎಳೆಯಲ್ಪಡುತ್ತದೆ. ಇವರು ಶೈವ ಸಂಪ್ರದಾಯದವರಾದರೂ ನವರಾತ್ರಿಯಲ್ಲಿ ಶ್ರೀವೆಂಕಟೇಶ್ವರ ದೇವಸ್ಥಾನಕ್ಕೆ ವಿಶೇಷ ಪೂಜೆ ಸಲ್ಲಿಸುವುದರ ಮೂಲಕ ಅಂದು ಅರಸರು ಇಡೀ ಊರಿಗೆ ಅನ್ನದಾಸೋಹವನ್ನು ಮಾಡುತ್ತಿದ್ದರು. ಈಗ ಈ ಪದ್ಧತಿ ನಿಂತಿದೆ. ಪೂಜೆ ಮಾತ್ರ ನಡೆಯುತ್ತಿದೆ. ಈ ಮನೆತನದ ರಾಜಗುರುಗಳ ವಿರಕ್ತಮಠ ಗುಡಗುಂಟಿಯಲ್ಲಿದೆ. ಆ ಮಠಕ್ಕೆ ವಾರಕ್ಕೊಂದು ಸಲ ಪೂಜೆ ಸಲ್ಲಿಸುವರು.

ಗುಡಗುಂಟಿಯ ಇನ್ನೊಂದು ಮಠವಾದ ಚರಮೂರ್ತೇಶ್ವರಮಠಕ್ಕೆ ಹಿರೇಮಠ, ಶ್ರೀ ತೋಪಿನಕಟ್ಟೆ ಮಠವೆಂದು ಕರೆಯುತ್ತಿದ್ದರು. ಇದು ಶ್ರೀಶೈಲದ ಶಾಖಾಮಠವಾಗಿದೆ. ಈ ಮಠದ ಮೊದಲ ಸ್ವಾಮೀಜಿ ಯವರಾದ ಶ್ರೀ ವಿರೂಪಾಕ್ಷ ಶಿವಾಚಾರ್ಯಮಹಾಸ್ವಾಮಿಗಳು ಲೋಕಸಂಚಾರವನ್ನು ಕೈಗೊಂಡು, ಗುಡಗುಂಟಿಯ ಹೊರವಲಯದ ಗುಡ್ಡಗಾಡು ಪ್ರದೇಶದಲ್ಲಿ ಅನುಷ್ಠಾನಕ್ಕೆ ಕುಳಿತರು. ಆಗ ಜನ ಬಂದು ಗುಡಗುಂಟಿ ಅರಸರಿಗೆ ಹೇಳಿದರು. ಗುಡಗುಂಟಿ ಅರಸರು ತಮ್ಮ ಬಂಧುಗಳಾದ ಗುಂತಗೋಳದ ಅರಸರಿಗೆ ವಿಷಯ ತಿಳಿಸಿದರು. ಎರಡೂ ಮನೆತನದ ಅರಸರು ಹಾಗೂ ಊರಿನ ಭಕ್ತರು ಇವರನ್ನು ಗುಡಗುಂಟಿಗೆ ಕರೆದುಕೊಂಡು ಬಂದು, ಮಠವನ್ನು ಕಟ್ಟಿಕೊಟ್ಟರು. ಅಂದಿನಿಂದ ಶ್ರೀ ವಿರೂಪಾಕ್ಷಸ್ವಾಮಿಗಳು ಶ್ರೀಮಠದಲ್ಲಿಯೇ ಪಾಠ ಪ್ರವಚನವನ್ನು ಹಮ್ಮಿಕೊಂಡು ಭಕ್ತರ ಹಾಗೂ ಅರಸರ ಮನಸ್ಸನ್ನು ಗೆದ್ದವರಾಗಿದ್ದರು. ಈ ಮಠಕ್ಕೆ ಗುಡಗುಂಟಿಯ ಅರಸ ರಾಜಾ ತಿಪ್ಪರಾಜನಾಯಕರು ಭಕ್ತಿ ಭಾವದಿಂದ ನಡೆದುಕೊಂಡರು. ಇವರ ಕಾಲದಲ್ಲಿ ಈ ಮಠ ತುಂಬಾ ಪ್ರಸಿದ್ಧಿಗೆ ಬಂದಿತು. ರಾಜಾ ತಿಪ್ಪರಾಜನಾಯಕರು ಶ್ರೀಮಠಕ್ಕೆ ಸುಮಾರು ೫೦ ಎಕರೆ ಭೂಮಿಯನ್ನು ಉಂಬಳಿಯಾಗಿ ನೀಡಿದರು.

ದೇವದುರ್ಗದ ಅರಸರು ಗಬ್ಬೂರಿನ ಬೂದಿ ಬಸವೇಶ್ವರಮಠ, ಸಾವಿರ ದೇವರಮಠ, ಗೆಜ್ಜಿಬಾವಿಯ ಚನ್ನಬಸವೇಶ್ವರಮಠ, ಜಾಲಹಳ್ಳಿಯ ಜಯಶಾಂತಲಿಂಗೇಶ್ವರ ಸಂಸ್ಥಾನ ಬೃಹನ್ಮಠಕ್ಕೆ ನಡೆದುಕೊಳ್ಳುತ್ತಿದ್ದರು. ಅಲ್ಲದೇ ದೇವದುರ್ಗದ ಸಿದ್ಧರಾಮೇಶ್ವರ ಶಿಖರಮಠಕ್ಕೆ ಅರಸ ರಾಜಾ ರಮಣಪ್ಪನಾಯಕನಿಂದ ಆಶ್ರಯ ದೊರೆತಿದೆ. ಇವರ ಕಾಲದಲ್ಲಿ ಸರ್ವಾಂಗೀಣ ಅಭಿವೃದ್ಧಿಯನ್ನು ಕಂಡ ಈ ಮಠಕ್ಕೆ ಭೂಮಿಯನ್ನು ದಾನವಾಗಿ ನೀಡಿದ್ದಾರೆ. ಹಾಗೂ ಈ ಮಠದಲ್ಲಿ ಅನ್ನದಾಸೋಹ ನಿಂತಾಗ ಅದನ್ನು ನಡೆಸಿಕೊಂಡು ಹೋಗಲು ಕಾರಣೀಕರ್ತ್ರರಾದರು.

ಕನಕಗಿರಿಯ ನಾಯಕ ಅರಸರು ಶ್ರೀವೈಷ್ಣವ ಮತವನ್ನು ಅನುಸರಿಸುತ್ತಿದ್ದರು. ಇವರ ಮನೆದೇವರು ತಿರುಪತಿ ತಿಮ್ಮಪ್ಪ. ಈತನ ಪ್ರತಿರೂಪವೇ ಕನಕಗಿರಿಯ ಕನಕಾಚಲವೆಂದು ನಂಬಿದ್ದರು. ಒಂದು ಐತಿಹ್ಯದ ಪ್ರಕಾರ ಈ ಪ್ರದೇಶದಲ್ಲಿನ ಶೂದ್ರರಿಗೆ ದರ್ಶನ ನೀಡಲೆಂದೇ ತಿರುಪತಿ ವೆಂಕಟೇಶ ಕನಕಗಿರಿಗೆ ಬಂದನಂತೆ. ಪ್ರತಿ ಶನಿವಾರ ಈತನನ್ನು ಪೂಜಿಸುತ್ತಿದ್ದರು. ಅರಸ ಒಂದನೆಯ ಕನಕಪ್ಪನಾಯಕ (ಕ್ರಿ.ಶ. ೧೫೭೮-೧೬೨೮)ನು ಪ್ರತಿದಿನ ಬೆಳಿಗ್ಗೆ ಈ ದೇವರ ದರ್ಶನ ಪಡೆಯದೇ ಯಾವ ಕಾರ್ಯಗಳನ್ನು ಕೈಗೊಳ್ಳುತ್ತಿರಲಿಲ್ಲ.[೨೨೧] ಅಲ್ಲದೇ ಪೂಜೆಗಾಗಿ ಆಳ್ವಾರರುಗಳ ಪ್ರತಿಮೆಗಳನ್ನು ಸ್ಥಾಪಿಸಿದ್ದಾರೆ.

ಈ ಮನೆತನದ ಅರಸನಾದ ಕನಕಪ್ಪ ಉಡಚನಾಯಕ (ಕ್ರಿ.ಶ. ೧೭೦೮-೧೭೫೨)ನು ಕೂಡಲೀ ಶೃಂಗೇರಿಮಠದ ಶ್ರೀಶಂಕರಭಾರತೀಸ್ವಾಮಿಗಳವರಿಗೆ ಕ್ರಿ.ಶ. ೧೭೩೫ರಲ್ಲಿ ತೊಂಡೇಹಾಳು ಗ್ರಾಮವನ್ನು ದಾನ ಮಾಡುವನು. ನಂತರ ಈತನ ಮಗ ರಂಗಪ್ಪನಾಯಕ(ಕ್ರಿ.ಶ. ೧೭೫೨-೧೭೮೧)ನು ಕ್ರಿ.ಶ. ೧೭೬೯ ರಲ್ಲಿ ತಮ್ಮ ತಂದೆಯು ನೀಡಿದ ತೊಂಡೇಹಾಳು ಗ್ರಾಮವು ಪರಾಧೀನವಾದುದನ್ನು ತಿಳಿದು ಅದರ ಬದಲಿಗೆ ತಲೆಕಾನುಹಾಳು ಸಮ್ಮತು, ಜೂಲುದೊಡ್ಡಿ ಗ್ರಾಮವನ್ನು ದಾನ ಮಾಡುತ್ತಾನೆ.[೨೨೨]

ಕನಕಗಿರಿ ನಾಯಕರು ವೈಷ್ಣವರಾದರೂ ಶೈವಧರ್ಮಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ಶರಣ ಮೋನಪ್ಪಯ್ಯ ಕನಕಗಿರಿಗೆ ಬಂದಾಗ ಕೆಲವಡಿ ಉಡಿಚನಾಯಕನ ರಾಣಿ ಕಾಟಮ್ಮ ಕಟ್ಟಿಸುತ್ತಾಳೆ.[೨೨೩] ಇಮ್ಮಡಿ ಉಡಿಚನಾಯಕನ ರಾಣಿ ಪೇಟೆಬಸವಣ್ಣ ದೇವಾಲಯವನ್ನು ಕಟ್ಟಿಸಿದಳು. ಇಮ್ಮಡಿ ಕನಕಪ್ಪನಾಯಕ ಚಿದಾನಂದಧೂತರಿಗೆ ಆಶ್ರಮವನ್ನು ಕಟ್ಟಿಕೊಟ್ಟರಲ್ಲದೇ[೨೨೪] ನಿತ್ಯವೂ ಪೂಜೆ ಮಾಡುತ್ತಿದ್ದರು. ಈ ಮನೆತನದವರು ಹಿರೇದೇವತೆಯ ಪೂಜೆಯನ್ನು ವಿಶಿಷ್ಟ ರೀತಿಯಿಂದ ಮಾಡುತ್ತಿದ್ದರು. ಈಕೆಯನ್ನು ಉಗ್ರದೇವತೆಯೆಂದೇ ನಂಬಿದ್ದರು. ಈ ದೇವತೆಗೆ ನಾಯಕ ಜನಾಂಗದವರೇ ಪೂಜಾರಿಗಳಾಗಿದ್ದಾರೆ. ಪ್ರತಿನಿತ್ಯ ಮಡಿಯಿಂದ ಅಡುಗೆ ಮಾಡಿ ಈ ದೇವತೆಗೆ ಪೂಜೆ ಸಲ್ಲಿಸುತ್ತಾರೆ.

ಗುಡೇಕೋಟೆ ನಾಯಕ ಅರಸರು ಶೈವಧರ್ಮವನ್ನು ಅನುಸರಿಸುತ್ತಿದ್ದರು. ಇವರ ಮನೆದೇವರು ಜಟ್ಟಿಂಗರಾಮೇಶ್ವರ. ಕಂಚಿಯ ಜಗದ್ಗುರುಗಳನ್ನು ಗುರುಗಳೆಂದು ಭಾವಿಸಿ ವರ್ಷಕ್ಕೊಮ್ಮೆ ಹೋಗಿ

ಪೂಜೆ ಸಲ್ಲಿಸುತ್ತಿದ್ದರು. ಈಗ ಹೋಗುವುದಿಲ್ಲ. ಪ್ರತಿನಿತ್ಯ ಇವರು ತಮ್ಮ ಮನೆಗಳಲ್ಲಿ ವೀರಶೈವ ಧರ್ಮದ ಅನುಸರಣೆಯಂತೆ ಪೂಜೆ-ಪುನಸ್ಕಾರಗಳನ್ನು ನೆರವೇರಿಸುವರು. ಇವರು ಶೈವರಾದರೂ ಗುಡೇಕೋಟೆಯಲ್ಲಿ ವೆಂಕಟೇಶ್ವರ ದೇವಾಲಯವನ್ನು ಕಟ್ಟಿಸಿದರು. ಶೈವ, ವೈಷ್ಣವ ಮತ್ತು ಶಾಕ್ತೇಯ ಪಂಥ ಮತ್ತು ಧರ್ಮಗಳಿಗೆ ವಿಶೇಷ ಕಾಳಜಿ ನೀಡಿದ್ದರು. ಗ್ರಾಮದ ನಾಲ್ಕು ದಿಕ್ಕುಗಳಲ್ಲಿ ಆಂಜನೇಯ ಗುಡಿಗಳಿದ್ದು ಆಂಜನೇಯ ಗ್ರಾಮವನ್ನು ಕಾಯುತ್ತಿರುವನೆಂಬ ನಂಬಿಕೆ ಇದೆ.

ಗುಡೇಕೋಟೆ ಅರಸ ಇಮ್ಮಡಿ ಬೊಮ್ಮಣ್ಣನಾಯಕರ ಪುತ್ರ, ಮುಮ್ಮಡಿ ಬೊಮ್ಮಣ್ಣನಾಯಕನು ತನ್ನ ಪಟ್ಟದ ಗ್ರಾಮ ಹುರಳೇಹಾಳ ಕಸಬೆ ಒಳಗಣ ಕೊಂಟೇಹಳ್ಳಿ ಗ್ರಾಮವನ್ನು ಶ್ರೀಶಂಕರಭಾರತೀ ಸ್ವಾಮಿಗಳಿಗೆ ಕ್ರಿ.ಶ. ೧೭೫೦ರಲ್ಲಿ ದಾನ ಮಾಡಿರುತ್ತಾರೆ[೨೨೫] ಎಂದು ಶಾಸನ ವಿವರ ನೀಡುತ್ತದೆ. ಹೀಗಾಗಿ ಈ ಮಠದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು ಹಾಗೂ ಕೊಟ್ಟೂರುಸ್ವಾಮಿಮಠ ಹಾಗೂ ಎಣ್ಣೆವೀರಪ್ಪಮಠವನ್ನು ಕಟ್ಟಿಸಿಕೊಟ್ಟು ಗುರುಬಸವೇಶ್ವರನ ಭಕ್ತರಾದರು.

ಜರಿಮಲೆಯ ಅರಸರು ಶೈವಧರ್ಮವನ್ನು ಸ್ವೀಕರಿಸಿದವರು. ಇವರ ಮನೆದೇವರು ವೆಂಕಟರಮಣ. ಕೂಡ್ಲಿಗಿ ತಾಲೂಕಿನಲ್ಲಿರುವ ಉಜ್ಜಿಯಿನಿ ವೀರಶೈವಮಠದ ಸ್ವಾಮಿಗಳು ಇವರ ರಾಜಗುರುಗಳಾಗಿದ್ದರು. ಶ್ರೀಶೈಲದ ಶ್ರೀಪರ್ವತಮಲ್ಲಿಕಾರ್ಜುನಸ್ವಾಮಿಗಳಿಂದ ವೀರಶೈವಧರ್ಮ ಸ್ವೀಕರಿಸಿದ ನಂತರ ಪರ್ವತ ಮಲ್ಲಿಕಾರ್ಜುನಸ್ವಾಮಿಗಳು ಇವರಿಗೆ ರಾಜಗುರುಗಳಾದರು. ಹಾಲಪ್ಪನಾಯಕನು ತನ್ನ ಭಕ್ತಿಯ ದ್ಯೋತಕ ವಾಗಿ ಇವರಿಗೆ ಮಠವೊಂದನ್ನು ಕಟ್ಟಿಸಿಕೊಟ್ಟನು. ಜರಿಮಲೆಯಲ್ಲಿ ಮುರಿಘಾಮಠವನ್ನು ಕಟ್ಟಿಸಿ ವೀರಶೈವ ಧರ್ಮಪರವಾದ ಒಲುಮೆ ತೋರಿದರು. ಅಲ್ಲದೇ ಜರಿಮಲೆಯಲ್ಲಿ ಬಸವಣ್ಣ ದೇವಾಲಯ, ಈಶ್ವರ ಲಿಂಗ ದೇವಾಲಯವನ್ನು ಕಟ್ಟಿಸಿದರು. ಇವರು ಉಜ್ಜಿಯಿನಿ ಶ್ರೀ ಮರುಳಸಿದ್ಧೇಶ್ವರ ಸ್ವಾಮಿಯ ತೈಲಾಭಿಷೇಕಕ್ಕೆ ಎಣ್ಣೆಯನ್ನು ಕಳುಹಿಸುವರಲ್ಲದೇ ತಮ್ಮ ಮನೆಯಲ್ಲಿ ಶ್ರೀ ಮರುಳಸಿದ್ಧಸ್ವಾಮಿಯ ಮುಖವಾಡವನ್ನಿಟ್ಟು ನಿತ್ಯ ಪೂಜಿಸುತ್ತಿರುವರು.

ನಾಯಕನಹಟ್ಟಿ ನಾಯಕ ಅರಸರು ವೀರಶೈವಧರ್ಮವನ್ನು ಅನುಸರಿಸುತ್ತಿದ್ದರು. ಅರಸ ಬೋದಿ ಮಲ್ಲಪ್ಪನಾಯಕನು ತಿಪ್ಪೇರುದ್ರಸ್ವಾಮಿಗಳನ್ನು ತನ್ನ ಅರಮನೆಗೆ ಬರಮಾಡಿಕೊಂಡು, ಅವರ ಪ್ರಭಾವದಿಂದ ವೀರಶೈವಧರ್ಮದ ಕಡೆಗೆ ಬಂದನು. ಹಟ್ಟಿಯ ಮಲ್ಲಪ್ಪನಾಯಕನು ತನ್ನ ಎಪ್ಪತ್ತೇಳು ಬಿರುದುಗಳನ್ನು ಸ್ವಾಮಿಗಳಿಗೆ ಅರ್ಪಿಸಿ ತಾನು ಕಾಶಿಗೆ ಹೋಗಿ ಬರುವ ಸಂಕಲ್ಪ ತಿಳಿಸಿದಾಗ, ಸದ್ಭಕ್ತನ ಅಂಗಳವೇ ಕೈಲಾಸವೆಂದು ತಿಪ್ಪೇರುದ್ರಸ್ವಾಮಿಗಳು ಆಶೀರ್ವದಿಸಿದರಂತೆ. ಮಲ್ಲಪ್ಪನಾಯಕನು ಸ್ವಾಮಿಗಳಿಗೆ ಪಲ್ಲಕ್ಕಿ, ಛತ್ರಿ, ಚಾಮರಗಳನ್ನು ನೀಡಿದನು. ಇಂದಿಗೂ ಜಾತ್ರೆಯ ಸಂದರ್ಭದಲ್ಲಿ ಅವುಗಳನ್ನು ಉಪಯೋಗಿಸು ವುದನ್ನು ಕಾಣಬಹುದಾಗಿದೆ. ಪ್ರತಿ ಸೋಮವಾರ ಜರುಗುವ ವಿಶೇಷಪೂಜೆಯಲ್ಲಿ ನಾಯಕನಹಟ್ಟಿ ಅರಸರ ವಂಶಸ್ಥರು ಭಾಗವಹಿಸುತ್ತಾರೆ. ವಾರೋತ್ಸವ ಪಲ್ಲಕ್ಕಿಯು ಈ ವಂಶಸ್ಥರ ಮನೆಯ ಹತ್ತಿರ

ನಿಲ್ಲುತ್ತದೆ. ಆ ಸ್ಥಳದಲ್ಲಿ ಭಕ್ತರಿಗೆ ನೈವೇದ್ಯ ಮಾಡಿಕೊಡಲಾಗುತ್ತದೆ. ಇಂದು ಈ ಅರಸರು ಬಾಳೆ ಹೊನ್ನೂರು ಸ್ವಾಮಿಗಳನ್ನು ತಮ್ಮ ಮನೆತನದ ಗುರುಗಳೆಂದು ಹೇಳುತ್ತಾರೆ.

ಮತ್ತೋಡು ನಾಯಕ ಅರಸರು ವೀರಶೈವಧರ್ಮವನ್ನು ಅನುಸರಿಸಿದವರು. ಈ ಮನೆತನದ ದೊಡ್ಡ ಹಾಲಪ್ಪನಾಯಕನು ತನ್ನ ತಂದೆ-ತಾಯಿಗಳಿಗೆ ಶಿವಸಾನಿಧ್ಯವಾಗಲೆಂದು ಮುರಿಘಾಸ್ವಾಮಿಗಳಿಗೆ ಮಠವೊಂದನ್ನು ಕಟ್ಟಿಸಿ ಅದರ ಪಾಲನೆಗಾಗಿ ಅರೆಹಳ್ಳಿ ಎಂಬ ಗ್ರಾಮವನ್ನು ಕೊಟ್ಟನು.[೧೧೬] ಮತ್ತೋಡಿನ ಸಿದ್ಧರಾಮ, ಬೇವಿನಹಳ್ಳಿಯ ಕರಿಯಮ್ಮ, ಕಂಚೀಪುರದ ವರದರಾಜ, ವಜ್ರದ ರಾಮದೇವರು, ಬಾಗೀಮರದಮ್ಮ, ಕಣಿವೆಮಾರಮ್ಮ, ಕಾಶೀಹಳ್ಳಿ ಹನುಮಂತ, ನಿರುಮಗಲ್ಲು ಹರಿಹರ, ಅಂತರಗಟ್ಟೆ ದೇವತೆ, ರೇವಣಸಿದ್ಧೇಶ್ವರ, ಘಟ್ಟದ ಮರಾದೇವರು ಇವರ ಆರಾಧ್ಯದೇವರುಗಳಾಗಿದ್ದರು. ಈ ದೇವರುಗಳಿಗೆ ಪೂಜಾದಿ ಕಾರ್ಯಗಳಿಗೆ ವಿಶೇಷ ಉಸ್ತುವಾರಿ ಕಟ್ಟುಪಾಡುಗಳನ್ನು ಹಾಲಪ್ಪ ನಾಯಕ ಮಾಡಿದನು. ಯಳನಾಡ ಹತ್ತಿರದ ಭಟ್ಟರ ಹಳ್ಳಿಯ ಬನಶಂಕರಿ ದೇವತೆಗೆ ನಡೆದುಕೊಳ್ಳುತ್ತಿದ್ದರು. ವರ್ಷಕ್ಕೊಮ್ಮೆ ಐಗಳಕ್ಕಿ ಬಾನ(ಹದಿನಾರು ಸೇರು ಅಕ್ಕಿಯ ಬಾನ) ಎಂಬ ವಿಶೇಷ ಸೇವೆಯನ್ನು ಸಲ್ಲಿಸುತ್ತಿದ್ದರು.[೧೧೭] ಕರಿಯಮ್ಮಳೂ ಇವರ ಆರಾಧ್ಯದೇವತೆ. ಈಕೆಯ ಪೂಜಾರಿಗಳು ಬೇಡ ಜನಾಂಗದವರು. ಈ ಮನೆತನದ ಅರಸರು ಯಳನಾಡು ಸಿದ್ಧರಾಮೇಶ್ವರನಿಗೆ ಪ್ರತಿದಿನ ಸೂರ್ಯೋದಯಕ್ಕೆ ಮೊದಲು ಕುದುರೆಯ ಮೇಲೆ ಹೋಗಿ ದೇವರ ದರ್ಶನ ಮಾಡಿಕೊಂಡು ಬರುತ್ತಿದ್ದರು. ಆ ದೇವಾಲಯಕ್ಕೆ ಎರಡು ಕಂಚಿನ ನಗಾರಿಗಳನ್ನು ನೀಡಿದ್ದಾರೆ.[೧೧೮] ಮತ್ತೋಡಿನ ಸಿದ್ಧರಾಮೇಶ್ವರ ಇವರ ಆರಾಧ್ಯದೈವ. ಪ್ರತಿವರ್ಷ ಪೂಜೆ ಪುನಸ್ಕಾರ ಏರ್ಪಡಿಸಿ ಅನ್ನಸಂತರ್ಪಣೆ ವ್ಯವಸ್ಥೆ ಮಾಡುವುದುಂಟು.[೧೧೯]

ಹರತಿ ಅರಸುಮನೆತನದವರು ಶೈವ ಸಂಪ್ರದಾಯದವರಾಗಿದ್ದು, ವೀರಶೈವಮತಕ್ಕೆ ಆದ್ಯತೆ ನೀಡಿದ್ದರು. ಹರತಿಯ ಅರಸ ಮುಮ್ಮಡಿ ರಂಗಪ್ಪನಾಯಕ ಕಾಳಾಮುಖ ಗುರುಗಳ ಭಕ್ತನಾಗಿದ್ದನು. ಸಾರವಾಡದ ಸ್ವಾಮಿಗಳು ಇವರ ಗುರುಗಳಾಗಿದ್ದುದು ತಿಳಿದುಬರುತ್ತದೆ. ಶಕ್ತಿದೇವತೆಯಾದ ಹರತಿ ಇವರ ಮನೆ ದೇವತೆಯಾಗಿದ್ದಳು. ಧರ್ಮಶ್ರದ್ಧೆಯನ್ನು ಹೊಂದಿದ್ದ ಇವರು ದೇವಾಲಯಗಳಿಗೆ, ಮಠಗಳಿಗೆ ನಿತ್ಯನೈಮಿತ್ತಕ ಪೂಜೆಗಾಗಿ ದಾನದತ್ತಿಗಳನ್ನು ನೀಡಿದ್ದಾರೆ. ಹರತಿಯ ಅರಸ ವೀರಹೊಟ್ಟಂಣನಾಯಕ ಬಸವೇಶ್ವರ ದೇವರಿಗೆ ರಂಗಸಮುದ್ರಕೆರೆಯ ಕೆಳಗಣ ಭೂಮಿಯನ್ನು ಹಿರಿಯೂರು ತಿರುಮಲ ದೇವರಿಗೆ, ರಾಮೇಶ್ವರನಿಗೆ ದಾನ ನೀಡಿದರು.

ಹಿರಿಯೂರು ಸ್ಥಳದಲ್ಲಿದ್ದ ಬುಕ್ಕಾಪಟ್ಟಣದ ಗಣದಾಹುನೂಸೆ ಎಂಬ ಗ್ರಾಮವನ್ನು ಪುರವರ್ಗವಾಗಿ ದಾನ ನೀಡಿದರು. ಸೂರ್ಯ ಮತ್ತು ಚಂದ್ರಗ್ರಹಣ ಪರ್ವದಿನಗಳಲ್ಲಿ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ನಿಡುಗಲ್ 'ರ್ಗದ ಮಂಗಳವಾಡಾ ಹೋಬಳಿಯಲ್ಲಿನ ಬೂದುಸುಗೊಂಡನಹಳ್ಳಿಯನ್ನು ಅಪ್ಪಾವಧಾನಿಗೆ

ಅಗ್ರಹಾರವಂ ಮಾಡಿ ದಾನ ಮಾಡಲಾಯಿತು. ಹೊಟ್ಟೆಂಣ್ಣನಾಯಕ ಚಂದ್ರಗ್ರಹಣದ ದಿವಸ ವೆಂಕಟಾದ್ರಿ ಎಂಬುವನಿಗೆ ವಿರೂಪಾಕ್ಷಲಿಂಗದ ಜ್ಯೋತಿ ಬೆಳಗಲು ಭೂದಾನ ನೀಡಿದರು.[೨೩೦] ಕೂಡಲೀ ಶೃಂಗೇರಿ ಮಠದ ಪ್ರಭಾವ ಇವರನ್ನು ತಟ್ಟಿ, ಚಿಕ್ಕರಂಗಪ್ಪನಾಯಕನು ಕಾಳಾಮುಖ ಗುರುಗಳಾದ ಹೊಟ್ಟೆಯೀಶ್ವರಯ್ಯ ಎಂಬುವರ ಸಿಂಹಾಸನ ಮಠಕ್ಕೆ ಕ್ರಿ.ಶ. ೧೫೫೨ರಲ್ಲಿ ಹೆಂಮಡಿಹಾಳು ಗ್ರಾಮವನ್ನು ದಾನ ನೀಡಿದರು.[೨೩೧]

ಅಹೋಬಲ ನರಸಿಂಹನನ್ನು ಪೂಜಿಸುತ್ತಿದ್ದ ಇವರು ಶ್ರೀವೈಷ್ಣವ ಧರ್ಮಕ್ಕೆ ಉತ್ತಮ ಸ್ಥಾನಮಾನಗಳನ್ನು ಕಲ್ಪಿಸಿದರು. ವೀರಭದ್ರಸ್ವಾಮಿಯ ಅಗ್ನಿಕುಂಡ, ಹೂವಿನ ತೇರು, ರಥೋತ್ಸವದ ಈ ಮೂರು ದಿನಗಳ ವಿಶೇಷ ಪೂಜೆಯನ್ನು ಹರತಿ ಮನೆತನದ ಅರಸರು ನೆರವೇರಿಸುತ್ತಿದ್ದರು.

ಹೀಗೆ ಕರ್ನಾಟಕದ ನಾಯಕ ಅರಸು ಮನೆತನಗಳವರು ಆರಾಧ್ಯ ದೇವರುಗಳ ಪೂಜೆಯನ್ನು ಸಲ್ಲಿಸುತ್ತಿದ್ದರು. ಮೂಲತಃ ಬುಡಕಟ್ಟು ದೇವರ ಆರಾಧಕರಾದ ಇವರು ವಿಜಯನಗರದ ಹಾಗೂ ತರುವಾಯ, ಹಿಂದೂಧರ್ಮದಲ್ಲಾದ ಎರಡು ಪ್ರಮುಖ ಆರಾಧನೆಯ ನೆಲೆಗಳಾದ ವೀರಶೈವ ಮತ್ತು ವೈಷ್ಣವಧರ್ಮಗಳಿಗನುಸಾರ ಇವರ ಪೂಜಾ ವಿಧಿವಿಧಾನಗಳು ಬದಲಾವಣೆಯನ್ನು ಹೊಂದಿದವು. ಕೆಳವರ್ಗದ ನಾಯಕ ಅರಸರನ್ನು ಶ್ರೀವೈಷ್ಣವ ಮತ್ತು ವೀರಶೈವರುಗಳು ತಮ್ಮೆಡೆಗೆ ಸೆಳೆದುಕೊಳ್ಳುವಲ್ಲಿ ಧರ್ಮಾಂತರ ಪ್ರಕ್ರಿಯೆಗಳನ್ನೇ ಹುಟ್ಟು ಹಾಕಿದವೆನ್ನಬಹುದು.

ರಾಮಾನುಜರಿಂದ ೧೧ನೇ ಶತಮಾನದಲ್ಲಿ ಆವಿಷ್ಕಾರಗೊಂಡ ಶ್ರೀವೈಷ್ಣವಧರ್ಮ, ಕನ್ನಡನಾಡಿನಲ್ಲಿ ಸರ್ವಜಾತಿ ಸಮುದಾಯವನ್ನು ಆಕರ್ಷಿಸಿತು. ರಾಮಾನುಜಾಚಾರ್ಯರು ಹೊಯ್ಸಳ ಅರಸ ವಿಷ್ಣುವರ್ಧನನ್ನು ವೈಷ್ಣವನನ್ನಾಗಿ ಮಾಡಿದಾಗಲೇ ವೈಷ್ಣವಪಂಥ ಕರ್ನಾಟಕದಲ್ಲಿ ಬೇರೂರಲು ಸಾಧ್ಯವಾಯಿತು. ವಿಜಯನಗರದ ಅರಸರಾದ ಶ್ರೀಕೃಷ್ಣದೇವರಾಯ, ಅಚ್ಯುತದೇವರಾಯ ಹಾಗೂ ಸದಾಶಿವರಾಯರ ಕಾಲದಲ್ಲಿ ಹೆಚ್ಚಿನ ಮಹತ್ವ ಪಡೆದುಕೊಂಡಿತು. ಇದು ಆ ಸಂದರ್ಭದ ದೊರೆಗಳಿಗೆ, ಪಾಳೆಯಗಾರರಿಗೆ ಜನಸಾಮಾನ್ಯರಿಗೆ ಮುಕ್ತ ಅವಕಾಶವನ್ನು ನೀಡಿತು. ಹೀಗಾಗಿ ವೈಷ್ಣವರು (ಬ್ರಾಹ್ಮಣರು) ಬೇಡ ಜನಾಂಗದ ಅರಸರಿಗೆ ಕ್ಷಾತ್ರತ್ವದ ಹೆಸರಿನಲ್ಲಿ ಜನಿವಾರಧಾರಣೆ ಮಾಡಿಸಿ ನೀವು ಕ್ಷತ್ರಿಯರು ಕ್ಷಾತ್ರತ್ವದ ಸಂಕೇತವೆಂದು ಹೇಳುತ್ತಾ ಅವರನ್ನು ಆ ಧರ್ಮದೆಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾದರು. ಬ್ರಾಹ್ಮಣರಿಗೆ ಅಂದು ತಮ್ಮ ಆಚಾರ ವಿಚಾರಗಳು ತಮ್ಮ ಮಧ್ಯದಲ್ಲಿಯೇ ಬದುಕುಳಿಯಬೇಕೆಂಬ ಮಹಾದಾಸೆಯೂ ಇದ್ದಿರಬೇಕು. ಹೀಗಾಗಿ ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ, ಮನೆತನಗಳು ಶ್ರೀವೈಷ್ಣವವನ್ನು ಅಪ್ಪಿಕೊಂಡವು.

ಇನ್ನೊಂದೆಡೆ ಕೆಲವು ಶೈವಮಠಗಳು, ಮಠಾಧಿಪತಿಗಳು ನಾಯಕ ಅರಸುಮನೆತನದವರಿಗೆ ಲಿಂಗಧಾರಣೆ ಮಾಡಿದರು. ರಾಜಕೀಯದ ಉಳಿವಿಗಾಗಿಯೋ, ಬೇರೆ ಯಾವುದೋ ಕಾರಣಕ್ಕಾಗಿಯೋ ಈ ರೀತಿಯ

ಧರ್ಮಾಂತರ ಕ್ರಿಯೆಗೆ ಒಳಗಾದರು. ಜನಿವಾರಧಾರಣೆ ಮಾಡಿಕೊಂಡು ಶೈವ ಸಂಪ್ರದಾಯವನ್ನು ಅನುಸರಿಸ ಹತ್ತಿದರು. ಇವರಿಗೂ ಶೈವ ಸಂಪ್ರದಾಯದ ಗುರುಗಳು, ತಮ್ಮ ಆಚಾರ ವಿಚಾರಗಳನ್ನು ಪರಿಚಯಿಸಿದರು. ಈ ಧರ್ಮವನ್ನು ಅನುಸರಿಸಿದ ನಾಯಕ ಅರಸುಮನೆತನಗಳಲ್ಲಿ ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಪ್ರಮುಖವಾದವುಗಳು.

ಈ ಕೆಳವರ್ಗದ ನಾಯಕರು ಮೇಲ್ವರ್ಗದ ಮಡಿಲನ್ನು ಬಯಸಿದ್ದುದು ಬಹುಶಃ ಇವರ ಪ್ರಭುಸತ್ತೆಯಿಂದ ಪ್ರಬಲರಾಗಿದ್ದು, ಗೌರವ, ಸಂಪತ್ತುಗಳೆಲ್ಲ ಇದ್ದರೂ ಜಾತಿ ವಿಷಯಕ್ಕೆ ಬಂದಾಗ ಕೀಳು ಎಂಬ ಭಾವನೆಯೂ ಅವರು ಮೇಲ್ವರ್ಗವನ್ನು ಬಯಸಲು ಕಾರಣವಾಗಿರಬಹುದು. ಈ ಧರ್ಮಾಂತರ ಕ್ರಿಯೆಯ ಕುರಿತಾಗಿ ಲಕ್ಷ್ಮಣ್ ತೆಲಗಾವಿ ಅವರು ಹೀಗೆ ಹೇಳುತ್ತಾರೆ : ಈ ಬಗೆಯ ಧರ್ಮಾಂತರದ ವರ್ಣನೆಗಳಿಗೆ ಆ ಧರ್ಮದ ಬಗೆಗಿನ ನಂಬಿಕೆ, ಒಲವುಗಳಷ್ಟೇ ಕಾರಣವಾಗಿರದೆ, ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳೂ ಇದ್ದವೆಂಬುದನ್ನು ಅಲ್ಲಗಳೆಯಲಾಗದು.[೨೩೨] ಅಲ್ಲದೆ ಇವರು ಯಾವುದೇ ಮೇಲ್ವರ್ಗದ ಮತಕ್ಕೆ ಪ್ರವೇಶ ಪಡೆದರೂ ರಕ್ತಸಂಬಂಧ ಬೆಳೆಸುವಂತಿರಲಿಲ್ಲವೆಂಬುದನ್ನು ಗಮನಿಸಬೇಕಾಗುವುದು.

ಹೀಗೆ ವೈಷ್ಣವ ಮತ್ತು ಶೈವ ಪಂಥದ ಆಚರಣೆಗಳನ್ನು ಅನುಸರಿಸುತ್ತಿದ್ದ ಈ ಅರಸರು ತಮ್ಮ ಮನೆದೇವರು, ಕುಲದೇವರು, ಆರಾಧ್ಯದೇವರುಗಳ ಪೂಜಾವಿಧಾನಗಳಲ್ಲಿಯೂ ಆ ಮತಗಳ ಅನುಸರಣೆಯನ್ನು ಮಾಡಿದರು. ದೇವಾಲಯಗಳನ್ನು ನಿರ್ಮಿಸಿ ದಾನ ದತ್ತಿ ನೀಡುವುದಕ್ಕೆ ಇವರಿಗೆ ಯಾವ ಮತಗಳು ಅಡ್ಡಿ ಮಾಡಲಿಲ್ಲ. ಶೈವ, ವೈಷ್ಣವ, ಶಾಕ್ತೇಯ ಪಂಥಗಳನ್ನು ಅನುಸರಿಸಿದರು. ಹಿಂದೂ ಧರ್ಮದ ಯಾವ ದೇವರೂ ಇವರ ಪೂಜೆಯಿಂದ ಹೊರಗುಳಿಯಲಿಲ್ಲ. ಸರ್ವಧರ್ಮಗಳನ್ನು ಸಮಾನ ದೃಷ್ಟಿಯಿಂದ ಕಂಡರಲ್ಲದೆ ಧಾರ್ಮಿಕ ಹಾಗೂ ಮತೀಯ ಸಾಮರಸ್ಯವನ್ನು ಯಶಸ್ವಿಯಾಗಿ ಪಾಲಿಸಿಕೊಂಡು ಬಂದರು. ನಿಸ್ಸೀಮ ದೈವಭಕ್ತರಾದ ಇವರು ತಮ್ಮದೇ ಆದ ಆರಾಧ್ಯ ದೇವರುಗಳಿಗೆ ಪೂಜಾ ವಿಧಿ ವಿಧಾನಗಳನ್ನು ಪರಿಪಾಲಿಸಿದರು. ಇಂದಿಗೂ ಈ ಮನೆತನಗಳ ವಂಶಸ್ಥರು ಅವುಗಳನ್ನು ಅನುಸರಿಸುತ್ತಾ ಬಂದಿರುವುದು ವಿಶೇಷವಾಗಿದೆ.

## ೩.೬ ನಂಬಿಕೆ-ಸಂಪ್ರದಾಯಗಳು

ಜೀವನವು ನಂಬಿಕೆ-ಸಂಪ್ರದಾಯಗಳ ಮೇಲೆ ನಿಂತಿದೆ. ಮಾನವನಲ್ಲಿ ವೈಚಾರಿಕ ಬೆಳವಣಿಗೆಯು ವೃದ್ಧಿಯಾದಂತೆಲ್ಲ ನಂಬಿಕೆ-ಸಂಪ್ರದಾಯಗಳು ಸಹ ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗುತ್ತವೆ ನಿಜ, ಆದರೆ ಅವು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲಾರವು. ಇಲ್ಲಿ ನಂಬಿಕೆ ಎಂದರೆ ಒಂದು ಹೇಳಿಕೆ; ವಸ್ತುಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ.[೨೩೩] ಸಂಪ್ರದಾಯವೆಂದರೆ ಕಾಲಾನುಕಾಲದಿಂದ ಬದಲಾಗದೆ ಉಳಿದುಕೊಂಡು ಬಂದ ರೂಢಿ ಎಂದೂ ಹೇಳಬಹುದು. ಇಲ್ಲಿ ಯಾವುದೇ ಒಂದು ನಡವಳಿಕೆ ಅಥವಾ ಪದ್ಧತಿಯು ಜನರಲ್ಲಿ ರೂಢಿಗತವಾಗಿ ಸಮಾಜದಲ್ಲಿ ಸ್ಥಾಪನೆಯಾದಾಗ ಅದು

ಸಂಪ್ರದಾಯವಾಗುತ್ತದೆ. ಹೀಗಾಗಿ ನಂಬಿಕೆಯ ಒಂದು ಅಂಗವೇ ಸಂಪ್ರದಾಯ.[೨೩೪] ನಂಬಿಕೆ-ಸಂಪ್ರದಾಯ, ಆಚರಣೆ ಇದು ಒಂದಕ್ಕೊಂದು ಪೂರಕವಾಗಿವೆ. ಇವು ಒಂದನ್ನೊಂದು ಅವಲಂಬಿಸಿವೆ. ಇವು ಆಯಾ ಕಾಲಮಾನದ ಜನರ ಮೇಲೆ ಪ್ರಭಾವ ಬೀರುವುದರೊಂದಿಗೆ ಅವುಗಳನ್ನು ನಿರ್ದಿಷ್ಟ ಪರಿಮಿತಿಯಲ್ಲಿ ಕೊಂಡೊಯ್ಯುತ್ತವೆ.

ಕರ್ನಾಟಕ ನಾಯಕ ಅರಸುಮನೆತನಗಳಲ್ಲಿಯೂ ಇಂಥ ನಂಬಿಕೆ-ಸಂಪ್ರದಾಯಗಳಿದ್ದವು. ಅವು ಆಯಾ ನಾಯಕ ಮನೆತನಗಳವರ ವಿಶ್ವಾಸ, ಭಕ್ತಿ, ಶ್ರದ್ಧೆ, ಶಿಸ್ತು ಇವುಗಳ ಕುರಿತಾಗಿ ಒಂದು ಚೌಕಟ್ಟನ್ನು ನಿರ್ಮಿಸುವಲ್ಲಿ ಸಹಾಯಕಾರಿಯಾಗಿವೆ. ಅಲ್ಲದೆ ಅವರ ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಅರಸರುಗಳ ಬೌದ್ಧಿಕ, ಲೌಕಿಕ ಮತ್ತು ಮಾನಸಿಕ ಸ್ತರಗಳ ಮೇಲೆ ಅವಲಂಬಿತವಾಗಿವೆ. ಕೆಲವು ನಂಬಿಕೆ-ಸಂಪ್ರದಾಯಗಳು ನೈತಿಕವಾಗಿ, ಶಾಸ್ತ್ರೋಕ್ತವಾಗಿ ಬಂದರೆ ಇನ್ನೂ ಕೆಲವು ಮೌಢ್ಯತೆಯನ್ನು ಅನುಸರಿಸಿ ಬಂದವುಗಳಾಗಿವೆ. ನಂಬಿಕೆ-ಆಚರಣೆಗಳು ನಾಯಕ ಅರಸರ ದಿನನಿತ್ಯದ ಬದುಕಿನ ಎರಡು ಮುಖಗಳಾಗಿದ್ದವು. ನಂಬಿಕೆ ಅವರಿಗೆ ಮಾತಿನ ಮೂಲಕ ಸ್ಫೂರ್ತಿ ನೀಡಿದರೆ ಆಚರಣೆಕ್ರಿಯೆಯ ಮೂಲಕ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡು ಸಂಪ್ರದಾಯವಾಗುತ್ತಿತ್ತು. ಅವರ ಆಡಳಿತದ ವ್ಯವಹಾರಗಳಲ್ಲಿ, ಮನೆಯ ಕಾರ್ಯಕ್ರಮಗಳಲ್ಲಿ ಶಕುನಗಳನ್ನು, ಮುಹೂರ್ತಗಳನ್ನು ಸರಿಯಾಗಿ ನೋಡಿ, ಶುಭ-ಅಶುಭ ಫಲ ಹೇಳಿದ್ದರ ಮೇಲೆ ಮುಂದಿನ ಕೆಲಸ ಕಾರ್ಯಗಳು ಅವಲಂಬಿಸಿರುತ್ತಿದ್ದವು.

ಕರ್ನಾಟಕದ ನಾಯಕ ಅರಸುಮನೆತನಗಳವರು ಶಕುನವನ್ನು ನಂಬುತ್ತಿದ್ದರು. ಈ ಶಕುನಗಳು ಮುಂಬರುವ ಜಯಾಪಜಯಗಳ ಅಥವಾ ವೃದ್ಧಿಹ್ರಾಸಗಳ ಮಂಗಳಕರ ಸೂಚನೆಗಳಾಗಿರುತ್ತಿದ್ದವು. ಇವರಿಗೆ ರಾಜ್ಯ, ಓಲಗ, ಯಾತ್ರೆ, ಲಾಭ, ಫಲಾಧನ, ವಿವಾಹ, ಜಯ, ಆಕಸ್ಮಿಕ ಕಾಲಗಳ ಕುರಿತಾಗಿ ಮಾಹಿತಿ ಪಡೆಯಲು ಇದು ಅವಶ್ಯವಾಗಿತ್ತು. ಇವರು ದೈವದಷ್ಟೇ ಶ್ರದ್ಧೆಯಿಂದ ಶಕುನಗಳನ್ನು ನಂಬುತ್ತಿದ್ದರು. ಅವುಗಳಿಂದ ತಮ್ಮ ಕಾರ್ಯಗಳ ಯಶಸ್ಸನ್ನು ನಿರ್ಧರಿಸಿಕೊಳ್ಳುತ್ತಿದ್ದರು. ಭವಿಷ್ಯ ಕೇಳುವುದು, ದೇವರಲ್ಲಿ ಹೂ ಕೇಳುವುದು, ದೇವರನ್ನು ಹೂವಿನಿಂದ ಅಲಂಕರಿಸಿ ತಮ್ಮ ಮನದಾಸೆ ನಿವೇದಿಸಿಕೊಂಡಾಗ ಆ ಹೂ ಬಲಗಡೆಗೆ ಬಿದ್ದಾಗ ಅದು ಶುಭವೆಂದು ನಂಬುತ್ತಿದ್ದರು.

ಇಂಥ ಒಂದು ಘಟನೆ ಚಿತ್ರದುರ್ಗದ ನಾಯಕ ಅರಸರಲ್ಲಿ ಬರುತ್ತದೆ. ಹಿರೇಮದಕರಿನಾಯಕ (ಕ್ರಿ.ಶ. ೧೭೨೧-೧೭೪೮)ನು ಕ್ರಿ.ಶ. ೧೭೪೮-೪೯ರಲ್ಲಿ ನಡೆದ ಮಾಯಕೊಂಡ ಕಾಳಗಕ್ಕೆ ಹೋಗುವಾಗ, ಕುಲದೇವತೆ ಏಕನಾಥೇಶ್ವರಿಯ ದರ್ಶನಕ್ಕೆ ತೆರಳಿ

ನಾನೋದ ಕಾರೇವು | ಜಯಪ್ರರ್ದವಾದರೆ
ದಾವಣೆ ಕುರಿಕ್ವಾಣ | ಕಡಿಸೇನೆ[೨೩೫]

ಎಂಬ ಹರಕೆ ಹೊರುತ್ತಾನೆ. ಆಗ ಏಕನಾತಿ

ಅಂಗಂದ ಮಾತಕೇಳಿ | ಅರಭಾಟ ಮಾಡ್ಯಾಳು
ಭೂಮಿ ತಲ್ಲಣಿಸ್ಯಾಳು
ಎಡಗಾಡೆ ಹೂವ | ಕೊಡುತಾಳೆ[೨೩೬]

ಇದನ್ನು ಸಹಿಸಿಕೊಂಡು ಮದಕರಿನಾಯಕ ಮನೆದೇವತೆ ಉತ್ಸವಾಂಬೆಯ ಹತ್ತಿರಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸಿ ಹರಕೆ ಹೊತ್ತಿದರೂ, ಆಕೆಯೂ ಎಡಗಡೆಯ ಹೂವನ್ನು ನೀಡುತ್ತಾಳೆ. ಧೃತಿಗೆಡದೆ ಈತ ರಣರಂಗಕ್ಕೆ ತೆರಳುವಾಗ ಮನೆದೇವರು ನೀರ್ಥಡಿ ರಂಗನಾಥಸ್ವಾಮಿಗೆ ಮಂಗಳಾರತಿ ಮಾಡಿಸಿ ಮುಂದಕ್ಕೆ ಹೋದಾಗ ರಂಗನಾಥ ಹಲ್ಲಿಯಾಗಿ ಅಡ್ಡ ಬರುತ್ತಾನೆ. ಹಲ್ಲಿ ಶಕುನಕ್ಕೆ ಲಕ್ಷ್ಯಕೊಡದೆ ಮದಕರಿನಾಯಕ ಮುಂದಕ್ಕೆ ಹೋಗುತ್ತಾನೆ. ರಂಗನಾಥ ಕಾಗೆಯಾಗಿ ಅಡ್ಡ ಬರುತ್ತಾನೆ. ಆದರೂ ಮದಕರಿನಾಯಕ ಇದನ್ನು ಗಣನೆಗೆ ತೆಗೆದುಕೊಳ್ಳದೆ ಮುಂದಕ್ಕೆ ಹೋಗುತ್ತಾನೆ. ಕೊನೆಗೆ ರಂಗನಾಥಸ್ವಾಮಿ ಹಾವಾಗಿ ಅಡ್ಡಬರುತ್ತಾನೆ. ಇದನ್ನೂ ಗಣಿಸದ ಮದಕರಿನಾಯಕ ಆನೆ ನಡೆಸುತ್ತಿರುವ ರಂಗಣ್ಣನಿಗೆ,

ಹಾವೀನ ಶಕುನಾವು | ನಮಗ್ಯಾತಕ್ಹತ್ಯಾವು
ಹೊಡ್ಯೋಸಂಗಣ್ಣ | ಮುಂದ್ಯಾಕನೆ[೨೩೭]

ಎಂದು ಆದೇಶಿಸುತ್ತಾನೆ. ಹೀಗೆ ಹಿರೇ ಮದಕರಿನಾಯಕ ಮಾಯಕೊಂಡ ಕಾಳಗಕ್ಕೆ ತೆರಳುತ್ತಾನೆ.

ಸುರಪುರದ ಅರಸ ಪೀತಾಂಬರಿ ಬಹರಿ ಪಿಡ್ಡನಾಯಕ(ಕ್ರಿ.ಶ. ೧೬೮೭-೧೭೨೬)ನು ಕ್ರಿ.ಶ.೧೭೦೫ರಲ್ಲಿ ಮೊಗಲರು ವಾಗಿನಗೇರಿ ಮುತ್ತಿಗೆ ಹಾಕಿದಾಗ, ವಾಗಿನಗೇರಿಯಿಂದ ಪಲಾಯನಗೈದ ಪಿಡ್ಡನಾಯಕ ಒಂದು ವರ್ಷಪರ್ಯಂತ ಕನಕಗಿರಿಯ ಎಮ್ಮಿಗುಡ್ಡದಲ್ಲಿದ್ದು ಸೈನ್ಯ ಸಂಘಟಿಸಿಕೊಂಡು ತಮ್ಮ ಬಂಧುಗಳಾದ ಗುಡಗುಂಟಿ ಅರಸರ ಹತ್ತಿರ ಬರುತ್ತಾನೆ. ಅಲ್ಲಿಂದ ವಾಗಿನಗೇರಿ ಮುತ್ತಿಗೆಗೆ ತೆರಳುವಾಗ ಕೃಷ್ಣಾನದಿಯ ಹತ್ತಿರಕ್ಕೆ ಬರುತ್ತಾನೆ. ಕಾಗೆಯೊಂದು ಆತನ ಬಲಕ್ಕೆ ಹಾರಿಹೋಗುತ್ತದೆ. ಆತನ ಜೊತೆಗಿದ್ದ ಸಂಗಡಿಗರು ವಾಗಿನಗೇರಿಯನ್ನು ಜಯಿಸುವ ಶುಭ ಶಕುನವೆನ್ನುತ್ತಾರೆ,[೨೩೮] ಕೊನೆಗೆ ಪೀತಾಂಬರಿ ಬಹರಿ ಪಿಡ್ಡನಾಯಕ ವಾಗಿನಗೇರಿ ಕೋಟೆಯನ್ನು ವಶಪಡಿಸಿಕೊಳ್ಳುತ್ತಾನೆ. ಅಲ್ಲದೆ ಸುರಪುರದ ಅರಸುಮನೆತನದವರು ತೀರಿದಾಗ ನಾಮ ಹಚ್ಚುವ ಪುರುಷಕಾರಿ, ಬೆಂಕಿ ಹಿಡಿಯುವ ಖಾನಜಾದೆಯವರು, ಸ್ಮಶಾಸನದಲ್ಲಿ ರಾಜರ ಬೃಂದಾವನಗಳ ಸೇವೆಗೈಯುವವರು ಶುಭ ಪ್ರಸಂಗಗಳಲ್ಲಿ ಅರಮನೆಗೆ ಬರುತ್ತಿರಲಿಲ್ಲ. ಇತರ ವೇಳೆಯಲ್ಲಿ ಬರಲು ಯಾವುದೇ ಅಡ್ಡಿಯಿಲ್ಲ.

ಆನೆಗೊಂದಿಯ ಅರಸ ತಿರುಮಲದೇವರಾಜು ಬೇಟೆಗೆ ತೆರಳಲು ತಯಾರಿ ನಡೆಸಿದಾಗ, ಹಲ್ಲಿಯು ಆತನ ಎಡಗಡೆಯ ಭುಜದ ಮೇಲೆ ಬೀಳುತ್ತದೆ. ಆಗ ಇದು ಅಪಶಕುನವೆಂದು ಜೋಯಿಸರು ಹೇಳಿದಾಗ ಬೇಟೆಗೆ ಹೋಗುವದನ್ನೇ ಬಿಡುತ್ತಾನೆ. ಮರುದಿನ ಬೇಟೆಗೆ ತೆರಳುತ್ತಾನೆ.[೨೩೯]

ಗುಡಗುಂಟಿಯ ಅರಸ ರಾಜಾಸೋಮಸಜ್ಜನಾಯಕ ಕಾರ್ತಿಕ ಮಾಸದಲ್ಲಿ ಅಮರೇಶ್ವರನ ದರ್ಶನಕ್ಕೆ ತೆರಳುತ್ತಿದ್ದ ಮುತ್ತೈದೆಯೊಬ್ಬಳು ತುಂಬಿದ ಕೊಡ ಹೊತ್ತುಕೊಂಡು ದೇವರಭೂಪೂರದಲ್ಲಿ ಎದುರು ಬಂದಾಗ ರಾಜಸೋಮಸಜ್ಜನಾಯಕ ಆಕೆಯಿಂದ ತುಂಬಿದ ಕೊಡದ ನೀರನ್ನು ಇಸಿದುಕೊಂಡು ಬಾಯಿಯಲ್ಲಿ ಹಾಕಿಕೊಂಡು ಒಂದು ಗುಟುಕು ಕುಡಿದು ಮುಂದಕ್ಕೆ ಹೋಗುತ್ತಾನೆ.[೨೪೦] ದೇವದುರ್ಗದ ಅರಸು ಮನೆತನದವರು ಯಾವುದಾದರೂ ಶುಭಕಾರ್ಯಕ್ಕೆ ಹೊರಟಾಗ ಎಡಕ್ಕೆ ಬೆಕ್ಕು ಹೋದರೆ, ಪಕ್ಷಿ ಹಾರಿದರೆ, ಹಲ್ಲಿ ನುಡಿದರೆ[೨೪೧] ಅವರು ಆ ಕಾರ್ಯಕ್ಕೆ ತೆರಳುವುದಿಲ್ಲವಂತೆ. ಚಿತ್ರದುರ್ಗ, ಗುಡೇಕೋಟೆ, ಜರಿಮಲೆ ಅರಸರು, ಯಾವುದೇ ಕಾರ್ಯಕ್ಕೆ ಹೊರಟಾಗ ಮುತ್ತೈದೆ ಸ್ತ್ರೀ ಎದುರಿಗೆ ಬಂದರೆ, ಬ್ರಾಹ್ಮಣ ತುಂಬಿದ ಚಕ್ಕಡಿ ಬಂದರೆ ಅದನ್ನು ಶುಭ ಸಂಕೇತವೆಂದು ನಂಬುತ್ತಾರೆ.

ಗುಂತಗೋಳದ ಅರಸ ರಾಜಾರಾಯಪ್ಪನಾಯಕರು ಯುಗಾದಿಯ ಪಾಡ್ಯದ ದಿನದಂದು ರತ್ನಪಕ್ಷಿಯನ್ನು ನೋಡಲು ತೆರಳುತ್ತಿದ್ದರು. ಅದನ್ನು ನೋಡಿದರೆ ಇಡೀ ವರುಷದಲ್ಲಿ ಶುಭಕಾರ್ಯಗಳು ಜರುಗುತ್ತವೆ[೨೪೨] ಎಂಬ ನಂಬಿಕೆ ಹೊಂದಿದ್ದರು. ಹೀಗೆ ಈ ಮನೆತನದವರು ಶಕುನ ಮತ್ತು ಅಪಶಕುನದ ಬಗ್ಗೆ ನಂಬಿಕೆಯನ್ನು ಹೊಂದಿದ್ದರು. ಇಂದಿಗೂ ಅವುಗಳನ್ನು ನಂಬುತ್ತಾರೆ. ಕನಸುಗಳ ಕುರಿತಾಗಿ ಈ ಮನೆತನದವರು ಅವು ಭವಿಷ್ಯ ಜೀವನದ ಘಟನೆಗಳ ಮುನ್ಸೂಚನೆ ನೀಡುತ್ತವೆಂದು ನಂಬಿದ್ದರು.

ಚಿತ್ರದುರ್ಗದ ಇಮ್ಮಡಿ ಮದಕರಿನಾಯಕ (ಕ್ರಿ.ಶ.೧೬೫೨-೧೬೭೪)ನು ಶುಭಕೃತು ಸಂ||ದ ಮಾರ್ಗಶಿರ ಶುದ್ಧ ೮ ಶುಕ್ರವಾರ ಹಿರಿಯೂರು ಕೋಟೆಗೆ ಮುತ್ತಿಗೆ ಹಾಕಿದಾಗ ದೊರೆಗೆ ತೇರಮಲ್ಲೇಶ್ವರನ ಸ್ವಪ್ನವಾಯಿತಂತೆ. ಕೂಡಲೇ ಇಪ್ಪತ್ತು ದಿವಸದಲ್ಲಿ ಆ ಕೋಟೆಯನ್ನು ವಶಪಡಿಸಿಕೊಂಡರು.[೨೪೩]

ಇಮ್ಮಡಿ ಕಸ್ತೂರಿರಂಗಪ್ಪ (ಕ್ರಿ.ಶ.೧೭೪೯-೧೭೫೪)ನು ತೀರಿದ ಬಳಿಕ ಆತನಿಗೆ ಸಂತಾನವಿಲ್ಲದ ಕಾರಣ, ಹೊಸದುರ್ಗದ ಸೇನಾಪತಿ ಹಿರೇ ಮದಕರಿನಾಯಕನ ತಮ್ಮನಾದ ದಂಡಿನ ಜಂಪಣ್ಣನಾಯಕನ ಮಗ ಭರಮಣ್ಣನಾಯಕನಿಗೆ ಪಟ್ಟಗಟ್ಟಬೇಕೆಂದು ಚಿತ್ರದುರ್ಗದ ಹಿರಿಯರೆಲ್ಲ ನಿಶ್ಚಯಿಸಿದರು. ಆ ದಿನ ರಾತ್ರಿ ಹಿರೇ ಮದಕರಿನಾಯಕನ ಪತ್ನಿ ಓಬಳಮ್ಮನಾಗತಿಗೆ ಕನಸು ಬಿತ್ತು. ಆ ಕನಸಿನಲ್ಲಿ ಹಿರೇ ಮದಕರಿನಾಯಕ "ನಾನು ಈ ಭೂಮಿಯ ಮೇಲೆ ಜಾನಕಲ್ಲುದುರ್ಗದ ತೊದಲು ಭರಮಣ್ಣ ನಾಯಕನ ಹೊಟ್ಟೆಯಲ್ಲಿ ಮದಕರಿನಾಯಕನೆಂಬ ಹೆಸರಿನಿಂದ ಹುಟ್ಟಿದ್ದೇನೆ. ನನಗೆ ಪಟ್ಟವಾಗಬೇಕು" ಎಂದು ಹೇಳಿದನಂತೆ. ಮರುದಿನ ಓಬಳಮ್ಮ ನಾಗತಿ ಸಭೆಯನ್ನು ಕರೆಯಿಸಿ ಎಲ್ಲ ಸಜ್ಜನರಿಗೆ ಈ ವಿಷಯ ತಿಳಿಸುತ್ತಾಳೆ. ಆಗ ತೊದಲು ಭರಮಣ್ಣನಾಯಕನ ಮಗನಾದ ಮದಕರಿನಾಯಕನನ್ನು ಅಂಬಾರಿಯಲ್ಲಿ ಕೂರಿಸಿಕೊಂಡು ಉತ್ಸವದಿಂದ ದುರ್ಗಕ್ಕೆ ಕರೆದುಕೊಂಡು ಬಂದು ಆತನಿಗೆ ಪಟ್ಟವನ್ನು ಕಟ್ಟುತ್ತಾರೆ.[೨೪೪]

ಇಮ್ಮಡಿ ಮದಕರಿನಾಯಕ(ಕ್ರಿ.ಶ.೧೬೫೨-೧೬೭೪)ನಿಗೆ ಮಕ್ಕಳಿಲ್ಲದ್ದಕ್ಕಾಗಿ ಆತ ಉಚ್ಚಂಗಮ್ಮನಿಗೆ ಇದಿರೆತ್ತಿ ಪೂಜೆ ಮಾಡುತ್ತಾನೆ. ಆತನ ಮಡದಿ ಬೇವಿನಸೀರೆಯುಟ್ಟು ಹರಕೆ ನೀಡುತ್ತಾಳೆ. ಕೆಂಚಮ್ಮ ಎಂಬ ಮಗಳು ಜನಿಸುತ್ತಾಳೆ. ಆಗ ಉಚ್ಚಂಗಮ್ಮ ಇಮ್ಮಡಿ ಮದಕರಿನಾಯಕನ ಕನಸಿನಲ್ಲಿ ಬಂದು ತನ್ನನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ಪ್ರತಿಷ್ಠಾಪಿಸಲು ಹೇಳುತ್ತಾಳೆ. ಆಗ ಮದಕರಿನಾಯಕ ಉಚ್ಚಂಗಿಯಲ್ಲಿದ್ದ ಉತ್ಸವಮೂರ್ತಿಯನ್ನು ಚಿತ್ರದುರ್ಗಕ್ಕೆ ತಂದು ಪ್ರತಿಷ್ಠಾಪಿಸುತ್ತಾನೆ.[೨೪೫]

ಸುರಪುರದ ಅರಸ ಮುಮ್ಮಡಿ ಪಾಮನಾಯಕ(ಕ್ರಿ.ಶ.೧೭೫೦-೧೭೭೩)ನು ತನ್ನ ಇಷ್ಟದೇವತೆ ಶ್ರೀ ವೇಣುಗೋಪಾಲನನ್ನು ಪ್ರಾರ್ಥಿಸಿ ಮಲಗಿಕೊಂಡಾಗ ಕನಸಿನಲ್ಲಿ ಶ್ರೀ ವೇಣುಗೋಪಾಲ ಕಾಣಿಸಿಕೊಂಡು ನನ್ನ ಭಕ್ತರಾದ ಹನ್ನೆರಡು ಜನರ ಚರಿತ್ರೆಯನ್ನು ಆಂಧ್ರಭಾಷೆಯಲ್ಲಿ ರಚಿಸಿ ನಮಗೆ ಸಮರ್ಪಿಸು ಎಂದು ಹೇಳಿದನಂತೆ. ನಂತರ ರಾಘವಪಾಮನಾಯಕನು ಭಾರ್ಗವಪುರಾಣವನ್ನು ರಚಿಸುತ್ತಾನೆ.[೨೪೬]

ಇವು ಕೆಲವು ಅರಸರಿಗೆ ಬಿದ್ದ ಕನಸುಗಳಾದರೆ, ಆನೆಗೊಂದಿ ಅರಸರು ಕನಸಿನಲ್ಲಿ ಸಾಧುಸಂತರು, ಗುರು, ಜಂಗಮ, ಬ್ರಾಹ್ಮಣರು, ದೇವತೆ, ಮಠ, ದೇವಾಲಯಾದಿ ಪವಿತ್ರ ಸ್ಥಾನ, ಬಿಳಿ ಬಟ್ಟೆಯುಟ್ಟವರು, ಪರ್ವತ, ಸಿಂಹಾಸನಗಳನ್ನು ಕಂಡರೆ ಕೀರ್ತಿಯಾಗುತ್ತದೆಂದು ನಂಬಿದ್ದರು.[೨೪೭]

ಗುಡಗುಂಟಿ, ದೇವದುರ್ಗದವರು ಕುದುರೆ, ಆನೆ, ಪಟ್ಟಾಧಿಕಾರ, ಛತ್ರಧ್ವಜ, ಬೆಳ್ಳಿ, ಬಂಗಾರ, ರತ್ನಾದಿ, ವಜ್ರ, ವೈಢೂರ್ಯ, ಫಲ, ಪುಷ್ಪಾದಿ ಸಾಮಾನುಗಳನ್ನು ಕನಸಿನಲ್ಲಿ ಪಡೆದರೆ ಉತ್ತಮ[೨೪೮] ಎಂಬ ನಂಬಿಕೆ ಇತ್ತು. ಕನಕಗಿರಿಯ ಅರಸುಮನೆತನದಲ್ಲಿ ಕನಸಿನಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ಗೋಧಿ, ಸಾಸಿವೆ ಇತ್ಯಾದಿ ಧಾನ್ಯಗಳನ್ನು ಪಡೆಯುವುದರಿಂದ ಸುಖ, ಲಾಭ, ಕೀರ್ತಿಯುಂಟಾಗುತ್ತದೆಂಬ ನಂಬಿಕೆಯನ್ನು ಇಂದಿಗೂ ಹೊಂದಿದ್ದಾರೆ.

ಗುಂತಗೋಳದ ಅರಸ ರಾಜಾ ಬಸಪ್ಪನಾಯಕರು ಕನಸಿನಲ್ಲಿ ಕಪ್ಪುವಸ್ತ್ರಗಳನ್ನು ಧರಿಸಿದ ಸ್ವಾಮಿಯೊಬ್ಬರನ್ನು ಕಂಡರಂತೆ. ಮರುದಿನವೇ ಅವರ ಮನೆಯಲ್ಲಿ ಒಬ್ಬರು ತೀರಿಕೊಂಡರಂತೆ. ಹೀಗಾಗಿ ಇಂದಿಗೂ ಈ ಮನೆತನದವರು ಕಪ್ಪುವಸ್ತ್ರಗಳನ್ನು ತೊಡುವುದಿಲ್ಲ.[೨೪೯] ಇಂದು ಚಿತ್ರದುರ್ಗ, ಆನೆಗೊಂದಿ, ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ಮತ್ತೋಡು, ಹರ್ತಿಕೋಟೆ ಇವರೂ ಸಹಿತ ಕಪ್ಪುವಸ್ತ್ರಗಳನ್ನು ಧರಿಸುವುದಿಲ್ಲ. ಕಾರಣ ಕಪ್ಪುಬಟ್ಟೆ ಅಪಶಕುನವೆಂಬ ನಂಬಿಕೆ ಹೊಂದಿದ್ದಾರೆ. ಕಾಗೆ, ಗೂಗೆಗಳ ಧ್ವನಿ ಕೇಳಿದರೆ ಹಾನಿಯಾಗುವುದೆಂದು, ಆಕಳು, ಆನೆ, ದೇವತೆ, ಬ್ರಾಹ್ಮಣ, ಕನಸಿನಲ್ಲಿ ಬಂದರೆ ಲಾಭ ಎಂಬ ನಂಬಿಕೆಯನ್ನೂ ಹೊಂದಿದ್ದಾರೆ.

ಜೋತಿಷ್ಯ ಪಂಚಾಂಗ ಭವಿಷ್ಯದ ಕುರಿತಾದ ಇವರ ನಂಬಿಕೆ ಹೀಗಿದೆ. ಸುರಪುರದ ಅರಸ ಪೀತಾಂಬರ ಪಿಡ್ಡನಾಯಕನಿಗೆ ಗೋಣಪ್ಪಯ್ಯನೆಂಬ ಸಂತನು ನೀನು ಇನ್ನು ಒಂದು ವರ್ಷದಲ್ಲಿ ವೈಕುಂಠಪುರಕೆ

ವಿಜಯಮಂಗೈವೆ. ನಿನ್ನ ಮಗನಾದ ಪಾಮನಾಯಕನು ನಿನಗಿಂತಲೂ ಶೂರನೂ, ಸಂಪೂರ್ಣ ಯಶಸ್ಸುಳ್ಳವನು ಆಗುತ್ತಾನೆ[೨೫೦] ಎಂದು ಭವಿಷ್ಯ ನುಡಿದನು.

ಸುರಪುರದ ಅರಸ ಕೃಷ್ಣಪ್ಪನಾಯಕ(ಕ್ರಿ.ಶ.೧೮೨೭-೧೮೪೩)ನ ಆಸ್ಥಾನದಲ್ಲಿದ್ದ ಜ್ಯೋತಿಶ್ಯಾಸ್ತ್ರದಲ್ಲಿ ಏಕಮೇವಾದ್ವಿತೀಯರಾದ ಹೆಬ್ಬಾಳ ರಾಮಶಾಸ್ತ್ರಿಗಳು, ನಾಲ್ವಡಿ ವೆಂಕಟಪ್ಪನಾಯಕ(ಕ್ರಿ.ಶ.೧೮೪೨-೧೮೫೮)ನ ಜಾತಕವನ್ನು ಬರೆದಿದ್ದರು. ಅದು ಅಕ್ಷರಶಃ ಸತ್ಯವಾಯಿತು. ಇಂದಿಗೂ ಈ ಮನೆತನದ ವಂಶೀಕರು ಸುರಪುರದಲ್ಲಿ ವಾಸವಾಗಿದ್ದಾರೆ. 'ಸುರಪುರ ಪಂಚಾಂಗ'ವನ್ನು ಇವರು ಹೊರತರುತ್ತಿದ್ದಾರೆ. ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿಯೇ ಸುರಪುರ ಪಂಚಾಂಗ ಹೆಸರುವಾಸಿಯಾಗಿದೆ. ಎಲ್ಲಾ ಮನೆತನದವರು ಯಾವುದೇ ಶುಭಕಾರ್ಯಗಳನ್ನು ಕೈಗೊಳ್ಳುವಾಗ ಆಸ್ಥಾನದ ಜೋತಿಷಿಗಳನ್ನು ಕೇಳಿಯೇ ಮುಂದಿನ ಕಾರ್ಯಕ್ರಮಗಳನ್ನು ಜರುಗಿಸುತ್ತಿದ್ದರು. ಅವರಿಗೆ ಶುಭ, ಅಶುಭ, ಮುಹೂರ್ತ, ಅಮುಹೂರ್ತಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಿದ್ದರು. ಸುರಪುರದವರು ಬಿದಿಗೆ ಮಂಗಳವಾರ, ತದಿಗೆ ಶುಕ್ರವಾರ, ಚೌತಿ-ಮಂಗಳವಾರ, ಪಂಚಮಿ ಗುರುವಾರ, ಷಷ್ಟಿ ಶನಿವಾರ, ಅಷ್ಟಮಿ ಶುಕ್ರವಾರ, ನವಮಿ ತಿಥಿಗಳ ದಿನದಂದು ಪ್ರಯಾಣ ಮಾಡಿದರೆ ತೊಂದರೆ ಕಟ್ಟಿಟ್ಟ ಬುತ್ತಿಯೆಂದು ಈ ದಿನಗಳಂದು ಪ್ರಯಾಣಿಸಲು ನಿಷೇಧವಿದ್ದಿತು.[೨೫೧]

ಗುಡಗುಂಟಿ ಅರಸರಿಗೆ ಯುಗಾದಿ ಪಾಡ್ಯ, ವಿಜಯದಶಮಿ, ದೀಪಾವಳಿ, ಅಕ್ಷಯ ತೃತೀಯ ರಾಜಯೋಗ, ಇವು ಒಳ್ಳೆಯ ಮುಹೂರ್ತಗಳೆಂದು ನಂಬಿದ್ದರು. ಸುರಪುರದ ಅರಮನೆಯನ್ನು ಯುಗಾದಿಯ ಪಾಡ್ಯದ ದಿನದಂದೇ ರಾಜಾಸೋಮಲಿಂಗ ನಾಯಕರ ಕಾಲದಲ್ಲಿ ಕಟ್ಟಲು ಪ್ರಾರಂಭಿಸಿದರು. ಕನಕಗಿರಿಯ ರಾಣಿ ಗೌರಮ್ಮ ದೀಪಾವಳಿಯ ದಿನವೇ ಹುಲಿಹೈದರ್‌ನ ಅರಮನೆಯನ್ನು ಕಟ್ಟಲು ಅಡಿಪಾಯ ಹಾಕಿಸಿದಳು.[೨೫೨]

ಭಾರತೀಯ ಹಿಂದೂ ಸಂಸ್ಕೃತಿಯ ಪ್ರಕಾರ ಯಾವುದೇ ಮಂಗಳ ಕೆಲಸಗಳನ್ನು ಪ್ರಾರಂಭಿಸುವ ಮೊದಲು ಶುಭವಾಚಕದಿಂದ ಆರಂಭಿಸುವುದು ಹಿಂದಿನಿಂದಲೂ ಬೆಳೆದು ಬಂದಿರುವುದರಿಂದ ಅದನ್ನೇ ಇವರು ಅನುಸರಿಸಿದರು. ಕೆಲವು ಅರಸರು ತುಲಾಭಾರ ಮಾಡುವುದರಿಂದ ತಮ್ಮ ತಂದೆ-ತಾಯಿಗಳಿಗೆ ಪುಣ್ಯಲಭಿಸುವುದೆಂಬ ಭಾವನೆ ಹೊಂದಿದ್ದರು. ಸುರಪುರದ ಅರಸ ಮೊಂಡಗೈ ವೆಂಕಟಪ್ಪನಾಯಕನು ಕೃಷ್ಣಾನದಿ ತೀರದಲ್ಲಿ ವೈಖಾನಸ ರೀತಿ ಶ್ರೀಕೃಷ್ಣನ ತುಲಾಭಾರ ಮಾಡಿಸಿ ಆ ಹಣವನ್ನು ವಿಪ್ರರಿಗೆ ಕೊಟ್ಟರಂತೆ. ಇದನ್ನು ಪುರುಷಕಾರಿ ಲೋಕಯ್ಯನ ಗ್ರಂಥ ಈ ರೀತಿ ಹೇಳುತ್ತದೆ :

ಧರೆಯಲಾಳಿದ ರಾಜರಾಜ ಅರ್ಧಪಟ್ಟವನು
ವರವೇಣುನಾದ ರುಕ್ಮಿಣಿ ಸತ್ಯ ಸಹಿತ

ಸರಸ ವೆಂಕಟನೃಪನು ಸದ್ಗುಣ ಚರಿತ
ಪರಮಭಕ್ತಿಲಿ ಕೃಷ್ಣ ತೀರದಲ್ಲೊಯ್ದು
ವಿಪ್ರ ವೈಷ್ಣವರೆಲ್ಲ ವಿಧಿ ಪೂರ್ವಕದಿ
ಸುಪ್ರತಿಷ್ಠದಿ ವೈಖಾನಸಾಗಮದಿ
ಅಪ್ರಮೇಯ ಕೈಕೊಂಡ ಹರಿಗೆ ತುಲಾಭಾರ
ತುಲಿತ ಮಾಡಿಸಿ ಅದನು ವಿಪ್ರ ವೈಷ್ಣವರ
ಭೋಜನ ದಕ್ಷಿಣ ತಾಂಬೂಲ[೨೫೩]

ಎಂಬ ವಿವರಣೆ ಇದೆ.

ಆನೆಗೊಂದಿ ಅರಸರು ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ ಮತ್ತು ಋಷಿವಧೆಗಳು ಪಾಪದ ಕೆಲಸವೆಂದೂ, ಅನ್ನದಾನ, ವಿದ್ಯಾದಾನ, ಜ್ಞಾನದಾನ, ಭೂದಾನ, ಗೋದಾನ ಮಾಡುವುದರಿಂದ ಪುಣ್ಯ ಲಭಿಸುತ್ತದೆಂಬ ಭಾವನೆ ಇಟ್ಟುಕೊಂಡಿದ್ದರು. ಅರಸ ಶ್ರೀರಂಗದೇವರಾಯರು ತಮ್ಮ ಪೂರ್ವಜರಿಗೆ ಪುಣ್ಯವಾಗಲಿ ಎಂದು ಬ್ರಾಹ್ಮಣರಿಗೆ ಯುಗಾದಿಯಂದು ಹನ್ನೊಂದು ಆಕಳುಗಳನ್ನು ದಾನ ಮಾಡಿದ್ದರು.[೨೫೪]

ಗುಡಗುಂಟಿ ಅರಸ ಲಿಂಗನಾಯಕರು ತಮ್ಮ ಪೂರ್ವಜರಿಗೆ ಪುಣ್ಯ ಲಭಿಸಲೆಂದು ಗುಡಗುಂಟಿಯಲ್ಲಿ ಬಸವಣ್ಣ ದೇವಾಲಯವನ್ನು ನಿರ್ಮಿಸಿದರು. ದೇವದುರ್ಗದ ಕೊಳ್ಳಿರಂಗಪ್ಪನಾಯಕ ತಮ್ಮ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ದೇವದುರ್ಗದ ಅರಸನಕೆರೆಯನ್ನು ನಿರ್ಮಿಸಿದರು.[೨೫೫]

ಹರತಿಯ ತಿಮ್ಮಣ್ಣನಾಯಕನು ಸೂರ್ಯ ಮತ್ತು ಚಂದ್ರಗ್ರಹಣ ಪರ್ವದಿನಗಳಲ್ಲಿ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ನಿಡುಗಲ್‌ದುರ್ಗದ ಮಂಗಳವಾಡಾ ಹೋಬಳಿಯಲ್ಲಿನ ಬೂದುಸುಗೊಂಡನ ಹಳ್ಳಿಯನ್ನು ಅಪ್ಪಾವಧಾನಿಗೆ ಅಗ್ರಹಾರವಂ ಮಾಡಿ ದಾನನೀಡಿದನು.[೨೫೬] ಹೀಗೆ ಈ ಮನೆತನದವರು ಅರವಟ್ಟಿಗೆಗಳನ್ನು ಕಟ್ಟಿಸುವುದು, ಕೆರೆ, ಕುಂಟೆ, ಬಾವಿ, ಸತ್ರ, ಶಾಲೆ, ದೇವಾಲಯಗಳ ನಿರ್ಮಾಣದ ಮುಖಾಂತರ ಜನರಿಗೆ ಮಹದುಪಕಾರವನ್ನು ಮಾಡುವುದರೊಂದಿಗೆ ಜನತೆಯ ನೈತಿಕ ರಕ್ಷಣೆಗೆ ಗಮನ ಹರಿಸುತ್ತಿದ್ದರು.

ತೀರ್ಥಯಾತ್ರೆಗೆ ತೆರಳುವುದರ ಮೂಲಕ ಮನಃಶಾಂತಿ, ಹೃದಯ ಪವಿತ್ರತೆ ಲಭಿಸುವುದೆಂಬ ನಂಬಿಕೆಯನ್ನು ಹೊಂದಿದ್ದ ಇವರಲ್ಲಿ ಚಿತ್ರದುರ್ಗದವರು ಕೇದಾರ, ಬದರಿ, ಹರಿದ್ವಾರ, ಕಾಶಿ, ಕನ್ಯಾಕುಮಾರಿ, ತಿರುಪತಿ, ಶ್ರೀಶೈಲ, ಗೋಕರ್ಣ, ಕಂಚಿ, ಮಧುರೈ, ತಂಜಾವೂರು ಕ್ಷೇತ್ರಗಳಿಗೆ ಹರಕೆಯನ್ನು ಹೊತ್ತು ಆ ಸ್ಥಳಗಳಲ್ಲಿಯ ದೇವರುಗಳಿಂದ ಪೂಜೆ ಸಲ್ಲಿಸುತ್ತಿದ್ದರು.[೨೫೭] ಪಾಂಡಿಚೇರಿ ಯುದ್ಧವನ್ನು ಮುಗಿಸಿಕೊಂಡು ಮೊಂಡಗೈ ವೆಂಕಟಪ್ಪನಾಯಕನು ರಾಮೇಶ್ವರಕ್ಕೆ ತೀರ್ಥಯಾತ್ರೆಗೆ ಹೋಗುತ್ತಾನೆ. ಅಲ್ಲಿ ಸ್ನಾನ, ದರ್ಶನ, ದಾನಗಳನ್ನು ನೆರವೇರಿಸಿ, ನಂತರ ಕಂಚಿ, ತಿರುಪತಿಗೆ ತೆರಳಿ

ದೇವರದರ್ಶನವನ್ನು ಪಡೆಯುತ್ತಾನೆ. ಆನೆಗೊಂದಿ ಅರಸರು ತಿರುಪತಿ, ಕಾಶಿ, ಕನ್ಯಾಕುಮಾರಿ, ಶ್ರೀಶೈಲಗಳಿಗೆ ತೀರ್ಥಯಾತ್ರೆಗೆ ಹೋಗುತ್ತಿದ್ದರು. ಈಗಲೂ ತಮ್ಮ ಮನೆಗೆ ತಿರುಪತಿ ಹಾಗೂ ಕಾಶೀಸ್ವಾಮಿಗಳನ್ನು ಆಹ್ವಾನಿಸಿ ಅವರಿಗೆ ೧೧೬ ರೂಪಾಯಿಗಳನ್ನು ಕಾಣಿಕೆಯಾಗಿ ನೀಡುವ ಪದ್ಧತಿ ಇದೆ.[೨೫೮]

ತೀರ್ಥಯಾತ್ರೆಗೆ ಹೋಗಿಬಂದ ಅರಸರನ್ನು ಪುಣ್ಯವಂತರೆಂದು ಭಾವಿಸಿ ಪ್ರಜೆಗಳು ಅವರಿಗೆ ಹೊಸಬಟ್ಟೆ ಉಡಿಸಿ ದೇವರಂತೆ ಭಕ್ತಿ-ಭಾವದಿಂದ ನಮಿಸುತ್ತಿದ್ದರು. ಗುಂತಗೋಳದ ಅರಸ ರಾಜಾ ರಾಯಪ್ಪನಾಯಕರು ಕಾಶಿ, ರಾಮೇಶ್ವರಕ್ಕೆ ತೀರ್ಥಯಾತ್ರೆ ಮುಗಿಸಿ ಬಂದಾಗ ಅವರನ್ನು ಇಡೀ ಸಂಸ್ಥಾನದ ಪ್ರಜೆಗಳು ಅದ್ದೂರಿಯಿಂದ ಸ್ವಾಗತಿಸಿದರು.[೨೫೯] ಸುರಪುರದ ಅರಸರು ಸಂಕ್ರಮಣ, ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ವಿಶೇಷವಾಗಿ ಭಾನುವಾರ ಅಮಾವಾಸ್ಯೆ ಬಂದರೆ ಕೃಷ್ಣಾನದಿಯಲ್ಲಿ ನದಿಸ್ನಾನ ಮಾಡುವ ಸಂಪ್ರದಾಯವಿಟ್ಟುಕೊಂಡಿದ್ದರು.

ಗುಡಗುಂಟಿ ಅರಸರು ಕಕ್ಕೇರಿಯ ಹತ್ತಿರ ಕೃಷ್ಣಾನದಿಯ ದಂಡೆಗೆ ಒಂದು ಛತ್ರವನ್ನು ಕಟ್ಟಿಸಿದ್ದಾರೆ. ಪ್ರತಿ ಅಮಾವಾಸ್ಯೆಯ ದಿನ ಅಲ್ಲಿಗೆ ತೆರಳಿ ನದಿಸ್ನಾನ ಮಾಡುವ ಸಂಪ್ರದಾಯವಿಟ್ಟುಕೊಂಡಿದ್ದರು. ಗುಂತಗೋಳದ ರಾಜಾ ರಾಯಪ್ಪನಾಯಕರು ಆಧ್ಯಾತ್ಮಿಕ ಪುರುಷರಾಗಿದ್ದು, ಜಲದುರ್ಗದ ಕೃಷ್ಣಾನದಿಗೆ ಪುಣ್ಯಸ್ನಾನಕ್ಕಾಗಿ ಪ್ರತಿ ಅಮಾವಾಸ್ಯೆಗೆ ತೆರಳುತ್ತಿದ್ದರು. ಅಲ್ಲಿ ಮೌನಚಾರಣೆಗೈಯ್ಯುತ್ತಿದ್ದರು. ಇವರ ಕುರಿತಾದ ಆರತಿ ಪದ್ಯದ ನುಡಿಯೊಂದು ಇಂತಿದೆ :

ರನ್ನದಾರುತಿ ಬೆಳಗಿರೇ, ರಾಜಾರಾಯಣ್ಣ
ನಾಯಕರಿಗೆ ಚಿನ್ನದಾರುತಿ ಬೆಳಗಿರೇ
ಜಲದುರ್ಗ ಆಧಾತ್ಮಭವದೊಳಗೆ
ಪವಡಿಸಿ ಮೌನಾಚರಣೆಗೈದ ರಾಯನಿಗೆ
ರನ್ನದಾರುತಿ ಬೆಳಗಿರೇ ರಾಜಾರಾಯಣ್ಣ
ನಾಯಕರಿಗೆ ಚಿನ್ನದಾರುತಿ ಬೆಳಗಿರೆ[೨೬೦]

ಈ ಮನೆತನಗಳಲ್ಲಿ ಹರಕೆ ನೀಡುವ ಸಂಪ್ರದಾಯವಿತ್ತು. ಚಿತ್ರದುರ್ಗದ ತಿಮ್ಮಣ್ಣನಾಯಕ ನೆಲ್ಲಿಕಾಯಿ ಸಿದ್ಧಪ್ಪನಗುಡ್ಡದಕೋಟೆಯನ್ನು ಕಟ್ಟಿಸುವ ಸಂದರ್ಭದಲ್ಲಿ ಬೆಳಗ್ಗೆಯಿಂದ ಸಾಯಂಕಾಲದವರೆಗೆ ನಿರ್ಮಾಣಗೊಳ್ಳುತ್ತಿದ್ದ ಕೋಟೆ ಬಿದ್ದುಹೋಗುತ್ತಿತ್ತಂತೆ. ನಂತರ ಜ್ಯೋತಿಷಿಗಳನ್ನು ಕೇಳುವ ಹೊತ್ತಿಗೆ, ಯಳವರ್ತಿ ಹಳೇಪೈಕದ ಗಿರಿಜನೆಂಬ ದಂಡಿಗೆ ದಾಸನ ಮೈಮೇಲೆ ದೇವತೆ ಬಂದು 'ನಾನೇ ಕೋಟೆ ನಿಲ್ಲದಂತೆ ಮಾಡಿರುವವಳು. ನನ್ನ ಭೂಮಿಯಲ್ಲಿ ನನ್ನ ಅಪ್ಪಣೆಯಿಲ್ಲದೆ ನೀನು ಗ್ರಾಮವನ್ನು ಕಟ್ಟಕೂಡದು' ಎಂದು ಹೇಳಿದಳಂತೆ. ಆಗ ಅರಸ ನೀನು ಯಾರು ಎಂದು ಕೇಳಿದಾಗ, ನಾನು ಏಕನಾಥಿ ಎಂದು ಹೇಳುತ್ತಾ, ತಾನು ಒಡಮೂಡಿದ ಬಂಡೆಯನ್ನು ತೋರಿಸಿ ಮಾಯವಾದಳಂತೆ. ಆ ದೇವತೆಗೆ ಅರಸ ಹರಕೆ ಹೊತ್ತು ಕಟ್ಟಿದ್ದರಿಂದ ಕೋಟೆಯು ನಿಂತಿತಂತೆ.[೨೬೧]

ಮದಕರಿನಾಯಕನಿಗೆ ಮಡದಿ ಕನಕಗಿರಿ ರಂಗಪ್ಪನಾಯಕನ ಮಗಳನ್ನು ಮದುವೆ ಮಾಡಲಾಗಿತ್ತು. ಋತುಶಾಂತಿಯ ಸಂದರ್ಭದಲ್ಲಿ ಅಂತಃಪುರ ಪ್ರವೇಶ ಮಾಡಿದಾಗ ಆಕೆ ಸಿಟ್ಟಿಗೆದ್ದು ನಾನು ನಿನಗೆ ದಕ್ಕುವವಳಲ್ಲ. ನಾನು ದುರ್ಗಾದೇವಿ, ನನ್ನನ್ನು ಶಿಲಾ ಪ್ರತಿಮೆ ಮಾಡಿ, ವರ್ಷಕ್ಕೆ ೧೦೧ ಕುರಿ ಕೋಣ ಬಲಿ ನೀಡಿ ಪೂಜಿಸಬೇಕೆಂದು ಇಲ್ಲವಾದಲ್ಲಿ ರಾಜ್ಯ ಹಾಳಾಗುವುದೆಂದು ಹೇಳಿ ಮರಣ ಹೊಂದಿದಳಂತೆ. ನಂತರ ಆಕೆಯನ್ನು ದಹನ ಮಾಡಿ ಕಲ್ಲುಕಂಬದ ಮೇಲೆ ಪ್ರತಿಮೆ ಮಾಡಿಸಿ ಏಕನಾಥಮ್ಮನ ಗುಡಿ ಮುಂದೆ ಸ್ಥಾಪನೆ ಮಾಡಿ ಪ್ರತಿವರುಷ ಸೇವೆ ನಡೆಸುತ್ತಾ ಬಂದರು.[೨೬೨]

ಪ್ರತಿವರ್ಷ ವೈಶಾಖ ಮಾಸದಲ್ಲಿ ಚಳ್ಳಕೇರಮ್ಮನ ಉತ್ಸವವು ಜರುಗುತ್ತದೆ. ಈ ದೇವತೆ ಬ್ರಾಹ್ಮಣಳಾದ್ದರಿಂದ ಊರ ಬ್ರಾಹ್ಮಣರು ಜಾತ್ರೆಗೆ ಎರಡು ದಿನ ಮುಂಚೆ ದೇವಿಗೆ ಪೂಜೆ ಸಲ್ಲಿಸುವರು. ಕೀಳುಜಾತಿಯವನು ದೇವರನ್ನು ಮದುವೆಯಾದ್ದರಿಂದ ಊರಿನ ಬ್ರಾಹ್ಮಣೇತರರು ಜಾತ್ರೆಯ ದಿನ ದೇವಿಗೆ ಕೋಣದ ಬಲಿ ಅರ್ಪಿಸಿ ಕಡಿದ ಕೋಣನ ಕೊಬ್ಬಿನಿಂದ ಜ್ಯೋತಿರ್ಗಂಬದ ಮೇಲೆ ಜ್ಯೋತಿಯನ್ನು ಬೆಳಗಿಸುವರು. ಇದರಿಂದ ಮೋಸ ಮಾಡಿ ವಿವಾಹವಾದ ಗಂಡನಿಗೆ ತಕ್ಕ ಶಿಕ್ಷೆಯಾಯಿತೆಂದು ದೇವಿಗೆ ತೃಪ್ತಿಯಾಗುವುದಂತೆ. ಹೀಗಾಗಿ ಅಂದು ಜಾತ್ರೆಯ ದಿನ ದೇವಿಯ ಮಾಂಗಲ್ಯವನ್ನು ತೆಗೆಯುತ್ತಾರೆ. ಆಗ ಚಿತ್ರದುರ್ಗದ ಅರಸರ ವಂಶಸ್ಥರು ಚಳ್ಳಕೆರೆಯಲ್ಲಿ ವಾಸವಾಗಿದ್ದರೆ, ಅವರು ಚಳಕೇರಮ್ಮನನ್ನು ಮನೆಯ ಮಗಳೆಂದು ಭಾವಿಸಿ ತಾಳಿ ಕಳಿಸಿ, ಕಟ್ಟಿಸುವ ತಾಳಿಭಾಗ್ಯ[೨೬೩] ಸಂಪ್ರದಾಯವನ್ನು ಇಂದಿಗೂ ನಡೆಸಿಕೊಂಡು ಬರುತ್ತಿದ್ದಾರೆ.

ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೭೭೩-೧೮೦೨) ಹಾಗೂ ಆತನ ಪತ್ನಿ ರಾಣಿರಂಗಮ್ಮ ದಂಪತಿಗಳು ಭಕ್ತಿಯಿಂದ ಪೂಜೆ ಮಾಡಿ ಶ್ರೀವೇಣುಗೋಪಾಲಸ್ವಾಮಿಯನ್ನು ಒಲಿಸಿಕೊಂಡಿದ್ದರಿಂದ, ಅವರಿರುವ ಸ್ಥಳದಲ್ಲಿಯೇ ದರ್ಶನವನ್ನೀಯುವ ವಚನವನ್ನಿತ್ತಿರುವುದರಿಂದ ಇಂದಿಗೂ ಅವರಾರೂ ತಮ್ಮ ಮನೆದೇವರಾದ ತಿರುಪತಿ ವೆಂಕಟರಮಣನಿಗೆ ಹೋಗುವುದಿಲ್ಲ. ಬದಲಾಗಿ ತಮ್ಮ ಭಕ್ತಿ ಕಾಣಿಕೆಯನ್ನು ಪ್ರತಿನಿಧಿಗಳ ಮೂಲಕ ಪ್ರತಿವರ್ಷ ತಿರುಪತಿಗೆ ಕಳುಹಿಸುವ ಸಂಪ್ರದಾಯ ಇಂದಿಗೂ ಇದೆ. ತಿರುಪತಿಯ ವೆಂಕಟರಮಣನ ಉತ್ಸವಕಾಲದಲ್ಲಿ ಸುರಪುರದ ಅರಸರ ಹೆಸರಿನಿಂದಲೇ ಪ್ರಥಮ ಪೂಜೆಯಾಗುವ ಸಂಪ್ರದಾಯ ಇಂದಿಗೂ ಇದೆ. ಈ ಮನೆತನದ ಅರಸ ಮುಮ್ಮಡಿ ಪಿಡ್ಡನಾಯಕರ ಕಾಲದಲ್ಲಿ ತಿಂಥಣಿ ಮೌನೇಶ್ವರನಿಗೆ ತಮ್ಮ ಪಟ್ಟದ ಪಲ್ಲಕ್ಕಿಯನ್ನು ನೀಡಿದ್ದಾರೆ. ಈ ಪಲ್ಲಕ್ಕಿಯು ಪ್ರತಿವರ್ಷ ಮಾಘಶುದ್ಧ ದಶಮಿಯಿಂದು ಪೌರ್ಣಿಮೆಯವರೆಗೂ ಜರುಗುವ ಮೌನೇಶ್ವರನ ಜಾತ್ರೆಯಲ್ಲಿ ಸುರಪುರದ ಅರಮನೆಗೆ ಬರುತ್ತದೆ. ಆಗ ಅರಸು ಮನೆತನದವರು ಮುಮ್ಮಡಿ ಪಿಡ್ಡನಾಯಕರ ಕಾಲದಿಂದ ಇಂದಿನವರೆಗೂ ಆ ಸಂಪ್ರದಾಯವನ್ನು ಮುನ್ನಡೆಸಿಕೊಂಡು ಬಂದಿದ್ದಾರೆ.

ಶಾಪದ ಕುರಿತಾಗಿಯೂ ನಾಯಕ ಅರಸುಮನೆತನದವರು ನಂಬಿಕೆಯನ್ನು ಹೊಂದಿದ್ದಾರೆ. ದೇವರ, ಇಲ್ಲವೇ ಗುರುಗಳ ಶಾಪದಿಂದ ನಮಗೆ ಹೀಗಾಗಿದೆ ಎಂಬ ಭಾವನೆ ಇವರಲ್ಲಿದೆ. ಒಮ್ಮೆ ಚಿತ್ರದುರ್ಗದ ಅರಸ ಚಿಕ್ಕಣ್ಣನಾಯಕ ಉಚ್ಚಂಗಿದುರ್ಗದ ಮೇಲೆ ದಂಡೆತ್ತಿ ಹೋಗಿ, ಹರಪನಹಳ್ಳಿಯ ಪಾಳೆಯಗಾರನಾದ ದಾದಯ್ಯನಾಯಕನನ್ನು ಹಿಮ್ಮೆಟ್ಟಿಸುತ್ತಾನೆ. ಚಿಕ್ಕಣ್ಣನಾಯಕ ದಂಡೆತ್ತಿ ಬರಲು ತನ್ನ ಹೆಂಡತಿ ಹೊನ್ನನಾಗತಿಯೇ ಕಾರಣವೆಂದು ತಿಳಿದು ಹೊನ್ನನಾಗತಿಯನ್ನು ಉಚ್ಚಂಗಿದುರ್ಗದ ದೇವಿಬೆಟ್ಟದಿಂದ ಕೆಳಕ್ಕೆ ನೂಕಿದನಂತೆ ಹೊನ್ನನಾಗತಿ ಕೆಳಕ್ಕೆ ಬೀಳುವಾಗ ಉಚ್ಚಂಗಿದುರ್ಗಕ್ಕೆ ಗಂಡು ಹೆಚ್ಚಬೇಡ, ಚಿತ್ರದುರ್ಗದವರಿಗೆ ಹೆಣ್ಣು ಹೆಚ್ಚಬೇಡ ಎಂದು ಶಾಪ ಕೊಟ್ಟಳಂತೆ.[೨೬೪] ಹೀಗಾಗಿ ಚಿತ್ರದುರ್ಗದವರು ಇದನ್ನು ಈಗಲೂ ನಂಬಿದ್ದಾರೆ. ನಮ್ಮ ಮನೆಯಲ್ಲಿ ಹೆಣ್ಣು ಜನಿಸುವುದು ಅಪರೂಪವೆಂದೇ ಹೇಳುತ್ತಾರೆ.

ಜರಿಮಲೆ ಅರಸರಾದ ಸಿದ್ದಪ್ಪನಾಯಕ, ಲಿಂಗಳನಾಯಕ, ಓಬಳನಾಯಕ, ಮಲ್ಲಿಕಾರ್ಜುನನಾಯಕರು, ಭೂಮರಾಜು ನಾಯಕರು, ಭೂಪಸಮುದ್ರದಲ್ಲಿ ಬಿಳಿಹಂದಿ ಜನರಿಗೆ ಉಪದ್ರವ ಕೊಡುತ್ತಿದ್ದುದರಿಂದ ಮರುಳಸಿದ್ಧಾರ್ಯರ ಆಶೀರ್ವಾದ ಪಡೆದು ಬೇಟೆಗೆ ಹೊರಟು ಬಿಳಿಹಂದಿಯನ್ನು ಬೆನ್ನಟ್ಟಿದರು. ಹಂದಿ ಬಹುದೂರ ಓಡಿತು. ಇದರಿಂದ ತಪ್ಪಿಸಿಕೊಂಡು ಒಂದು ಹಳ್ಳದಲ್ಲಿ ಸ್ನಾನಮಾಡಿ ಗುಂಡಿನ ಪಕ್ಕ ಮಲಗಿತ್ತು. ಈ ಅರಸರು ಹಾಗೆ ತಿರುಗುತ್ತಾ ಹೋದಾಗ ಹಂದಿ ಕಂಡಿತು. ಭೂಮರಾಜು ಭರ್ಚಿ ಹಾಕಿದ. ಹಂದಿ ಸಿಂಹಗರ್ಜನೆ ಮಾಡುತ್ತಾ ಉಜ್ಜಿಯಿನಿ ಕಡೆಗೆ ಓಡಿತು. ಈ ನಾಯಕರು ಹಿಂಬಾಲಿಸಿದರೂ ಅದು ಪೊದೆಯಲ್ಲಿ ಹೊಕ್ಕು ಮಾಯವಾಯಿತು. ಈ ನಾಯಕರಿಗೆ ನೀರಡಿಕೆಯಾಗಿತ್ತು. ಅಲ್ಲಿಯೇ ಗಿಡದ ನೆರಳಿನಲ್ಲಿ ತಂಗಿದರು. ಇದ್ದಕ್ಕಿದ್ದಂತೆಯೆ ಪೊದೆಯಿಂದ ನಾಯಿಯೊಂದು ಮೈತುಂಬ ಕೆಸರು ಮಾಡಿಕೊಂಡು ಬಂದುದ್ದನ್ನು ಭೂಮರಾಜ ನೋಡಿದ. ಆ ಪೊದೆಯಲ್ಲಿ ನೀರಿರಬಹುದೆಂದು ಒಳಹೊಕ್ಕಾಗ ಅಲ್ಲಿ ನೀರು ಕಂಡಿತು. ನೀರನ್ನು ಕುಡಿದು ತಲೆಯೆತ್ತಿ ಮೇಲಕ್ಕೆ ನೋಡಿದಾಗ ವೃಕ್ಷದ ಟೊಂಗೆಗೆ ತೊಟ್ಟಿಲೊಂದು ನೇತಾಡುತ್ತಿತ್ತು. ಆ ತೊಟ್ಟಿಲಲ್ಲಿ ಸ್ವಾಮಿಗಳೊಬ್ಬರು ಮಾವಿನಹಣ್ಣನ್ನು ತಿಂದು ಗೊಟ್ಟ ಮಾತ್ರ ಉಳಿಸಿದ್ದರು. ಭೂಮಿರಾಜ ಆ ಸ್ವಾಮಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿದ. ಆಗ ಸ್ವಾಮಿಗಳು ತಮ್ಮ ಕೈಯಲ್ಲಿದ್ದ ಗೊಟ್ಟವನ್ನು ನೀಡಿ 'ನೀನು ರಾಜನಾಗು' ಎಂದು ಆಶೀರ್ವಾದ ಮಾಡಿದರು. ಅಂದು ಸ್ವಾಮಿಗಳು ನೀಡಿದ ಮಾವಿನಗೊಟ್ಟವನ್ನು ಜರಿಮಲೆ ಪಾಳೆಯಗಾರರು ತಮ್ಮ ಮನೆಯಲ್ಲಿಟ್ಟು ಪೂಜೆ ಮಾಡುವ ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ.[೨೬೫]

ಚಿತ್ರದುರ್ಗದ ಅರಸರನ್ನು ಸೋಲಿಸಲು ದಿವಾನ್ ಪೂರ್ಣಯ್ಯನವರ ಸಲಹೆಯಂತೆ ಹೈದರಾಲಿ ಮತ್ತು ಟಿಪ್ಪುಸುಲ್ತಾನ ಜರಿಮಲೆ ಪಾಳೆಯಗಾರರನ್ನು ಸಂಧಿಸಿ ಸಲಹೆ ಕೇಳುತ್ತಾನೆ. ಅವರ ಸಹಾಯವನ್ನು ಪಡೆಯುತ್ತಾನೆ. ಯುದ್ಧದಲ್ಲಿ ಹೈದರಾಲಿ ಗೆಲ್ಲುತ್ತಾನೆ. ತನಗೆ ಸಹಾಯ ಮಾಡಿದ ಜರಿಮಲೆ

ಪಾಳೆಯಗಾರರು ಮುಂದೆ ಒಂದುದಿನ ತನಗೆ ವಿರುದ್ಧವಾಗಬಹುದೆಂದು ತಿಳಿದು ಅವರನ್ನು ಬೆಳೆಯಗೊಡಬಾರದೆಂದು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಡುತ್ತಾನೆ. ಸೆರೆಮನೆಯ ಕಾವಲುಗಾರ ನಿದ್ರೆಯಲ್ಲಿದ್ದಾಗ ಜರಿಮಲೆಯ ಅರಸ ಭೂಮರಾಜ ತಪ್ಪಿಸಿಕೊಂಡು ಹೈದರಾಲಿಯ ಸಂಬಂಧಿ ಸುಂದರ ಸ್ತ್ರೀಯೋರ್ವಳನ್ನು ಅಪಹರಿಸಿಕೊಂಡು ಬರುತ್ತಾನೆ. ಅವಳನ್ನು ಉಜ್ಜಿಯಿನಿಯ ಶ್ರೀಮಠದ ಒಳಕೋಣೆಯಲ್ಲಿಟ್ಟಿರುತ್ತಾನೆ. ಈ ವಿಷಯ ಶ್ರೀಮಠದ ಶ್ರೀಗಳಿಗೆ ಗೊತ್ತಾಗುತ್ತದೆ. ಅವರು ಶಾಪ ನೀಡುತ್ತಾರೆ. ಜರಿಮಲೆಯ ಅರಸ ಭೂಮರಾಜ ಕುರುಡನಾಗುತ್ತಾನೆ. ಹೆಂಡತಿಗೆ ನಡೆದ ವಿಷಯ ತಿಳಿಸುತ್ತಾನೆ. ಈ ವಿಷಯವನ್ನು ಪೀಠದ ಶ್ರೀಗಳಲ್ಲಿ ಅರುಹಿದಾಗ ಅವರು ಶಾಪಪರಿಹಾರಕ್ಕಾಗಿ ಪ್ರತಿವರ್ಷ ಒಂದು ಕುಂಭ ಎಣ್ಣೆ ಹಾಗೂ ೧೨ ಟಂಕ ಹಣವನ್ನು ಮಠಕ್ಕೆ ನೀಡಲು ತಿಳಿಸಿದರು. ಇದರಿಂದ ನಿರುತ್ಸಾಹಗೊಂಡ ಭೂಮರಾಜ ನಾನು ಉಜ್ಜಯಿನಿಯಲ್ಲಿ ಇರುವುದು ಬೇಡ, ಅದನ್ನು ದಾಟುವುದು ಬೇಡ. ನಮ್ಮ ಉಡದಾರ ನಾವು ಕಟ್ಟುವುದು ಬೇಡ ಎಂದು ಜರಿಮಲೆಗೆ ಬರುತ್ತಾನೆ. ತಮ್ಮ ಮನೆಯಲ್ಲಿಯೇ ಶ್ರೀಮರುಳಸಿದ್ದೇಶ್ವರಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿಕೊಂಡು, ಅದಕ್ಕೆ ಮಾವಿನ ಗೊಟ್ಟ ಬಂಗಾರದ ಕವಚ ತೊಡಿಸಿ ಅದನ್ನು ಸ್ವಾಮಿಯ ಕೊರಳಲ್ಲಿಟ್ಟು ಆರಾಧಿಸತೊಡಗಿದರು. ಗುರುಗಳು ತಿಳಿಸಿದಂತೆ ಮಠದಲ್ಲಿ ಪ್ರತಿವರ್ಷ. ವೈಶಾಖ ಶುದ್ಧ ೫ ರಂದು ಜಾತ್ರೆಯು ನಡೆಯುತ್ತದೆ. ಈ ರಥೋತ್ಸವದ ಮಾರನೆಯ ದಿನ ಶುದ್ಧ ಷಷ್ಟಿಯ ದಿನದಂದು ಶ್ರೀ ಮರುಳಸಿದ್ಧೇಶ್ವರನ ಶಿಖರಕ್ಕೆ ಒಂದು ಕೊಡ ಎಣ್ಣೆಯನ್ನು ಹಾಗೂ ಕಾಣಿಕೆಯನ್ನು ಮಡಿಹುಡಿಯಿಂದ ಇಂದಿಗೂ ಕಳುಹಿಸಿಕೊಡುವ ಸಂಪ್ರದಾಯ ಜರಿಮಲೆ ಅರಸುಮನೆತನದಲ್ಲಿದೆ.[೨೬೬] ಇವರು ಶ್ರೀಗಳ ಶಾಪದಂತೆ ಇಂದಿಗೂ ಉಡದಾರವನ್ನು ಧರಿಸುವುದಿಲ್ಲ ಹಾಗೂ ಉಜ್ಜಿಯಿನಿಗೂ ಹೋಗುವುದಿಲ್ಲ.

ಗುಂತಗೋಳ ಸಂಸ್ಥಾನದ ಮನೆದೇವರು ಶ್ರೀ ಅಮರೇಶ್ವರ. ಈ ಜಾತ್ರೆಯ ಉಸ್ತುವಾರಿಯನ್ನು ಗುಂತಗೋಳದ ರಾಜಾರಾಯಪ್ಪನಾಯಕರು ತಮ್ಮ ಬಂಧುಗಳಾದ ಗುಡಗುಂಟಿಯವರಿಗೆ ವಹಿಸಿದ್ದರು. ಆಗ ಗುಂತಗೋಳ ಅರಸರ ಬದಲಾಗಿ ಶ್ರೀ ಅಮರೇಶ್ವರನ ತೇರಿಗೆ ಗುಡಗುಂಟಿಯವರು ಹೋಗಿದ್ದರು. ಗುಂತಗೋಳದ ಅರಸರು ಬರದಿದ್ದಕ್ಕಾಗಿ ತೇರು ಮುಂದಕ್ಕೆ ಸಾಗಲಿಲ್ಲವಂತೆ. ಈ ಸೂಚನೆ ಗುಂತಗೋಳದ ಅರಸ ರಾಜಾರಾಯಪ್ಪನಾಯಕರಿಗೆ ತಿಳಿದು ಅರಮನೆಯ ಮೇಲೆ ನಿಂತು ಅಮರೇಶ್ವರನ ಕಡೆ ಮುಖ ಮಾಡಿ ಧ್ಯಾನಿಸುತ್ತಾ 'ನಿನ್ನ ಜಾತ್ರೆಯ ದಿನ ಬೆಳಗ್ಗೆ ಕಳಸದ ಪೂಜೆಯನ್ನು ನಮ್ಮ ಅರಮನೆಯಲ್ಲಿಯೇ ನೆರವೇರಿಸುವೆ' ಎಂದು ಬೇಡಿಕೊಂಡರಂತೆ.[೨೬೭] ಅಂದಿನಿಂದ ಶ್ರೀ ಅಮರೇಶ್ವರ ಜಾತ್ರೆಯ ದಿನದಂದು ಬೆಳಿಗ್ಗೆ ಶ್ರೀ ಅಮರೇಶ್ವರನ ಕಳಸಕ್ಕೆ ಗುಂತಗೋಳದ ಅರಮನೆಯಲ್ಲಿಯೇ ಪೂಜೆಯಾಗುವ ಸಂಪ್ರದಾಯ ಇಂದಿಗೂ ನಡೆದುಕೊಂಡು ಬಂದಿದೆ.

ಜರಿಮಲೆ ಅರಸರು ಯುದ್ಧಕ್ಕೆ ಹೋಗಲು ಸಿದ್ಧರಾದಾಗ ರಾತ್ರಿ ಅರಸನ ಕನಸಿನಲ್ಲಿ ದುರಗಮ್ಮ ಕಾಣಿಸಿಕೊಂಡಳಂತೆ. ನೀವು ಯುದ್ಧಕ್ಕೆ ಹೊರಡುವಾಗ ನನ್ನನ್ನು ಹಿಂದೆಯೇ ಕರೆದುಕೊಂಡು ಹೋಗಿರಿ

ನಿಮಗೆ ಜಯವಾಗುವುದು ಖಂಡಿತ ಎಂದಳಂತೆ. ಆಗ ಮರುದಿನ ದುರುಗಮ್ಮನ ಶಿರಚ್ಛೇದನ ಮಾಡಿ ಶಿರವನ್ನು ಕಂಬಳಿಯಲ್ಲಿಟ್ಟುಕೊಂಡು ಹೋಗಿ ಯುದ್ಧ ಮಾಡಿ ಜಯಶೀಲರಾದರಂತೆ. ಪುನಃ ಜರಿಮಲೆಯಲ್ಲಿ ದುರಗಮ್ಮನ ಶಿರವನ್ನು ಪ್ರತಿಷ್ಠಾಪಿಸಿದರು.[೧೬೮] ಯುದ್ಧದಲ್ಲಿ ಕಾಪಾಡಿದ ದೇವತೆಯ ಜಾತ್ರೆಯನ್ನು ಪ್ರತಿವರ್ಷ ಆಚರಿಸಲು ಪ್ರಾರಂಭಿಸಿದರು. ಆ ಜಾತ್ರೆಯ ಮೊದಲ ಕಾರ್ಯವನ್ನು ಜರಿಮಲೆ ಪಾಳೆಯಗಾರರೇ ಮಾಡುವ ಸಂಪ್ರದಾಯ ಇಂದಿಗೂ ಇದೆ.

ಈ ನಾಯಕ ಮನೆತನಗಳಲ್ಲಿ ಷೋಡಶ ಸಂಸ್ಕಾರಗಳನ್ನು ಆಚರಿಸುವ ಸಂಪ್ರದಾಯವಿದೆ. ಇವುಗಳನ್ನು ಬ್ರಾಹ್ಮಣರನ್ನು ಹೊರತುಪಡಿಸಿ, ಅರಸು ಮನೆತನದವರು (ಕ್ಷತ್ರಿಯರು) ಆಚರಿಸಬೇಕೆಂಬ ಸಂಪ್ರದಾಯವಿದೆ. ಈ ಷೋಡಶ ಸಂಸ್ಕಾರಗಳಲ್ಲಿ ಗರ್ಭದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಪ್ರಾಜಾಪತ್ಯ, ಆಗ್ನೇಯ ವ್ರತ, ವೈಶ್ವದೇವವ್ರತ, ಸೌಮ್ಯವ್ರತ, ವಿವಾಹ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ (ಅತಿಥಿಯಜ್ಞ) ಬ್ರಹ್ಮಯಜ್ಞ ಎಂಬ ಕ್ರಮವಾದ ಪಂಚ ಮಹಾಯಜ್ಞಗಳು ಇದ್ದವು.[೧೬೯] ಇವುಗಳಲ್ಲಿ ಈ ಕೆಳಗಿನವುಗಳನ್ನು ಮಾತ್ರ ಆಚರಿಸುತ್ತಿದ್ದರು. ಇವುಗಳು ಇವರ ಕೌಟುಂಬಿಕ ಆಚರಣೆಗಳಾಗಿದ್ದವು.

### ೩.೬.೧ ಗರ್ಭಾದಾನ

ಹೊಸದಾಗಿ ವಿವಾಹವಾದ ವಧು-ವರರಿಗೆ ವಿವಾಹದ ನಂತರ ನಿಷೇಕ-ಪ್ರಸ್ತಕ್ಕೆ ಬಿಡುವ ಮುನ್ನ, ಶುಭ ನಕ್ಷತ್ರ, ಶುಭಮುಹೂರ್ತದಲ್ಲಿ ವಧು-ವರರ ಕೈಯಿಂದ ಅರಮನೆಯ ೫ ಜನ ಮುತ್ತೈದೆಯರಿಗೆ ಅರಿಶಿಣ, ಕುಂಕುಮ, ಫಲ, ತಾಂಬೂಲಗಳನ್ನು ಕೊಡಿಸಿ ಸತ್‌ಸಂತಾನವಾಗಲೆಂದು ಅವರಿಂದ ಆಶೀರ್ವಾದ ಮಾಡಿಸುವ ಕಾರ್ಯ ಇದಾಗಿತ್ತು.

### ೩.೬.೨ ಪುಂಸವನ

ಗರ್ಭಧಾರಣೆಯಾಗಿ ಎಂಟು ಅಥವಾ ಒಂಭತ್ತನೇ ತಿಂಗಳಿನಲ್ಲಿ ಮುತ್ತೈದೆಯರಿಗೆ, ಹಿರಿಯರು, ಪುತ್ರವತಿಯಾಗೆಂದು ಆಶೀರ್ವದಿಸುತ್ತಿದ್ದರು. ಹೂ ಮುಡಿಸುವ ಕಾರ್ಯವೂ ಜರುಗುತ್ತಿತ್ತು. ಆಗ ಐದು ಜನ ಮುತ್ತೈದೆಯರಿಗೆ ಕಣ, ಅರಿಶಿಣ, ಕುಂಕುಮ, ಫಲತಾಂಬೂಲಗಳನ್ನು ಕೊಡಿಸುತ್ತಿದ್ದರು. ಇದನ್ನು ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗದ ಅರಸರು ಹೂಮುಡಿಸುವ, ಇಲ್ಲವೇ ಕುಬಸ ಮಾಡುವ ಕಾರ್ಯಕ್ರಮವೆಂದು ಕರೆಯುತ್ತಿದ್ದರು.[೧೭೦] ತವರು ಮನೆಯವರು ಗಂಡನ ಮನೆಗೆ ಹೋಗಿ ಈ ಕಾರ್ಯಕ್ರಮವನ್ನು ಮಾಡುವ ಸಂಪ್ರದಾಯವಿದೆ.

### ೩.೬.೩ ಸೀಮಂತೋನ್ನಯನ

ತಲೆಯ ಮೇಲಿರುವ ಪಂಚಸಂಧಿಗೆ ಸೀಮಂತ ಎಂದು ಕರೆಯುವರು. ಚಿತ್ರದುರ್ಗ, ಆನೆಗೊಂದಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ನಾಯಕ ಅರಸುಮನೆತನದವರು ಇದನ್ನು ಸೀಮಂತಕಾರಣ

ಎಂದು ಕರೆಯುತ್ತಾರೆ. ಇದನ್ನು ಪುಂಸವನದ ಜೊತೆಗೆ ಇಲ್ಲವೇ ಪ್ರತ್ಯೇಕವಾಗಿಯಾದರೂ ಮಾಡಬಹುದು. ಈ ಮನೆತನಗಳಲ್ಲಿ ಇದನ್ನು ಪುಂಸವನದೊಂದಿಗೆ ಸಮ್ಮಿಳನಗೊಳಿಸುವರು. ಈ ಸಂಸ್ಕಾರದ ಪ್ರಮುಖ ಉದ್ದೇಶ ಗರ್ಭವತಿಯ ರಕ್ಷಣೆ. ಗರ್ಭವತಿಗೆ ಮಾನಸಿಕ ಶಕ್ತಿಯನ್ನು ತುಂಬಲು, ಮನೆತನದ ಪುರೋಹಿತರು ಶಾರೀರಿಕ, ಮಾನಸಿಕ ಸ್ಥಿತಿಯ ಕುರಿತಾದ ಕೆಲವು ಸಲಹೆಗಳನ್ನು ನೀಡುವುದಾಗಿತ್ತು. ಗರ್ಭಿಣಿ ರಾಣಿಯ ಜೊತೆಗೆ ಅರಸನನ್ನು ಕೂಡಿಸುತ್ತಿದ್ದರು.

ಸುರಪುರ, ದೇವದುರ್ಗ, ಕನಕಗಿರಿಯ ಮನೆತನದಲ್ಲಿ ಗರ್ಭವತಿಯಾದ ರಾಣಿ ಕಸಕಡ್ಡಿಗಳ ಮೇಲೆ ಕುಳಿತುಕೊಳ್ಳಬಾರದು. ಒನಕೆ, ಒರಳುಗಳ ಮೇಲೂ ಕುಳಿತುಕೊಳ್ಳಬಾರದು. ನಿರ್ಜನವಾದ ಕೋಣೆಯಲ್ಲಾಗಲಿ, ಒಬ್ಬಂಟಿಯಾಗಲಿ ಇರುವುದನ್ನು ನಿಷೇಧಿಸುತ್ತಿದ್ದರು. ಯಾವಾಗಲೂ ಮಲಗಿಕೊಂಡಿರಬಾರದು, ಮನಸ್ಸಿನಲ್ಲಿ ಕಳವಳಪಡಬಾರದು. ಯಾರೊಂದಿಗೂ ಜಗಳವಾಡಬಾರದು ಯಾವಾಗಲೂ ಮುಖದಲ್ಲಿ ಪ್ರಸನ್ನಳಾಗಿರಬೇಕು ಎಂಬ ಸಲಹೆಗಳನ್ನು ನೀಡುತ್ತಿದ್ದರು.[೨೭೧] ಅರಸನಿಗೆ ತನ್ನ ಮಡದಿಯ ಹಾರೈಕೆಯನ್ನು ಕುರಿತು ಕಾಳಜಿ ವಹಿಸಲು ಹೇಳುತ್ತಿದ್ದರು.

### ೩.೬.೪ ಜಾತಕರ್ಮ

ಸುರಪುರದ ಮತ್ತು ಆನೆಗೊಂದಿಯ ಅರಸುಮನೆತನದಲ್ಲಿ ಮಗು ಹುಟ್ಟಿದ ಒಡನೆಯೇ ಹೊಕ್ಕಳ ಬಳ್ಳಿಯನ್ನು ಕತ್ತರಿಸುವ ಮೊದಲು ಮಗುವಿಗೆ ಜೇನುತುಪ್ಪವನ್ನು ಕುಡಿಸುತ್ತಾರೆ ಹಾಗೂ ಕಿವಿಯನ್ನು ಊದುತ್ತಾರೆ. ಇದನ್ನೇ ಅವರು ಜಾತಕರ್ಮ ಎಂದು ಕರೆಯುತ್ತಾರೆ.[೨೭೨] ಗರ್ಭಾಶಯದಲ್ಲಿರುವಾಗ ಉಂಟಾಗಬಹುದಾದ ಮಾಲಿನ್ಯವನ್ನು ದೂರಮಾಡಿ ಮಗುವಿಗೆ ಶಾರೀರಿಕ ಹಾಗೂ ಮಾನಸಿಕ ಆರೋಗ್ಯವುಂಟಾಗುವಂತೆ ಮಾಡುವುದೇ ಈ ಸಂಸ್ಕಾರದ ಉದ್ದೇಶವಾಗಿದೆ.

### ೩.೬.೫ ನಾಮಕರಣ

ಮಗು ಜನಿಸಿದ ಮೊದಲ ಅಥವಾ ಮೂರನೆಯ ತಿಂಗಳಿನಲ್ಲಿ ಮಗುವಿಗೆ ಹೆಸರಿಡುವ ಕಾರ್ಯ ಇದಾಗಿತ್ತು. ಚಿತ್ರದುರ್ಗದ ಅರಸರ ವಂಶಸ್ಥರಲ್ಲಿ ಮಗು ಜನಿಸಿದ ಮೂರುತಿಂಗಳಿನಲ್ಲಿ ಈ ಕಾರ್ಯಕ್ರಮ ಜರುಗಿಸುತ್ತಾರೆ. ಸುರಪುರ, ದೇವದುರ್ಗ, ಕನಕಗಿರಿಯವರೂ ಈ ನಿಯಮವನ್ನೇ ಪಾಲಿಸುತ್ತಾರೆ. ಆದರೆ ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ ಅರಸುಮನೆತನದವರು ಒಂದು ತಿಂಗಳಿನಲ್ಲಿ ನಾಮಕರಣ ಕಾರ್ಯವನ್ನು ಮಾಡುತ್ತಾರೆ.

ಈ ಕಾರ್ಯದ ಸಂದರ್ಭದಲ್ಲಿ ತಮ್ಮ ಮನೆತನದ ಕುಲದೇವರು, ಗ್ರಾಮದೇವರುಗಳನ್ನು ಪೂಜಿಸುತ್ತಿದ್ದರು. ಸುರಪುರದ ಅರಸು ಮುಮ್ಮಡಿ ಪಾಮನಾಯಕ ತನ್ನ ಮಗ ಇಮ್ಮಡಿ ವೆಂಕಟಪ್ಪನಾಯಕನ ನಾಮಕರಣದ ನೆನಪಿಗಾಗಿ ಶ್ರೀವೇಣುಗೋಪಾಲಸ್ವಾಮಿಗೆ ಬೆಳ್ಳಿಯ ಕವಚಗಳನ್ನು ಮಾಡಿಸಿದನು.[೨೭೩]

ದೇವದುರ್ಗದ ಅರಸ ಸಣ್ಣರಂಗಪ್ಪನಾಯಕನ ಮಗ ಕೃಷ್ಣಪ್ಪನಾಯಕನ ನಾಮಕರಣದ ನೆನಪಿಗಾಗಿ ಮನೆದೇವರಾದ ಮಾನಸಗಲ್ ರಂಗನಾಥನ ಉತ್ಸವಮೂರ್ತಿ ಮಾಡಿಸಿಕೊಟ್ಟಿದ್ದಾನೆ.[೨೬೪] ನಾಮಕರಣದ ಸಂದರ್ಭದಲ್ಲಿ ಶ್ರೀವೈಷ್ಣವ ಮತವನ್ನು ಸ್ವೀಕರಿಸಿದ ಅರಸರು ಬ್ರಾಹ್ಮಣರಿಂದ ಹಾಗೂ ಶೈವಮತವನ್ನು ಸ್ವೀಕರಿಸಿದ ಅರಸರು ಶೈವ ಪುರೋಹಿತರಿಂದ ನಾಮಕರಣ ಮಾಡಿಸುತ್ತಿದ್ದರು. ಇತ್ತೀಚಿಗೆ ಈ ಮನೆತನಗಳಲ್ಲಿ ಅವರ ಸಮ್ಮುಖದಲ್ಲಿ ಮಗುವಿನ ಸೋದರ ಮಾವಂದಿರು ನಾಮಕರಣ ಮಾಡುತ್ತಾರೆ. ಇದನ್ನು 'ಸೋದರಕಿ' ಪದ್ಧತಿ ಎಂದು ಕರೆಯುತ್ತಾರೆ. ಸುರಪುರ ಮನೆತನದಲ್ಲಿ ಮಗುವಿನ ಚಿಕ್ಕಪ್ಪನವರೂ ಹೆಸರಿಡಬಹುದಾಗಿತ್ತು. ಗುಡಗುಂಟಿಯ ಅರಸರ ಮನೆತನದಲ್ಲಿ ಮಗುವಿನ ನಾಮಕರಣ ಮಾಡುವಾಗ ತೊಟ್ಟಿಲಿನ ಎರಡೂ ತುದಿಗಳಲ್ಲಿ ನಿಂತಿರುವ ಮುತ್ತೈದೆಯರು ಮಗುವನ್ನು ತೊಟ್ಟಿಲ ಕೆಳಗಿನಿಂದ ನೀಡುತ್ತಾರೆ. ಒಂದು ಕಡೆಯಿಂದ ಮಗುವನ್ನು ಪಡೆದವರು ಮೇಲಿನಿಂದ ಮಗುವನ್ನು ಕೊಡುತ್ತಾರೆ. ಹೀಗೆ ಐದು ಸಲ ಮಗುವನ್ನು ಕೊಡುವಾಗ ಕಕ್ಕೇರಿಯ ಸೋಮನಾಥನನ್ನು ಹಾಗೂ ಆರಾಧ್ಯದೈವ ಅಮರೇಶ್ವರನನ್ನು ಸ್ಮರಿಸುತ್ತಾರೆ.[೨೬೫] ಮೊದಲು ಜನ್ಮನಾಮದ ಅನ್ವಯ ಹೆಸರಿಟ್ಟು, ನಂತರ ತಮ್ಮ ವಂಶಜರಲ್ಲಿಯ ಹಿರಿಯರೊಬ್ಬರ ಹೆಸರನ್ನು ಇಡುವ ಸಂಪ್ರದಾಯ ಈ ಮನೆತನಗಳಲ್ಲಿ ಮುಂದುವರೆದಿದೆ. ತಮ್ಮ ಮನೆದೇವರ ಹೆಸರನ್ನೂ ಮುಂದುವರೆಸಿಕೊಂಡು ಬಂದವರಾಗಿದ್ದಾರೆ.

ಸುರಪುರದ ಅರಸರು ತಿರುಪತಿ ವೆಂಕಟರಮಣನ ಭಕ್ತರಾಗಿ ವೆಂಕಟಪ್ಪನಾಯಕನೆಂದು ಹೆಸರಿಸಿಕೊಳ್ಳ ತೊಡಗಿದರು. ಇಲ್ಲಿಂದ ಆರಂಭವಾದ ಈ ಹೆಸರು ಮುಂದೆ ಬಹುಪ್ರಸಿದ್ಧಿಗೆ ಬಂದಿತು. ಹಾಗೆಯೇ ಸುರಪುರದ ವೇಣುಗೋಪಾಲಸ್ವಾಮಿಯ ಇನ್ನೊಂದು ಹೆಸರು ಶ್ರೀಕೃಷ್ಣ. ಹೀಗಾಗಿ ಮುಮ್ಮಡಿ ವೆಂಕಟಪ್ಪನಾಯಕನ ಮಗನಿಗೆ 'ಕೃಷ್ಣಪ್ಪನಾಯಕ'ನೆಂದು ಹೆಸರಿಟ್ಟರು. ಹೀಗೆ ಸುರಪುರದ ಆರಾಧ್ಯದೈವದ ನಾಮಗಳನ್ನು ಇಟ್ಟಿರುವುದನ್ನು ನೋಡಬಹುದಾಗಿದೆ. ಹಾಗೆಯೇ ಗುಡಗುಂಟಿ ಅರಸರ ಮನೆದೇವರು ಕಕ್ಕೇರಿಯ ಸೋಮನಾಥನಾಗಿರುವುದರಿಂದ ಸೋಮಪ್ಪನಾಯಕನೆಂಬ ಹೆಸರಿನ ಅರಸರೇ ಹೆಚ್ಚಾಗಿರುವರು. ಕನಕಗಿರಿಯ ಅರಸರ ಆರಾಧ್ಯದೇವರು ಕನಕಾಚಲನಾಗಿರುವುದರಿಂದ ಕನಕಪ್ಪನಾಯಕರುಗಳೆಂದು ಹಾಗೂ ಅವರ ಕುಲದೇವತೆ ಉಡಚಲಮ್ಮನಾಗಿರುವುದರಿಂದ ಉಡಚ ಎಂಬುದನ್ನು ತಮ್ಮ ಹೆಸರಿನ ಮುಂದೆ ಇಟ್ಟುಕೊಳ್ಳುವ ಸಂಪ್ರದಾಯ ಬೆಳೆಯಿತು. ಹೀಗೆ ಈ ಮನೆತನದವರು ತಮ್ಮ ಮನೆದೇವರು ಹಾಗೂ ಆರಾಧ್ಯದೇವರು, ಇಲ್ಲವೇ ತಮ್ಮ ಪೂರ್ವಜರ ಹೆಸರನ್ನು ಇಟ್ಟುಕೊಳ್ಳುವ ಸಂಪ್ರದಾಯವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ.

### ೩.೬.೬ ನಿಷ್ಕ್ರಮಣ

ಮಗುವಿನ ನಾಮಕರಣದ ತರುವಾಯ ಸೂರ್ಯದರ್ಶನ ಮಾಡಿಸಿ, ಬಾಯಿಯಲ್ಲಿ ಜೇನುತುಪ್ಪ ಹಾಕಿ, ನವವಸ್ತ್ರಧಾರಣೆ ಮಾಡುವ ಪದ್ಧತಿ ಸುರಪುರ, ಆನೆಗೊಂದಿ, ಕನಕಗಿರಿ ಮನೆತನದಲ್ಲಿದೆ.

### ೩.೬.೭ ಕರ್ಣಭೇದನ

ಮಗುವಿಗೆ ನಿಷ್ಕ್ರಮಣವಾದ ಐದು ಇಲ್ಲವೆ, ಏಳನೇ ತಿಂಗಳಲ್ಲಿ ಕಿವಿ ಚುಚ್ಚುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವರು. ಈ ಸಂದರ್ಭದಲ್ಲಿ ಮೊದಲು ಕುಲದೇವರನ್ನು ಪೂಜಿಸಿ, ಮನೆಯಲ್ಲಿ ಮನೆಯ ಪುರೋಹಿತರ ಸಮ್ಮುಖದಲ್ಲಿ ಅಕ್ಕಿ, ಬೇಳೆ, ಬೆಲ್ಲ, ಎಲೆ, ಅಡಿಕೆ, ತೆಂಗಿನಕಾಯಿ, ಕೊಬ್ಬರಿ ಬಟ್ಟಲು, ಒಂದು ವಸ್ತ್ರಗಳೊಂದಿಗೆ ಬಂಗಾರದಿಂದ ಮಾಡಿಸಿದ ಮುರುವನ್ನು ಮಗುವಿನ ಕಿವಿಗೆ ಚುಚ್ಚುವ ಸಂಪ್ರದಾಯವಿದೆ.[೨೭೬] ಸುರಪುರದ ಅರಸು ಮನೆತನದಲ್ಲಿ ಕಾರ್ತಿಕ, ಪುಷ್ಯ, ಚೈತ್ರ ಅಥವಾ ಫಾಲ್ಗುಣ ಮಾಸಗಳಲ್ಲಿ ಕರ್ಣಭೇದ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿದ್ದರು. ಇದನ್ನು ಆಯಾ ಮನೆತನದ ಪುರೋಹಿತರೇ ಮಾಡುವರು.

### ೩.೬.೮ ಅನ್ನಪ್ರಾಶನ

ಮಗುವನ್ನು ದೇವರ ಎದುರು ಕೂಡಿಸಿ ಬಂಗಾರದ ಪಾತ್ರೆಯಲ್ಲಿ ಜೇನುತುಪ್ಪ ಮತ್ತು ತುಪ್ಪಗಳಿಂದ ಮಿಶ್ರಿತವಾದ ಪಾಯಸವನ್ನು ಶಿಶುವಿಗೆ ತಿನ್ನಿಸುತ್ತಿದ್ದರು. ಈಗ ಈ ಸಂಪ್ರದಾಯ ಈ ಮನೆತನಗಳಲ್ಲಿ ಆಚರಣೆಯಲ್ಲಿಲ್ಲ.

### ೩.೬.೯ ಚೌಲ ಕಾರ್ಯಕ್ರಮ

ಇದಕ್ಕೆ ಜಾವಳ ಕಾರ್ಯಕ್ರಮವೆಂತಲೂ ಕರೆಯುವರು. ಗಂಡುಮಗುವಿಗೆ ಜನ್ಮದಿಂದ ಆರಂಭಿಸಿ ಮೊದಲನೇ ವರ್ಷ, ಮೂರನೇ ವರ್ಷ, ಐದನೇ ವರ್ಷ, ಏಳನೇ ವರ್ಷ, ಒಂಬತ್ತನೇ ವರ್ಷ, ಹನ್ನೊಂದನೇ ವರ್ಷದಲ್ಲಿ ಒಂದನ್ನು ಆಯ್ಕೆ ಮಾಡಿಕೊಂಡು ಶಾಸ್ತ್ರೋಕ್ತವಾದ ರೀತಿಯಲ್ಲಿ ಚೌಲವನ್ನು ಮಾಡಿಸುವ ಸಂಪ್ರದಾಯವಿತ್ತು.

ಚೌಲ ಕಾರ್ಯಕ್ರಮವು ಬಹಳ ಕಟ್ಟುನಿಟ್ಟಿನಿಂದ ಹಾಗೂ ವೈಭವದಿಂದಲೂ ನಡೆಯುತ್ತಿತ್ತು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨)ನು ತನ್ನ ಮಗ ಶ್ರೀನಿವಾಸನಾಯಕನ ಜಾವಳ ಕಾರ್ಯಕ್ರಮವನ್ನು ಹಮ್ಮಿಕೊಂಡಾಗ ಬೇರೆ ಸಂಸ್ಥಾನದ ಬಂಧುಗಳಾರೂ ಬರಲಿಲ್ಲ. ಕಾರಣ ಇಮ್ಮಡಿ ವೆಂಕಟಪ್ಪನಾಯಕ ಮುಸಲ್ಮಾನ ಮಹಿಳೆಯೋರ್ವಳನ್ನು ಮದುವೆಯಾಗಿದ್ದ. ಆಕೆಯೂ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಹಭೋಜನ ಮಾಡುವುದರಿಂದ ತಮ್ಮ ಮತಕ್ಕೆ ಅವಮಾನವೆಂದು ತಿಳಿದು ಯಾರೂ ಈ ಜಾವಳ ಕಾರ್ಯಕ್ರಮದಲ್ಲಿ ಭಾಗವಹಿಸಲಿಲ್ಲ.[೨೭೭] ಸುರಪುರದ ಅರಸ ನಾಲ್ವಡಿ ವೆಂಕಟಪ್ಪನಾಯಕ(ಕ್ರಿ.ಶ.೧೮೪೨-೧೮೫೮)ನಿಗೆ ಹನ್ನೊಂದನೇ ವರ್ಷದಲ್ಲಿ 'ಜಾವಳ' ಕಾರ್ಯಕ್ರಮವನ್ನು ಸಂಸ್ಥಾನದ ಸಕಲ ಗೌರವಗಳೊಂದಿಗೆ ಸುರಪುರದ ಸಿದ್ಧನತೋಟದಲ್ಲಿ ಏರ್ಪಡಿಸಿ ಅನ್ನಸಂತರ್ಪಣೆಯೊಂದಿಗೆ ನೆರವೇರಿಸಲಾಯಿತು.[೨೭೮]

ಆನೆಗೊಂದಿಯ ಅರಸ ಶ್ರೀರಂಗದೇವರಾಯರು ತಮ್ಮ ಮಗ ದರ್ಬಾರ ಕೃಷ್ಣದೇವರಾಯರ ಚೌಲ ಕಾರ್ಯಕ್ರಮವನ್ನು ಗುಡ್ಡದ ತಿಮ್ಮಪ್ಪನ ದೇವಾಲಯದಲ್ಲಿ ನೆರವೇರಿಸಿದನು. ಆ ಸಂದರ್ಭದಲ್ಲಿ ಬ್ರಾಹ್ಮಣರಿಗೆ ೧೧ ಗೋವುಗಳನ್ನು ದಾನವಾಗಿ ನೀಡಿದರು.[೨೭೯] ಗುಡಗುಂಟಿಯ ಅರಸ ತಿಪ್ಪರಾಜ ಜಡಿಸೋಮಪ್ಪ ನಾಯಕನ 'ಜಾವಳ'ದ ಕಾರ್ಯಕ್ರಮವನ್ನು ಒಂಬತ್ತನೇ ವರ್ಷದಲ್ಲಿ ರಾಣಿಗೌರಮ್ಮನು ಅರಮನೆಯಲ್ಲಿಯೇ ಸಕಲಗೌರವಗಳೊಂದಿಗೆ ನೆರವೇರಿಸಿದಳು. ಸುರಪುರ, ದೇವದುರ್ಗ, ಕನಕಗಿರಿ, ಕ್ಯಾದಿಗೇರಾ, ಗುಂತಗೋಳಗಳಿಂದ ಬಂಧುಗಳನ್ನು ಕರೆಸಿದ್ದಳು. ರಾಜಗುರುಗಳಿಗೆ, ಶ್ರೀ ಅಮರೇಶ್ವರನ ಗುರುಗಳಿಗೆ ಕಾಣಿಕೆಯಾಗಿ ವಸ್ತ್ರಗಳನ್ನು ನೀಡಿ ಸತ್ಕರಿಸಿದಳು.[೨೮೦]

ದೇವದುರ್ಗದ ರಾಜಾ ವಾಸುದೇವನಾಯಕರು ಮಗ ಕಿಲಚನಾಯಕರ ಜಾವಳದ ಕಾರ್ಯಕ್ರಮವನ್ನು ಮೂರನೇ ವರ್ಷದಲ್ಲಿ ಚಂದನಕೇರಿಯಲ್ಲಿ ನೆರವೇರಿಸಿದರು. ಈ ಮನೆತನದಲ್ಲಿ ಪುರೋಹಿತರಿಂದ ಬೆಳ್ಳಿಯ ಕತ್ತರಿಯಿಂದ ಕೂದಲನ್ನು ತೆಗೆಸಿದರು. ಹಾಗೂ ಜಾವಳದ ಕಾರ್ಯಕ್ರಮದಂದು ಬಡಬಗ್ಗರಿಗೆ ವಸ್ತ್ರಗಳನ್ನು ನೀಡಿದರು.[೨೮೧]

### ೩.೬.೧೦ ಅಕ್ಷರಾಭ್ಯಾಸ ಕಾರ್ಯಕ್ರಮ

ಸುರಪುರದ ಅರಸರು ತಮ್ಮ ಮಕ್ಕಳಿಗೆ ಐದುವರ್ಷ ತುಂಬಿದ ಮೇಲೆ ಶುಭಮುಹೂರ್ತದಲ್ಲಿ ಅಕ್ಷರಾಭ್ಯಾಸ ಕಾರ್ಯಕ್ರಮವನ್ನು ನೆರವೇರಿಸುತ್ತಿದ್ದರು. ನಾಲ್ವಡಿ ವೆಂಕಟಪ್ಪನಾಯಕನಿಗೆ ಅಕ್ಷರಾಭ್ಯಾಸ ಪ್ರಾರಂಭಿಸುವ ಸಂದರ್ಭದಲ್ಲಿ ಈತನ ವಿದ್ಯೆಯ ಜವಾಬ್ದಾರಿಯನ್ನು ಹೊತ್ತ ರೆಸಿಡೆಂಟ್ ಮೆಡೋಸ್ ಟೇಲರ್‌ನು ಈ ಮನೆತನದಲ್ಲಿ ಬಹುಕಾಲದಿಂದಲೂ ಬಂದ ಸಂಪ್ರದಾಯದಂತೆ ಅರಮನೆಯಲ್ಲಿ ಗಣಪತಿ ಪೂಜೆ, ಸರಸ್ವತಿ ಪೂಜೆಮಾಡಿಸಿ, ತಟ್ಟೆಯಲ್ಲಿ ಅಕ್ಕಿಯನ್ನು ಹಾಕಿ, ಆ ಅಕ್ಕಿಯಲ್ಲಿ ಅಕ್ಷರಗಳನ್ನು ಮೂಡಿಸುವುದರ ಮೂಲಕ ಅಕ್ಷರಾಭ್ಯಾಸ ಕಾರ್ಯಕ್ರಮವನ್ನು ನೆರವೇರಿಸಿದನು.[೨೮೨]

ಆನೆಗೊಂದಿ ಅರಸರ ಮನೆತನದಲ್ಲಿ ಅಕ್ಷರಾಭ್ಯಾಸದ ಸಮಾರಂಭದಲ್ಲಿ ಒಂದು ಅಗಲವಾದ ಪಾತ್ರೆಯಲ್ಲಿ ಅಕ್ಕಿಯನ್ನು ಹರವಿ, ಸರಸ್ವತಿ, ಗಣೇಶ, ಸ್ತೋತ್ರವನ್ನು ಪುರೋಹಿತರಿಂದ ಹೇಳಿಸುತ್ತಾ, ಅಕ್ಷರಗಳನ್ನು ಬರೆಯಿಸುತ್ತಿದ್ದರು. ಅಕ್ಷರಾಭ್ಯಾಸ ಮಾಡುವ ಮಗುವನ್ನು ಪಶ್ಚಿಮಾಭಿಮುಖವಾಗಿ ಕೂಡಿಸುತ್ತಿದ್ದರು. ಹೆಬ್ಬೆಟ್ಟು ಮತ್ತು ಉಂಗುರ ಬೆರಳುಗಳಿಂದ ಅಕ್ಷರಗಳನ್ನು ಬರೆಯಿಸುತ್ತಿದ್ದರು.[೨೮೩] ಈ ಸಂಪ್ರದಾಯ ಈಗ ಈ ಮನೆತನದಲ್ಲಿ ಇಲ್ಲ. ಕಾರಣ ಆಧುನಿಕತೆಯ ಗಾಳಿ ಇವರನ್ನು ಸೋಂಕಿದೆ.

### ೩.೬.೧೧ ವಿದ್ಯಾರಂಭ ಕಾರ್ಯಕ್ರಮ

ಅಕ್ಷರಾಭ್ಯಾಸದ ನಂತರ ಮತ್ತೊಂದು ಶುಭಮುಹೂರ್ತದಲ್ಲಿ ಗಣಪತಿ, ಸರಸ್ವತಿ ಹಾಗೂ ಅವರ ಮನೆದೇವರುಗಳ ಪೂಜೆಯನ್ನು ಸಲ್ಲಿಸಿ, ಅರಮನೆಯಲ್ಲಿ ನೇಮಿಸಿದ ಗುರುಗಳಿಗೆ ಕಾಣಿಕೆಯನ್ನು ಸಲ್ಲಿಸಿ,

ವಿದ್ಯೆಯ ಆರಂಭವನ್ನು ಮಾಡುತ್ತಿದ್ದರು. ಈ ಸಂಪ್ರದಾಯ ಬಹುತೇಕ ಕರ್ನಾಟಕದ ಎಲ್ಲಾ ನಾಯಕ ಅರಸುಮನೆತನಗಳಲ್ಲಿತ್ತು.

೩.೬.೧೨ ಉಪನಯನ

ಈ ಕಾರ್ಯಕ್ರಮವನ್ನು ೮ ಇಲ್ಲವೇ ೧೧ನೇ ವರ್ಷದಲ್ಲಿ ಮಾಡುತ್ತಿದ್ದರು. ಈ ನಿರ್ದಿಷ್ಟಕಾಲದಲ್ಲಿ ಅನಿವಾರ್ಯ ಕಾರಣಗಳಿಂದ ಉಪನಯನ ಮಾಡಲು ಸಾಧ್ಯವಾಗದಿದ್ದರೆ ಇಪ್ಪತ್ತು ವರ್ಷದೊಳಗೆ ಮಾಡಬೇಕೆಂಬ ನಿಯಮವು ಈ ಮನೆತನಗಳಲ್ಲಿತ್ತು.

ಚಿತ್ರದುರ್ಗದ ನಾಯಕ ಅರಸರು ವಿವಾಹಕಾಲದಲ್ಲಿ ವಿವಾಹಕ್ಕೆ ಮುನ್ನ ಗಣಪತಿಪೂಜೆ, ನಾಂದಿ, ಸ್ವಸ್ತಿ ವಾಚನ ಮಾಡಿಸಿ ನಂತರ ಜನಿವಾರಧಾರಣೆ ಮಾಡಿಸಿ ಕಿವಿಯಲ್ಲಿ ಮಂತ್ರೋಪದೇಶ ಮಾಡಿಸುತ್ತಿದ್ದರು.[೨೮೪] ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ ನಾಯಕ ಅರಸರು ಚಿತ್ರದುರ್ಗದ ಅರಸರಂತೆಯೇ 'ನಾಂದಿ' ಎನ್ನುವ ಧಾರ್ಮಿಕ ಕಾರ್ಯಕ್ರಮದ ಮೂಲಕ ಬ್ರಾಹ್ಮಣರ ಪೌರೋಹಿತ್ಯದಲ್ಲಿ ಜನಿವಾರವನ್ನು ಧರಿಸುತ್ತಿದ್ದರು. ಯಾವುದೇ ಶುಭಕಾರ್ಯಗಳ ಸಂದರ್ಭದಲ್ಲಿ ವೈಷ್ಣವ ಸಂಪ್ರದಾಯಕ್ಕನುಸಾರವಾಗಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಸುರಪುರ ಹಾಗೂ ಆನೆಗೊಂದಿ ಅರಸರು ಉಪನಯನ ಸಂದರ್ಭದಲ್ಲಿ ವೇದಿಕೆಯನ್ನು ನಿರ್ಮಿಸಿ ಹೋಮ ಮಾಡಿಸುತ್ತಿದ್ದರು. ಈಗ ಈ ಮನೆತನದಲ್ಲಿ ಸಾಮಾನ್ಯ ಕಾರ್ಯಕ್ರಮವೆಂಬಂತೆ ಇದನ್ನು ಆಚರಿಸುತ್ತಾರೆ.

೩.೬.೧೩ ವಿವಾಹ

ನಾಯಕ ಅರಸರ ವಿವಾಹ ಪದ್ಧತಿ ಸಾಮಾನ್ಯ ಬೇಡರಿಗಿಂತ ವಿಶೇಷವಾಗಿತ್ತು. ಕನ್ಯೆಯ ಆಯ್ಕೆ, ನಿಶ್ಚಿತಾರ್ಥ, ವಿವಾಹದ ಸಂದರ್ಭದ ಎಣ್ಣೆಶಾಸ್ತ್ರ, ಎಲೆಶಾಸ್ತ್ರ, ಮಾಂಗಲ್ಯಧಾರಣೆ ಮುಂತಾದ ಹಂತಗಳನ್ನು ಒಳಗೊಂಡಿತ್ತು. ಇದನ್ನು ಮುಂದೆ ಪ್ರತ್ಯೇಕ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಸಂಪ್ರದಾಯವನ್ನು ಮೊದಲಿನಿಂದಲೂ ಚಾಚೂ ತಪ್ಪದೇ ಆಚರಿಸುತ್ತ ಬಂದಿರುವುದನ್ನು ಕಾಣಬಹುದಾಗಿದೆ.

ಹೀಗೆ ಕರ್ನಾಟಕದ ನಾಯಕ ಅರಸುಮನೆತನದವರು ತಮ್ಮದೇ ಆದ ನಂಬಿಕೆ ಸಂಪ್ರದಾಯಗಳನ್ನು ಆಚರಿಸುತ್ತಿದ್ದರು. ಇದರಲ್ಲಿ ಕೆಲವು ಮೇಲ್ವರ್ಗದ ಜಾತಿಗಳಲ್ಲಿ ಸಾರ್ವತ್ರಿಕವಾಗಿ ಕಂಡುಬಂದರೂ, ಕೆಳವರ್ಗದ ನಾಯಕ ಅರಸರು, ಇವನ್ನು ಅನುಸರಿಸಿಕೊಂಡು, ತಮ್ಮ ಆರೋಗ್ಯಯುತ ರಾಜಕೀಯ ವಾತಾವರಣವನ್ನು ಸೃಷ್ಟಿಸಿಕೊಂಡು ಜೀವನದ ಸುಗಮತೆಗೆ ಪ್ರಾಮುಖ್ಯತೆಯನ್ನು ನೀಡಿದ್ದುದು ವಿಶೇಷವಾಗಿದೆ. ಇವರ ನಂಬಿಕೆ ಸಂಪ್ರದಾಯಗಳಲ್ಲಿ ಕೆಲವು ವಿಚಾರದ ಆಳಕ್ಕೆ ನಿಲುಕದಿರಬಹುದು. ಅವೈಜ್ಞಾನಿಕತೆಯಿಂದ ಕೂಡಿರಬಹುದು. ಆದರೆ ಆ ಮನೆತನಗಳ ಸ್ವಾಸ್ಥ್ಯವನ್ನು ಕಾಪಾಡಿದ್ದು ಬಹಳ ಮುಖ್ಯ. ಇವರಲ್ಲಿ ವಿಶ್ವಾಸ, ಭಕ್ತಿ, ಶ್ರದ್ಧೆ, ಶಿಸ್ತು ಹೀಗೆ ಜಗಿ ಭದ್ರತೆಯ ಚೌಕಟ್ಟನ್ನು ನಿರ್ಮಿಸಲು ಅವರ ನಂಬಿಕೆ,

ಸಂಪ್ರದಾಯಗಳೇ ಕಾರಣವೆನ್ನಲಡ್ಡಿಯಿಲ್ಲ. ಇಂದಿಗೂ ಈ ಮನೆತನಗಳ ವಂಶಸ್ಥರು ತಮಗೆ ನಿಲುಕುವ ಮಟ್ಟದಲ್ಲಿ ಇವುಗಳನ್ನು ಮುಂದುವರೆಸಿಕೊಂಡು ಹೊರಟಿರುವುದು ಅವರ ಪರಂಪರೆಯ ದ್ಯೋತಕವೇ ಸರಿ.

**ಟಿಪ್ಪಣಿಗಳು**

೧. **ಕನ್ನಡ ವಿಶ್ವಕೋಶ,** ಸಂಪುಟ ೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೯, ಪು.೩೯೭.

೨. ಅದೇ, ಪು.೩೯೭.

೩. ವೆಂಕಟಸುಬ್ಬಯ್ಯ ಜಿ., **ಇಗೋ ಕನ್ನಡ ಸಾಮಾಜಿಕ ನಿಘಂಟು,** ೨೦೦೧, ಪು.೪೭

೪. ಅದೇ, ಪು.೯೪

೫. ರಂಗರಾಜ ದೇವೇಂದ್ರಪ್ಪ, **ಸುರಪುರ ಸಂಸ್ಥಾನ : ಒಂದು ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೧೯೯೫, ಪು.೨೦೫

೬. ಶೈಲಾ ಭಿ.ಪೂಜಾರ, **ಕಿತ್ತೂರು ಚೆನ್ನಮ್ಮನ ಕಾಲದ ಇತಿಹಾಸ ಮತ್ತು ಸಂಸ್ಕೃತಿ,** ಎಂ.ಫಿಲ್ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೧, ಪು.೬೧.

೭. ದುರಗಪ್ಪ ಎಂ.ಕೆ., **ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ,** ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೨೦೦೩, ಪು.೧೧೯.

೮. ಕಪಟರಾಳ್ ಕೃಷ್ಣರಾವ್, **ಸುರಪುರ ಸಂಸ್ಥಾನ ಇತಿಹಾಸ,** ೧೯೭೭, ಪು.೭೮.

೯. ಲಕ್ಷ್ಮಣ್ ತೆಲಗಾವಿ, **ಕಾಮಗೇತಿ ಅರಸರು : ಕೆಲವು ವಿಚಾರಗಳು : ಪ್ರತಿಕ್ರಿಯೆ,** ಮಾನವಿಕ ಕರ್ನಾಟಕ, ೧೯೮೭, ಪು.೭೪.

೧೦. ಕೃಷ್ಣಸ್ವಾಮಿ ಕ.ರಾ.(ಸಂ), **ಚಿತ್ರಕಲ್ಲು ಮದಕರಿ : ಗೀತೆಗಳ ಸಂಗ್ರಹ,** ೧೯೭೪, ಪು.ಮುನ್ನುಡಿ xiv.

೧೧. **ಕನ್ನಡ ವಿಶ್ವಕೋಶ,** ಸಂ.೯, ಕನ್ನಡ ಅಧ್ಯಯನ ಸಂಸ್ಥೆ, ೧೯೭೬, ಪು.೫೩೬.

೧೨. ಅದೇ, ಪು.೫೩೬.

೧೩. ವಾಸುದೇವನಾಯಕ, ಸುರಪುರ ಅವರ ಹೇಳಿಕೆ.

೧೪. ರಾಮಪ್ಪನಾಯಕ, ದೇವದುರ್ಗ ಅವರ ಹೇಳಿಕೆ

೧೫. ನವೀನಚಂದ್ರನಾಯಕ ಕನಕಗಿರಿ ಅವರ ಹೇಳಿಕೆ.

೧೬. ವೆಂಕಟೇಶ ಜೋಯಿಸ್ ಕೆ.ಜಿ., **ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ೧೯೯೯, ಪು.೨೦

೧೭. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು - ರಾಜಕೀಯ ಚಿತ್ರ,* ದವನಸಿರಿ, ೧೯೯೨, ಪು.೭೫.

೧೮. ಅದೇ, ಪು.೮೩

೧೯. ಸುಂದರ ಅ., **ಕರ್ನಾಟಕ ಇತಿಹಾಸ ಚರಿತ್ರೆ,** ೧೯೯೭, ಸಂ.೧, ಪು.೩೮೨.

೨೦. ಅದೇ, ಪು.೮೩

೨೧. Alteker A.S., The Rastrakutas and their times : poor, 1934, Pp.152.

೨೨. ಕೃಷ್ಣಸ್ವಾಮಿ ಕ.ರಾ.(ಸಂ), ಪೂರ್ವೋಕ್ತ, ಪು.ಮುನ್ನುಡಿ x

೨೩. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೨೦೮

೨೪. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ೨೦೦೪, ಪು.೧೮೦

೨೫. ಬಸವರಾಜಪ್ಪ ಜಾಗಟಕಲ್, ಸಾ|| ಗುಡಗುಂಟಿ. ಇವರ ಹೇಳಿಕೆಯಿಂದ.

೨೬. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ್ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೪೨.

೨೭. ಪರಮೇಶ್ವರಪ್ಪ ಟಿ., ಹಂಪಿ ಪರಂಪರೆ, ೧೯೯೬, ಪು.೬.

೨೮. ಆದ್ಯರಾಮಾಚಾರ್ಯರು ಬೆಂಗಳೂರು, ಇವರ ಹೇಳಿಕೆಯಿಂದ.

೨೯. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರ - ರಾಜಕೀಯ ಚಿತ್ರ*, ದವನಸಿರಿ, ೧೯೯೨, ಪು.೭೮

೩೦. ಆದ್ಯರಾಮಾಚಾರ್ಯರು ಬೆಂಗಳೂರು ಇವರ ಹೇಳಿಕೆಯಿಂದ

೩೧. ಕೃಷ್ಣಮಾಚಾರ್ಯ ಬಿ., ರಾಜಗುರು ಸುರಪುರ ಇವರ ಹೇಳಿಕೆಯಿಂದ

೩೨. ವೀರನಾಯಕ ಹೆಚ್.ವಿ., ದುರ್ಗದ ಧವಳಕೀರ್ತಿ, ೨೦೦೦, ಪು.೩೩, ೩೪.

೩೩. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು. ೧೬೦

೩೪. ಶಿರೂರ ಬ್ಬಿ.ವಿ., ಶ್ರವಣಬೆಳಗೊಳ : ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ, ಕ.ವಿ.ವಿ.ಧಾರವಾಡ, ೧೯೭೬, ಪು. ೩೬೯.

೩೫. ಶ್ರೀ ಮಜ್ಜಗದ್ಗುರು ಶ್ರೀ ಕೂಡ್ಲಿಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನಲೇಖನ ಸಂಗ್ರಹ ಭಾಗ ೧, ೧೯೬೫, ಪು.೨೯(ಪ್ರಸ್ತಾವನೆ).

೩೬. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ೨೦೦೩, ಪು.೭೨. .

೩೭. ಅದೇ, ಪು. ೨೦೨

೩೮. ಪುಟ್ಟಣ್ಣ ಎಂ.ಎಸ್., ಪಾಳಯಗಾರರ : ಐದು ಉಪನ್ಯಾಸಗಳು, ೧೯೨೩, ಪು.೮೫-೮೬.

೩೯. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೭೬

೪೦. ಲೋಕಯ್ಯನ ಹಸ್ತಪ್ರತಿ, ಸುರಪುರ, ಪು.೧೭.

೪೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಪು.೩೨೪.

೪೨. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಪೂರ್ವೋಕ್ತ, ೧೯೭೬, ಪು.೫೬-೫೭.

೪೩. ದೇಶಪಾಂಡೆ ರಾ.ಹ., ಕರ್ನಾಟಕ ಸಾಮ್ರಾಜ್ಯ, ಸಂ.೧, ೧೯೨೬, ಪು.೩೨೮.

೪೪. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ೧೯೭೮, ಪು.೪೬೬

೪೫. ಶಿರೂರ ಬಿ.ವ್ಹಿ., ಪೂರ್ವೋಕ್ತ, ಪು.೩೬೬

೪೬. EC-X X(o) K1, 170, 11th Cen.

೪೭. HAS XVIII, 16, 1191; EC III(R) GU 219, 10th Cen.

೪೮. ಎಪಿಗ್ರಾಫಿಯ ಕರ್ನಾಟಿಕ XIV ಎಳಂದೂರು ೯೬-೧-೨೦೦೦

೪೯. ಶ್ರೀನಿವಾಸ ನಾಯಕ ಬಿ.ಎಸ್., ಚಿತ್ರದುರ್ಗದ ಕಾಮಗೇತಿ ಅರಸರು, ೧೯೮೪, ಪು.೧೧

೫೦. ಭಾಸ್ಕರ್‌ರಾವ್ ಮುಡಬೂಳ, ಮರೆತುಹೋದ ಸುರಪುರ ಇತಿಹಾಸ, ೨೦೦೧, ಪು.೪೮

೫೧. ಚೆನ್ನಕ್ಕ ಎಲಿಗಾರ, ಪ್ರಾಚೀನ ಕರ್ನಾಟಕದ ರಾಣಿಯರು, ೧೯೮೭, ಪು.ಪ್ರಸ್ತಾವನೆ X

೫೨. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೧೨೫

೫೩. ಅದೇ, ಪು.೧೨೯-೧೩೦

೫೪. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು : ಕೆಲವು ವಿಚಾರಗಳು-ಪ್ರತಿಕ್ರಿಯೆಗಳು,* ಮಾನವಿಕ ಕರ್ನಾಟಕ, ೧೯೮೭, ಪು.೧೦

೫೫. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳಯಗಾರರು, ೧೯೯೭, ಪು.೭೬

೫೬. ಗುಲಬರ್ಗಾ ಜಿಲ್ಲಾ ಗೆಜೆಟಿಯರ್, ಪು.೭೮

೫೭. ಭಾಸ್ಕರ್‌ರಾವ್ ಮುಡಬೂಳ, ಪೂರ್ವೋಕ್ತ, ಪು.೩೪

೫೮. ಅಮರೇಶ ಯತಗಲ್(ಸಂ), ಏಕಲವ್ಯ, ಸ್ಮರಣ ಸಂಚಿಕೆ, ೨೦೦೫, ಪು.೧೭

೫೯. ಅದೇ, ಪು.೧೯

೬೦. ಅಗಸ್ಟೀನ್ ಜೆ. ವಕೀಲರು ಸುರಪುರ ಇವರ ಹೇಳಿಕೆಯಿಂದ

೬೧. ಶರಣಬಸಪ್ಪ ಪಿ. ಕೋಲ್ಕಾರ, *ಕನಕಗಿರಿ ಪಾಳೆಯಗಾರರು,* ಪ್ರಜಾಪ್ರಪಂಚ ಪತ್ರಿಕೆ, ದೀಪಾವಳಿ ವಿಶೇಷಾಂಕ, ೨೦೦೧, ಪು.೧೦೩

೬೨. ಅದೇ, ಪು.೧೦೫

೬೩. ಅಮರೇಶ ಯತಗಲ್, *ಗುಡಗುಂಟಿ ಸಂಸ್ಥಾನ,* ಘಟ್ಟಿಹೊಸಹಳ್ಳಿ ಘಟ್ಟಿಗ, ೨೦೦೨, ಪು.೨೫

೬೪. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೪೨೫

೬೫. ಲಕ್ಷ್ಮಣ್ ತೆಲಗಾವಿ, ಶ್ರೀ ಬೃಹನ್ಮಠ ಮತ್ತು ಚಿತ್ರದುರ್ಗ ನಾಯಕ ಅರಸರ ಸಂಬಂಧ, ೨೦೦೩, ಪು.೨೦೩-೨೦೪

೬೬. ದುರಗಪ್ಪ ಎಂ.ಕೆ., ಪೂರ್ವೋಕ್ತ, ಪು.೨೦೩-೨೦೪

೬೭. ಶರಣಬಸಪ್ಪ ಪಿ. ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಎಂ.ಫಿಲ್.ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೧, ಪು.೭೩

೬೮. ಅದೇ, ಪು.೮೩-೮೪

೬೯. ಶರಣಬಸಪ್ಪ ಪಿ. ಕೋಲ್ಕಾರ, ಪೂರ್ವೋಕ್ತ, ೨೦೦೧, ಪು.೯೭

೭೦. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೪೧

೭೧. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು : ಕೆಲವು ವಿಚಾರಗಳು-ಪ್ರತಿಕ್ರಿಯೆ,* ಮಾನವಿಕ ಕರ್ನಾಟಕ, ೧೯೮೭,ಪು.೫೬

೭೨. Epigraphica Carnatica IX-Chitradurga 73-1640 AD

೭೩. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೩೦೪

೭೪. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೧೨೪

೭೫. ಗಿರಿರಾಜ ಹೊಸಮನಿ, ಲಿಂಗಸುಗೂರು ತಾಲ್ಲೂಕು ದರ್ಶನ, ೧೯೮೬, ಪು.೩೦

೭೬. ಎ.ಕ.viii, ಸೊರಬ ೫೨೩, ಕವಡಿ (ಕ್ರಿ.ಶ.೪೫೦)

೭೭. ನಾಗೇಗೌಡ(ಸಂ), ಪ್ರವಾಸಿ ಕಂಡ ಇಂಡಿಯಾ, ಸಂ.೨, ೧೯೬೬, ಪು.

೭೮. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೯೭, ಪು.೨೮

೭೯. ಕೃಷ್ಣಸ್ವಾಮಿ ಕ.ರಾ.(ಸಂ), ಪೂರ್ವೋಕ್ತ, ಪು.vi

೮೦. ಅದೇ, ಪು.vi

೮೧. ವಿಲ್ ಮತ್ತು ಏರಿಯಲ್ ಡುರಾಂಟ್ (ಅನು. ಭಗವಾನ್), ಇತಿಹಾಸದ ಪಾಠಗಳು, ೧೯೭೮, ಪು.೯೫.

೮೨. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ೧೯೮೨, ಪು.೧೦೨.

೮೩. ಷೇಕ್‌ಅಲಿ ಬಿ.(ಸಂ), ಕರ್ನಾಟಕ ಚರಿತ್ರೆ ಸಂ.೪, ೧೯೯೭, ಪು

೮೪. ರಂಗಾರೆಡ್ಡಿ ಕೋಡಿರಾಂಪುರ, ಕನ್ನಡ ಸಾಹಿತ್ಯದಲ್ಲಿ ಯುದ್ಧ ಮತ್ತು ಶಾಂತಿ, ೧೯೮೯, ಪು.೬೧.

೮೫. J.S.Sarkar, **The Art of was in Medieval India**, 1994, Pp.30

೮೬. ಪುಟ್ಟಣ್ಣ ಎಂ.ಎಸ್., ಪಾಳಯಗಾರರ : ಐದು ಉಪನ್ಯಾಸಗಳು, ೧೯೨೩, ಪು.೫೦

೮೭. ರಂಗಾರೆಡ್ಡಿ ಕೋಡಿರಾಂಪುರ, ಪೂರ್ವೋಕ್ತ, ೧೯೮೯, ಪು.೬೩.

೮೮. ಸೋಮಶೇಖರ ಎಸ್.ವೈ., ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ, ೨೦೦೧, ಪು.೫೦

೮೯. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೯೫

೯೦. ಕೆಳದಿ ಬಸವರಾಜ(ಸಂ) ಆರ್.ಶಾಮಶಾಸ್ತ್ರಿ, ಶಿವತತ್ವರತ್ನಾಕರ, ೧೯೬೯, ಪು.೩೩೨.

೯೧. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೨೩, ಪು.೫೦.

೯೨. ಕೃಷ್ಣಮಾಚಾರ್ಯ ಬಿ., ಸುರಪುರ ಸಂಸ್ಥಾನದ ರಾಜಗುರುಗಳ ಹೇಳಿಕೆ.

೯೩. ವೆಂಕಟಪ್ಪನಾಯಕ ಎಸ್.ಎಂ., *ದಿಲ್ಲಿಯನ್ನು ನಡುಗಿಸಿದ ಸುರಪುರ ಸೈನ್ಯ,* ಸಗರನಾಡ ದರ್ಶನ, ೧೯೮೫, ಪು.೨೭೮.

೯೪. ಅದೇ, ಪು.೨೭೮-೨೭೯.

೯೫. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪುಟ.೯೫.

೯೬. Sarkar. S.R. **Jadunath, History of Aurangazeb,** vol.iv, 1921, P.305

೯೭. Ibid, Pp.೧೬-೧೭೦

೯೮. Ibid, Pp.೩೮೭.

೯೯. Ibid, Pp.೭೫.

೧೦೦. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೬, ಪು.೫೪.

೧೦೧. ಅದೇ, ಪು.೭೫.

೧೦೨. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೮೭.

೧೦೩. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೨೩, ಪು.೪೫-೪೬.

೧೦೪. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೬೪.

೧೦೫. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು -ರಾಜಕೀಯ ಚಿತ್ರ,* ದವನಸಿರಿ, ೧೯೯೨, ಪು.೮೧.

೧೦೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೬೬, ಪು.೨೭೮.

೧೦೭. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೪೯.

೧೦೮. ವೆಂಕಟಪ್ಪನಾಯಕ ಎಸ್.ಎಂ., ಪೂರ್ವೋಕ್ತ, ಪು.೨೮೦.

೧೦೯. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ, ಕೆಲವು ಸಮಸ್ಯೆಗಳು,* ಇತಿಹಾಸದರ್ಶನ ಸಂಪುಟ-೧೫, ೨೦೦೦, ಪು.೨೭೩.

೧೧೦. ತಿಪ್ಪೇಸ್ವಾಮಿ ಎಸ್., ರಕ್ಷಣಾವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೪, ಪು.೧೮೮.

೧೧೧. ಅದೇ, ಪು.೧೯೧

೧೧೨. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೯೫.

೧೧೩. ಆದ್ಯ ರಾಮಾಚಾರ್ಯರು, *ಮೊಘಲ್ ಚಕ್ರವರ್ತಿ ಔರಂಗಜೇಬನಿಂದ ಬೇಡರ ದೊರೆಗೆ ಪ್ರಶಂಸೆ ಪತ್ರ,* ಹೈದ್ರಾಬಾದ್ ಕರ್ನಾಟಕ, ೧೩.೫.೨೦೦೨, ಪು.೩.

೧೧೪. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡ ಕಾಳಗ ಕುರಿತ ಕೋಲುಪದ,* ವೀರಾಗ್ರಹಿ ವಿಶೇಷ ಸಂಚಿಕೆ ೧೯೮೩-೮೪,

೧೧೫೮. ಕೃಷ್ಣ ಎ., ಸಾಹಿತಿಗಳು, ಸುರಪುರ ಇವರ ಹೇಳಿಕೆ.

ಅ. ಇಂಥಾ ಉದಾಹರಣೆಗಳನ್ನು ರಾಮನಾಥ ಚರಿತೆಯಲ್ಲಿಯೂ ಕಾಣಬಹುದಾಗಿದೆ. ಕಂಪಿಲನು ದೇವಾಲಯಗಳಿಗೆ ಭೇಟಿ ನೀಡಿ ದೇವರ ಆಶೀರ್ವಾದ ಪಡೆದುದನ್ನು ಪದ್ಯ ಈ ರೀತಿ ವಿವರಿಸುತ್ತದೆ.

ದೇವತಾರ್ಚನೆಯ ನೊಸೆದು ಮಾಡಿ ಶಸ್ತ್ರಾದಿ
ದೇವಿಯ ಒಳಗೊಂಡವನಿಯ
ದೇವರಾಶೀರ್ವಚನ ನಾಲಿಸಿರುದ್ರ
ದೇವನುತ್ತಮ ಲಗ್ನದೊಳು

೧೧೬. ಸೋಮಶೇಖರ ಎಸ್.ವೈ., ಪೂರ್ವೋಕ್ತ, ಪು.೧೦೭.

೧೧೭. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು - ರಾಜಕೀಯ ಚಿತ್ರ,* ದವನಸಿರಿ ಸ್ಮರಣ ಸಂಚಿಕೆ, ೧೯೯೨, ಪು.೭೯

೧೧೮. ಅದೇ, ಪು.೮೧.

೧೧೯. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೬೭.

೧೨೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ ಪು.೧೦೭.

೧೨೧. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧, ಪು.೧೪೫.

೧೨೨. ವೆಂಕಟಪ್ಪನಾಯಕ, ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೨೩. ರಾಮಪ್ಪನಾಯಕ, ದೇವದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೨೪. ಬಸಣ್ಣ ಜಾವೂರು, ಸಾ.ಗುಂತಗೋಳ ಇವರ ಹೇಳಿಕೆಯಿಂದ.

೧೨೫. ಚಂದ್ರಹಾಸ ನಾಯಕ, ದೇವದುರ್ಗ ರಾಜವಂಶಸ್ಥರ ಹೇಳಿಕೆಯಿಂದ.

೧೨೬. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಸಂಸ್ಥಾನ ಇವರ ಹೇಳಿಕೆಯಿಂದ.

೧೨೭. ಬಸವರಾಜ ಎಚ್.ಎಂ., ಗುಡೇಕೋಟೆ ಪಾಳೆಯಗಾರರು : ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಎಂ.ಫಿಲ್.ಸಂಪ್ರಬಂಧ, ೨೦೦೨, ಪು.೬೮.

೧೨೮. ವಸು.ಎಂ.ವಿ.(ಸಂ), ದಕ್ಷಿಣ ಕರ್ನಾಟಕ ಅರಸುಮನೆತನಗಳು, ೨೦೦೧, ಪು.೧೨೮.

೧೨೯. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರ ಹೇಳಿಕೆಯಿಂದ

೧೩೦. ಚಚ್ಚಪ್ಪನಾಯಕ, ಕನಕಗಿರಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೧. ಅಮರಪ್ಪನಾಯಕ, ಗುಡಗುಂಟಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೨. ಮದನಗೋಪಾಲನಾಯಕ, ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೩. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೮೩.

೧೩೪. ಅಮರೇಶ ಯತಗಲ್, *ಗುಡಗುಂಟಿ ಸಂಸ್ಥಾನ,* ಘಟ್ಟಿಹೊಸಹಳ್ಳಿ ಘಟ್ಟಿಗ ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ತೇಜಸ್ವಿ ಕಟ್ಟೀಮನಿ(ಸಂ),, ೨೦೦೨, ಪು.೨೯.

೧೩೫. ವೆಂಕಟಪ್ಪನಾಯಕ(ತಾತ), ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೬. ಕಿಲಚನಾಯಕ ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೩೭. ವಾಸುದೇವನಾಯಕ, ಸುರಪುರ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೩೮. ಅಮರಪ್ಪನಾಯಕ, ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೩೯. ಕಿಲಚನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೪೦. ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ತೇಜಸ್ವಿ ಕಟ್ಟೀಮನಿ(ಸಂ), ಪೂರ್ವೋಕ್ತ, ಪು.೨೯.

೧೪೧. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೪೨. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು. ೧೨೪.

೧೪೩. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೨೭.

೧೪೪. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೪, ಪು.೧೮೯

೧೪೫. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ೧೯೯೧, ಪು.೩೦

೧೪೬. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೭೭.

೧೪೭. ಮೀರಾಸಾಬಿಹಳ್ಳಿ ಶಿವಣ್ಣ, ಗೊಲ್ಲಕಡಗ, ೧೯೯೯, ಪು.೧೧೪.

೧೪೮. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೨೮.

೧೪೯. ಗಂಡುಗಲಿ ಟಿ.ಎನ್., ಪ್ರಮುಖ, ೧೯೯೫, ಪು.೭೫.

೧೫೦. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೨೮.

೧೫೧. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೭೮.

೧೫೨. ಶ್ಯಾಮಲ ಸಿ.ಆರ್., *ಚಳ್ಳಕೇರಮ್ಮನ ದೇವಾಲಯ*, ಇತಿಹಾಸ ದರ್ಶನ, ಸಂ.೧೩, ೧೯೯೭, ಪು.೧೦೮

೧೫೩. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೨೦೫.

೧೫೪. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ೧೭.೯.೨೦೦೧, ಪು.೫.

೧೫೫. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೬೩.

೧೫೬. ಕೃಷ್ಣ ಎ., ಸಾಹಿತಿಗಳು, ಸುರಪುರ ಇವರ ಹೇಳಿಕೆಯಿಂದ.

೧೫೭. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೬೫.

೧೫೮. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೬೧.

೧೫೯. ಶ್ರೀನಾಥ ಆಚಾರ್ಯರು, ಆನೆಗೊಂದಿ ಇವರ ಹೇಳಿಕೆಯಿಂದ.

೧೬೦. ಅಚ್ಯುತದೇವರಾಯ, ಆನೆಗೊಂದಿ ರಾಜವಂಶಸ್ಥರ ಹೇಳಿಕೆಯಿಂದ.

೧೬೧. ತಿರುಮಲದೇವರಾಯ, ಆನೆಗೊಂದಿ ರಾಜವಂಶಸ್ಥರ ಹೇಳಿಕೆಯಿಂದ.

೧೬೨. ಬಸವರಾಜಪ್ಪ ಜಾಗಟಕಲ್ ಗುಡಗುಂಟಿ ಇವರ ಹೇಳಿಕೆಯಿಂದ.

೧೬೩. ಅಮರೇಶ ಯತಗಲ್(ಸಂ), ಏಕಲವ್ಯ ಸ್ಮರಣ ಸಂಚಿಕೆ, ೨೦೦೫, ಪು.೨೩.

೧೬೪. ಅದೇ, ಪು.೨೪.

೧೬೫. ರಮೇಶ ಕೆ., ಉಜ್ಜಿನಿ ಗ್ರಾಮಾಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಎಂ.ಫಿಲ್., ಪ್ರಬಂಧ, ೨೦೦೨, ಪು.೮೪.

೧೬೬. ಲಕ್ಷ್ಮಣ್ ತೆಲಗಾವಿ, ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ, ೨೦೦೪, ಪು.೧೧.

೧೬೭. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್(ಸಂ), ಮಲೆಕರ್ನಾಟಕದ ಅರಸುಮನೆತನಗಳು, ೨೦೦೧, ಪು.೭

೧೬೮. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು : ಕೆಲವು ವಿಚಾರಗಳು - ಪ್ರತಿಕ್ರಿಯೆ,* ಮಾನವಿಕ ಕರ್ನಾಟಕ, ೧೯೮೭, ಪು.೬೭

೧೬೯. ಲಕ್ಷ್ಮಣ್ ತೆಲಗಾವಿ(ಸಂ), ಚಿತ್ರಕಲ್ಲು, ಸ್ಮರಣ ಸಂಚಿಕೆ, ೧೯೭೪, ಪು.೭

೧೭೦. ಎಪಿಗ್ರಾಫಿಯಾ ಕರ್ನಾಟಕ ಚಿತ್ರದುರ್ಗ, ದಾವಣಗೆರೆ ಜಿಲ್ಲೆ, ೧೯೬೮, ಪು.೬೪

೧೭೧. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೨೫

೧೭೨. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ೧೯೯೧, ಪು.೩೦

೧೭೩. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ೧೯೯೫, ಪು.೩೯೫

೧೭೪. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೬೧

೧೭೫. ಅದೇ, ಪು.೬೨

೧೭೬. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ.(ಸಂ), ಪೂರ್ವೋಕ್ತ, ಪು.೩೯೬

೧೭೭. ಕೃಷ್ಣಸ್ವಾಮಿ ಕ.ರಾ.(ಸಂ), ಪೂರ್ವೋಕ್ತ, ಪು.೮

೧೭೮. ಅದೇ, ಪು.೯೮

೧೭೯. ಅದೇ, ಪು.೯೮

೧೮೦. ಅದೇ, ಪು.೧೦೮

೧೮೧. ಅದೇ, ಪು.೧೦೧

೧೮೨. ಶ್ಯಾಮಲ ಸಿ.ಆರ್., ಪೂರ್ವೋಕ್ತ, ೧೯೯೭, ಪು.೧೧೯

೧೮೩. ಗಿರಿಜ ಟಿ., ಪೂರ್ವೋಕ್ತ, ಪು.೩೧-೩೨

೧೮೪. ಅದೇ, ಪು.೩೨

೧೮೫. ಅದೇ, ಪು.೩೨

೧೮೬. ಅದೇ, ಪು.೪೦

೧೮೭. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೧೬-೧೧೭

೧೮೮. ಗಿರಿಜ ಟಿ., ಪೂರ್ವೋಕ್ತ, ಪು.೩೬೦-೩೬೧

೧೮೯. ಶ್ರೀನಿವಾಸ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ, ೧೯೭೬, ಪು.೮೭

೧೯೦. ಲಕ್ಷ್ಮಣ್ ತೆಲಗಾವಿ, *ಶ್ರೀ ಬೃಹನ್ಮಠ ಮತ್ತು ಚಿತ್ರದುರ್ಗ ನಾಯಕ ಅರಸರ ಸಂಬಂಧ,* ಚಿನ್ಮೂಲಾದ್ರಿ ಚೇತನ, ೧೯೮೯, ಪು.೭

೧೯೧. ಶ್ರೀಮಜ್ಜಗದ್ಗುರುಶ್ರೀಕೂಡ್ಲಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ ಭಾಗ ೧, ೧೯೬೫, ಪು.೨೮

೧೯೨. ಅದೇ, ಪು.೨೮

೧೯೩. ಅದೇ, ಪು.೨೯

೧೯೪. ಅದೇ, ಪು.೨೮

೧೯೫. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ ಪು.೧೦

೧೯೬. ಅದೇ, ಪು.೧೦

೧೯೭. ಅದೇ, ಪು.೨೦೪

೧೯೮. ಅದೇ, ಪು.೩೨

೧೯೯. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೮೦

೨೦೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೩೦೯

೨೦೧. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೭೫

೨೦೨. ಕೃಷ್ಣಮಾಚಾರ್ಕ್ಯ ಬಿ., ಸುರಪುರ ಅವರ ಹೇಳಿಕೆಯಿಂದ

೨೦೩. ಕೃಷ್ಣಮಾಚಾರ್ಕ್ಯ ಬಿ., ಸುರಪುರ ಅವರ ಹೇಳಿಕೆಯಿಂದ

೨೦೪. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೪೦

೨೦೫. ಕೃಷ್ಣಮಾಚಾರ್ಕ್ಯ ಬಿ., ಪೂರ್ವೋಕ್ತ, ೨೦೦೩, ಪು.೫೯

೨೦೬. ವೆಂಕಪ್ಪಾಚಾರ್ಕ್ಯರು, ಪುರೋಹಿತರು, ಸುರಪುರ ಇವರ ಹೇಳಿಕೆಯಿಂದ

೨೦೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೩೭

೨೦೮. ಅದೇ, ಪು.೨೩೭

೨೦೯. ವೆಂಕಪ್ಪಚಾರ್ಕ್ಯರ ಪುರೋಹಿತರು, ಸುರಪುರ ಇವರ ಹೇಳಿಕೆಯಿಂದ

೨೧೦. ನಾಗಲಿಂಗಪ್ಪ ಶಾಪೂರಕರ್, ಸಾ.ಸುರಪುರ ಇವರ ಹೇಳಿಕೆಯಿಂದ

೨೧೧. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೦೧

೨೧೨. ಪೂಜಾರ ವಿ.ಜಿ., ನಿಷ್ಠೆಯ ಕಡ್ಲಪ್ಪನವರು ಮತ್ತು ವೀರಪ್ಪನವರು, ೧೯೮೪, ಪು.೧೫

೨೧೩. ಕಲ್ಲೂರು ಸಂಗಣ್ಣ, ಪರಿಚಯ ಪರಾಕಾರತಿ, ೧೯೭೦, ಪು.೪

೨೧೪. ಕೃಷ್ಣ ಎ.(ಸಂ), ಸಗರನಾಡ ದರ್ಶನ, ೧೯೮೫, ಪು.೧೬೮

೨೧೫. ರಾಮದೇವರಾಯ ಆನೆಗೊಂದಿ ರಾಜವಂಶಸ್ಥರ ಹೇಳಿಕೆಯಿಂದ

೨೧೬. ಶ್ರೀನಾಥ ಆಚಾರ್ಯರು, ಆನೆಗೊಂದಿ ಅವರ ಹೇಳಿಕೆಯಿಂದ

೨೧೭. ಪುರುಷೋತ್ತಮ ಬಿಳಿಮಲೆ, ಚಲುವರಾಜು, ಹಂಪಿ ಜಾನಪದ, ೧೯೯೬, ಪು.೭೩

೨೧೮. ಶ್ರೀಮಜ್ಜಗದ್ಗುರು ಶ್ರೀ ಕೂಡ್ಲಿ ಶೃಂಗೇರಿ ಸಂಸ್ಥಾನ, ಪೂರ್ವೋಕ್ತ, ಪು.೩೨

೨೧೯. ಬಸವರಾಜ ಎನ್., *ಹೈದ್ರಾಬಾದ್ ಕರ್ನಾಟಕ ಸಾಪ್ತಾಹಿಕ,* ಸಂಯುಕ್ತ ಕರ್ನಾಟಕ, ೯.೫.೨೦೦೫, ಪು.೪

೨೨೦. ಬಸವರಾಜಪ್ಪ ಜಾಗಟಗಲ್, ಸಾ.ಗುಡಗುಂಟಿ ಇವರು ಹಾಡಿದುದು.

೨೨೧. ನವೀನಚಂದ್ರನಾಯಕ ಕನಕಗಿರಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೨೨೨. ಶ್ರೀಮಜ್ಜಗದ್ಗುರುಶ್ರೀಕೂಡ್ಲಿ ಶೃಂಗೇರಿ ಸಂಸ್ಥಾನ, ಪೂರ್ವೋಕ್ತ, ಪು.೩೦

೨೨೩. ಶರಣಬಸಪ್ಪ ಪಿ. ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಾದರಪಡಿಸಿದ ಎಂ.ಫಿಲ್.ಸಂಪ್ರಬಂಧ, ೧೯೯೪, ಪು.೫೯

೨೨೪. ಅದೇ, ಪು.೬೪

೨೨೫. ಶ್ರೀಮಜ್ಜಗದ್ಗುರುಶ್ರೀಕೂಡ್ಲಿ ಶೃಂಗೇರಿ ಸಂಸ್ಥಾನ, ಪೂರ್ವೋಕ್ತ, ಪು.೩೨

೨೨೬. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೭೬

೨೨೭. ಅದೇ, ಪು.೬೦

೨೨೮. ಅದೇ, ಪು.೧೭೭

೨೨೯. ಶ್ರೀನಿವಾಸ ಎಂ.ವಿ.(ಸಂ), ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೨೫

೨೩೦. ವಸು ಎಂ.ವಿ., ಪೂರ್ವೋಕ್ತ, ಪು.೧೬೫

೨೩೧. ಗಿರಿಜ ಟಿ., ಪೂರ್ವೋಕ್ತ, ಪು.೩೮೫

೨೩೨. ದುರಗಪ್ಪ ಎಂ.ಕೆ., ಪೂರ್ವೋಕ್ತ, ಪು.೧೬೫

೨೩೩. ಸುಭಾಶ್ಚಂದ್ರ ನಾಟೀಕಾರ, ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೦೨, ಪು.೫.

೨೩೪. ಅದೇ, ಪು.೧೬

೨೩೫. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡ ಕಾಳಗ ಕುರಿತ ಕೋಲುಪದ,* ವೀರಾಗ್ರಣಿ ವಿಶೇಷ ಸಂಚಿಕೆ, ೧೯೮೩-೮೪, ಪು.೧೧.

೨೩೬. ಅದೇ, ಪು.೧೧.

೨೩೭. ಅದೇ, ಪು.೧೨.

೨೩೮. ಕೃಷ್ಣ ಎ., ಸಾಹಿತಿಗಳು ಸುರಪುರ ಇವರ ಹೇಳಿಕೆಯಿಂದ.

೨೩೯. ಕುಪ್ಪರಾಜು ಡಿ.ಪಿ., ಆನೆಗೊಂದಿ ರಾಜವಂಶಸ್ಥರ ಹೇಳಿಕೆಯಿಂದ.

೨೪೦. ಪೂಜ್ಯ ಗಜದಂಡಸ್ವಾಮಿಗಳು, ದೇವರಭೂಪೂರ ಅವರ ಹೇಳಿಕೆಯಿಂದ.

೨೪೧. ರಾಮಪ್ಪನಾಯಕ, ದೇವದುರ್ಗ ಇವರ ಹೇಳಿಕೆಯಿಂದ.

೨೪೨. ಅಮರೇಶ್ವರನಾಯಕ, ಗುಂತಗೋಳ ಸಂಸ್ಥಾನದ ವಂಶಸ್ಥರ ಹೇಳಿಕೆಯಿಂದ.

೨೪೩. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೩೬.

೨೪೪. ಅದೇ, ಪು.೭೫.

೨೪೫. ಮೀರಾಸಾಬಿಹಳ್ಳಿ ಶಿವಣ್ಣ. ಗೊಲ್ಲಕಡಗ, ೧೯೯೯ಪು.೧೧೪.

೨೪೬. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ೨೦೦೩, ಪು.೧೯.

೨೪೭. ನರಸಿಂಹಪ್ಪ ಹೆಚ್., ಸಾ.ತಿಮ್ಮಲಾಪುರ, ತಾ.ಗಂಗಾವತಿ, ಇವರ ಹೇಳಿಕೆಯಿಂದ.

೨೪೮. ವೆಂಕಟರಾವ್ ಮಜುಮದಾರ, ಸಾ.ಗುಡಗುಂಟಿ ಇವರ ಹೇಳಿಕೆಯಿಂದ.

೨೪೯. ಶ್ರೀನಿವಾಸನಾಯಕ, ಗುಂತಗೋಳ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೨೫೦. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೭೦.

೨೫೧. ಅಗಸ್ಟೀನ್ ಜೆ., ನ್ಯಾಯವಾದಿಗಳು ಸಾ.ಸುರಪುರ ಇವರ ಹೇಳಿಕೆಯಿಂದ.

೨೫೨. ಉಡಿಚೇಂದ್ರನಾಯಕ ಕನಕಗಿರಿ ರಾಜವಂಶಸ್ಥರ ಹೇಳಿಕೆಯಿಂದ.

೨೫೩. ಪುರುಷಕಾರಿ ಲೋಕಯ್ಯ(ಹಸ್ತಲಿಪಿ), ಸುರಪುರ ರಾಜರುಗಳ ಚರಿತ್ರೆ, ಪು.೨೬.

೨೫೪. ನರಸಿಂಹಪ್ಪ ಹೆಚ್., ಸಾ.ತಿಮ್ಮಲಾಪುರ ಇವರ ಹೇಳಿಕೆಯಿಂದ.

೨೫೫. ಕಿಲಚನಾಯಕ, ದೇವದುರ್ಗ ರಾಜವಂಶಸ್ಥರ ಹೇಳಿಕೆಯಿಂದ.

೨೫೬. ವಸು ಎಂ.ವಿ.(ಸಂ), ಪೂರ್ವೋಕ್ತ, ೨೦೦೧, ಪು.೧೬೫.

೨೫೭. ವೀರಭದ್ರನಾಯಕ ಪಿ.ಆರ್. ಚಿತ್ರದುರ್ಗದ ರಾಜವಂಶಸ್ಥರು, ಇವರ ಹೇಳಿಕೆಯಿಂದ.

೨೫೮. ಅಚ್ಯುತದೇವರಾಯ, ಆನೆಗೊಂದಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೨೫೯. ಶ್ರೀನಿವಾಸನಾಯಕ, ಗುಂತಗೋಳ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೨೬೦. ಸಂಗಪ್ಪ ಹಾಲಭಾವಿ, ತಾ.ಲಿಂಗಸಗೂರು ಇವರು ಹಾಡಿದುದು.

೨೬೧. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೯೭, ಪು.೧೭.

೨೬೨. ಅದೇ, ಪು.೨೭-೨೮.

೨೬೩. ಶ್ಯಾಮಲರತ್ನಕುಮಾರಿ ಸಿ.ಆರ್., ಪೂರ್ವೋಕ್ತ, ೧೯೯೭, ಪು.೧೦೯.

೨೬೪. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಪಿಎಚ್. ಡಿ.ಮಹಾಪ್ರಬಂಧ, ೨೦೦೬, ಪು.೧೮೯-೧೯೦.

೨೬೫. ಸಿದ್ದಪ್ಪನಾಯಕ ಜರಿಮಲೆ ಅರಸರ ವಂಶಸ್ಥರ ಹೇಳಿಕೆಯಿಂದ.

೨೬೬. ಷಡಕ್ಷರಯ್ಯ ಆರ್.ಎಮ್., ಉಜ್ಜಯಿನಿ ಸದ್ಧರ್ಮ ಪೀಠದ ಸಾಂಸ್ಕೃತಿಕ ಅಧ್ಯಯನ, ೨೦೦೩, ಪು.೨೪೩.

೨೬೭. ಬಸಣ್ಣ ಜಾವೂರು, ಸಾ.ಗುಂತಗೋಳ ಇವರ ಹೇಳಿಕೆಯಿಂದ.

೨೬೮. ಕರಿಬಸಪ್ಪ ಎ., ಪೂರ್ವೋಕ್ತ, ಪು.೧೫೭.

೨೬೯. ಕಿಲಚನಾಯಕ, ದೇವದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ.

೨೭೦. ಬಸಣ್ಣ ಜಾಗಟಕಲ್, ಸಾ.ಗುಡಗುಂಟಿ ಇವರ ಹೇಳಿಕೆಯಿಂದ.

೨೭೧. ಜಯಲಕ್ಷ್ಮಮ್ಮದೇವಿ, ಗುಡಗುಂಟಿ ಸಂಸ್ಥಾನ ಇವರ ಹೇಳಿಕೆಯಿಂದ.

೨೭೨. ರಾಣಿ ಚಂದ್ರಕಾಂತದೇವಿ, ಆನೆಗೊಂದಿ ಸಂಸ್ಥಾನಿಕರ ಹೇಳಿಕೆಯಿಂದ.

೨೭೩. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಸಂಸ್ಥಾನ, ಇವರ ಹೇಳಿಕೆಯಿಂದ.

೨೭೪. ಕಿಲಚನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ತರ ಹೇಳಿಕೆಯಿಂದ.

೨೭೫. ವೆಂಕಟರಾವ್ ಮುಜುಮದಾರ, ಗುಡಗುಂಟಿ ಇವರ ಹೇಳಿಕೆಯಿಂದ.

೨೭೬. ಜಯರಾಮಾಚಾರ್ಯ ಸರಜೋಶಿ ಬಿ., ರಾಜಗುರುಗಳು, ಸಾ.ಗಂಗಾವತಿ ಇವರ ಹೇಳಿಕೆಯಿಂದ.

೨೭೭. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೧೧೮.

೨೭೮. Foreign Political Consultation, 23, may, 1945, File N-44.

೨೭೯. ರಂಗದೇವರಾಯ, ಆನೆಗೊಂದಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೨೮೦. ಅಮರಪ್ಪನಾಯಕ ಗುಡಗುಂಟಿ ಸಂಸ್ಥಾನದ ವಂಶಸ್ಥರ ಹೇಳಿಕೆಯಿಂದ.

೨೮೧. ರಾಮಪ್ಪನಾಯಕ ಸಾ.ದೇವದುರ್ಗ ಇವರ ಹೇಳಿಕೆಯಿಂದ.

೨೮೨. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೨೮೩. ಶ್ರೀರಂಗದೇವರಾಯ, ಆನೆಗೊಂದಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೨೮೪. ರಾಜಣ್ಣ ಸಿ.ಪಿ., ಕಾಟಪ್ಪನಹಟ್ಟಿ ತಾ.ಚಳ್ಳಕೆರೆ ಇವರ ಹೇಳಿಕೆಯಿಂದ.

ಅಧ್ಯಾಯ ೪

# ಸಾಮಾಜಿಕ ನೆಲೆಯ ಆಚರಣೆಗಳು

೪

# ಸಾಮಾಜಿಕ ನೆಲೆಯ ಆಚರಣೆಗಳು

ಒಂದು ರಾಜ್ಯದ ಅಥವಾ ಅರಸು ಮನೆತನದ ಆಂತರಿಕ ಸುಖ ಅಲ್ಲಿಯ ಸಾಮಾಜಿಕ ನೆಲೆಗಟ್ಟಿನ ಮೇಲೆ ನಿಂತಿರುತ್ತದೆ. ಸಮಾಜವು ಹಿಂದಿನ ರೂಢಿ, ಸಂಪ್ರದಾಯ, ಆಚರಣೆಗಳನ್ನು ತನ್ನ ಒಡಲೊಳಗೆ ಸೇರಿಸಿಕೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ನಾಯಕ ಅರಸುಮನೆತನಗಳವರ ಜೀವನದ ಸ್ವರೂಪವನ್ನು ಅವರ ಕೌಟುಂಬಿಕ ಹಿನ್ನೆಲೆಯ ವೈಶಿಷ್ಟ್ಯತೆಗಳನ್ನು ಅರಿಯಲು ಅವರು ಆಚರಿಸುತ್ತಿದ್ದ ಸಾಮಾಜಿಕ ಆಚರಣೆಗಳ ಮೊರೆ ಹೋಗಬೇಕಾಗುತ್ತದೆ. ಆ ಆಚರಣೆಗಳ ಮೂಲಕ ಅವರ ಸಾಮಾಜಿಕ ಪ್ರಕ್ರಿಯೆಯನ್ನು, ಸಾಂಸ್ಕೃತಿಕ ಮೌಲ್ಯಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ನಾಯಕ ಅರಸರು ಶೂದ್ರವರ್ಗದವರಾಗಿದ್ದು, ತೋಳ್ಬಲದಿಂದ ಕ್ಷತ್ರಿಯರೆನಿಸಿಕೊಂಡಾಗ ಉನ್ನತವರ್ಗದೊಂದಿಗೆ ಜೀವಿಸುವ ಅವಕಾಶಗಳು ದಕ್ಕಿದವು. ಆಗ ವೈಷ್ಣವ ಹಾಗೂ ಶೈವಧರ್ಮಗಳನ್ನು ಸ್ವೀಕರಿಸುವುದರ ಮೂಲಕ ಅವರ ಸಾಮಾಜಿಕ ರೀತಿ ನೀತಿಗಳ ಆಚರಣೆಯ ವಿಧಾನಗಳೇ ಬದಲಾದವು. ಒಂದೆಡೆ ಅವರ ಮೂಲ ಆಚರಣೆಗಳು, ಇನ್ನೊಂದೆಡೆ ಬಳುವಳಿಯಾಗಿ ಪಡೆದ ಉನ್ನತವರ್ಗದ ಆಚರಣೆಗಳ ಅನುಕರಣೆಯಿಂದ ರೂಢಿಸಿಕೊಂಡ ನಾಯಕ ಅರಸು ಮನೆತನಗಳವರ ಆಚರಣೆಗಳು ಕುತೂಹಲಕಾರಿಯಾದ ಸ್ವರೂಪವನ್ನು ಹುಟ್ಟುಹಾಕಿದವು. ಇವುಗಳನ್ನು ಬಹುಶಃ ಬೇರೆಡೆ ಕಾಣಲಾಗದು.

ಇಂಥ ಆಚರಣೆಗಳನ್ನು ನಾಯಕ ಅರಸರುಗಳವರ ಕುಟುಂಬ ವ್ಯವಸ್ಥೆ, ವಿವಾಹ ಪದ್ಧತಿ, ಉಡುಗೆ ತೊಡುಗೆ, ಆಹಾರಪದ್ಧತಿ, ರಾಜವೈಭವ, ವಿಜಯೋತ್ಸವ, ಕಪ್ಪಕಾಣಿಕೆ ಪದ್ಧತಿ, ಬೇಟೆಯ ಪದ್ಧತಿ ಮತ್ತು ಶವಸಂಸ್ಕಾರ ಪದ್ಧತಿಗಳ ಅಧ್ಯಯನದ ಮೂಲಕ ಅರಿಯಬಹುದಾಗಿದೆ. ಹಾಗೂ ಅವುಗಳು ಇಂದಿಗೂ ನಾಯಕ ಅರಸುಮನೆತನಗಳವರಲ್ಲಿ ಉಳಿದುಬಂದಿರುವುದು ಆ ಆಚರಣೆಗಳ ಜೀವಂತಿಕೆಯ ಲಕ್ಷಣವಾಗಿದೆ.

## ೪.೧ ಕುಟುಂಬ ವ್ಯವಸ್ಥೆ

ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಕೂಡಿಬಾಳುವ ಕುಟುಂಬಗಳೇ ಹೆಚ್ಚು ಇದ್ದವು. ಹೀಗಾಗಿ ಅವರು ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಒಪ್ಪಿಕೊಂಡಂತೆ ಕಂಡರೂ ವಿಶಿಷ್ಟ ಹಾಗೂ ತುಂಬಾ ಸಂಕೀರ್ಣತೆಯುಳ್ಳದಾಗಿತ್ತು. ಅರಸನೇ ಕುಟುಂಬದ ಯಜಮಾನ. ಈತ ಇಡೀ ರಾಜ್ಯದ ಯಜಮಾನನೂ

ಹೌದು. ಹೀಗಾಗಿ ರಾಜ್ಯದ ಆಗುಹೋಗುಗಳೊಂದಿಗೆ ದಾಂಪತ್ಯ ಕ್ಷೇಮ, ಸಂತಾನೋತ್ಪತ್ತಿ, ಮಾತೃ ಪ್ರೇಮ, ಪಿತೃ ವಾತ್ಸಲ್ಯ, ಮಕ್ಕಳ ಪಾಲನೆ-ಪೋಷಣೆ, ಮಾತೃ ಪ್ರೇಮ, ಸಹಕಾರ, ಸ್ನೇಹ, ಅನುಕಂಪ, ತ್ಯಾಗ ಮುಂತಾದ ಭಾವನೆಗಳು ಹಾಗೂ ಗುಣಾದರ್ಶಗಳು ರಾಜನಲ್ಲಿರಬೇಕಾಗಿತ್ತು. ಹಾಗೂ ಪ್ರಭುತ್ವವನ್ನು ಸಮಚಿತ್ತರಾಗಿ ನಿರ್ವಹಿಸಬೇಕಾಗಿತ್ತು. ಕುಟುಂಬದಲ್ಲಿ ಅನೇಕ ಭಾವನಾತ್ಮಕ ಕ್ರಿಯೆಗಳು ಜರುಗುತ್ತವೆ. ಕುಟುಂಬದ ಪ್ರತಿಷ್ಠೆಯೊಂದಿಗೆ ಸಾಮೂಹಿಕ ಒಳಿತನ್ನು ಬಯಸುವುದು ಹಾಗೂ ಸುಖ ದುಃಖಗಳಲ್ಲಿ ಪಾಲ್ಗೊಳ್ಳುವುದು ಪ್ರಮುಖವಾಗಿತ್ತು.

ನಾಯಕ ಅರಸರು ಎಲ್ಲಾ ಅರಸರಂತೆ ಅನೇಕ ಪತ್ನಿಯರನ್ನು ಹೊಂದುವುದು ಸಾಮಾನ್ಯವಾಗಿತ್ತು. ಹೀಗಾಗಿ 'ರಾಜನಾಂ ಬಹುವಲ್ಲಭಾಃ' ಎಂಬ ಸೂಕ್ತಿ ಪ್ರಚಲಿತವಾದುದು. ಕಾರಣ ಅಂದು ಮೇಲು ಸ್ತರದಲ್ಲಿದ್ದ ಇವರು ಹೆಚ್ಚು ಪತ್ನಿಯರನ್ನು ಹೊಂದುವುದು ಪೌರುಷದ ಸಂಕೇತವಾಗಿರಲೂಬಹುದು. ಕೆಲವು ಸಲ ಹೆಣ್ಣಿನ ಮೇಲಿನ ಅವರ ವ್ಯಾಮೋಹವೂ ಕಾರಣವಾಗಿರಬಹುದು. ಮನಸ್ಸಿನ ವ್ಯಭಿಚಾರವನ್ನು ಹತ್ತಿಕ್ಕಿಕೊಳ್ಳಲು ಅನೇಕ ಹೆಂಡಂದಿರನ್ನು ಮದುವೆಯಾಗುತ್ತಿದ್ದರು. ಕೆಲವೊಮ್ಮೆ ಹೆಂಡತಿ ಬಂಜೆಯಾದರೆ ರಾಜ್ಯಕ್ಕೆ ಹಕ್ಕುದಾರರ ಕೊರತೆಯಾಗುವುದೆಂಬ ಯೋಚನೆಯೂ ಇದ್ದಿರಬಹುದು.[೧]

ವಿಜಯನಗರಕ್ಕೆ ಭೇಟಿ ನೀಡಿದ ಅಬ್ದುಲ್ ರಜಾಕ್, ನ್ಯೂನಿಜ್ ಹಾಗೂ ಪೋರ್ಚುಗೀಸ್ ಪ್ರವಾಸಿ ಬಾರ್ಬೋಸಾರು ತಮ್ಮ ಬರವಣಿಗೆಯಲ್ಲಿ ಬಹುಪತ್ನಿತ್ವದ ಕುರಿತಾಗಿ ಹೇಳುತ್ತಾರೆ. ಅಬ್ದುಲ್ ರಜಾಕನು ದೇಶದಲ್ಲಿ ಎಲ್ಲಿಯಾದರೂ ಸರಿಯೇ ರೂಪವತಿಯಾದ ಹುಡುಗಿ ಇದ್ದಾಳೆಂದು ಗೊತ್ತಾದರೆ ಆಕೆಯ ತಂದೆ-ತಾಯಿಗಳ ಒಪ್ಪಿಗೆಯನ್ನು ಪಡೆದು ಕೂಡಲೇ ವೈಭವಯುತವಾಗಿ ಕರೆತಂದು ಅಂತಃಪುರಕ್ಕೆ ಸೇರಿಸಿಕೊಳ್ಳುತ್ತಾರೆ. ಅಂದಿನಿಂದ ಆಕೆಯನ್ನು ಯಾರೂ ನೋಡುವಂತಿಲ್ಲ. ಅಂತಃಪುರದಲ್ಲಿ ಅತ್ಯುತ್ತಮವಾದ ಗೌರವ ದೊರೆಯುತ್ತದೆ[೨] ಎಂದು ಹೇಳುತ್ತಾನೆ. ನ್ಯೂನಿಜ್ ಬಹುಪತ್ನಿತ್ವವನ್ನು ಕುರಿತು ಹೇಳುತ್ತಾ "ಹೆಚ್ಚು ಹೆಂಗಸರನ್ನು ಮದುವೆಯಾಗುವುದು ರಾಜನಿಗೆ ದೊಡ್ಡ ಪ್ರತಿಷ್ಠೆಯಾಗಿತ್ತು. ಹೀಗಾಗಿ ಅರಸರು ಹೆಚ್ಚು ಮಡದಿಯರನ್ನು ಹೊಂದಿರಬೇಕು.[೩]

ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಪ್ರಮುಖ ಮನೆತನಗಳಾದ ಚಿತ್ರದುರ್ಗ, ಸುರಪುರಗಳಲ್ಲಿ ಕನಿಷ್ಟವೆಂದರೆ ಒಬ್ಬೊಬ್ಬ ರಾಜನಿಗೆ ಇಬ್ಬರು ಹೆಂಡಂದಿರಿದ್ದರು. ಗರಿಷ್ಠವೆಂದರೆ ಚಿತ್ರದುರ್ಗದ ಅರಸ ಇಮ್ಮಡಿ ಮದಕರಿನಾಯಕನಿಗೆ ೩೦ ಜನ[೪], ಬಿಚ್ಚುಗತ್ತಿ ಭರಮಣ್ಣನಾಯಕನಿಗೆ ೩೩ ಜನ ಹೆಂಡಂದಿರಿದ್ದರು.[೫] ಸುರಪುರದ ಅರಸ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೭೭೩-೧೮೦೨)ನಿಗೆ ೧೬ ಜನ ಹೆಂಡಂದಿರಿದ್ದರು.[೬] ಈತನೇ ಸುರಪುರದಲ್ಲಿ ಅತಿ ಹೆಚ್ಚು ಸ್ತ್ರೀಯರನ್ನು ಮದುವೆಯಾದವನು. ಆದರೆ ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ,

ಮತ್ತೊಂದು, ಹರತಿ ಮನೆತನಗಳ ಅರಸರು ಹೆಚ್ಚು ಪತ್ನಿಯರನ್ನು ಹೊಂದಿರಲಿಲ್ಲ. ಕಾರಣ ಅವರ ರಾಜ್ಯವಿಸ್ತಾರ ಹಾಗೂ ಮನೆತನದ ಆರ್ಥಿಕತೆಯು ಕಾರಣವಾಗಿರಬಹುದಾಗಿದೆ.

ಈ ಅರಸರು ಕುಟುಂಬದಲ್ಲಿ ಪತ್ನಿಯರು, ಮಕ್ಕಳು, ಹಿರಿಯರು, ಆಳುಕಾಳುಗಳು, ದಾಸಿಯರು, ಆಯಗಾರರು, ಕೆಲಸಗಾರರು, ಇತರ ನೌಕರರು ಹೀಗೆ ಇವರೆಲ್ಲರನ್ನು ನಿಭಾಯಿಸಿಕೊಂಡು ಹೋಗಬೇಕಾಗಿತ್ತು. ಹಾಗೂ ಕುಟುಂಬದಲ್ಲಿ ಯಾವುದೇ ಕಿತ್ತಾಟಗಳಾಗದಂತೆ ಎಲ್ಲಾ ಅರಸಿಯರನ್ನು ಸಮಾನವಾಗಿ ನೋಡಿಕೊಳ್ಳುತ್ತಿದ್ದರು. ಬೃಹತ್ ಅರಮನೆಗಳನ್ನು ಕಟ್ಟಿಕೊಂಡು ರಾಜಪರಿವಾರವೆಲ್ಲ ಒಂದೇ ಅರಮನೆಯಲ್ಲಿ ವಾಸಿಸುವಂತೆ ಮಾಡುವುದಲ್ಲದೆ ಕುಟುಂಬದ ಶಿಸ್ತು, ವಿಧಿ-ವಿಧಾನಗಳು, ರೀತಿ-ರಿವಾಜುಗಳನ್ನು ನೋಡಿಕೊಂಡು ಹೋಗುವ ಜವಾಬ್ದಾರಿಯೂ ಅರಸನ ಮೇಲಿತ್ತು.

ಇಂದಿನ ಯುವರಾಜ ನಾಳಿನ ಆ ರಾಜ್ಯದ ಅರಸನಾಗುವುದರಿಂದ ಆತನನ್ನು ಕುಟುಂಬವೇ ಮುಂದಿನ ಜೀವನಕ್ಕೆ ಅಣಿಗೊಳಿಸುವುದಾಗಿತ್ತು. ಹೀಗಾಗಿ ಆ ಮಗುವನ್ನು ಮುಂದಿನ ರಾಜಕೀಯ ಜೀವನಕ್ಕೆ ದೀಕ್ಷೆ ಕೊಡುವ ಕೆಲಸದೊಂದಿಗೆ ಕುಟುಂಬದ ದೈನಂದಿನ ವ್ಯವಹಾರಗಳಲ್ಲಿ ಅರಸನ ಪಟ್ಟದರಾಣಿಯ ಪಾತ್ರವೂ ಪ್ರಮುಖವಾಗಿತ್ತು. ಅರಮನೆಯಲ್ಲಿ ಸವತಿಯರೊಂದಿಗೆ, ಮೈದುನನ ಪತ್ನಿಯರೊಂದಿಗೆ, ಮಕ್ಕಳೊಂದಿಗೆ, ಆಳು ಕಾಳುಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಹೋಗಬೇಕಾಗಿತ್ತು. ಹಾಗೂ ಅರಸರಿಗೆ ಒಂದು ಮಹತ್ವದ ಸ್ಥಾನಮಾನ, ಗೌರವ, ರಾಜಮರ್ಯಾದೆ, ಗಂಭೀರತೆ, ಗೌರವಾದರ ಸಿಗಲು ರಾಣಿಯರ ಸ್ಥಿತಪ್ರಜ್ಞತೆಯು ಕಾರಣವಾಗುತ್ತಿತ್ತು. ಇಡೀ ಕೌಟುಂಬಿಕ ವ್ಯವಹಾರಗಳನ್ನು ಜವಾಬ್ದಾರಿಯುತವಾಗಿ ನಿರ್ವಹಿಸಬೇಕಾಗಿದ್ದಿತು. ಹೀಗಾಗಿ ಒಬ್ಬ ಯಶಸ್ವಿ ಅರಸನ ಹಿಂದೆ ರಾಣಿಯು ಇರುತ್ತಾಳೆ ಎನ್ನುವ ಮಾತು ನಿಜವಾಗಿತ್ತು. ರಾಜನಿಗೆ ಸರಿಯಾದ ಸಮಯದಲ್ಲಿ ಸರಿಯಾದ ನಿರ್ಧಾರ ತೆಗೆದುಕೊಳ್ಳುವಂತೆ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ರಾಜ್ಯದ ಎಲ್ಲಾ ಹಕ್ಕುಬಾಧ್ಯತೆಗಳ ಮಾಹಿತಿ ಇರುವುದರೊಂದಿಗೆ ಅರಸನ ಪ್ರತಿಯೊಂದೂ ಸಮಾಲೋಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದಳು.

ಅರಸ ತೀರಿದ ಸಂದರ್ಭದಲ್ಲಿ ಭಾವೀ ಪಟ್ಟಾಧಿಕಾರದ ಕುರಿತಾಗಿ ಈಕೆಯ ಪಾತ್ರ ಪ್ರಮುಖವಾಗಿರುತ್ತಿತ್ತು. ಚಿತ್ರದುರ್ಗದ ಹಿರೇ ಮದಕರಿನಾಯಕ (ಕ್ರಿ.ಶ. ೧೭೨೧-೧೭೪೮) ತೀರಿದ ಬಳಿಕ ಆತನ ಮಗ(ಇಮ್ಮಡಿ) ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ. ೧೭೪೮-೧೭೫೪)ನಿಗೆ ಪಟ್ಟವಾಗಿ, ಈತ ಕೆಲವೇ ದಿನಗಳಲ್ಲಿ ತೀರಿಕೊಂಡಾಗ, ಈತನ ತಾಯಿ ಗಂಡಿಲ ಓಬವ್ವನಾಗತಿಯು ತೊದಲು ಭರಮಪ್ಪನಾಯಕನ ಮಗ ರಾಜಾ ವೀರಮದಕರಿನಾಯಕನನ್ನು ಪಟ್ಟಕ್ಕೆ ಕೂಡಿಸಿದಳು. ರಾಜಾವೀರ ಮದಕರಿನಾಯಕನಿಗೆ ೧೨ ವರ್ಷವಾಗಿದ್ದರಿಂದ ತಾನೇ ಎರಡುವರ್ಷಗಳ ಕಾಲ ರಾಜ್ಯಭಾರ ಮಾಡಿರುವುದನ್ನು ನೋಡಿದಾಗ, ಆಕೆ ತನ್ನ ವಂಶದ ರಾಜಕೀಯ ಅಧಿಕಾರವನ್ನು ಮುಂದುವರೆಸುವ ಇರಾದೆಯನ್ನು ಸೂಚಿಸುತ್ತದೆ. ಅದೇ ರೀತಿ ಸುರಪುರದ ರಾಜಾ ಕೃಷ್ಣಪ್ಪನಾಯಕ ಕ್ರಿ.ಶ. ೧೮೪೩ರಲ್ಲಿ ಮರಣ ಹೊಂದಿದ ತರುವಾಯ ಮಗ ನಾಲ್ವಡಿ

ವೆಂಕಟಪ್ಪನಾಯಕ ಏಳು ವರ್ಷದವನಾಗಿದ್ದ. ಹೀಗಾಗಿ ರಾಣಿ ಈಶ್ವರಮ್ಮ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಳ್ಳಬೇಕಾಯಿತು.

ಕನಕಗಿರಿಯ ಅರಸ ರಂಗಪ್ಪನಾಯಕ ತೀರಿದ ಮೇಲೆ, ಆತನಿಗೆ ಸಂತಾನವಿಲ್ಲದ್ದಕ್ಕಾಗಿ, ಆತನ ರಾಣಿ ತನ್ನ ಮೈದುನ ಸೋಮಸಾಗರದ ಕನಕಪ್ಪನಾಯಕನ ಮಗ ವುಡಸಿನಾಯಕನನ್ನು ಪಟ್ಟಕ್ಕೆ ಕೂಡಿಸಿ ತಾನೇ ಅಧಿಕಾರ ನಡೆಸಿದಳು. ವುಡಸಿನಾಯಕನ ಮರಣದ ನಂತರ ಆತನ ಮಗ ರಾಜಾ ರಂಗಪ್ಪನಾಯಕ ಅಪ್ರಾಪ್ತನಾಗಿದ್ದರಿಂದ ರಾಣಿ ಗೌರಮ್ಮ ಅಧಿಕಾರ ನಡೆಸಿದಳು. ಗುಡಗುಂಟಿಯ ಅರಸ ರಾಜಾ ಜಡಿಸೋಮಪ್ಪ ತೀರಿಕೊಂಡ ನಂತರ ಮಗ ತಿಪ್ಪರಾಜ ಜಡಿಸೋಮನಾಯಕ ಚಿಕ್ಕವನಿದ್ದ ಕಾರಣ ರಾಣಿ ಗೌರಮ್ಮ ಆಡಳಿತದ ಸೂತ್ರ ಹಿಡಿದಳು.[೭]

ಇವರ ಕುಟುಂಬದಲ್ಲಿ ತಂದೆ ತಾಯಿಗಳಿಗೆ ಪ್ರಮುಖ ಸ್ಥಾನವಿತ್ತು. ಅರಸ ಯಾವುದೇ ಶುಭಕಾರ್ಯಗಳಿಗೆ ತೆರಳುವಾಗ ತಂದೆ-ತಾಯಿಗಳ ಆಶೀರ್ವಾದವನ್ನು ಪಡೆದುಕೊಂಡು ಹೋಗುತ್ತಿದ್ದನು. ಮಾತೃದೇವೋಭವ, ಪಿತೃದೇವೋಭವ ಎಂಬ ನಂಬಿಕೆ ಇತ್ತು. ಅವರ ಪ್ರತಿ ಮಾತಿಗೂ ಮಾನ್ಯತೆ ಹಾಗೂ ಗೌರವವಿರುತ್ತಿತ್ತು. ಸುರಪುರದ ವೆಂಕಟಪ್ಪನಾಯಕ (ಕ್ರಿ.ಶ. ೧೭೪೭-೧೭೫೨)ನು ಪಾಂಡಿಚೇರಿ ಕಾಳಗಕ್ಕೆ ತೆರಳುವಾಗ ತಾಯಿ ರುಕಮವ್ವಳನ್ನು ಭೇಟಿಯಾಗಿ ಆಶೀರ್ವಾದವನ್ನು ಪಡೆಯುತ್ತಾನೆ. ಮುಂದೆ ಕಾಳಗದಿಂದ ಮರಳಿ ಬಂದು ಸಂಸ್ಥಾನದ ವಿಸ್ತರಣೆಗಾಗಿ ತೆರಳಬೇಕಾದಾಗಲೂ ತಾಯಿಯ ಆಶೀರ್ವಾದ ಪಡೆದನಲ್ಲದೆ, ತನ್ನ ಅನುಪಸ್ಥಿತಿಯಲ್ಲಿ ತಾಯಿಯ ಅಪ್ಪಣೆಯ ಮೇರೆಗೆ[೮] ತನ್ನ ಚಿಕ್ಕಪ್ಪ ರಮಣಪ್ಪನಾಯಕನಿಗೆ ರಾಜ್ಯದ ಕಾರಭಾರವನ್ನೆಲ್ಲಾ ಒಪ್ಪಿಸಿ ಹೋಗಿದ್ದನು. ರಮಣಪ್ಪನಾಯಕನು ಅಷ್ಟೇ ಶಾಂತಸ್ವಭಾವ ಹಾಗೂ ಸಾಧುವೃತ್ತಿಗೆ ಹೆಸರಾಗಿದ್ದನು. ನ್ಯಾಯ ನೀತಿಗಾಗಿ ಸಂಸ್ಥಾನದ ಜನರ ಹಾಗೂ ಸುಭೇದಾರರ ಪ್ರೀತಿಗೆ ಪಾತ್ರನಾಗಿದ್ದನು.[೯] ಈತನ ನ್ಯಾಯದ ನೆನಪಿಗಾಗಿ ಸುರಪುರದಲ್ಲಿ ರಮಣಪ್ಪನಾಯಕನ ನ್ಯಾಯಕಟ್ಟೆ ಎಂದು ಒಂದು ಕಟ್ಟೆಯನ್ನು ಕಟ್ಟಿರುವುದನ್ನು ಕಾಣಬಹುದಾಗಿದೆ. ಆನೆಗೊಂದಿಯ ಅರಸ ತಿರುಮಲ ದೇವರಾಯನು ತನ್ನ ತಂದೆ ನರಸಿಂಹರಾಜು ಹಾಗೂ ತಾಯಿಯಾದ ಕೇಶಮ್ಮನವರ ಆಶೀರ್ವಾದವನ್ನು ಪಡೆದು ಶುಭದಿನ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು.[೧೦] ಹೀಗೆ ಇವರ ಕುಟುಂಬದಲ್ಲಿ ಹಿರಿಯರಿಗೆ ಗೌರವದ ಸ್ಥಾನಮಾನಗಳನ್ನು ಕಲ್ಪಿಸಿದ್ದರು.

ಮಕ್ಕಳ ಪಾಲನೆ ಪೋಷಣೆಯಲ್ಲಿ ಅರಸ-ರಾಣಿಯರ ಪಾತ್ರವೂ ಪ್ರಮುಖವಾಗಿತ್ತು. ಸುರಪುರದ ರಾಣಿ ಈಶ್ವರಮ್ಮ ತನ್ನ ಮಗ ನಾಲ್ವಡಿ ವೆಂಕಟಪ್ಪನಾಯಕನ ಮೇಲೆ ಕ್ಷಣಕ್ಕೊಮ್ಮೆ ಸಿಡಿಮಿಡಿಗೊಳ್ಳುತ್ತಿದ್ದಳು. ಕಾರಣ ಮಗ ರೆಸಿಡೆಂಟ್ ಮೇಡೋಸ್ ಟೇಲರ್‌ನ ಮಾತನ್ನೇ ಬೆಂಬಲಿಸುತ್ತಿದ್ದನು. ರಾಣಿಯ ಬಂಡಾಯದಲ್ಲಿ ಭಾಗವಹಿಸಲು ಒಪ್ಪಲಿಲ್ಲ. ಇದರಿಂದ ಮಗನನ್ನು ನಂಬದಾದಳು. ಹೀಗಾಗಿ ಆತನ

ಆರೈಕೆ ಸರಿಯಾಗಿ ಆಗಲಿಲ್ಲ. ವೆಂಕಟಪ್ಪನಾಯಕ ದಿನಗಟ್ಟಲೇ ಕಾಡಿಗೆ ಬೇಟೆಗೆಂದು ಹೋಗುವುದು, ಮರಳಿ ಬಂದ ಮೇಲೆ ನಿಯಂತ್ರಣ ತಪ್ಪುವಷ್ಟು ಪಾನಮತ್ತನಾಗುವುದು[೧೧] ದಿನನಿತ್ಯ ನಡೆಯಿತು. ನೀತಿ ಹೇಳುವ ತಾಯಿ, ನಡೆ ಕಲಿಸುವ ತಂದೆಯಿಂದ ತಬ್ಬಲಿಯಾದುದೇ ಈತ ಕುಡಿತದ ವ್ಯಸನದಲ್ಲಿ ಬೀಳಲು ಕಾರಣವಾಯಿತು.

ಕುಟುಂಬದಲ್ಲಿ ರಾಣಿಯರ ಸ್ವಂತ ನಿರ್ಣಯಗಳಿಗೆ ಕೆಲವು ಸಲ ಯಾವುದೇ ವಿರೋಧಗಳು ಕಂಡುಬರಲಿಲ್ಲವೆನಿಸುತ್ತದೆ. ಚಿತ್ರದುರ್ಗದ ಅರಸ ಒಂದನೆಯ ಕಸ್ತೂರಿ ರಂಗಪ್ಪನಾಯಕನ (ಕ್ರಿ.ಶ. ೧೬೦೩-೧೬೫೨) ನಾಗತಿ ಕಾಟವ್ವ ವೀರಶೈವಧರ್ಮವನ್ನು ಸ್ವೀಕರಿಸಿ,[೧೨] ಪ್ರತ್ಯೇಕ ಅರಮನೆಯಲ್ಲಿ ವಾಸವಾಗಿದ್ದಳು. ಇದಕ್ಕೆ ಕುಟುಂಬದಲ್ಲಿ ಅರಸನಾಗಲಿ, ಇಲ್ಲವೆ ಕುಟುಂಬದ ಸದಸ್ಯರಾಗಲಿ ವಿರೋಧಿಸಲಿಲ್ಲ ವೆಂಬುದು ಗಮನಾರ್ಹ.

ಚಿತ್ರದುರ್ಗದ ಅರಸರು ಬೇಡರಾದಾಗ್ಯೂ ಮೊದಲಿನಿಂದಲೂ ಬ್ರಾಹ್ಮಣ ಮತಾವಲಂಬಿಗಳು. ಬ್ರಾಹ್ಮಣರನ್ನೇ ತಮ್ಮ ಗುರುಗಳನ್ನಾಗಿ ಒಪ್ಪಿಕೊಂಡು ಅವರನ್ನು ಅನುಸರಿಸುತ್ತಿದ್ದರು.[೧೩] ಇದರಂತೆ ಇವರಿಗೆ ಯಾವಾಗಲೂ ಬ್ರಾಹ್ಮಣರೇ ಪ್ರಧಾನಿಗಳಾಗಿದ್ದರು. ಸುರಪುರ, ಆನೆಗೊಂದಿ, ದೇವದುರ್ಗ, ಗುಡಗುಂಟಿ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಅರಸುಮನೆತನದವರೂ ಅನುಸರಿಸಿದರು. ಕುಟುಂಬದಲ್ಲಿ ನಡೆಯುವ ಶುಭಕಾರ್ಯಗಳಿಗೆ ಇವರ ನಿರ್ಣಯವೇ ಅಂತಿಮವಾಗಿರುತ್ತಿತ್ತು. ರಾಜನಿಂದ ಹಿಡಿದುಕೊಂಡು ಕುಟುಂಬದ ಸದಸ್ಯರುಗಳೆಲ್ಲಾ ಇವರ ಮಾತನ್ನು ನಂಬುತ್ತಿದ್ದರು. ಅಲ್ಲದೆ ಈ ಮನೆತನಗಳ ರಾಜಗುರುಗಳು ಈ ಕುಟುಂಬದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಅರಸರು ಹಾಗೂ ಅವರ ಕೌಟುಂಬಿಕ ಪರಿವಾರ ನೀತಿವಂತರಾಗಿ, ಒಳ್ಳೆಯ ನೈತಿಕ ಜೀವನ ನಡೆಸುವಂತೆ ನೋಡಿಕೊಳ್ಳುತ್ತಿದ್ದರಲ್ಲದೆ, ಅರಸುಮನೆತನದವರ ಬಗ್ಗೆ ವಿಶ್ವಾಸ ಹೊಂದಿರುತ್ತಿದ್ದರು. ಅರಸರ ಕುಟುಂಬದ ಕಾರ್ಯಕ್ರಮಗಳೆಲ್ಲ ಇವರ ಉಪಸ್ಥಿತಿಯಲ್ಲಿಯೇ ಜರುಗುತ್ತಿದ್ದವು.

ಒಂದು ನಾಯಕ ಅರಸುಮನೆತನ ಇನ್ನೊಂದು ನಾಯಕ ಅರಸುಮನೆತನದೊಂದಿಗೆ ಸಾಮರಸ್ಯವನ್ನು ಹೊಂದಿರುವುದುಂಟು. ಕೆಲವು ಬಾರಿ ಮಾತ್ರ ರಾಜ್ಯದ ವಿಸ್ತರಣೆಯಲ್ಲಿ ಅವರಲ್ಲಿ ವೈಷಮ್ಯತೆಗಳಿರುತ್ತಿದ್ದವು. ಆದರೆ ಒಂದು ಕುಟುಂಬದವರು ಇನ್ನೊಂದು ಅರಸುಮನೆತನಕ್ಕೆ ಹೋದರೆ, ಆ ಕುಟುಂಬದವರು ಬಂದ ಅತಿಥಿಗಳನ್ನು ಗೌರವದಿಂದ ಕಾಣುತ್ತಿದ್ದರು.

ಆನೆಗೊಂದಿ ಅರಸರನ್ನು ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಅರಸುಮನೆತನದವರು ಪೂಜ್ಯಭಾವನೆಯಿಂದ ಕಾಣುತ್ತಿದ್ದರು. ಕಾರಣ ತಮ್ಮ ಮನೆತನಕ್ಕಿಂತ ಪೂರ್ವದ ನಾಯಕ ಜನಾಂಗದ ಅರಸುಮನೆತನವೆಂಬ ಹಾಗೂ ಆನೆಗೊಂದಿ ಶ್ರೀರಾಮನ ಪಾದಸ್ಪರ್ಶವಾದ

ಕ್ಷೇತ್ರವೆಂಬ ಮನೋಭಾವನೆ ಅವರಲ್ಲಿತ್ತು. ಹೀಗಾಗಿ ಆನೆಗೊಂದಿ ಅರಸರು ತಮ್ಮಲ್ಲಿಗೆ ಬಂದರೆ ಪಾದಚಾರಿಗಳಾಗಿ ಅಗಸಿಯ ಬಾಗಿಲದವರೆಗೆ ಹೋಗಿ, ಸಾಷ್ಟಾಂಗ ನಮನಗೈದು ಕುದುರೆಯನ್ನು ಹಿಡಿದು ಊರೊಳಗೆ ಕರೆತರುವ ರೂಢಿಯಿತ್ತು.[೧೪] ಇಂದಿಗೂ ಇದನ್ನು ಅನುಸರಿಸುತ್ತಾರೆ.

ರಾಜಕೀಯ ಅಧಿಕಾರಕ್ಕಾಗಿ ಈ ಮನೆತನಗಳಲ್ಲಿ ಕುಟುಂಬಗಳಲ್ಲಿ ಕಚ್ಚಾಟಗಳಾದದ್ದು ಬಹಳ ವಿರಳ. ಮನೆತನದ ಹಿರಿಯರು ಅಧಿಕಾರ ವಹಿಸಿಕೊಂಡರೆ ಇವರ ವಿರೋಧಗಳು ಇರುತ್ತಿರಲಿಲ್ಲ. ಆದರೆ ಸುರಪುರದಲ್ಲಿ ಗಡ್ಡಿಪಿಡ್ಡನಾಯಕ(ಕ್ರಿ.ಶ. ೧೬೩೬-೧೬೬೬)ನು ಪಿತ್ರಾರ್ಜಿತ ಆಸ್ತಿಯಲ್ಲಿ ತನಗೆ ಪಾಲು ಬರಬೇಕೆಂದು ತನ್ನ ಅಣ್ಣನಾದ ಗುಡಗುಂಟಿಯ ಗಡ್ಡಿಲಿಂಗನಾಯಕನ ಮೇಲೆ ದಾವೆ ಹೂಡಿದ. ತಮ್ಮ ತಂಗಿಯ ಮಧ್ಯಸ್ಥಿಕೆಯಿಂದ ಕಕ್ಕೇರಿ, ಮಿರಾಸಿ ಮತ್ತು ಬೈಚಬಾಳ ಮಾಮಲೆಗಳನ್ನು ಸಮನಾಗಿ ಎರಡು ಭಾಗ ಮಾಡಿ ಹಂಚಿಕೊಂಡ. ಕೈಫಿಯತ್ತಿನ ಹೇಳಿಕೆಯೊಂದಿಗೆ ಕ್ರಿ.ಶ. ೧೬೬೪ರಲ್ಲಿ ಹೊರಡಿಸಿದ ಅಲಿ ಆದಿಲ್ ಷಾಹನ ಸನದು ಇದನ್ನು ದೃಢೀಕರಿಸುತ್ತದೆ.[೧೫] ರಾಜಕೀಯ ಅನುಕೂಲಕ್ಕಾಗಿ, ಅರಸ ತನ್ನ ತಮ್ಮಂದಿರನ್ನೋ, ಇಲ್ಲವೇ ಮಕ್ಕಳನ್ನೋ ರಾಜ್ಯದ ಆಯಕಟ್ಟಿನ ಸ್ಥಳಗಳಿಗೆ ಸೇನಾ ಉಸ್ತುವಾರಿ ನೋಡಿಕೊಳ್ಳಲು ನೇಮಿಸುತ್ತಿದ್ದರು.

ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕ(ಕ್ರಿ.ಶ. ೧೬೮೯-೧೭೨೧)ನು ತನ್ನ ಮಕ್ಕಳಾದ ಕಾಟಪ್ಪ ನಾಯಕನನ್ನು ದೊಡ್ಡೇರಿಗೆ, ದಂಡಿನ ಜಂಪಣ್ಣನಾಯಕರನ್ನು ಹೊಸದುರ್ಗಕ್ಕೆ, ಭರಮಣ್ಣನಾಯಕನನ್ನು ಕಣಕುಪ್ಪೆಗೆ ಉಸ್ತುವಾರಿಗಾಗಿ ನೇಮಿಸಿದ್ದನು.[೧೬] ಸುರಪುರದ ಪೀತಾಂಬರ ಬಹರಿ ಪಿಡ್ಡನಾಯಕ(ಕ್ರಿ.ಶ. ೧೬೮೭-೧೭೨೬)ನು ತನ್ನ ಸಹೋದರ ಕೃಷ್ಣಪ್ಪನಾಯಕನನ್ನು ತಾಡಿಮರಿಗೆ ಕಳುಹಿಸಿಕೊಟ್ಟನು.[೧೭] ದೇವದುರ್ಗದ ವಾಸುದೇವನಾಯಕನು ತನ್ನ ಮಕ್ಕಳನ್ನು ದೇವದುರ್ಗದ ಅಧೀನದ ಗ್ರಾಮಗಳ ಉಸ್ತುವಾರಿಗಾಗಿ, ಸಣ್ಣ ಕಿಲಚನಾಯಕನನ್ನು ಅರಕೇರಿಗೆ, ವೆಂಕಟಪ್ಪನಾಯಕನನ್ನು ಮುಂಡರಗಿಗೆ, ವಾಸುದೇವನಾಯಕನನ್ನು ಜಾಲಹಳ್ಳಿಗೆ, ಕೃಷ್ಣಪ್ಪನಾಯಕನನ್ನು ರಾಮದುರ್ಗಕ್ಕೆ, ರಂಗಪ್ಪನಾಯಕನನ್ನು ಕ್ಯಾದಿಗೇರಿಗೆ, ತಿಮ್ಮಪ್ಪನಾಯಕನನ್ನು ಗಲಗಿಗೆ ನೇಮಕ ಮಾಡುತ್ತಾನೆ.[೧೮]

ಈ ಮನೆತನಗಳ ಕುಟುಂಬಗಳಲ್ಲಿ ಮಕ್ಕಳಿಗೆ ಶಿಕ್ಷಣದ ವ್ಯವಸ್ಥೆಯನ್ನು ಕಲ್ಪಿಸಲಾಗಿರುತ್ತಿತ್ತು. ಗುರುಗಳನ್ನು ನೇಮಕ ಮಾಡಿರುತ್ತಿದ್ದರು. ಸುರಪುರದ ನಾಲ್ವಡಿ ವೆಂಕಟಪ್ಪನಾಯಕನಿಗೆ ಡಾ.ಸೆಲ್ಲರ್ಸ್, ರಾಮರಾವ್‌ವರಿಂದ ಶಿಕ್ಷಣ ಕೊಡಿಸಲಾಗುತ್ತಿತ್ತು.[೧೯] ಉಳಿದ ಮನೆತನಗಳಲ್ಲಿಯೂ ತಮ್ಮ ಅನುಕೂಲಕ್ಕೆ ತಕ್ಕಂತೆ ಶಿಕ್ಷಣವನ್ನು ನೀಡುವ ವ್ಯವಸ್ಥೆ ಮಾಡಿರುತ್ತಿದ್ದರು.

ಅರಸ ಹಾಗೂ ರಾಣಿಯರು ಇಲ್ಲವೆ ಅರಸನ ಬಂಧುಗಳು ಆಪ್ತೇಷ್ಟರು ಕೂಡಿ ಆಟಪಾಟಗಳನ್ನು ಆಡುತ್ತ ಕಾಲ ಕಳೆಯುತ್ತಿದ್ದರು.[೨೦] ಪಗಡೆಯಾಟವನ್ನು ಹೆಚ್ಚಾಗಿ ಆಡುತ್ತಿದ್ದರು. ಕೆಲವು ವೇಳೆ

ಅರಮನೆಯ ಮುಂದಿನ ಆವರಣದಲ್ಲಿ ಹಾವುಗಾರಾಟ, ದೊಂಬರಾಟ, ದಾಸರಾಟ, ಮೋಡಿಕಾರಾಟ ಜರುಗುತ್ತಿದ್ದವು. ಅರಸರ ಕುಟುಂಬ ಪರಿವಾರವೆಲ್ಲ ಅರಮನೆಯ ಮೇಲ್ಭಾಗದಲ್ಲಿ ವೀಕ್ಷಿಸಲು ಕಿಂಡಿಗಳನ್ನು ಮಾಡಿರುತ್ತಿದ್ದರು. ರಾಣಿಯರು ಅಲ್ಲಿ ಕುಳಿತು ಆಟಗಳನ್ನು ವೀಕ್ಷಿಸುತ್ತಿದ್ದರು. ಕಾರಣ ಇವರು ಘೋಷಾ ಪದ್ಧತಿಯನ್ನು ಅನುಸರಿಸುತ್ತಿದ್ದರು. ಸುರಪುರದ ರಾಜಾಕೃಷ್ಣಪ್ಪನಾಯಕನು ಅರಮನೆಯ ಕೌಟುಂಬಿಕ ಪರಿವಾರಕ್ಕೆ ಮನರಂಜನೆಯ ಸಲವಾಗಿ ಸ್ಥಳೀಯ ಹಾಡುಗಾರರನ್ನು ಕರೆಯಿಸಿ ಸಂಗೀತಗೋಷ್ಠಿಗಳನ್ನು ಏರ್ಪಡಿಸುತ್ತಿದ್ದನು.[೨೧]

ಆನೆಗೊಂದಿಯ ಶ್ರೀರಂಗನಾಥ ದೇವಾಲಯದ ಎದುರಿಗೆ ಕಂಡುಬರುವ ಗಗನಮಹಲ್ ಆನೆಗೊಂದಿಯ ಅರಸರು ಹಾಗೂ ಕುಟುಂಬದವರು ಮನರಂಜನೆಯ ಹಾಗೂ ಸಾಹಸಮಯ ಸ್ಪರ್ಧೆಗಳನ್ನು ವೀಕ್ಷಿಸುತ್ತಿದ್ದ ಸ್ಥಳವಾಗಿತ್ತು. ಆ ಗಗನಮಹಲ್‌ನ ಮುಂದೆ ಕೋಳಿಕಾಳಗ, ಟಗರುಕಾಳಗ, ಮಲ್ಲಯುದ್ಧ, ದೃಷ್ಟಿಯುದ್ಧ ಮತ್ತು ದೊಂಬರಾಟದ ಸಾಹಸಗಳು ನಡೆಯುತ್ತಿದ್ದವು. ಇವುಗಳನ್ನು ಅರಸರ ಕುಟುಂಬದವರು ಆಸಕ್ತಿಯಿಂದ ವೀಕ್ಷಿಸುತ್ತಿದ್ದರು.[೨೨]

ಗುಡಗುಂಟಿ ಅರಸರು ಪ್ರತಿವರುಷ ಕಾರಹುಣ್ಣಿಮೆಯಲ್ಲಿ ಅರಮನೆಯ ಕುಟುಂಬದವರಿಗಾಗಿ ಮನರಂಜನೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು.[೨೩] ಈ ಮನೆತನದ ಕುಟುಂಬಗಳಲ್ಲಿ ವಿದುರ ಹಾಗೂ ವಿಧವೆಯರು ಯಾವುದೇ ಶುಭಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ಆದರೂ ಇವರನ್ನು ಕುಟುಂಬದ ಸದಸ್ಯರು ತುಂಬಾ ಗೌರವದಿಂದ ಕಾಣುತ್ತಿದ್ದರು.

ಹೀಗೆ ಒಂದು ಕಾಲಕ್ಕೆ ಅಧಿಕಾರದಲ್ಲಿದ್ದ ನಾಯಕ ಅರಸುಮನೆತನಗಳವರು ಸಮಾಜದಲ್ಲಿ ಶ್ರೇಷ್ಠತೆಯನ್ನು ಪಡೆದುಕೊಂಡಿದ್ದರು. ಕೌಟುಂಬಿಕವಾಗಿ ಸರ್ವರಿಂದ ಗೌರವಿಸಲ್ಪಡುತ್ತಿದ್ದರು. ಆದರೆ ಇಂದು ಅವರು ಆರ್ಥಿಕವಾಗಿ, ರಾಜಕೀಯವಾಗಿ, ದುರ್ಬಲರಾದುದರಿಂದ ಅವರ ಕೌಟುಂಬಿಕ ಸ್ಥಿತಿಗತಿಗಳು ಜನಸಾಮಾನ್ಯರಂತಾದವು. ಇಂದು ಆ ಕುಟುಂಬದವರಲ್ಲಿ ರಾಜಕೀಯ ಅಧಿಕಾರಕ್ಕಾಗಿ, ಇಲ್ಲವೆ ಆಸ್ತಿಯ ಹಂಚಿಕೆಗಾಗಿ ಪರಸ್ಪರ ದ್ವೇಷ, ಅಸೂಯೆ ಮಡುಗಟ್ಟಿರುವುದು ಕಂಡುಬರುತ್ತದೆ. ಅವಿಭಕ್ತ ಕುಟುಂಬಗಳು ಛಿದ್ರವಾಗಿವೆ. ಅಂದಿನ ಕುಟುಂಬದ ಯಜಮಾನ ಇಂದು ಅಧಿಕಾರರಹಿತನಾಗಿದ್ದಾನೆ. ಆರ್ಥಿಕವಾಗಿ ಸಂಕಷ್ಟದಲ್ಲಿದ್ದಾರೆ. ಆದರೆ ಹೈದ್ರಾಬಾದ್ ಕರ್ನಾಟಕ ಭಾಗದ ಸಂಸ್ಥಾನಗಳಾದ ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗದ ಅರಸುಮನೆತನದವರು ಮಾತ್ರ ಆರ್ಥಿಕವಾಗಿ ಸದೃಢರಾಗಿದ್ದು, ರಾಜಕೀಯ ಕ್ಷೇತ್ರದಲ್ಲಿ ಪ್ರವೇಶ ಪಡೆದುಕೊಂಡಿದ್ದಾರೆ. ಈಗ ಅವರವರಲ್ಲಿಯೇ ರಾಜಕೀಯ ಪೈಪೋಟಿ ನಡೆಯುತ್ತಿದೆ. ಸಂಬಂಧಿಗಳೆಂಬ ಭಾವನೆ ದೂರವಾಗುತ್ತಿದೆ. ಇನ್ನೂ ಕೆಲವು ಸಲ ತಮ್ಮ ತಮ್ಮೊಳಗಿನ ರಾಜಕೀಯ ಕಚ್ಚಾಟದಿಂದ ಸಿಗುವ ಸೌಲಭ್ಯಗಳು ಮಣ್ಣು ಪಾಲಾಗುತ್ತಿವೆ. ಆದ್ದರಿಂದ ಇವರು ಇಂದು ಮಾನಸಿಕವಾಗಿ ಒಂದಾಗಿ ಬಾಳಬೇಕಾಗಿದೆ.

## ೪.೨ ವಿವಾಹ ಪದ್ಧತಿ

ವಿವಾಹ ಹಿಂದೂ ಸಂಪ್ರದಾಯದ ಪ್ರಮುಖ ಧಾರ್ಮಿಕ ಸಂಸ್ಕಾರವಾಗಿದೆ. ವಿವಾಹವು ಎರಡು ಜೀವಗಳು ಒಂದುಗೂಡುವ ಜೀವನಾನುಬಂಧವನ್ನು ಶಾಶ್ವತಗೊಳಿಸುವ ಒಂದು ಹಿರಿಯ ಸಂಸ್ಕಾರ. ಇದು ಮುಂದಿನ ಜೀವನವನ್ನು ಪ್ರಾರಂಭಿಸುವುದಕ್ಕೆ ಹಿರಿಯರ ಅಂಗೀಕಾರ, ಮಾನ್ಯತೆ ಪಡೆದುಕೊಳ್ಳುವ ಒಂದು ಸಂಭ್ರಮದ ಸಮಾರಂಭ. ವಿವಾಹ ಸಾಮಾಜಿಕವಾದ ವ್ಯವಸ್ಥೆ. ಹೀಗಾಗಿ ವಿವಾಹವನ್ನು ಶಾಸ್ತ್ರ ವಿಧಿಗೆ ಅನುಗುಣವಾಗಿ ಮಾಡುತ್ತಾರೆ. ಒಂದೊಂದು ಪಂಗಡದಲ್ಲೂ ಒಂದೊಂದು ರೀತಿಯ ವಿವಾಹ ಪದ್ಧತಿಯಿರುತ್ತದೆ.

ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ವಿವಾಹವು ಬಹಳ ವೈಶಿಷ್ಟ್ಯತೆಯಿಂದ ಕೂಡಿರುವುದಲ್ಲದೆ, ಇದೊಂದು ಅತ್ಯಂತ ಪವಿತ್ರವಾದ ಆಚರಣೆಯೆಂದು ಪರಿಗಣಿಸಲ್ಪಟ್ಟಿದೆ. ಇದರ ಆಚರಣೆಗಳಲ್ಲಿ ತಪ್ಪಿದರೆ ಅಮಂಗಳಕರವೆಂಬ ಭಾವನೆ ಇದ್ದುದರಿಂದ ಈ ಮನೆತನಗಳಲ್ಲಿ ವಿವಾಹವನ್ನು ಕಟ್ಟುನಿಟ್ಟಾಗಿ ನೆರವೇರಿಸುವರು.

ಕರ್ನಾಟಕ ನಾಯಕ ಅರಸರು ಸ್ವಜಾತಿ ವಿವಾಹಕ್ಕೆ ಆದ್ಯತೆ ನೀಡಿದ್ದರಲ್ಲದೇ ಗೋತ್ರಗಳ ಪ್ರಕಾರವಾಗಿ ನಡೆಯುತ್ತಿದ್ದರು. ಗೋತ್ರ ನೆಂಟಸ್ತಿಕೆ ಬೆಳೆಸಲು ಅತ್ಯವಶ್ಯಕ. ಗೋತ್ರಗಳು ಒಂದೇ ಆಗಿದ್ದರೆ ಅಣ್ಣ ತಮ್ಮಂದಿರೆಂಬ ಭಾವನೆ ಇದೆ. ಹೀಗಾಗಿ ಒಂದೇ ಗೋತ್ರ(ಬೆಡಗು)ದವರು ವಿವಾಹ ಸಂಬಂಧ ಬೆಳೆಸಲು ಅನರ್ಹರು. ಸಾಮಾನ್ಯ ಬೇಡ ಜನಾಂಗದಲ್ಲಿಯೂ ಈ ಪದ್ಧತಿ ಇದೆ. ಈ ಗೋತ್ರ ವಿಧಾನ ಹಿಂದಿನಿಂದ ಬಂದ ಒಂದು ಸಾಮಾಜಿಕ ಕಟ್ಟಳೆಯಾಗಿದೆ. ಈ ಗೋತ್ರವನ್ನು ನಂಬಲು ಕಾರಣ ಎಲ್ಲ ದೈವಿಕ ಮತಗಳ ಲಕ್ಷಣವಾದ ಪವಿತ್ರತೆಯ ಭ್ರಮೆಯ ಪ್ರತಿಫಲವಾಗಿಯೇ ಶ್ರೇಷ್ಠತೆ, ಶಕ್ತಿ, ಸಾಮರ್ಥ್ಯ, ಕಲೆ, ರಸಿಕತೆ, ಪಾಂಡಿತ್ಯ, ದೈವಭಕ್ತಿ ಮುಂತಾದ ಅರ್ಜಿತ ಗುಣಗಳೂ ವಂಶಪರಂಪರೆಯಲ್ಲಿ ಜನ್ಮಸಿದ್ಧವಾಗಿಯೇ ಬರುವುದು ಎನ್ನುವ ಮತ್ತೊಂದು ಶಂಕೆಯೂ ಮತೀಯರಿಗೆ ಅಂಟಿಕೊಂಡಿತು.[೨೪] ಹೀಗಾಗಿ ಇವರು ತಮ್ಮ ರಕ್ತಸಂಬಂಧಿಗಳೊಂದಿಗೆ ಸಂಬಂಧ ಬೆಳೆಸಿದ್ದಾರೆ.

ಚಿತ್ರದುರ್ಗದವರು ವಾಲ್ಮೀಕಿ ಗೋತ್ರದವರು. ಸುರಪುರ ಮತ್ತು ಗುಡಗುಂಟಿಯವರು ಗೋಸಲದವರು, ಆನೆಗೊಂದಿಯವರು ಸೂರ್ಯಗೋತ್ರದವರು, ಗುಂತಗೋಳದವರು ಭಾರದ್ವಾಜದವರು, ದೇವದುರ್ಗ, ಕನಕಗಿರಿಯವರು ಜಂಪಲದವರು, ಗುಡೇಕೋಟೆ ಮತ್ತು ಜರಿಮಲೆಯವರು ಸೂರ್ಯ ಗೋತ್ರದವರು. ಸುರಪುರದವರು ಮತ್ತು ಗುಡಗುಂಟಿಯವರು ವೈವಾಹಿಕ ಸಂಬಂಧವನ್ನು ಬೆಳೆಸುವಂತಿಲ್ಲ. ಏಕೆಂದರೆ ಅವರು ಗೋಸಲಗೋತ್ರದವರು. ಹೀಗಾಗಿ ಅವರು ದೇವದುರ್ಗ, ಗುಂತಗೋಳ, ಆಂಧ್ರದ ಪ್ಯಾಪಲಿ, ರತ್ನಗಿರಿಗಳೊಂದಿಗೆ ಸಂಬಂಧ ಬೆಳೆಸಿದ್ದಾರೆ. ದೇವದುರ್ಗ ಮತ್ತು ಕನಕಗಿರಿಯವರು ಜಂಪಲದವರಾಗಿರು

ವುದರಿಂದ ತಮ್ಮೊಳಗೆ ವೈವಾಹಿಕ ಸಂಬಂಧವನ್ನು ಬೆಳೆಸುವಂತಿಲ್ಲ. ಚಿತ್ರದುರ್ಗದ ಅರಸರು ರಾಯದುರ್ಗ, ಜರಿಮಲೆ, ಗುಡೇಕೋಟೆ, ಕನಕಗಿರಿ, ಆನೆಗೊಂದಿ, ಮತ್ತೋಡು, ತರೀಕೆರೆ, ಸಿರಾ, ಹರ್ತಿಕೋಟೆ, ನಾಯಕನಹಟ್ಟಿ ಮನೆತನಗಳೊಂದಿಗೆ ಸಂಬಂಧ ಬೆಳೆಸಿದ್ದಾರೆ.[೨೫] ಆನೆಗೊಂದಿಯವರು ಚಿತ್ರದುರ್ಗ, ಆಂಧ್ರಪ್ರದೇಶದ ಅನಂತಪುರ, ಕಡಪ, ಕರ್ನೂಲು, ಚಿತ್ತೂರು, ನೆಲ್ಲೂರು ಹಾಗೂ ಓರಂಗಲ್ಲು, ತಮಿಳುನಾಡಿನ ಮಧುರೈ, ತಂಜಾವೂರು, ಕೊಯಮತ್ತೂರು ಹಾಗೂ ಸೇಲಂ ಜಿಲ್ಲೆಗಳಲ್ಲಿಯ ಸಂಸ್ಥಾನಿಕರ ಮನೆತನಗಳೊಂದಿಗೆ, ಗುಡೇಕೋಟೆ ಅರಸರು ಪ್ಯಾಪಲಿ, ಹೊಸಕೋಟೆ, ಕನಕಗಿರಿ, ಜರಿಮಲೆ, ಚಿತ್ರದುರ್ಗ, ನಾಯಕನಹಟ್ಟಿ ಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದ್ದಾರೆ.[೨೬]

ವೈವಾಹಿಕ ಸಂಬಂಧಗಳಲ್ಲಿ ನಾಯಕ ಅರಸುಮನೆತನಗಳಲ್ಲಿ ಮ್ಯಾಸಬೇಡರು ಮತ್ತು ಊರಬೇಡರು ಎಂಬ ಭೇದವಿರಲಿಲ್ಲವೆಂದು ತಿಳಿದುಬರುತ್ತದೆ. ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ನಾಯಕನ ಹಟ್ಟಿ, ನಾಯಕ ಅರಸರು ಮ್ಯಾಸಬೇಡರು. ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ಇವರು ಊರಬೇಡರು. ಆದರೆ ಇವರೆಲ್ಲರ ಮಧ್ಯೆ ವೈವಾಹಿಕ ಸಂಬಂಧಗಳು ಜರುಗಿವೆ. ಇವರಿಗಿಂತ ಪೂರ್ವದಲ್ಲಿಯೇ ಕುಮ್ಮಟದುರ್ಗದ ಅರಸ ಕಂಪಿಲರಾಯನು ಪುವ್ವಲವಂಶದವನು. ಆದರೆ ಆತನ ರಾಣಿ ಹರಿಯಲಾದೇವಿ ಗುಜ್ಜಲ ವಂಶದವಳು, ಪುವ್ವಲರು ಎಂಬ ಗೋತ್ರ ಮ್ಯಾಸಬೇಡ ರಲ್ಲಿದೆ. ಗುಜ್ಜಲ ಎಂಬ ಗೋತ್ರ ಊರಬೇಡರಲ್ಲಿದೆ. ಆದರೆ ಇವರೀರ್ವರು ವಿವಾಹವಾಗಿದ್ದರು. ಆದರೆ ಸಾಮಾನ್ಯ ಬೇಡರಲ್ಲಿ ಊರಬೇಡರು ಮತ್ತು ಮ್ಯಾಸಬೇಡರ ಮಧ್ಯೆ ವೈವಾಹಿಕ ಸಂಬಂಧಗಳು ಇಂದಿಗೂ ನಡೆಯುವುದಿಲ್ಲ.

ನಾಯಕ ಅರಸರು ಸಾಮಾನ್ಯ ನಾಯಕ(ಬೇಡರು)ರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿರಲಿಲ್ಲ. ನಾಯಕ ಅರಸರೇ ಬೇರೆ, ಸಾಮಾನ್ಯ ಬೇಡರೇ ಬೇರೆ ಎಂಬ ಭಾವನೆ ಇತ್ತು. ಹೀಗಾಗಿ ಸ್ವಜಾತಿಯ ಹಾಗೂ ಅಂತಸ್ತಿಗನುಗುಣವಾಗಿ ಅರಸರ ಮನೆತನಗಳೊಡನೆಯೇ ವಿವಾಹ ಮಾಡಿಕೊಳ್ಳುವುದು ರೂಢಿಯಲ್ಲಿತ್ತು. ಇವರು ಕುಲಾಚಾರ ಪದ್ಧತಿಗೆ ಹೆಚ್ಚು ಮಹತ್ವ ನೀಡಿದ್ದರು. ಆ ಸಂದರ್ಭದಲ್ಲಿ ತಮ್ಮ ಅಧಿಕಾರದ ರಾಜಕೀಯ ಅಂತಸ್ತನ್ನು ಕಾಯ್ದುಕೊಳ್ಳುವುದಲ್ಲದೆ, ತಮ್ಮ ಮನೆತನದ ಗೌರವ ಕಾಪಾಡಿಕೊಂಡು ಬರುವುದು ಅಂದಿನ ಸಮಾಜದಲ್ಲಿ ಅನಿವಾರ್ಯವಾಗಿತ್ತು. ಸಾಮಾನ್ಯರೊಂದಿಗೆ ಸಂಬಂಧ ಬೆಳೆಸಿದರೆ ತಮ್ಮ ಸ್ಥಾನಮಾನಕ್ಕೆ ಧಕ್ಕೆ ಬರುವುದೆಂಬ ಭಾವನೆ ಇತ್ತು.

ಈ ಮನೆತನಗಳಲ್ಲಿ ಕ್ವಚಿತ್ತಾಗಿ ಅನ್ಯಜಾತಿಯವಳನ್ನು ಮದುವೆಯಾದ ಕೆಲ ಪ್ರಸಂಗಗಳಿವೆ. ಅವರನ್ನು ತಾಳೀ ಬಂಧನದ ಸ್ತ್ರೀಯರೆಂದು ಕರೆಯುತ್ತಿದ್ದರು.[೨೭] ಇನ್ನೂ ಕೆಲವು ಕಡೆ ಬಂಗಾರದ ಸ್ತ್ರೀಯರೆಂದು ಕರೆಯುತ್ತಿದ್ದರು. ಈಕೆಯ ಮಕ್ಕಳು ಪಟ್ಟದರಸರಾಗಲು ಅರ್ಹರಾಗಿರುತ್ತಿರಲಿಲ್ಲ ಹಾಗೂ ಈ ಮಕ್ಕಳ

ಸಮಾರಂಭಗಳಲ್ಲಿ ಸಂಬಂಧಿಗಳಾರೂ ಭಾಗಿಯಾಗುತ್ತಿದ್ದಿಲ್ಲ. ಸುರಪುರ ಅರಸ ಹಸರಂಗಿ ಪಾಮನಾಯಕ (ಕ್ರಿ.ಶ. ೧೬೬೬-೧೬೮೭)ನು ಮರಾಠ ಸ್ತ್ರೀಯಳನ್ನು ಮದುವೆಯಾಗಿದ್ದನು. ಆಕೆಯ ಉದರದಲ್ಲಿ ಜಕ್ಕಪ್ಪನಾಯಕನು ಜನಿಸಿದನು. ಆ ಪಾಮನಾಯಕನ ಸ್ವಜಾತಿಯ ಪತ್ನಿಯರಿಗೆ ಮಕ್ಕಳಿರಲಿಲ್ಲ. ಆಗ ಮರಾಠ ಸ್ತ್ರೀಯ ಉದರದಿಂದ ಜನಿಸಿದ ಜಕ್ಕಪ್ಪನಾಯಕನಿಗೆ ಪಟ್ಟ ಸಿಗಲಿಲ್ಲ. ಪಾಮನಾಯಕ ತನ್ನ ತಮ್ಮನ ಮಗನಾದ ಪಿಡ್ಡನಾಯಕನನ್ನು ದತ್ತಕ ಮಗನನ್ನಾಗಿ ಮಾಡಿಕೊಂಡನು.[೨೮] ಸುರಪುರದ ಅರಸ ಇಮ್ಮಡಿ ವೆಂಕಟಪ್ಪನಾಯಕನು ಮುಸ್ಲಿಂ ಸ್ತ್ರೀಯನ್ನು ಮದುವೆಯಾಗಿದ್ದನು. ಆತನ ಮಗ ಶ್ರೀನಿವಾಸನಾಯಕನ ಜಾವಳದ ಕಾರ್ಯಕ್ರಮವಿದ್ದಾಗ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ಅರಸರಾರೂ ಬರಲಿಲ್ಲ. ನಾಯಕನಹಟ್ಟಿಯವರು ಭರ್ಬಿ ಮನೆಗಳಲ್ಲಿ ಬಂಧುತ್ವ ಮಾಡಿರುತ್ತಾರೆಂಬ ವಾರ್ತೆ ಕೇಳಿ ಅವರನ್ನು ಗುಡೇಕೋಟೆಯವರು, ಹೊಸಕೋಟೆಯವರು, ಜರಿಮಲೆಯವರು ತಿರಸ್ಕರಿಸುತ್ತಾರೆ.[೨೯] ಕನಕಗಿರಿ ಅರಸರ ಸಂಬಂಧಿಗಳಾದ ಗೋಡಿನಾಳ ನಾಯಕರು ಕಟ್ಟೇಮನೆಯವರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ್ದಕ್ಕಾಗಿ ಇಂದು ಆ ಮನೆತನದವರು ಅವರೊಂದಿಗೆ ವೈವಾಹಿಕ ಸಂಬಂಧವನ್ನು ಇಟ್ಟುಕೊಂಡಿರುವುದಿಲ್ಲ.[೩೦]

ಇತ್ತೀಚಿಗೆ ಸುರಪುರ, ಆನೆಗೊಂದಿ, ದೇವದುರ್ಗ, ಗುಡೇಕೋಟೆ ಅರಸು ಮನೆತನದವರಲ್ಲಿ ವಿವಾಹದ ನಿರ್ಬಂಧಗಳು ಸಡಿಲಗೊಂಡಿವೆ. ಆರ್ಥಿಕತೆಯ ಭದ್ರತೆ ಹಾಗೂ ಶ್ರೀಮಂತಿಗೆ ಜೋತುಬಿದ್ದು, ಸಾಮಾನ್ಯ ಬೇಡರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದಾರೆ. ತಮ್ಮ ಜನಾಂಗದ ಅರಸು ಮನೆತನದಲ್ಲಿ ಉತ್ತಮ ವರ ಇಲ್ಲವೆ ವಧು ಸಿಗದಿದ್ದರೆ, ತಮ್ಮ ಪೂರ್ವಜರ ಅಧೀನದಲ್ಲಿದ್ದ ನಾಯಕ ಜನಾಂಗದ ದಂಡನಾಯಕ, ಗುರಿಕಾರ, ಕಟ್ಟೇಮನೆ, ಮನೆತನಗಳೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುತ್ತಿದ್ದಾರೆ.

ಚಿತ್ರದುರ್ಗ ನಾಯಕ ಅರಸರ ಜೊತೆ ವೈವಾಹಿಕ ಸಂಬಂಧ ಹೊಂದಿದ್ದ ಆನೆಗೊಂದಿ ನಾಯಕ ಅರಸರಿಗೆ ಇಂದು ಜಾತಿಯ ಪ್ರಶ್ನೆ ಕಾಡುತ್ತಿದೆ. ತಾವು ಕ್ಷತ್ರಿಯರೆಂದು ಹೇಳಿಕೊಳ್ಳುತ್ತಾ ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಆವಕ್, ನಂದಾಲ್, ಚಿತ್ತೂರು ಜಿಲ್ಲೆಯ ಕಾರ್ವಟ್ ನಗರಗಳ ಕಡೆಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದಾರೆ. ಮೂಲತಃ ನಾಯಕ ಜನಾಂಗದವರಾದ ಹರಪನಹಳ್ಳಿ ಹಾಗೂ ಹಾಗಲವಾಡಿಯವರು ವೀರಶೈವಧರ್ಮ ಸ್ವೀಕರಿಸಿದವರು. ಇವರು ಇಂದು ವೀರಶೈವ ಅರಸು ಮನೆತನದೊಂದಿಗೆ ಸಂಬಂಧ ಬೆಳೆಸುತ್ತಿಲ್ಲ. ಸ್ವಜಾತಿಯ ಲಿಂಗಾಯತರಾದರೆ ಸಾಕು ಅನ್ನುವಷ್ಟರ ಮಟ್ಟಿಗೆ ಬಂದಿದ್ದಾರೆ.

ನಾಯಕ ಅರಸು ಮನೆತನಗಳಲ್ಲಿ ವಿವಾಹಕ್ಕೆ ವಯಸ್ಸಿನ ನಿರ್ಬಂಧವಿರಲಿಲ್ಲ. ಹೀಗಾಗಿ ಬಾಲ್ಯವಿವಾಹಗಳು ನಡೆದಿರುವ ಉದಾಹರಣೆಗಳಿವೆಯಾದರೂ ಬಹಳ ವಿರಳ. ಚಿತ್ರದುರ್ಗದ ರಾಜಾ ವೀರ ಮದಕರಿನಾಯಕನ

ಪಟ್ಟಾಭಿಷೇಕವು ಶ|| ೧೬೭೬ನೇ ಭಾವ ಸಂ||ದ ಆಷಾಢ ಶುದ್ಧ ೧೨ರಲ್ಲಿ (ಕ್ರಿ.ಶ.೧೭೫೪) ಆಯಿತು. ಆಗ ಈತನಿಗೆ ಹನ್ನೆರಡು ವರ್ಷ ವಯಸ್ಸಾಗಿತ್ತು. ನಂತರ ಶ|| ೧೬೭೬ನೇ ಭಾವ ಸಂ||ದ ಕಾರ್ತಿಕ ಬಹುಳ ದ್ವಿತೀಯ ಸ್ಥಿರವಾರ(ಕ್ರಿ.ಶ.೧೭೫೪) ಈತನ ವಿವಾಹವು ತರೀಕೆರೆ ನಾಯಕ ಅರಸುಮನೆತನದ ಇಮ್ಮಡಿ ಹನುಮಪ್ಪನಾಯಕರ ಪುತ್ರಿ 'ಕುಮಾರಿ ಲಕ್ಕಾಂಬಿಕೆ'ಯೊಂದಿಗೆ ನಡೆಯಿತು.[೨೧] ಇಂಥ ಬಾಲ್ಯವಿವಾಹಗಳು ಕೆಲವು ಅನಿವಾರ್ಯ ಕಾರಣಗಳಿಂದ ಜರುಗಿರಬಹುದು.

### ೪.೨.೧ ನಾಯಕ ಅರಸರ ವಿವಾಹದ ಹಂತಗಳು

ನಾಯಕ ಅರಸರ ವಿವಾಹಗಳು ಹೆಚ್ಚಾಗಿ ಬ್ರಾಹ್ಮಣರ ರೀತಿ-ನೀತಿಗಳನ್ನೇ ಅನುಸರಿಸುತ್ತವೆ. ವೈಷ್ಣವ ಧರ್ಮದ ಪ್ರಭಾವಕ್ಕೊಳಗಾದ ಇವರಲ್ಲಿ ವೈದಿಕಧರ್ಮದಂತೆಯೇ ವಿವಾಹಗಳು ಜರುಗುತ್ತಿದ್ದವು. ಚಿತ್ರದುರ್ಗ, ಸುರಪುರ, ಕನಕಗಿರಿ, ದೇವದುರ್ಗದ ಅರಸುಮನೆತನದವರು ವೈಷ್ಣವ ಪದ್ಧತಿಯನ್ನನುಸರಿಸಿದರೆ, ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿಕೋಟೆ ಅರಸುಮನೆತನದವರು ಶೈವಪದ್ಧತಿ ಅನುಸರಿಸಿದರೂ ಇವರುಗಳ ವಿವಾಹ ಚೌಕಟ್ಟಿನಲ್ಲಿ ಅಷ್ಟೇನೂ ವ್ಯತ್ಯಾಸವನ್ನು ಕಾಣುವುದಿಲ್ಲ. ಇವರುಗಳ ವಿವಾಹ ಕೆಲವು ಹಂತಗಳನ್ನು ಒಳಗೊಂಡಿದೆ. ಅವುಗಳಲ್ಲಿ

#### ೪.೨.೧.೧ ಕನ್ಯಾ ನೋಡುವುದು

ಇದು ವಿವಾಹದ ಪ್ರಥಮಹೆಜ್ಜೆಯಾಗಿದೆ. ಅರಸುಮನೆತನದಲ್ಲಿ ಕನ್ಯೆಯನ್ನು ನೋಡಲು ಹೋಗುವುದಕ್ಕಿಂತ ಮೊದಲು, ಜ್ಯೋತಿಷಿಗಳಿಂದ ಮುಹೂರ್ತವನ್ನು ಕೇಳುತ್ತಿದ್ದರು. ಸುರಪುರದ ಅರಸ ಮುಮ್ಮಡಿ ಪಾಮನಾಯಕ(ಕ್ರಿ.ಶ.೧೭೫೦-೭೩)ನ ಮಗ ಇಮ್ಮಡಿ ವೆಂಕಟಪ್ಪನಾಯಕನಿಗೆ, ಕನಕಗಿರಿಯ ಅರಸ ರಂಗಪ್ಪನಾಯಕನ ಮಗಳನ್ನು ನೋಡಲು ಹೋಗುವಾಗ ಸುರಪುರದ ಅರಸ ಇಮ್ಮಡಿವೆಂಕಟಪ್ಪ ನಾಯಕನು,

> ಸುಮುಹೂರ್ತವನು ತೆಗಸಿ
> ಚಂದದಿಂ ಜೋಸ್ಯ ಪುರೋಹಿತರ
> ವಂದಿಸಲ್ ಪರವಸ್ತು ರಾಮಾನುಜಸ್ವಾಮಿಗಳಾ[೨೨]

ಎಂಬ ವಿವರಣೆಯು ಪುರುಷಕಾರಿ ಲೋಕಯ್ಯನ ಹಸ್ತಪ್ರತಿಯಲ್ಲಿದೆ.

ಜ್ಯೋತಿಷಿಗಳಿಂದ ಮುಹೂರ್ತ ತಿಳಿದು ಈ ಮನೆತನದ ಹಿರಿಯರು, ಹಿತೈಷಿಗಳು, ಗುರುಗಳು, ವಧುವಿನ ಮನೆಗೆ ಹೋಗುತ್ತಿದ್ದರು. ಆದರೆ ವರ ಮಾತ್ರ ಕನ್ಯೆಯನ್ನು ನೋಡಲು ಹೋಗುವಂತಿರಲಿಲ್ಲ. ಇಂದು ಆನೆಗೊಂದಿ, ದೇವದುರ್ಗ, ಗುಂತಗೋಳ, ಕನಕಗಿರಿ, ಮತ್ತೋಡು ಮನೆತನಗಳಲ್ಲಿ ವರ-ವಧುವನ್ನು ನೋಡಲು ಹೋಗುತ್ತಾನೆ. ಆದರೆ ಇನ್ನುಳಿದ ಚಿತ್ರದುರ್ಗ, ಸುರಪುರ, ಗುಡಗುಂಟಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮನೆತನಗಳವರು ಮೊದಲಿನ ಪರಂಪರೆಯನ್ನೇ ಮುಂದುವರೆಸಿ

ಕೊಂಡು ಬಂದಿದ್ದಾರೆ. ಕನ್ಯೆ ನೋಡಲು ಹೋಗುವಾಗ ಬಾಳೆಹಣ್ಣು, ಎಲೆ, ಅಡಿಕೆ, ಕುಂಕುಮ, ಅರಿಶಿಣ ಕೊಂಬು, ಹೂಗಳನ್ನು ಒಯ್ಯುತ್ತಿದ್ದರು. ಕನ್ಯೆಯನ್ನು ವಿವಿಧ ರೀತಿಯಿಂದ ಪರೀಕ್ಷಿಸಲಾಗುತ್ತಿತ್ತು. ಆಕೆಯ ಮಾತನ್ನು ತಿಳಿಯಲು ತಂದೆ-ತಾಯಿಯ ಹೆಸರು ಕೇಳುವುದು, ಹಸ್ತರೇಖೆಯನ್ನು ಪರೀಕ್ಷಿಸುವುದು. ಕೈಕಾಲು ಊನವನ್ನು ಮತ್ತು ಬಿಳಿತೊನ್ನು ಮುಂತಾದವು ಇರದ ಬಗ್ಗೆ ಖಚಿತಪಡಿಸಿಕೊಳ್ಳುತ್ತಿದ್ದರು. ಕಾಲಿನ ಹಿಮ್ಮಡಿ, ಕೈಯ್ಯ ಬೆರಳ ಸಂದಿ, ಕಾಲಿನ ಅಂಗಾಲು ಪರೀಕ್ಷೆಯನ್ನೂ ಮಾಡುತ್ತಿದ್ದರು.[೩೩]

### ೪.೨.೧.೨ ನಿಶ್ಚಿತಕಾರ್ಯ

ನಿಶ್ಚಿತಾರ್ಥವೆಂದರೆ, ವಧು-ವರರ ಸಂಬಂಧವನ್ನು ಅಧಿಕೃತವಾಗಿ ನಿಶ್ಚಯಿಸುವುದು. ವರನ ತಂದೆ-ತಾಯಿಗಳಿಗೆ ವಧು ಇಷ್ಟವಾದರೆ ಅರಸುಮನೆತನದ ಹಿರಿಯರು ವಧುವಿಗೆ ಸೀರೆ, ಕುಪ್ಪಸ, ಬಳೆ, ಕುಂಕಮ, ಹೂ, ಅರಿಶಿಣ, ಹಾಗೂ ಉಡಿ ತುಂಬುವ ವಸ್ತುಗಳೊಂದಿಗೆ ವಧುವಿನ ಮನೆಗೆ ತೆರಳುತ್ತಾರೆ. ಎರಡೂ ಕಡೆಯ ಹಿರಿಯರು ಸೇರುತ್ತಿದ್ದರು. ಬ್ರಾಹ್ಮಣಜಾತಿಯ ಪುರೋಹಿತನು ಇವರೊಂದಿಗೆ ತೆರಳಿರುತ್ತಿದ್ದನು. ಶೈವ ಮನೆತನದ ಅರಸರಾದರೆ, ಲಿಂಗಾಯತ ಪುರೋಹಿತರು ತೆರಳುತ್ತಿದ್ದರು. ಅಲ್ಲಿ ವಧುದಕ್ಷಿಣೆ ಮತ್ತು ವರದಕ್ಷಿಣೆ ಕುರಿತಾದ ಚರ್ಚೆಗಳು ನಡೆಯುತ್ತಿದ್ದವು.[೩೪] ನಾಯಕ ಅರಸುಮನೆತನಗಳಲ್ಲಿ ಮೊದಲು 'ವಧುದಕ್ಷಿಣೆ' ಜಾರಿಯಲ್ಲಿತ್ತು. ಇದನ್ನು ತೆರಕೊಡುವ ಪದ್ಧತಿ ಎಂದು ಕರೆಯುತ್ತಾರೆ. ವರದಕ್ಷಿಣೆ ಹಣದ ರೂಪದಲ್ಲಿ ಇರಲಿಲ್ಲ. ವಸ್ತು, ಭೂಮಿ, ಗ್ರಾಮಗಳ ರೂಪದಲ್ಲಿ ಜಾರಿಯಲ್ಲಿತ್ತು. ಕೆಲವು ಸಲ ವಧುವಿನ ತಂದೆ ಅದನ್ನು ಮಗಳಿಗೆ ನೀಡಿದ ಬಳುವಳಿ ಎಂಬ ರೂಪದಲ್ಲಿಯೂ ನೀಡುತ್ತಿದ್ದರು.

ಚಿತ್ರದುರ್ಗದ ಮತ್ತಿ ತಿಮ್ಮಣ್ಣನಾಯಕ (ಕ್ರಿ.ಶ. ೧೫೬೫-೧೫೮೯)ನು ತನ್ನ ಮಗಳು ಹೊನ್ನವ್ವ ನಾಗತಿಯನ್ನು ಹರಪನಹಳ್ಳಿಯ ದಾದನಾಯಕನಿಗೆ ಕೊಟ್ಟು ಮದುವೆ ಮಾಡುವಾಗ ಈಕೆಗೆ ಉಚ್ಚಂಗಿ ದುರ್ಗವನ್ನು ಬಳುವಳಿಯಾಗಿ ನೀಡಿದನು.[೩೫] ಸುರಪುರದ ಅರಸರು ರಾಣಿ ಕೇಶಮ್ಮಾಜಿ ಮತ್ತು ರಾಣಿ ರಾಘಮ್ಮಾಜಿಯರನ್ನು ಗುಂತಗೋಳ ಅರಸರಿಗೆ ಕೊಡುವಾಗ ಸುರಪುರ ಭಾಗದ ಮುರಗಾನೂರು, ಚನ್ನಪಟ್ಟಣ, ಜಂಬೇರಾಳ್, ಕಡಕೋಳ್, ಮರಕಲ್, ನಂದಿಹಳ್ಳಿಗಳನ್ನು ವರದಕ್ಷಿಣೆಯ ರೂಪದಲ್ಲಿ ಗುಂತಗೋಳದ ಅರಸರಿಗೆ ನೀಡಿದ್ದರು.[೩೬] ಸದ್ಯ ಚಿತ್ರದುರ್ಗ, ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ಮನೆತನಗಳಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ಮತ್ತು ನೀಡುವ ಸಂಪ್ರದಾಯವಿದೆ. ಹೀಗೆ ವರದಕ್ಷಿಣೆ ಮಾತುಕತೆಗಳಾದ ಮೇಲೆ ನಿಶ್ಚಯ ಕಾರ್ಯಕ್ರಮ ನಡೆಯುತ್ತಿತ್ತು. ಇದನ್ನು 'ಗಟ್ಟಿ ಮಾಡುವುದು' ಎಂದು ಕರೆಯುತ್ತಾರೆ. ಎಲ್ಲರಿಗೂ ಸಕ್ಕರೆ, ವೀಳ್ಯದ ಎಲೆ, ಅಡಿಕೆಗಳನ್ನು ನೀಡುತ್ತಿದ್ದರು. ವಧುವರರ ತಂದೆಯರು ಪರಸ್ಪರ ಬಾಯಿಗೆ ಸಕ್ಕರೆ ಹಾಕುತ್ತಿದ್ದರು. ಕನಕಗಿರಿಯ ಲಕ್ಷ್ಮಮ್ಮನ ನಿಶ್ಚಯದ

ಸಂದರ್ಭದಲ್ಲಿ ಸಕ್ಕರೆ ಹಂಚಿದ ವಿವರಣೆ ಲೋಕಯ್ಯನ ಹಸ್ತಪ್ರತಿಯಲ್ಲಿ ಈ ರೀತಿ ಇದೆ :

ಧಾರೆಯೆರೆದು ಕೊಡತಿನೆಂದೂ
ಸಾರಿದವಳಗೆ, ಸರ್ವರಿಗಿನ್ನೂ
ಹರ್ಷದಿ ಸಕ್ಕರಂಚಿದರು.[೩೭]

ನಂತರದಲ್ಲಿ ವಧುವಿಗೆ ಅಕ್ಕಿ, ಎಲೆ, ಅಡಿಕೆಗಳಿಂದ ಮನೆಯಲ್ಲಿ ಮಹಿಳೆಯರು ಉಡಿ ತುಂಬುತ್ತಿದ್ದರು. ಆದರೆ ಸಾಮಾನ್ಯ ಬೇಡಜನಾಂಗದಲ್ಲಿ ಭಾವೀ ವಧು-ವರರನ್ನು ಕೂಡಿಸಿ ಕಳಸ ಬೆಳಗಿ, ಕುಂಕುಮ ಹಚ್ಚಿ, ಆರಾಧ್ಯದೇವರಗುಡಿಗೆ ಕರೆದುಕೊಂಡು ಹೋಗಿಬರುತ್ತಾರೆ. ಆದರೆ ನಾಯಕ ಅರಸು ಮನೆತನಗಳಲ್ಲಿ ಈ ಪದ್ಧತಿಯಿಲ್ಲ. ಕಾರಣ ಇವರಿಗೆ ಘೋಷಾ ಪದ್ಧತಿ ಜಾರಿಯಲ್ಲಿತ್ತು. ವರ ವಧುವನ್ನು ಮಾಂಗಲ್ಯಧಾರಣೆ ಮಾಡುವಾಗಲೇ ನೋಡಬೇಕಾಗಿತ್ತು. ನಡುವೆ ನೋಡುವ ಅವಕಾಶವಿರುತ್ತಿರಲಿಲ್ಲ.

### ೪.೨.೧.೩ ಲಗ್ನ ಕಟ್ಟಿಸುವುದು

ನಿಶ್ಚಿತಾರ್ಥದ ನಂತರ ಒಳ್ಳೆಯ ಮುಹೂರ್ತವನ್ನು ನೋಡಿ ಲಗ್ನದ ಮಿತಿಯನ್ನು ಕಟ್ಟಿಸುತ್ತಿದ್ದರು. ವಿವಾಹಕ್ಕೆ ಬೇಕಾದ ಸಾಮಾನುಗಳ ತಯಾರಿ ಭರದಿಂದ ಸಾಗುತ್ತಿತ್ತು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ವಿವಾಹದ ಸಂದರ್ಭದಲ್ಲಿ,

ಕಂಪಲಿಯುಪ್ಪಿನಿಂದಲಿ ಸರ್ವಸಂಗ್ರಹ | ಅಂಪಯನಹಳಿ
ಸಗರದಾ ಮರಿಯಪ್ಪನಾಕರಸೂ | ಇವರಿಗೂ ಬೇಳಿಯುಯಿಟ್ಟು
ತುಪ್ಪವು | ಅವರಿಗುಸರರಿ ಬೆಲ್ಲ ಸಕ್ಕರಿ ಕೊಬ್ಬರರಿಶಿಣವೂ | ಕಾಯಿ
ಕಾರೀನ್ ಅಡಕಿ ನಾಬತ್ | ಸೋಯದಿಂದಲಿ ಚಿನ್ನಿ ಸಕ್ಕರಿ | ಕಾಯಿಕಾರವು
ಹುಳಿಯವುಪ್ಪೂ ಜೀರಿಗಿಂಗುಗಳೂ[೩೮]

ಹೀಗೆ ಅಡಿಗೆ ಸಾಮಾನುಗಳ ತಯಾರಿ ಒಂದೆಡೆಯಾದರೆ, ಇನ್ನೊಂದೆಡೆ

ಎಲಿಯದೊನ್ನಿಗಳೆಲ್ಲ ಸಂಗ್ರಹ
ಬಳಿಕ ಘಟಗಳು ಮೃಣ್ಮಯವದಿ
ಕಳಸಿ ಕರಸರಿ ಅಡಿಗಿಗಿನ್ನೂ ಕಬ್ಬು ಸಂಗ್ರಹವೂ[೩೯]

ಇನ್ನೂ ಅನೇಕ ಅಡಿಗೆ ಸಾಮಾನುಗಳನ್ನು ಸುರಪುರದ ಮಂತ್ರಿ ನಿಷ್ಠಿ ಈರಪ್ಪ ಹಾಗೂ ಮುಜುಮದಾರರು ಎಲ್ಲಾ ಸಾಮಾನುಗಳನ್ನು ಸಂಗ್ರಹಿಸಿದರು. ನಂತರ ಅರಸ ವಸ್ತ್ರಗಳ ತರುವುದರ ಕುರಿತು ಹೇಳುತ್ತಾನೆ :

ಶಾಲುಕಲಾಬತ್ತು ಜೋಡಿ
ಐವತ್ತು ಇರಲಿ,
ಶಾಲು ಇಪ್ಪತ್ತೈದು ಸಾದಾ ಪಗಡಿ ಸಹಿತದಲಿ[೪೦]

ಮುಂದುವರೆದು ವಧುವಿನ ವಸ್ತ್ರಗಳ ಕುರಿತಾಗಿ,

> ಜರದ ಬುರುಕಿ ಪೀತಾಂಬರವು
> ವರಚಿತ್ರಬಣ್ಣದ ಪರಿಪರಿಂದಲಿ
> ಚೇಲುವೂಗಳು ಗಿಳಿಗಳಿಂದಿರುವಾ ಹತ್ತು
> ತಕ್ಕಾ ಕುಪ್ಪಸ ಮತ್ತೆ
> ಸದಯ ಈರಪ್ಪಗೊಪ್ಪಿಸಿದನು
> ಸುದತಿ ಲಕ್ಷ್ಮಮ್ಮಗಿನ್ನು ಶೋಭನ ಮುಡಿಯು[೪೧]

ಈ ರೀತಿ ವಸ್ತ್ರಗಳ ತಯ್ಯಾರಿ ಒಂದು ಕಡೆ ನಡೆಯಿತು.

ಲಗ್ನಪತ್ರವನ್ನು ತಮ್ಮ ಸಂಬಂಧಿಕರಿಗೆಲ್ಲಾ ಹಂಚುತ್ತಿದ್ದರು. ತಮ್ಮ ಅಧೀನದ ಹಳ್ಳಿಯ ಮುಖ್ಯಸ್ಥರಿಗೂ, ರಾಜ್ಯದ ವಿವಿಧ ಹುದ್ದೆಯಲ್ಲಿದ್ದವರಿಗೂ ತಲುಪಿಸುತ್ತಿದ್ದರು. ಇವೆಲ್ಲವೂ ವಿವಾಹದ ಪೂರ್ವತಯಾರಿಗಳು. ಕನಕಗಿರಿ ಅರಸು ಮನೆತನದವರು ತಮ್ಮ ಮನೆಯ ವಿವಾಹಗಳ ಆಮಂತ್ರಣ ಪತ್ರಿಕೆಯಲ್ಲಿ ಆನೆಗೊಂದಿ ಅರಸರ ಹೆಸರನ್ನು ಹಾಕಿರುತ್ತಿದ್ದರು. ಕಾರಣ ಇವರು ನಾಯಕ ಜನಾಂಗದಲ್ಲಿ ಹಿರಿಯರು ಎಂಬ ಭಾವನೆ ಇತ್ತು. ಈಗಲೂ ಆ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

ತರುವಾಯ ನಿಗದಿಗೊಳಿಸಿದ ದಿನಗಳಂದು ವಿವಾಹ ಕಾರ್ಯಕ್ರಮಗಳು ಪ್ರಾರಂಭವಾಗುತ್ತಿದ್ದವು. ಹಿಂದೆ ವಾರಗಟ್ಟಲೆ ವಿವಾಹಗಳು ಜರುಗಿದರೆ, ಇಂದು ವಿವಾಹ ಕೇವಲ ಒಂದು ದಿನಕ್ಕೆ ಸೀಮಿತಗೊಂಡಿದ್ದೆ ಅರಸುಮನೆತನಗಳಲ್ಲಿ ಕನಿಷ್ಠ ಮೂರುದಿನಗಳ ಕಾಲ ವಿವಾಹದ ಕಾರ್ಯಕ್ರಮಗಳು ಜರುಗುತ್ತಿದ್ದವು. ಈ ಮನೆತನದವರಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ, ಅರಸರು ವೈಷ್ಣವ ಸಂಸ್ಕಾರಗಳಿಗನುಸಾರವಾಗಿ ವಿವಾಹ ಮಾಡಿದರೆ, ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನದವರು ಶೈವಸಂಸ್ಕಾರಗಳಿಗನುಸಾರ ವಿವಾಹವನ್ನು ಮಾಡುತ್ತಾರೆ. ವೈಷ್ಣವ ಸಂಪ್ರದಾಯಸ್ಥರು ಬ್ರಾಹ್ಮಣರನ್ನು, ಶೈವ ಸಂಪ್ರದಾಯಸ್ಥರು ಅಯ್ಯಗಳನ್ನು (ಸ್ವಾಮಿಗಳನ್ನು) ಕರೆಯಿಸಿ ಧಾರ್ಮಿಕ ವಿಧಿವಿಧಾನಗಳನ್ನು ಜರುಗಿಸುತ್ತಿದ್ದರು.

ಈ ಮನೆತನಗಳಲ್ಲಿ ವೈಷ್ಣವ ಮತ್ತು ಶೈವಸಂಸ್ಕಾರದ ವಿವಾಹಗಳು ಜರುಗಿದರೂ ವಿಧಿ ವಿಧಾನಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಅವುಗಳನ್ನು ಸಾಂದರ್ಭಿಕವಾಗಿ ವಿವರಿಸಲಾಗು ವುದು. ಆದರೆ ಉಳಿದ ವಿಧಿವಿಧಾನಗಳು ಏಕರೂಪತೆಯನ್ನು ಪಡೆದಿದ್ದವು. ಕಾರಣ ಈ ಎರಡೂ ಮತದ ಅನುಸರಣೆಯ ಮನೆತನಗಳಲ್ಲಿ ವೈಷ್ಣವ ಪುರೋಹಿತರು ಹಾಗೂ ಶೈವ ಗುರುಗಳಿರುವುದನ್ನು ನಾವು ಕಾಣಬಹುದಾಗಿದೆ. ಅರಸರ ವಿವಾಹಗಳು ವರನ ಮನೆಯ ಮುಂದೆ ನಡೆಯುತ್ತಿದ್ದವು. ಇಲ್ಲವೆ ಕೆಲವು ಸಲ ವಧುವಿನ ಮನೆಯ ಮುಂದೆಯೂ ನಡೆಯುತ್ತಿದ್ದವು. ಅವರವರ ಅನುಕೂಲಕ್ಕೆ ತಕ್ಕಂತೆ ಜರುಗುತ್ತಿದ್ದವು.

### ೪.೨.೧.೪ ಎಲೆಶಾಸ್ತ್ರ ಕಾರ್ಯಕ್ರಮ

ವಿವಾಹದ ಮೊದಲನೆಯ ದಿನ ಲಗ್ನವನ್ನು ಕಟ್ಟಿಸುವ ಕಾರ್ಯಕ್ರಮ ಜರುಗುತ್ತಿತ್ತು ಇದನ್ನು ಎಲೆಶಾಸ್ತ್ರ ಕಾರ್ಯಕ್ರಮ ಎಂದು ಕರೆಯುತ್ತಿದ್ದರು. ಗದ್ದಿಗಿ ಹಾಸಿ, ಎಲೆ ಅಡಿಕೆಗಳನ್ನು ಸಾಲಾಗಿ ಜೋಡಿಸಿ, ಸರ್ವದೇವರುಗಳನ್ನು ಆಹ್ವಾನಿಸಿ ಪೂಜಿಸಿದ ಮೇಲೆ ತೆಂಗಿನಕಾಯಿ ಒಡೆದು ಮಂಗಳಾರತಿ ಮಾಡಿದ ನಂತರ ಮುದ್ರಿತವಾದ ಲಗ್ನಪತ್ರಿಕೆಗಳನ್ನು ವರನ ಕಡೆಯವರು ಮತ್ತು ವಧುವಿನ ಕಡೆಯವರು ಬೇರೆ ಬೇರೆ ತಟ್ಟೆಗಳಲ್ಲಿ ಇಡಿಸಿ, ಅಕ್ಕಿ ಹಾಕಿ ಅದರಲ್ಲಿ ಲಗ್ನಪತ್ರಿಕೆಯಿಟ್ಟು ಪೂಜೆ ಮಾಡಿಸುತ್ತಿದ್ದರು. ಐದು ಬಗೆಯ ಹಣ್ಣುಗಳನ್ನು ಎಲೆ, ಅಡಿಕೆ, ತೆಂಗಿನಕಾಯಿ, ಜೊತೆಗೆ ಲಗ್ನಪತ್ರಿಕೆಗಳನ್ನು ವರನ ಕಡೆಯವರು ವಧುವಿನ ಕಡೆಯವರಿಗೆ, ವಧುವಿನ ಕಡೆಯವರು ವರನ ಕಡೆಯವರಿಗೆ ನೀಡುತ್ತಿದ್ದರು. ನಂತರ ಲಗ್ನದ ಅಕ್ಕಿಯ ಗಂಟನ್ನು ಪೂಜಿಸಿ ಉಭಯರಿಗೂ ಕೊಟ್ಟು, ಮದುವೆಯ ವೇಳೆಗೆ ತರುವಂತೆ ತಿಳಿಸಲಾಗುತ್ತಿತ್ತು. ಇದೇ ಸಂದರ್ಭದಲ್ಲಿ ಸಿಂಹಾಸನವನ್ನು ಹಾಕಿ ದೊರೆಯನ್ನು ಕೂರಿಸಿ ಗುರುಕನ್ನಯ್ಯನ ವೀಳ್ಯಕೊಟ್ಟು, ಸಂಸ್ಥಾನಕ್ಕೂ, ಕಟ್ಟೆಮನೆಗಳು, ಗಡಿಸಾಲು ಮೂಲೆಗಳ ನಾಯಕರುಗಳಿಗೆ ವೀಳ್ಯ ಕೊಡಲಾಗುತ್ತಿತ್ತು.[೪೨] ಅಲ್ಲದೆ ಈ ಜನಾಂಗದಲ್ಲದೆ ಇತರ ಜನಾಂಗಗಳಾದ ಹಳ್ಳಿಕಾರರು, ಗೊಲ್ಲರು, ಕುಂಚಿಟಿಗರ ಮದುವೆಗಳಲ್ಲಿ ವೀಳ್ಯ ತಿದ್ದುವಾಗ ನಾಯಕರ ವೀಳ್ಯ ಎತ್ತುವುದು ರೂಢಿಯತ್ತು.[೨೦] ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗದ ಭಾಗದಲ್ಲಿ ಸಾಮಾನ್ಯ ಬೇಡರು ವೀಳ್ಯ ತಿದ್ದುವಾಗ ಮೊದಲು ನಾಯಕ ಅರಸರ ವೀಳ್ಯ ಎತ್ತುವ ಪದ್ಧತಿ ಇಂದಿಗೂ ಇದೆ. ಅಂದೇ ಮೊದಲನೆ ದಿನ ಮದುವೆ ಊಟವನ್ನು ನೀಡಲಾಗುತ್ತಿತ್ತು. ಇದನ್ನು ದೇವರಊಟ, ಶಾಸ್ತ್ರಊಟ ಎಂದು ಕರೆಯುತ್ತಾರೆ.

ಇದಾದ ನಂತರ ಹಂದರ (ಹಂದರ ಕಾರ್ಯಕ್ರಮ) ಹಾಕುವ ಕಾರ್ಯಕ್ರಮ ಜರುಗುತ್ತಿತ್ತು. ಅರಮನೆಯ ಬಾಗಿಲ ಮುಂದೆ ೫ ನೊಗಗಳನ್ನು ನೆಡುತ್ತಿದ್ದರು. ಅದಕ್ಕೆ ಐದು ಪಣತಿ ದೀಪಗಳನ್ನು ಹಚ್ಚುತ್ತಿದ್ದರು. ಮೇಲೆ ಆಲದ(ಬಸರಿ) ಗಿಡದ ಎಲೆಯಿಂದ ಹಂದರ ನಿರ್ಮಿಸುತ್ತಿದ್ದರು. ಮಧ್ಯದಲ್ಲಿ ಕೊಬ್ಬರಿಯನ್ನು ಕಟ್ಟಿರುತ್ತಿದ್ದರು. ಹಂದರದ ಎರಡೂ ಕಡೆಗೆ ತೆಂಗಿನಪಟ್ಟೆಯನ್ನು ಕಟ್ಟಿರುತ್ತಿದ್ದರು. ಅರಮನೆಯಂತೂ ತಳಿರುತೋರಣಗಳಿಂದ, ಬಣ್ಣಬಣ್ಣದ ಚಿತ್ತಾರಗಳಿಂದ ಆಕರ್ಷಕವಾಗಿ ಕಂಗೊಳಿಸುತ್ತಿತ್ತು. ಈ ಹಂದರದಲ್ಲಿಯೇ ವಿವಾಹದ ಮೊದಲನೆಯ ದಿನ, ಎಲೆಪೂಜೆ ಕಾರ್ಯಕ್ರಮ ಜರುಗುತ್ತಿತ್ತು. ವಧು ಮತ್ತು ವರರಿಗೆ ಪ್ರತ್ಯೇಕವಾಗಿ ಅವಭೃತಸ್ನಾನವನ್ನು ಮಾಡಿಸುತ್ತಿದ್ದರು. ಮೈಗೆಲ್ಲ ಅರಳೆಣ್ಣೆ, ಒಳ್ಳೆಣ್ಣೆ, ಕೊಬ್ಬರಿಎಣ್ಣೆಯನ್ನು ಮಿಶ್ರಮಾಡಿ, ಹಚ್ಚುತ್ತಿದ್ದರು. ಅರಿಶಿಣವನ್ನು ಮೈಗೆ ಸವರಿ ಮುತ್ತೈದೆಯರು ವರನಿಗೆ ಐದು ಸಾರಿ, ವಧುವಿಗೆ ಮೂರು ಸಾರಿ ನೀರನ್ನು ಹಾಕಿದ ನಂತರ, ಗಣಪತಿ ಪೂಜೆ ಮತ್ತು ಮನೆದೇವರುಗಳ ಪೂಜೆ ಜರುಗುತ್ತಿತ್ತು.

ತದನಂತರ ಎಲೆ, ಅಡಿಕೆ, ಹಣ್ಣು, ಹೂಗಳನ್ನು ಮುತ್ತೈದೆಯರಿಗೆ ಕೊಡುತ್ತಿದ್ದರು. ಮುತ್ತೈದೆಯರು ವಧು-ವರರಿಗೆ ಕುಂಕುಮ ಹಚ್ಚಿ, ಅಕ್ಕಿಕಾಳುಗಳ್ನು ಮೂರು ಸಾರಿ ನೀವಳಿಸಿ ತಲೆಗೆ ಹಾಕಿ ಶುಭವಾಗಲಿ ಎಂದು ಹಾರೈಸುತ್ತಿದ್ದರು. ಈ ಶಾಸ್ತ್ರ ಮಾಡುವಾಗ ವರನು ಎಲ್ಲರಿಗೂ ಕಾಣಬಹುದಾಗಿತ್ತು. ಆದರೆ ವಧುವಿಗೆ ಮಾಡುವಾಗ ನಡುವೆ ಬಿಳಿಯ ಪರದೆಯನ್ನು ಹಿಡಿದಿರುತ್ತಿದ್ದರು. ಅದನ್ನು 'ಅಂತರ ಪಟ' ಎಂದು ಕರೆಯುತ್ತಾರೆ.[೪೪]

### ೪.೨.೧.೫ ಹರಣಿ ಕಾರ್ಯಕ್ರಮ

ನಂತರ ಹರಣಿ ಇಡುವ ಕಾರ್ಯಕ್ರಮ ಜರುಗುತ್ತಿತ್ತು. ಹರಣಿ ತಂದು ಬೆಂಕಿಯನ್ನು, ಯಜ್ಞವೇದಿಕೆಯಲ್ಲಿ ಅಗ್ನಿ ಪ್ರತಿಷ್ಠಾಪಿಸಿ, ಅಗ್ನಿದೇವನಿಗೆ ಹಾಗೂ ಸರ್ವದೇವರುಗಳಿಗೆ ಪೂಜಿಸಿ ತುಪ್ಪದ ಹವಿಸ್ಸನ್ನು ಹಾಕಿಸಿ ದೈವದ ಆಶೀರ್ವಾದ ಬೇಡುತ್ತಿದ್ದರು. ವಧು-ವರರ ತಂದೆತಾಯಿಗಳಿಗೆ, ಎಣ್ಣೆ, ಅರಿಶಿಣ, ಹಚ್ಚಿ ಸ್ನಾನ ಮಾಡಿಸಿ, ನಂತರ ಅವರಿಗೆ ಕುಂಕುಮ ಹಚ್ಚಿ, ಕಳಸ ಬೆಳಗಲಾಗುತ್ತಿತ್ತು. ವಧು-ವರನ ತಂದೆಯವರು ಮಡಿ ಪಂಚೆಯನ್ನು ಧರಿಸಬೇಕಾಗಿರುತ್ತಿತ್ತು. ನಂತರ ಮುತ್ತೈದೆಯರು ಒರಳುಕಲ್ಲು, ಬೀಸುವಕಲ್ಲು, ಶಾವಿಗೆಮಣೆಗಳನ್ನು ಪೂಜಿಸುತ್ತಿದ್ದರು. ಹೀಗೆ ಈ ಎಲ್ಲಾ ಕಾರ್ಯಕ್ರಮಗಳು ಮೊದಲನೇ ದಿನ ಬೆಳಗಿನಿಂದ ಆರಂಭಗೊಂಡು ಮೂರನೇ ದಿನದ ಮಾಂಗಲ್ಯಧಾರಣೆಯವರೆಗೆ ಅಂದರೆ, ಹಗಲು ರಾತ್ರಿಯೆನ್ನದೆ ನಿರಂತರವಾಗಿ ಆಚರಣೆಗಳು ಜರುಗುತ್ತಿದ್ದವು.

### ೪.೨.೧.೬ ನಾಂದಿ ಕಾರ್ಯಕ್ರಮ

ವಿವಾಹದ ಎರಡನೇ ದಿನ ಬೆಳಗ್ಗೆ ದೇವರಾಧನೆ ನಡೆಯುತ್ತಿತ್ತು. ಸ್ಥಳೀಯ ದೇವಸ್ಥಾನಗಳಲ್ಲಿ ಪಂಚಾಮೃತ ಅಭಿಷೇಕ ಮಾಡಿಸುತ್ತಿದ್ದರು. ಈ ಸಂದರ್ಭದಲ್ಲಿ ಆನೆಗೊಂದಿ ನಾಯಕ ಅರಸರು ಬ್ರಾಹ್ಮಣರಿಂದ ಮನೆಯಲ್ಲಿ ತುಳಸಿಪೂಜೆಯನ್ನು ಮಾಡಿಸುತ್ತಿದ್ದರು.[೪೫] ತರುವಾಯ ಜನಿವಾರಧಾರಣೆ ಜರುಗುತ್ತಿತ್ತು. ಇದನ್ನು ನಾಂದಿ ಪದ್ಧತಿ, ಉಪನಯನ ಕಾರ್ಯಕ್ರಮವೆಂತಲೂ ಕರೆಯುತ್ತಾರೆ. ಮೊದಲಿಗೆ ಗಣಪತಿ ಪೂಜೆ ನಡೆದು, ಆಯಾ ಅರಸು ಮನೆತನಗಳ ಕುಲದೇವರ ಪೂಜೆ ನಡೆಯುತ್ತಿತ್ತು. ಆ ಮೇಲೆ ಹದಿನಾರು ನಾಂದಿ ದೇವರುಗಳ ಪೂಜೆ ಜರುಗುತ್ತಿತ್ತು. ಆಗ ವರನನ್ನು ಹಂದರದಲ್ಲಿ ಅತ್ತಿ, ಆಲ, ಅರಳಿ, ಮಾವು, ಹಲಸು ಮುಂತಾದ ಹಾಲು ಗಿಡಗಳ ನಡುವೆ ಕೂಡಿಸುತ್ತಿದ್ದರು. ಷೋಡಶ ಮಾತೃಕೆಯರ ಪೂಜೆಯಾದ ಬಳಿಕ ಯಜ್ಞೋಪವೀತ ಧಾರಣೆಯಾಗಿ ಹೋಮಕಾರ್ಯಕ್ರಮ ಜರುಗುತ್ತಿತ್ತು. ನಂತರ ಮೂರುಎಳೆ ಜನಿವಾರವನ್ನು ಹಾಕುತ್ತಿದ್ದರು. ಇದನ್ನೇ ನಾಂದಿ(ಉಪನಯನ) ಎಂದು ಕರೆಯುತ್ತಿದ್ದರು.

ಶೈವ ಮನೆತನಗಳಲ್ಲಿ ಮುದ್ರೆಹಾಕುವ ಪದ್ಧತಿ ಆಚರಣೆಯಲ್ಲಿದೆ. ಶಂಖ ಮತ್ತು ಚಕ್ರ ಮುದ್ರೆಗಳಿಂದ ಭುಜಗಳಿಗೆ ಮುದ್ರೆ ಒತ್ತುತ್ತಿದ್ದರು. ಇದು ಆಗದ ಹೊರತು ವಿವಾಹ ಮತ್ತು ಇತರ ಧಾರ್ಮಿಕ

ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ.[೪೬] ವೈಷ್ಣವ ಸಂಸ್ಕಾರಗಳಿಗನುಗುಣವಾಗಿಯೂ ಇದು ಜರುಗುತ್ತಿತ್ತು. ಸಾಮಾನ್ಯ ನಾಯಕ(ಬೇಡರು)ರಲ್ಲಿ ಈ ಪದ್ಧತಿ ಇಲ್ಲ.

ಇವರಲ್ಲಿ ಐರಾಣಿ ತರುವ ಸಂಪ್ರದಾಯವಿತ್ತು. ಪಂಚ ಮುತ್ತೈದೆಯರು ವಿವಾಹ ಸಮಯದಲ್ಲಿ ಸುರಗಿ ಸುತ್ತಲು ಮಣ್ಣಿನ ಗಡಿಗೆಗಳನ್ನು ಪದ್ಧತಿ ಪ್ರಕಾರವಾಗಿ ಮೆರವಣಿಗೆಯಲ್ಲಿ ತರಲಾಗುತ್ತಿತ್ತು. ಆಮೇಲೆ ಸುರಗಿಯನ್ನು ಸುತ್ತಲಾಗುತ್ತಿತ್ತು. ಸುರಗಿಯ ನಾಲ್ಕು ಮೂಲೆಗೆ ನಾಲ್ಕು ಪಾತ್ರೆಗಳನ್ನು ಇಟ್ಟು ಪ್ರತಿ ಪಾತ್ರೆಯ ಕತ್ತಿಗೆ ಗುಂಟ ಹತ್ತಿಯ ನೂಲಿನಿಂದ, ಅದರಲ್ಲಿ ಒಂದು ಎಳೆ ಕಂಬಳಿದಾರವನ್ನು ಸೇರಿಸಿ, ಐದು ಜನ ದಂಪತಿಗಳು(ಒಟ್ಟು ಹತ್ತು ಜನ) ತಂಬಿಗೆಯಲ್ಲಿ ದಾರ ಹಾಕಿ, ಹನ್ನೊಂದು ಸುತ್ತು ದಾರವನ್ನು ಸುತ್ತುತ್ತಿದ್ದರು. ವಧು-ವರರು ಸುರಗಿಯೊಳಗೆ ಕಾಲಿಡುವಾಗ ಬಲಗಾಲಿಟ್ಟು, ಒಳಹೋಗುತ್ತಿದ್ದರು. ಮುತ್ತೈದೆಯರು ವಧು-ವರರಿಗೆ ನೀರನ್ನು ಹಾಕುತ್ತಿದ್ದರು. ಆ ಸುರಗಿಯ ನೀರು ಹೊರಗೆ ಹೋಗಬಾರದೆಂಬ ನಿಯಮವಿತ್ತು. ವಧು-ವರರು ಸುರಗಿಯಲ್ಲಿಯೇ ಬಟ್ಟೆಗಳನ್ನು ಧರಿಸಬೇಕು. ನಂತರ ಇವರನ್ನು ಹಸೆಕಟ್ಟೆಗೆ ಕರೆದುಕೊಂಡು ಬರುತ್ತಿದ್ದರು. ಇದು ಅಗ್ನಿಕುಂಡದ ರಚನೆಯ ಮಾದರಿಯಲ್ಲಿ ಇಟ್ಟಿಗೆಗಳಿಂದ ಮಾಡಿರಲಾಗುತ್ತಿತ್ತು. ಇದರ ಚಪ್ಪರಕ್ಕೆ ಅತ್ತಿ, ಆಲ, ಅರಳಿ, ಮಾವು, ಬಾಳೆಗೊನೆಗಳನ್ನು ಬಳಸಿರುತ್ತಿದ್ದರು.[೪೭] ಅರಿಶಿಣ, ವೀಳ್ಯದ ಎಲೆಯನ್ನು ಸೇರಿಸಿದ ಕಂಕಣವನ್ನು ತಯಾರಿಸಿ, ವಧುವಿನ ಕೈಯಿಂದ ವರನಿಗೂ, ವರನ ಕಡೆಯಿಂದ ವಧುವಿಗೂ ಕಂಕಣವನ್ನು ಕಟ್ಟಿಸುತ್ತಿದ್ದರು. ಆಗ ಅಕ್ಷತಾರೋಹಣ ಕಾರ್ಯಕ್ರಮ ಜರುಗುತ್ತಿತ್ತು. ವರ-ವಧುವಿನ ತಲೆಯ ಮೇಲೆ ಮೂರು ಸಾರಿ ಅಕ್ಷತೆಯನ್ನು ಹಾಕಿದರೆ, ವಧುವು ವರನಿಗೆ ಮೂರು ಸಾರಿ ಅಕ್ಷತೆಯನ್ನು ಹಾಕುತ್ತಿದ್ದರು.[೪೮]

ವಧುವಿನ ಕೈಯಲ್ಲಿ ಒಂದು ತೆಂಗಿನ ಕಾಯಿಯನ್ನು ಕೊಟ್ಟಿರುತ್ತಿದ್ದರು. ವರನ ಕೈಯ್ಯಲ್ಲಿ ವೀರಲಾಂಛನವಾದ ಕತ್ತಿಗೆ ನಿಂಬೆಹಣ್ಣನ್ನು ಸಿಕ್ಕಿಸಿ ಕೈಗೆ ನೀಡಿರುತ್ತಿದ್ದರು. ವಧುವಿಗೆ ಪಂಚೆ, ಪೇಟ ಉಡಿಸಿ, ಬಾಸಿಂಗ ಕಟ್ಟಿರುತ್ತಿದ್ದರು. ಕನಕಗಿರಿ ನಾಯಕ ಅರಸರು ಬಾಸಿಂಗ ಕಟ್ಟುವುದಿಲ್ಲ. ಮಣಿಕಟ್ಟುವ ವಿಧಾನ ಇದೆ.[೪೯] ಆಗ ವಧು-ವರರಿಗೆ ಮತ್ತೊಮ್ಮೆ ಅಕ್ಷತೆಯನ್ನು ಪರಸ್ಪರ ಹಾಕಿಸಲಾಗುತ್ತಿತ್ತು. ಅದರಲ್ಲಿ ಅಕ್ಕಿ, ಎಳ್ಳು, ಬೇರೆ ಇನ್ನೊಂದು ಧಾನ್ಯ (ಜೋಳ ಇಲ್ಲವೆ ಗೋಧಿ) ಹಾಕಿಸುತ್ತಿದ್ದರು. ಇದಾದ ಮೇಲೆ ಮಾಂಗಲ್ಯಪೂಜೆ ನಡೆಯುತ್ತಿತ್ತು. ಎಲ್ಲರ ಒಪ್ಪಿಗೆ ಪಡೆಯಲು ಅದನ್ನು ತಟ್ಟೆಯಲ್ಲಿಟ್ಟು ಮುಟ್ಟಿಸುತ್ತಿದ್ದರು. ಸಮಾರಂಭದಲ್ಲಿ ಆಸೀನರಾದ ಮನೆಯ ರಾಜಗುರುಗಳು ಹಿರಿಯರು, ಮುತ್ತೈದೆಯರು ಮಾಂಗಲ್ಯವನ್ನು ಮುಟ್ಟಿದ ಮೇಲೆ ವರನ ಕಡೆಯಿಂದ ವಧುವಿಗೆ ಮಾಂಗಲ್ಯಧಾರಣೆ ಜರುಗುತ್ತಿತ್ತು.[೫೦] ಚಿತ್ರದುರ್ಗದ ಮನೆತನದಲ್ಲಿ ಮಾಂಗಲ್ಯ ಎರಡು ಇರುತ್ತಿದ್ದವು. ಒಂದು ಬಟ್ಟಲು ಆಕಾರದ್ದು, ಇನ್ನೊಂದು ತಟ್ಟೆಯಾಕಾರದ್ದು. ಮಾಂಗಲ್ಯಸರದಲ್ಲಿ ಕರಿಮಣಿ, ಹವಳ, ಮುತ್ತುಗಳನ್ನು ಪೋಣಿಸಲಾಗಿರುತ್ತಿತ್ತು. ಅವುಗಳ ನಡುವೆ ಆ ಎರಡೂ ತಾಳಿಗಳನ್ನು ಪೋಣಿಸಲಾಗುತ್ತಿತ್ತು. ಸುರಪುರ, ಆನೆಗೊಂದಿ, ಗುಡಗುಂಟಿ,

ದೇವದುರ್ಗ, ಕನಕಗಿರಿ, ಮನೆತನಗಳಲ್ಲಿ ತಟ್ಟೆ ಆಕಾರದ ತಾಳಿಯನ್ನು ಮಾಡಿಸಿರುತ್ತಿದ್ದರು. ಗುಡೇಕೋಟೆ, ಜರಿಮಲೆ ಮನೆತನದವರು ಬಟ್ಟಲು ಆಕಾರದ ತಾಳಿಗಳನ್ನು ಮಾಡಿಸಿರುತ್ತಿದ್ದರು.

ಮಾಂಗಲ್ಯಧಾರಣೆಯಾದ ಬಳಿಕ ಗಂಡಿನ ಸೆರಗು ಮತ್ತು ಹೆಣ್ಣಿನ ಸೆರಗು ಗಂಟು ಹಾಕುತ್ತಿದ್ದರು. ಇದನ್ನು 'ಬ್ರಹ್ಮಗಂಟು' ಎಂದು ಕರೆಯುತ್ತಿದ್ದರು. ನಂತರ ಇಬ್ಬರಿಗೂ ಸಪ್ತಪದಿ ತುಳಿಸುತ್ತಿದ್ದರು. ಸಪ್ತಪದಿ ಎಂದರೆ ಅಗ್ನಿಯ ಕುಂಡಲ ಹಾಕಿರುತ್ತಿದ್ದರು. ವಧು-ವರರು ಅದನ್ನು ಸುತ್ತುವರೆಯಬೇಕು. ಒಂದೊಂದು ಹೆಜ್ಜೆಗೆ ಒಂದೊಂದು ಪೂಜೆಯಾಗುತ್ತಿತ್ತು. ನಂತರದಲ್ಲಿ ಸಪ್ತರ್ಷಿ ಮಂಡಲ ಹಾಗೂ ಅರುಂಧತಿ ನಕ್ಷತ್ರಗಳಿಗೆ ಪೂಜೆ ನೆರವೇರುತ್ತಿತ್ತು.[೫೧]

೪.೨.೧.೭ ವಿವಾಹ ಮಂಟಪ

ಅಲ್ಲಿಂದ ವಿವಾಹದ ಮಂಟಪಕ್ಕೆ ತೆರಳುತ್ತಿದ್ದರು. ಸೇರಿದ ಅತಿಥಿಗಳು ವಧು-ವರರ ಮೇಲೆ ಅಕ್ಷತೆಗಳನ್ನು ಹಾಕುತ್ತಿದ್ದರು. ವಿವಾಹ ಮಂಟಪವು ವಿವಾಹಕ್ಕೆ ತಕ್ಕಂತೆ ಶೃಂಗಾರಗೊಂಡಿರುತ್ತಿತ್ತು. ಶಿಲ್ಪಿಗಳು ವಿವಾಹ ಮಂಟಪವನ್ನು ಶೃಂಗರಿಸುತ್ತಿದ್ದರು. ವರ ಮತ್ತು ವಧುವಿಗೆ ಬೇರೆ ಬೇರೆ ಸಾಮಂತರಾಜರುಗಳು ಬಂಧುಗಳು, ಅಮೂಲ್ಯವಾದ ವಸ್ತ್ರಗಳನ್ನು ಆಭರಣಗಳನ್ನು, ವಸ್ತುಗಳನ್ನು ಕಾಣಿಕೆಯಾಗಿ ನೀಡುತ್ತಿದ್ದರು.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ವಿವಾಹದಲ್ಲಿ ಸಕಲ ರಾಜಸಮೂಹವು ಈ ರೀತಿ ಕಾಣಿಕೆ ನೀಡುತ್ತದೆ :

ಮೊದಲೆ ಗುಡಗುಂಟಿ ರಾಜನು
ಸದಯ ಮುತ್ತಿನ ಕಂಠಿಶಾಲು
ಅದರ ಮೇಲ್ ಮಂದೀಲು ಪೈಠಾಣ ಹೂವ್ವಿನಾಶಲ್ಯ[೫೨]

ನೀಡಿದ ನಂತರ ವಧು ಲಕ್ಷ್ಮಮ್ಮಗೆ,

ಜರದ ಪೀತಾಂಬರವು ಕುಪ್ಪಸ
ಸರಿಯಯಿಲ್ಲದ ಕಡ್ಲಿಹಾರವು
ವರಮಹಾಲಕ್ಷ್ಮಮ್ಮಗೆ ಮುಯ್ಯ ಮಾವ ಮಾಡಿದನು.[೫೩]

ಹರಪನಹಳ್ಳಿ ರಾಜಶೇಖರ
ಸುರಪನಂದದಿ ಚಂದ್ರಹಾರವು
ವಜ್ರಕೆಚ್ಚಿದ ದಸ್ತು ಬಂದೂ ಶಾಲು ಮಂದೀಲಾ[೫೪]

ನಂತರ ಲಕ್ಷ್ಮಮ್ಮಗೆ,
ಸುಳವು ಬುರುಕೆದಾರ ಸೀರಿಯು

ವಳಿತು ಚಿತ್ರಬಣ್ಣ, ಕುಪ್ಪಸ
ಸುಳುವು ಚಿತ್ರದ ಹರಳುಕೆಚ್ಚಿದ ಬಂಗಾರ ಬಳಿಗಾಳೂ[೫೫]

ನೀಡುತ್ತಾನೆ. ದೇವದುರ್ಗದ ಅರಸನು,

ವಧೂವರರಿಬ್ಬರಿಗೆ ಶ್ರೀ
ಸದಯ ದೇವದುರ್ಗ ಕ್ರಿಷ್ಣಭೂಪನು
ಮದಿವಿ ಮಗಳಿಗೆ ಸ್ವಾದರಳಿಯಗೆ ಮುಯ್ಯ ಮಾಡಿದನು.[೫೬]

ಚಿತ್ರದುರ್ಗದ ಅರಸನು

ಸಿಂಹಮುಖದಾ ತೋಡೆ ಕಂಠಿಯು
ಸಮ್ಮತಿಂದಲಿ ಚಿತ್ರದುರ್ಗದ ವೀರ
ಬೊಮ್ಮಿನಾಯಕ ಶಾಲು ಪಗಡೀ ಸೀರಿ ಕುಪ್ಪಸವೂ[೫೭]

ನಂತರದಲ್ಲಿ ಪುಂಗನೂರು ದೇಸಾಯಿ, ಹಿರಿಯ ಬಳ್ಳಾಪುರದ ದೇಸಾಯಿಗಳು, ಸುತ್ತಲಿನ ಸಾಮಂತರು, ಸಂಸ್ಥಾನದ ಸರ್ನೌಬತ್ತು ಗುರಿಕಾರ್, ಹವಾಲ್ದಾರ್, ನಿಷ್ಕಿ, ಮುಜುಮದಾರ್, ದಫ್ತರ್‌ದಾರ್, ವಾಲೇಕಾರರು, ಸುತ್ತಲಿನ ನಾಡಗೌಡರು ಮುಂತಾದವರು ಕಾಣಿಕೆಗಳನ್ನು ಸಲ್ಲಿಸಿದರು. ಹೀಗೆ ಒಂದು ಮನೆತನದ ನಾಯಕ ಅರಸರ ವಿವಾಹ ಜರುಗಿದರೆ, ಎಲ್ಲಾ ಅರಸುಮನೆತನದ ಬಂಧುಗಳು ಉಡುಗೊರೆ ನೀಡುತ್ತಿದ್ದರು. ಈ ಅರಸುಮನೆತನದವರು ರಾಜ ಹಾಗೂ ಯುವರಾಜರ ವಿವಾಹದ ಸಂದರ್ಭದಲ್ಲಿ ಮಠ, ದೇವಾಲಯ, ಧಾರ್ಮಿಕಕ್ಷೇತ್ರಗಳಿಗೆ ದಾನ, ದತ್ತಿ, ಉಡುಗೊರೆ ನೀಡುತ್ತಿದ್ದರು.

ಚಿತ್ರದುರ್ಗದ ಕಡೆಯ ಮದಕರಿನಾಯಕ (ಕ್ರಿ.ಶ. ೧೭೫೪-೧೭೭೯)ನು ತರೀಕೆರೆ ನಾಯಕನ ಮಗಳಾದ ಲಕ್ಕಾಂಬೆಯೊಂದಿಗೆ ಜರುಗಿದ ವಿವಾಹ ಮಹೋತ್ಸವದ ಸಂದರ್ಭದಲ್ಲಿ ಕೂಡಲೀ ಶೃಂಗೇರಿಮಠದ ಶ್ರೀಶಂಕರಭಾರತೀಸ್ವಾಮಿಗಳವರಿಗೆ ತನ್ನ ಹಿರಿಯರಿಗೆ ಒಳ್ಳೆಯದಾಗಲಿ ಎಂಬ ಉದ್ದೇಶದಿಂದ ಗುಂಟನೂರು, ಮಲ್ಲಪ್ಪನಬಾವಿ, ತೋಟದಭೂಮಿಗಳನ್ನು ದಾನಮಾಡುತ್ತಾನೆ.[೫೮] ಈತ ತನ್ನ ಸಹೋದರ ಪರಶುರಾಮನಾಯಕನ ವಿವಾಹ ಮಹೋತ್ಸವದ ಸಂದರ್ಭದಲ್ಲಿ (ಕ್ರಿ.ಶ. ೧೭೬೦ರಲ್ಲಿ) ಮಠಕ್ಕೆ ನಿರೂಪವೊಂದನ್ನು ಕೊಟ್ಟು, ಮಠದಿಂದ ಉಡುಗೊರೆ ತಂದಿದ್ದ ಮಾಧವಭಟ್ಟ ಮತ್ತು ಮಾಣಿಕಭಟ್ಟರ ಸಂಗಡ ತದಂಗವಸ್ತ್ರಗಳನ್ನು ಕಳುಹಿಸಿಕೊಡುತ್ತಾನೆ.[೫೯] ಅಲ್ಲದೆ ಚಿತ್ರದುರ್ಗದ ಅರಸರು ತಮ್ಮ ಅರಮನೆಯ ಚಾಕರರಿಗೆ ಅನ್ನ, ವಸ್ತ್ರ ಕೊಟ್ಟು ಕಾಪಾಡಿ, ಅವರ ಮಕ್ಕಳಿಗೆ ಅರಮನೆಯಿಂದಲೇ ಮದುವೆ ಶಾಸ್ತ್ರ ನೆರವೇರಿಸಿಕೊಡುತ್ತಿದ್ದರು.[೬೦]

ಸುರಪುರದ ಅರಸರು ತಮ್ಮ ರಾಜಪುರೋಹಿತರಿಗೆ ಮದುವೆಯ ಉಡುಗೊರೆಯನ್ನು ನೀಡುತ್ತಿದ್ದರು. ಆನೆಗೊಂದಿ ಅರಸರು ತಮ್ಮ ಮನೆಯಲ್ಲಿ ವಿವಾಹಗಳು ಜರುಗಿದರೆ, ಇಂದಿನವರೆಗೆ ಶ್ರೀಶೃಂಗೇರಿಮಠದ

ಸ್ವಾಮಿಗಳನ್ನು ಆಹ್ವಾನಿಸುತ್ತಾರೆ. ಅವರಿಗೆ ಉಡುಗೊರೆಗಳನ್ನು ನೀಡುತ್ತಾರೆ. ಗುಡಗುಂಟಿ ಅರಸ ಜಡಿಸೋಮಪ್ಪನಾಯಕನ ಮದುವೆಯ ಸಂದರ್ಭದಲ್ಲಿ ತಮ್ಮ ಆರಾಧ್ಯದೈವ ಅಮರೇಶ್ವರನ ಗುರುಗಳಾದ ಶ್ರೀ ಗಜದಂಡ ಮಹಾಸ್ವಾಮಿಗಳು ದೇವರಭೂಪೂರವರನ್ನು ಹಾಗೂ ತಮ್ಮ ಮನೆಗುರುಗಳಾದ ರಾಜಗುರುಸ್ವಾಮಿಗಳನ್ನು ಆಹ್ವಾನಿಸಿ ಉಡುಗೊರೆಗಳನ್ನು ನೀಡಿದ್ದರು.[೬೧]

ಸುರಪುರದ ಅರಸರು ತಮ್ಮ ಸೀಮೆಯಲ್ಲಿ ಜನಿಸಿದ ಗಂಡುಮಗುವಿಗೆ ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳು ಪೋಷಣೆಗಾಗಿ ಐದು ರೂಪಾಯಿಗಳಂತೆ ಪ್ರೌಢನಾಗುವವರೆಗೆ ನೀಡುತ್ತಿದ್ದರು. ಬಾಲಕನಿಗೆ ಗರಡಿಮನೆಯಲ್ಲಿ ಯುದ್ಧವಿದ್ಯೆಯನ್ನು ಕಲಿಸಲಾಗುತ್ತಿತ್ತು. ಈ ವಿದ್ಯೆಯಲ್ಲಿ ಪ್ರವೀಣನಾದ ಮೇಲೆ ಅರಸನ ಸಮ್ಮುಖದಲ್ಲಿ ಒಂದುಗೂಡಿಸಿ ಅವರಿಗೆ ಸಾಮೂಹಿಕ ಲಗ್ನ ಮಾಡುತ್ತಿದ್ದರು. ಲಗ್ನವಾದ ನವದಂಪತಿಗಳಿಗೆ ಶಸ್ತ್ರಾಸ್ತ್ರ ಮತ್ತು ಉಡುಗೊರೆ ಕೊಟ್ಟು ಕಳುಹಿಸುತ್ತಿದ್ದರು.[೬೨]

### ೪.೨.೧.೮ ಮೆರವಣಿಗೆ

ವಿವಾಹದ ನಂತರ ಸಾಯಂಕಾಲ ವಧು-ವರರ ಮೆರವಣಿಗೆ ನಡೆಯುತ್ತಿತ್ತು. ವಧು-ವರರನ್ನು ಕುದುರೆಯ ಮೇಲೆ ಕೂರಿಸಿ ಕೈಗೆ ಬಾಕು ಕೊಟ್ಟು, ಹಗಲುದೀವಟಿಗೆಗಳೊಂದಿಗೆ ಓಲಗ ಬಾರಿಸಿಕೊಂಡು ಮೆರವಣಿಗೆ ನಡೆಯುತ್ತಿತ್ತು.[೬೩] ಅರಸರ ಈ ಮೆರವಣಿಗೆಯು ಸಾಗುತ್ತಾ ತಮ್ಮ ಮನೆದೇವರು ಮತ್ತು ಮನೆದೇವತೆಯ ಪೂಜೆಯನ್ನು ಸಲ್ಲಿಸಲಾಗುತ್ತಿತ್ತು. ನಂತರ ಬೀದಿಯಲ್ಲಿ ಮೆರವಣಿಗೆ ಮಹೋತ್ಸವವು ಜರುಗುತ್ತಿತ್ತು.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ಮೆರವಣಿಗೆಯನ್ನು ಪುರುಷಕಾರಿ ಲೋಕಯ್ಯ ಈ ರೀತಿ ವಿವರಣೆ ನೀಡುತ್ತಾನೆ : ಆನೆಗೆ ಅಂಬಾರಿ ಹಾಕಿಸಿ, ಪಟ್ಟದಾನೆಗಳಿಗೆ ವಿಶಿಷ್ಟವಾಗಿ ಶೃಂಗಾರ ಮಾಡಿಸಿ

> ಭೇರಿ ಭಾಂಕಾರ ವಾದ್ಯವು
> ಭೋರಿಡಲು ಪಟ್ಟನು ತುಂಬಿ
> ಸಾರಿ ಬಂದರು ವೇಶ್ಯಮೇಳವು ಸಾಲು ಇಪ್ಪತ್ತು[೬೪]

ಹಾಗೆಯೇ,

> ಭಟ್ಟರೂ ಬೆಳ್ಳಿ ಬೆತ್ತದವರೂ
> ಧಟ್ಟಸೀ ಫೈಸುಮಾಡೋ ಚೋಪುದಾರ್
> ವಷ್ಟು ಜನರೂ ಕಲಿತು ಮೆರವಣಿಗೆ ವರಟರತಿ ಮುದದೀ[೬೫]

ವಧುವರರ ತಂದೆಯರು ಮೆರಣಿಗೆಯಲ್ಲಿ ಭಾಗವಹಿಸಿದ್ದರು.

> ವಂದು ಅಂಭಾರೆಲ್ಲೆ ಮದುಮಗ
> ವಂದು ಅಂಭಾರೆಲ್ಲೆ ಮದುಮಗಳು
> ಚಂದದಿಂದಾಕಿದರು ಘಡಾ ಟೋಪು ಆನೀಗೆ[೬೬]

ಹೀಗೆ ಮೆರವಣಿಗೆಯು ಮುಂದಕ್ಕೆ ಸಾಗಿತು. ದಿಬ್ಬಣದಲ್ಲಿ ಕುಣಿಯುವವರು ಕೆಲವರಾದರೆ, ಕೆಲವರು ತೋಪುಗಳನ್ನು ಹಾರಿಸಿದಾಗ ಆಕಾಶಬಾಣಗಳು ಸಿಡಿಯುತ್ತಿದ್ದವು. ದಾರಿಯುದ್ದಕ್ಕೂ ಜನ ವಧು-ವರರಿಗೆ ಶುಭ ಹಾರೈಸುತ್ತಿದ್ದರೆ, ಮತ್ತೆ ಕೆಲವರು ಕಾಯಿ ಸಕ್ಕರೆಯನ್ನು ನೀಡುತ್ತಿದ್ದರು. ಮೆರವಣಿಗೆ ಮುಗಿದು ಕೊನೆಗೆ ಅರಮನೆಗೆ ಬಂದಾಗ,

ವಂದನಂಗಳುಗೈದು ಭಕ್ತಿಲಿ
ಬಂದ್ರು ಸರ್ವರು ಅರಮನಿಂಗೆ
ಚಂದದಿಂದಲಿ ದೃಷ್ಟಿ ಬಲಿಗಳು ತೆಗೆದ್ರು ಅವರಿಂಗೆ[೬೭]

ನಂತರ ಎಲ್ಲಾ ಬಂಧುಗಳಿಗೆ ಊಟ ವ್ಯವಸ್ಥೆಯನ್ನು ಮಾಡಲಾಗಿತ್ತು. ಊಟದ ವ್ಯವಸ್ಥೆಯನ್ನು ಕುರಿತು,

ಕಾಯಿರಸ ಅಪ್ಪಳವು ಸಂಡಿಗಿ
ಆಯತದಿ ಸೂಸಲವು ಚಿಟ್ಕಿಗಳ್
ಬಾಯಿರುಚಿಯಾಗಿರುವೊ ಖೀರವ ಬೂಂದೆ ಮಂಡಿಗಿಯು[೬೮]

ಎಲ್ಲರ ಊಟವಾದ ಮೇಲೆ ಮದುವೆಯಲ್ಲಿ ಭಾಗವಹಿಸಿದ ಅರಸರಿಗೆ ಮತ್ತು ಇನ್ನಿತರರಿಗೆ ಉಡುಗೊರೆಯನ್ನು ನೀಡಿ ಸತ್ಕರಿಸಲಾಯಿತು. ಈ ರೀತಿ ಮದುವೆಯ ಮೆರವಣಿಗೆ ಸಾಗುತ್ತಿತ್ತು. ನಂತರ ವಧು-ವರರನ್ನು ಅರಮನೆಯ ದೇವರಕೋಣೆಗೆ ಕರೆದೊಯ್ಯುತ್ತಿದ್ದರು. ಮೂರುಜನ ಮುತ್ತೈದೆಯರು ಇಬ್ಬರು ವಿವಾಹಿತ ಪುರುಷ ಜೊತೆ ವಧು-ವರರಿಗೆ ಶ್ಯಾವಿಗೆಯನ್ನು ಊಟ ಮಾಡಿಸುತ್ತಾರೆ. ನಂತರ ಸಾಸಕ್ಕಿಯಕಟ್ಟೆಯ ಮೇಲೆ ಕೂಡಿಸಿ ಅವರಿಂದ ಪರಸ್ಪರ ಹೆಸರನ್ನು ಹೇಳಿಸಿ, ವರನ ತಲೆಯ ಮೇಲಿನ ಬಾಸಿಂಗ ತೆಗೆಯುತ್ತಾರೆ. ವಧುವಿನ ತಲೆಯಿಂದ ಹೂವಿನದಂಡೆ ಇಳಿಸುತ್ತಿದ್ದರು. ಅಂದಿನ ದಿನವೇ ಶುಭದಿನವೆಂದು ಅಂದಿನ ರಾತ್ರಿಯೇ ನಿಷೇಕ ಪ್ರಸ್ತವಕಾರ್ಯ ನಡೆಸುತ್ತಿದ್ದರು.[೬೯]

### ೪.೨.೧.೯ ನಾಗೋಲಿಶಾಸ್ತ್ರ

ಮದುವೆಯ ಮರುದಿನ ನಾಗೋಲಿಶಾಸ್ತ್ರವೆಂದು ಮಾಡುತ್ತಿದ್ದರು. ಇದೇ ಮದುವೆಯ ಕೊನೆಯ ಕಾರ್ಯವಾಗಿತ್ತು. ವಧುವನ್ನು ಮನೆದುಂಬಿಸಿಕೊಳ್ಳುವ ಶಾಸ್ತ್ರವಾಗಿತ್ತು. ಅಂದು ವಧು-ವರರ ಕಂಕಣಗಳನ್ನು ಬಿಚ್ಚುತ್ತಿದ್ದರು. ಮದುವೆ ಮಂಟಪವನ್ನು ಪೂಜೆ ಮಾಡಿ ಎಲ್ಲರಿಗೂ ತಾಂಬೂಲ ಹಂಚುತ್ತಿದ್ದರು. ಈ ರೀತಿ ನಾಯಕ ಅರಸುಮನೆತನಗಳಲ್ಲಿ ವಿವಾಹ ಸಮಾರಂಭ ಜರುಗುತ್ತಿತ್ತು. ಇದು ಅರಸನ ಮೊದಲ ವಿವಾಹವಾಗಿರುತ್ತಿತ್ತು. ಕೆಲವು ಸಲ ಅರಸ ಇನ್ನಿತರ ಪತ್ನಿಯರನ್ನು ಹೊಂದುತ್ತಿದ್ದ. ಆದರೆ ವಿವಾಹ ಸಮಾರಂಭ ವಿಜೃಂಭಣೆಯಿಂದ ನೆರವೇರುತ್ತಿರಲಿಲ್ಲ. ಚಂದ್ರಾಯುಧವನ್ನು ಕಳುಹಿಸುವುದರ ಮೂಲಕ ವಿವಾಹ ಜರುಗುತ್ತಿತ್ತು.

ಚಿತ್ರದುರ್ಗದ ಓಬಣ್ಣನಾಯಕ (ಕ್ರಿ.ಶ. ೧೬೭೪-೧೬೭೫)ನಿಗೆ ತರೀಕೆರೆ ಪಾಳೆಯಗಾರರು ಬಿದನೂರು ಚನ್ನಮ್ಮಾಜಿ ಹಾಗೂ ಶಬನಿ ಕೃಷ್ಣಪ್ಪರ ಮೂಲಕ ತಮ್ಮ ಮಗಳು ಹನುಮವ್ವಳನ್ನು ಕೊಡುವುದಾಗಿ ಹೇಳಿ ಕಳುಹಿಸಿದಾಗ, ಓಬಣ್ಣನಾಯಕ ಪಟ್ಟದ ಚಂದ್ರಾಯುಧವನ್ನು ಕಳುಹಿಸಿ ಅದಕ್ಕೆ ಲಗ್ನ ಮಾಡಿಕೊಡಬೇಕೆಂದು ಹೇಳಿಕಳುಹಿಸುತ್ತಾನೆ. ಆಗ ತರೀಕೆರೆಯವರು ತಮಗೆ ಅವಮಾನವಾಯಿತೆಂದು ಶಕುನವ್ವ ಎಂಬ ಬೇರೆ ಹೆಣ್ಣನ್ನು ಮದುವೆ ಮಾಡಿ ಕಳುಹಿಸುತ್ತಾರೆ. ಇದನ್ನು ಕೇಳಿದ ಓಬಣ್ಣನಾಯಕ ತರೀಕೆರೆಯ ಮೇಲೆ ದಾಳಿಮಾಡಲು ತಯಾರಾದನು. ಆಗ ತರೀಕೆರೆಯವರು ತಮ್ಮ ನಿಯೋಗಿಗಳ ಮೂಲಕ ಹನುಮವ್ವನಾಗತಿಯನ್ನು ಕೊಡುತ್ತೇವೆಂದು ಹೇಳಿ ಕಳುಹಿಸಿದಾಗ, ಓಬಣ್ಣನಾಯಕ ತರೀಕೆರೆಗೆ ಹೋಗಿ ಹನುಮವ್ವನಾಗತಿಯನ್ನು ಮದುವೆಯಾಗಿ ಬರುತ್ತಾನೆ.[೨೦] ಹೀಗೆ ಅರಸನ ಬದಲಾಗಿ ಚಂದ್ರಾಯುಧವನ್ನು ಕೂಡಿಸಿ ಮದುವೆ ಮಾಡಿಕೊಡುವ ಪದ್ಧತಿಯು ಹಿಂದಿನಿಂದಲೂ ಚಿಕ್ಕಣ್ಣನಾಯಕ (ಕ್ರಿ.ಶ. ೧೬೭೫-೧೬೮೬)ನ ಕಾಲದವರೆಗೆ ನಡೆದು ಬಂತೆಂದು ತಿಳಿಯುತ್ತದೆ.[೨೧]

ಈ ಮನೆತನಗಳಲ್ಲಿ ವಿವಾಹವಿಚ್ಛೇದನೆ ಹಾಗೂ ವಿಧವಾ ವಿವಾಹಪದ್ಧತಿ ಜಾರಿಯಲ್ಲಿರಲಿಲ್ಲ. ಸತಿಸಹಗಮನಪದ್ಧತಿ ಈ ಮನೆತನಗಳಲ್ಲಿ ಕಡ್ಡಾಯವಾಗಿರಲಿಲ್ಲವಾದರೂ ಸ್ವಇಚ್ಛೆಯಿಂದ ಅರಸ ತೀರಿದ ಬಳಿಕ ರಾಣಿಯರು ಪ್ರಾಣತ್ಯಾಗಕ್ಕೆ ಅಣಿಗೊಳ್ಳುತ್ತಿದ್ದರು.

ನಾಯಕ ಅರಸುಮನೆತನಗಳು ಬಹುಕಾಲದಿಂದಲೂ ಆಚರಿಸುತ್ತ ಬಂದಿರುವ ವಿವಾಹದ ರೂಢಿ ಪದ್ಧತಿಗಳು ಇಂದು ಈ ಮನೆತನಗಳಲ್ಲಿ ಸಂಕುಚಿತಗೊಳ್ಳುತ್ತಿವೆ. ಒಂದುಕಾಲಕ್ಕೆ ಹದಿನೈದು ದಿನಗಳವರೆಗೆ ಜರುಗುತ್ತಿದ್ದ ವಿವಾಹ ಇಂದು ಕೇವಲ ಒಂದುದಿನಕ್ಕೆ ಸೀಮಿತವಾಗಿದೆ. ಹಾಗೂ ದಿನದಿಂದ ದಿನಕ್ಕೆ ತನ್ನ ಮಹತ್ವ ಕಳೆದುಕೊಳ್ಳುತ್ತಿದೆ. ಈ ಮನೆತನದವರು ವೈವಾಹಿಕ ಸಂದರ್ಭದಲ್ಲಿ ಗೋತ್ರವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದವರು ಇಂದು ಸಾಮಾನ್ಯ ಬೇಡರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುತ್ತಿದ್ದಾರೆ. ಅವರಿಗೆ ಆರ್ಥಿಕ ಸಬಲತೆಯ ಮನೆತನ ಸಿಕ್ಕರೆ ಸಾಕೆಂಬ ಮಟ್ಟಕ್ಕೆ ತಲುಪಿದ ಕೆಲವು ಮನೆತನಗಳಿವೆ. ಈ ಕೆಲವು ಮನೆತನಗಳು ತಮ್ಮ ಅರಸುಮನೆತನದ ವಂಶಸ್ಥರು, ಕಡು ಬಡವರಿದ್ದರೂ ಪರವಾಗಿಲ್ಲ ಅವರೊಂದಿಗೆ ಸಂಬಂಧ ಬೆಳೆಸಬೇಕೆಂಬ ಕಟ್ಟುಪಾಡಿಗೆ ಇಂದಿಗೂ ಜೋತುಬಿದ್ದಿದ್ದಾರೆ. ಇಷ್ಟೆಲ್ಲಾ ತೀವ್ರತೆಗಳ ನಡುವೆಯೂ ಅಂದಿನ ವಿವಾಹ ಸಂದರ್ಭದಲ್ಲಿ ಆಚರಿಸುತ್ತಿದ್ದ ಶಾಸ್ತ್ರ, ಸಂಪ್ರದಾಯಗಳು ಇಂದು ಸರಳೀಕರಣಕ್ಕೊಳಪಟ್ಟಿವೆ. ಇಂದಿನ ಆಧುನೀಕರಣ, ಸಂಸ್ಕೃತೀಕರಣಗಳ ಪ್ರಭಾವದಿಂದ ಕೆಲವೊಂದು ಮೌಢ್ಯ ಸಂಪ್ರದಾಯಗಳು ಕಾಲದ ತೀವ್ರತೆಗೆ ಕೊಚ್ಚಿ ಹೋಗಿದ್ದರೆ, ಮತ್ತೆ ಕೆಲವು ಆಚರಣೆಗಳು ತಮ್ಮ ಪರಂಪರೆಯನ್ನು ಮುಂದುವರೆಸುವಲ್ಲಿ ಶಾಕ್ತವಾಗಿಲ್ಲದೆ ಸೋರುಗುತ್ತಿವೆ.

## ೪.೩ ಉಡುಗೆ-ತೊಡುಗೆ

ಕರ್ನಾಟಕ ನಾಯಕ ಅರಸುಮನೆತನಗಳವರ ಉಡುಗೆ-ತೊಡುಗೆಗಳು ಅವರ ಅವಶ್ಯಕತೆ ಹಾಗೂ ರಾಜವೈಭವಕ್ಕನುಗುಣವಾಗಿ ವೈವಿಧ್ಯತೆಯನ್ನು ಹೊಂದಿದ್ದವು. ಅವರ ಉಡುಗೆ-ತೊಡುಗೆಗಳಿಗೆ ಸಂಬಂಧಿಸಿದಂತೆ ಲಿಖಿತ-ಬರಹ ಮತ್ತು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ಬಹಳ ಕಡಿಮೆ. ಹೀಗಾಗಿ ಅರಸರ ಲೌಕಿಕಶಿಲ್ಪಗಳು, ಆ ಕಾಲದ ಜನಪದಸಾಹಿತ್ಯ ಹಾಗೂ ಇಂದಿಗೂ ಆ ಮನೆತನಗಳಲ್ಲಿರುವ ಅರಸರ ಉಡುಗೆ-ತೊಡುಗೆಗಳು, ರಾಜರಾಣಿಯರ ಛಾಯಾಚಿತ್ರಗಳು ಮತ್ತು ಆ ಮನೆತನದ ವಂಶಿಕರ ಸಂದರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಇವರ ಉಡುಗೆ-ತೊಡುಗೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಒಂದು ಕಾಲಕ್ಕೆ ಸಾಮಾನ್ಯರಂತೆ ಉಡುಗೆ-ತೊಡುಗೆ ಧರಿಸುತ್ತಿದ್ದ ಇವರು ಅಧಿಕಾರ ಪ್ರಾಪ್ತವಾದಂತೆ ಇವರ ಉಡುಗೆ-ತೊಡುಗೆಗಳಲ್ಲಿ ಬದಲಾವಣೆಗಳಾದವು. ಅಂದಿನ ಸಮಕಾಲೀನ ಅರಸರ ಉಡುಗೆ-ತೊಡುಗೆಗಳನ್ನು ಇವರು ಅನುಕರಣೆ ಮಾಡಿರಲೂಬಹುದು. ಈ ಮನೆತನಗಳ ಅರಸರು, ರಾಣಿಯರು ಸಾಮಾನ್ಯ ಹಾಗೂ ವಿಶೇಷ ದಿನಗಳಲ್ಲಿ ಧರಿಸುತ್ತಿದ್ದ ಉಡುಪುಗಳು, ಆಭರಣಗಳು ಹಾಗೂ ಅವುಗಳ ಕುರಿತಾದ ವಿಧಿ ವಿಧಾನಗಳನ್ನು ರೂಪಿಸಿಕೊಂಡ ಬಗೆಯೊಂದಿಗೆ ಪ್ರಸ್ತುತ ದಿನಗಳಲ್ಲಿ ಅವರಲ್ಲಿ ಉಡುಗೆ-ತೊಡುಗೆಗಳ ಬಳಕೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ನಾಯಕ ಅರಸುಮನೆತನಗಳವರು ಸಂದರ್ಭಕ್ಕೆ ತಕ್ಕಂತೆ ಉಡುಗೆ-ತೊಡುಗೆಗಳನ್ನು ಧರಿಸುತ್ತಿದ್ದರು. ಅರಮನೆಯಲ್ಲಿ ನಡೆಯುವ ಸಭೆ, ಸಾರ್ವಜನಿಕರಿಗೆ ಭೇಟಿ ಕೊಡುವಾಗ, ಪೂಜಾವೇಳೆಯಲ್ಲಿ, ಹಬ್ಬ-ಉತ್ಸವಗಳಲ್ಲಿ, ತೀರ್ಥಯಾತ್ರೆಗೆ ತೆರಳುವಾಗ, ಬೇಟೆಗೆ ತೆರಳುವಾಗ, ವಿವಾಹ ಸಂದರ್ಭಗಳಲ್ಲಿ, ಯುದ್ಧಕ್ಕೆ ತೆರಳುವಾಗ ಅವರು ಧರಿಸುತ್ತಿದ್ದ ಉಡುಗೆ-ತೊಡುಗೆಗಳಲ್ಲಿ ವ್ಯತ್ಯಾಸಗಳಿರುವುದನ್ನು ಕಾಣಬಹುದು.

ಚಿತ್ರದುರ್ಗ ಅರಸರು ಅಲಂಕಾರಪ್ರಿಯರಾಗಿದ್ದು, ಹಿಂದಿನ ರಾಜಮಹಾರಾಜರಂತೆ ಉಡುಗೆ-ತೊಡುಗೆಗಳನ್ನು ಧರಿಸುತ್ತಿದ್ದರು. ಬಿಳಿಯ ಧೋತ್ರ, ಸುತ್ತಿದ ಮುಂಡಾಸು(ಉದ್ದನೆ ಪಾವಡ) ಕಸೆಯ ಬಿಳಿ ನಿಲುವಂಗಿ, ಬಿಳಿಯ ಹಚ್ಚಡ, ಹಣೆಯಲ್ಲಿ ಕಸ್ತೂರಿ ತಿಲಕ, ಭಂಡಾರ, ಮುಂಡಾಸಿಗೆ ತುರಾಯಿ, ಬೆರಳಲ್ಲಿ ಉಂಗುರ, ಕಾಲಲ್ಲಿ ಗಗ್ಗರ, ಕೊರಳಲ್ಲಿ ಗುಂಡಿನ ಮುತ್ತಿನಸರ, ಕವಡೆಯಸರ, ಕಂಠೀಸರ, ಕಾಲಲ್ಲಿ ಪೆಂಡೆಯ, ಕಿವಿಯಲ್ಲಿ ಒಂಟಿ ಬಾವುಲಿ, ಹಣೆಯಲ್ಲಿ ಗೀರುಗಂಧ, ಬಟ್ಟುಗಂಧ ಧರಿಸುತ್ತಿದ್ದುದುಂಟು.[೭೨] ಚಿತ್ರದುರ್ಗದ ಅರಸ ಅರಮನೆಯಲ್ಲಿದ್ದಾಗ ಧರಿಸಿದ್ದ ಉಡುಗೆಯ ಕುರಿತಾದ ಕೋಲುಪದದ ನುಡಿಯೊಂದು,

ಅಚ್ಚಬಿಳಿ ಪಟ್ಟೆಯೊಂದ್ಹಚ್ಚಡದೊರಲಯ್ಯ
ಗಚ್ಚಿಚಿನ್ನದ ಕಂಬಿ ಪಾಗು ಸುತ್ತಿರಲು
ಮುತ್ತಿನ ತುರಾಯಿ ಇಳಿಯ ಬಿಟ್ಟಿರಲು[೭೩]

ಎಂಬ ವಿವರಣೆ ನೀಡಿದರೆ, ಇನ್ನೊಂದು ಕೋಲುಪದದಲ್ಲಿ

ಅಚ್ಚಡವ ಹೊದ್ದಿದ್ದ, ಗಚ್ಚು ಚಿನ್ನದ ಪಾಗು ಸುತ್ತಿದ್ದ
ಮುತ್ತಿನ ತುರಾಯಿ ಇಳಿಯ ಬಿಟ್ಟಿದ್ದ| [೭೪]

ಈ ನುಡಿಯಲ್ಲಿ ಅರಸ ಅರಮನೆಯಲ್ಲಿ ತನ್ನ ಕೌಟುಂಬಿಕ-ಪರಿವಾರದೊಂದಿಗೆ ಇರುವಾಗಿನ ಉಡುಗೆ-ತೊಡುಗೆಯ ಚಿತ್ರಣವನ್ನು ನೀಡುತ್ತದೆ. ಹೊರಗಡೆ ಕೋಟೆಯ ಸುತ್ತಲು ಹೊರಡುವಾಗಿನ ಉಡುಪಿನ ಕುರಿತಾಗಿ,

ಎದ್ದನು ಎಳೆಮೀಸೆ ತಿರುವುತ
ಉದ್ದನೆಯ ಪಾವುಡವ ಹೊದರುತ|[೭೫]

ಎಂದು. ಹಾಗೆಯೇ ಯುದ್ಧದ ಕಾಲದಲ್ಲಿ, ಯುದ್ಧದ ಸಿದ್ಧತೆಯಲ್ಲಿ ನಿರತನಾದ ಮದಕರಿಯು ತನ್ನ ಉಡುಪನ್ನು ಧರಿಸುವ ಪರಿ ಇಂತಿದೆ :

ಕರಿವರ್ತಿಗ್ಹೋದಾನು ಕೈಕಾಲು ತೊಳೆದನು
ನಿಲುವಗನ್ನಡಿ ಮೊಕನೋಡಿ | ಕೊಲೇರನ್ನದ
ನಿಲುವಗನ್ನಡಿ ಮೊಕನೋಡಿ ಮೆದಕೇರಿ
ದಟ್ಟಿಸುತ್ತೋದೆ ತಡವೆಂದ|[೭೬]

ಇನ್ನು ಯುದ್ಧಕ್ಕೆ ಸಿದ್ಧನಾದಾಗ ಮದಕರಿಯು ಉಡುಪುಗಳನ್ನು ಧರಿಸುವ ಪರಿ,

ಕೈಯ್ಯಾಕಲು ಮುಖವ ತೊಳೆದನೆ
ಕೈಯ್ಯಾಕಲು ಮುಖವ ತೊಳೆದನೆ | ಮದಕೇರಿ
ಒಳ್ಳೆ ನಿಲುವಂಗಿ ತೊಟ್ಟಾನೆ | ಉಕ್ಕಿನ ಹೀಜಾರ
ತೊಟ್ಟನೆ ಧೀರ ಮದಕೇರಿ.[೭೭]

ನಂತರ ರಥದಲ್ಲಿ ಕುಳಿತಿರುವಾಗ ಮದಕರಿ ಧರಿಸಿದ ಉಡುಪುಗಳು

ಎಡಭರ್ಜಿ ಬಲಭರ್ಜಿಗಳು ಮೇಲುದುರ್ಗದ ಹುಜುರಾತಿಗಳು
ಕಸ್ತೂರಿಭಂಟ ಕಾದಿಬರುವೋ ಕಾಮಗೇತಿ ಏರಿಬರುವಂಥ
ರಥವ ನಡಿಸುವರಣ್ಣ ಕಲಿಕೆ ತುರಾಯದವರು
ಗಚ್ಚುಚಿನ್ನದಪಾಗು ಸುತ್ತಿದವರು ಚಿನ್ನದ ಹಿಡಿವರ್ಗ ಬೆಳ್ಳಿ ಮೂಗುದಾಣ[೭೮]

ಎಂಬ ವಿವರಣೆಯನ್ನು ನೀಡುತ್ತದೆ. ಯುದ್ಧದ ದಂಡಿನಲ್ಲಿ ಅರಸ ಧರಿಸಿದ್ದ ಉಡುಪಿನ ಕುರಿತಾಗಿ

ಅಚ್ಚ ಬಿಳಗಿದ ಪಚ್ಚೆ ಅಚ್ಚಡ್ಹೊದ್ದಿದ್ದ
ಗಚ್ಚೀಸಿ ಮುಂಡಾಸು-ಪಾಗ ಸುತ್ತಿದ್ದ
ದಂಡು ನೋಡಾನ್[೭೯]

ಎನ್ನುವುದು.

ಹಾಗೆಯೇ ಮಾಯಾಕೊಂಡದ ಕಾಳಗದಲ್ಲಿ ಹಿರೇ ಮದಕರಿನಾಯಕ ಜರತಾರಿ ತೊಟ್ಟು ರಣರಂಗಕ್ಕೆ ಸಾಗಿದ.[೮೦] ಈ ಎಲ್ಲಾ ಜನಪದ ಆಕರಗಳು ಚಿತ್ರದುರ್ಗದ ಅರಸರ ಉಡುಗೆ-ತೊಡುಗೆಯ ವಿವರವನ್ನು ನೀಡುತ್ತವೆ. ಇಲ್ಲಿ ಅವರು ತಲೆಗೆ ಮುಂಡಾಸು ಕಟ್ಟುವುದು ಹಾಗೂ ಬಿಳಿಯ ಧೋತಿಯನ್ನು ತೊಡುತಿದ್ದುದರ ವಿವರಣೆ ಸಿಗುತ್ತದೆ.

ಹಿರೇ ಮದಕರಿನಾಯಕನು ತನ್ನ ಹಿರಿಯ ಮಗನಾದ ಕಸ್ತೂರಿ ರಂಗಪ್ಪನಾಯಕನ ಯುವರಾಜ್ಯಾಭಿಷೇಕವನ್ನು ಮಾಡುತ್ತಿರುವ ವಿವರಣೆಯು ನಮಗೆ ಹುಲ್ಲೂರು ಶ್ರೀನಿವಾಸ ಜೋಯಿಸರು ಸಂಗ್ರಹಿಸಿದ ಹಿರೇಮದಕರಿನಾಯಕನ ತಾರಾವಳಿಯಲ್ಲಿ ದೊರಕುತ್ತದೆ. ಕಸ್ತೂರಿ ರಂಗಪ್ಪನಾಯಕನು ಬಂಗಾರದ ಬಣ್ಣದ ಕಂಧರವನ್ನು, ಮುತ್ತಿನಂತೆ ಹೊಳೆಯುವ ರದನ ಪಂಗ್ತಿಗಳನ್ನು, ಕಿರುಬೆರಳಲ್ಲಿ ಮುದ್ರೆಯುಂಗುರವನ್ನಿಟ್ಟಿದ್ದಾನೆ. ಮುತ್ತಿನ ಒಂಟಿ ಮುಂತಾದ ಕರ್ಣಾಭರಣಗಳನ್ನು ಧರಿಸಿದ್ದಾನೆ. ಧವಳಾಂಗಧರಿಸಿ ಝುರಿಯ ತಾನು ಸುತ್ತಿಕೊಂಡು ಮುತ್ತಿನ ತುರಾಯಿ ಇಟ್ಟುಕೊಂಡು ಸುಖಾಸೀನನಾಗಿರುವನು.[೮೧] ಇಲ್ಲಿ ಆ ಕಾಲದ ಯುವರಾಜ ಪಟ್ಟಾಭಿಷೇಕದ ಉಡುಗೆ-ತೊಡುಗೆಯ ವಿವರಣೆ ದೊರೆಯುತ್ತದೆ.

ಕೊನೆಯ ದೊರೆ ರಾಜಾ ವೀರಚಿಕ್ಕಮದಕರಿನಾಯಕನು ರೂಪಿನಲ್ಲಿ ಬಲು ಚೆಲುವ, ಎಣ್ಣೆನೆಂಪಿನ ದುಂಡುಮುಖ, ಸದಾ ಮುಗುಳುನಗೆ, ತಲೆಗೆ ಚಿನ್ನದ ಎಳೆಯ ಕಸೂತಿಯಿಂದ ಕೂಡಿದ ರೇಷ್ಮೆಯ ಸೊಗಸಾದ ಮುಂಡಾಸವನ್ನು ಸುತ್ತಿ, ಹಣೆಯಲ್ಲಿ ಕಸ್ತೂರಿಯ ಗಂಧದ ತಿಲಕವನ್ನಿಟ್ಟು ಕಿವಿಯಲ್ಲಿ ಹರಳೋಲೆಗಳನ್ನು, ಕೊರಳಲ್ಲಿ ರತ್ನಹಾರವನ್ನು ಧರಿಸಿ, ನಡುವಿನಲ್ಲಿ ರಾಜಲಾಂಛನದ ರತ್ನಖಚಿತ ಹಿಡಿಯ ಖಡ್ಗವನ್ನು ಬಿಗಿದು ಅಚ್ಚ ಬಿಳಿಯ ವರ್ಣದ ಕುದುರೆಯನ್ನೇರಿ ಬರುತ್ತಿದ್ದನು.[೮೨]

ಚಿತ್ರದುರ್ಗದ ಏಕನಾಥೇಶ್ವರಿ ದೇವಾಲಯದ ದೀಪದ ಕಂಬದಲ್ಲಿ ಎರಡು ಶಿಲ್ಪಗಳಿದ್ದು, ಈ ಸ್ತಂಭದ ಬುಡದಲ್ಲಿ ಏಕನಾಥೇಶ್ವರಿ ದೇವಾಲಯಕ್ಕೆ ಅಭಿಮುಖವಾಗಿ ನಿಂತ ಗಡ್ಡ-ಮೀಸೆಗಳಿರುವ ವಿಜಯನಗರ ಕಾಲದ ಆಭರಣಗಳು, ತಲೆಯುಡುಗೆ, ದಟ್ಟಿ ಮತ್ತು ಕಾಸೆ, ಬಾಕುಗಳನ್ನು ನೋಡಬಹುದಾಗಿದೆ. ಇವನನ್ನು ಗಡ್ಡದ ಮದಕರಿನಾಯಕ ಎಂದು ಕರೆಯಲಾಗುತ್ತದೆ.

ಇಮ್ಮಡಿ ಹರಿಹರನ ಕಾಲದಲ್ಲಿ ಅನೇಕ ಮಾಂಡಲೀಕ ರಾಜರು ವಿರುಪಾಕ್ಷ ವಸಂತೋತ್ಸವದಲ್ಲಿ ಭಾಗವಹಿಸಿದ ಬಗ್ಗೆ ಅಹೋಬಲ ಪಂಡಿತನು ತನ್ನ 'ವಿರೂಪಾಕ್ಷ ವಸಂತೋತ್ಸವ ಚಂಪೂ' ಕಾವ್ಯದಲ್ಲಿ ಚಿತ್ರದುರ್ಗ ನಾಯಕ ಅರಸನ ಕುರಿತಾಗಿ ಈ ರೀತಿ ಹೇಳುತ್ತಾನೆ. ಕಡುಗಪ್ಪು ಮೈಬಣ್ಣದವ, ಯಮನ ಅಂಶಾವತಾರವೋ ಎಂಬತ್ತಿದ್ದಾನೆ. ಈತ ಚಿತ್ರಶಿಲಾನಗರದ ಪ್ರಭು, ಅನೇಕ ಶಬರ ಭಟರುಗಳಿಂದ ಬಂದಿದ್ದಾನೆ. ಹುಲಿ, ಆನೆ, ಚರ್ಮಗಳನ್ನು ಧರಿಸಿಕೊಂಡು ನವಿಲುಗರಿಯ ಪಿಂಛವನ್ನು ಚುಚ್ಚಿಕೊಂಡಿದ್ದಾನೆ. ಕೈಯ್ಯಲ್ಲಿ ಮುತ್ತಿನ ಉತಹಾರಗಳನ್ನು ಹಿಡಿದ ಈತನ ಹಿಂದೆ ಬೇಟೆನಾಯಿಗಳಿರುವ ನಾನಾ ವೇಷಗಳ

ಕಿರಾತಭಟರಿದ್ದಾರೆ[೮೩] ಎಂದು ಹೇಳುತ್ತಾನೆ. ಇದರ ಕುರಿತಾಗಿ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಪ್ರತಿಕ್ರಿಯಿಸಿರುವುದು ಹೀಗೆ : ಚಿತ್ರದುರ್ಗದ ಅರಸರು ಬೆಲೆಬಾಳುವ ರೇಶ್ಮೆಬಟ್ಟೆಯ ಧೋತರ, ನಿಲುವಂಗಿ, ಜರತಾರಿ ಮುಂಡಾಸು, ಅಥವಾ ರುಮಾಲು ತೊಡುತ್ತಿದ್ದರು. ಇವರ ಉಡುಗೆ-ತೊಡುಗೆಗಳ ಕುರಿತು ಕೆಲವರು ವಿಕೃತವಾಗಿ ಚಿತ್ರಿಸಿದ್ದಾರೆ. ಅದರಲ್ಲಿ ಅಹೋಬಲನ ವಿರೂಪಾಕ್ಷ ವಸಂತೋತ್ಸವ ಒಂದಾಗಿದೆ. ಈ ಚಂಪೂಕೃತಿಯಲ್ಲಿ ಚಿತ್ರದುರ್ಗ ನಾಯಕ ಅರಸ ಸಾಮಾನ್ಯ ಬೇಡರ ಉಡುಗೆ-ತೊಡುಗೆ ಧರಿಸಿದ್ದನು ಎಂದು ಹೇಳುತ್ತಾರೆ. ಇದು ಮಧ್ಯಕಾಲೀನ ಶ್ರೇಣೀಕೃತ ಸಮಾಜ ಮತ್ತು ಆ ನೆಲೆಯ ಅತ್ಯಂತ ಹೀನಾಯವಾದ ಜಾತಿವ್ಯವಸ್ಥೆಯ ಪ್ರಭಾವ ಈ ಗ್ರಂಥಕರ್ತೃವಾದ ಅಹೋಬಲ ಪಂಡಿತನ ಮೇಲೂ ಆಗಿರುವಲ್ಲಿ ಆಶ್ಚರ್ಯವೇನೂ ಇಲ್ಲ.[೮೪] ಮಧ್ಯಕಾಲೀನ ಸಾಮಾಜಿಕ ಸಂದರ್ಭದಲ್ಲಿ ಬೇಡರು ರಾಜಕೀಯವಾಗಿ ಪ್ರಬಲರಾಗಿದ್ದರೂ ಅವರನ್ನು ನೋಡುವ ದೃಷ್ಟಿಕೋನ ಬದಲಾಗದೆ ಇರುವುದು ಒಂದು ವಿಪರ್ಯಾಸವೇ ಸರಿ. ಅವರು ಸಾಂದರ್ಭಿಕವಾಗಿ ಆ ಕಾಲದ ಉಡುಗೆ-ತೊಡುಗೆಗಳನ್ನು ಧರಿಸುತ್ತಿದ್ದುದು ಸ್ಪಷ್ಟ.

ಸುರಪುರದ ಅರಸರು ಕಲ್ಕಿ ಶಿರಪೇಚು, ನಿಲುವಂಗಿ ಜರತಾರಿ ಮುಂಡಾಸುಗಳನ್ನು ಧರಿಸುತ್ತಿದ್ದರು. ರಾಜಾ ಪಾಮನಾಯಕ ಮತ್ತು ಪಿಡ್ಡನಾಯಕರು ಇವುಗಳನ್ನೇ ಧರಿಸಿದ್ದಾರೆ. ಈ ಭಾಗದಲ್ಲಿ ಆದಿಲ್ ಶಾಹಿಗಳ ಪ್ರಭಾವ ಮತ್ತು ಹೈದ್ರಾಬಾದ್ ನಿಜಾಮನ ಪ್ರಭಾವವಿದ್ದುದರಿಂದ ಈ ರೀತಿಯ ಉಡುಪುಗಳನ್ನು ಧರಿಸಲು ಕಾರಣವಾಗಿರಬಹುದು. ಸುರಪುರದ ವಾಗಿನಗೇರಿ ಕಿಲ್ಲೆ ಆಳಿದ ಅರಸ ಪಾಮನಾಯಕ (ಕ್ರಿ.ಶ.೧೬೬೬-೧೬೮೭) ಹಸಿರುಬಣ್ಣದ ವಸ್ತ್ರವನ್ನು ಹೆಚ್ಚಾಗಿ ಧರಿಸುತ್ತಿದ್ದುದರಿಂದ ಹಸರಂಗಿ ಪಾಮನಾಯಕ ಎಂಬ ಹೆಸರು ರೂಢಿಯಾಯಿತೆಂದು ಕೆಲವು ವಿದ್ವಾಂಸರು ತರ್ಕಿಸಿದ್ದಾರೆ.[೮೫] ಆದರೆ ಆ ಸಂದರ್ಭದಲ್ಲಿ ಆದಿಲ್‌ಶಾಹಿ ಅರಸನಿಂದ ಪ್ರಭಾವಿತನಾಗಿ ಹಸಿರು ಬಣ್ಣವನ್ನು ಅಂಗೀಕರಿಸಿರುವ ಸಾಧ್ಯತೆಗಳೂ ಇರಬಹುದಾಗಿದೆ. ಹಾಗೆಯೇ ಬಹರಿ ಪಿಡ್ಡನಾಯಕ (ಕ್ರಿ.ಶ.೧೬೮೭-೧೭೨೬) ಪೀತಾಂಬರವನ್ನುಡುತ್ತಿದ್ದುದರಿಂದ ಈ ಹೆಸರು ಬಂದಿರಬಹುದು.

ಕೆಲವು ಸಲ ಸಾಮಂತರು ಸಹಾಯಾರ್ಥವಾಗಿ ಉಡುಗೆಗಳನ್ನು ಕಾಣಿಕೆಗಳನ್ನು ಸಲ್ಲಿಸಿರುವುದು ಕಂಡುಬರುತ್ತದೆ. ರಾಜಾ ವೆಂಕಟಪ್ಪನಾಯಕನು ಪುಲಚೇರಿ ಯುದ್ಧದಲ್ಲಿ ನವಾಬನಿಗೆ ಸಹಾಯ ಮಾಡಿದ್ದಕ್ಕಾಗಿ ವಜ್ರವೈಢೂರ್ಯ, ಕಂಠಿ, ಕಲ್ಕಿ, ಶಿರಪೇಚು, ಝುಗಾ, ತುರಾಯಿ, ಹಷರೀಪುಗಳನ್ನು ಕಾಣಿಕೆ ಕೊಟ್ಟು, ಮರ್ಯಾದೆಗೈದನು.[೮೬] ಹಾಗೆಯೇ ಇಮ್ಮಡಿ ಪಾಮನಾಯಕ (ಕ್ರಿ.ಶ.೧೭೨೭-೧೭೪೧)ನ ಪಟ್ಟಾಭಿಷೇಕದ ಕಾಲಕ್ಕೆ ನಿಜಾಮನು ಕಲ್ಕಿ, ಶಿರಪೇಚು, ಆನೆ, ಅಂಬಾರಿ ಮುಂತಾದ ಕಾಣಿಕೆಗಳನ್ನು ಕಳುಹಿಸಿಕೊಟ್ಟು, ತನ್ನ ಸ್ನೇಹವನ್ನು ತೋರಿಸಿಕೊಟ್ಟನು.[೮೭]

ಬಹಾದುರಶಾಹನು ಕಾಮುಭಕ್ಷನೊಡನೆ ಕಾದುವಾಗ ಪಾಮನಾಯಕನಿಗೆ ಪತ್ರ ಬರೆದು ಕಳುಹಿದನು. ಆಗ ೧೮,೦೦೦ ಕುದುರೆ, ೧೦ ಆನೆ, ೨೦,೦೦೦ ಭಟರೊಡನೆ ಹೋಗಿ ಪಾಮನಾಯಕನು ಕಾದಿದನು. ಈ ಯುದ್ಧದಲ್ಲಿ ಕಾಮುಭಕ್ಷನು ಮೂರ್ಛಿತನಾದನು. ಇತ್ತ ಪಾಮನಾಯಕನೂ ಗಾಯ ಹೊಂದಿದನು. ಬಹಾದ್ದೂರಶಾಹನು ಸ್ವತಃ ಲಕ್ಷ್ಯಗೊಟ್ಟು ಪಾಮನಾಯಕನ ಆರೈಕೆಯನ್ನು ಮಾಡಿಸಿದನು. ಪಾಮನಾಯಕನ ಶೌರ್ಯಕ್ಕೆ ಮೆಚ್ಚಿ ಶಿರೋಪಾವು, ಶಿರಪೇಚು, ಕಲಗಿ ತುರಾಯಿ, ರತ್ನಖಚಿತಢಾಲು, ಜನ್ನಬ್ಬಿ, ಪಿರಂಗಿ, ಮುತ್ತಿನ ಸರ, ಕರಿಕುದುರೆ ಇವೆಲ್ಲವನ್ನು ಕೊಟ್ಟು ಮರ್ಯಾದೆ ನೀಡಿದನು.[೮೮]

ಆನೆಗೊಂದಿ, ಸುರಪುರ, ಕನಕಗಿರಿ, ಅರಸರು ಬಿಳಿ ಮತ್ತು ಹಳದಿಬಣ್ಣದ ಬಟ್ಟೆಗೆ ಪ್ರಾಶಸ್ತ್ಯ ನೀಡಿರುವುದು ಕಂಡುಬರುತ್ತದೆ. ಸುರಪುರದ ಪಾಮನಾಯಕನಿಗೆ ಮಕ್ಕಳಿಲ್ಲದಿದ್ದಾಗ ಗುಡಗುಂಟಿಯ ಅನ್ನದಾನಿ ಸೋಮಲಿಂಗನ ಮಗನನ್ನು ದತ್ತು ತೆಗೆದುಕೊಳ್ಳಲು ಸೋಮನಾಯಕ ತನ್ನ ಬಂಧು ಬಳಗ ಸೈನ್ಯ ಬಲದೊಡನೆ ಹಳದಿವಸ್ತ್ರಗಳನ್ನು ಧರಿಸಿ ಗುಡಗುಂಟಿಗೆ ತೆರಳುತ್ತಾನೆ.[೮೯] ಹಾಗೆಯೇ ಸುರಪುರದ ಹಾಲೋಕುಳಿ ಜಾತ್ರೆಯ ಉತ್ಸವದಲ್ಲಿ ರಾಜನು ತನ್ನ ಬಂಧು ಬಳಗದವರೊಡನೆ ಹಳದಿ ವಸ್ತ್ರಗಳನ್ನುಟ್ಟು ಅರಮನೆಯಿಂದ ದೇವಾಲಯಕ್ಕೆ ಹೊರಡಲು ಸಿದ್ಧನಾಗುತ್ತಾನೆ. ಆಗ ಭಜಂತ್ರಿ, ಕೊಂಬು, ಹಲಗೆ, ಶ್ವೇತ್ರಚ್ಛತ್ರ, ಬೆಳ್ಳಿಹೊತ್ತ ಚೌಬ್‌ದಾರರು (ಬಿರುದುಗಳನ್ನು ಹೊಗಳುತ್ತ ಮುಂದೆ ನಡೆಯುವವರು) ಮುಂತಾದ ಜನರೊಂದಿಗೆ ಬರಿಗಾಲನಿಂದ ದೇವಾಲಯಕ್ಕೆ ಬರುತ್ತಾನೆ.

ಇಂದಿಗೂ ಯುಗಾದಿ, ದಸರಾ, ಹಾಲೋಕುಳಿ ಹಬ್ಬಗಳಲ್ಲಿ ಸುರಪುರದ ರಾಜವಂಶಸ್ಥರು ಬಿಳಿ ಪೈಜಾಮ ಮತ್ತು ಅಂಗಿಯನ್ನು ಹಾಗೂ ತಲೆಗೆ ಹಳದಿ ಪಟಗಾವನ್ನು ಸುತ್ತುತ್ತಾರೆ. ಬಹುಶಃ ಹಳದಿಯು ಶುಭಸೂಚಕವೆಂಬ ಕಾರಣದಿಂದ ನಾಯಕ ಮನೆತನಗಳಲ್ಲಿ ಅಂತಹ ಉಡುಗೆಯನ್ನು ಉಪಯೋಗಿಸುತ್ತಿದ್ದಿರಬೇಕು. ಶ್ರೀ ಜಯಚಾಮರಾಜೇಂದ್ರ ವಸ್ತುಸಂಗ್ರಹಾಲಯ ಜಗಮೋಹನ ಪ್ಯಾಲೇಸ್ ಮೈಸೂರಿನಲ್ಲಿಯ ನಾಲ್ವಡಿ ವೆಂಕಟಪ್ಪನಾಯಕನ ಚಿತ್ರದಲ್ಲಿ ಆತ ಕುಡತಾ ಪೈಜಾಮದಂತಹ ಉಡುಪನ್ನು ಧರಿಸಿದ್ದಾನೆ.[೯೦] ಆನೆಗೊಂದಿ ಅರಸರು ಸಹ ಬೆಲೆಬಾಳುವ ವಸ್ತ್ರಗಳನ್ನು ಧರಿಸುತ್ತಿದ್ದರಲ್ಲದೆ, ವಿಶೇಷ ಹಬ್ಬ-ಉತ್ಸವಗಳಾದ ಶ್ರೀ ರಂಗನಾಥನ ಜಾತ್ರೆಯ ಸಂದರ್ಭ, ಮಹಾನವಮಿ, ಯುಗಾದಿ, ಹಂಪಿಯ ವಿರೂಪಾಕ್ಷ ರಥೋತ್ಸವದ ಸಂದರ್ಭಗಳಲ್ಲಿ ಬೆಲೆಬಾಳುವ ಮುಕ್ತಾಭರಣ ಖಚಿತವಾದ ವೇಷಭೂಷಣಗಳನ್ನು ಧರಿಸಿ ಅಲಂಕೃತ ಕವಚಗಳನ್ನು ಜರತಾರಿ ಕಸೂತಿಯ ಮುಂಡಾಸು(ರುಮಾಲು) ಸುತ್ತುತ್ತಿದ್ದರು. ಅವರ ಮನೆಯಲ್ಲಿರುವ ತಿರುಮಲದೇವರಾಜ, ದರ್ಬಾರ ರಾಜಾ ಕೃಷ್ಣದೇವರಾಯರ ಚಿತ್ರಗಳನ್ನು ಗಮನಿಸಿದರೆ ಸಾಂಪ್ರದಾಯಿಕ ವೇಷಭೂಷಣಗಳ ಜೊತೆಗೆ ಮೊಗಲ ಪದ್ಧತಿಯ ವೇಷಭೂಷಣಗಳನ್ನು ಧರಿಸುತ್ತಿದ್ದರೆಂದು ತೋರುತ್ತದೆ. ಅವರ ನಿಲುವಂಗಿ ಚಲ್ಲಣ ಇವೆರಡೂ ಮೊಗಲ್ ಸಂಪ್ರದಾಯವನ್ನು ಸೂಚಿಸುತ್ತವೆ. ಗುಡಗುಂಟಿಯ ಅರಸರ ಉಡುಗೆ-ತೊಡುಗೆಯ ಕುರಿತಾದ ಜನಪದ ನುಡಿಯೊಂದು,

ಬಿಳಿಯ ಕಸಿ ಅಂಗಿ, ರುದ್ರಾಕ್ಷಿಯ ಚೌಕ
ಇವನ್ಯಾರೋ ಸೋಮಸರ್ಜನ ಮಗ ಭೂಪ
ಸೋಮಲಿಂಗರಾಯ ಗುಡಗುಂಟಿ ದೊರೆಯಲ್ಲೇನ್[೧೧]

ಗುಡಗುಂಟಿಯ ಅರಸ ಸೋಮಸರ್ಜನಾಯಕನ ಮಗ ಸೋಮಲಿಂಗನಾಯಕರು ಬಿಳಿಬಣ್ಣದ ಕಸಿ ಅಂಗಿಯನ್ನು ಹಾಗೂ ಇವರು ಶೈವಮತಾಚರಣೆಗೊಳಪಟ್ಟಿದ್ದರಿಂದ ರುದ್ರಾಕ್ಷಿಯ ಚೌಕವನ್ನು ಧರಿಸುತ್ತಿದ್ದರು. ಇನ್ನೊಂದು ಹಾಡಿನಲ್ಲಿ,

ಮೂವತ್ತು ಮೊಳದ ರುಮಾಲು ಸುತ್ತ್ಯಾರ
ಶಿರಪೇಚ ಇಟ್ಟಾರ, ಕುದುರೆಗೆ ಜೀನ ಬಿಗದಾರ
ಕುದುರೆಮ್ಯಾಗ ಕುಂತಾರ ರಾಜವಾಡಿ ಬಿಟ್ಟಾರ
ಅಮರಯ್ಯನ ಕಡೆಗೆ ಹೊಂಟಾರ್[೨]

ಈ ನುಡಿ ಇವರು ಸುತ್ತುವ ರುಮಾಲು, ಶಿರಪೇಚ ಮುಂತಾದ ಉಡುಗೆಗಳ ವಿವರ ನೀಡುತ್ತದೆ.

ಕನಕಗಿರಿಯ ಕನಕಾಚಲಪತಿಯ ದೇವಾಲಯದ ಮುಂದಿನ ಗೃಹದಲ್ಲಿರುವ ಅರಸರ ಪ್ರತಿಮೆಗಳು, ಕನಕಗಿರಿ ನಾಯಕರ ಉಡುಗೆ ತೊಡುಗೆಯನ್ನು ತಿಳಿಸುತ್ತವೆ. ನವಾಬ ಉಡಚನಾಯಕನ ಪ್ರತಿಮೆಯಲ್ಲಿ ಈತನ ತಲೆಯ ಮೇಲೆ ವಾಲಿದ ಪೇಠ, ಪೇಠದಲ್ಲಿ ಮುತ್ತಿನೆಳೆಗಳ ಗುಚ್ಚು ಇದೆ. ಚಿಕ್ಕಕನಕನಗುಡಿಯ ಇಮ್ಮಡಿ ಕನಕಪ್ಪನಾಯಕನ (ಪ್ರತಿಮೆಯಲ್ಲಿ) ತಲೆಗೆ ಬಲಕ್ಕೆ ವಾಲಿದ ಪೇಟವಿದೆ ಹಾಗೂ ಕನಕಾಚಲಗುಡಿಯ ಮುಂದಿನ ಬೇಟೆಯ ದೃಶ್ಯಶಿಲ್ಪದಲ್ಲಿ ನಾಯಕ ಉದ್ದವಾದ ನಿಲುವಂಗಿ, ಅದರ ಮೇಲೆ ಸೊಂಟದ ಕೆಳಗೆ ಒಂದು ವಸ್ತ್ರ ಸುತ್ತಿದ್ದಾನೆ.[೯] ಹಾಗೆಯೇ ಗುಡೇಕೋಟೆಯ ಜಟ್ಟಂಗರಾಜ ವಾರೇ ಮುಂಡಾಸದವನು ಎಂದು ಆತನ ಕುರಿತಾದ ಜನಪದಗೀತೆಯೊಂದರಲ್ಲಿ ಪ್ರಸ್ತಾಪವಿದೆ.

ಹೀಗೆ ಈ ಅರಸುಮನೆತನದವರು ಧರಿಸುವ ಉಡುಗೆಗಳಲ್ಲಿ ವಿಭಿನ್ನತೆಯನ್ನು ಗುರುತಿಸಬಹುದಾಗಿದೆ. ಬಿಳಿ ಮತ್ತು ಹಳದಿಬಟ್ಟೆಗಳು ಶುಭದ ಸಂಕೇತವೆಂದು ಧಾರ್ಮಿಕ ಶ್ರದ್ಧೆ, ನಂಬಿಕೆಗಳ ಛಾಯೆಯೂ ಇವರ ಉಡುಗೆಗಳ ಮೇಲೆ ಆಗಿರಬಹುದಲ್ಲದೇ, ಈ ಮನೆತನದವರಾರೂ ಇಂದಿಗೂ ಕರಿಯಬಣ್ಣದ ವಸ್ತ್ರವನ್ನು ಧರಿಸುವುದಿಲ್ಲ. ಕರಿವಸ್ತ್ರ ಧರಿಸುವುದರಿಂದ ಅದು ಅಶುಭದ ಸಂಕೇತವೆಂದು ಇವರು ಭಾವಿಸುತ್ತಾರೆ. ಈಗಲೂ ಈ ಪರಂಪರೆ ಮುಂದುವರೆದಿದೆ.

ಈ ಮನೆತನದ ರಾಣಿಯರು ಸೀರೆ ಮತ್ತು ಕುಪ್ಪಸವನ್ನು ಧರಿಸುತ್ತಿದ್ದರು. ಇವುಗಳಲ್ಲಿ ರಾಗಾವಳಿ ಸೀರೆ, ಬಾಳೆಕಟ್ಟೆಯ ಸೀರೆ, ಗುಬ್ಬಿಕಣ್ಣಿನ ಸೀರೆಯನ್ನು ಸುರಪುರದ ರಾಣಿಯರು ತೊಡುತ್ತಿದ್ದರು. ಈ ರಾಣಿಯರಿಗೆ ದ್ವಾರಮುನಿ ಸೀರೆ, ರಾಣಿವಾಸದಿಂದ ಪ್ರತಿವರ್ಷ ಪಟ್ಟದರಾಣಿಗೆ ೮ ಸೀರೆ ಮತ್ತು ೨೪ ಕುಪ್ಪಸ ನೀಡಲಾಗುತ್ತಿತ್ತಂತೆ.[೪] ಬಿಳಿಯ ಹೂವಿನ ಸೀರೆ, ಬದನೆಬಣ್ಣದ ಸೀರೆ, ಜರತಾರಿ ಸೀರೆ,

ಚಂದಿರಕಾಳಿ ಸೀರೆ, ತೋಪಖಾನಿ ಸೀರೆಯನ್ನು ಗುಡಗುಂಟಿ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ ಮನೆತನದ ರಾಣಿಯರು ತೊಡುತ್ತಿದ್ದರು. ಚಿತ್ರದುರ್ಗದ ಏಕನಾಥೇಶ್ವರಿ ದೇವಾಲಯದ ದೀಪದ ಕಂಬದ ಪೂರ್ವಬದಿಗೆ ಒಂದು ಸ್ತ್ರೀ ಶಿಲ್ಪವಿದೆ. ಇವಳನ್ನು ಕನಕಮ್ಮನಾಗತಿ ಎಂದು ಕರೆಯುತ್ತಾರೆ. ಈಕೆ ಎತ್ತರಕ್ಕೆ ಸೀರೆಯುಟ್ಟು ಕುಪ್ಪಸ ತೊಟ್ಟು ಕೈಮುಗಿದು ನಿಂತಿರುವುದನ್ನು ಗುರುತಿಸಬಹುದಾಗಿದೆ.

ಕನಕಗಿರಿಯ ರಾಣಿಯರು ಸೀರೆ ಕುಪ್ಪಸವನ್ನು ಧರಿಸುತ್ತಿದ್ದರು ಎನ್ನುವುದಕ್ಕೆ ಕನಕಗಿರಿಯ ವೆಂಕಟಾಚಲ ದೇವಾಲಯದ ಮುಂದಿರುವ ವಿಗ್ರಹಗಳಲ್ಲಿಯ ದೃಶ್ಯಗಳನ್ನು ನೋಡಬಹುದು. ಇಲ್ಲಿ ದೊರೆಸಾನಿಯು (ರಾಜಮಾತೆ) ತಲೆಗೆ ಪೇಟ(ಮುಂದಾಸ)ವನ್ನು ಸುತ್ತಿದ್ದಾಳೆ. ರಾಣಿಯರು ತಮ್ಮ ಕೇಶವನ್ನು ಹಿಂದಕ್ಕೆ ಬಾಚಿ ವಿವಿಧ ಬಗೆಯ ತುರುಬನ್ನು ಕಟ್ಟಿಕೊಳ್ಳುತ್ತಿದ್ದಾರೆನ್ನುವುದಕ್ಕೆ ಇಲ್ಲಿಯ ವಿಗ್ರಹಗಳನ್ನು ನೋಡ ಬಹುದು.[೯೫] ರಾಣಿಯರ ಈ ತರಹದ ಅಲಂಕಾರಕ್ಕಾಗಿ, ಕಸ್ತೂರಿ, ಕೇಸರಿ, ಕುಂಕುಮ, ಹಲ್ಲುಪುಡಿ, ಚಿಕ್ಕಅಂಟು, ಚದುರಂಗ, ಗಂಜೀಫು, ಹಣಗಿ, ಕನ್ನಡಿ, ಬೆಳ್ಳಿತಾಟು, ಬಟ್ಟಲು ಮುಂತಾದವನ್ನು ಸಿದ್ಧಪಡಿಸಿ ಸಿಂಗರಿಸಲು, ಸುರಪುರದ ರಾಣಿಯರಿಗೆ ದಾಸಿಯರಿದ್ದರು.[೯೬] ಈ ಎಲ್ಲಾ ಮನೆತನದ ರಾಣಿಯರಿಗೆ ಘೋಷಾಪದ್ಧತಿ ಕಟ್ಟುನಿಟ್ಟಾಗಿತ್ತು. ಇವರು ಅರಮನೆಯಲ್ಲಿದ್ದಾಗ ಘೋಷಾವನ್ನು ಹಾಕಿಕೊಳ್ಳುತ್ತಿರಲಿಲ್ಲ. ಸುರಪುರದ ರಾಣಿಯರು ಮುಖ್ಯ ಉತ್ಸವಗಳಲ್ಲಿ ಭಾಗವಹಿಸುತ್ತಿದ್ದಾಗ, ಹಾಗೂ ಬೇರೆಡೆಗೆ ಹೊರಟರೆ ಮೇಣೆಯಲ್ಲಿ ತೆರಳುತ್ತಿದ್ದರು. ಈ ಸಂಪ್ರದಾಯವನ್ನು ಎಲ್ಲ ನಾಯಕ ಅರಸುಮನೆತನಗಳವರು ಅನುಸರಿಸಿ ಅದಕ್ಕೆ ಘೋಷಪದ್ಧತಿ ಎಂದು ಹೆಸರಿಟ್ಟರು.

ಹೈದ್ರಾಬಾದ್ ಕರ್ನಾಟಕದ ನಾಯಕ ಅರಸುಮನೆತನಗಳಾದ ಸುರಪುರ, ಆನೆಗೊಂದಿ, ಕನಕಗಿರಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಇವು ಕೆಲವು ನಿಜಾಮನ ಆಳ್ವಿಕೆಗೊಳಪಟ್ಟಿದ್ದರಿಂದ ಇಸ್ಲಾಂ ಧರ್ಮದ ಆಚರಣೆಗಳ ಪ್ರಭಾವ ಈ ಮನೆತನಗಳ ಮೇಲೆ ಆಗಿರಬಹುದಾದ ಸಾಧ್ಯತೆಗಳಿವೆ. ನಿಜಾಮನ ಅಧೀನರಾಗಿದ್ದ ಈ ಸಂಸ್ಥಾನಿಕರು ಅನಿವಾರ್ಯವಾಗಿ ಇಸ್ಲಾಂಧರ್ಮದ ಆಚರಣೆಗಳ ಪ್ರಭಾವಕ್ಕೆ ಗುರಿಯಾಗಬೇಕಾಯಿತು. ಜೊತೆಗೆ, ಪುರುಷರ ಕಾಮುಕನೋಟದಿಂದ ತಪ್ಪಿಸಿಕೊಳ್ಳಲು ಹಾಗೂ ತಮ್ಮ ರೂಪ ಸೌಂದರ್ಯಗಳೇ ತಮಗೆ ಮುಳುವಾಗಬಾರದೆಂಬ ಹಿನ್ನೆಲೆಯಲ್ಲಿ ಘೋಷವನ್ನು ಧರಿಸಿರ ಬಹುದು. ಈ ಪದ್ಧತಿಯಿಂದ ರಾಣಿಯರ ಶಿಕ್ಷಣ, ಸಾರ್ವಜನಿಕ ಬದುಕು, ಮುಕ್ತ ಜೀವನಕ್ಕೆ ತೆರೆಬಿದ್ದಾಂತಾಯಿತು. ಹೀಗಾಗಿ ಈ ಮನೆತನವರು, ಸಾಮಾಜಿಕ, ಧಾರ್ಮಿಕ, ಆಡಳಿತಾತ್ಮಕ ಕಾರ್ಯಗಳಲ್ಲಿ ಭಾಗವಹಿಸಿದುದು ಬಹಳ ವಿರಳವೆಂದೇ ಹೇಳಬಹುದು.

ರೆಸಿಡೆಂಟನಾಗಿ ಸುರಪುರಕ್ಕೆ ಬಂದ ಮೆಡೋಸ್ ಟೇಲರನು ನಾಲ್ವಡಿ ವೆಂಕಟಪ್ಪನಾಯಕ (ಕ್ರಿ.ಶ.೧೮೪೨-೧೮೫೮)ನ ಭೇಟಿಗಾಗಿ ಸುರಪುರದ ಅರಮನೆಗೆ ಬಂದ. ಈತನನ್ನು ಎಲ್ಲರೂ ಆದರದಿಂದ ಎದುರುಗೊಂಡರು.

ರಾಜದರ್ಬಾರದ ಹೊರ ಪಟಾಂಗಣವು ಜನಸಂದಣಿಯಿಂದ ಕಿಕ್ಕಿರಿದಿತ್ತು. ಈ ಜನಸಂದಣಿಯೊಳಗಿಂದ ಅವನನ್ನು ಕಿನಬಾಬು ಮುಖಮಲಗಳಿಂದ ಅಲಂಕರಿಸಲ್ಪಟ್ಟ ಒಳಪಟಾಂಗಣದಲ್ಲಿ ಕರೆದೊಯ್ದರು. ಅಲ್ಲಿ ಚಿಕ್ಕಬಾಲಕನಾದ ರಾಜನು, ಅವನ ಹಿಂದಿನ ಭಾಗದಲ್ಲಿ ಘೋಷೆಯಲ್ಲಿ ಅವನ ತಾಯಿ ರಾಣಿ ಈಶ್ವರಮ್ಮ ಕುಳಿತಿದ್ದಾಳೆ.[೯೭]

ಈ ರೀತಿ ರಾಣಿಯರು ತೆರೆಯ ಹಿಂದೆ ರಾಜಕೀಯ ಕಾರ್ಯಗಳನ್ನು ಮಾಡುತ್ತಿದ್ದರು. ಅವರಿಗೆ ಪ್ರಜೆಗಳೊಂದಿಗೆ ಮುಕ್ತವಾಗಿ ಬೆರೆಯುವ ಅವಕಾಶವಿರಲಿಲ್ಲ. ದೇವರಗುಡಿಗಳನ್ನೊಳಗೊಂಡಂತೆ ಸಕಲ ಸೌಲಭ್ಯಗಳು ಮನೆಯಲ್ಲಿಯೇ ನೋಡುವಂತೆ ಮಾಡುತ್ತಿದ್ದರು. ಸುರಪುರದ ಅರಮನೆಯಲ್ಲಿಯೇ ಕುಳಿತು ವೇಣುಗೋಪಾಲನ ದರ್ಶನವನ್ನು, ಆನೆಗೊಂದಿಯ ಅರಮನೆಯಲ್ಲಿಯೇ ಕುಳಿತು ಶ್ರೀರಂಗನಾಥ ಮತ್ತು ಗುಡ್ಡದ ತಿಮ್ಮಪ್ಪನ ದರ್ಶನವನ್ನು, ಗುಡಗುಂಟಿಯ ಅರಮನೆಯಲ್ಲಿಯೇ ಕುಳಿತು ಸೋಮನಾಥನ ದರ್ಶನ ಪಡೆಯುವಂತೆ ಅರಮನೆಗಳಲ್ಲಿ ಜಾಲಂದ್ರಗಳನ್ನು ಮಾಡಿರುವುದನ್ನು ನೋಡಬಹುದಾಗಿದೆ. ಯುಗಾದಿ, ದಸರಾ, ದೀಪಾವಳಿ ಹಬ್ಬಗಳಲ್ಲಿ ನಡೆಯುವ ಶಕ್ತಿಪ್ರದರ್ಶನ, ಕರಡಿಕುಣಿತ, ಮೋಡಿ, ಜಾದು ಮುಂತಾದವುಗಳನ್ನು ಅರಮನೆಯಲ್ಲಿಯೇ ಕುಳಿತು ವೀಕ್ಷಿಸುತ್ತಿದ್ದರು.

ಒಂದುಕಾಲಕ್ಕೆ ಕಟ್ಟುನಿಟ್ಟಿನಿಂದ ಕೂಡಿದ್ದ ಈ ಘೋಷಾಪದ್ಧತಿ ಇಂದು ತನ್ನ ಬಿಗುವನ್ನು ಕಳೆದುಕೊಂಡಿದೆ. ಚಿತ್ರದುರ್ಗ, ಸುರಪುರ, ಕನಕಗಿರಿ, ದೇವದುರ್ಗ ಮನೆತನಗಳಲ್ಲಿ ಈ ಪದ್ಧತಿ ಮುಂದುವರೆದಿದ್ದರೂ, ಕನಕಗಿರಿ, ದೇವದುರ್ಗದ ಅರಸರು ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಸವಾರಿಬಂಡಿಯ ಮೂಲಕ ರಾಣಿಯರು ತೆರಳುತ್ತಾರೆ. ಸುರಪುರ, ಆನೆಗೊಂದಿ, ಗುಂತಗೋಳ, ಗುಡಗುಂಟಿ, ಅರಸರು ರಾಜಕೀಯವಾಗಿ ಪ್ರಬಲರಾಗಿದ್ದು, ಆರ್ಥಿಕವಾಗಿ ಸಬಲರಾಗಿರುವುದರಿಂದ ಆಧುನಿಕ ವಾಹನಗಳಲ್ಲಿ ತಿರುಗಾಡುವುದು ಸಹಜವಾಗಿದೆ.

### ೪.೩.೧ ಆಭರಣಗಳು

ನಾಯಕ ಅರಸು ಮನೆತನದ ಅರಸರು ಆಭರಣಗಳನ್ನು ಸೌಂದರ್ಯದ ಹಾಗೂ ವೈಭವದ ಸಂಕೇತ ವಾಗಿ ಬಳಸುತ್ತಿದ್ದರು. ಬಗೆಬಗೆಯ ಆಭರಣಗಳು ದೇಹದ ಬೇರೆ ಬೇರೆ ಭಾಗಗಳಿಗೆ ತೊಟ್ಟುಕೊಳ್ಳುತ್ತಿದ್ದರು. ಚಿತ್ರದುರ್ಗದ ಅರಸರು ಮತ್ತು ಸುರಪುರದ ಅರಸರು ಸುತ್ತುವ ರುಮಾಲು ಮುಂಡಾಸ (ಪೇಟಾ)ಗಳಿಗೆ ಸರ, ಹೂ, ಪದಕ ತುರಾಯಿಗಳಿಂದ ಸಿಂಗರಿಸುತ್ತಿದ್ದರು. ಮದಕರಿನಾಯಕನ ಕುರಿತಾದ ಜನಪದ ನುಡಿಯಲ್ಲಿ,

ಒಳ್ಳೆಯ ತುರಾಯಿ ಮುಂದೆ ಮುಡಿದಿದ್ದ
ಕೊರಳಲ್ಲಿ ಜೋಡು ಧರಿಶಿಣವ ಧರಿಸಿದ್ದ[೯೮]

ಎನ್ನುವುದು ಹಾಗೂ ಸುರಪುರದ ರಾಜಾ ಕೃಷ್ಣಪ್ಪನಾಯಕರು ಧರಿಸಿರುವ ರುಮಾಲು ಪದಕ, ತುರಾಯಿಗಳಿಂದ ಸಿಂಗರಿಸಿದೆ. ತಲೆಗೆ ಸುತ್ತಿದ ಮುಂಡಾಸದ ಅಲಂಕಾರದ ಮೇರೆಗೆ ಆತನ ಸ್ಥಾನಮಾನಗಳಾದ ರಾಜ, ಮಂತ್ರಿ, ಸಾಮಂತ, ದಂಡನಾಯಕ, ಸೈನಿಕ, ಸಾಮಾನ್ಯ ಪ್ರಜೆ ಎಂದು ಗುರುತಿಸಲಾಗುತ್ತಿತ್ತು.

ಕಿವಿಗೆ ಧರಿಸುವ ಆಭರಣಗಳಲ್ಲಿ ಮುರುವು, ಕಡಕು, ಕುಂಡಲಗಳು ಪ್ರಮುಖವಾದವುಗಳು. ಕುಂಡಲಗಳನ್ನು ಲೋಲಾಕುವಿನಂತೆ ಚಿಕ್ಕದಾದ ಸರಪಳಿಗೆ ದಪ್ಪನಾದ ಮುತ್ತು, ಗುಂಡುಗಳನ್ನು ಜೋಡಿಸಿ ಮಾಡಿರುತ್ತಿದ್ದರು. ಇವುಗಳಲ್ಲಿ ನಾಗಕುಂಡಲ, ನಕ್ಷತ್ರಕುಂಡಲ, ಮಣಿಕುಂಡಲ, ಉಂಗುರಾಕಾರದ ಕುಂಡಲ, ಜುಟ್ಟಕುಂಡಲ, ಪುಷ್ಪಕುಂಡಲಗಳು ಮುಂತಾದವುಗಳನ್ನು ಚಿತ್ರದುರ್ಗ, ಸುರಪುರ ಮತ್ತು ಕನಕಗಿರಿ ಅರಸರು ಧರಿಸುತ್ತಿದ್ದರು. ಕನಕಗಿರಿಯ ಕನಕಾಚಲ ದೇವಾಲಯದ ಮುಂದಿನ ನವಾಬ ಉಡಚನಾಯಕನ ಪ್ರತಿಮೆಯಲ್ಲಿ ಹಾಗೂ ದೇವಾಲಯದ ಬಲ ಪ್ರಾಕಾರದ ಅಶ್ವಸವಾಸ ಅರಸನ ಕಿವಿಯಲ್ಲಿಯೂ ಹಾಗೂ ವೆಂಕಟಪತಿಗುಡಿಯಲ್ಲಿ ವೆಂಕಟಪತಿನಾಯಕನ ಸ್ಮಾರಕದಲ್ಲಿಯೂ ಈ ನಾಯಕನು ಕಿವಿಯಲ್ಲಿ ಪುಷ್ಪಕುಂಡಲ, ಮಣಿಕುಂಡಲಗಳನ್ನು ಧರಿಸಿದ್ದಾರೆ.[೯೯] ಕೊರಳಿನಲ್ಲಿ ಕಂಠಿಸರ, ಘಂಟಿಸರ, ಗುಂಡುಸರ, ಮಣಿಸರ, ಮಾಲ್ಯ, ಪದಕಹಾರಗಳನ್ನು ಧರಿಸುತ್ತಿದ್ದರು. ಇವು ಈ ನಾಯಕ ಅರಸರ ಗೌರವ ಪ್ರತಿಷ್ಠೆ ಹಾಗೂ ಶ್ರೀಮಂತಿಕೆಯನ್ನು ವ್ಯಕ್ತಪಡಿಸುವ ಸಂಕೇತಗಳಾಗಿರುತ್ತಿದ್ದವು.

ಚಿತ್ರದುರ್ಗದ ಅರಸ ಮದಕರಿ ನಾಯಕ ಕೊರಳಾಭರಣ ಧರಿಸಿದ್ದುದು ಕೋಲುಪದದ ಒಂದು ನುಡಿಯಲ್ಲಿದೆ :

ಪಟ್ಟದಾನೀಯ ಹಿಡಿಸಿದ ಮೆದಕೇರಿ
ಘಂಟಿ ಸರವೇ ಕೊರಳೀಗೆ ಕೋಲು
ಘಂಟಿ ಸರವೇ ಕೊರಳೀಗೆ | ಮೆದಕೇರಿ
ಒಂಠಿ ಬಾವುಲಿ ಮುತ್ತುಗಳೇ ಕೋಲು[೧೦೦]

ಹಾಗೆಯೇ ಕನಕಗಿರಿಯ ನವಾಬ ಉಡಚನಾಯಕನ ಮತ್ತು ವೆಂಕಟಪ್ಪನಾಯಕನ ಪ್ರತಿಮೆಗಳಲ್ಲಿ ಘಂಟಿಸರಗಳನ್ನು ಕಾಣಬಹುದಾಗಿದೆ.

ಯುದ್ಧಸಮಯದಲ್ಲಿ ರಕ್ಷಾಕವಚಗಳಂತೆ ಹಾಗೂ ಸಭೆಸಮಾರಂಭಗಳಲ್ಲಿ ಗೌರವ, ಪ್ರತಿಷ್ಠೆ, ಅಂತಸ್ತುಗಳಿಗಾಗಿ ಬಳಸುತ್ತಿದ್ದ ಭುಜಕೀರ್ತಿ, ಭುಜಮುಖಿಗಳನ್ನು ಚಿತ್ರದುರ್ಗದ ಅರಸ ಕೊನೆಯ ಮದಕರಿ ಹಾಗೂ ಪೀತಾಂಬರ ಬಹರಿ ಪಿಡ್ಡನಾಯಕರ ಛಾಯಾಚಿತ್ರಗಳಲ್ಲಿ ಗುರುತಿಸಬಹುದಾಗಿದೆ. ಇವುಗಳನ್ನು ಬಂಗಾರ ಬೆಳ್ಳಿಯಾದಿ ಹೊಳಪುಳ್ಳ ಸುಂದರ ಲೋಹಗಳಿಂದ ತಯಾರಿಸಿ, ಅದಕ್ಕೆ ರತ್ನ ಹಾಗೂ ಹೊಳಪುಳ್ಳ ಹರಳುಗಳನ್ನು ಕೀಲಿಸಿ, ಮುತ್ತಿನಸರ ಅಥವಾ ಸರಪಳಿಗಳಿಂದ ಅಲಂಕರಿಸಿ

ಸುಂದರಗೊಳಿಸುತ್ತಿದ್ದರು. ಇವುಗಳನ್ನು ತಯಾರಿಸುವ ಒಂದು ಕುಟುಂಬವೇ ಪಾಮನಾಯಕನ ಕಾಲದಲ್ಲಿ ಸುರಪುರದಲ್ಲಿತ್ತು. ಗುಡಗುಂಟಿ, ದೇವದುರ್ಗ, ಗುಂತಗೋಳದ ಅರಸರುಗಳು ಇಲ್ಲಿಂದಲೇ ಮಾಡಿಸಿಕೊಂಡು ಹೋಗುತ್ತಿದ್ದರು.[೧೦೧]

ಉಡುಪು ಧರಿಸಿದ ಮೇಲೆ ತೋಳಿನ ಮೇಲೆ ತೋಳ್ಬಳೆ, ಬಾಹುಬಂಧ, ತೋಳ್ಬಂದಿ, ದಾಸ್ತರ, ಕೇಯೂರ ಬಾಪುರಿ ಆಭರಣಗಳನ್ನು ಸುರಪುರದ ಅರಸರು ಧರಿಸುತ್ತಿದ್ದರು. ಹಾಗೂ ಕನಕಗಿರಿಯ ಅರಸರೂ ಉಪಯೋಗಿಸುತ್ತಿದ್ದರೆಂಬುದು ಕನಕಗಿರಿಯ ಕನಕಾಚಲ ದೇವಾಲಯದ ಮುಂದಿನ ಬೇಟೆಗೆ ಹೊರಟ ರಾಜನ ದೃಶ್ಯದಲ್ಲಿ ಇಮ್ಮಡಿ ವೆಂಕಟಪ್ಪನಾಯಕನ ತೋಳಿನಲ್ಲಿ ತೋಳ್ಬಂದಿಗಳಿವೆ.[೧೦೨] ಮುಂಗೈಗಳಿಗೆ ಕಡಗ, ಮಣಿಕಟ್ಟುಗಳನ್ನು ವೀರತ್ವದ ಸಂಕೇತಗಳಾಗಿ ಧರಿಸುತ್ತಿದ್ದರು. ಸುರಪುರದ ಪೀತಾಂಬರ ಬಹರಿ ಪಿಡ್ಡನಾಯಕ, ಪಾಮನಾಯಕ, ಪಿಡ್ಡನಾಯಕ, ಕೃಷ್ಣಪ್ಪನಾಯಕರು ಧರಿಸಿದ್ದಾರೆ. ಕನಕಗಿರಿ ವೆಂಕಟಪ್ಪನಾಯಕರ ಮತ್ತು ಇಮ್ಮಡಿ ಕನಕಪ್ಪನಾಯಕನ ಶಿಲ್ಪಗಳಲ್ಲಿಯೂ ನೋಡಬಹುದಾಗಿದೆ.

ರಾಜಮುದ್ರೆಯಾಗಿ ರಾಜರು ಆಜ್ಞಾತಪತ್ರಗಳಿಗೆ ತಮ್ಮ ಅಂಕಿತವನ್ನು ಹಾಕಲು ಉಂಗುರಗಳನ್ನು ಬಳಸುತ್ತಿದ್ದರು. ಈ ಉಂಗುರಗಳನ್ನು ಬಂಗಾರ, ಬೆಳ್ಳಿ, ತಾಮ್ರ, ಕಂಚು, ಪಂಚಲೋಹ, ಹರಳು, ರತ್ನಗಳಿಂದ ಮಾಡಿರುತ್ತಿದ್ದರು. ಈ ಮುದ್ರೆಯುಂಗುರದ ಮೇಲ್ಭಾಗದಲ್ಲಿ ಸಂಕೇತಗಳನ್ನು ಮಾಡಿರಲಾಗು ತ್ತಿತ್ತು. ಸುರಪುರದವರು ತಮ್ಮ ಆರಾಧ್ಯದೈವ ಶ್ರೀ ವೇಣುಗೋಪಾಲನ ಹೆಸರಿನಲ್ಲಿ, ಗುಡಗುಂಟಿಯವರು ಕಕ್ಕೇರಿಯ ಶ್ರೀ ಸೋಮನಾಥನನ್ನು ಸಂಕೇತವಾಗಿ ಬಳಸುತ್ತಿದ್ದರು.

ಕೆಲವು ಸಂದರ್ಭಗಳಲ್ಲಿ ಅಲಂಕಾರಕ್ಕಾಗಿ ನಾಗರುಂಗರ, ಹೂವಿನುಂಗುರ, ವಂಕಿಯುಂಗುರ, ಎಲೆ ಉಂಗುರಗಳನ್ನು ಧರಿಸುತ್ತಿದ್ದರು. ಚಿತ್ರದುರ್ಗದ ಅರಸರು ಇವುಗಳನ್ನು ಧರಿಸುತ್ತಿದ್ದರೆಂಬುದಕ್ಕೆ

ಬೆರಳೊಳಗೆ ಮುದ್ದಿನುಂಗುರವೆ ಇಟ್ಟಿದ್ದ
ದೊರೆಯೋಗಿ-ಬಿದನೂರ ಒಳಗೆ | ಕೋಲು[೧೦೩]
ಉದ್ದನೆ ನೀರಿನಾಗೆ ಮುದ್ದಿನ ಉಂಗುರ ಹಾಕಿ
ಹರಿದು ಮೆದಕೇರಿನ ಬರಹೇಳಿ | ಹಾರುವರು
ಹರಿಹರಕೆ ಓಲೆ ಬರೆದರು[೧೦೪]
ಹರಿಯೋ ನೀರಿನಾಗೆ ಹವಳದ ಉಂಗುರ ಹಾಕಿ
ಎದ್ದ ಮೆದಕೇರಿನ ಬರಹೇಳಿ | ಹಾರುವರು
ಉದ್ದಂಡಕೆ ವಾಲೆ ಬರೆದರು[೧೦೫]

ಈ ಆಭರಣಗಳಲ್ಲಿ ಬಣ್ಣದ ಕಂದರ, ಮುತ್ತಿನ ಒಂಟಿ, ಕರ್ಣಾಭರಣ, ಧವಳಾಂಗ, ಝರಿಯ ಸುತ್ತಿ, ಮುತ್ತಿನ ತುರಾಯಿ ಇವುಗಳನ್ನು ಚಿತ್ರದುರ್ಗದ ಅರಸರು ಬಳಸುತ್ತಿದ್ದರೆಂಬುದನ್ನು

ಹಿರೇಮದಕರಿನಾಯಕನ ತಾರಾವಳಿ ತಿಳಿಸುತ್ತದೆ. ಸುರಪುರದ ಮುಮ್ಮಡಿ ಪಾಮನಾಯಕರ ಪುತ್ರ ವೆಂಕಟಪ್ಪನಾಯಕನ ಮದುವೆ ಕನಕಗಿರಿಯ ರಂಗಪ್ಪನಾಯಕನ ಪುತ್ರಿ ಲಕ್ಷ್ಮಮ್ಮನೊಂದಿಗೆ ಜರುಗುವಾಗ, ರಂಗಪ್ಪನಾಯಕ ಧರಿಸಿದ ಆಭರಣಗಳನ್ನು ಪುರುಷಕಾರಿ ಲೋಕಯ್ಯನವರ ಹಸ್ತಪ್ರತಿ ಈ ರೀತಿ ಹೇಳುತ್ತದೆ.

ಕಲಿಕಿ ಶಿರಪೇಚ್‌ಜಗ ಮುತ್ತಿನ
ವಳಿತು, ಮುತ್ತಿನ ಕಂಠಿಹಾರವು
ಸಿಂಹಮುಖದಾ ರತ್ನಕೆತ್ತಿದ ಕಡಗ ಸರಪಳಿಯೂ[೧೦೬]

ಅರಸರಂತೆ ರಾಣಿಯರೂ ಸಹ ಅಲಂಕಾರಪ್ರಿಯರಾಗಿರುತ್ತಿದ್ದರು, ಆಭರಣಗಳನ್ನು ಧರಿಸುವಲ್ಲಿ ರಾಣಿಯರದೇ ಮೇಲಗೈ ಎನ್ನಬಹುದು. ಇದಕ್ಕೆ ಕಾರಣ ಅರಸರನ್ನು ಆಕರ್ಷಿಸುವ, ಸಂಪತ್ತನ್ನು ತೋರ್ಪಡಿಸುವ, ವೃದ್ಧಿಸುವ ಬಯಕೆಗಳೂ ಇರುತ್ತಿರಬಹುದು. ಈ ರಾಣಿಯರು ತಮ್ಮ ಅಂತಃಪುರದ ಜೀವನದ ಪ್ರತಿಯೊಂದೂ ಘಟ್ಟದಲ್ಲಿ ತಲೆ, ಮೂಗು, ಕಿವಿ, ಕೊರಳು, ಟೊಂಕ, ತೋಳು, ಕೈ, ಕೈಬೆರಳು, ಕಾಲು, ಕಾಲ್ಬೆರಳು, ಆಭರಣಗಳನ್ನು ಬಳಸುತ್ತಿದ್ದುದರಿಂದಲೇ 'ರಾಣಿ ಶೃಂಗಾರದ ತವರುಮನೆ' ಎನಿಸಿಕೊಳ್ಳುತ್ತಿದ್ದಳು.[೧೦೭]

ಚಿತ್ರದುರ್ಗ, ಸುರಪುರ, ಆನೆಗೊಂದಿಯ ರಾಣಿಯರು ಬೈತಲೆ ಸರ, ಬೈತಲೆ ಮಣಿಗಳನ್ನು ತಲೆಗೂದಲನ್ನು ಕಟ್ಟುವುದಕ್ಕೆ, ಮುಡಿಯುವುದಕ್ಕೆ, ಸಿಕ್ಕಿಸುವುದಕ್ಕೆ ಬಳಸುತ್ತಿದ್ದರು. ಬೈತಲೆ ಸರವನ್ನು ಚಿನ್ನದಿಂದ ಮಾಡಿರುತ್ತಿದ್ದರು. ಇದು ಹೊಳಪುಳ್ಳ ಹರಳು, ಮುತ್ತುಗಳನ್ನು ಹೊಂದಿರುತ್ತಿತ್ತಲ್ಲದೆ, ಇದನ್ನು ನೆತ್ತಿಯಿಂದ ಹಣೆಯವರೆಗೆ ಇಳಿದುಬರುವಂತೆ ಧರಿಸುತ್ತಿದ್ದರು. ಈ ಸರಕ್ಕೆ ಹೊಂದಿಕೊಂಡು ಹಣೆಯಿಂದ ಮುಂದೆಲೆಗೆ ಬೈತಲೆ ಪದಕವಿರುತ್ತಿತ್ತು. ಇವುಗಳನ್ನು ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿಯ ರಾಣಿಯರು ಧರಿಸುತ್ತಿದ್ದರು.[೧೦೮] ಕನಕಗಿರಿಯ ಕನಕಾಚಲ ದೇವಾಲಯದ ಮುಂದಿನ ಗೃಹದಲ್ಲಿಯ ನವಾಬ ಉಡಚನಾಯಕನ ರಾಣಿಯ ಪ್ರತಿಮೆಯಲ್ಲಿ ರಾಣಿಯು ಬೈತಲೆಯ ಸರವನ್ನು ಧರಿಸಿದ್ದಾಳೆ. ಅದರ ತುದಿಯಲ್ಲಿ ಹಣೆಯ ಮೇಲೆ ಇಳಿಬಿದ್ದ ಪದಕವಿದೆ.[೧೦೯] ಬೈತಲೆ ಮಣಿಯೂ ಒಂದು ವಿಶೇಷ ಆಭರಣವಾಗಿತ್ತು. ಇದಕ್ಕೆ ಮೂರು ಎಳೆಗಳಿರುತ್ತಿದ್ದವು. ಒಂದು ಎಳೆ ಬೈತಲೆಗೆ ಎರಡು ಎಳೆಗಳು ಬೈತಲೆ ಪದಕದಿಂದ ಎರಡು ಕಿವಿಗಳ ಮೇಲ್ಭಾಗದ ದಮನಿಗೆ ಬರುವಂತೆ ಇರುತ್ತಿತ್ತು. ಬಂಗಾರದಿಂದ ತಯಾರಿಸಿದ ಇದಕ್ಕೆ ಬಂಗಾರದ ಗುಂಡುಗಳನ್ನು ಮುತ್ತುಗಳನ್ನು ನೇತಾಡುವಂತೆ ಮಾಡಿರುತ್ತಿದ್ದರು.

ರಾಣಿಯರು ತಲೆಗೆ ಧರಿಸುವ ಬಂಗಾರ, ಹರಳುಗಳಿಂದ ಮಾಡಿದ ಹರಳಿನ ಹೂ, ಅಕ್ಕಾಡ ಹೂ, ನಾಗರ ಹೂ, ಚಂದ್ರ ಹೂ, ಸೂರ್ಯ ಹೂ, ಕ್ಯಾದಿಗಿ ಹೂ, ಮೊಗ್ಗೆ ಮಾಲೆಗಳನ್ನು ಸುರಪುರ,

ಆನೆಗೊಂದಿ ರಾಣಿಯರು ವಿವಾಹದ ಸಂದರ್ಭಗಳಲ್ಲಿ ಧರಿಸುತ್ತಿದ್ದರಲ್ಲದೆ, ಜಡೆಯ ತುದಿಗೆ ರೇಶ್ಮೆಜರಿಯಿರುವ ಬಂಗಾರದ ಗೊಂಡೆಗಳನ್ನು ಹೆಣೆದುಕೊಳ್ಳುತ್ತಿದ್ದರು.[೧೧೦] ಮೂಗುತಿಯು ರಾಣಿಯರ ಮುತ್ತೈದೆ ಸೂಚಕವಾಗಿದ್ದು, ಇದನ್ನು ಮೂಗಿನ ಎಡಭಾಗಕ್ಕೆ ಧರಿಸುತ್ತಿದ್ದರು. ಇದನ್ನು ಬಂಗಾರದಿಂದ ಮಾಡಿ ಮುತ್ತುಗಳನ್ನು ಜೋಡಿಸಲಾಗಿರುತ್ತಿತ್ತು. ಗುಂತಗೋಳದ ರಾಣಿ ಕೇಶಮ್ಮಾಜಿಯವರು ಇಂಥ ಮುತ್ತನ್ನು ಧರಿಸಿರುತ್ತಿದ್ದರು.

ಓಲೆ ಅಥವಾ ವಾಲಿ ಎಂದು ಕರೆಯಲ್ಪಡುವ ಕಿವಿಯ ಆಭರಣವನ್ನು ರಾಣಿಯರು ಧರಿಸುತ್ತಿದ್ದರು. ಸೀರ್ಯದ ರಂಗಪ್ಪನಾಯಕನು ಹಿರಿಯೂರಿಗೆ ಮುತ್ತಿಗೆ ಹಾಕಿದನು. ಆಗ ಹಿರಿಯೂರ ಕೆಂಚಣ್ಣ ನಾಯಕನು ಕಳ್ಳಭಂಟರ ಸಂಗಡ ತನ್ನ ನಾಗತಿಯರ ವೋಲೆಗಳ ಕೊಟ್ಟು ಕಳುಹಿಸಿದನು[೧೧೧] ಎಂಬ ಉಲ್ಲೇಖ ಬರುತ್ತದೆ. ಈ ವೋಲೆಯನ್ನು ರಾಣಿಯರ ಆಲಂಕಾರಿಕ ಹಾಗೂ ಮುತ್ತೈದೆಯ ಸಂಕೇತವಾಗಿ ಬಳಸುತ್ತಿದ್ದರು. ಗುಂತಗೋಳದ ರಾಣಿ ಲಕ್ಷ್ಮೀದೇವಿಯು ಧರಿಸಿರುವ ಓಲೆ ವಿಶಿಷ್ಟವಾದುದಾಗಿದೆ. ಮೇಲುಕಿವಿಗೆ ಧರಿಸುತ್ತಿದ್ದ ಆಭರಣಗಳಲ್ಲಿ ಬುಗುಡಿಯೂ ಒಂದಾಗಿತ್ತು. ಇದರಲ್ಲಿ ಕಡ್ಡಿ ಬುಗುಡಿ, ಮುತ್ತಿನ ಬುಗುಡಿ, ಗುಂಡಿನ ಬುಗುಡಿ, ಮುಳ್ಳಿನ ಬುಗುಡಿ, ಕಳಸದ ಬುಗುಡಿಗಳು ಪ್ರಮುಖವಾಗಿದ್ದವು. ಸುರಪುರ, ಗುಡುಗುಂಟಿಯವರು ವಧುವಿನ ನಿಶ್ಚಯದ ಕಾರಣದಲ್ಲಿ ವರನ ಕಡೆಯವರು ವಧುವಿಗೆ ಹಾಕುತ್ತಿದ್ದರು. ಒಂದು ಸಾರಿ ದೇವದುರ್ಗದವರು ಸುರಪುರಕ್ಕೆ ಕನ್ಯೆಯನ್ನು ಕೊಡುವಾಗ, ಅವರು ಕಡಿಮೆ ಬೆಲೆಯ ಬುಗುಡಿಯನ್ನು ಹಾಕಿದರೆಂಬ ಕಾರಣಕ್ಕೆ ಆ ನಿಶ್ಚಯವನ್ನೇ (ಸಂಬಂಧವನ್ನೇ) ಮುರಿದು ಕೊಂಡರಂತೆ.[೧೧೨] ಕಿವಿಯಲ್ಲಿ ಹಾಕುವ ಝೂಲರಿ, ಕೊರಳಲ್ಲಿ ಧರಿಸುವ ಕಂಠಮಾಲೆ, ಬಂದಿಮಾಲೆ, ಮುತ್ತಿನಹಾರ, ಮಾವಿನಕಾಯಿ ಹಾರ, ಮಲ್ಲಿಗೆ ಹಾರ, ಚಂದ್ರಾಹಾರಗಳನ್ನು ಟೀಕಿಯಲ್ಲಿ ಗುಂಡಿನ ಟೀಕೆ, ಗೆಜ್ಜೆಟೀಕಿ, ಮುತ್ತು ಹವಳ, ಕರಿಮಣೀ ಟೀಕಿಗಳನ್ನು ಹವಳದ ಸರ, ಮುತ್ತಿನ ಸರ, ಪಚ್ಚೆಸರ, ಗುಂಡಿನ ಸರ, ಮೇಲ್‌ಗುಂಡಿನ ಸರ, ಬೋರಮಾಳಸರ, ಕಟ್ಟಾಣಿಸರ, ನೆಲ್ಲಿಕಾಯಿಸರ, ಕೊತ್ತಂಬರಿ ಸರ, ಮಾವಿನಕಾಯಿ ಸರ, ಗೋಧಿ ಸರ ಮುಂತಾದ ಸರಗಳನ್ನು ಕುಸುರಿ ಕಿತ್ತನೆ, ಮಣಿ, ಮುತ್ತುಗಳಿಂದ ಸರ, ಹಾರಗಳಿಗಿಂತ ಸುಂದರವಾಗಿ ಕಾಣಲು ಗುಂಡುಗಳ ಜೋಡಣೆಯೊಂದಿಗೆ ತಯಾರಿಸಿದ ಪದಕಗಳನ್ನು ಸೊಂಟದ ಆಭರಣಗಳಲ್ಲಿ ಗೆಜ್ಜೆಪಟ್ಟಿ, ಡಾಬು, ಗುಂಡಿನಪಟ್ಟಿ, ಗೆಜ್ಜೆಪಟ್ಟೆಗಳನ್ನು ತೋಳಿನ ಆಭರಣಗಳಲ್ಲಿ ತೋಳ್ಬಂದಿ, ತೋಳ್ಬಳೆ, ವಂಕೀ ನಾಗಮುರಗಿ, ಮುಂಗೈಗೆ ಬಳೆ ಇವುಗಳಲ್ಲಿ ಅಚ್ಚಿನ, ಬಳ್ಳಿಯ ಮುರುಗಿಯ, ಸುರುಳಿಯ, ಹೂವಿನ, ಎಲೆಯ ಆಕಾರದ ಬಂಗಾರದ ಬಳೆಗಳಿರುತ್ತಿದ್ದವು. ವಿಶೇಷ ಹಬ್ಬಗಳಲ್ಲಿ ಇವುಗಳೊಂದಿಗೆ ಹಸಿರುಗಾಜಿನ ಬಳೆಗಳನ್ನು ಸೇರಿಸಿ ಗುಡಗುಂಟಿ, ಗುಂತಗೋಳ, ದೇವದುರ್ಗದ ರಾಣಿಯರು ಧರಿಸುತ್ತಿದ್ದರು.

ಕನಕಗಿರಿ ಲಕ್ಷ್ಮಮ್ಮನ ಮದುವೆಯ ಸಂದರ್ಭದಲ್ಲಿ ಅವರ ಮಾನ ದೇವದುರ್ಗದ ಕೃಷ್ಣಪ್ಪನಾಯಕನು ಆಕೆಗೆ ಹಾಕಿದ ಆಭರಣಗಳೆಂದರೆ

ಸುಳವು ಬುರುತೆದಾರ ಸೀರೆಯು

ವಳಿತು ಚಿತ್ರಬಣ್ಣ, ಕುಪ್ಪಸ

ಸುಳವು ಚಿತ್ರದ ಹರಳು ಕೆಚ್ಚಿದ ಬಂಗಾರಬಳಿಗಳು[೧೧೩]

ಎಂಬ ವಿವರಣೆ ಇದೆ. ಅರಸ ರಾಣಿಯರಲ್ಲದೆ ಅಂತಃಪುರದಲ್ಲಿ ರಾಜಕುಮಾರ, ಕುಮಾರಿಯರೂ ಆಭರಣಗಳನ್ನು ಧರಿಸುತ್ತಿದ್ದರು ಅತ್ತ-ಕಡಕು, ಬೆಂಡೋಲೆ, ಲೋಲಾಕು, ಕುಂಡಲ, ಕಡಗ, ಬಳೆ, ಉಡುದಾರಗಳನ್ನು ಧರಿಸುತ್ತಿದ್ದರು.[೧೧೪]

ಹೀಗೆ ಅಧಿಕಾರದಲ್ಲಿದ್ದ ನಾಯಕ ಅರಸರು ತಮ್ಮ ರಾಜಕೀಯ ಅಧಿಕಾರಕ್ಕಾಗಿ ಹೋರಾಟ ಮಾಡಿದಂತೆ ವಿಲಾಸಿ ಜೀವನಕ್ಕೂ ಆಸ್ಪದ ನೀಡಿದ್ದರು. ಹಿಂದಿನ ರಾಜಮಹಾರಾಜರಂತೆ ಉಡುಗೆ ತೊಡುಗೆಗಳನ್ನು ಧರಿಸುತ್ತಿದ್ದರಲ್ಲದೆ, ಸುಗಂಧದ್ರವ್ಯಗಳನ್ನು ಲೇಪಿಸಿಕೊಳ್ಳುತ್ತಿದ್ದರು. ಅನೇಕ ಸೇವಕರನ್ನೂ ಅರಮನೆಯಲ್ಲಿಟ್ಟುಕೊಂಡು ತಮಗೆ ಬೇಕಾದ ಉಡುಗೆ-ತೊಡುಗೆಗಳನ್ನು ಮಾಡಿಸಿಕೊಳ್ಳುತ್ತಿದ್ದರು.

ಚಿತ್ರದುರ್ಗದ ಅರಸರು ಖಾಸಾ ನಾಗತಿಯರಿಗೂ, ಕುಮಾರಿಯರಿಗೂ, ಕುದುರೆಗಳಿಗೂ, ಬೇಕಾದ ಆಭರಣಗಳನ್ನು ಮಾಡಿಸುವುದಕ್ಕೆ ಮೇಲ್‌ದುರ್ಗದ ಅರಮನೆಯಲ್ಲಿ ಒಂದು ಚೌಕ ಕಟ್ಟಿಸಿ ಅದರಲ್ಲಿ ಅಗಸಾಲೆಗಳನ್ನು ಇರಿಸಿದರು. ಅಗಸಾಲೆ ಒಬ್ಬನಿಗೆ ತಿಂಗಳಿಗೆ ದುರ್ಗಿವರಹ ೨೦ರ ಪ್ರಕಾರ ೮ ಜನರನ್ನು ನೇಮಕಮಾಡಿ ಬೊಕ್ಕಸದಿಂದ ನಾಣ್ಯಗಳನ್ನು ತಂದುಕೊಟ್ಟು ಚಿನ್ನವಾರದ ಕಟ್ಟಲೇ ಪ್ರಕಾರ ಚಿನ್ನ ಬೆಳ್ಳಿ ಸಹಾ ತೆಗೆದುಕೊಂಡು ಬೇಕಾದ ವಸ್ತುಗಳನ್ನು ಮಾಡಿಸುತ್ತಿದ್ದರು. ಈ ವಿಷಯದಲ್ಲಿ ಲೆಕ್ಕಪತ್ರ ಬರೆಯುವುದಕ್ಕೆ ಬಿಳಿಚೋಡು ದೇಮಣ್ಣನೆಂಬಾತನನ್ನು ನೇಮಿಸಿದ್ದರು. ಈ ಕೆಲಸ ಮಾಡತಕ್ಕ ಮನೆಗೆ 'ಚಿನ್ನದಮನೆ' ಎಂದು ಹೆಸರಾಯಿತು. ಅಲ್ಲಿ ಅಧಿಕಾರಿಯಾಗಿದ್ದವನಿಗೆ 'ಚಿನ್ನದ ಮನೆ ಗುರಿಕಾರ'ನೆಂದು ಹೆಸರಾಯಿತು.[೧೧೫] ಗುಡಗುಂಟಿ ಅರಸರು ಆಭರಣಗಳನ್ನು ತಯಾರಿಸಲು 'ಚಿನ್ನದಕಾಂತಿ' ಎಂಬ ಮನೆತನವನ್ನೇ ಪ್ರಾರಂಭಿಸಿದರು. ಈ ಮನೆತನದವರಿಗೆ ಇನಾಮು ಭೂಮಿಗಳನ್ನು ನೀಡಿದ್ದರು.[೧೧೬] ಈ ಎಲ್ಲಾ ವ್ಯವಸ್ಥೆಯನ್ನು ನೋಡಿದರೆ ನಾಯಕ ಅರಸುಮನೆತನದವರ ಉಡುಗೆ ತೊಡುಗೆಯ ಪದ್ಧತಿಯು ವಿಶೇಷವಾಗಿರುವುದನ್ನು ತಿಳಿಯಬಹುದು.

ಈ ರೀತಿ ಒಂದು ಕಾಲಕ್ಕೆ ವೈಭವದ ಉಡುಗೆ-ತೊಡುಗೆಗಳನ್ನು ಧರಿಸುತ್ತಿದ್ದ ಈ ಮನೆತನದವರ ಇಂದಿನ ಉಡುಗೆ-ತೊಡುಗೆಗಳಲ್ಲಿ ಅನೇಕ ಬದಲಾವಣೆಗಳಾಗಿರುವುದು ಸಹಜವಾಗಿದೆ. ಆರ್ಥಿಕ ಸ್ಥಿತಿಗತಿ, ಆಧುನಿಕತೆಯ ಹೊಸಗಾಳಿ ಇವರನ್ನು ಸೋಂಕಿವೆ. ಆದರೆ ಹಬ್ಬ ಹರಿದಿನಗಳಲ್ಲಿ, ಜಾತ್ರೆ-ಉತ್ಸವಗಳಲ್ಲಿ

ತಮ್ಮ ಪೂರ್ವಜರ ಉಡುಗೆ-ತೊಡುಗೆಗಳನ್ನು ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳದ ಅರಸರು ಧರಿಸುತ್ತಿರುವುದು ವಿಶೇಷವಾಗಿದೆ. ಆದರೆ ಅಂದಿನ ವೈಭವ, ಸಡಗರ ಇಲ್ಲವೆನ್ನಬಹುದು. ಕೇವಲ ಸಾಂಕೇತಿಕವಾಗಿ ಹಬ್ಬ-ಉತ್ಸವಗಳಲ್ಲಿ ಹಬ್ಬಾಚಾರಣೆಯಲ್ಲಿ ಸಂಪ್ರದಾಯವನ್ನು ಮುಂದುವರೆಸ ಲೆಂಬಂತೆ ಉಡುಗೆಯನ್ನು ತೊಡುತ್ತಾರೆ. ಇಂತಹ ಸ್ಥಿತ್ಯಂತರ ಯಾವುದೇ ಸಮುದಾಯಕ್ಕೆ ಅನಿವಾರ್ಯವೇ ಆಗಿದೆ. ಹೀಗಿದ್ದೂ ರಾಜಪ್ರಭುತ್ವವೊಂದರ ವೈಭವೋಪೇತ ಜೀವನಶೈಲಿಯು ಇಂದಿನ ಹಲಕೆಲವು ಹಬ್ಬಾಚರಣೆಗಳಲ್ಲಿ ಮರೆಯಾದ ಜೀವನ ವಿಧಾನವೊಂದರ ನೆನಪನ್ನು ಕಣ್ಮುಂದೆ ನಿಲ್ಲಿಸುತ್ತದೆ.

## ೪.೪ ಆಹಾರ ಪದ್ಧತಿ

ಕರ್ನಾಟಕದ ನಾಯಕ ಅರಸುಮನೆತನಗಳ ಆಹಾರ ಪದ್ಧತಿ ಕುರಿತಂತೆ ಅವರ ಕೆಲವು ಶಾಸನಗಳಲ್ಲಿ, ಚಾರಿತ್ರಿಕ ಕೃತಿಗಳಲ್ಲಿ, ಸಾಹಿತ್ಯಕೃತಿಗಳಲ್ಲಿ, ಜನಪದಸಾಹಿತ್ಯದಲ್ಲಿ ಮಾಹಿತಿಗಳು ಲಭ್ಯವಿವೆ. ಹಾಗೆಯೇ ಇಂದಿಗೂ ಇರುವ ಆ ಮನೆತನದ ವಂಶಸ್ಥರಲ್ಲಿ ಆ ಕಾಲದ ವೈವಿಧ್ಯಮಯವಾದ ಅನೇಕ ಊಟ ತಿಂಡಿಗಳ ಪದಾರ್ಥಗಳ ವಿವರಗಳು ನಮಗೆ ದೊರೆಯುತ್ತವೆ. ಈ ಮನೆತನಗಳು ವಿಜಯನಗರದ ಅಧೀನ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಅಸ್ತಿತ್ವದಲ್ಲಿದ್ದರಿಂದ ಸಾಮಾನ್ಯವಾಗಿ ವಿಜಯನಗರದ ಕಾಲದಲ್ಲಿದ್ದ ಆಹಾರ ಪದ್ಧತಿಯೇ ಈ ಮನೆತನಗಳಲ್ಲಿ ಮುಂದುವರೆದಿದೆ.

ಯಾವುದೇ ಒಂದು ಪ್ರದೇಶದ ಆಹಾರ ಪದ್ಧತಿ ಆ ಪ್ರದೇಶದ ಭೌಗೋಳಿಕ ಪರಿಸರ, ಅಲ್ಲಿ ಬೆಳೆಯುವ ಮೂಲಕ ಲಭ್ಯವಿರುವ ಧಾನ್ಯಗಳು, ತರಕಾರಿಗಳು ಹಾಗೂ ಪ್ರಾಣಿ ಪಕ್ಷಿಗಳನ್ನು ಅವಲಂಬಿಸಿರು ತ್ತದೆ ಹಾಗೂ ಆ ಮನೆತನದ ಸಂಪತ್ತು ವೈಭವವನ್ನೂ ಅವಲಂಬಿಸಿರುವುದುಂಟು. ಕರ್ನಾಟಕದ ನಾಯಕ ಅರಸುಮನೆತನದವರು ಆಯಾ ಪ್ರದೇಶದಲ್ಲಿ ಆಚರಿಸುವ ಸಂಪ್ರದಾಯ, ಪರಂಪರಾಗತವಾಗಿ ಬಂದಿರುವ ಆಚರಣೆಗಳನ್ನು ಗಮನದಲ್ಲಿಟ್ಟುಕೊಂಡು ಆಹಾರವನ್ನು ತಯಾರಿಸುತ್ತಿದ್ದರು. ಇವರ ಕಾಲದ ಆಹಾರವನ್ನು ಹಸಿ ಆಹಾರ ಮತ್ತು ಬಿಸಿ ಆಹಾರವೆಂದು ವಿಭಾಗಿಸಬಹುದಾಗಿದೆ.

### ೪.೪.೧ ಹಸಿ ಆಹಾರ

ಹಸಿ ಹಸಿ ತರಕಾರಿಗಳು, ತೊಪ್ಪಲು, ಎಲೆಗಳು, ಹಣ್ಣು, ಹಾಲು, ಮೊಸರು, ಬೇಳೆಗಳು, ಇವೆಲ್ಲವುಗಳನ್ನು ಬೆರೆಸಿ ಸಿದ್ಧಪಡಿಸಿದ(ಬೇಯಿಸದ) ಆಹಾರಕ್ಕೆ ಹಸಿ ಆಹಾರ ಎನ್ನುವರು. ಉದಾ : ಕೋಸಂಬರಿ, ರಸಾಯನ, ಹಸಿ ತಂಬಿಟ್ಟು, ಕಾಳುಗಳನ್ನು ನೀರಿನಲ್ಲಿ ನೆನೆಸಿ ಹಸಿ ಮೊಳಕೆ ಮಾಡಿದ ದವಸ ಧಾನ್ಯಗಳು, ಕಡಲೆ, ಮಡಕೆ ಧಾನ್ಯಗಳೆಲ್ಲವು ಹಸಿ ಆಹಾರ ಎಂದುಕೊಳ್ಳಬಹುದು.[೧೧೭]

### ೪.೪.೨ ಬಿಸಿ ಆಹಾರ

ಬಿಸಿ ಆಹಾರಂದರೆ ಸಾಮಾನ್ಯವಾಗಿ ಬೇಯಿಸಿದ ಪದಾರ್ಥಗಳಾಗಬಹುದು, ಇವುಗಳನ್ನು ಹದವಾಗಿ ಬೇಯಿಸಿ ಪಕ್ವಗೊಳಿಸಿರುವುದು ಪಾಯಸ, ಕಜ್ಜಾಯ, ಮೊಸರನ್ನ, ಎಳ್ಳುಂಡೆ, ಕರಿಗಡಬು, ಕಾಳು, ಬೇಳೆ,

ಹಾಲು, ತುಪ್ಪ, ಹಣ್ಣು, ಕಾಯಿ ಮೊದಲಾದವುಗಳನ್ನು ಉಪಯೋಗಿಸಿ ನಾನಾ ಬಗೆಯ ರುಚಿಕರ ಅಡುಗೆಯನ್ನು ತಯಾರಿಸುತ್ತಿದ್ದರು. ಇದರಲ್ಲಿ ಎಣ್ಣೆಗಾಯಿ, ಪಲ್ಯ ಇತ್ಯಾದಿಗಳೂ ಸೇರುತ್ತವೆ. ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಗುಡೇಕೋಟೆ, ಕನಕಗಿರಿ, ಜರಿಮಲೆ ಇವುಗಳೆಲ್ಲ ಬೆಟ್ಟಗುಡ್ಡಗಳಿಂದ ಕೂಡಿದೆ. ಅಲ್ಲಿಯ ತುಂಗಾಭದ್ರಾ, ಕೃಷ್ಣಾ ನದಿಗಳೂ ಸಹಿತ ಇವರ ಆಹಾರ ಪದ್ಧತಿಯ ಮೇಲೆ ಪ್ರಭಾವ ಬೀರಿವೆ. ಈ ಅರಸುಮನೆತನದವರ ಆಹಾರವನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ :

೪.೪.೨.೧ ಅನ್ನ

ಈ ನಾಯಕ ಅರಸುಮನೆತನದವರು ವಾಸಿಸುವ ಕಡೆಗಳಲ್ಲೆಲ್ಲಾ ಭತ್ತವನ್ನು ಬೆಳೆಯುತ್ತಿದ್ದರು. ಹೀಗಾಗಿ ಅಲ್ಲಿ ಭತ್ತ ಯಥೇಚ್ಛವಾಗಿ ಸಿಗುತ್ತಿತ್ತು. ಅಕ್ಕಿಯಲ್ಲಿ ನೆಲ್ಲಕ್ಕಿ, ಸಣ್ಣಕ್ಕಿ, ಕಳವೆ ಎಂಬ ವಿಧಗಳ ಜೊತೆಗೆ 'ರಾಜಾನ್ನದಕ್ಕಿ' ಎಂಬ ಒಂದು ಶ್ರೇಷ್ಠ ಜಾತಿಯ(ಭತ್ತದ) ಅಕ್ಕಿಯೂ ಚಿತ್ರದುರ್ಗದಲ್ಲಿತ್ತು. ಅಕ್ಕಿಯನ್ನು ಸಂಗ್ರಹಿಸಲು 'ಅಕ್ಕಿ ಪಳತ'ಗಳೂ ಇರುತ್ತಿದ್ದವು. ಅಕ್ಕಿಯನ್ನು ಬೇರೆ ಬೇರೆ ಅಡುಗೆಗಳಿಗಾಗಿ 'ಉಕ್ಕರಿಸಿದ ಅಕ್ಕಿ(ಕುದಿಸಿದ ಬತ್ತದಿಂದ ತೆಗೆದ ಅಕ್ಕಿ, ಬಹುಶಃ ಈಗಿನ ಕುಚ್ಚಲಕ್ಕಿ ಅಥವಾ ಕುಚ್ಚಿಗೆ ಅಕ್ಕಿ), ಸದಕಿದ ಅಕ್ಕಿ(ಕುಟ್ಟಿ ಸಂಸ್ಕರಿಸಿದ ಅಕ್ಕಿ) ಮುಂತಾದ ಅಕ್ಕಿಗಳನ್ನು ಸಿದ್ಧಪಡಿಸಿ ಇಡುತ್ತಿದ್ದರು.[೧೧೮] ಈ ಅನ್ನವನ್ನು ಪ್ರತಿದಿನ ಮಾಡುತ್ತಿರಲಿಲ್ಲ. ನವಣೆ, ಸಾವೆ, ಅಕ್ಕಿಯ ಅನ್ನವನ್ನು ಪ್ರತಿದಿನ ಮಾಡುತ್ತಿದ್ದರು, ಭತ್ತದ ಅನ್ನವನ್ನು ವಿಶೇಷ ದಿನಗಳಲ್ಲಿ ಮಾತ್ರ ಮಾಡುವ ರೂಢಿಯಿದ್ದಿತು.

ಭತ್ತದ ಅಕ್ಕಿಯಿಂದ ಮಾಡುತ್ತಿದ್ದ ಅನ್ನದ ವಿಧಗಳು ಆಶ್ಚರ್ಯ ಹುಟ್ಟಿಸುವಂತಿವೆ. 'ಮಲ್ಲಿಗೆಯರಳಂತೆ' (ಮಲ್ಲಿಗೆ ಹೂವಂತೆ) ಬೆಳ್ಳಗೆ ಉದುರುದುರಾದ 'ಉದುರೋಗರ', ಬಹುಶಃ ದಪ್ಪ ಅಕ್ಕಿಯಿಂದ ಮಾಡಿದ 'ತೋರನ್ನ' ಅಥವಾ 'ದೊಡ್ಡಕ್ಕಿ ಬೋನ', ಸಣ್ಣಕ್ಕಿಯಿಂದಾದ 'ಸಣ್ಣಕ್ಕಿಯೋಗರ' ಅಥವಾ 'ಸಣ್ಣಕ್ಕಿಯಶನ' ಮುಂತಾದುವಲ್ಲದೆ, ಸಾಧಾರಣ ಭತ್ತದ 'ನೆಲ್ಲಕ್ಕಿಯ ಅನ್ನ', ಮಳೆಯಿಂದ ಬೆಳೆಯುವ 'ಕಾರುಬತ್ತ'ದಿಂದಾದ 'ಕಾರನ್ನ', ಶ್ರೇಷ್ಠಜಾತಿಯ ಒಂದು ಬತ್ತದ 'ರಾಜಾನ್ನ' ಅಥವಾ 'ಸಿತ ರಾಜಾನ್ನ'(ಬೆಳ್ಳಗಿನ ರಾಜಾನ್ನ) ಇತ್ಯಾದಿಗಳಿರುತ್ತಿದ್ದವು. ಬಹುಶಃ ಪಟ್ಟಣಕ್ಕೆ ಬಂದುಹೋಗುತ್ತಿದ್ದ ಹೊರಗಿನ ಜನರಿಗಾಗಿಯೇ 'ಮಧುರಾನ್ನ'ದ ಛತ್ರ ಚಾವಡಿಗಳಿದ್ದವು. ಸಾರು ಹುಳಿಗಳಿಲ್ಲದ ಅನ್ನದ ಊಟ ಅಂದರೆ 'ಹಾಲುಬಾನ', 'ಮೊಸರುಬಾನ', 'ಪುಳಿವಾಗರ'(ಪುಳಿಯೋಗರೆ), 'ಸುಧಾಸೂಪನ್ನ'(ಹಾಲಿನಸಾರಿನ ಅನ್ನ) 'ಹರಿದ್ರಾನ್ನ', 'ಕಲಸನ್ನ'(ಉಪ್ಪು, ಖಾರ, ಹುಳಿ, ಸೇರಿಸಿ ಒಗ್ಗರಣೆ ಹಾಕಿ ಮಾಡುತ್ತಿದ್ದ ಅನ್ನ) 'ಕ್ಷೀರ ಶರ್ಕರಾನ್ನ'(ಹಾಲು ಸಕ್ಕರೆ ಕೂಡಿದ ಅನ್ನ) 'ಪರಮಾನ್ನ'(ಹಾಲು ಸಕ್ಕರೆ ಅಕ್ಕಿಯಿಂದ ಮಾಡುತ್ತಿದ್ದ ಒಂದು ಬಗೆಯ ಸಿಹಿಯ ಒಗರ) 'ಷಡುರಸ ದಿವ್ಯಾನ್ನ', 'ದಧ್ಯನ್ನ' ದೇವರಿಗೆ ದಧ್ಯನ್ನವನ್ನು ನೈವೇದ್ಯ ನೀಡುತ್ತಿದ್ದರು.[೧೧೯]

‘ದಧ್ಯನ್ನ’ಕ್ಕೆ ‘ದಧ್ಯೋದನ’ ಎಂದು ಕರೆಯುತ್ತಿದ್ದರು. ಹೀಗೆಂದರೆ ಮೊಸರನ್ನ ಎಂದರ್ಥ.[೧೨೦] ಚಿತ್ರದುರ್ಗದ ಪಾಳೆಯಗಾರರಲ್ಲಿ ‘ದಧ್ಯನ್ನದ ಓಬಣ್ಣನಾಯಕ’ ಎಂಬ ವಿಶೇಷ ಹೆಸರಿನವನೇ ಒಬ್ಬನಿದ್ದಾನೆ.[೧೨೧]

ರಾಜಾನ್ನ ಎಂಬುದು ಇನ್ನೊಂದು ವಿಶೇಷ ಅಡುಗೆಯಾಗಿದೆ. ರಾಜರು ಊಟ ಮಾಡಲು ಯೋಗ್ಯವಾದ ಅನ್ನ ರಾಜಾನ್ನ ಎಂದು ಮಂಗಳಸೂತ್ರದಲ್ಲಿದೆ. ದೇವದುರ್ಗದ ಅರಸರು ‘ಜೋಳವನ್ನು ರಾತ್ರಿಯಿಡಿ ನೀರಿನಲ್ಲಿ ನೆನಸಿ ಬೆಳಗ್ಗೆ ಅದನ್ನು ನೆರಳಿನಲ್ಲಿ ಒಣಗಿಸಿ, ಒರಳಿನಲ್ಲಿ ಕುಟ್ಟುತ್ತಿದ್ದರು. ನಂತರ ಇದನ್ನು ಹಾಲಿನಲ್ಲಿ ಬೇಯಿಸುತ್ತಿದ್ದರು. ಇದಕ್ಕೆ ಶುಂಠಿ, ಸೋಪು, ಗಸಗಸಿ, ಯಾಲಕ್ಕಿ ಹಾಕಿ ಪುಡಿ ಬೆಲ್ಲ ಹಾಕಿದ ನಂತರ ತುಪ್ಪ ಹಾಲುಗಳ ಜೊತೆ ತಿನ್ನುತ್ತಿದ್ದರು. ಈಗಲೂ ಇದನ್ನು ಮಾಡುತ್ತಾರೆ.[೧೨೨]

ಅನ್ನವನ್ನು ಸೇವಿಸುವಾಗ ಎಂಟು ವಿಧದ ದೋಷಗಳಾಗುತ್ತವೆಯಂತೆ. ಈ ಎಂಟು ದೋಷಗಳು ಅಸ್ರುತ, ಪಿಚ್ಛಿಲ, ಅಶುಚಿ, ಶ್ವಥಿತ, ದಗ್ಧ, ಶುಷ್ಕಿತ, ವಿರೂಪ, ಅನರ್ತುಜಗಳು. ಗಂಜಿ ಬಸಿಯದ ಅನ್ನ ಆಸ್ರುತ, ಹೆಚ್ಚು ಬೇಯಿಸಿದ ಅನ್ನ ಪಿಚ್ಛಿಲ, ಕ್ರಿಮಿ ಕೂದಲುಗಳಿಂದ ದೂಷಿತವಾದ ಅಶುಚಿ, ಪೂರ್ಣವಾಗಿ ಪಕ್ವವಾಗದ ಶ್ವಥಿತ, ಹಳೆಯ ಅನ್ನ ಶುಷ್ಕಿತ, ಹೆಚ್ಚು ಉರಿಯಿಂದ ತಳ(ಅಡಿ)ಹತ್ತಿದ್ದು ದಗ್ಧ, ಒಡೆಯದ ಅಕ್ಕಿಯ ಅನ್ನ ವಿರೂಪ, ತಂಗಳನ್ನ ಅನುರ್ಜಿತ. ಈ ದೋಷಗಳುಳ್ಳ ಅನ್ನ ತಿಂದರೆ ಅಜೀರ್ಣ, ಗುಲ್ಮವ್ಯಾಧಿ, ನಿದ್ರೆ, ಶೀತಾದಿ ರೋಗಗಳು ಉಂಟಾಗುತ್ತವೆ.[೧೨೩] ಇಂಥ ಅನ್ನವನ್ನು ಈ ಅರಸರು ಸೇವಿಸುತ್ತಿರಲಿಲ್ಲ.

### ೪.೪.೨.೨ ರೊಟ್ಟಿ

ರೊಟ್ಟಿಯಲ್ಲಿ ಜೋಳದ ರೊಟ್ಟಿ, ರಾಗಿಯ ರೊಟ್ಟಿ, ಅಕ್ಕಿಯ ರೊಟ್ಟಿ, ಗೋಧಿಯ ರೊಟ್ಟಿ ಎಂಬವು ಗಳಿವೆ. ಜೋಳದ ಬೆಳೆಯು ಸಾಮಾನ್ಯವಾಗಿ ಬಯಲು ಪ್ರದೇಶದ ಬೆಳೆ ಆದರೂ ಇದನ್ನು ಬಯಲು ಸೀಮೆಯಲ್ಲದೆ ಮಲೆನಾಡು, ಅರೆ ಮಲೆನಾಡು, ನೀರಾವರಿ ಪ್ರದೇಶಗಳಲ್ಲಿಯೂ ಬೆಳೆಯುತ್ತಿದ್ದಾರೆ.

ಚಿತ್ರದುರ್ಗದ ಸಮೀಪದ ಒಂದು ಊರನ್ನು ಶತ್ರುಗಳು ಬಂದು ಮುತ್ತಿದಾಗ ಅವರಿಗೂ, ದುರ್ಗದ ದಂಡಿಗೂ ಮೂರುದಿನ ಸತತವಾಗಿ ಅಡಿಗೆಮಾಡಿ ಊಟಮಾಡಲಿಕ್ಕೂ ಬಿಡುವು ಸಿಕ್ಕದಂತೆ ಲಡಾಯವಾದಾಗ ದುರ್ಗದಿಂದ ರೊಟ್ಟಿಗಳನ್ನು ಮಾಡಿಸಿಕೊಂಡು ಎತ್ತುಗಳ ಮೇಲೆ ಹೇರಿಕೊಂಡು ಬಂದು ಸೈನ್ಯದವರಿಗೆಲ್ಲ ಹಂಚಬೇಕಾಯಿತು.[೧೨೪] ಯುದ್ಧದ ಸಮಯದಲ್ಲಿ ೯೦೦ ಎತ್ತುಗಳೂ, ೩೦೦ ಜನ ಹೆಂಗಸರೂ, ಹಗಲೂ ರಾತ್ರಿ ಸುತ್ತಿ ಸೈನಿಕರಿಗೆ ರೊಟ್ಟಿ, ಬೆಣ್ಣೆ ವಗೈರೆಗಳನ್ನು ಅವರವರ ಸ್ಥಳಗಳಲ್ಲಿಯೇ ಒದಗಿಸುತ್ತಿದ್ದರು.[೧೨೫] ಚರಿತ್ರೆಯ ಈ ಎರಡೂ ಪ್ರಸಂಗಗಳು ರೊಟ್ಟಿಯು ಅರಸರ ಹಾಗೂ ಅವರ ಸೈನಿಕ ಸಮುದಾಯದ ಆಹಾರವಾಗಿತ್ತು ಎಂಬುದನ್ನು ತೋರಿಸುತ್ತವೆ.

ರಾಗಿಯರೊಟ್ಟಿಯನ್ನೂ ಇವರು ತಯಾರಿಸುತ್ತಿರಬಹುದು ಇಲ್ಲಿ ರಾಗಿಯನ್ನು ಸಂಗ್ರಹಿಸಲಿಕ್ಕೆ ಊರೂರುಗಳಲ್ಲಿ 'ರಾಗಿ ಪಳತ'ಗಳು ಇರುತ್ತಿದ್ದವು. ಅಲ್ಲದೆ ಚಿತ್ರದುರ್ಗ ಪಟ್ಟಣದಲ್ಲಿ ರಾಗಿಯ ಖರೀದಿ ಮಾರಾಟಗಳಿಗಾಗಿ 'ರಾಗಿಪೇಟೆ' ಎಂಬ 'ಹೆಸರಿನ ಪೇಟೆಯೇ ಇತ್ತು. ಈಗ ಈ ಹೆಸರಿನ ಪೇಟೆ ಇಲ್ಲ.[೧೨೬] ಗುಡೇಕೋಟೆ ಗ್ರಾಮದ ಪಶ್ಚಿಮದ ದೊರೆಗುಡ್ಡದಲ್ಲಿ ಇಂದಿಗೂ ರಾಗಿಕಣಜಗಳು ನೋಡಲು ಸಿಗುತ್ತವೆ. ಗುಡೇಕೋಟೆಯ ಅರಸರು ಇವುಗಳಲ್ಲಿ ತುಪ್ಪ ಮತ್ತು ರಾಗಿಗಳನ್ನು ಸಂಗ್ರಹಿಸುತ್ತಿದ್ದರು. ಶತ್ರುಗಳ ಹಾವಳಿಯಿಂದ ಕೋಟೆಯನ್ನು ರಕ್ಷಿಸಲು ಇಳಿಜಾರು ಬಂಡೆಗಳಿಗೆ ತುಪ್ಪ ಮತ್ತು ರಾಗಿಗಳನ್ನು ಹರಡುತ್ತಿದ್ದರು. ಹೀಗೆ ತುಪ್ಪ ಮತ್ತು ರಾಗಿಗಳನ್ನು ಹರಡುವುದರಿಂದ ಸೈನಿಕರರು ಬಂಡೆಗಳ ಮೇಲೆ ಹತ್ತಿ ಬರಲಾಗುತ್ತಿರಲಿಲ್ಲ. ಇಲ್ಲಿರುವ ರಾಗಿಯನ್ನು ಸೈನಿಕರ ಆಹಾರಕ್ಕಾಗಿಯೂ ಬಳಸುತ್ತಿದ್ದರು.[೧೨೭] ಅರಸರು ರಾಗಿಯನ್ನು ಉಪಯೋಗಿಸುವ ಕಾರಣ ಇದು ಮಾಂಸಖಂಡದ ಹಿಗ್ಗುವಿಕೆ, ಕುಗ್ಗುವಿಕೆಯ ಕ್ರಿಯೆಗೆ ಉಪಯುಕ್ತ. ರಾಣಿಯರಿಗೆ ಮಗು ಜನಿಸಿದಾಗ ಇದನ್ನು ಊಟ ಮಾಡಿಸುತ್ತಿದ್ದರು. ಇದರಿಂದ ಎದೆಹಾಲು ಉತ್ಪತ್ತಿಯಾಗುವುದಲ್ಲದೆ ಹಾರ್ಮೋನುಗಳ ಪರಿವರ್ತನೆ ಕ್ರಿಯೆ ಪಡೆಯಲು ಸಹಾಯಕಾರಿ ಎಂಬುದನ್ನು ಅರಿತಿದ್ದರು.[೧೨೮]

ಅಕ್ಕಿಯರೊಟ್ಟಿಯನ್ನೂ ತಯಾರಿಸುತ್ತಿದ್ದರು. ಸವಡುರೊಟ್ಟಿ ಎಂಬುದು ಇನ್ನೊಂದು ಬಗೆಯ ರೊಟ್ಟಿ. ಗೋಧಿ ಚಪಾತಿಯೊಂದಿಗೆ ಬೆಲ್ಲ ಮತ್ತು ಸಕ್ಕರೆಯನ್ನು ಕೂಡಿಸಿ ಮಾಡುವ ಒಂದು ಸಿಹಿ ತಿನಿಸಾಗಿತ್ತು. ಬೆಣ್ಣೆ, ಹಾಲಿನ ಕೆನೆ, ಕಣಕ ಇವನ್ನು ಕೂಡಿಸಿ ಕುಟ್ಟಿ ಸಕ್ಕರೆ ತುಪ್ಪ ಮುಂತಾದವನ್ನು ಹಾಕಿ ಪದ ಪದರುಗಳಂತೆ ಮಾಡುತ್ತಿದ್ದ ಅದು ರೊಟ್ಟಿಯನ್ನು ಹೋಲುವಂತಿದ್ದರಿಂದಲೇ ಏನೋ ಆ ಹೆಸರು ಪಡೆದಿರಬೇಕು.[೧೨೯]

ಜೋಳ ಇಲ್ಲವೆ ಸಜ್ಜೆರೊಟ್ಟಿಗೆ ಅರಿಶಿಣಪುಡಿಯನ್ನು ಹಾಕಿ ಹಸಿರೊಟ್ಟಿಯ ಮೇಲೆ ಎಳ್ಳನ್ನು ಹಚ್ಚಿ ಮಾಡುವ ರೊಟ್ಟಿಯನ್ನು ಸುರಪುರದ ಅರಸರು ತಿನ್ನುತ್ತಿದ್ದರು. ತೀರ್ಥಯಾತ್ರೆಗೆ ಹೊರಟರೆ ಇಂಥ ರೊಟ್ಟಿಗಳನ್ನು ಒಯ್ಯುವ ರೂಢಿ ದೇವದುರ್ಗದ ಅರಸರಲ್ಲಿತ್ತು.[೧೩೦] ಗೋಧಿಯನ್ನೂ ಇಲ್ಲಿ ಯಥೇಚ್ಛವಾಗಿ ಬೆಳೆಯುತ್ತಿದ್ದರಿಂದ ಗೋಧಿಯಿಂದ ಗಾರಿಗೆ ಕಡುಬುಗಳನ್ನು ತಯಾರಿಸುತ್ತಿದ್ದರಲ್ಲದೇ ಗೋಧಿರೊಟ್ಟಿಯೂ ಸಹಿತ ಇವರ ಆಹಾರವಾಗಿತ್ತು.

### ೪.೪.೩ ಸಿಹಿ ಆಹಾರ

ಈ ಮನೆತನಗಳಲ್ಲಿ ಸಿಹಿ ತಿಂಡಿ ತಿನಿಸುಗಳು ಊಟದಂತೆಯೇ ಪರಿಗಣಿಸಲ್ಪಟ್ಟಿವೆ. ಪಾಯಸ ಆಗಿನ ಕಾಲದ ಇವರ ಸಿಹಿ ಅಡುಗೆಯಲ್ಲೊಂದು. ಪಾಯಸದಲ್ಲೂ ಕೂಡಾ 'ಸಣ್ಣಕ್ಕಿ ಪಾಯಸ', 'ಸಜ್ಜಿಗೆ ಪಾಯಸ', 'ಸರ(ವ)ಳಿಗೆ ಪಾಯಸ', 'ಪರಡಿ ಪಾಯಸ', 'ಗವುಲಿ ಪಾಯಸ' ಮುಂತಾದ ವಿಧಗಳಿದ್ದವು.

'ಪರಡಿ ಪಾಯಸ'ದಲ್ಲಿ 'ಸಣ್ಣ ಪರಡಿ ಪಾಯಸ', 'ಗವುಲಿ ಪಾಯಸ'ದಲ್ಲಿ 'ಗಟ್ಟಿಗವುಲಿ ಪಾಯಸ' ಎಂಬ ಬಗೆಗಳಿದ್ದವು. 'ಶಾವಿಗೆ ಅಥವಾ ಸೇವಿಗೆ ಮತ್ತು 'ಸಣ ಶಾವಿಗೆ' ಎಂಬವೂ ಪಾಯಸದಲ್ಲಿ ಸೇರಿದ್ದವು. ಅಲ್ಲದೇ, ಅಕ್ಕಿ ಬೆಲ್ಲ ಸೇರಿಸಿ ಮಾಡಿದ 'ಪಕ್ಸ್ಯ' ಎಂಬ ಸಿಹಿ ತಿಂಡಿ, ಅಕ್ಕಿ ತೆಂಗಿನಕಾಯಿ ಬೆಲ್ಲ ರುಬ್ಬಿ ತುಪ್ಪ ಎಣ್ಣೆಯಲ್ಲಿ ಕರಿದು ಮಾಡಿದ 'ಅತಿರಸ' ಎಂಬ ತಿಂಡಿಯನ್ನೂ ಸೇವಿಸುತ್ತಿದ್ದರು.[೧೩೧]

ಹೂರಣದಿಂದ ಮಾಡುವ 'ಹೂರಣಗಡುಬು', ಸಿಹಿಯ 'ಪೊಂಗಲು' ಕೆಲವು ದೇವಸ್ಥಾನಗಳಲ್ಲಿ ದೇವರಪೂಜೆಯನ್ನು ಮಾಡಲು ಪೊಂಗಲನ್ನು ನೈವೇದ್ಯಕ್ಕೆ ಬಳಸುತ್ತಿದ್ದರು. ದೇವರೊಂದರ ಬಹುಶಃ ಸಹಸ್ರನಾಮಾರ್ಚನೆಯಲ್ಲಿ 'ಸಹಸ್ರನಾಮ ಪೊಂಗಲು' ಎಂಬುದನ್ನು ಅರ್ಪಿಸಲು ದುರ್ಗದ ದೊರೆಗಳು ದತ್ತಿ ನೀಡಿದ್ದರೆಂಬ ಉಲ್ಲೇಖವಿದೆ.[೧೩೨] ಅಕ್ಕಿ ಹಿಟ್ಟು, ಬೆಲ್ಲ, ತೆಂಗಿನಕಾಯಿಯನ್ನು ಬೆರೆಸಿ ಕರಿದ 'ಸುಖಿನಪ್ಪ', ಅಕ್ಕಿಹಿಟ್ಟಿಗೆ ತೆಂಗಿನ ಕಾಯಿ, ಬೆಲ್ಲ, ಏಲಕ್ಕಿ ಸೇರಿಸಿ ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಸಿಹಿತಿಂಡಿ 'ಎರೆಯಪ್ಪ'[೧೩೩]ಗಳೂ ಇದ್ದವು. ಹುಗ್ಗಿಯೂ ಕೂಡ ಒಂದು ಸಿಹಿ ಅಡುಗೆ. ದುರ್ಗದ ಪಾಳೆಯಗಾರರ ಕಾಲದಲ್ಲಿ ಹೊಸ ಗ್ರಾಮವೊಂದರ ನಿರ್ಮಾಣವಾದಾಗ ತಪ್ಪದೆ ಜನರ ಸಂತರ್ಪಣೆಗೆ ಬಳಸುತ್ತಿದ್ದುದು ಹುಗ್ಗಿಯಾಗಿದೆ.[೧೩೪]

ಉಂಡೆಗಳಲ್ಲಿ ಎಳ್ಳುಂಡೆ, ಶೇಂಗಾ ಉಂಡೆ, ಮನೋಹರ(ಬುಂದೆ) ಮುಂತಾದವುಗಳಾದರೆ, ಕರಚಿಕಾಯಿ, ಸುರುಳಿ ಹೋಳಿಗೆ, ಕಾಯಿ ಹೋಳಿಗೆ, ಗೆಣಸಿನ ಹೋಳಿಗೆ, ಹುಗ್ಗಿ, ಗೋಧಿಯನ್ನು ನೀರಿನಲ್ಲಿ ನೆನೆಸಿ ಒರಳಿನಲ್ಲಿ ಕುಟ್ಟುವುದು ನಂತರ ನೀರಿನೊಡನೆ ಬೆಲ್ಲ ಬೆರಸಿ ಅದರಲ್ಲಿ ಯಾಲಕ್ಕಿ, ಲವಂಗ, ಗಸಗಸೆ, ಸೋಪು, ಶುಂಠಿ ಬೆರೆಸಿ ಕುದಿಸುತ್ತಿದ್ದರು. ತಿನ್ನಲು ಬಹುರುಚಿ ಹಾಗೂ ಜೀರ್ಣಶಕ್ತಿಯುಳ್ಳವರೇ ಇದನ್ನು ದಕ್ಕಿಸಿಕೊಳ್ಳಬೇಕು.[೧೩೫] ಶಿರಾ, ಜಿಲೇಬಿ, ಕರಿದ ಅಂಟು, ಗಾರಿಗೆ 'ಫೇಣಿ' ಹೂರಣಗಡುಬು, ಕೀರು, ಮಾಲದಿ ಮುಂತಾದವುಗಳನ್ನು ಸೇವಿಸುತ್ತಿದ್ದರು.

### ೪.೪.೪ ತಿಂಡಿಗಳು

ದೋಸೆ, ವಡೆ, ಉದ್ದಿನೊಡೆ, ಚಕ್ಕುಲಿ, ಪೂರಿ, ಮಾಲ್‌ಪೂರಿ, ಹೂರಿಗೆ, ಎಣ್ಣೆಯೂರಿಗೆ, ಇಡ್ಲಿ ಮುಂತಾದವು ತಿಂಡಿಗಳಾಗಿದ್ದವು.

### ೪.೪.೫ ಖಾರದ ಆಹಾರ

ಅನ್ನರಸ, ನಿಂಬೇಭಾತು, ಸೌತೇಭಾತು, ಕಾಬಾಳೆ ಭಾತು, ಸಟ್ಟಿಭಾತು, ಸಾರು, ಸಾಂಬಾರು, ಚಿತ್ರಾನ್ನ, ಶಾಲ್ಯಾನ್ನ, ಉಪ್ಪಿನ ಮತ್ತು ಕಾರದ ಕಡುಬು ಮುಂತಾದವುಗಳನ್ನು ಸೇವಿಸುತ್ತಿದ್ದರು.

### ೪.೪.೬ ಮಧುರ ಪಾನೀಯಗಳು ಅಥವಾ ಹಣ್ಣಿನ ಆಹಾರ

ರಾಜರು ಅನೇಕ ಬಗೆಯ ಭಕ್ಷ್ಯಗಳನ್ನು ಊಟ ಮಾಡುತ್ತಿದ್ದರಲ್ಲದೆ ನಾನಾ ಬಗೆಯ ಪಾನೀಯಗಳನ್ನು ಬಳಸುತ್ತಿದ್ದರು.[೧೩೬] ಮಾವಿನಹಣ್ಣು, ಬಾಳೆಯಹಣ್ಣಿನಿಂದ ಮಾಡುವ ಶೀಕರಣೆಯನ್ನು, ಗೋಧಿ ರೊಟ್ಟಿಯಲ್ಲಿ ಬಳಸುತ್ತಿದ್ದರು. ಇಲ್ಲವೇ ಅದನ್ನೇ ಕುಡಿಯುತ್ತಿದ್ದರು. ಚಿತ್ರದುರ್ಗದ ಅರಸರ ಕಾಲದಲ್ಲಿ ಮಾವಿನ ತೋಪುಗಳಿದ್ದವಂತೆ. ಆ ತೋಪಿನಲ್ಲಿ ಬಿಡುವ ಹಣ್ಣುಗಳನ್ನು 'ದೊರೆತಿನ್ನೋ ಮಾವು' ಎಂದು ಕರೆಯುತ್ತಿದ್ದರು.[೧೩೭] ನಿಂಬೇಹಣ್ಣಿನ ಪಾನಕ, ಮಾವಿನಕಾಯಿ ಪಾನಕ, ಹುಣಸೆಹಣ್ಣಿನ ರಸದ ಪಾನಕಗಳನ್ನು ಇವರು ಅಹ್ಲಾದವನ್ನುಂಟುಮಾಡುವ ಪಾನೀಯಗಳೆಂದು ಕರೆಯುತ್ತಿದ್ದರು. ಬಾಯಾರಿಕೆ ನೀಗಿಸಲು ನೀರಿನಲ್ಲಿ ನಿಂಬೆರಸ ಬೆರೆಸಿ, ಅದಕ್ಕೆ ಸ್ವಲ್ಪ ಏಲಕ್ಕಿ ಪುಡಿ, ಸಕ್ಕರೆ ಸೇರಿಸಿ ತಯಾರಿಸುತ್ತಿದ್ದರು. ಇದನ್ನು ಬೇಸಿಗೆಯಲ್ಲಿ ಹೆಚ್ಚಿಗೆ ಉಪಯೋಗಿಸುತ್ತಿದ್ದರು.[೧೩೮] ಸುರಪುರದ ಅರಸರು ಕಾಯಿ, ಸಕ್ಕರೆ ಪಂಚಾಮೃತದ ನೀರು ಸೇವಿಸುತ್ತಿದ್ದರಲ್ಲದೆ, ಅರಸರು ಮತ್ತು ರಾಣಿಯರು ಹಣ್ಣಿನರಸಗಳನ್ನು ಸೇವಿಸುವುದಲ್ಲದೇ ಅಮೂಲ್ಯ ಗಿಡಮೂಲಿಕೆಗಳನ್ನು ತಂದು ತೊಳೆದು ಪುಡಿ ಮಾಡಿ, ರುಬ್ಬಿ, ಹಿಂಡಿ, ರಸತೆಗೆದು ನಂತರ ಶೋಧಿಸಿ ನೀರು, ಜೇನು, ಹಾಲು, ಮೊಸರು ಮುಂತಾದ ಪದಾರ್ಥಗಳೊಂದಿಗೆ ಬೆರೆಸಿ ಸೇವಿಸುತ್ತಿದ್ದರು. ಇದನ್ನು ಸೇವಿಸುವುದರಿಂದ ಧೈರ್ಯ ಸಾಹಸಗಳನ್ನು ಹೆಚ್ಚಿಸಿ ವಿಶ್ವಾಸ ಮೂಡಿಸುತ್ತದೆಂದು ನಂಬಲಾಗಿದೆ.[೧೩೯] ತೆಂಗಿನ ಕಾಯಿಯ ಎಳೆನೀರು, ಕಬ್ಬಿನ ಹಾಲು ಸಾಮಾನ್ಯವಾಗಿದ್ದವು.

### ೪.೪.೭ ದವಸ ಧಾನ್ಯಗಳ ಸೇವನೆ

ತೊಗರಿ, ಅವರೆ, ಕಡಲೆಕಾಳು, ಉದ್ದು, ಹೆಸರು, ಹುರುಳಿ, ಎಳ್ಳು, ಗುರೆಳ್ಳು, ಜೀರಿಗೆ, ಸಾಸುವೆ, ಮೆಂತ್ಯ, ಅರಿಶಿಣ, ಮೆಣಸು, ಶುಂಠಿ ಮುಂತಾದವುಗಳನ್ನು ಬಳಸುತ್ತಿದ್ದರು.

### ೪.೪.೮ ತರಕಾರಿಗಳ ಸೇವನೆ

ಬದನೆ, ಹೀರೆ, ನುಗ್ಗೆ, ಸೋರೆ, ಹಾಗಲ, ಪಡವಲ, ಬಿಲ್ವಪತ್ರಕಾಯಿ, ಟೊಮ್ಯಾಟೋ, ಈರುಳ್ಳಿ, ಸೌತೇಕಾಯಿ, ಹೂಕೋಸು, ಮೂಲಂಗಿ, ಗೆಜ್ಜರಿ, ಹಾಗಲಕಾಯಿ, ಬೆಂಡೆಕಾಯಿ, ಚಳ್ಳವರೆ ಕಾಯಿ, ಪುಂಡಿಪಲ್ಯ, ರಾಜಗಿರಿ, ಹರ್ವಿಪಲ್ಯ, ಮೆಂತೆ, ಸಬ್ಬಕ್ಕಿ, ಕೊತ್ತಂಬರಿ ಹೀಗೆ ಆಯಾ ಪ್ರದೇಶದಲ್ಲಿ ದೊರಕುವ ತರಕಾರಿಗಳನ್ನು ಬಳಸುವುದಲ್ಲದೆ, ಕಾಯಿಗಳಲ್ಲಿ ಎಳೆಗಾಯಿ, ಎಳೆನೀರು, ಬಾಳೆ, ಹಲಸು, ದ್ರಾಕ್ಷಿ ಮುಂತಾದವುಗಳನ್ನು ಸೇವಿಸುತ್ತಿದ್ದರು. ಉಪ್ಪು, ಖಾರ, ಹುಳಿ, ಸಾಂಬಾರ ಪದಾರ್ಥಗಳನ್ನು ಹಾಕಿ ತಯಾರಿಸಿದ ಪಲ್ಯ ಅಥವಾ ಹುಳಿ ಇದನ್ನು ಮೇಲೋಗರ ಎಂದು ಕರೆಯುತ್ತಿದ್ದರು.[೧೪೦] ಒಂದು ಜನಪದ ನುಡಿಯಲ್ಲಿ,

ಹಾಗಾಲಕಾಯಿಗೆ ಹಣವೀನ ಸಾಂಬಾರ
ಆಗಲಿಲ್ಲ ಅಡಿಗೆ ಎಣಲಿಲ್ಲ ಮೆದಕರಿಭೂಪ
ಆಗಲೆ ಹೋದ ಕೈಸೆರೆ[೧೪೧]

ಎಂಬುದು ಇವರು ಸೇವಿಸುತ್ತಿದ್ದ ಹಾಗಲಕಾಯಿಯನ್ನು ಹೇಳುತ್ತದೆ.

ಭೋಜನದ ರುಚಿಗೆ ಒಂದು ಪೂರ್ಣತೆಯನ್ನು ತರುವಲ್ಲಿ ನಂಜಿಗೆಗಳ ಪಾತ್ರವು ಬಹಳಷ್ಟಿತ್ತು. ನಂಜಿಗೆಗಳೆಂದರೆ ಉಪ್ಪಿನಕಾಯಿ, ಹುಣಸೆ ತೊಕ್ಕು, ಮಾವಿನ ಮಿಡಿಗಾಯಿ, ನೆಲ್ಲಿಕಾಯಿ, ದೊಡ್ಡಿಕಾಯಿ, ನಿಂಬೆಕಾಯಿ ಮುಂತಾದವುಗಳು. ನಂಜಿಗೆ ಉಪ್ಪಿನಕಾಯಿ ಜೊತೆಗೆ 'ಪಚ್ಚಡಿ' ಕೋಸಂಬರಿ, ಸವತೆ, ಈರುಳ್ಳಿ, ಟೋಮ್ಯಾಟೋ ಹಾಕಿ ಮಾಡಿದ ರಸ, ಹಪ್ಪಳ, ಸಂಡಿಗೆ ಮುಂತಾದವುಗಳಿರುತ್ತಿದ್ದವು.

### ೪.೪.೯ ಮಾಂಸಾಹಾರ

ಸಾಮಾನ್ಯವಾಗಿ ಅರಸರು ಸಸ್ಯಾಹಾರದ ಜೊತೆಗೆ ಮಾಂಸಾಹಾರಿಗಳಾಗಿದ್ದರು ಎಂಬುದಕ್ಕೆ ವಿದೇಶಿ ಯಾತ್ರಿಕ ನ್ಯೂನಿಚ್ ವಿಜಯನಗರದ ಅರಸರ ಆಹಾರ ಪದಾರ್ಥಗಳನ್ನು ಹೇಳುವಲ್ಲಿ ಮಾಂಸವನ್ನು ಪ್ರಸ್ತಾಪಿಸುತ್ತಾನೆ. ಬಿಸಾನಗರದ ಅರಸರು ದನದ ಮಾಂಸವನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳನ್ನು ತಿನ್ನುತ್ತಾರೆ. ಇವರು ಗೋವುಗಳನ್ನು ಪೂಜಿಸುವುದರಿಂದ ಅವುಗಳನ್ನು ಎಂದೂ ಕೊಲ್ಲುವುದಿಲ್ಲ. ಇವರು ಕುರಿ, ಹಂದಿ, ಜಿಂಕೆ, ಮೊಲ, ಪಾರಿವಾಳ, ಇನ್ನಿತರ ಪಕ್ಷಿಗಳ ಮಾಂಸವನ್ನು ಬಳಸುತ್ತಾರೆಂದು ಹೇಳುತ್ತಾರೆ.[೧೪೨] ಈ ಹೇಳಿಕೆಯನ್ನು ಗಮನಿಸಿದರೆ ಆ ಸಂದರ್ಭದಲ್ಲಿ ಆಳುವ ವರ್ಗದವರಿಗೆ ಮಾಂಸಾಹಾರವೂ ಅವಶ್ಯವಾಗಿತ್ತು. ಅದು ಯಥೇಚ್ಛವಾಗಿ ಲಭ್ಯವಿರುತ್ತಿತ್ತು ಎಂಬುದನ್ನು ಗಮನಿಸಬಹುದಾಗಿದೆ. ಮಾಂಸವನ್ನು ತರಕಾರಿಗಳ ಜೊತೆಗೆ ಸೇರಿಸಿ, ಇಲ್ಲವೇ ಪ್ರತ್ಯೇಕವಾಗಿ ಬೇಯಿಸಿ, ಅನ್ನದೊಂದಿಗೆ ತಿನ್ನುತ್ತಿದ್ದರು.

ಹೈದ್ರಾಬಾದ್ ಕರ್ನಾಟಕದ ಅರಸುಮನೆತನಗಳಾದ ಸುರಪುರ, ಆನೆಗೊಂದಿ, ಕನಕಗಿರಿ, ಗುಡಗುಂಟಿ, ಗುಂತಗೋಳ, ದೇವದುರ್ಗ ಅರಸರ ಮೇಲೆ ಮುಸ್ಲಿಂ ಸಂಪ್ರದಾಯದ ಅನೇಕ ರೀತಿ ನೀತಿಗಳು ಪರಿಣಾಮ ಬೀರಿರುವುದನ್ನು ನೋಡಬಹುದಾಗಿದೆ. ಮುಸ್ಲಿಂ ಸಂಪ್ರದಾಯದಂತೆ ಬೇಡ ದೊರೆಗಳು ಕೂಡಾ ಹಮರಿಕಾಬಿ(ಒಂದೇ ಭೋಜನದಲ್ಲಿ ಕೂತು ಊಟ ಮಾಡುವುದು) ಪದ್ಧತಿಯನ್ನು ಅನುಸರಿಸಿರುವರು.[೧೪೩] ಅಲ್ಲದೆ ಹಿರಿಯರ ಪುಣ್ಯತಿಥಿಗಳಂದು ಮಾಂಸಾಹಾರವನ್ನು ಮಾಡುವ ಪದ್ಧತಿ ಇತ್ತು. ಇವರು ಕೋಳಿ, ಕೋಳಿಮೊಟ್ಟೆ, ಲಾವಕ್ಕಿ, ಕೌಜುಗಳನ್ನು ಬಹುರುಚಿಯೆಂದು ತಿಳಿದಿದ್ದರು. ಮ್ಯಾಸನಾಯಕರಾದ ಚಿತ್ರದುರ್ಗ, ನಾಯಕನಹಟ್ಟಿ ಅರಸರು ಕೋಳಿಯನ್ನು ತಿನ್ನುತ್ತಿರಲಿಲ್ಲ. ಇತ್ತೀಚಿಗೆ ಆ ವಂಶಜರಲ್ಲಿ ಕೆಲವರು ತಿನ್ನುತ್ತಾರೆ.

ಚಿತ್ರದುರ್ಗದವರು ಶಾಕ್ತಆರಾಧನೆಗೆ ಆದ್ಯತೆ ನೀಡಿದ್ದರಿಂದ ಅವರ ಮನೆದೇವತೆ ಉತ್ಸವಾಂಬೆಗೆ ಪ್ರಾಣಿಬಲಿ ನೀಡುತ್ತಿದ್ದರು. ಆನೆಗೊಂದಿಯವರು ಮೇಗೋಟದ ದುರ್ಗಾದೇವಿಗೆ, ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ಅರಸರು ದೇವತೆಗೆ ಬಲಿ ನೀಡುವ ಪದ್ಧತಿ ಇಟ್ಟುಕೊಂಡಿದ್ದರಲ್ಲದೆ, ಅವರೂ ಸಹ ಮಾಂಸಾಹಾರವನ್ನು ಸೇವಿಸುತ್ತಿದ್ದರು. ಯುಗಾದಿ, ದಸರಾ ಮುಂತಾದ ಹಬ್ಬಗಳಲ್ಲಿ ಹಾಗೂ ಬಿಡುವಿನದಿನಗಳಲ್ಲಿ ಬೇಟೆಗೆ ತೆರಳಿ, ಬೇಟೆಯಾಡಿದ ಮೊಲ, ಹಂದಿ, ಚಿಗರೆ, ಉಡ, ಬುರಲಿ, ಕೌಜುಗ, ಕಾಡುಕೋಳಿ ಮುಂತಾದವುಗಳನ್ನು ತಿನ್ನುತ್ತಿದ್ದರು. ಕುರಿಯ ತಲೆಬುರುಡೆಯನ್ನು ಇವರು ವಿಶೇಷವಾಗಿ ತಿನ್ನುತ್ತಿದ್ದರು. ಇದು ಬಹಳ ರುಚಿ ಇರುತ್ತದೆಂದು ಭಾವಿಸಿದ್ದರು. ಕೋಳಿಯ ತೊಡೆಯನ್ನು, ಮೊಲದ ಮಾಂಸವನ್ನು ಎಣ್ಣೆಯಲ್ಲಿ ಹುರಿದು ತಿನ್ನುತ್ತಿದ್ದರು. ಕೆಲವು ಸಲ ಕೋಳಿಯನ್ನು ಕತ್ತರಿಸಿ, ಅದರೊಳಗೆ ಮಸಾಲೆ ತುಂಬಿ ಪುನಃ ಜೋಡಿಸಿ ಎಣ್ಣೆ, ಇಲ್ಲವೆ ತುಪ್ಪದಲ್ಲಿ ಬೇಯಿಸುತ್ತಿದ್ದರು. ಪಾರಿವಾಳ ತಿಂದರೆ ಪಾರ್ಶ್ವವಾಯು ಬರುವುದಿಲ್ಲ, ಅಳಿಲು ತಿಂದರೆ ಕೆಮ್ಮು ಬರುವುದಿಲ್ಲವೆಂಬ ನಂಬಿಕೆ ಇವರಲ್ಲಿತ್ತು.[೧೪೪]

ಆನೆಗೊಂದಿಯವರಿಗೆ ತುಂಗಭದ್ರ, ಸುರಪುರದವರಿಗೆ ಗುಡಗುಂಟಿ, ಗುಂತಗೋಳದವರಿಗೆ ಕೃಷ್ಣಾನದಿ ಸಮೀಪವಿರುವುದರಿಂದ ಅಲ್ಲಿ ಸಿಗುವ ಮೀನನ್ನು ಸೇವಿಸುತ್ತಿದ್ದರು. ಗುಂತಗೋಳದ ರಾಜಾ ಶ್ರೀನಿವಾಸನಾಯಕರು ವಾರಕ್ಕೆ ಒಂದು ಬಾರಿಯಾದರೂ ಮೀನನ್ನು ಸೇವಿಸುತ್ತಿದ್ದರು.[೧೪೫] ಹೀಗೆ ಈ ಮನೆತನಗಳ ಅರಸರು ಅತಿಯಾಗಿ ಮಾಂಸ ತಿನ್ನಲು ಕಾರಣ ಯುದ್ಧ ಮಾಡಲು ಶಕ್ತಿ ನೀಡುವುದು. ಇದರ ಸೇವನೆಯಿಂದ ದೇಹದ ಗಾಯಗಳು ಬೇಗನೆ ಮಾಯುವವು[೧೪೬] ಎಂಬ ನಂಬಿಕೆ ಇತ್ತು.

### ೪.೪.೧೦ ಹೈನು

ಹೈನವನ್ನು ಸೇವಿಸುತ್ತಿದ್ದ ಚಿತ್ರದುರ್ಗದ ಅರಸರ ಕುರಿತಾಗಿ ಜನಪದ ನುಡಿಯೊಂದು ಈ ರೀತಿ ಹೇಳುತ್ತದೆ.

> ಸಣ್ಣವಕ್ಕಿಬಾನ ಒಳ್ಳೆ ಸರಳೆಮ್ಮೆ ನೊರೆಹಾಲು
> ಉಣ್ಣೇಳೋ ಮೆದಕೇರಿ ಒಂದಗಲೂಟ,[೧೪೭]

ಮತ್ತೊಂದು ನುಡಿಯಲ್ಲಿ

> ದೇವರಕೋಣೆಗೆ ಕರುದಳೆ ಲಿಂಗಮ್ಮ
> ಹಾಲುಸಕ್ಕರೆ ಉಣಲಿಟ್ಟು । ಮೆದಕೇರಿಗೆ
> ಪಟ್ಟೆ ಮಂಚವ ಎರ್ರ್ಯಾದಾನೆ[೧೪೮]

ಇನ್ನೊಂದು ನುಡಿಯಲ್ಲಿ ತುಪ್ಪದ ಕುರಿತಾಗಿ,

ಅಪ್ಪ ಮೆದಕೇರಿ ತುಪ್ಪಬಾನ್ನುಣ್ಣುವಾಗ
ಉಪ್ಪುಚೆಲ್ಲ್ಯಾರು ತೆಲುಗಾರು । ತಿಮ್ಮೋಜಮ್ಮ
ತುಪ್ಪಾದರೂ ಸಾಕು ಕೊಡತೀಯ[೧೪೯]

ಮತ್ತೊಂದು ನುಡಿಯಲ್ಲಿ,

ಮಾಡಿದ ಕಜ್ಜಾಯ ಮಾಡಿದಂಗ್ಯೆದಾವೆ
ಸೋರೆಗಳ ತುಪ್ಪ ಸವದಿಲ್ಲ[೧೫೦]

ಸುರಪುರದ ಅರಸರು ಹಸುಗಳನ್ನು ಸಾಕಿದ್ದರು. ಅರಸ ಪಾಮನಾಯಕರು ಪ್ರತಿವರ್ಷ ಬ್ರಾಹ್ಮಣರಿಗೆ ಗೋವುಗಳನ್ನು ದಾನ ಮಾಡುತ್ತಿದ್ದನು. ಸಂಸ್ಥಾನದಲ್ಲಿ ಬರ ಬಿದ್ದಾಗ ಪ್ರಜೆಗಳ ಹಸುಗಳಿಗೆ ಮೇವಿನ ಸೌಕರ್ಯಕ್ಕಾಗಿ ರಂಗಂಪೇಟೆಯಲ್ಲಿ ಗೋಶಾಲೆಯೊಂದನ್ನು ತೆರೆದಿದ್ದರು.[೧೫೧] ಅಲ್ಲದೇ ಇವರ ಸೈನ್ಯದಲ್ಲಿದ್ದ ಬೇಡರಿಗೆ ಹಾಲಿನ ವ್ಯವಸ್ಥೆಯನ್ನು ಮಾಡಿದ್ದರು. ಹೀಗಾಗಿ ಹೈನಿನ ಬಳಕೆ ಇವರ ಕಾಲದಲ್ಲಿತ್ತು.

### ೪.೪.೧೧ ತಾಂಬೂಲ

ಭಾರತೀಯ ಜನಜೀವನದಲ್ಲಿ ವಿಶಿಷ್ಟ ಸ್ಥಾನ ಪಡೆದ ತಾಂಬೂಲ ಅನೇಕ ಅರಸುಮನೆತನಗಳ ಕಾಲದಲ್ಲಿಯೂ ಜನಪ್ರಿಯವಾಗಿದ್ದಿತು. ಅಡಿಕೆ ಸುಣ್ಣವನ್ನು ಸೇರಿಸಿ ಎಲೆ ಹಾಕುವುದರಿಂದ ಹಲ್ಲುಗಳು ಕೆಂಪಾಗಿರುವುದನ್ನು, ಕಾರ್ತಿಕದ ಮೊದಲಿನ ದೀವಳಿ(ದೀಪಾವಳಿ)ಯಂದು ವೀಳ್ಯೆದೆಲೆ ಮತ್ತು ಅಡಿಕೆಗಳನ್ನು ಪರಸ್ಪರ ಹಂಚುವುದನ್ನು ವಿದೇಶಿ ಪ್ರವಾಸಿ ಅಲ್ಬೆರೂನಿ ಹೇಳಿದ್ದಾನೆ.[೧೫೨] ಹೀಗಾಗಿ ಇವರು ದಿನನಿತ್ಯದ ಆಚಾರದಲ್ಲಿ, ಸಾಮಾಜಿಕ ಸಮಾರಂಭಗಳಲ್ಲಿ ಗೌರವಸ್ಥಾನವನ್ನು ಎಲೆಗೆ ನೀಡಿದ್ದರು. ಸುರಪುರದ ಅರಸ ಪಾಮನಾಯಕ ಸುಗಂಧಭರಿತ ವಿವಿಧ ವಸ್ತುಗಳಿಂದ ಕೂಡಿದ ತಾಂಬೂಲವನ್ನು ಸೇವಿಸುತ್ತಿದ್ದರು. ಗುಡಗುಂಟಿಯ ಜಡಿಸೋಮಪ್ಪನಾಯಕರು ತಾಂಬೂಲಕ್ಕಾಗಿ ಎಲೆಗಾರ ಮನೆತನವನ್ನು ನೇಮಿಸಿದ್ದರು. ಅರಸನಿಗೆ ಪ್ರತಿದಿನ ಅವರು ಎಲೆಯನ್ನು ತಂದುಕೊಡುತ್ತಿದ್ದರು. ಆ ಮನೆತನಕ್ಕೆ ೧೫ ಎಕರೆ ಹೊಲವನ್ನು ಇನಾಮಾಗಿ ನೀಡಿದ್ದಾರೆ.[೧೫೩] ಕನಕಗಿರಿಯ ಹಿರೇನಾಯಕ ಅರಸರು ಯಾಲಕ್ಕಿ, ಲವಂಗ, ಸೋಪುಗಳನ್ನು ಮಾತ್ರ ತಿನ್ನುತ್ತಿದ್ದರು ಅಥವಾ ಬಾಯಲ್ಲಿಟ್ಟು ಜಗಿಯುತ್ತಿದ್ದರು. ಇದು ಜೀರ್ಣಕ್ರಿಯೆಗೆ ಪಚನಕ್ರಿಯೆಗೆ ಸಹಾಯಕಾರಿ ಎಂಬ ನಂಬಿಕೆ ಅವರಲ್ಲಿತ್ತು.[೧೫೪]

### ೪.೪.೧೨ ಮದ್ಯಪಾನ

ಇತಿಹಾಸದಲ್ಲಿ ಅನೇಕ ಅರಸರು ಮದ್ಯಪಾನದ ವ್ಯಸನಕ್ಕೆ ಅಂಟಿಕೊಂಡ ಉದಾಹರಣೆಗಳಿವೆ. ಅದರಂತೆ ನಾಯಕ ಅರಸುಮನೆತನದವರಲ್ಲಿಯೂ ಕೆಲವರು ಕುಡಿತಕ್ಕೆ ಬಲಿಯಾಗಿದ್ದರು. ಸುರಪುರದ ಪಿಡ್ಡನಾಯಕನು ಮಿತಿಮೀರಿ ಕುಡಿತದ ದುರ್ವ್ಯಸನದಿಂದ ರಾಜ್ಯದ ಆಡಳಿತ ಕುಸಿಯಿತಲ್ಲದೆ,

ಪಾರ್ಶ್ವವಾಯುಪೀಡಿತನಾಗಿ ಮೃತಪಟ್ಟನು.[೧೫೫] ಕೊನೆಯ ಅರಸ ನಾಲ್ವಡಿ ವೆಂಕಟಪ್ಪ ನಾಯಕ ನಿಯಂತ್ರಣ ತಪ್ಪುವಷ್ಟು ಪಾನಮತ್ತನಾಗಿರುತ್ತಿದ್ದನು.[೧೫೬] ದೇವದುರ್ಗದ ಅರಸ ವಾಸುದೇವ ನಾಯಕನು ಸೂರ್ಯೋದಯಕ್ಕೆ ಮೊದಲು ಈಚಲ ಗಿಡದಿಂದ ತೆಗೆದ ಹೆಂಡವನ್ನು ನಸುಕಿನಲ್ಲಿಯೇ ಕುಡಿಯುತ್ತಿದ್ದನು.[೧೫೭] ಕನಕಗಿರಿಯ ಅರಸ ಹಿರೇನಾಯಕ ಸೆರೆಕುಡಿದು ಮೈಮರೆತು ಮಲಗಿರುವಾಗ ಸುರಪುರದ ಅರಸ ಪಾಮನಾಯಕರ ಕೊಟಗಾರರು, ಹಿರೇನಾಯಕನನ್ನು ಬಂಧಿಸುತ್ತಾರೆ.[೧೫೮] ಇಂಥ ಕೆಲವು ಉದಾಹರಣೆಗಳು ಇವರು ಮದ್ಯಪಾನವನ್ನು ಸೇವಿಸುತ್ತಿದ್ದುದರ ಕುರಿತಾಗಿ ಮಾಹಿತಿಯನ್ನು ನೀಡುತ್ತವೆ.

### ೪.೪.೧೩ ನೈವೇದ್ಯ

ದೇವರಿಗೆ ಪೂಜೆಮಾಡಿದ ಮೇಲೆ ನೈವೇದ್ಯ ಮಾಡುವುದು ಹಿಂದಿನಿಂದಲೂ ನಡೆದುಬಂದ ಪದ್ಧತಿಯಾಗಿದೆ. ಇದನ್ನು ಈ ಮನೆತನದವರು ಅನುಸರಿಸಿಕೊಂಡು ಬಂದಿದ್ದಾರೆ. ಇವರು ತಮ್ಮ ಆರಾಧ್ಯ ದೇವರುಗಳಿಗೆ ನಿತ್ಯಪೂಜೆಯ ಸಂದರ್ಭದಲ್ಲಿ ಹಾಲು, ಸಕ್ಕರೆಯನ್ನು ನೈವೇದ್ಯ ಮಾಡಿದರೆ, ಹಬ್ಬ ಹರಿದಿನಗಳಲ್ಲಿ ಸಿಹಿ ಪದಾರ್ಥಗಳನ್ನು ನೈವೇದ್ಯ ಮಾಡುತ್ತಿದ್ದರು. ಅವುಗಳಲ್ಲಿ ಚಿತ್ರದುರ್ಗದ ಕೆಲವು ದೇವಾಲಯಗಳಲ್ಲಿ ದೇವರಿಗೆ 'ದಧ್ಯನ್ನ'[೧೫೯] ಸಹಸ್ರನಾಮ ಪೊಂಗಲ[೧೬೦] ಎಂಬವುಗಳನ್ನು ನೈವೇದ್ಯ ಮಾಡಿದ ಉದಾಹರಣೆಗಳು ಸಿಗುತ್ತವೆ. ಕೆಲವು ದೇವರುಗಳಿಗೆ ಕುರಿ ಕೋಣ ಬಲಿ ಕೊಡುತ್ತಿದ್ದರು.[೧೬೧] ಮನೆಯಲ್ಲಿ ಪೂಜೆಗಳಾದರೆ ನಾಗರಪಂಚಮಿಯ ದಿವಸ ಉಂಡೆಗಳನ್ನು, ಗಣೇಶನಿಗೆ ಕಾಯಿಗಡುಬು, ಯುಗಾದಿಯ ದಿವಸ ಬೇವು, ಬೆಲ್ಲ, ಹೋಳಿಗೆಗಳನ್ನು ನೈವೇದ್ಯ ಮಾಡುತ್ತಿದ್ದರು.

ಸುರಪುರದ ಅರಸರು ಯುಗಾದಿಯ ಸಂದರ್ಭದಲ್ಲಿ ಶ್ರೀವೇಣುಗೋಪಾಲಸ್ವಾಮಿಗೆ ಹೋಳಿಗೆ, ಶ್ಯಾವಿಗೆಯೊಂದಿಗೆ ಬೇವು, ಬೆಲ್ಲವನ್ನು ನೈವೇದ್ಯ ಮಾಡುತ್ತಾರೆ.[೧೬೨] ಅರಮನೆಯಲ್ಲಿ ಸುಗ್ರಾಸ ಭೋಜನ ಮಾಡಿ, ಬೇವು ಬೆಲ್ಲವನ್ನು ತಪ್ಪದೆ ಸೇವಿಸುತ್ತಾರೆ. ಸುರಪುರದ ಎಲ್ಲಾ ಕೇರಿಗಳ ಜನರು ಸಾಯಂಕಾಲ ಚೆಂಡಿನಾಟವಾಡಲು ಸಮೀಪದ ಕೇರಿಗಳಿಗೆ ಹೋಗುತ್ತಾರೆ. ಅಲ್ಲದೆ ಎಲ್ಲರೂ ದರ್ಬಾರಿಗೆ ಹೋಗಿ 'ಬೇವನ್ನು' ಕುಡಿದು ರಾಜದರ್ಶನ ಪಡೆದು ಚೆಂಡಾಟವಾಡಿ ಮನೆಗಳಿಗೆ ಹಿಂದಿರುಗುತ್ತಾರೆ.[೧೬೩] ಮಕರ ಸಂಕ್ರಾಂತಿಯ ದಿನ ದೇವರಿಗೆ ಎಳ್ಳು ಬೆಲ್ಲ ತಲುಪಿಸಿದ ನಂತರ ಅರಸರ ಸಮ್ಮುಖದಲ್ಲಿ ಎಲ್ಲರೂ ಪರಸ್ಪರ ಎಳ್ಳುಬೆಲ್ಲಗಳನ್ನು ಹಂಚಿಕೊಂಡು ಅನ್ಯೋನ್ಯವಾಗಿ ವರ್ಷವೆಲ್ಲ ಪ್ರೀತಿಯಿಂದ ಬಾಳೋಣವೆಂದು ಸದ್ಭಾವನೆಗಳನ್ನು ಹಂಚಿಕೊಳ್ಳುತ್ತಾರೆ.[೧೬೪] ಕನಕಗಿರಿಯ ಅರಸರು ಕನಕಾಚಲನರಸಿಂಹನಿಗೆ ಜಾತ್ರೆಯ ಹಿಂದಿನ ದಿನ ದಾಸಪ್ಪನವರಿಂದ ಪೂಜೆ ನಡೆಯುವಾಗ ಕರಿಗಡುಬನ್ನು, ಗುಡಗುಂಟಿ ಅರಸರು ಅಮರೇಶ್ವರ ದೇವರಿಗೆ ಸಕ್ಕರೆ ಮತ್ತು ಹಾಲನ್ನು, ದೇವದುರ್ಗದವರು ಮಾನಸಗಲ್ ರಂಗನಾಥನಿಗೆ ಅನ್ನ ಮತ್ತು ಸಿಹಿ ಕರಿಗಡುಬನ್ನು ನೈವೇದ್ಯವಾಗಿ ನೀಡುತ್ತಿದ್ದರು. ಈಗಲೂ ಈ ಸಂಪ್ರದಾಯವಿದೆ.[೧೬೫]

ಈ ರೀತಿ ದೇವಸ್ಥಾನಗಳಲ್ಲಿ ದೇವರಿಗೆ ಪಂಚಾಮೃತ ಹಾಗೂ ವಿವಿಧ ನಮೂನೆಯ ಅಡಿಗೆಗಳನ್ನು ನೈವೇದ್ಯ ಮಾಡುವ ಪದ್ಧತಿಯು ಹಿಂದಿನ ಕಾಲದಿಂದಲೂ ರೂಢಿಯಲ್ಲಿದೆ. ಜೊತೆಗೆ ಮಧ್ಯಾಹ್ನದ ಮತ್ತು ಸಾಯಂಕಾಲದ ಪೂಜೆಗಳ ಸಮಯದಲ್ಲಿ ಮತ್ತು ವಿವಿಧ ಉತ್ಸವಗಳಂದು ಯಾವ ಯಾವ ಅಡಿಗೆಯನ್ನು ನೈವೇದ್ಯ ಮಾಡಬೇಕು ಮತ್ತು ಎಷ್ಟೆಷ್ಟು ಪ್ರಮಾಣದಲ್ಲಿ ನೈವೇದ್ಯ ಮಾಡಬೇಕೆಂಬುದರ ಕುರಿತಾಗಿಯೂ ಕಟ್ಟಳೆಗಳಿದ್ದವು.

### ೪.೪.೧೩ ಅಕ್ಕಿಪಡಿ ಪದ್ಧತಿ

ನಾಯಕ ಜನಾಂಗದ ಅರಸರು ಸಾಮಾನ್ಯ ಬೇಡರೊಂದಿಗೆ ಸಹಪಂಕ್ತಿಯಲ್ಲಿ ಭೋಜನ ಮಾಡುತ್ತಿರಲಿಲ್ಲ. ಅರಸರು ಅರಸರೊಂದಿಗೆ, ಸಾಮಾನ್ಯ ಬೇಡರು ಬೇಡರೊಂದಿಗೆ ಸಹಪಂಕ್ತಿ ಭೋಜನ ಮಾಡುತ್ತಿದ್ದರು. ಈ ವರ್ಗಭೇದವು ಕೆಲವು ಕಡೆ ಇಂದಿಗೂ ಹಾಗೆಯೇ ಉಳಿದುಕೊಂಡು ಬಂದಿದೆ. ಹೀಗಾಗಿ, ಸುರಪುರ, ಆನೆಗೊಂದಿ, ಕನಕಗಿರಿ, ಗುಡಗುಂಟಿ, ಗುಂತಗೋಳ, ದೇವದುರ್ಗದ ಅರಸರಿಗೆ ಸಾಮಾನ್ಯ ಬೇಡರು ತಮ್ಮ ಮನೆಯಲ್ಲಿ ಏನಾದರೂ ಹಬ್ಬ ಹರಿದಿನ, ಸಮಾರಂಭಗಳಾದರೆ ಅವರನ್ನು ಊಟಕ್ಕೆ ಕರೆಯದೆ, ಬೇಳೆ, ಬೆಲ್ಲ, ಅಕ್ಕಿ, ಕೊಬ್ಬರಿ, ಬಟ್ಟೆ ಬರೆಗಳನ್ನು ದೊರೆಗಳಿಗೆ ಕೊಡುವ ರೂಢಿ ಇತ್ತು. ಇದನ್ನು ಅಕ್ಕಿ ಪಡಿಕೊಡುವ ಪದ್ಧತಿ ಎಂದು ಕರೆಯುತ್ತಾರೆ.[೧೬೬] ಈಗ ಈ ಪದ್ಧತಿ ಜಾರಿಯಲ್ಲಿಲ್ಲ. ಆ ಮನೆತನದವರು ಎಲ್ಲಾ ಜನಾಂಗದವರೊಂದಿಗೂ ಸಹಭೋಜನ ಮಾಡುತ್ತಾರೆ.

### ೪.೪.೧೪ ಆಹಾರ ಸೇವನೆಯ ನಿಯಮ, ನಿರ್ಬಂಧಗಳು.

ಇವರ ಆಹಾರ ಸೇವನೆಯಲ್ಲಿಯ ಶಿಸ್ತು, ಅಚ್ಚುಕಟ್ಟುತನಗಳು ಇಂದಿಗೂ ಮುಂದುವರೆದಿದ್ದು, ಹಿಂದಿನಿಂದಲೂ ಅನೇಕ ವ್ರತ ನಿಯಮಗಳನ್ನು ಪಾಲಿಸುತ್ತಾ ಬಂದಿರುವುದನ್ನೇ ಇಂದು ಮುಂದುವರೆಸಿದ್ದಾರೆ. ಚಿತ್ರದುರ್ಗದ ಅರಸರು ತಮ್ಮ ಅಡುಗೆಯನ್ನು ಬ್ರಾಹ್ಮಣರಿಂದಲೇ ಮಾಡಿಸುತ್ತಿದ್ದರು. ಅವರಿಂದಲೇ ರುದ್ರಾಭಿಷೇಕವನ್ನು ಮತ್ತು ಸಹಸ್ರನಾಮಾರ್ಚನೆಯನ್ನು ಮಾಡಿಸಿ, ಧೂಪ, ದೀಪ, ನೈವೇದ್ಯಾದಿಗಳ ಅನಂತರ ಊಟ ಮಾಡುತ್ತಿದ್ದರು. ಪ್ರತಿ ಸೋಮವಾರವು ನಕ್ತ-ಭೋಜನ, ಪಕ್ಷ-ಪ್ರದೋಷ, ಶ್ರಾವಣಮಾಸ ಒಂದು ತಿಂಗಳು, ಕಾರ್ತೀಕ ಮಾಸ ಒಂದು ತಿಂಗಳು, ಶನಿ ಪ್ರದೋಷ, ನವರಾತ್ರಿ ಒಂಭತ್ತು ದಿವಸ, ಉಚ್ಚಂಗಮ್ಮನ ರಥೋತ್ಸವದಲ್ಲಿ ಕಂಕಣ ಕಟ್ಟಿದ ದಿವಸ ಮೊದಲು ಮಾಡಿಕೊಂಡು ಮಹೋತ್ಸವವಾಗುವವರೆವಿಗೂ, ಭಾರತದ ಹುಣ್ಣಿಮೆಯಲ್ಲಿ ಒಂಬತ್ತು ದಿವಸ, ನವರಾತ್ರಿ ಸಹವಕ್ತ ಭೋಜನ, ಶಿವರಾತ್ರಿ ಉಪವಾಸ ಈ ಪ್ರಕಾರವಾಗಿ ನಡೆಸುತ್ತಿದ್ದರು.[೧೬೭]

ಚಿತ್ರದುರ್ಗದ ಅರಸ ಹಿರೇಮದಕರಿನಾಯಕನು ಪೂಜಾಕಾಲದಲ್ಲಿ ಬ್ರಾಹ್ಮಣರ ಸಂಗಡ ತಾನೂ ರುದ್ರಾಭಿಷೇಕವನ್ನು ಮಾಡಿ ಸಹಸ್ರನಾಮಗಳಲ್ಲಿ ಪುಷ್ಪಗಳನ್ನು ಸಮರ್ಪಿಸಿ, ಧೂಪನೈವೇದ್ಯಗಳನ್ನು

ಸಮರ್ಪಣೆ ಮಾಡಿ ಅನಂತರ ಭೋಜನ ಸ್ವೀಕರಿಸುತ್ತಿದ್ದನು.[೧೬೮] ಹಾಗೆಯೇ ಪ್ರತಿಸೋಮವಾರ ಹಗಲು ಉಪವಾಸ ಮಾಡಿ ಪ್ರದೋಷಕಾಲದಲ್ಲಿ ಚಂದ್ರಮೌಳೇಶ್ವರ ಪೂಜೆಯನ್ನು ಮಾಡುತ್ತಿದ್ದನು.[೧೬೯] ಆನೆಗೊಂದಿಯ ಅರಸರು ಶ್ರೀರಂಗನಾಥನ ಜಾತ್ರೆಯಲ್ಲಿ ಹೋಳಿಹುಣ್ಣಿಮೆಯಾದ ೫ನೇ ದಿನಕ್ಕೆ ನಡೆಯುವ ಹಂಪಿಯ ವಿರೂಪಾಕ್ಷೇಶ್ವರಜಾತ್ರೆಯ ಸಂದರ್ಭದಲ್ಲಿ ಹಾಗೂ ಕೃಷ್ಣಪಕ್ಷದ ದಿನ, ವಿಜಯದಶಮಿಯ ಪಾಡ್ಯದ ದಿನಗಳಂದು ಉಪವಾಸ ಆಚರಿಸುತ್ತಿದ್ದರು. ಪ್ರತಿದಿನ ಬೆಳಗ್ಗೆ ಗುಡ್ಡದ ತಿಮ್ಮಪ್ಪನಿಗೆ ಪೂಜೆಯಾಗುವವರೆಗೂ ಏನನ್ನೂ ಸೇವಿಸುತ್ತಿರಲಿಲ್ಲ.

ಸುರಪುರದ ಅರಸರು ಶ್ರಾವಣಮಾಸದ ಬಹುಳ ಕೃಷ್ಣಪಕ್ಷದಲ್ಲಿ ನಡೆಯುವ ಕೃಷ್ಣಾಷ್ಟಮಿಯ ದಿನ, ಆಶ್ವಯುಜ ಶುದ್ಧಪ್ರತಿಪದೆಯಿಂದ ವಿಜಯದಶಮಿಯವರೆಗೆ, ಯುಗಾದಿಯ ಪಾಡ್ಯ, ಸಂಕ್ರಾಂತಿಯ ದಿನಗಳಂದು, ಕನಕಗಿರಿಯ ಅರಸರು ಪ್ರತಿವರ್ಷ ಫಾಲ್ಗುಣ ಮಾಸ ಶುದ್ಧದಲ್ಲಿ ನಡೆಯುವ ಶ್ರೀ ಕನಕಾಚಲ ಲಕ್ಷ್ಮೀನರಸಿಂಹಸ್ವಾಮಿಯ ಜಾತ್ರೆಯಲ್ಲಿ, ಗುಡಗುಂಟಿ ಅರಸರು ಪ್ರತಿವರುಷ ಪಾಲ್ಗುಣ ಶುದ್ಧ ತ್ರಯೋದಶಿಯಂದು ನಡೆಯುವ ಶ್ರೀಗುರುಅಮರೇಶ್ವರನಜಾತ್ರೆಯ ರಥೋತ್ಸವ ಸಂದರ್ಭದಲ್ಲಿ ಹಾಗೂ ಯುಗಾದಿ, ಶ್ರಾವಣ, ಮಾಸದಲ್ಲಿ ಒಂದು ತಿಂಗಳಿನವರೆಗೆ, ಗುಂತಗೋಳದವರು ಗುಡಗುಂಟಿಯವರ ನಿಯಮಗಳನ್ನೇ ಅನುಸರಿಸುವುದರ ಜೊತೆಗೆ ಪ್ರತಿವರ್ಷ ದವನದಹುಣ್ಣಿಮೆಯಲ್ಲಿ ಜರುಗುವ ಗೋನವಾಟ್ಲದ ಶ್ರೀವೇಣುಗೋಪಾಲ ಜಾತ್ರೆಯ ದಿನ[೧೭೦] ದಸರಾ ಹಬ್ಬದಲ್ಲಿ ದೇವಿಪುರಾಣ ಪಾರಾಯಣ ಸಂದರ್ಭದಲ್ಲಿ ಹಾಗೂ ಇಲ್ಲಿಯ ರಾಣಿಯರು ಮಂಗಳವಾರ, ಶುಕ್ರವಾರಗಳಲ್ಲಿ, ದೇವದುರ್ಗದವರು ಮಾನಸಗಲ್ ಶ್ರೀರಂಗನಾಥನಜಾತ್ರೆಯ ಸಂದರ್ಭದಲ್ಲಿ, ವಿಶೇಷವೆಂದರೆ ಮೊಹರಂನ ಕೊನೆಯ ದಿನ, ಗುಡೇಕೋಟೆ ಅರಸರು ಜಟ್ಟಿಂಗರಾಮೇಶ್ವರಜಾತ್ರೆಯ ದಿನ, ಉಜ್ಜಯಿನಿ ಹಾಗೂ ಕೊಟ್ಟೂರು ಗುರುಬಸವೇಶ್ವರ ರಥೋತ್ಸವದ ದಿನದಂದು, ಜರಿಮಲೆಯವರು ಪ್ರತಿವರ್ಷ ವೈಶಾಖ ಶುದ್ಧ ೫ರಂದು ದಾರುಕ ಜಯಂತಿಯಂದು ಉಜ್ಜಿಯಿನಿ ಪೀಠದ ಜಾತ್ರೆಯ ಸಂದರ್ಭ ಮತ್ತು ವೈಶಾಖ ೭ರಂದು, ಉಜ್ಜಯಿನಿ ಶಿಖರಕ್ಕೆ ಎಣ್ಣೆ ಎರೆಯುವ ದಿನದಂದು, ನಾಯಕನಹಟ್ಟಿ ದೊರೆಗಳು, ಹೋಳಿ ಹುಣ್ಣಿಮೆಯಲ್ಲಿ ನಡೆಯುವ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಯ ಜಾತ್ರೆಯಂದು, ಅಲ್ಲದೇ ಈ ಮನೆತನದವರೆಲ್ಲಾ ಪ್ರತಿ ಶನಿವಾರ, ಸೋಮವಾರಗಳಲ್ಲಿ ಉಪವಾಸವ್ರತವನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಈ ದಿನಗಳಲ್ಲಿ ಮಾಂಸಾಹಾರವನ್ನೂ ಸೇವಿಸುವುದಿಲ್ಲ. ಉಪವಾಸವಿದ್ದಾಗ ಹಣ್ಣು ಹಂಪಲುಗಳನ್ನು ಮತ್ತು ಆಕಳದ ಹಾಲನ್ನು ಮಾತ್ರ ಸೇವಿಸುತ್ತಾರೆ. ಸುರಪುರದ ರಾಣಿಯರ ಉಪವಾಸ ಪಾರಣೆಗಳ ಸಲುವಾಗಿ ೧೦೮ ರೂಪಾಯಿಗಳನ್ನು ರಾಣಿವಾಸದ ಖರ್ಚಿನಲ್ಲಿ ತೆಗೆದಿಡುತ್ತಿದ್ದರು.[೧೭೧]

ಇಂದಿಗೂ ಈ ಮನೆತನಗಳು ವಿಶಿಷ್ಟವಾದ ಆಹಾರ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿವೆ. ಕೆಲ ಮನೆತನಗಳು ಆರ್ಥಿಕವಾಗಿ ದುರ್ಬಲರಾದುದರಿಂದ, ಹಿಂದಿನ ಆಹಾರ ಪದ್ಧತಿಯನ್ನು ಕೈಬಿಟ್ಟು

ಇಂದು ಜನಸಾಮಾನ್ಯರ ಆಹಾರ ಪದ್ಧತಿಯನ್ನೇ ರೂಢಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಒಂದು ಕಾಲಕ್ಕೆ ಭೋಜನಶಾಲೆಯಲ್ಲಿ ಬ್ರಾಹ್ಮಣ ಅಡುಗೆಭಟ್ಟರಿಂದ ತಯಾರಿಸಲ್ಪಡುತ್ತಿದ್ದ ಆಹಾರವನ್ನು ಸೇವಿಸುತ್ತಿದ್ದ ಈ ಮನೆತನದವರು ಇಂದು ತಾವೇ ತಮ್ಮ ಆಹಾರವನ್ನು ತಯಾರಿಸಿಕೊಳ್ಳುತ್ತಿರುವರು. ಆದರೆ ಹಿಂದಿನಿಂದ ಬಂದ ವ್ರತನಿಯಮಗಳನ್ನು ಇಂದಿಗೂ ಪಾಲಿಸುತ್ತಿದ್ದಾರೆ. ಕನಕಗಿರಿಯ ರಾಜವಂಶಸ್ಥರು ಹಬ್ಬ-ಹರಿದಿನಗಳಲ್ಲಿ ಜಾತ್ರೆ-ಉತ್ಸವಗಳಲ್ಲಿ ಅಡುಗೆ ತಯಾರಿಸಿಕೊಳ್ಳುವಾಗ ಕಸಬರಿಗೆ ಹಿಡಿಯುವುದಿಲ್ಲ. ಚಪ್ಪಲಿ ಹಾಕುವುದಿಲ್ಲ. ಮಣ್ಣಿನ ಗಡುಗೆಯಲ್ಲಿಯೇ ಆಹಾರವನ್ನು ತಯಾರಿಸುತ್ತಿರುವುದು ವಿಶೇಷವಾಗಿದೆ. ಇಂಥ ಅನೇಕ ನಿಯಮಗಳನ್ನು ಪಾಲಿಸುತ್ತಾ ಬಂದಿರುವ ಇವರದು ಒಂದು ವಿಶಿಷ್ಟ ಪರಂಪರೆಯೇ ಸರಿ.

## ೪.೫ ರಾಜವೈಭವ

ಕರ್ನಾಟಕದ ನಾಯಕ ಅರಸುಮನೆತನದವರು ವಿಜಯನಗರದ ಅರಸರ ಪೋಷಣೆಯಲ್ಲಿ ಬೆಳೆದು, ವಿಜಯನಗರದ ತರುವಾಯ ಸ್ವತಂತ್ರ ಶಕ್ತಿಯಾಗಿ, ಪ್ರಭುತ್ವವನ್ನು ಸಾಧಿಸಿದರು. ವಿಜಯನಗರದ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದರಲ್ಲದೇ ವಿಜಯನಗರದ ವೈಭವವನ್ನು ತಮ್ಮ ಅಧಿಕಾರವಧಿಯಲ್ಲಿ ಆರಂಭಿಸಿದರು. ವೈಭವದ ಜೀವನವನ್ನು ಅಪೇಕ್ಷಿಸುವುದರೊಂದಿಗೆ ಅನೇಕ ಪ್ರಜಾಹಿತ ಕೆಲಸಗಳನ್ನು ಮಾಡಿದರು. ಕೋಟೆ, ಅರಮನೆ, ದೇವಾಲಯ, ಕೆರೆ, ಬಾವಿಗಳನ್ನು ನಿರ್ಮಿಸಿ ಜನಸಾಮಾನ್ಯರ ಮನದಲ್ಲಿ ಉಳಿದವರು. ಅಲ್ಲದೇ ಅಸಾಮಾನ್ಯ ಕೆಚ್ಚು, ಹಠ, ದರ್ಪ, ನಿಷ್ಠೆ, ಸಾಹಸ, ಸ್ವಾಭಿಮಾನಗಳನ್ನು ರಕ್ತಗತವಾಗಿ ರೂಢಿಸಿಕೊಂಡು ಬಂದವರಾಗಿರುವುದರಿಂದ ಭಾರತೀಯ ಇತಿಹಾಸವನ್ನು ನಾಯಕ ಜನಾಂಗದಂಥ ಯೋಧಜನಾಂಗವನ್ನು ಹೊರತುಪಡಿಸಿ ಬರೆಯುವುದು ಸುಲಭವಲ್ಲವೆಂಬ[೭೨] ಅಭಿಪ್ರಾಯ ಪ್ರೊ.ಲಕ್ಷ್ಮಣ್ ತೆಲಗಾವಿ ಅವರದು.

ನಾಯಕ ಅರಸರು ಶೂರರೂ, ಪರಾಕ್ರಮಿಗಳೂ ಆಗಿದ್ದು, ಇವರು ರಣರಂಗದಲ್ಲಿ ಕಲಿಗಳಾಗಿ ಹೋರಾಡಿ ರಾಜಕೀಯ ಇತಿಹಾಸವನ್ನು ರೋಮಾಂಚನಕಾರಿಗೊಳಿಸಿದ್ದಾರೆ. ಅಲ್ಲದೆ ಇವರ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸ್ಥಿತಿಗತಿಗಳ ಇತಿಹಾಸವೂ ಕುತೂಹಲಕಾರಿಯಾಗಿದೆ. ಇವರು ಶಾಂತಿ ಸಮಯದಲ್ಲಿ ಅರಮನೆ, ಗುರುಮನೆಗಳ ಬಾಂಧವ್ಯವನ್ನು ಹೆಚ್ಚು ಸುಗಮಗೊಳಿಸಿದರಲ್ಲದೆ ವಿನಮ್ರಪೂರ್ವಕವಾಗಿ ವರ್ತಿಸುತ್ತಿದ್ದರು. ಧರ್ಮಕ್ಕಾಗಿ ತಮ್ಮ ಬಲ, ಐಶ್ವರ್ಯವನ್ನು ವಿನಿಯೋಗಿಸಿದರು.[೭೩] ಅಲ್ಲದೆ ರಾಜ್ಯದ ರಕ್ಷಣೆ ಈ ಅರಸರ ಪ್ರಮುಖ ಹೊಣೆಯಾಗಿತ್ತು. ಪ್ರಜಾಪರಿಪಾಲನೆ ಅವರ ಆದ್ಯ ಕರ್ತವ್ಯಗಳಲ್ಲಿ ಒಂದಾಗಿದ್ದರಿಂದ ಈ ಅರಸರು ಪ್ರಜೆಗಳಿಂದ ವಿಶೇಷವಾದ ಗೌರವವನ್ನು ಪಡೆಯುತ್ತಿದ್ದರು. ಅಂದು ಅರಸನ ಕುರಿತಾಗಿ ಜನರು ರಾಜಾಪ್ರತ್ಯಕ್ಷ ದೇವರು ಎಂಬ ಭಾವನೆ ಹೊಂದಿದ್ದರು. ಇವರ ಕುರಿತಾಗಿ ಜನಪದರು ಹಾಡು ಕಟ್ಟಿ ಹಾಡಿದರು. ಇವರ ವ್ಯಕ್ತಿತ್ವವನ್ನು ಕೊಂಡಾಡಿದರು.

ಅರಸನ ಸುತ್ತಲೂ ಆ ದಿನಗಳಲ್ಲಿ ಜನಜೀವನ ರೂಪುಗೊಂಡಿದ್ದರಿಂದ ಅರಸನ ಏಳು ಬೀಳುಗಳು ಜನಜೀವನದ ಮೇಲೆ ವಿಶೇಷ ಪರಿಣಾಮವನ್ನು ಬೀರುತ್ತಿದ್ದವು. ಈ ಅರಸರು ದುಷ್ಟರನ್ನು ಶಿಕ್ಷಿಸುವ, ಶಿಷ್ಟರನ್ನು ರಕ್ಷಿಸುವ ಮನೋಭಾವನೆಯುಳ್ಳವರಾಗಿದ್ದರು. ದಾನಧರ್ಮಗಳನ್ನು ಮಾಡುವುದು ಜನರ ಯೋಗಕ್ಷೇಮಗಳನ್ನು ಆಗಾಗ್ಗೆ ಪ್ರತ್ಯಕ್ಷವಾಗಿ ರಾಜ್ಯದಲ್ಲಿ ಸಂಚರಿಸಿ ವಿಚಾರಿಸುವುದು ಈ ಅರಸರ ಕರ್ತವ್ಯಗಳಲ್ಲಿ ಒಂದಾಗಿತ್ತು. ಅರಸರು ತಮ್ಮ ಪ್ರಜೆಗಳನ್ನು ಹಾಗೂ ಸಮಾಜ ವ್ಯವಸ್ಥೆಯನ್ನು ನೆರೆಯ ರಾಜ್ಯಗಳ, ನೆಲೆಯ ಅರಸರುಗಳ ದಾಳಿಗಳಿಂದ ರಕ್ಷಿಸಲು ಸೂಕ್ತವಾದ ಎಲ್ಲಾ ಕ್ರಮಗಳನ್ನು ಕೈಗೊಂಡಿದ್ದರು. ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದಲ್ಲದೆ, ಪ್ರಜೆಗಳಿಗಾದ ತೊಂದರೆಗಳನ್ನು ಪರಿಹರಿಸುತ್ತಿದ್ದರು. ತಮ್ಮ ರಾಜ್ಯದ ಎಲ್ಲೆಗಳನ್ನು ವಿಸ್ತರಿಸಲು ಪ್ರಯತ್ನಿಸುತ್ತಿದ್ದರು. ರಾಜಮನೆತನದ ಕೀರ್ತಿಯನ್ನು ಹೆಚ್ಚಿಸಿದರಲ್ಲದೆ, ತಮ್ಮ ಮನೆತನಗಳಿಗೆ ಗಟ್ಟಿ ನೆಲಗಟ್ಟನ್ನು ಹಾಕಿದರು. ಮನೆತನದ ಕೀರ್ತಿಯನ್ನು ಶಾಶ್ವತಗೊಳಿಸಲು ಪ್ರಯತ್ನಿಸಿದರು. ಪ್ರಜೆಗಳನ್ನು ಬಹಳ ಹತ್ತಿರದಿಂದ ಕಂಡ ಈ ನಾಯಕ ಅರಸರು ಬಹುಬೇಗ ಅವರ ಮನಸ್ಸನ್ನು ಗೆದ್ದರು. ಪ್ರಜೆಗಳು ಸಹಿತ ಇವರನ್ನು ಆದರದಿಂದ ಕಂಡರು. ಚಿತ್ರದುರ್ಗದ ಅರಸರ ಕುರಿತಾದ ಜನಪದ ನುಡಿಯೊಂದು,

ಏಳಪ್ಪ ಮೆದಕೇರಿ ಬಂದೆಷ್ಟೊತ್ತು ಮಲಗಿದ್ದೆ
ವಾಲೆ ಬಂದವೆ ನಿಮ್ಮ ಚದರೀಗೆ.[೧೭೪]

ಎಂಬ ನುಡಿ ಅರಸನ ಕುರಿತಾದ ಭಕ್ತಿ ಭಾವವನ್ನು ಸೂಚಿಸುತ್ತದೆ. ಇನ್ನೊಂದು ನುಡಿಯಲ್ಲಿ

ಹಟ್ಟಿಯಕಲ್ಲು ಕಾಣೋ ಪಟ್ಟಣದ ದೊರೆ ಕಾಣೋ
ಪುಟ್ಟ ಮುತ್ತು ಕಾಣೋ ಮೆದಕೇರಿ ನೀನಿರುವ
ಪಟ್ಟಣಕ್ಕಿನ್ನೇನು ಭಯವಿಲ್ಲ.[೧೭೫]

ಎಂಬುದು ಅರಸನ ಬಗೆಗಿದ್ದ ಅಭಿಮಾನವನ್ನು ಸ್ತುತಿಸುತ್ತದೆ. ಆತನ ಕಾರ್ಯವನ್ನು ಹೇಳುವ ಇನ್ನೊಂದು ನುಡಿ ಇಂತಿದೆ

ಎಂಥ ಬಹದ್ದೂರ ನೋಡಣ್ಣ ಮೆದಕೇರಿಭೂಪ
ಎಂಥ ಸರದಾರ ನೋಡಣ್ಣ
ಅವನೆಂಥ ಮನಿಗಾರ ಚಿತ್ರಕಲ್ಲ ಮೆದಕೇರಿಭೂಪ
ಎಂಥ ಮನಿಗಾರ ನೋಡಣ್ಣ.
ಸೀರ್ಕವ ಗೆದ್ದ ಚಿನ್ನದುಂಗರ ಗೆದ್ದ
ಮಾತಿನಲಿ ಗೆದ್ದ ಮಲೆನಾಡ / ಜರ್ಮಾಲೆಯ
ರೀತೀಲಿ ಗೆದ್ದನು ದುರುಗಾವ.[೧೭೬]

ಈಟೀಟು ಹುಡುಗರು ಚೀಟಿ ಚಲ್ಲಣದೋರು
ಚಿಂತರಕಲ್ಲಾಗೆ ಹಗೆ ಯಾರು ಮೆದಕೇರಣ್ಣಗೆ
ನಿಂತೆ ಸಲಾಮು ಕೊಡುತಾರೆ.[೧೭೭]

ಎಂಬ ವಿವರಣೆ ನೀಡುತ್ತವೆ. ಸುರಪುರ ಅರಸನ ರಾಜವೈಭವವನ್ನು ನೀಡುವ ಸುರಪುರದ ಲಾವಣಿ

ಏನು ಶಿಸ್ತಿಲಿತ್ತು ಸುರಪುರ
ಇಲ್ಲೆಲ್ಲಿ ಇಲ್ಲ ದರಬಾರ[೧೭೮]

ಎಂಬ ನುಡಿ ಸುರಪುರ ಸಂಸ್ಥಾನದ ಸಂಪತ್ತನ್ನು ಕೀರ್ತಿಪತಾಕೆಯನ್ನು ವಿವರಿಸುತ್ತದೆ. ಅಲ್ಲದೆ ಅರಸ ತನ್ನ ಪ್ರಜೆಗಳಿಗೆ ಯಾವುದೇ ಕೊರತೆಯನ್ನು ತಂದವನಲ್ಲ ಎಂಬ ಅಂಶ ಇಲ್ಲಿ ವ್ಯಕ್ತವಾಗುತ್ತದೆ. ಹೀಗೆ ಈ ಅರಸರುಗಳ ವ್ಯಕ್ತಿತ್ವ ಇವರ ರಾಜ್ಯದ ವಾತಾವರಣದ ವೈಭವ ನಮ್ಮ ಕಣ್ಮುಂದೆ ನಿಲ್ಲುತ್ತದೆ.

ಕರ್ನಾಟಕದ ನಾಯಕ ಅರಸರ ಶೌರ್ಯ, ಪರಾಕ್ರಮ, ಸಾಹಸಪ್ರವೃತ್ತಿಗಳು ಇತರ ಅರಸುಮನೆತನಗಳಿಗಿಂತ ಭಿನ್ನವಾಗಿದ್ದವು. ಸ್ವತಃ ರಣಕಲಿಗಳಾದ ಇವರು ವಿವೇಕ, ಉತ್ಸಾಹಗಳಿಂದ ರಾಜ್ಯವನ್ನು ಆಳಿದವರು. ಅನೇಕ ಬಿರುದುಗಳನ್ನು ಧರಿಸಿದವರು. ಆ ಬಿರುದುಗಳೆಲ್ಲ ಇವರ ವೈಭವದ ಪ್ರತೀಕಗಳಾಗಿದ್ದವು. ಅಲ್ಲದೆ ಆಯಾ ಮನೆತನಗಳ ಸ್ಥಾನಮಾನ, ಪರಮಾಧಿಕಾರ, ಅವರ ಕೀರ್ತಿ ಪ್ರತಿಷ್ಠೆಗಳನ್ನು ಸಾರುವಲ್ಲಿ ಸಹಕಾರಿಯಾಗಿವೆ. ಅವರ ರಾಜವೈಭವಕ್ಕೆ ಹಿಡಿದ ಕನ್ನಡಿಯಾಗಿವೆ.

ಚಿತ್ರದುರ್ಗದ ಅರಸ ಮತ್ತಿತಿಮ್ಮಣ್ಣನಾಯಕ(ಕ್ರಿ.ಶ.೧೫೬೮-೧೫೮೯)ವಿಜಯನಗರದ ಸಾಳುವ ನರಸಿಂಹನೊಂದಿಗೆ ಕಲ್ಬುರ್ಗಿ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಟ್ಟಿದ್ದರಿಂದ 'ಹಗಲು ಕಗ್ಗೊಲೆಯ ಮಾನ್ಯ' ಎಂಬ ಬಿರುದನ್ನು ವಿಜಯನಗರ ಅರಸರಿಂದ ಪಡೆದನು.[೧೭೯] ಒಂದನೇ ಕಸ್ತೂರಿ ರಂಗಪ್ಪನಾಯಕ(ಕ್ರಿ.ಶ.೧೬೦೨-೧೬೫೨)ನು ಪೂವ್ವಲ ಹನುಮಪ್ಪನಾಯಕನನ್ನು ಸೆರೆ ಹಿಡಿದು 'ಗಾದ್ರಿಮಲೆ ಹೆಬ್ಬುಲಿ' ಎಂದು ಹೊಗಳಿಸಿಕೊಂಡರೆ, ಈತನ ಮಗ, ಮದಕರಿಯಣ್ಣನು 'ಗಂಡುಗೊಂಡಲಿ ಸರ್ಜಾ' ಎಂಬ ಬಿರುದನ್ನು ಧರಿಸಿದ್ದನು.[೧೮೦] ಹೀಗೆ ಈ ಬಿರುದುಗಳು ಅರಸರ ವ್ಯಕ್ತಿತ್ವವನ್ನು ಅರಹುತ್ತವೆ. ಭರಮಣ್ಣನಾಯಕನ ಸಮರವಿಜಯವು ಆತನ ಆದರ್ಶವನ್ನು ಈ ರೀತಿ ಹೇಳುತ್ತದೆ :

ದೇಶ ದೇಶಾಧಿಪರು| ಕರಸೆ ನಿನ್ನಯ ಕೀರ್ತಿ|
ವಸುಧೀಶರೊಳಗಧಿಕ ಬಲವಂತನೆಂದು|
ಶರಣಜನ ಬಂಧು| ಸಲೆ ಕೃಪಾಸಿಂಧು|
ಚಿನ್ಮೂಲಗಿರಿಯೀಶ ಚನ್ನವಿಲಾಸ|
ಮೊನ್ನೆಯಲಲಾಮ| ಅಮಿತಗುಣಧಾಮ|
ಕೊಡಗೈಯ ಕರ್ಣ| ಕರುಣ ಸಂಪೂರ್ಣ|
ನುಡಿರಾಮ ಬಾಣ| ನೂತನ ಶರೀರ ನೂತನಾವತಾರ|

ನೆರೆ ಪುಣ್ಯಕಾಂತ| ಪರಮಾಯುವಂತಾ|
ಕತ್ತುರಿಯ ಭೋಗಿ| ಪರಬಲ ಸಂಹಾರಿ|
ಭರಮೇಂದ್ರ ವಿಜಯೀಭವ ದಿಗ್ವಿಜಯೀಭವ[೧೮೧]

ಹಾಗೆಯೇ ಹಿರೇ ಮದಕರಿನಾಯಕ(ಕ್ರಿ.ಶ.೧೭೨೧-೧೭೪೯)ನು ಶೂರ ಹಾಗೂ ಉದಾರಿಯಾಗಿದ್ದನ್ನಲ್ಲದೆ ಈತನಿಗೆ ಧುರವಿಜಯ, ಆಹವವಿಕ್ರಮಾರ್ಕ, ದಾನರಾಧೇಯ, ದೀನಬಂಧು ಮೊದಲಾದವು ಈ ರಾಜನಿಗೆ ಒಪ್ಪುವ ಬಿರುದುಗಳಾಗಿದ್ದವು.[೧೮೨]

ಕೊನೆಯ ಅರಸ ವೀರಮದಕರಿನಾಯಕ(ಕ್ರಿ.ಶ.೧೭೫೪-೧೭೭೯)ನ ಕುರಿತಾಗಿ ಆತನ ಆಸ್ಥಾನ ಪಂಡಿತ ಚಂದ್ರಭೀಮಕವಿಯ ಮದಕರಿರಾಜೇಂದ್ರದಂಡಕವು ಈತನ ಸಾಹಸ ಗುಣಗಳನ್ನು ವರ್ಣಿಸಿದರೆ, ವಂಶಾವಳಿಯೊಂದು ಈ ಅರಸ ರತ್ನದೋಪಾದಿಯಲ್ಲಿಯೂ, ಸಜ್ಜನರಿಗೆ ಮನೋಲ್ಲಾಸಕರನಾಗಿಯೂ ಕುಜನರಿಗೆ ಕುಠಾರಪ್ರಾಯನಾಗಿಯೂ[೧೮೩] ಇದ್ದನೆಂದು ಹೇಳುತ್ತದೆ. ಹೀಗೆ ಈ ಎಲ್ಲಾ ಬಿರುದುಗಳು ಚಿತ್ರದುರ್ಗ ಅರಸರ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ.

ಸುರಪುರದ ಅರಸ ಗಡ್ಡಿಪಿಡ್ಡಿನಾಯಕ(ಕ್ರಿ.ಶ.೧೬೩೬-೧೬೬೬)ನು ಮದ್ದಾನೆಯೊಂದಿಗೆ ಕಾದದ್ದಕ್ಕೆ 'ಗಜಗಂಡಬಹರಿ', 'ಮದಗಜ ಭೇರುಂಡ', 'ಮದಗಜಮಲ್ಲ' 'ವಾಗಿನಗೇರಿ ಸಂಸ್ಥಾಪಕ' ಎಂಬ ಬಿರುದುಗಳಿದ್ದವು.[೧೮೪] ಹಸರಂಗಿ ಪಾಮನಾಯಕ(ಕ್ರಿ.ಶ.೧೬೬೬-೧೬೮೭)ನಿಗೆ ಇದ್ದ ಬಿರುದುಗಳು 'ಸರದೇಸಾಯಿ ಮಾಮಲೆ ನಸರತಾಬಾದ್' ಮತ್ತು 'ಸರಸರದೇಸಾಯಿ ಶಹರ ಅಹಸನಾಬಾದಿ' ಎಂದು ಆದಿಲ್‌ಷಾಹಿ ಸನದು ವಿವರ ನೀಡುತ್ತದೆ.

ಪೀತಾಂಬರ ಬಹರಿ ಪಿಡ್ಡನಾಯಕ(ಕ್ರಿ.ಶ.೧೬೮೭-೧೭೨೬)ನಿಗೆ ಮೊಗಲರು 'ಮನಸಬ ಹತ್ತಹಜಾರಿಜಾತ' 'ಪಂಚಹಜಾರಿ ಸವಾರ ಜಾಮಿನ ಮಾಫ್ ನಜರಾಣಿ ಮಾಫ್' ಎಂಬ ಬಿರುದಿತ್ತಿದ್ದಾರೆ. ಪಾಂಡಿಚೇರಿ ಕಾಳಗದಲ್ಲಿ ಜಯಗಳಿಸಿದ ಮೊಂಡುಗ್ಗೆ ವೆಂಕಟಪ್ಪನಾಯಕ(ಕ್ರಿ.ಶ.೧೭೪೭-೧೭೫೨)ನಿಗೆ 'ಬಲವಂತ ಬಹಿರಿರಾ ಬಜಂಗ ಮುತಹರುದೌಲಾ ಬಬರುಲ್ಮುಲುಕ' ಎಂಬ ಬಿರುದನ್ನು ಹೈದ್ರಾಬಾದ್ ನಿಜಾಮ ನೀಡಿ ಗೌರವಿಸುತ್ತಾನೆ. ನಂತರದಲ್ಲಿ ದೇವದುರ್ಗದ ಜಹಗೀರುಗಳನ್ನು ನಿಜಾಮನು ಇಮ್ಮಡಿ ವೆಂಕಟಪ್ಪನಾಯಕನಿಗೆ ನೀಡಿ, 'ಬಬರುಲಮುಲುಕು ಮುತಹರುದ್ದೌಲಾ' ಹಾಗೂ 'ರವಾಬಾ-ಜಂಗ-ಮಹರುದ್ದೌಲಾ' ಎಂಬ ಬಿರುದನ್ನು ನೀಡುತ್ತಾನೆ. ಡಾ.ರಂಗರಾಜ ವನದುರ್ಗ ಅವರು ವನದುರ್ಗದ ಕೋಟೆಯ ಮಹಾದ್ವಾರದ ಮೇಲಿನ ಶಾಸನವನ್ನು ಸಂಶೋಧಿಸಿದ್ದಾರೆ. ಅಲ್ಲಿರುವ ವೆಂಕಟಪ್ಪನಾಯಕನಿಗಿದ್ದ ಬಿರುದು 'ಬಹಿರಿ ಬಹಾದ್ದೂರ ಪಿಡ್ಡನಾಯಕ ಶ್ರೀವೇಣುಗೋಪಾಲವರ ಕ್ಷೇತ್ರಪಾಲಕ' ಎಂದಿದೆ.[೧೮೫]

ಇಮ್ಮಡಿ ವೆಂಕಟಪ್ಪನಾಯಕ ತುಂಬಿದ ಆಸ್ಥಾನಕ್ಕೆ ಬರುತ್ತಿರುವಾಗ ಚೋಬದಾರರು ಹೊಗಳುತ್ತಿದ್ದ ಬಿರುದಾವಳಿಗಳೆಂದರೆ ಮಹಾರಾಜಾಧಿರಾಜ, ರಾಜಕಂಠೀರವ, ರಾಜಾಧಿಶಿರೋಮುಕುಟ, ಗೋಸಲ

ಪಾದೋದಯ, ಶತತೂರ್ಣೋಮಜನೀತ, ಶಶಾಂಕೋಪತೇಜ, ಪುಂಜವಿರಾಜಿತ ದಿಲ್ಲಿಕಾಧೀಶ ದುಮದು ಮಧ್ವನಿ ಕೋಲಾಹಲ, ಹನುಮಧ್ವಜ, ಸುವರ್ಣಪಂಚಕಳಶ ಏಕದಂತ, ರಾಮಬಾಣ, ಸುವರ್ಣಪಂಜ, ರವಾಬ ಜಂಗ, ಮುತಹರುದೌಲಾ, ಬಬರುಲ್ಮುಲುಕ, ಸರಸರದೇಸಾಯಿ ಮಾಮಲಿನಸರತಾ ಬಾದ, ಮಾಮಲಿಹಸನಾಬಾದ ದಾರುಲ್ಮುಜಫರ ಬಿಜಾಪುರ, ಕಿಲ್ಲೆವಾಗಿನಗೇರಿ ಸಂಸ್ಥಾನ ಸುರಪುರ.[೧೮೬] ನಾಲ್ವಡಿ ವೆಂಕಟಪ್ಪನಾಯಕನು ಆಸ್ಥಾನಕ್ಕೆ ಬರುವಾಗ ರಾಜಾಧಿರಾಜ, ಮಹಾರಾಜ, ಪ್ರಜಾರಕ್ಷಕ, ಸುರಪುರದ ಹುಲಿ ಗಂಡುಗಲಿ ಎಂದು ಹೊಗಳುತ್ತಿದ್ದರು.[೧೮೭] ಗುಡಗುಂಟಿ ಅರಸ ಜಡಿಸೋಮನಾಯಕ ಬಿಜಾಪುರದ ಸುಲ್ತಾನರಲ್ಲಿ ತನ್ನ ಶೌರ್ಯ, ಸಾಹಸಗಳನ್ನು ತೋರಿಸಿದ್ದಕ್ಕಾಗಿ 'ಸರ್ಜಾಬಹದ್ದೂರ' ಎಂಬ ಬಿರುದನ್ನು ಪಡೆದಿದ್ದಾನೆ.[೧೮೮] ಈ ಬಿರುದಿನ ದ್ಯೋತಕವಾಗಿ 'ಸರ್ಜಾಪುರ' ಎಂಬ ಊರನ್ನು ನಿರ್ಮಿಸಿದ್ದಾರೆ.

ಗುಂತಗೋಳದ ಅರಸರಿಗೆ 'ಬಹರಿ ಬಹದ್ದೂರ' ಎಂಬ ಬಿರುದಿತ್ತು.[೧೮] ಕನಕಗಿರಿ ನಾಯಕರಿಗೆ 'ಶ್ರೀಮನ್ ಮಹಾನಾಯಕಾಚಾರ್ಯ', 'ನಾಯಕ ಶಿರೋಮಣಿ', 'ಗುಜ್ಜಲ ವಂಶೋದ್ಧಾರಕ' ಎಂಬ ಬಿರುದುಗಳಿದ್ದವು.[೧೮೯] ದೇವದುರ್ಗದ ಅರಸರು 'ಬಲವಂತ ಬಹರಿ ಸಾವಾಯಿ ಬಹದ್ದೂರ', 'ಜಂಪಲವಜೀರಕ' ಎಂಬ ಬಿರುದುಗಳನ್ನು ಧರಿಸಿದ್ದರು. ಗುಡೇಕೋಟೆ ಅರಸರು 'ಶ್ರೀಮನ್ಮಹಾನಾಯಕಾ ಚಾರ್ಯ', 'ಇಮ್ಮಡಿ ಗಡಿಯಂಕ ಭೀಮ' ಎಂಬ ಬಿರುದನ್ನು ಧರಿಸಿದ್ದರು. ಜರಿಮಲೆಯ ಅರಸ ಭೂಮಿರಾಜನು ಬಿಜಾಪುರದ ಬಾದಾಷಹನ ವಿಶೇಷ ಕುದುರೆಯನ್ನು ಪಳಗಿಸಿದ್ದಕ್ಕಾಗಿ 'ಜಮ್ಮೇದಾರ್ ಗುಡ್ಡಯ್ಯ ಜರಿಮಲ್ಲ' ಎಂಬ ಬಿರುದನ್ನು ಪಡೆದನು. ಬೊಮ್ಮಣ್ಣನಾಯಕನಿಗೆ 'ಮೊಳಕಾಲ ಬಾಸಿಗ' ನೆಂಬ ಬಿರುದಿತ್ತು.[೧೯೦] ಹರತಿನಾಯಕನ ಮೂಲಪುರುಷನಾದ ತಿಪ್ಪರಾಜನು ನಿಡುಗಲ್ಲಿನ ದುರ್ಗಾಧಿಪತಿ ಬೊಂಮನಾಯಕನನ್ನು ದ್ವಂದ್ವಯುದ್ಧದಲ್ಲಿ ಶಿರಚ್ಛೇದನ ಮಾಡಿದ್ದಕ್ಕಾಗಿ, ಹರಿಹರನು 'ಹೊಳಕಲ್ಲಬೊಂಮನ ಶಿರಚ್ಛೇದನ'[೧೯೧] ಎಂಬ ಬಿರುದನ್ನು ನೀಡಿ ಗೌರವಿಸಿದನು. ಇದೇ ತಿಪ್ಪರಾಜನು ಉಚ್ಚಂಗಿದುರ್ಗವನ್ನು ಗೆದ್ದುದಕ್ಕಾಗಿ ಬುಕ್ಕರಾಯನಿಂದ 'ಹೊಯ್ಸಳದಳ ವಿಭಾಡಂ' ಎಂಬ ಬಿರುದನ್ನು, ಮುಸ್ಲಿಂ ಸರದಾರ ಮಲ್ಲಿಕ್ ಬಹದ್ದೂರನನ್ನು ಕಠಾರಿಕಾಳಗದಲ್ಲಿ ಸೋಲಿಸಿ 'ಕಠಾರೀರಾಯಂ', 'ಭಾದ್ರಮಲುಕ ಸಪ್ತಾಂಗಹರಣಂ' ಎಂಬ ಬಿರುದನ್ನು ಪಡೆದನು. ಅಲ್ಲದೆ, ಬುಕ್ಕರಾಯ ಕೈಗೊಂಡಿದ್ದ ಬಹಮನಿಯರ ಮೇಲಿನ ಯುದ್ಧಗಳಲ್ಲಿ ಭಾಗವಹಿಸಿದ ತಿಪ್ಪರಾಜನು 'ಮೆಸನತಲೆಗುಂಡು ಗಂಡಂ' ಎಂಬ ಬಿರುದನ್ನು ಪಡೆದನು.[೧೯೨] ಅಲ್ಲದೆ ಈ ಮನೆತನದ ಕಾಮನಾಯಕನ ಹಿರಿಯ ಮಗ ಅಬ್ಬಯ್ಯನಾಯಕನನ್ನು ಪಾವಗಡದ ೫೪ನೇ ಶಾಸನವು 'ಶ್ರೀ ಮದ್ವೈಭವನಬ್ಬನಾಯಕ ಮಹಾಲೀರಾಸ್ಪುರದ್ವೀಕ್ಷಣೋದ್ದಾಮ ಜ್ಯೋತಿ ಮಹೇಶನ್'[೧೯೩] ಎಂದು ಹೊಗಳುತ್ತದೆ. ಇದು ಆತನ ವೈಭವದ ಪ್ರತೀಕವೆಂದು ಹೇಳಬಹುದು.

ಎರೆಬಾಪನಾಯಕನ ಮಗ ಚಿಕ್ಕತಿಪ್ಪರಾಜನು ಮೂಲತಿಪ್ಪರಾಜನ ಬಿರುದುಗಳನ್ನು ಧರಿಸಿದ್ದನು. ಅಲ್ಲದೆ ಈತನಿಗೆ 'ಸಂಮಟಿನಾರಾಯಣಂ' ಎಂಬ ಬಿರುದೂ ಇತ್ತು.[೧೯೪] ನಿಡುಗಲ್ಲನ್ನಾಳಿದ ಜಕ್ಕನಾಯಕನ

ಮಗ ತಿಮ್ಮಣ್ಣನಾಯಕನನ್ನು 'ಶ್ರೀಮನುಮಹಾನಾಯಕಾಚಾರ್ಯ', 'ಭಾಷೆಗೆತಪ್ಪದರಾಯರಗಂಡ', 'ಮರೆಹೊಕ್ಕರೆ ಕಾವ ನಿಡುಗಲ್ಲ ತಿಂಮಣನಾಯಕ'[೧೯೫] ಎಂದು ಪ್ರಶಂಸಿರುತ್ತದೆ. ಅಲ್ಲದೆ ಈ ನಾಯಕ ಅರಸರು ತಮ್ಮ ಜನಾಂಗ ಮತ್ತು ಬೆಡಗುಗಳಿಗನುಗುಣವಾಗಿ ಬಿರುದುಗಳನ್ನು ಹೊಂದಿರುತ್ತಿದ್ದರು, ಅವುಗಳೆಂದರೆ 'ನಾಯಕ ಶಿರೋಮಣಿ', 'ನಾಯಕ ಮಹಾಚಾರ್ಯ', 'ಶ್ರೀಮನ್‌ಮಹಾನಾಯಕಾಚಾರ್ಯ', 'ಗುಜ್ಜಲ ಭೂಪತಿ', 'ಗುಜ್ಜಲ ವಂಶೋದ್ಧಾರಕ', 'ರಾಜಾರಾಜರಗಂಡ' ಮುಂತಾದವುಗಳಾಗಿವೆ. ಹೀಗೆ ಈ ನಾಯಕ ಅರಸರು ಹೊಂದಿದ ಬಿರುದುಗಳ ಹಿಂದೆ ಅವರ ವ್ಯಕ್ತಿತ್ವ ಅಡಗಿದೆ. ಈ ಬಿರುದುಗಳು ಅವರ ಶೌರ್ಯ, ಸಾಹಸದ ಪ್ರತೀಕಗಳಾಗಿದ್ದಂತೆ ಅವರ ಸಾಧನೆಗಳನ್ನು ಹರಹುತ್ತವೆ.

ನಾಯಕ ಅರಸರಿಗೆ ತಮ್ಮ ರಾಜ್ಯದ ರಕ್ಷಣೆ ಎಷ್ಟು ಮುಖ್ಯವಾಗಿತ್ತೋ ರಾಜ್ಯದ ವಿಸ್ತಾರದ ಮಹಾದಾಸೆಯೂ ಅಷ್ಟೇ ಮುಖ್ಯವಾಗಿತ್ತು. ಹೀಗಾಗಿ ಇವರು ಅನೇಕ ಯುದ್ಧಗಳನ್ನು ಮಾಡಿದ್ದುಂಟು. ಹಾಗೂ ತಮ್ಮ ಮೇಲಿನ ಅರಸರಿಗೆ ಸೈನಿಕ ಸಹಾಯವನ್ನು ನೀಡಿದ್ದುಂಟು. ಅವರೇ ಇವರ ವಿರುದ್ಧ ದಾಳಿಗೈಯಲು ಪ್ರಾರಂಭಿಸಿದರೆ ಅವರೊಂದಿಗೆ ಯುದ್ಧಮಾಡಲು ಹೆದರದ ರಣಕಲಿಗಳೂ, ರಣಪಂಡಿತರೂ ಆಗಿದ್ದರು. ಅಲ್ಲದೇ ಇವರು ಸೋತು ಶರಣಾಗತರಾದವರನ್ನು ರಕ್ಷಿಸುವ ಗುಣವನ್ನು ಹೊಂದಿದ್ದರು.

ಚಿತ್ರದುರ್ಗದ ಅರಸುಮನೆತನ ಇಡೀ ಕರ್ನಾಟಕದಲ್ಲಿಯೇ ವಿಜಯನಗರೋತ್ತರ ಕಾಲದ ಪ್ರಮುಖ ನಾಯಕ ಅರಸುಮನೆತನವಾಗಿದೆ. ಸುಮಾರು ಎರಡುನೂರ ಹನ್ನೊಂದು ವರ್ಷಗಳ ಕಾಲ (ಕ್ರಿ.ಶ.೧೫೬೮ ರಿಂದ ೧೭೭೯) ಹನ್ನೊಂದು ಜನ ಅರಸರು ಆಳ್ವಿಕೆ ಮಾಡಿದ್ದಾರೆ. ಮೊದಲು ವಿಜಯನಗರದವರ ಅಧೀನರಾಗಿ, ಅವರಿಗೆ ಅನೇಕ ಸೀಮೆಗಳನ್ನು ವಶಪಡಿಸಿಕೊಳ್ಳುವಲ್ಲಿ ಸಹಕಾರಿಯಾಗಿ ನಿಂತವರು. ನಂತರದಲ್ಲಿ ಸ್ವತಂತ್ರವಾದ ಅಸ್ತಿತ್ವವನ್ನು ಸ್ಥಾಪಿಸಿಕೊಂಡು ಆ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಇತರ ನಾಯಕ ಅರಸುಮನೆತನಗಳಾದ ಆನೆಗೊಂದಿ, ಕನಕಗಿರಿ, ರಾಯದುರ್ಗ, ನಿಡುಗಲ್ಲು, ಶಿರಾ, ತರೀಕೆರೆ, ಹರಪನಹಳ್ಳಿ, ಗುಡೇಕೋಟೆ, ಮತ್ತೋಡು, ಜರಿಮಲೆ, ಹರತಿ, ನಾಯಕನಹಟ್ಟಿ ಮುಂತಾದ ಮನೆತನಗಳೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ ಉದಾಹರಣೆಗಳುಂಟು. ಅಲ್ಲದೆ, ಕೆಲವು ಸಲ ತಮ್ಮ ಬಂಧುಗಳ ವಿರುದ್ಧ ಅನಿವಾರ್ಯವಾಗಿ ಉದ್ಭವಿಸುತ್ತಿದ್ದ ಕಾಳಗಗಳಲ್ಲಿ ಭಾಗವಹಿಸಬೇಕಾದ ಅನಿವಾರ್ಯತೆ ಇರುತ್ತಿತ್ತು.

ಮೊಗಲರು, ಮರಾಠರು, ಹೈದರಾಲಿ, ಟಿಪ್ಪುಸುಲ್ತಾನರು ಚಿತ್ರದುರ್ಗ ಸಂಬಂಧಿಗಳನ್ನು ತಮ್ಮೆಡೆಗೆ ಒಲಿಸಿಕೊಂಡು ಚಿತ್ರದುರ್ಗದ ಮೇಲೆ ಆಕ್ರಮಣ ಮಾಡಿದ ಉದಾಹರಣೆಗಳಿವೆ. ಆ ಸಂದರ್ಭದಲ್ಲಿ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ತಂತ್ರಗಾರಿಕೆಯನ್ನು ಚಿತ್ರದುರ್ಗದ ಅರಸರು ರೂಪಿಸಿಕೊಂಡಿದ್ದರು. ಮರಾಠರು ಹಾಗೂ ಮೊಗಲರ ಮಧ್ಯೆ ಅನೇಕ ಹೋರಾಟಗಳು ಸಂಭವಿಸಿವೆ. ಆ ಸಂದರ್ಭದಲ್ಲಿ ಚಿತ್ರದುರ್ಗದ ಅರಸರ ಸಹಾಯ ಕೋರಿ ಬಂದವರಿಗೆ ಸಹಾಯವನ್ನು ನೀಡಿದ್ದಾರೆ. ಕೆಲವು ಸಲ ಚಿತ್ರದುರ್ಗದ ರಾಜ್ಯವನ್ನೇ ಕಬಳಿಸಲು ಬಂದಾಗ, ಅವರನ್ನು ಹಿಮ್ಮೆಟ್ಟಿಸುವ ಸಾಹಸವನ್ನು ತೋರಿದ್ದಾರೆ.

ಮೈಸೂರು ಇತಿಹಾಸದಲ್ಲಿ ಹೆಸರಾದ ಹೈದರಾಲಿಖಾನ್ ಚಿತ್ರದುರ್ಗದ ಅರಸರಿಂದ ರಾಜಕೀಯ ಲಾಭ ಪಡೆದುಕೊಂಡು ಮರಾಠರನ್ನು ಹಾಗೂ ಸ್ಥಳೀಯ ದಂಗೆಗಳನ್ನು ಎದುರಿಸುವಲ್ಲಿ ಯಶಸ್ವಿಯಾಗಿ ಕೊನೆಗೆ ಚಿತ್ರದುರ್ಗವನ್ನೇ ಮೋಸದಿಂದ ಕಬಳಿಸಿದ್ದುಂಟು. ಆದರೆ ಚಿತ್ರದುರ್ಗದ ಅರಸರು ಕೊನೆಯವರೆಗೂ ತಮ್ಮ ಸ್ವರಾಜಕೀಯ ನಿರ್ಣಯಗಳೊಂದಿಗೆ ಸುತ್ತಮುತ್ತಲ ಸಂಸ್ಥಾನಗಳಷ್ಟೇ ಅಲ್ಲದೆ ನವಾಬರು, ಮರಾಠರು ಮುಂತಾದವರೊಂದಿಗೆ ಇಟ್ಟುಕೊಂಡಿದ್ದ ರಾಜಕೀಯ ಬಾಂಧವ್ಯ, ನಡೆಸಿದ ಹೋರಾಟಗಳು, ರಾಜಕೀಯ ದೂರದೃಷ್ಟಿ ಹಾಗೂ ಶೌರ್ಯಸಾಹಸಗಳು ಇವರ ರಾಜ್ಯದ ವೈಭವವನ್ನು ಪ್ರತಿನಿಧಿಸುತ್ತವೆ. ಇವರೆಂದೂ ಇನ್ನೊಬ್ಬರ ಹಂಗಿನಲ್ಲಿ ಬದುಕಲಿಲ್ಲ. ಯಾರನ್ನೂ ಮೋಸ ವಂಚನೆ ಕಪಟದಿಂದ ಸೋಲಿಸಲಿಲ್ಲ.

ಹಾಗೆಯೇ ಸುರಪುರದ ಅರಸರು ಹಿಂದೂ ಸಂಸ್ಕೃತಿಯನ್ನು ರಕ್ಷಿಸಿದ ಕೀರ್ತಿಗೆ ಪಾತ್ರರಾದವರು. ವಾಗನಗೇರಿಯ (ಸುರಪುರದ) ಮೊದಲ ಅರಸ ಗಡ್ಡಿಪಿಡ್ಡನಾಯಕ ವಿಜಾಪುರದಲ್ಲಿ ಮದಗಜದೊಂದಿಗೆ ಕಾದಾಟಕ್ಕಿಳಿದು ತನ್ನ ಬಲಾಢ್ಯತೆಯನ್ನು ಪ್ರದರ್ಶಿಸಿದ. ಕೋಸಲ ಮಹಿಷ ವೃತ್ತಾಂತ ಈ ರೀತಿ ಅದರ ವಿವರವನ್ನು ನೀಡುತ್ತದೆ.

ಮತ್ತಗಜವದು ಓಡುತಿರೆ ಬೆ
ನ್ನೆತ್ತಿ| ಬಹಿರೀ ಪಿಡ್ಡ ಭೂಪಾ
ಲೋತ್ತಮನು ಹಿಂಗಾಲ್ಗೆ ತನಕಾಲ್ ಜತ್ತಿಲಿಂದಿಡಿದು|
ಒತ್ತಿ ಜಗ್ಗಲ್ ಒದುರುತಿರೆ ಮುಂ
ದತ್ತು ಹೋಗದೆ ನಿಂತಿತಾ ಕರಿ
ಸುತ್ತ ಜನವೀಕ್ಷಿಸಲು ಬಾದಷಹ ಕಂಡು ಬೆರಗಾದ[೯೬]

ಎಂಬುದು ಈತನ ಶೌರ್ಯ ಸಾಹಸಕ್ಕೆ ಹಿಡಿದ ಕನ್ನಡಿಯಾಗಿದೆ. ಹಾಗೂ ಮೊಗಲರ ಔರಂಗಜೇಬನು ಕ್ರಿ.ಶ.೧೬೮೮ರಲ್ಲಿ ತನ್ನ ಸೈನ್ಯದೊಂದಿಗೆ, ದಕ್ಷಿಣಭಾರತದೊಡನೆ ದಿಗ್ವಿಜಯ ಕೈಗೊಂಡು ಇಡೀ ಭಾರತದ ಸಾಮ್ರಾಟನಾಗುವ ಕನಸನ್ನು ಕಂಡಿದ್ದವನು. ಸುರಪುರದ ವಾಗಿನಗೇರಿ ಯುದ್ಧದಲ್ಲಿ ಸೋತು, ಹತಾಶನಾದ. ಮೈಸೂರು ಹಾಗೂ ತಂಜಾವೂರನ್ನು ಗೆಲ್ಲುವಾಸೆ ಕೊನೆಗೆ ಕನಸಾಗಿಯೇ ಉಳಿಯಿತು. ಸೋತ ಔರಂಗಜೇಬನು ಪಿಡ್ಡನಾಯಕನಿಗೆ ಶಾಂತಿಯ ಫರಮಾನನ್ನು ಕಳುಹಿಸಿ, ಅದರಲ್ಲಿ 'ನೀನು ಮುಸ್ಲಿಂನಾಗಿದ್ದರೆ ನಿನ್ನನ್ನು ಸಹೋದರ ಅನ್ನುತ್ತಿದ್ದೆ ಹಾಗೂ ಇತರ ಅನಾನುಕೂಲಗಳಿಂದ ನಿನ್ನನ್ನು ರಕ್ಷಿಸುತ್ತಿದ್ದೆ. ಆದರೆ ಮುಸ್ಲಿಂನಲ್ಲವೆಂದು ವಿಷಾದಿಸುವೆ. ಅಲ್ಲದೆ ನಿನ್ನ ಮಗ ಪಾಮನಾಯಕನನ್ನು ಶ್ರೇಯಸೂಚಕವಾಗಿ ರಾಜ ಸನ್ನಿಧಿಗೆ ಕಳುಹಿಸಿ ಹೆಚ್ಚಿನ ಮಾನ ಸೌಲಭ್ಯಗಳನ್ನು ಪಡೆಯಲು[೯೭] ಫರಮಾನಿನಲ್ಲಿ ಕೇಳಿದ್ದಾನೆ. ಈ ಫರಮಾನಿಗೆ ಔರಂಗಜೇಬ ತನ್ನ ಹಸ್ತವನ್ನು ಶ್ರೀಗಂಧದಲ್ಲಿ ಅದ್ದಿ ಮೊಹರುಹಾಕಿದ ಪತ್ರ ಇಂದಿಗೂ

ಸುರಪುರದ ಅರಮನೆಯಲ್ಲಿ ಇದೆ. ಮಹಾಕ್ರೂರಿ, ಹಿಂದೂದ್ವೇಷಿ ಇಡೀ ಭಾರತವನ್ನೇ ಇಸ್ಲಾಂಮಯ ಮಾಡಬೇಕೆನ್ನುವ ಉದ್ದೇಶ ಹೊಂದಿದ್ದ ಔರಂಗಜೇಬನನ್ನು ಸುರಪುರದ ಅರಸ ಪಿಡ್ಡನಾಯಕ ಹಿಮ್ಮೆಟ್ಟಿಸದಿದ್ದರೆ ಮೊಗಲ್ ಸೇನೆ ಇಡೀ ದಕ್ಷಿಣಭಾರತದ ಸಂಸ್ಕೃತಿಯನ್ನು ನಾಶ ಮಾಡುತ್ತಿತ್ತು. ಇದನ್ನು ಉಳಿಸಿದ ಕೀರ್ತಿ ಸುರಪುರದ ಅರಸರಿಗೆ ಸಲ್ಲುತ್ತದೆ.

ಹಾಗೆಯೇ ಪಾಂಡಿಚೇರಿ ಕದನದಲ್ಲಿ ಮೊಂಡಗೈ ವೆಂಕಟಪ್ಪನಾಯಕ ಭಾಗವಹಿಸಿ ನಿಜಾಮನಿಗೆ ಜಯ ತಂದುಕೊಟ್ಟ ರೋಮಾಂಚಕಾರಿ ದೃಶ್ಯ ಇಂತಿದೆ :

ಗುಂಡಿಗಂಜದೆ ವೆಂಕಟೇಂದ್ರನು
ತುಂಡುಗಡಿದನು, ತಾಮ್ರಮುಖರನು
ದಂಡಧರನಂದದಲಿ ಗಿರಿಕೋದಂಡ ರುದ್ರನೊಲು |
ಚಂಡತರ ಮಾರ್ತಾಂಡನೆನೆ ರಣ
ಮಂಡಲದಿ ವೈರಿಗಳ ರುಂಡವ
ಚಂಡನಾಡಿದ ಬಹರಿವೆಂಕಟ ಮಂಡಲಾಧಿಪನು[೧೯೮]

ಎಂಬುದು ಇವರ ಶೌರ್ಯ ಸಾಹಸಕ್ಕೆ ಹಿಡಿದ ಕನ್ನಡಿಯಾಗಿದೆ.

ಹಾಗೆಯೇ ಈ ಮನೆತನದ ನಾಲ್ವಡಿ ವೆಂಕಟಪ್ಪನಾಯಕ ದಕ್ಷಿಣಭಾರತದಲ್ಲಿಯೇ ಮೊಟ್ಟಮೊದಲ ಬಾರಿಗೆ ಸುತ್ತಮುತ್ತಲಿನ ಅರಸರನ್ನು, ಜಮೀನುದಾರರನ್ನು ಸಂಘಟಿಸಿ ಜೊತೆಗೆ ತನ್ನ ಸೈನ್ಯವನ್ನು ಸಂಘಟಿಸಿ ಬ್ರಿಟಿಷರ ವಿರುದ್ಧ ದಂಗೆ ಸಾರಿದನಲ್ಲದೆ, ಸುತ್ತಲಿನ ಅನೇಕ ಸಂಸ್ಥಾನಿಕರಿಗೆ ಸೈನದ ಸಹಾಯ ಸಲ್ಲಿಸಿದ ಕಿತ್ತೂರಿನವರು ಸುರಪುರದ ಸೈನ್ಯ ಸಹಾಯ ಪಡೆದಿದ್ದರು ಎನ್ನುವುದಕ್ಕೆ ಜನಪದ ನುಡಿಯೊಂದು ಈ ರೀತಿ ಹೇಳುತ್ತದೆ.

ಸಂಗೊಳ್ಳಿರಾಯಣ್ಣ ಸಾವಿರಾಳಿನ ಭಂಟ
ಸುರಗುದರಿಯ ಏರ್ಯಾನೋ ರಾಯಣ್ಣ
ಸುರಪುರದ ದಂಡ ತಂದಾನೋ[೧೯೮]

ಹೀಗೆ ಸುರಪುರದ ಅರಸರು ಬ್ರಿಟಿಷರ ವಿರುದ್ಧ ಕ್ರಾಂತಿಯ ಜ್ವಾಲೆಯನ್ನು ಹೊತ್ತಿಸಿದರು. ಇದನ್ನರಿತ ಬ್ರಿಟಿಷರು ತರುಣ ರಾಜಾ ನಾಲ್ವಡಿ ವೆಂಕಟಪ್ಪನಾಯಕನನ್ನು ಬಂಧಿಸಿ ಮೋಸದಿಂದ ಕೊಲೆಮಾಡಿದ್ದು ಖೇದದ ಸಂಗತಿ. ಹೀಗೆ ಕರ್ನಾಟಕದ ನಾಯಕ ಅರಸರು ಹೊಂದಿದ್ದ ಸ್ವತಂತ್ರ ಮನೋಧರ್ಮದ ಕೆಲವು ಉದಾಹರಣೆಗಳಷ್ಟೇ. ಉಳಿದ ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನದ ಅರಸರುಗಳು, ತಮ್ಮ ರಾಜ್ಯದ ರಕ್ಷಣೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.

ನಾಯಕ ಅರಸರು, ರಾಜಕೀಯವಾಗಿ ಪ್ರಬಲರಾದಂತೆ ಆರ್ಥಿಕವಾಗಿಯೂ ಸಬಲರಾಗಿದ್ದರು. ಇವರ ಕಾಲದ ನಾಣ್ಯಗಳು ಅವರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಷಯಗಳನ್ನು ಹೊರಗೆಡುವುತ್ತವೆ. ಅಲ್ಲದೆ ಆ ಮನೆತನಗಳ ಸಂಪತ್ತಿನ ವೈಭವದ ಪ್ರತೀಕಗಳಾಗಿದ್ದವು. ನಾಯಕ ಅರಸರಲ್ಲಿ ಚಿತ್ರದುರ್ಗ ಹಾಗೂ ಸುರಪುರದ ಅರಸರು ತಮ್ಮದೇ ಆದ ನಾಣ್ಯಗಳನ್ನು ಹೊರಡಿಸಿದ್ದರು. ಚಿತ್ರದುರ್ಗದ ಅರಸರು ದುರ್ಗಿವರಹ ಅಥವಾ ದುರ್ಗಿಪಗೋಡ ಎಂಬ ಹೆಸರಿನ ನಾಣ್ಯಗಳನ್ನು ಚಲಾವಣೆಗೆ ತಂದಿದ್ದರೆಂದು ಹೇಳಲಾಗುತ್ತದೆ. ಈ ಮನೆತನದ ಅರಸರು ವಿಪುಲ ಸಂಪತ್ತನ್ನು ಹೊಂದಿದ್ದರು.

ಕಸ್ತೂರಿ ರಂಗಪ್ಪನಾಯಕನ ಕಾಲದಲ್ಲಿ ೬೫೦೦೦ ದುರ್ಗಿಪಗೋಡಗಳು ದುರ್ಗದ ಭಂಡಾರದಲ್ಲಿದ್ದವು.[೨೦೦] ೨ನೇ ಮದಕರಿನಾಯಕನ ಕಾಲಕ್ಕೆ ಒಂದು ಲಕ್ಷ ಆದಾಯದ ಸೀಮೆಯನ್ನು ನಾಲ್ಕು ಭಾಗಗಳನ್ನಾಗಿ ಮಾಡಿ ಅಧಿಕಾರಿಗಳನ್ನು ನೇಮಿಸಿದ್ದನು.[೨೦೧] ಈತನ ಕಾಲದಲ್ಲಿ ಕ್ರಿ.ಶ.೧೬೫೨ರಲ್ಲಿ ೬೫೦೦೦ ವರಹಗಳಷ್ಟು ಕಂದಾಯವನ್ನು ಸಂಗ್ರಹಿಸಲಾಗಿತ್ತು. ಅದು ೧೬೭೨ರ ಹೊತ್ತಿಗೆ ಒಟ್ಟು ಆದಾಯ ವಾರ್ಷಿಕ ಒಂದು ಲಕ್ಷ ವರಹಗಳಷ್ಟಾಗಿತ್ತು.[೨೦೨]

ಭರಮಪ್ಪನಾಯಕನ ಕಾಲಕ್ಕೆ ಎಲ್ಲಾ ಬಾಬ್ತುಗಳು ಸೇರಿ ೪೦೦,೦೦೦ ವರಹಗಳಷ್ಟು ಆದಾಯ ಬರುತ್ತಿತ್ತು. ಈಗಿನ ಬೆಲೆಯಲ್ಲಿ ೫೦ ಲಕ್ಷಕ್ಕೂ ಹೆಚ್ಚು ಆಗುತ್ತಿತ್ತು.[೨೦೩] ಹಿರೇಮದಕರಿನಾಯಕನ ಕಾಲಕ್ಕೆ ಚಿತ್ರದುರ್ಗದ ಆದಾಯ ೩ ಲಕ್ಷ ವರಹವಾಗಿತ್ತು.[೨೦೪] ಒಂದು ಅಂದಾಜಿನ ಅವರ ಪ್ರಕಾರ ಇವನ ಕಾಲದಲ್ಲಿ ೯,೪೦,೦೦೦ ವರಹಗಳ ಆದಾಯ ಬರುತ್ತಿತ್ತು.[೨೦೫]

ವಿದೇಶಿ ವರದಿಗಳು ಮದಕರಿನಾಯಕನಿಗೆ ನಲವತ್ತು ಲಕ್ಷ ರೂಪಾಯಿ ವರಮಾನವಿತ್ತು ಎಂಬ ಮಾಹಿತಿ ನೀಡುತ್ತವೆ. ಈ ಹಣದಲ್ಲಿ ೪೦೦೦ ಕುದುರೆ, ೨೦೦೦ ಖಾಯಂ ಕಾಲ್ದಳ, ೩೦೦೦ ಅಮಾಲಿಕ್ ಸೇನೆಯನ್ನು ಕಾಪಾಡಲು ೫೦,೦೦,೦೦೦ ಮರಾಠರಿಗೆ ಕಾಣಿಕೆ ಕೊಡಲು ಖರ್ಚುಮಾಡಿ ಮಿಕ್ಕಿದ್ದನ್ನು ತನ್ನ ಸರ್ಕಾರ ನಡೆಸಲು ಬಳಸುತ್ತಿದ್ದನು.[೨೦೬] ಹಾಗೂ ಬುಕನನ್ ಪ್ರಕಾರ ಚಿತ್ರದುರ್ಗದ ಪಾಳೆಯಗಾರರು ವಿಜಯನಗರ ಅವನತಿಯ ಕಾಲಕ್ಕೆ ೧೦,೦೦೦ ಪಗೋಡ ಮೌಲ್ಯದ ರಾಜ್ಯವನ್ನಾಳುತ್ತಿದ್ದರು. ಅಲ್ಲದೆ ಚಿತ್ರದುರ್ಗದ ಅರಸರು ತಮ್ಮ ರಾಜ್ಯವನ್ನು ವಾರ್ಷಿಕವಾಗಿ ೩,೫೦,೦೦೦ ಪಗೋಡದಷ್ಟು ಮೌಲ್ಯದ್ದಾಗುವವರೆಗೂ ವಿಸ್ತರಿಸಿದ್ದರು.

ಹೈದರ್ ಚಿತ್ರದುರ್ಗವನ್ನು ತನ್ನ ಕೈವಶ ಮಾಡಿಕೊಂಡಾಗ ಚಿತ್ರದುರ್ಗದ ಬೊಕ್ಕಸದಲ್ಲಿ ೬,೪೦೦,೦೦೦ ಬೆಳ್ಳಿನಾಣ್ಯ, ೧೦೦,೦೦೦ ರಾಯಲ್, ೧,೭೦೦,೦೦೦ ಅಷರಫಿ, ೨,೫೦೦,೦೦೦ ದಾಬೋಲಿಕದಲಿ, ೧೦,೦೦,೦೦೦ ಚವುರಿ, ಅಲ್ಲದೆ ೧ ಗಬರು, ೧ ಮೊಹರು, ೧ ಪುತಲಿ, ೧ ಶಿವರಾಯಿ ಹೊನ್ನು,

೧ ಬಾದಷಾಹಿಹೊನ್ನು, ೧ ಸಂಣಗಿರಿ, ೧ ಅಚ್ಯುತರಾಯಿ, ೧ ದೇವರಾಯಿ, ೧ ರಾಮರಾಯಿ, ೧ ಜಾತಮಾಹಿಸ್, ೧ ಧಾರವಾಡಿ, ೧ ಪ್ರಿಯಕಾವೇರಿ, ೧ ಪ್ರಳಯಗಲುರ, ೧ ಪಾಪನಾಯಕಿ ಹೊನ್ನು ೧ ಆದವಾನಿ ಹೊನ್ನು, ೧ ತಾಡಪತ್ರೆಹೊನ್ನು, ೧ ಹಿಂದೆ ಹೊನ್ನು, ೧ ನಿಷಾನಿಖಲು, ೧ ಕಲ್ಲುಕುಂಟೆ, ೧ ದುರ್ಗಿ, ೧ ಇಕ್ಕೇರಿ ಬಂಗಾರದ ನಾಣ್ಯಗಳಿದ್ದವು ಎನ್ನುವುದಾದರೆ[೨೦೭] ಇವರ ಸಂಪತ್ತಿನ ವೈಭವ ಯಾವ ರೀತಿ ಇತ್ತು ಎನ್ನುವುದನ್ನು ಅರಿಯಬಹುದಾಗಿದೆ.

ಸುರಪುರದ ಅರಸರು ವಿಜಯನಗರದ ನಾಣ್ಯಗಳನ್ನೇ ಜಾರಿಗೆ ತಂದಿರಬಹುದು. ಇಲ್ಲವೇ ಸುರಪುರ ಆದಿಲ್‌ಷಾಹಿಗಳ ಅಧಿಕಾರವಧಿಯಲ್ಲೇ ತನ್ನ ಅಸ್ತಿತ್ವ ಪಡೆದಿದ್ದರಿಂದ ಅವರ ಕಾಲದ ನಾಣ್ಯಗಳನ್ನೇ ಚಲಾವಣೆಗೆ ತಂದಿರಬಹುದು. ನಂತರ ಮೊಘಲರು, ಹೈದ್ರಾಬಾದ್ ನಿಜಾಮರ ಅಧೀನದಲ್ಲಿದ್ದಾಗ, ಅವರ ನಾಣ್ಯಗಳನ್ನೆ ಚಲಾವಣೆಗೆ ತಂದಿರಬಹುದೆಂಬುದನ್ನು ಇಲ್ಲಿಯವರೆಗೆ ಸಂಶೋಧಕರು ನಂಬಿದ್ದರು. ಆದರೆ ಇತ್ತೀಚಿಗೆ ಸುರಪುರದಲ್ಲಿ ೩೦ ತಾಮ್ರದ ನಾಣ್ಯಗಳು ದೊರೆತಿವೆ.[೨೦೮] ಈ ನಾಣ್ಯಗಳ ಮೇಲ್ಮುಖದಲ್ಲಿ ಶಂಕು, ನಾಮ ಚಕ್ರವನೊಳಗೊಂಡಂತೆ ಶ್ರೀ ವೈಷ್ಣವರ ಗುರುತು ಇವೆ. ನಾಣ್ಯದ ಕೆಳಮುಖದಲ್ಲಿ ಮಧ್ಯೆ ಗುಂಡುಗಳು ಇವೆ. ಹಾಗೂ ನಾಗರಿ ಲಿಪಿಯಲ್ಲಿ ಬಹಿರಿ ಮತ್ತು ೧೨೬೨ ಎಂದು ಬರೆಯಲಾಗಿದೆ. ಬಹರಿ ಎಂಬುದು ಸುರಪುರದ ಅರಸರ ಬಿರುದಾಗಿದೆ. ಹಾಗೂ ಈ ನಾಣ್ಯಗಳ ಮೇಲೆ ಇರುವ ಶಂಕನಾಮ, ಚಕ್ರದ ಮುದ್ರೆಗಳು ಸುರಪುರ ಅರಸರ ಶ್ರೀ ವೇಣುಗೋಪಾಲಸ್ವಾಮಿಯ ದೇವಾಲಯದ ಗರ್ಭಗುಡಿಯ ದ್ವಾರದ ಮೇಲೆ ಇರುವ ಚಿತ್ರಗಳಿಗೆ ಸರಿ ಹೊಂದುತ್ತವೆ. ಅವು ಸುರಪುರದ ಅರಸರ ಗುರುತುಗಳಾಗಿವೆ.

ಸುರಪುರಕ್ಕೆ ಮೆಡೋಸ್ ಟೇಲರ್‌ನೆಂಬ ರಾಜಕೀಯ ಪ್ರತಿನಿಧಿಯನ್ನು ಬ್ರಿಟಿಷರು ನೇಮಕ ಮಾಡಿದಾಗ ಗೌರ್ನರ್ ಜನರಲ್‌ನು ರಾಜಕೀಯ ಪ್ರತಿನಿಧಿ(Political Agent)ಯಾದ ಟೇಲರ್‌ನಿಗೆ ಸುರಪುರದ ಅರಸ ನಾಲ್ವಡಿ ವೆಂಕಟಪ್ಪನಾಯಕನು ೧೮೧೫ ರೂ. ಸುರಪುರದ ನಾಣ್ಯ ಅಥವಾ ೧೫೦೦ ರೂ.ಗಳು ಕಂಪನಿ ನಾಣ್ಯಗಳನ್ನು[೨೦೯] ಕೊಡಬೇಕಾಗುವುದೆಂಬುದನ್ನು ತಿಳಿಸಿದ್ದನು. ಇದರಿಂದ ಆ ಸಂದರ್ಭದಲ್ಲಿ ಸುರಪುರದ ನಾಣ್ಯಗಳು ಚಲಾವಣೆಯಲ್ಲಿದ್ದವು ಎಂದು ತಿಳಿಯಬಹುದು.

ಸುರಪುರದ ಅರಸರು, ಭೂಕಂದಾಯ, ಮಾರಾಟ ತೆರಿಗೆ, ವೃತ್ತಿ ತೆರಿಗೆ ಮತ್ತು ಗುತ್ತಿಗೆ ತೆರಿಗೆಗಳ ಮೂಲಕವಾಗಿ ಆದಾಯವನ್ನು ಸಂಗ್ರಹಿಸುತ್ತಿದ್ದರು. ವರ್ಷದಿಂದ ವರ್ಷಕ್ಕೆ ಸಂಸ್ಥಾನದ ಮೂಲ ಆದಾಯ ವನ್ನು ಹೆಚ್ಚಿಸಿದರು. ಈ ಕೆಳಗಿನ ಅಂಕಿ ಅಂಶಗಳು ಸಮಗ್ರ ಮಾಹಿತಿಯನ್ನು ನೀಡುತ್ತವೆ :

ಕ್ರಿ.ಶ.೧೮೪೨ರಲ್ಲಿ- ರೂ.೧,೯೮,೮೫೧.೦೦

ಕ್ರಿ.ಶ.೧೮೪೩ರಲ್ಲಿ- ರೂ.೨,೨೦,೯೧೩.೦೦

ಕ್ರಿ.ಶ.೧೮೪೪ರಲ್ಲಿ- ರೂ.೨,೩೩,೫೦೭.೦೦

ಕ್ರಿ.ಶ.೧೮೪೫ರಲ್ಲಿ- ರೂ.೨,೭೫,೯೫೨.೦೦

ಕ್ರಿ.ಶ.೧೮೪೬ರಲ್ಲಿ- ರೂ.೩,೨೫,೦೬೬.೦೦

ಕ್ರಿ.ಶ.೧೮೪೭ರಲ್ಲಿ- ರೂ.೩,೪೬,೫೫೦.೦೦

ಕ್ರಿ.ಶ.೧೮೪೮ರಲ್ಲಿ- ರೂ.೩,೩೫,೮೮೨.೦೦

ಕ್ರಿ.ಶ.೧೮೪೯ರಲ್ಲಿ- ರೂ.೨,೯೮,೭೧೫.೦೦

ಕ್ರಿ.ಶ.೧೮೫೦ರಲ್ಲಿ- ರೂ.೩,೨೦,೭೨೯.೦೦[೨೧೦]

ಇದರ ಮೂಲಕ ಸುರಪುರದ ಅರಸರು ಈ ರೀತಿಯ ಸಂಪತ್ತನ್ನು ಹೊಂದಿದ್ದರೆಂದು ಅರಿಯಬಹುದು. ಆದರೆ ಆದಿಲ್‌ಷಾಹಿಗಳು, ಮೊಗಲರು, ಪೇಶ್ವೆಗಳು ಮತ್ತು ಹೈದ್ರಾಬಾದ್ ನಿಜಾಮರು, ಸಾಮಂತರಾದ ಸುರಪುರದ ಅರಸರ ಕಂದಾಯದ ಅಧಿಕಾರಗಳನ್ನು ಪಡೆದವರಾಗಿದ್ದರಿಂದ ಅವರುಗಳಿಗೆ ಚೌಥ ಮತ್ತು ಇತರ ಕಾಣಿಕೆಗಳನ್ನು ಸಲ್ಲಿಸುವುದರ ಮೂಲಕ ಸುರಪುರದ ಅರಸರು ಕೊನೆ ಕೊನೆಗೆ ಸಿರಿವಂತರಿಂದ ಸಾಲ ಪಡೆದುಕೊಳ್ಳುವ ಅನಿವಾರ್ಯತೆ ಒದಗಿತು. ಕೊನೆಗೆ ಆರ್ಥಿಕ ಭದ್ರತೆಯಿಲ್ಲದ ಸಂದರ್ಭ ನೋಡಿ ಬ್ರಿಟಿಷರು ಸುರಪುರ ಸಂಸ್ಥಾನವನ್ನೇ ಕಸಿದುಕೊಂಡರು.

ಗುಡಗುಂಟಿ ಸಂಸ್ಥಾನದ ಉತ್ಪನ್ನವು ಒಂದು ವರ್ಷಕ್ಕೆ ರೂ.೫೦,೦೦೦ ಗಳಷ್ಟಾಗಿತ್ತು. ಕಂದಾಯದ ಮೂಲಕ ಹಣವನ್ನು ಸಂಗ್ರಹಿಸುತ್ತಿದ್ದರು. ಗುಡೇಕೋಟೆ ಹಾಗೂ ಜರಿಮಲೆ ಅರಸರು ವಿಜಯನಗರದ ಅರಸ ಕೃಷ್ಣದೇವರಾಯನಿಂದ ಏಳು ತಾಲ್ಲೂಕುಗಳನ್ನು ಆಳುತ್ತಾ ಆ ಪ್ರದೇಶಗಳ ಕಂದಾಯ ವಸೂಲಿ ಮಾಡಿ, ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿಕೊಂಡಿದ್ದರು. ಜರಿಮಲೆಯ ಪೆನ್ನಪ್ಪನಾಯಕನಿಗೆ ಅಚ್ಯುತರಾಯನು ಮೊದಲು ೧೫,೩೦೦ ಮಹಮ್ಮದ್‌ಷಾಹಿ ಪಗೋಡ ಆದಾಯ ೪ ಮಾರ್ಗಗಳನ್ನು ನಂತರದಲ್ಲಿ ೫೦೦ ಅಶ್ವದಳ, ೩೦೦೦ ಕಾಲ್ದಳ ಇಟ್ಟುಕೊಳ್ಳಲು ಅನುಮತಿ ನೀಡಿ ೩೫,೧೫೦ ಮಹಮದ್‌ಶಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿಗೆ ಮಾಗಣಿಗಳನ್ನು ನೀಡಿದ್ದಾನೆಂದು ಮನ್ರೋ ವರದಿಗಳಿಂದ[೨೧೧] ತಿಳಿಯುತ್ತದೆ. ಮತ್ತೋಡು ಅರಸರು ಪ್ರಾರಂಭದಲ್ಲಿ ವೆಂಕಟಪತಿರಾಯನಿಂದ ಮತ್ತೋಡನ್ನು ಬಳುವಳಿಯಾಗಿ ಪಡೆದುಕೊಂಡಾಗ ೯೦೦೦ ಪಗೋಡಗಳ ಆದಾಯವುಳ್ಳ ಲಕ್ಕವ್ವನಹಳ್ಳಿಯ ಸುತ್ತಮುತ್ತಲ ಪ್ರದೇಶವನ್ನೊಳಗೊಂಡ ಒಂದು ಚಿಕ್ಕ ಪ್ರಾಂತ್ಯವಾಗಿತ್ತು. ನಂತರ ಅದು ಈಗಿನ ಚಿಕ್ಕನಾಯಕನಹಳ್ಳಿ, ಹೊಸದುರ್ಗ, ಹಿರಿಯೂರು ಮತ್ತು ಹೊಳಲ್ಕೆರೆ ತಾಲೂಕುಗಳ ಭಾಗಗಳನ್ನು ಒಳಗೊಂಡು[೨೧೨] ಸಂಸ್ಥಾನವೆಂದು ಕರೆಯಿಸಿಕೊಂಡಿತು.

ಕರ್ನಾಟಕ ನಾಯಕ ಅರಸರ ಆಸ್ಥಾನಗಳು ವೈಭವ ಪ್ರತಿಷ್ಠೆಗಳ ಸಂಕೇತವಾಗಿದ್ದವು. ಅನೇಕ ಕಲೆಗಳಿಗೆ ಆಸ್ಥಾನಗಳು ನೀಡಿದ ಪೋಷಣೆ ಗಮನಾರ್ಹವಾದುದಲ್ಲದೆ ರಾಜರು ಓಲಗಗಳನ್ನು ನಡೆಸುವುದರ ಮೂಲಕ ತಮ್ಮ ವೈಭವವನ್ನು ಪ್ರದರ್ಶಿಸುತ್ತಿದ್ದರು.

ಚಿತ್ರದುರ್ಗದ ಅರಸರು ಓಲಗಕ್ಕೆ ಬರುವಾಗ ಚಿತ್ತಾಕರ್ಷಕ ಸಕಲಾಭರಣಗಳನ್ನು ಧರಿಸುತ್ತಿದ್ದರು. ಅಲ್ಲದೆ ನಾನಾ ಪ್ರಜಾವರ್ಗದವರು, ನಾಲ್ಕು ಕಡೆ ಚಾಮರಧಾರಿಗಳಿಂದಲೂ, ಸಭಾಭವನವು ತುಂಬಿರುತ್ತಿತ್ತು. ಆ ಸಭೆಗೆ ಉಚಿತ ವೇಷಭೂಷಣಗಳಿಂದ ಅಲಂಕೃತವಾಗಿ ಬರುವ ರಾಜಪುರೋಹಿತ, ಅಮಾತ್ಯ, ಮಂತ್ರಿ, ಸಚಿವರಿಗೆ ಹಾಗೂ ರಾಜಕುಮಾರ, ಕುಮಾರಿಯರಿಗೆ ಉಚಿತಾಸನಗಳು ಮೀಸಲಾಗಿರುತ್ತಿದ್ದವು. ಸಾಮಂತರೂ, ಮಂಡಲಾಧಿಪತಿಗಳೂ, ರಾಜನ ಮುಂದುಗಡೆ ಎಡಬಲಗಳಲ್ಲಿ ವಿರಾಜಿಸುತ್ತಿದ್ದರೆ, ಗ್ರಾಮಾಧಿಕಾರಿಗಳು, ಧರ್ಮಾಧಿಕಾರಿಗಳು, ಅಂಗರಕ್ಷಕರು ಮುಂತಾದ ಅಧಿಕಾರಿವರ್ಗದವರೆಲ್ಲ ತಮ್ಮ ತಮ್ಮ ಆಸ್ಥಾನಗಳನ್ನು ಅಲಂಕರಿಸುತ್ತಿದ್ದರು. ಸೇನಾಪತಿಗಳು ತಮ್ಮ ಅನುಯಾಯಿಗಳೊಂದಿಗೆ ಒಬ್ಬೊಬ್ಬರಾಗಿ ಬಂದು ಅರಸನಿಗೆ ವಂದನೆಗಳನ್ನು ಸಲ್ಲಿಸುತ್ತಾ ತಮ್ಮ ತಮ್ಮ ಆಸನಗಳಲ್ಲಿ ಆಸೀನರಾಗುತ್ತಿದ್ದರು. ದಂಡನಾಯಕರು ಡಾಲು ಭಲ್ಲೆಗಳ ಸಹಿತ ಸಭಾಮಂಟಪ ಪ್ರವೇಶಿಸುತ್ತಿದ್ದರು. ನಂತರ ಅಧಿಕಾರಿಗಳು ತಮಗೆ ಸಂಬಂಧಿಸಿದ ವರದಿಗಳನ್ನು ವಾಚಿಸುತ್ತಿದ್ದರು. ತರುವಾಯ ಸಭಾಸದಸ್ಯರ ಮನಸ್ಸಂತೋಷಕ್ಕಾಗಿ ಸಂಗೀತ ಕಾರ್ಯಕ್ರಮಗಳು ಜರುಗುತ್ತಿದ್ದವು.

ಓಲಗದ ಕಾರ್ಯಕ್ರಮಗಳು ಮುಗಿದ ನಂತರ ಅರಸರು ಸಭಾ ಸದಸ್ಯರಿಗೆ ವೀಳೆಯ ಉಡುಗೊರೆಗಳನ್ನಿತ್ತು ಸನ್ಮಾನಿಸಿ ಸಭಾ ವಿಸರ್ಜನೆ ಮಾಡುತ್ತಿದ್ದರು. ಸುರಪುರದ ಅರಸರು ಒಡ್ಡೋಲಗಕ್ಕೆ ಬರುತ್ತಿದ್ದರು. ಅಲ್ಲಿಯ ಆಡಳಿತವರ್ಗಕ್ಕೆ ಆಸನ ವ್ಯವಸ್ಥೆಯನ್ನು ಈ ರೀತಿ ಮಾಡಲಾಗುತ್ತಿತ್ತು. ಅರಸನ ಬಲಭಾಗಕ್ಕೆ ದಖನಿ (ಗಲ್ಭಾಡ) ಸದರ ಬಾರಗೀರ, ಹಾವಿನಾಳ ಮರಾಠೆ ಇಂದೋಕಾರ, ಗುರಿಕಾರ, ನಿಷ್ಠಿ, ಸರನೌಬತ್ತು, ಸರಹವಾಲ್ದಾರ, ಗಾರದಿ, ಎಲ್ಲ ಸಮತುಗಳ ದೇಸಾಯಿಗಳು, ನಾಡಗೌಡ, ದೇಶಪಾಂಡೆಯರು, ಸಬನೀಸ, ಹುದ್ದಾರ, ಕೋಳಿಹಾಳ ಸುಬೇದಾರ, ಅಂಬಲಿಹಾಳ ಸುಬೇದಾರ, ತಳ್ಳಳ್ಳಿ ಸುಬೇದಾರ, ದ್ಯಾವಪುರ ಸುಬೇದಾರ, ಗೋಗಿಯ ಸುಬೇದಾರ, ಅವರಾದಿ ಸುಬೇದಾರ, ಗೋಫಣಿ ಸುಬೇದಾರ, ತಿಂಥಿಣಿ ಸುಬೇದಾರ, ದೊರನಹಳ್ಳಿ ಸುಬೇದಾರ, ಕಕ್ಕೇರಿ ಗುರಿಕಾರ, ಕಕ್ಕೇರಿ ಹವಾಲ್ದಾರ, ಕಕ್ಕೇರಿ, ನಾಯಕೋಡಿ, ಜಟ್ಟೆಯರು, ವಾಗಿನಗೇರಿ ಪೆಡಕೋಟಿ ಕಿಲ್ಲೆದಾರ, ಪಡಕೋಟಿ ಮರಾಠೆ, ರಾಯನಪಾಳ್ಯೆಯ ಕಿಲ್ಲೆದಾರ, ಮುಡಬೋಳ ಸಿಲೆದಾರ, ನರಬೊಳಿ ಸಿಲೇದಾರ, ಜರ್ಝಾಲಿ ಮಹಲ್ದಾರ ಆಸೀನರಾಗಿರುತ್ತಿದ್ದರು.

ಅರಸನ ಎಡಬಲಕ್ಕೆ ಮಜುಮುದಾರ, ದಫ್ತದಾರ, ಡಬೀರ, ಹೇಜಿಬ, ಪ್ರಕಾಶವಂಡ, ದಫ್ತರಬಂದ, ಧಾಕ-ತೋಡಿ, ವಕೀಲ, ಶೆಟ್ಟಿ, ಕಪ್ಪಡ ಮಹಾಲ, ತಟ್ಟಿ ಮಹಾಲ, ಇವರು ಧಾನ್ಯ ಇಡುವವರು, ಅಡ್ಡ ಮಹಾಲ ಇವರು ನೀರು ಪೂರೈಸುವವರು; ಮುದಬಾಕು ಅಡಗಿಯನ್ನು ಮಾಡುವವ, ಜಮದಾರಖಾನಿ, ತೋಪಖಾನಿ, ಪಾಗಾ, ಕೋಠಖಾನಿ ಎಲ್ಲ ಸಮತುಗಳ ಮಾಮಲೆದಾರರು, ಹದಿನಾಲ್ಕು ಕೇರಿಯ ಅಧಿಕಾರಿಗಳು ಆ ಕೇರಿಗಳಲ್ಲಿ ನಡಗೇರಿ, ಗುರಿಕಾರನಕೇರಿ, ಗಂಟನಾಯಕನಕೇರಿ, ಕರೆಗುಡ್ಡದಕೇರಿ, ಹುಲಕಲ್ಗೇರಿ, ದೊಣ್ಣೆಗೌಡನಕೇರಿ, ಗುಡಿಹಾಳಕೇರಿ, ಹಂಡೇವಜೀರರಕೇರಿ, ಚಿಕ್ಕಗಡ್ಡದಕೇರಿ, ಸರಸೌಬತ್ತುಕೇರಿ, ರಾಮಪುರಕೇರಿ, ಗೋನಾಲಕೇರಿ, ಗಿರಿತಿಮ್ಮಪ್ಪನಕೇರಿ, ಹುದ್ದಾರಕೇರಿ, ನಂತರ

ಹರನೂರು ನಾಯಕ ಹುಜರೇ ಸೇವಕರೂ, ಹುಜರಾತಿ ಚಾವಾಡಿ ಗೋಪಾಲಪ್ಪ ಹರಕಾರೆ, ಚೋರಗಸ್ತಿಯವರು, ಚೋಪದಾರನು ಬೆಳ್ಳಿಬೆತ್ತವನ್ನು ಹಿಡಿದುಕೊಂಡು ಬಿರುದಾವಳಿ ಹೊಗಳುವವ[೨೧೩] ಇವರೆಲ್ಲರೂ ಪ್ರತಿನಿಧಿಗಳಾಗಿ ಭಾಗವಹಿಸುತ್ತಿದ್ದರು. ಹೀಗೆ ಸಕಲ ವೈಭವದಿಂದ ಒಡ್ಡೋಲಗಗಳು ನಡೆಯುತ್ತಿದ್ದವು.

ಕರ್ನಾಟಕ ನಾಯಕ ಅರಸರು ನಿರ್ಮಿಸಿದ ಅರಮನೆಗಳು, ಅವರ ಸಮಕಾಲೀನ ರಾಜವೈಭವದ ಪ್ರತೀಕಗಳಾಗಿವೆ. ಇವುಗಳು ಅರಸೊತ್ತಿಗೆಯ ಕಟ್ಟಡಗಳೆಂದು ಕರೆಯಲ್ಪಟ್ಟಿವೆ. ೧೪-೧೫ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ನಾಯಕ ಅರಸರ ಅರಮನೆಗಳು ನಮಗೆ ನೋಡಲು ಸಿಗುವುದಿಲ್ಲ. ಕಾರಣ ಅಂದು ವಿಜಯನಗರದ ಅರಸರು ತಮ್ಮ ಅಧೀನದ ಸ್ಥಳೀಯ ನಾಯಕರು ಅರಮನೆಗಳನ್ನು ಕಟ್ಟಿಕೊಳ್ಳಲು ಅವಕಾಶವನ್ನು ನೀಡಿರಲಿಲ್ಲ. ಏಕೆಂದರೆ ಮುಂದೆ ಇವರು ತಮ್ಮ ವಿರುದ್ಧವೇ ನಿಲ್ಲಬಹುದೆಂಬ ಮುಂದಾಲೋಚನೆಯೂ ಇರಬಹುದಾಗಿತ್ತು. ಹೀಗಾಗಿ ವಿಜಯನಗರದ ನಂತರ ನಾಯಕ ಅರಸರು ಬೃಹತ್ ಕೋಟೆ, ಅರಮನೆಯನ್ನು ಕಟ್ಟಿಕೊಂಡ ನಿದರ್ಶನಗಳಿವೆ.

ಚಿತ್ರದುರ್ಗದ ನಾಯಕರು ಅನೇಕ ಅರಮನೆಗಳನ್ನು ಕಟ್ಟಿಕೊಂಡಿದ್ದರು. ಸದ್ಯ ಅರಮನೆಯ ಅವಶೇಷಗಳು ಮಾತ್ರ ಉಳಿದಿವೆ. ಚಿತ್ರದುರ್ಗದ ಮೊದಲ ಅರಸ ಮತ್ತಿತಿಮ್ಮಣ್ಣನಾಯಕ(ಕ್ರಿ.ಶ.೧೫೬೫-೧೫೮೯)ನು ಮೇಲುದುರ್ಗದಲ್ಲಿ ಒಂದು ಅರಮನೆಯನ್ನು ಕಟ್ಟಿಸಿದನು.[೨೧೪] ನಂತರ ಒಂದನೆಯ ಕಸ್ತೂರಿ ರಂಗಪ್ಪನಾಯಕ(ಕ್ರಿ.ಶ.೧೬೦೨-೧೬೫೨)ನು ಕ್ರಿ.ಶ.೧೬೩೩ರಲ್ಲಿ ಒಂದು ಅರಮನೆಯನ್ನು ನಂತರ ಸೀರ್ಯದ ಕೃಷ್ಣಪ್ಪನಾಯಕನ ಮಗಳಾದ ಓಬಕ್ಕನನ್ನು ಈತ ಮದುವೆಯಾಗಿ ಆಕೆಗೂ ಒಂದು ಅರಮನೆಯನ್ನು ಕ್ರಿ.ಶ.೧೬೩೬ರಲ್ಲಿ ಕಟ್ಟಿಸಿದನು.[೨೧೫] ಕ್ರಿ.ಶ.೧೬೫೩ರಲ್ಲಿ ಇಮ್ಮಡಿ ಮದಕರಿನಾಯಕನು(ಕ್ರಿ.ಶ.೧೬೫೨-೧೬೭೪) ಕೆಳಗಿನ ಅರಮನೆಯನ್ನು ಕಟ್ಟಿಸಿದರೆ[೨೧೬] ಕ್ರಿ.ಶ.೧೬೭೬ರಲ್ಲಿ ಚಿಕ್ಕಣ್ಣನಾಯಕ(ಕ್ರಿ.ಶ.೧೬೭೫-೧೬೮೬)ನು ಕಲ್ಲು ಬಾಗಿಲ ಬಳಿಯ ಅರಮನೆಯನ್ನು ಕಟ್ಟಿಸಿದನು.[೨೧೭] ಬಿಚ್ಚುಗತ್ತಿ ಭರಮಣ್ಣನಾಯಕ (ಕ್ರಿ.ಶ.೧೬೮೯-೧೭೨೧)ನು ಚಿಕ್ಕ ಅರಮನೆ, ಅವ್ವ ದೇಮವ್ವನ ಅರಮನೆ, ತಂಗಿ ಭರಮ್ಮವ್ವನ ಅರಮನೆ ಮತ್ತು ದೊಡ್ಡ ಅರಮನೆಗಳೆಂಬ ನಾಲ್ಕು ಅರಮನೆಗಳನ್ನು ಕಟ್ಟಿಸುತ್ತಾನೆ.[೨೧೮]

೧೯ನೇ ಶತಮಾನದ ಮಹಾಲಿಂಗೇಂದ್ರವಿಜಯ ಕೃತಿಯು ತಿಳಿಸುವಂತೆ ಮೇಲುದುರ್ಗದ ಮುರಿಗಾ ಮಠದ ಹಿಂಭಾಗದಲ್ಲಿರುವ ಟಂಕಸಾಲೆಯು ಭರಮಣ್ಣನಾಯಕನ ಅರಮನೆಯಾಗಿತ್ತು. ಕೊನೆಯ ಮದಕರಿನಾಯಕನ ಅರಮನೆಯ ಕುರಿತಾಗಿ ಮದಕೇರಿರಾಜೇಂದ್ರದಂಡಕ ವಿವರಣೆ ನೀಡುತ್ತದೆ. ಗಿರಿಶಿಖರಗಳಿಂದಲೂ, ನಾನಾತರಹದ ಪುಷ್ಪಲತೆಗಳಿಂದಲೂ, ವಿವಾಹ ಗೃಹಗಳಿಂದಲೂ, ಶೋಭಿಸುತ್ತಿದ್ದ ಚಿನ್ಮೂಲಗಿರಿಯಲ್ಲಿ ಕನ್ನಡಿಗಳಿಂದ ಅಲಂಕೃತವಾದ ಮೇಲ್ಮಹಡಿಯಲ್ಲಿ ಲಕ್ಷ್ಮೀವಿಲಾಸವೆಂಬ ವಿಭಾಗವಿದ್ದಿತು. ಇದು ಶಯ್ಯಾಗೃಹ, ಕಿಟಕಿ, ಜಾಲಂಧ್ರ, ಕಾರಂಜಿ, ಕಮಲದ ಕೊಳ, ಮೆಟ್ಟಿಲುಗಳಿಂದ

ಕೂಡಿತ್ತು ಎಂಬ ವಿವರಣೆಯಿಂದ ಆ ಅರಮನೆಯ ಭವ್ಯತೆಯನ್ನು ಅರಿಯಬಹುದಾಗಿದೆ.[೨೧೮] ಮೇಲುದುರ್ಗದಲ್ಲಿ ಪ್ರಮುಖ ಅರಮನೆಯ ಅವಶೇಷಗಳನ್ನೇ ಇಂದು ನಾವು 'ಅರಮನೆಯ ಪಾಳು', ಎಂದು ಗುರುತಿಸುತ್ತೇವೆ. ಮದ್ದುಬೀಸುವಕಲ್ಲುಗಳ ಹಿಂದೆ ಮಣ್ಣಿನಗೋಡೆಗಳ ಅವಶೇಷಗಳು ಕಾಣುತ್ತವೆ. ಅದನ್ನು ಬನದಮ್ಮನಗುಡಿಯ ಅರಮನೆ ಇರಬೇಕೆಂದು ಹೇಳುತ್ತಾರೆ.[೨೨೦] ಅಲ್ಲಿ ದೊಡ್ಡ ದೊಡ್ಡ ಮಣ್ಣಿನ ಗೋಡೆಗಳಿರುವುದನ್ನು ಗುರುತಿಸಬಹುದಾಗಿದೆ.

ಸುರಪುರದಲ್ಲಿ ಎರಡು ಅರಮನೆಗಳಿವೆ. ಪುರುಷಕಾರಿ ಲೋಕಯ್ಯನ ಗ್ರಂಥ ನೀಡುವ ವಿವರಣೆಯಂತೆ ಪೀತಾಂಬರ ಬಹರಿ ಪಿಡ್ಡನಾಯಕ(ಕ್ರಿ.ಶ.೧೬೮೭-೧೭೨೬)ನು ಏಳು ಗ್ರಾಮಗಳು ಕೂಡಿದ ಸ್ಥಳದಲ್ಲಿ ಭೂಮಿಯನ್ನು ಸ್ವಚ್ಛಮಾಡಿ ವಾಸ್ತುಶಾಸ್ತ್ರದ ಪ್ರಕಾರ ಅರಮನೆಯ ಶಂಕುಸ್ಥಾಪನೆ ಮಾಡುತ್ತಾನೆ.[೨೨೧]

ಮೊಂಡಗೈ ವೆಂಕಟಪ್ಪನಾಯಕ(ಕ್ರಿ.ಶ.೧೭೪೭-೧೭೫೨)ನು ಪಟ್ಟಣಶೆಟ್ಟಿಯಿಂದ ೧೦,೦೦೦ ವೆಚ್ಚದಿಂದ ಅರಮನೆಯನ್ನು ಕಟ್ಟಿಸಿದ.[೨೨೨] ಅದನ್ನು ಹಳೇ ದರಬಾರ ಎಂದು ಕರೆಯುತ್ತಾರೆ. ಅದರಲ್ಲಿ ಈಗ ಸರಕಾರಿ ಶಾಲೆ ನಡೆಯುತ್ತಿದೆ.

ಹೊಸ ಅರಮನೆಯು ಮೇಡೋಸ್‌ಟೇಲರನ ಕಾಲಕ್ಕೆ ಕಟ್ಟಲ್ಪಟ್ಟಿದೆ. ಈ ಅರಮನೆಯಲ್ಲಿ ಕಲಾತ್ಮಕತೆಯಿಂದ ನಿರ್ಮಿಸಿದ ಶೌಚಾಲಯ, ಸ್ನಾನಗೃಹ, ರಾಜನ ಶಯನಾಗೃಹಗಳು ನೆಲಸಮಗೊಂಡಿವೆ. ಮೊದಲ ಅಂತಸ್ತಿನ ಭಾಗಗಳು ಬಿದ್ದುಹೋಗಿವೆ. ಅರಮನೆಯ ಒಳಭಾಗಗಳು ಸಾಗವಾನಿ ಕಟ್ಟಿಗೆಗಳಿಂದ ಅಲಂಕೃತಗೊಂಡಿವೆ. ಕನ್ನಡಿ ಮಹಲಿನ ನೆಲಹಾಸು ಅತಿಥಿಗಳ ಮನರಂಜನೆಗಾಗಿ ಮತ್ತು ಸಭೆಗಳನ್ನು ನಡೆಸಲು ಉಪಯೋಗಿಸಲಾಗುತ್ತಿತ್ತು. ಇಲ್ಲಿ ಅನೇಕ ಸೂಕ್ಷ್ಮವಾದ ಕಲಾತ್ಮಕತೆ ಇದೆ. ಅಂದಿನ ಭವ್ಯತೆಯನ್ನು ಸಾರುತ್ತಿದೆಯಾದರೂ ಕೆಲ ಭಾಗಗಳು ಶಿಥಿಲಗೊಂಡಿವೆ. ಈ ಮನೆತನದವರು ಅರಮನೆಯ ಕುರಿತಾಗಿ ನಿಷ್ಕಾಳಜಿ ಹೊಂದಿರುವುದು ಖೇದಕರ. ಆನೆಗೊಂದಿ ಅರಸರ ಅರಮನೆಗಳು ನಾಶವಾಗಿವೆ. ಸದ್ಯ ಅರಮನೆಯ ಗೋಡೆ ಹಾಗೂ ಪಾವಟಿಗೆಗಳನ್ನು ನೋಡಬಹುದಾಗಿದೆ. ಅರಮನೆಯ ಒಂದು ಭಾಗದ ಗೋಡೆಯ ಮೇಲ್ಭಾಗದಲ್ಲಿ ಗಾರೆಯಲ್ಲಿ ಆನೆಯ ತಲೆ ಮತ್ತು ಕೆತ್ತನೆಯ ಅಲಂಕಾರಗಳನ್ನು ಮಾಡಿದ್ದಾರೆ. ಗೋಡೆಯ ಒಳಭಾಗದಲ್ಲಿ ಮೊನಚಾದ ಕಮಾನಿನ ಕಿಟಕಿಗಳಿವೆ. ಕಮಾನುಗಳ ಸಾಲು ಗಾರೆ ಮಾಡಿದ ಗೋಡೆಗಳು ಈ ಗೋಡೆಗಳಲ್ಲಿಯೇ ದೀಪ ಇಡಲು ಮಾಡಿದ ಮಾಡಗಳು ಆ ಕಾಲಕ್ಕೆ ಅರಮನೆ ಅದ್ಭುತವಾಗಿತ್ತೆಂದು ಸಾರುತ್ತವೆ.

ಗುಡಗುಂಟಿಯಲ್ಲಿ ಎರಡು ಅರಮನೆಗಳಿವೆ. ಗಾರೆ ಹಾಗೂ ಕಲ್ಲಿನಿಂದ ಕಟ್ಟಿದ ಈ ಅರಮನೆಗಳಿಗೆ ಹೊರ ಆವರಣಕ್ಕೆ ಪೂರ್ವ ಪಶ್ಚಿಮ ಮತ್ತು ಉತ್ತರಕ್ಕೆ ಮಹಾದ್ವಾರಗಳಿವೆ. ಈ ಅರಮನೆಯನ್ನು ಗುಡಗುಂಟಿಯ ಅರಸ ಲಿಂಗನಾಯಕ ಕಟ್ಟಿಸಿದನು. ಈ ಅರಮನೆಗೆ ತೇಗದ ಕಟ್ಟಿಗೆಯನ್ನು ಬಳಸಲಾಗಿದೆ. ಈ ಕಟ್ಟಿಗೆಯಲ್ಲಿ ಕೆತ್ತಿದ ನಾಜೂಕಿನ ಕೆಲಸ ತುಂಬಾ ಸೊಗಸಾಗಿದೆ. ಜೊತೆಗೆ ಈ ಅರಮನೆಯ

ರಂಗಮಹಲ್ ಮತ್ತು ದರ್ಬಾರ್‌ಹಾಲ್‌ಗಳು ತುಂಬಾ ಸೊಗಸಾಗಿವೆ.[೨೨೩] ಅಲ್ಲಲ್ಲಿ ಪ್ರಾಣಿಚಿತ್ರಗಳನ್ನು ಬಿಡಿಸಲಾಗಿದೆ. ಈಗ ಅವು ಮಸುಕಾಗಿವೆ. ಈ ಅರಮನೆಯ ಒಂದು ಭಾಗದಲ್ಲಿ ನ್ಯಾಯಾಲಯ ಹಾಗೂ ಕಂದಾಯ ಇಲಾಖೆಯ ಕಚೇರಿಗಳಿದ್ದವು. ಈ ಅರಮನೆಯ ಮುಂದಿನ ಅರಮನೆ ಚಿಕ್ಕದಾಗಿದೆ. ಇದನ್ನು ರಾಣಿಗೌರಮ್ಮ ಕಟ್ಟಿಸಿದ್ದಾಳೆ.

ಗುಂತಗೋಳದ ಅರಮನೆಯು ಉತ್ತರಾಭಿಮುಖವಾಗಿದೆ. ಇದನ್ನು ಕಟ್ಟಲು ಇಟ್ಟಿಗೆ ಹಾಗೂ ಕಲ್ಲುಗಳನ್ನು ಬಳಸಲಾಗಿದೆ. ರಾಜಾ ರಾಯಪ್ಪನಾಯಕರು ಈ ಅರಮನೆಯನ್ನು ಕಟ್ಟಿಸಿದ್ದಾರೆ. ಈಗಲೂ ನೋಡಲು ಸುಸಜ್ಜಿತವಾಗಿದೆ. ದೇವದುರ್ಗದ ಹಳೆಯ ಅರಮನೆ ಚಂದನಕೆರೆಗೆ ಸಾಗುವ ಮಾರ್ಗ ಮಧ್ಯದಲ್ಲಿತ್ತು. ಈಗ ಅದು ಹಾಳಾಗಿದೆ. ಆದರೆ ಅದರ ಅವಶೇಷಗಳನ್ನು ಇಂದಿಗೂ ಗುರುತಿಸಬಹುದಾಗಿದೆ. ರಾಜಧಾನಿ ಚಂದನಕೇರಿಯಿಂದ ದೇವದುರ್ಗಕ್ಕೆ ವರ್ಗವಾದ ಮೇಲೆ ಊರಮಧ್ಯದಲ್ಲಿ ವಿಶಾಲವಾದ ಅರಮನೆಯನ್ನು ರಂಗಪ್ಪನಾಯಕ ಕಟ್ಟಿಸಿದನು.[೨೨೪] ಈಗ ಈ ಅರಮನೆಯ ಕೆಲಭಾಗಗಳು ಸಂಪೂರ್ಣ ಶಿಥಿಲಗೊಂಡಿದ್ದು, ಒಂದು ಭಾಗ ಮಾತ್ರ ಉಳಿದಿದೆ. ಈ ಅರಮನೆಯ ಪ್ರವೇಶದ್ವಾರ ಮತ್ತು ಗೋಡೆಗಳು ಬಹಳ ಸುಂದರವಾಗಿವೆ. ಇದರ ಅರ್ಧಭಾಗದಲ್ಲಿ ಅಂದು ಕಚೇರಿಯ ಕೆಲಸಗಳು ನಡೆಯುತ್ತಿದ್ದವು.

ಕನಕಗಿರಿಯಲ್ಲಿ ಅರಮನೆಯ ಕುರುಹುಗಳು ಲಭ್ಯವಿಲ್ಲ. ಕನಕಗಿರಿ ನಾಯಕ ಅರಸರು ಹುಲಿ ಹೈದರ್‌ಗೆ ತಮ್ಮ ರಾಜಧಾನಿಯನ್ನು ವರ್ಗಾಯಿಸಿಕೊಂಡಾಗ ಅಲ್ಲಿ ಅರಮನೆಯನ್ನು ಕಟ್ಟಿಸಿದ್ದಾರೆ. ಇಂದಿಗೂ ನೋಡಲು ಸಿಗುತ್ತದೆ. ಗುಡೇಕೋಟೆಯ ಕೋಟೆಯ ಒಳಗೆ ಕೆಲವು ಮನೆಗಳ ಕುರುಹುಗಳು ಸಿಗುತ್ತವೆ. ಅಲ್ಲಿಯೇ ಅರಮನೆ ಇತ್ತು ಎನ್ನುತ್ತಾರೆ. ಗುಡೇಕೋಟೆಗೆ ಪ್ರವೇಶಿಸುವ ಮುನ್ನ ಉಪ್ಪರಿಗೆ ತಂಗಾಳಿ ಮಹಲು ಇದೆ. ಇಲ್ಲಿಯ ಮೇಲ್ಭಾಗದ ಛಾವಣಿಯಲ್ಲಿ ಅರಸರು ಮತ್ತು ರಾಣಿಯರು ತಂಪಾದ ಗಾಳಿಗೆ ಮೈ ಒಡ್ಡಿ ಆಹ್ಲಾದತೆಯನ್ನು ಪಡೆಯುತ್ತಿದ್ದರಂತೆ. ಇಲ್ಲಿ ಬಿಸಿಲಿನ ತಾಪ ಅಧಿಕವಿರುವುದರಿಂದ ಬೇಸಿಗೆಯಲ್ಲಿ ವಿಶ್ರಾಂತಿ ಪಡೆಯಲು ನಿರ್ಮಿಸಿದ ಇದನ್ನು ಬೇಸಿಗೆ ಮನೆ ಎಂತಲೂ ಕರೆಯುವರು.[೨೨೫]

ಜರಿಮಲೆಯ ಹೊರಕೋಟೆಯ ಪ್ರವೇಶದ್ವಾರದ ಮೂಲಕ ಒಳಗೆ ಹೋದಾಗ ಸಿಗುವುದೇ ಜರಿಮಲೆ ಅರಸರ ಅರಮನೆ. ಇಲ್ಲಿ ಅರಮನೆಯ ಕಟ್ಟಡವಿದ್ದು, ಅದರ ಸಂಕೀರ್ಣದಲ್ಲಿ ಎತ್ತರದ ಗೋಡೆ ಮಾತ್ರ ಉಳಿದಿದೆ. ಮತ್ತೋಡಿನ ಅರಮನೆಯು ನಮಗೆ ನೋಡಲು ಸಿಗದು. ಆದರೆ ಚರಿತ್ರೆಯಲ್ಲಿ ಮತ್ತೋಡಿನ ಅರಮನೆಯಲ್ಲಿ ಭಿತ್ತಿಚಿತ್ರಗಳಿದ್ದವು ಎಂಬುದು ದಾಖಲಾಗಿದೆ. ಹಾಗೂ ಹಾಲಪ್ಪನಾಯಕನ ಅರಮನೆಯ ಗೋಡೆಗಳು ಚಿತ್ರಗಳಿಂದ ಅಲಂಕೃತವಾಗಿದ್ದವು[೨೨೬] ಎಂಬ ವಿವರಣೆ ಸಿಗುತ್ತದೆ.

ಹೀಗೆ ಕರ್ನಾಟಕದ ನಾಯಕ ಅರಸುಮನೆತನಗಳಲ್ಲಿ ಸದ್ಯ ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿಗಳಲ್ಲಿ ಮಾತ್ರ ಅರಮನೆಗಳನ್ನು ನೋಡಬಹುದು. ಚಿತ್ರದುರ್ಗ, ಆನೆಗೊಂದಿ,

ಗುಡೇಕೋಟೆ, ಜರಿಮಲೆ, ಮತ್ತೋಡುಗಳಲ್ಲಿ ಅವುಗಳ ನಿವೇಶನವನ್ನು ನೋಡಬಹುದು. ಉಳಿದ ಕಡೆ ಅವುಗಳ ನಿವೇಶನಗಳನ್ನು ಹುಡುಕುವುದೂ ಕಷ್ಟ. ಈ ಅರಮನೆಗಳ ನಿರ್ಮಾಣ ಕಾಲವನ್ನು ಖಚಿತವಾಗಿ ಹೇಳುವಲ್ಲಿ ದಾಖಲೆಗಳ ಕೊರತೆ ಇವೆ. ಆದರೆ ಚಿತ್ರದುರ್ಗ, ಸುರಪುರದ ಅರಮನೆಗಳ ಕೆಲ ದಾಖಲೆಗಳು ಲಭ್ಯ ಇವೆ. ಈ ಅರಮನೆಯ ವೈಶಿಷ್ಟ್ಯತೆಗಳನ್ನು ಈ ರೀತಿ ಹೇಳಬಹುದು :

ಈ ಅರಸರ ಅರಮನೆಯ ಪ್ರದೇಶಗಳು ಪ್ರತ್ಯೇಕವಾಗಿರುತ್ತಿದ್ದು ಅರಸ, ಅರಸರ ಪರಿವಾರ ಹಾಗೂ ಸಿಬ್ಬಂದಿ ಇವರ ಅವಶ್ಯಕತೆಗಳನ್ನು ಪೂರೈಸುವಂತಹವುಗಳಾಗಿದ್ದವು. ರಾಜಾಲಯಗಳು, ಮಹಲುಗಳು, ಪ್ರಾಂಗಣಗಳು, ಗೃಹಗಳು, ಉಪವನಗಳು, ನೀರಿನ ವ್ಯವಸ್ಥೆಗಳಿಂದ ಕೂಡಿದವುಗಳಾಗಿದ್ದವು. ಈ ಅರಮನೆಗಳು ರಕ್ಷಣಾ ವ್ಯವಸ್ಥೆಯನ್ನು ಹೊಂದಿದ್ದವಲ್ಲದೆ, ಅರಮನೆಯ ಸಮೀಪದಲ್ಲಿಯೇ ದೇವಾಲಯ ಗಳು, ಮಂಟಪಗಳು ಇತರ ಧಾರ್ಮಿಕ ಕಟ್ಟಡಗಳಿದ್ದವು. ರಾಜ ಮತ್ತು ಆತನ ಪರಿವಾರದವರು ಮನೋರಂಜನೆ, ವಿವಾಹ, ವಿನೋದಗಳನ್ನು, ಹಬ್ಬ ಹರಿದಿನಗಳಲ್ಲಿ ನೋಡಲು ಅರಮನೆಯ ಉಪ್ಪರಿಗೆಯ ಮೇಲೆ ಕಿಂಡಿಗಳನ್ನು ಮಾಡಿರುವುದನ್ನು ಅರಮನೆಗಳಲ್ಲಿ ಕಾಣಬಹುದು. ಇವರ ಅರಮನೆಯ ತಲವಿನ್ಯಾಸಗಳಲ್ಲಿ ವಿಶಿಷ್ಟತೆ ಇದೆ. ಚೌಕಾಕಾರದ, ಆಯತಾಕಾರದ ಇಲ್ಲವೆ ಅಷ್ಟಭುಜದ ಕೋಣೆಗಳನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಸುರಪುರ, ಆನೆಗೊಂದಿ, ಗುಡಗುಂಟಿಯಲ್ಲಿ ಈ ಅರಮನೆಯಲ್ಲಿಯ ಕೋಣೆಗಳಲ್ಲಿ ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಪ್ರವೇಶಿಸಲು ಸಾಧ್ಯವಾಗುವಂತೆ ಕಟ್ಟಿರುವುದಲ್ಲದೆ, ಮಧ್ಯದಲ್ಲಿ ವಿಶಾಲವಾದ ಚೌಕಾಕಾರದ ಸಭಾಂಗಣಗಳಿವೆ. ಈ ಅರಮನೆಗಳು ಉಪ್ಪರಿಗೆಗಳಿಂದ ಕೂಡಿದ್ದು, ಏರಲು ಮೆಟ್ಟಿಲುಗಳನ್ನು ಮಾಡಿದ್ದಾರೆ. ಈ ಅರಮನೆಗಳ ನಿರ್ಮಾಣಕ್ಕಾಗಿ ಕಲ್ಲು, ಇಟ್ಟಿಗೆ, ನಯವಾದ ಸೋಸಿದ ಮಣ್ಣು, ಸುಣ್ಣಮಿಶ್ರಿತಗಾರೆ, ಗಚ್ಚುಗಳನ್ನು ಬಳಸಿರುವುದು ಕಂಡುಬರುತ್ತದೆ. ಈ ಅರಮನೆಗಳ ಗೋಡೆಗಳಲ್ಲಿ ಕಮಾನುಗಳನ್ನು ಅಳವಡಿಸಿದ್ದಾರೆ. ಬಹುಶಃ ಇದು ಇಸ್ಲಾಂ ಕಟ್ಟಡ ಶೈಲಿಯ ಪ್ರಭಾವವಿರಬಹುದು. ಹೀಗಾಗಿ ಅರಮನೆಗಳು ವಿಶಾಲ ಮನೋಧರ್ಮದ ವಾಸ್ತುಶೈಲಿಗಳೆಂದು ಹೇಳಬಹುದು.

ಈ ಅರಮನೆಗಳಲ್ಲಿ ಅಲಂಕಾರಿಕ ಕೆಲಸವೂ ನಡೆದಿದೆ. ಇಟ್ಟಿಗೆಗಳಿಂದ, ಸುಣ್ಣಮಿಶ್ರಿತ ಗಾರೆಗಳಿಂದ ಕಟ್ಟಿಗೆಗಳಿಂದ ಅಲಂಕಾರ ಮಾಡಿದ್ದಾರೆ. ಕೆಲವು ಕಡೆ ಅಲಂಕಾರಿಕ ಪಟ್ಟಿಗಳಿವೆ. ಸುರುಪುರ, ಗುಡಗುಂಟಿ ಅರಮನೆಗಳು ಭಿತ್ತಿಚಿತ್ರಗಳಿಂದ ಕೂಡಿವೆ. ಗಿಲಾವು ಕೆಲಸಗಳಿಗೆ ನಯವಾದ ಕೆಸರು ಮಣ್ಣು, ಸುಣ್ಣದ ಗಾರೆ ಉಪಯೋಗಿಸಿದ್ದಾರೆ. ಇಲ್ಲಿಯ ಕಟ್ಟಡಗಳಲ್ಲಿ ಸ್ತಂಭ, ತೊಲೆ, ಬೋದಿಗೆ, ಜಂತಿಗೆ ಕಟ್ಟಿಗೆಗಳನ್ನು ಬಳಸಿದ್ದಾರೆ. ಮಾಳಿಗೆಗಳು ಅಥವಾ ಮೇಲ್ಛಾವಣಿಗಳು ಇಟ್ಟಿಗೆ ಸುಣ್ಣದ ಗಾರೆಗಳಿಂದ ಕೂಡಿದವುಗಳಾಗಿವೆ. ಅರಮನೆಗಳ ಒಳರಚನೆ, ಹಂತದಿಂದ ಹಂತಕ್ಕೆ ಏರುಕ್ರಮದಲ್ಲಿ ಕಟ್ಟಿದವುಗಳಾಗಿದ್ದು, ದಿವಾನಖಾನೆ, ಹಜಾರ, ಧಪ್ತಾರಖಾನೆ, ಪಾಕಶಾಲೆ, ಪೂಜಾಕೋಣೆ, ಸ್ನಾನಗೃಹಗಳನ್ನೊಳಗೊಂಡಿವೆ. ಪ್ರತಿ ಅರಮನೆಗೆ

ಒಂದು ದೊಡ್ಡ ಬಾಗಿಲುಗಳಿವೆ. ಹೀಗೆ ಇಂದಿಗೂ ತಮ್ಮ ವೈಭವವನ್ನು ಸಾರುತ್ತಿರುವ ಈ ಅರಮನೆಗಳನ್ನು ಸಂರಕ್ಷಿಸುವುದು ಆಯಾ ವಂಶಸ್ಥರ ಆದ್ಯ ಕರ್ತವ್ಯವಾಗಿದೆ. ಕೆಲವು ಕಡೆ ಅರಮನೆಯ ಭಾಗಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಆಧುನಿಕರಣಗೊಳಿಸುತ್ತಿರುವುದು ಸುರಪುರ ಮತ್ತು ಗುಡಗುಂಟಿ ಅರಸು ಮನೆತನದ ವಂಶಸ್ಥರಲ್ಲಿ ಕಂಡುಬರುತ್ತದೆ. ಇದರಿಂದ ಆ ಅರಮನೆಯ ಭಾಗಗಳು ಮಹತ್ವವನ್ನು ಕಳೆದುಕೊಳ್ಳುತ್ತಿವೆ.

ನಾಯಕ ಅರಸರು ನಿರ್ಮಿಸಿದ ಕೋಟೆಗಳು ರಕ್ಷಣೆಯ ಆವರಣ ಮಾತ್ರ ಆಗಿರದೆ, ಅವರ ಸ್ವಾತಂತ್ರವಾದ ಧಿರೋದಾತ್ತತೆಯ ಸಂಕೇತವಾಗಿದ್ದವು. ಅವರ ವೈಭವದ ಪ್ರತೀಕವಾಗಿದ್ದವು. ಇಂದಿಗೂ ಇವರ ಕಾಲದ ಕೋಟೆಗಳು ನಮ್ಮ ಆಸಕ್ತಿ ಕೆರಳಿಸುವ ಸಾಧನವಾಗಿವೆ. ಚಿತ್ರದುರ್ಗದ ಏಳುಸುತ್ತಿನ ಕೋಟೆ ದಕ್ಷಿಣಭಾರತದಲ್ಲಿಯೇ ದುರ್ಗಮವಾದ ಕೋಟೆಯೆಂದು ಪ್ರಖ್ಯಾತಿ ಪಡೆದಿದೆ. ಇದು ಒಂದೇ ಬಾರಿಗೆ ಒಬ್ಬ ಅರಸನಿಂದ ಕಟ್ಟಲ್ಪಡದಿದ್ದರೂ ಚಿತ್ರದುರ್ಗದ ನಾಯಕ ಅರಸರ ಕಾಲದಲ್ಲಿ ಇದೊಂದು ಬಲಾಢ್ಯ ದುರ್ಗವಾಯಿತು ಎಂಬುದು ಮಾತ್ರ ವಿಶೇಷವಾಗಿದೆ. ಮೂಲಪುರುಷ ತಿಮ್ಮಣ್ಣನಾಯಕನಿಂದ ಮದಕರಿನಾಯಕನವರೆಗೆ ಎರಡು ಶತಮಾನಗ ಹೆಚ್ಚು ಕಾಲ ಕೋಟೆಕಟ್ಟುವ ಕಾರ್ಯ ನಡೆದಿರಬೇಕೆಂಬ ಅಂಶ ಇವರ ವಂಶಾವಳಿಗಳಿಂದ ದೊರೆಯುತ್ತದೆ. ಹೀಗಾಗಿ ಈ ಅರಸರ ವೈಭವವನ್ನು ನೆನಪಿಗೆ ತರುವ ಚಿತ್ರದುರ್ಗದ ಕೋಟೆ ಕನ್ನಡಿಗರ ಹೆಮ್ಮೆಯ ಸ್ಮಾರಕವೇ ಸರಿ.

ಸುರಪುರ ಅರಸರು ವಿಜಯನಗರ ಅರಸರ ಕಾಲದ ರಾಯನಪಾಳೆಯ ಕೋಟೆ ಮತ್ತು ಜಲದುರ್ಗದ ಕೋಟೆ ಒಡೆತನ ಪಡೆದು ವಾಗಿನಗೇರಿ ಕೋಟೆಯನ್ನು ಕಟ್ಟುತ್ತಾರೆ. ಈ ಕೋಟೆಯನ್ನೂ ಗಡ್ಡಿಪಿಡ್ಡನಾಯಕನು ಕಟ್ಟಿಸಿದನು.[೨೨೭] ಈ ವಾಗಿನಗೇರಿ ಕೋಟೆ ಕ್ರಿ.ಶ.೧೭೦೫ರಲ್ಲಿ ಔರಂಗಜೇಬನ ದಾಳಿಗೆ ತುತ್ತಾಗಿ, ತನ್ನ ವೈಭವವನ್ನು ಕಳೆದುಕೊಂಡಿತು. ಸುರಪುರದ ಕೋಟೆಯ ಅರಸ ಪಿತಾಂಬರ ಬಹರಿ ಪಿಡ್ಡನಾಯಕನ ಆಳ್ವಿಕೆಯಲ್ಲಿ ಕಟ್ಟಲ್ಪಟ್ಟು, ರಾಜಧಾನಿಯ ಸ್ಥಾನವನ್ನು ಪಡೆದುಕೊಂಡಿತು. ಸುಮಾರು ೧೫೦ ಮೀ. ನೆಲದಿಂದ ಎತ್ತರದಲ್ಲಿರುವ ಈ ಕೋಟೆ ಅಭೇದ್ಯವೆನಿಸುವ ಕೋಟೆಯಾಗಿದ್ದು, ಹೊರವಲಯದ ವೈರಿಯ ಆಕ್ರಮಣವನ್ನು ತಡೆಯುವಲ್ಲಿ ಪ್ರಮುಖವಾದ ಪಾತ್ರವಹಿಸಿದೆ. ಈ ಅರಸರು ನಿರ್ಮಿಸಿದ ಇನ್ನೊಂದು ಕೋಟೆ ವನದುರ್ಗದ ಕೋಟೆ, ದಟ್ಟಕಾಡಿನ ತಗ್ಗುಪ್ರದೇಶದ ಮಧ್ಯೆ ತಲೆಎತ್ತಿರುವ ಏಕೈಕ ಕೋಟೆಯೆಂದರೆ ಇದೊಂದೆ ಎಂಬ ಪ್ರಶಂಸೆಗೆ ಪಾತ್ರವಾಗಿದೆ.[೨೨೮] ಪೂರ್ವ ಪಶ್ಚಿಮವಾಗಿ ೨೫೦ ಮೀ. ಮತ್ತು ದಕ್ಷಿಣೋತ್ತರಕ್ಕೆ ೨೦೦ ಮೀ. ವಿಸ್ತೀರ್ಣ ಹೊಂದಿದೆ. ಇದು ವೈರಿಗಳ ಆಕ್ರಮಣಕ್ಕೆ ತಡೆಯೊಡ್ಡುವ ರೀತಿಯಲ್ಲಿ ಹಾದಿ ತಪ್ಪಿಸುವಂತ ರಚನೆಯನ್ನು ಹೊಂದಿದೆ. ಈ ಕೋಟೆಯ ಮಹಾದ್ವಾರದ ಮೇಲಿನ ಶಾಸನವನ್ನು ಡಾ.ರಂಗರಾಜ ವನದುರ್ಗರವರು ಸಂಶೋಧಿಸಿ ಈ ಕೋಟೆಯ ಸ್ಥಾಪನೆಯ ಉದ್ದೇಶ ಹಾಗೂ ಕಾಲದ ಮೇಲೆ ಹೊಸಬೆಳಕು ಚೆಲ್ಲಿದ್ದಾರೆ. ಇದರಂತೆ ಆನೆಗೊಂದಿ, ಗುಡಗುಂಟಿ, ದೇವದುರ್ಗ,

ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ಹರತಿ ಅರಸರುಗಳು ತಮ್ಮ ರಾಜ್ಯದ ರಕ್ಷಣೆಗಾಗಿ ಕೋಟೆಗಳನ್ನು ಕಟ್ಟಿಕೊಂಡಿದ್ದರು. ಇವುಗಳೆಲ್ಲ ಈ ಅರಸರ ವೈಭವದ ಪ್ರತೀಕಗಳಾಗಿದ್ದವು.

ಹೀಗೆ ಕರ್ನಾಟಕದ ನಾಯಕ ಅರಸರುಗಳು ತಮ್ಮ ಅಧಿಕಾರವಧಿಯಲ್ಲಿ ರಾಜ್ಯಕ್ಕೆ ಅಗತ್ಯವಾದ ಚಟುವಟಿಕೆಗಳನ್ನು ಹಮ್ಮಿಕೊಂಡರಲ್ಲದೆ, ಪ್ರಜೆಗಳ ಅನುಕೂಲಕ್ಕಾಗಿ, ಕೆರೆ, ಬಾವಿ, ಸತ್ರಗಳನ್ನು ನಿರ್ಮಿಸಿದರು. ಅನೇಕ ದೇವಾಲಯಗಳನ್ನು, ಮಠಮಾನ್ಯಗಳನ್ನು ಕಟ್ಟಿಸಿ, ದಾನಗಳನ್ನು ನೀಡುವುದರ ಮೂಲಕ ಕೊಡುಗೈ ಅರಸರೆಂದು ಹೆಸರುವಾಸಿಯಾಗಿದ್ದಾರೆ. ರಾಜ್ಯದಲ್ಲಿ ಎಲ್ಲಾ ಧರ್ಮಕ್ಕೂ ಸಮಾನ ಅವಕಾಶ ಕಲ್ಪಿಸಿಕೊಟ್ಟ ಸರ್ವಧರ್ಮ ಸಮನ್ವಯದ ಸಾಧಕರಾದ ಇವರು ಕರ್ನಾಟಕದ ಇತಿಹಾಸದಲ್ಲಿ ತಮ್ಮದೇ ಆದ ಛಾಯೆಯನ್ನು ಬಿಟ್ಟು ಹೋಗಿದ್ದರಲ್ಲದೆ, ಆಯಾ ಪ್ರದೇಶಗಳ ಜನಮನದಲ್ಲಿ ಮಾಸದ ನೆನಪಾಗಿ ಉಳಿದಿರುವುದು ಇವರ ವೈಭವದ ಇನ್ನೊಂದು ಮುಖವೆನ್ನಬಹುದಾಗಿದು.

## ೪.೬. ವಿಜಯೋತ್ಸವ

ಯುದ್ಧಕಾರ್ಯವು ಅರಸರಿಗೆ ನಿತ್ಯ ವೃತ್ತಿಯಾಗಿತ್ತು. ರಾಜ್ಯ ವಿಸ್ತರಣೆ, ಶೌರ್ಯ, ಪ್ರರಾಕ್ರಮಗಳ ಹಾಗೂ ಪ್ರದರ್ಶನದಲ್ಲಿ ತೊಡಗಿ ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುವುದಾಗಿತ್ತು. ಯುದ್ಧದ ಮುನ್ನಡೆ ಹಾಗೂ ನೀತಿಗಳಂತೆಯೇ ಯುದ್ಧದ ಫಲಿತಾಂಶ ಹಾಗೂ ಪರಿಣಾಮಗಳು ಮುಖ್ಯವಾಗಿದ್ದವು. ಹೀಗಾಗಿ ಯುದ್ಧಗಳು ಘಟಿಸಿದ ಬಳಿಕ ಅವು ನೀಡುವ ಫಲಿತಾಂಶಗಳೆಲ್ಲ ಚರಿತ್ರೆಯಲ್ಲಿ ಪರಿಣಾಮಕಾರಿ ಬದಲಾವಣೆಯನ್ನುಂಟುಮಾಡಿವೆ. ಯುದ್ಧದಲ್ಲಿ ಜಯಾಪಜಯಗಳೆಂಬುವು ತೂಗುಯ್ಯಾಲೆಯಂತೆ. ಒಂದು ಪಕ್ಷದವರು ಗೆದ್ದೆವೆಂದು ವಿಜಯೋತ್ಸವವನ್ನು ಆಚರಿಸಿ ತಮ್ಮ ದೊರೆಯ ಕೀರ್ತಿ ಪರಾಕ್ರಮಗಳನ್ನು ಮುಗಿಲಿಗೇರಿಸಿದರೆ, ಸೋತ ಕಡೆಯವರ ಸ್ಥಿತಿಗತಿಗಳು ಕಳವಳಿಕಾರಿಯಾಗಿ ಶೋಚನೀಯ ಸ್ಥಿತಿಯಲ್ಲಿರುತ್ತವೆ. ಯುದ್ಧದಲ್ಲಿ ಗೆದ್ದ ಅರಸ ಉತ್ಸಾಹಭರಿತನಾಗಿ ತನ್ನ ರಾಜ್ಯಕ್ಕೆ ಮರಳಿದಾಗ ಇಡೀ ರಾಜ್ಯದ ವಾತಾವರಣ ಸಂಭ್ರಮದಲ್ಲಿ ಮುಳುಗುತ್ತಿತ್ತು. ಅದನ್ನೇ ವಿಜಯೋತ್ಸವ ಎಂದು ಕರೆಯಲಾಗುತ್ತಿತ್ತು.

ವಿಜಯೋತ್ಸವ ಗೆಲುವು ದೊರೆತಿದುದರಿಂದ ಉಂಟಾದ ಸಡಗರ, ಉತ್ಸಾಹ, ಗೆಲುವು ಸಿಕ್ಕಿದುದಕ್ಕಾಗಿ ಮಾಡುವ ಸಂತೋಷದ ಸಮಾರಂಭವಾಗಿತ್ತು.[೨೯] ಇದು ಗೆದ್ದ ಅರಸನ ವ್ಯಕ್ತಿತ್ವ ಸಾಧನೆಗಳನ್ನು ಪ್ರತಿನಿಧಿಸುವುದರ ಜೊತೆಗೆ ಅವನ ಕೀರ್ತಿ, ಪ್ರತಿಷ್ಠೆಗಳನ್ನು ಎಲ್ಲೆಡೆ ಹರಡುತ್ತಿದ್ದುದಾಗಿತ್ತು. ಯುದ್ಧದ ಬಳಿಕ ಅಲ್ಲಿನ ಎಲ್ಲಾ ಬಗೆಯ ವಸ್ತುಗಳು ವಿಜಯಿಯಾದ ಅರಸನ ಪಾಲಾಗುತ್ತಿದ್ದವು. ಶತ್ರುರಾಜ್ಯದ ಸಂಪತ್ತನ್ನು ದೋಚುವುದು ಸಾಮಾನ್ಯವಾಗಿತ್ತು. ಯುದ್ಧದ ಸಾವುನೋವುಗಳು ಒಂದೆಡೆಯಾದರೆ, ಗೆದ್ದ ಪಡೆಯು ಸೋತ ಸೇನೆ ಮತ್ತು ರಾಜ್ಯಗಳನ್ನು ಕಾಣುತ್ತಿದ್ದ ರೀತಿ ನೀತಿಗಳು ವಿಭಿನ್ನವಾಗಿದ್ದವು. ಗೆದ್ದವರು ಶತ್ರು ಪಕ್ಷದವರ ರಕ್ತವನ್ನು ತಮ್ಮ ಹಣೆಗೆ ತಿಲಕವನ್ನಿಟ್ಟುಕೊಂಡು ಹಾಡಿ ಕುಣಿದಾಡುತ್ತಿದ್ದರು. ರಕ್ತ

ಸಿಕ್ತವಾದ ಖಡ್ಗಗಳನ್ನು ತೊಳೆಯುವ ಸಂಭ್ರಮದ ಕಾರ್ಯಕ್ರಮ, ಬಾಳ್ಗಚ್ಚನ್ನು ಅತಿ ಹುಮ್ಮಸ್ಸಿನಿಂದ ಆಚರಿಸುತ್ತಿದ್ದರು.[೨೩೦]

ಕರ್ನಾಟಕದ ನಾಯಕ ಅರಸು ಮನೆತನಗಳು ಶೌರ್ಯ ಸಾಹಸಕ್ಕೆ ಹೆಸರಾದವು. ಹೀಗಾಗಿ ಇವರ ಪ್ರತಿಯೊಂದು ಕಾಳಗವೂ ಇವರ ಸಾಹಸ, ಶೌರ್ಯ, ಆತ್ಮಾಭಿಮಾನ, ಯುದ್ಧಕೌಶಲಗಳಿಗೆ ದ್ಯೋತಕವಾಗಿವೆ.[೨೩೧] ಈ ಮನೆತನದವರು ಅನೇಕ ಯುದ್ಧಗಳನ್ನು ಮಾಡಿ, ಜಯಿಸಿದವರು. ಚಿತ್ರದುರ್ಗ, ಸುರಪುರದವರು ಸ್ವತಃ ತಾವೇ ಯುದ್ಧವನ್ನು ಹಮ್ಮಿಕೊಂಡ ಉದಾಹರಣೆಗಳಿವೆ. ಆದರೆ ಉಳಿದ ಆನೆಗೊಂದಿ, ಗುಡಗುಂಟಿ, ಗುಂತಗೋಳ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಹರತಿ ಅರಸು ಮನೆತನದವರು ಸ್ವತಂತ್ರವಾಗಿ ಯಾರ ಮೇಲೆಯೂ ಯುದ್ಧಕ್ಕೆ ತೆರಳಿಲ್ಲ. ಆದರೆ ತಮ್ಮ ಸಾಮಂತ ಅರಸರಿಗೆ ಇಲ್ಲವೇ ತಮ್ಮ ಬಂಧುಗಳಿಗೆ ಯುದ್ಧದಲ್ಲಿ ಸಹಾಯಕರಾಗಿ ಹೋಗುತ್ತಿದ್ದರು. ಹೀಗಾಗಿ ಇವರು ಜಯಶಾಲಿಗಳಾದ ಅರಸರ ವಿಜಯೋತ್ಸವದಲ್ಲಿ ಭಾಗವಹಿಸುತ್ತಿರಬೇಕು. ಆದರೆ ಚಿತ್ರದುರ್ಗ ಮತ್ತು ಸುರಪುರದ ಅರಸರು ಯುದ್ಧದಲ್ಲಿ ಗೆದ್ದ ತರುವಾಯ ವಿಜಯೋತ್ಸವವನ್ನು ಆಚರಿಸಿದ ಸಂದರ್ಭಗಳು ಇತಿಹಾಸದಲ್ಲಿ ದಾಖಲಾಗಿವೆ.

ಇವರ ವಿಜಯೋತ್ಸವ ಸಂದರ್ಭದಲ್ಲಿ ಇಡೀ ರಾಜ್ಯದ ವಾತಾವರಣ ಹಬ್ಬದ ಸಂಭ್ರಮದಂತಿರುತ್ತಿತ್ತು. ಪುರಜನರು ಹಾಗೂ ಅರಮನೆಯ ಪರಿವಾರದವರು ಊರ ಹೊರಬಯಲಿನಲ್ಲಿ ವಿಜಯಿಯಾದ ಅರಸ ಹಾಗೂ ಸೈನಿಕರನ್ನು ಸ್ವಾಗತಿಸಲು ಕಾದಿರುತ್ತಿದ್ದರು. ಸುಮಂಗಲೆಯರು ಸಾಲಾಗಿ ನಿಂತು ಆರತಿ ಎತ್ತುತ್ತಿದ್ದರು. ಇಡೀ ನಗರ ವಿಜಯೋತ್ಸವಕ್ಕೆಂದು ಶೃಂಗಾರಗೊಂಡಿರುತ್ತಿತ್ತು. ಮನೆದೇವರು, ಕುಲದೇವರು ಹಾಗೂ ಆರಾಧ್ಯದೇವರುಗಳಿಗೆ ಪೂಜೆ ಸಲ್ಲಿಸುತ್ತಿದ್ದರು. ಕೆಲವರು ವಿಜಯೋತ್ಸವದ ದ್ಯೋತಕವಾಗಿ ವಿಜಯಸ್ತಂಭವನ್ನು ನಿಲ್ಲಿಸುತ್ತಿದ್ದರು. 'ಜಯಸ್ತಂಭ' ವೆಂಬುದು ಕಂಬವೇ ಆಗಿರಬೇಕಾಗಿಲ್ಲ. ಕಲ್ಲಿನ ಫಲಕದ ಮೇಲೆ ಜಯದ ವಿಷಯವನ್ನು ಬರೆಯಿಸಿದರೂ ಅದು 'ಜಯಸ್ತಂಭ'ವೆಂದೇ ಕರೆಯಿಸಿ ಕೊಳ್ಳುತ್ತದೆ.[೨೩೨] ಅಲ್ಲದೇ ತಮ್ಮ ಮನೆತನದ ಗುರುಗಳಿಗೆ ಇಲ್ಲವೆ ಮಠಗಳಿಗೆ ಊರುಗಳನ್ನು ದಾನಕೊಡುವುದಲ್ಲದೇ ದೇವರ ನೈವೇದ್ಯಕ್ಕೂ ದಾನಬಿಡುತ್ತಿದ್ದರು. ಶಾಸನಗಳನ್ನು ಕೊರೆಯಿಸುತ್ತಿದ್ದರು. ಕೆರೆ, ಕಾಲುವೆ, ಬಾವಿಗಳನ್ನು ಕಟ್ಟಿಸುತ್ತಿದ್ದರು. ಯುದ್ಧದಲ್ಲಿ ಗೆದ್ದು ಬಂದ ಅನೇಕ ವೀರರಿಗೆ ಬಿರುದು ಗಳನ್ನು ಕೊಟ್ಟು ಸನ್ಮಾನಿಸುತ್ತಿದ್ದರು.[೨೩೩]

ಚಿತ್ರದುರ್ಗದ ಅರಸು ಮನೆತನದಲ್ಲಿ ಹಿರೇ ಮದಕರಿನಾಯಕ (ಕ್ರಿ.ಶ. ೧೭೨೧-೧೭೪೮)ನ ಕಾಲದಿಂದ ವಿಜಯೋತ್ಸವ ಆಚರಿಸಿದ ಬಗ್ಗೆ ತಿಳಿಯುತ್ತದೆ. ಈತನಿಗಿಂತ ಮೊದಲು ಆಚರಿಸಿರಬಹುದು, ಆದರೆ ಅದಕ್ಕೆ ಪುರಾವೆಗಳ ಒಂದನೇ ಕಸ್ತೂರಿ ರಂಗಪ್ಪನಾಯಕನ ಕಾಲದಲ್ಲಿ ಕ್ರಿ.ಶ. ೧೬೩೭ರಲ್ಲಿ ಸೀರ್ಯದ

ರಂಗಪ್ಪನಾಯಕನು ಹಿರಿಯೂರಿಗೆ ಮುತ್ತಿಗೆ ಹಾಕಿದನು. ಆಗ ಮಸಗಲ್ಲಿನ ಬಳಿ ನಡೆದ ಕದನದಲ್ಲಿ ಸೀರ್ಯದ ರಂಗಪ್ಪನಾಯಕನು ಗುಂಡಿನಿಂದ ಹತನಾದನು. ಜಯಶಾಲಿಯಾದ ಕಸ್ತೂರಿ ರಂಗಪ್ಪನಾಯಕನು ಹಿರಿಯೂರಿನ ತೇರುಮಲ್ಲೇಶ್ವರಸ್ವಾಮಿಯನ್ನು ಸಂದರ್ಶಿಸಿ ಅರಮನೆಗೆ ಹೋದ[೨೩೪] ಎಂಬ ಪ್ರಸ್ತಾಪ ಮಾತ್ರ ಬರುತ್ತದೆ.

ಹಿರೇ ಮದಕರಿನಾಯಕನ ಕಾಲದಲ್ಲಿ ಕೆಳದಿಯ ಅರಸ ಬಸವಪ್ಪನಾಯಕ (ಕ್ರಿ.ಶ. ೧೭೩೯-೧೭೫೪)ನ ಸೂಚನೆಯಂತೆ ಕ್ರಿ.ಶ. ೧೭೪೧ರಲ್ಲಿ ಹರಪನಹಳ್ಳಿ, ಆನೆಗೊಂದಿ, ಸವಣೂರು ಮತ್ತು ರಾಯದುರ್ಗದ ಪಾಳೆಯಗಾರರು, ೮,೦೦೦ ಕುದುರೆ, ೨೦,೦೦೦ ಕಾಲ್ಬಲದೊಂದಿಗೆ ಚಿತ್ರದುರ್ಗದ ಅಧೀನದ ರಾಮಗಿರಿ ಕೋಟೆಯನ್ನು ವಶಪಡಿಸಿಕೊಂಡರಲ್ಲದೆ, ಚಿತ್ರದುರ್ಗದವರನ್ನು ಸಿಟ್ಟಿಗೆಬ್ಬಿಸಿ ಯುದ್ಧಕ್ಕೆ ಆಹ್ವಾನಿಸಿದರು. ಆಗ ಹಿರೇ ಮದಕರಿನಾಯಕನು ಅವರ ವಿರುದ್ಧ ಪ್ರತಿದಾಳಿಯನ್ನೆಸಗಿದಾಗ ಶತ್ರುಗಳು ಕೋಟೆಯನ್ನು ಬಿಟ್ಟು ಪಲಾಯನ ಮಾಡಿದರು. ಈ ಜಯದ ಗುರುತಿಗಾಗಿ ನಾಯಕನು ಚಿನ್ನಗಹಳೆಯನ್ನಿಡಿಸಿಕೊಂಡು ಕೋಟೆಯ ಒಳಹೋಗುತ್ತಾನೆ.[೨೩೫]ಅಲ್ಲಿ ವೀರಪೂಜೆ ಮಾಡಿಸಿಕೊಂಡು ಮದಕರಿಯು ಹಿಂತಿರುಗಿದನು.[೨೩೬] ಜಯ ಲಭಿಸಿದುದರಿಂದ ಹಿರೇ ಮದಕರಿನಾಯಕನ ಉತ್ಸಾಹಕ್ಕೆ ಮಿತಿಯೇ ಇಲ್ಲದಾಗಿತ್ತು. ಈ ಜಯದ ಸವಿನೆನಪಿಗಾಗಿ ಚಿತ್ರದುರ್ಗದಲ್ಲಿ ವಿಜಯೋತ್ಸವಕ್ಕೆ ಏರ್ಪಾಡಾಗಿತ್ತು. ಜನರ ಹೊಗಳಿಕೆಯ ಮಧ್ಯೆ ಪುರಪ್ರವೇಶ ಮಾಡಿದನು. ಶೋಭಿಸುವ ಗುಡಿತೋರಣಗಳ ವೈಭವದ ವಾತಾವರಣದಲ್ಲಿ ಸುಮಂಗಲೆಯರು ಮುಕ್ತಾಕ್ಷತೆಯೊಂದಿಗೆ ಆರತಿ ಬೆಳಗಿ ಸ್ವಾಗತಿಸಿದರು. ಏಕನಾಥೇಶ್ವರಿ, ಉತ್ಸವಾಂಬಾ, ಪಂಚಲಿಂಗೇಶ್ವರ ದೇವಾಲಯಗಳಲ್ಲಿ ರುದ್ರಾಭಿಷೇಕವನ್ನು ಮಾಡಲಾಯಿತು. ಅರ್ಚಕರ ವೇದ ಘೋಷಣೆಗಳೊಡನೆ ಈಶ್ವರನಿಗೆ ಪೂಜೆ, ನೈವೇದ್ಯ ಮಾಡಲಾಯಿತು. ಬಡಬಗ್ಗರಿಗೆ, ಬ್ರಾಹ್ಮಣರಿಗೆ ಹಾಗೂ ಜಂಗಮರಿಗೆ ಅನ್ನ ಸಂತರ್ಪಣೆಯನ್ನು ನಡೆಸಲಾಯಿತು.[೨೩೭]

ಹಿರೇಮದಕರಿನಾಯಕನ ಯಶೋದುಂದುಭಿಯನ್ನು ಕೇಳಿ ಮೈಸೂರು ಅರಸರಾದ ದೊಡ್ಡಕೃಷ್ಣರಾಜ ಒಡೆಯರು ರಾಜಗೋಪಾಲ ಎಂಬ ಆನೆಯನ್ನೂ, ಒಂದು ಉತ್ತಮಾಶ್ವವನ್ನೂ, ಒಂದು ಫಿರಂಗಿಯನ್ನೂ ನಜರು ಕಳುಹಿಸಿದ್ದರು. ಸೀರ್ಯದ ಸುಬೇದಾರ ಹಾಗೂ ಮರಾಠಿಯ ಸಿದ್ದೋಜಿರಾಯರು ಹಾಗೂ ಮರಾಠಿರಾಯರೂ ಈತನನ್ನು ಬಹಳ ಗೌರವದಿಂದ ಆದರಿಸುತ್ತಿದ್ದರು.[೨೩೮]

ದೇವಾಲಯಗಳಿಗೆ ದೊಡ್ಡಗಂಟೆಗಳನ್ನು ನೀಡಿ ಅವುಗಳ ಮೇಲೆ ಹೆಸರು, ವರುಷ ತೂಕ ಮುಂತಾದವುಗಳನ್ನು ಬರೆಯಿಸುವುದು ಬಹುಕಾಲದಿಂದ ಬಂದ ಪದ್ಧತಿ. ಅದರಂತೆ ವಿಜಯೋತ್ಸವದ ಸಂದರ್ಭದಲ್ಲಿ ಅರಸರು, ಸಾಮಂತರು ತಮ್ಮ ವಿಜಯದ ವಿಷಯವನ್ನು ಬರೆಯಿಸುವುದು ರೂಢಿಯಲ್ಲಿದೆ. ಅಲ್ಲದೆ, ಚಿನ್ನ, ಬೆಳ್ಳಿ, ಒಡವೆಗಳ ಮೇಲೂ ಇದೇ ರೀತಿಯಲ್ಲಿ ಬರೆಸಿರುವುದುಂಟು.[೨೩೯]

ಇಮ್ಮಡಿ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ. ೧೭೪೯-೧೭೫೪)ನು ಮರಾಠ ಸರದಾರ ಸಿದ್ದೋಜಿರಾಯನ ಮಗ ಮುರಾರಿರಾವ್, ಆದವಾನಿಯ ಸುಬೇದಾರ ಹಿದಾಯತ್ ಮೋತಿಖಾನರ ಬೆಂಬಲದಿಂದ ಶತ್ರುಗಳು ಹಾಕಿದ ಮಾಯಕೊಂಡದ ಮೇಲಿನ ಮುತ್ತಿಗೆಯನ್ನು ಎಬ್ಬಿಸಲು ವ್ಯವಸ್ಥೆ ಮಾಡಿದನು.[೨೪೦] ಶತ್ರುಗಳು ಅಲ್ಲಿಂದ ಪಲಾಯನ ಮಾಡಿದರು. ಅಲ್ಲಿಂದ ಚಿತ್ರದುರ್ಗಕ್ಕೆ ಹಿಂದಿರುಗಿದ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನು ವಿಜೃಂಭಣೆಯಿಂದ ವಿಜಯೋತ್ಸವವನ್ನು ಆಚರಿಸಿದನು. ಮುರಾರಿರಾಯನನ್ನು ಈ ಉತ್ಸವಕ್ಕೆ ಆಹ್ವಾನಿಸಿ ಅವನ ಸಮ್ಮುಖದಲ್ಲಿಯೇ ಮಾಯಕೊಂಡ ಕೋಟೆಯನ್ನು ಶತ್ರುಗಳಿಗೆ ಬಿಟ್ಟು ಕೊಡದೆ ಶೌರ್ಯದಿಂದ ಕಾದಿದ್ದ ರಣಕಲಿಗಳಿಗೆ, ರಾಣಿವೆ ಗುರಿಕಾರರು ಭರಮಣ್ಣ, ಕಂದನಕೋವಿ ಬಮ್ಮಣ್ಣ ಮುಂತಾದವರಿಗೆ ಯಥೋಚಿತವಾದ ಮರ್ಯಾದೆ ಮಾಡಿದನಲ್ಲದೆ ಮಾಯಕೊಂಡದ ವೀರ ಹನುಮಂತದೇವರಿಗೆ ಗಂಟೆಯೊಂದನ್ನು ಭಕ್ತಿಯಿಂದ ಅರ್ಪಿಸಿದನು.[೨೪೧]

ಮತ್ತೋಡಿನ ಹಾಲಪ್ಪನಾಯಕನು ಚಿತ್ರದುರ್ಗದ ದನಗಳನ್ನು ಹಿಡಿಯಲು ಹೈದರ್‌ಅಲಿ ಸಹಾಯ ಮಾಡಿರುತ್ತಾನೆ. ಆಗ ರಾಜಾ ವೀರಮದಕರಿನಾಯಕ (ಕ್ರಿ.ಶ. ೧೭೫೪-೧೭೭೯)ನು ಹೈದರನೊಂದಿಗೆ ಯುದ್ಧಕ್ಕೆ ತೆರಳುತ್ತಾನೆ. ಈ ಯುದ್ಧದಲ್ಲಿ ವೀರಮದಕರಿನಾಯಕನಿಗೆ ಗೆಲುವಾಗುತ್ತದೆ. ಆಗ ವೀರ ಮದಕರಿನಾಯಕನು ಆಚರಿಸಿದ ವಿಜಯೋತ್ಸವವನ್ನು ಚಿತ್ರದುರ್ಗದಬಖೈರು ವಿವರಣೆ ನೀಡುತ್ತದೆ.

ಊರಿನ ದೇವಸ್ಥಾನಗಳಾದ ಶ್ರೀಗೋಪಾಲಕೃಷ್ಣಸ್ವಾಮಿ, ಶ್ರೀವೆಂಕಟೇಶ್ವರ, ಶ್ರೀಸಿದ್ದೇಶ್ವರ, ಶ್ರೀ ಹಿಡಿಂಬೇಶ್ವರ, ಏಕನಾಥೇಶ್ವರಿ, ಶ್ರೀಮುಕ್ತ ಶಿವಾಲಯದ ಗಣೇಶ, ಶ್ರೀಬಲದೇವರಸ್ವಾಮಿ, ಪೇಟೆಯ ಮುಖ್ಯಪ್ರಾಣ, ಉಚ್ಚಂಗಮ್ಮ ಮುಂತಾದ ದೇವಾಲಯಗಳಿಗೆ ಪೂಜೆಮಾಡಿಸಿ ೨೧ ತೋಪು ಹೊಡಿಸುವುದು ಹಾಗೂ ಇಡೀ ಪಟ್ಟಣವನ್ನು ಅಲಂಕಾರ ಮಾಡಿಸುವುದು ಎಂದು ಷಹರದ ಕೊತ್ವಾಲನಿಗೆ ರಾಜಾ ವೀರಮದಕರಿನಾಯಕನು ಆದೇಶ ನೀಡಿದನು. ಅರಸನ ಆದೇಶದಂತೆ ಎಲ್ಲಾ ಮಹಲುಗಳಿಗೆ ಸುಣ್ಣ ಹಚ್ಚಿಸಲಾಯಿತು. ನಾಲ್ಕು ಪೇಟೆಗಳಿಗೂ, ತೋರಣ ಕಟ್ಟಿಸಿ ಶೃಂಗಾರ ಮಾಡಲಾಯಿತು. ಊರಿನ ಸುಮಂಗಲೆಯರು ಆರತಿ ಮಾಡಲು ನಿಂತರು, ಅರಸನು ಅಂಬಾರಿಯ ಮೇಲೆ ಆಗಮಿಸಿದನು. ಅದರಂತೆ ಇವನ ತಮ್ಮ ಪರಶುರಾಮಪ್ಪನವರು, ಭರಮಪ್ಪನಾಯಕರು, ಅಳಿಯ ಹುಚ್ಚಪ್ಪನಾಯಕರು, ದೊಡ್ಡ ಮದಕರಿನಾಯಕರು ಇವರೆಲ್ಲರೂ ಬೆಳ್ಳಿಯ ಅಂಬಾರಿಯ ಮೇಲೆ ಆಸೀನರಾಗಿದ್ದರು.

ಅಲ್ಲದೆ ಮುನಸುಬ್‌ದಾರರು, ದಿವಾನರು, ಬಕ್ಷಿ ಸರದಾರ್ ಮುಂತಾದವರು ಅಂಬಾರಿ ಆನೆಯ ಇಕ್ಕೆಲಗಳಲ್ಲಿ ಬರುತ್ತಿದ್ದರು. ಅರಸ ವೀರಮದಕರಿನಾಯಕರ ಹಿಂದೆ ಬೆಳ್ಳಿಕಟ್ಟಿನ ಬಾಲೆದವರು ಏಳುನೂರು ಮುಕ್ಕಣ್ಣ ಸುತ್ತು ಪಂಚಕಳಸದ ಬಾಲೆಯರು, ಎಡಭರ್ಜಿ, ಬಲಭರ್ಜಿ ಸವಾರರು ಮತ್ತು ಚೋಪದಾರರು, ಭೈರಕದವರು, ಊಳಿಗದವರು, ತಾಫೇದವರು, ಜೋಡಿ ಇಪ್ಪತ್ತೈದು ಭಾಟಾ ಭಟ್ಟಂಗಿ

ಮಾಡುವವರು ಹೊರಟಿದ್ದರು. ಈ ರೀತಿ ಮೆರವಣಿಗೆ ಸಾಗಿತ್ತು. ಅರಸ ಆರತಿ ಮಾಡುವವರಿಗೆ ಸಾವಿರ ರೂಪಾಯಿಗಳನ್ನು ಆರತಿಯಲ್ಲಿ ಹಾಕುತ್ತಾ ಬಂದನು. ನಂತರ ಅರಸ ಸಿಂಹಾಸನಾರೂಢನಾದನು. ಬ್ರಾಹ್ಮಣರಿಗೆ ಹತ್ತು ಸಾವಿರ ರೂಪಾಯಿಗಳನ್ನು ಧರ್ಮ ಮಾಡಿದನು. ಆಗ ಬ್ರಾಹ್ಮಣರ ಮಂತ್ರಾಕ್ಷತೆ ಶಿರಸಾವಹಿಸಿ ಅರಸನು ತೆಗೆದುಕೊಂಡನು. ಇನ್ನು ಯುದ್ಧದಲ್ಲಿ ಭಾಗವಹಿಸಿದ ಜನರಿಗೆ ಇನಾಮು, ಏಕನಾಮು, ಖಡೆತೋಡೆ, ಜೋಮಾಲೆ ಸರ, ಕುರಾ, ಕಾಲುಗಗ್ಗರ, ವಸ್ತ್ರ, ಪಾತ್ರೆ ವಗೈರೆ ನೀಡಿದನು. ಯುದ್ಧದಲ್ಲಿ ಸ್ವರ್ಗಸ್ಥರಾದ ಸೈನಿಕರ ಪತ್ನಿಯರಿಗೆ, ಮಕ್ಕಳಿಗೆ ಯೋಗ್ಯತಾನುಸಾರ ಅವರಿಗೆ ಆರ್ಥಿಕ ಸಹಾಯ ಮಾಡಿದರು. ಈ ರೀತಿ ಎಲ್ಲರಿಗೂ ಕಾಣಿಕೆಗಳನ್ನು ಅರ್ಪಿಸಿ ಅರಸನು ಅರಮನೆಗೆ ನಡೆದನು.[೨೪೨]

ವಿಜಾಪುರದ ಮೇಲೆ ಮೊಗಲ್‌ರು ದಾಳಿ ಮಾಡಿದಾಗ ವಿಜಾಪುರದವರ ಪರವಾಗಿ ತೆರಳಿ ಅವರನ್ನು ಸುರಪುರದ ಅರಸ ಹಸರಂಗಿ ಪಾಮನಾಯಕ (ಕ್ರಿ.ಶ. ೧೬೬೬-೧೬೮೭)ನು ಸೋಲಿಸಿದನು. ಔರಂಗಜೇಬನಿಂದ ಸದ್ ಆಫ್‌ರೀನ್ ಬರ್‌ಬೇಡರಾನ್, ಹಜಾರ್ ನಿಫರೀನ್ ಬಿರ್ ಬಹದ್ದೂರಾನ್(ಬೇಡರಿಗೆ ನೂರು ಧನ್ಯವಾದಗಳು, ಬಾದುರರಿಗೆ ಸಾವಿರ ತಿರಸ್ಕಾರಗಳು) ಎಂದು ಹೊಗಳಿಸಿಕೊಂಡನು.[೨೪೩] ಹೀಗೆ ಹಸರಂಗಿ ಪಾಮನಾಯಕ ಮೊಗಲ್ ಸೇನೆಯೊಂದಿಗೆ ಹೋರಾಡಿ ಆದಿಲ್‌ಶಾಹಿಗಳಿಗೆ ಕೀರ್ತಿ ತಂದುದಕ್ಕಾಗಿ, ಆದಿಲ್ ಶಾಹಿಗಳ ದರ್ಬಾರಿನಲ್ಲಿ ಹಸರಂಗಿ ಪಾಮನಾಯಕನಿಗೆ ಹತ್ತುಸಾವಿರ ಸೇನೆಯ ಮುನ್ಸುಬ್‌ದಾರಿಕೆ ನೀಡುವುದರ ಜೊತೆಗೆ ಈತನನ್ನು ಗೌರವಿಸಿದನು. ಇದನ್ನು ಸ್ವೀಕರಿಸಿದ ಪಾಮನಾಯಕನು ತನ್ನ ರಾಜಧಾನಿ ವಾಗಿನಗೇರಿಯತ್ತ ಬರತೊಡಗಿದನು. ಸುದ್ದಿ ತಿಳಿದ ವಾಗಿನಗೇರಿಯ ಪ್ರಧಾನಿಗಳು, ಸಿಬ್ಬಂದಿಯೊಡನೆ, ಮಂಗಳವಾದ್ಯಗಳೊಂದಿಗೆ ಸ್ವಾಗತಕ್ಕಾಗಿ ಕಾಯ್ದರು. ಬೇಡರ ಪಡೆಯವರು ರುಕ್ಮಾಪುರದಲ್ಲಿ ತಮ್ಮ ಅರಸನನ್ನು ಎದುರುಗೊಂಡರಲ್ಲದೆ ಆತನ ವಿಜಯೋತ್ಸವದಲ್ಲಿ ನೌಬತ್ತು, ಡೊಳ್ಳು, ಕೊಂಬು, ಕಹಳೆಗಳ ವಾದ್ಯ ವೈಭವದೊಂದಿಗೆ ಮೆರವಣಿಗೆಯ ಮುಖಾಂತರ ಅರಸನನ್ನು ಕೋಟೆಯ ಹೆಬ್ಬಾಗಿಲಿಗೆ ಕರೆತಂದರು. ಮಹಿಳೆಯರು ಆರತಿ ಎತ್ತಿ ದೃಷ್ಟಿದೋಷ ನಿವಾರಿಸಿದರು. ಪಂಡಿತೋತ್ತಮರು ಪೂರ್ಣಕಲಶದೊಂದಿಗೆ ವೇದಮಂತ್ರ ಹೇಳುತ್ತಾ ರಾಜನಿಗೆ ಸ್ವಾಗತ ಕೋರಿದರು. ವಿಜಯೋತ್ಸವದ ಸಂಕೇತವಾಗಿ ಅದೇ ವೇಳೆಗೆ ವಾಗಿನಗೇರಿಯ ಕೋಟೆಗಳ ಬತೇರಿಯಗಳ ಮೇಲೆ ತೋಪುಗಳ ಧ್ವನಿ ಮೊಳಗಿತು. ನಂತರ ಹಸರಂಗಿ, ಪಾಮನಾಯಕ ತನ್ನ ಕುಲದೈವವಾದ ವಾಗಿನಗೇರಿಯ ವೇಣುಗೋಪಾಲಸ್ವಾಮಿಯ ದೇವಾಲಯಕ್ಕೆ ತೆರಳಿ ಪೂಜೆಮಾಡಿ, ಅರ್ಚಕರಿಂದ ಆಶೀರ್ವಾದ ಪಡೆದು ದರ್ಬಾರಿಗೆ ಬಂದನು. ಸಾಮಂತರು, ಸರದಾರರು ವಂದನೆ ಸಲ್ಲಿಸಿದರು.[೨೪೪] ಆಗ ಸೈನಿಕರಿಗೆ ಹಾಗೂ ಪರಿವಾರಕ್ಕೆ ಬಗೆ ಬಗೆಯ ಭೋಜನಗಳಿಂದ ತೃಪ್ತಿಪಡಿಸಿದನು. ಅರಸನ ಆಜ್ಞೆಯಂತೆ ಸರ್ವರನ್ನೂ ಗೌರವಿಸಲಾಯಿತು.

ಸುರಪುರ ಅರಸು ಮನೆತನದಲ್ಲಿ ಪೀತಾಂಬರಿ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೮೭-೧೭೨೬)ನ ಆಳ್ವಿಕೆಯಲ್ಲಿ ಕ್ರಿ.ಶ. ೧೭೦೫ರಲ್ಲಿ ಮೊಘಲರು ರಾಜಧಾನಿ ವಾಗಿನಗೇರಿಯ ಮೇಲೆ ಮುತ್ತಿಗೆ ಹಾಕಿದರು. ಮೊಗಲರ ಭಯಂಕರ ಹೊಡೆತಕ್ಕೆ ಸುರಪುರದ ಸೈನ್ಯ ತತ್ತರಿಸಿ ಹೋಯಿತು. ವಾಗಿನಗೇರಿಕೋಟೆ ಔರಂಗಜೇಬನ ವಶವಾಯಿತು. ಅರಸ ಪಿಡ್ಡನಾಯಕ ವಾಗಿನಗೇರಿಯನ್ನು ತೊರೆದು ಕನಕಗಿರಿಯ ಹತ್ತಿರದ ಎಮ್ಮಿಗುಡ್ಡಕ್ಕೆ ತೆರಳಿದನು. ಒಂದುವರ್ಷದವರೆಗೆ ಅಲ್ಲಿಯೇ ಇದ್ದು, ನಂತರ ಸೈನ್ಯ ಸಂಘಟಿಸಿಕೊಂಡು ಮರಳಿ ವಾಗಿನಗೇರಿಯ ಮೇಲೆ ದಾಳಿಗೈದ, ಮೊಗಲ್ ಸರದಾರರು ಬೇಡಪಡೆಯ ಹೊಡೆತಕ್ಕೆ ದಿಕ್ಕೆಟ್ಟು ಓಡಿದರು. ಆರುವರ್ಷಗಳವರೆಗೆ ಕೈಬಿಟ್ಟು ಹೋಗಿದ್ದ ವಾಗಿನಗೇರಿಕೋಟೆ ಮರಳಿ ಪಡೆಯುವ ಮೂಲಕ ಅದರ ಮೇಲೆ ವಿಜಯದ ಹನುಮಧ್ವಜವನ್ನು ಹಾರಿಸಿದನು.[೨೪೫] ವಿಜಯಶಾಲಿಯಾದ ಪೀತಾಂಬರಿ ಬಹರಿ ಪಿಡ್ಡನಾಯಕನು ಸುರಪುರ ಸಂಸ್ಥಾನವನ್ನು ಸ್ಥಾಪಿಸಿದನಲ್ಲದೆ, ಶ್ರೀವೇಣುಗೋಪಾಲ ಮಂದಿರವನ್ನು ಕಟ್ಟಿಸಿದನು.[೨೪೬]

ಇಮ್ಮಡಿ ಪಾಮನಾಯಕ (ಕ್ರಿ.ಶ. ೧೭೨೭-೧೭೪೧)ನು ಮರಾಠರ ಪೇಶ್ವೆಗಳನ್ನು ಹಾಗೂ ಪೇಶ್ವೆಯ ಸೇನಾನಿ ಆನಂದರಾಯನನ್ನು ರಣರಂಗದಿಂದ ಓಡುವಂತೆ ಮಾಡಲು ಅವರು ಬಿಡಾರ ಹೂಡಿದ ಹೊನ್ನಳ್ಳಿಗೆ ಮುತ್ತಿಗೆ ಹಾಕಿದನು. ೯ ತಾಸುಗಳವರೆಗೆ ಕಾದನು. ಗೆಲ್ಲುವ ಉಪಾಯ ಕಾಣದೆ ಆನಂದರಾಯನು ಓಡಿದನು. ಆಗ ಪಾಮನಾಯಕ ಇನ್ನು ಮೂರು ಹರದಾರಿಯವರೆಗೆ ಬೆನ್ನಟ್ಟಿದನು.[೨೪೭] ನಂತರ ಊರಿಗೆ ಮರಳಿ ವಿಜಯೋತ್ಸವವನ್ನು ಆಚರಿಸಿ ತನ್ನ ಸೈನಿಕರಿಗೆ ಹಾಗೂ ಪರಿವಾರಕ್ಕೆ ಬಗೆಬಗೆಯ ಭೋಜನ ನೀಡಿ ಸಚಿವ ವೀರಪ್ಪ ಹಾಗು ಭಾಸಪ್ಪರಿಗೆ ಎಲ್ಲಾ ಪರಿವಾರದ ಲೆಕ್ಕ ಮಾಡಿ ಜಾಗೀರು, ಹೊಲಗಳು, ಟಣಕೆದಾರಿ ಮತ್ತು ಸುತ್ತ ಹದಿನಾಲ್ಕು ಸಮತಿನಲ್ಲಿ ಮೀರಾಸಿಗಳನ್ನು ಕೊಡಲು ಆದೇಶಿಸಿದನು.[೨೪೮] ಇದನ್ನು ಪುರುಷಕಾರಿ ಲೋಕಯ್ಯನ ಗ್ರಂಥ ಈ ರೀತಿ ವಿವರಣೆಯನ್ನು ನೀಡುತ್ತದೆ :

ಪರಿಪರಿಯ ದ್ರವ್ಯಂಗಳೇರಿಸಿ
ವರಮಹೋತ್ಸವದಿಂದ ಮಿಗೆ ಜಯ
ಶಿರಿಸಹಿತ ಜಯಭೇರಿ ಮೊ(ಹೊ)ಯಿಸುತ ಬಂದ ಸುರಪುರಕೆ[೨೪೯]

ಮುಜಫರ್ ಜಂಗ್, ಚಂದಾಸಾಹೇಬ ಮತ್ತು ಫ್ರೆಂಚರನ್ನು ತನ್ನಿಂದ ಸೋಲಿಸಲಾಗದೆ, ಸುರಪುರದ ಅರಸ ಮೊಂಡಗೈ ವೆಂಕಟಪ್ಪನಾಯಕ (ಕ್ರಿ.ಶ. ೧೭೪೭-೫೨)ನ ಸಹಾಯವನ್ನು ಪಡೆದ ನಾಸರಜಂಗ ಅರಸನನ್ನು ಯುದ್ಧಕ್ಕಾಗಿ ಆರ್ಕಾಟಕ್ಕೆ(ಪಾಂಡಿಚೇರಿ) ಕರೆದುಕೊಂಡು ಹೋದನು. ಪಾಂಡಿಚೇರಿ ಯುದ್ಧದಲ್ಲಿ ಸುರಪುರದವರು ಏಕಾಂಗಿ ವೀರರಾಗಿ ಯುದ್ಧಮಾಡಿ ಅಲ್ಪಾವಧಿಯಲ್ಲಿಯೇ ದುರ್ಗಮವಾದ ಪಾಂಡಿಚೇರಿ ಕೋಟೆಯನ್ನು ಜಯಿಸಿದ್ದರು. ಸುರಪುರದ ವೀರಬೇಡರು, ದಖನಿಗಳು, ಕೊಟಗಾರರು ಪ್ರಾಣತ್ಯಾಗ ಮಾಡಿದ ವೀರಸೈನಿಕರ ಪ್ರತಿಫಲವೇ ಈ ಜಯವಾಗಿತ್ತು. ಆ ವಿಜಯೋತ್ಸವದ ಆನಂದದಲ್ಲಿ ಮೊಂಡಗೈ

ವೆಂಕಟಪ್ಪನಾಯಕ ಹಾಗೂ ನವಾಬ ನಾಸರಜಂಗನು, ಒಬ್ಬರಿಗೊಬ್ಬರು ಅಪ್ಪಿಕೊಂಡಾಗ ಅರಸನ ಕಣ್ಣಿನಲ್ಲಿ ಬಾಷ್ಪಗಳುದುರಿದವು. ವಿಜಯೋತ್ಸವವನ್ನು ಕ್ಷಣಕಾಲ ನಿಲ್ಲಿಸುತ್ತಾನೆ. ಕಾರಣ ಆತನೊಂದಿಗೆ ಯುದ್ಧದಲ್ಲಿ ಭಾಗವಹಿಸಿದ್ದ ಎಷ್ಟೋ ಜನ ಕೊಟಗಾರರು ಮೃತಪಟ್ಟಿದ್ದರು.[೨೫೦] ಅವರ ಕುರಿತಾಗಿ ಮರುಕ, ಕಳವಳ, ತಳಮಳಗೊಂಡ ಅರಸನಿಗೆ ಎಲ್ಲಿಲ್ಲದ ದುಃಖವಾಗಿತ್ತು.

ಅದೇ ಸಂದರ್ಭದಲ್ಲಿ ನವಾಬ ನಾಸರಜಂಗನೇ ಮೊಂಡಗೈ ವೆಂಕಟಪ್ಪನಾಯಕನ ಮತ್ತು ವೀರಸೈನಿಕರ ಗಾಯಗಳನ್ನು ತೊಳೆದು ಆರೈಕೆ ಮಾಡಿದನು. ಇದು ಈತನು ಈ ಸೈನಿಕರ ಕುರಿತಾಗಿ ಹೊಂದಿದ ಗೌರವವನ್ನು ಸೂಚಿಸುತ್ತದೆ. ಆಗ ಅರಸನ ಸೈನ್ಯದ ಖರ್ಚಿನ ಜೊತೆಗೆ ಹೈದ್ರಾಬಾದ್ ಪಟ್ಟಣದ ದಾರಿಯಲ್ಲಿ ಬರುವ ಕೆಲವು ಮುಖ್ಯ ಸ್ಥಳಗಳ ಆದಾಯದಲ್ಲಿ ಎರಡು ಆಣೆಯಂತೆ 'ಟಣಕೇ ದಾರಿ' ಎಂಬ ರುಸುಮು ಅರಸನಿಗೆ ಕೊಡಲಾಯಿತು. ಈ ಕಾಳಗದಿಂದಲೇ ಅರಸನಿಗೆ 'ರಾಬಜಂಗ್ ಮುತಹರುದ್ದೌಲಾ ಬಬರುಲ್ಮ್ಮಲಕ' ಎಂಬ ಬಿರುದು ಹೈದ್ರಾಬಾದ್ ನಿಜಾಮನಿಂದಲೇ ನೀಡಲ್ಪಟ್ಟಿತು.[೨೫೧]

ವೆಂಕಟಪ್ಪನಾಯಕ ವಿಜಯೋತ್ಸವದೊಂದಿಗೆ ಪಾಂಡಿಚೇರಿಯಿಂದ ಧನವನ್ನು ಸಂಗ್ರಹಿಸಿಕೊಂಡು ಬರುವಾಗ ತಿರುಪತಿಯ ಮೇಲೆ ಮ್ಲೇಚ್ಛರು ಆಕ್ರಮಣ ಮಾಡುವ ಸುದ್ದಿ ತಿಳಿಯಿತು. ಕೂಡಲೇ ತನ್ನ ಆರಾಧ್ಯದೇವ ವೆಂಕಟರಮಣನ ರಕ್ಷಣೆಗಾಗಿ ತಿರುಪತಿಗೆ ಹೋಗಿ ಅವರನ್ನು ಹಿಮ್ಮೆಟ್ಟಿಸಿ, ತಿರುಪತಿ ದೇವಾಲಯಕ್ಕೆ ತನ್ನ ವಿಜಯೋತ್ಸವದ ಸಂಕೇತವಾಗಿ ಧನಕನಕಗಳನ್ನು ಅರ್ಪಿಸಿ ತನ್ನ ತವರೂರಾದ ಸುರಪುರಕ್ಕೆ ಬರುತ್ತಾನೆ.[೨೫೨] ಇತ್ತ ಸುರಪುರದಲ್ಲಿ ವಿಜಯಿಯಾದ ಅರಸ ಮೊಂಡಗೈ ವೆಂಕಟಪ್ಪನಾಯಕನು ಸೈನ್ಯದೊಂದಿಗೆ ರಾಜಧಾನಿಗೆ ಮರಳುತ್ತಿರುವ ವಿಷಯ ತಿಳಿದು ಪ್ರಜೆಗಳೆಲ್ಲರೂ ಉತ್ಸಾಹದಿಂದ ಸ್ವಾಗತಿಸಿದರು. ಅರಸನ ಆಗಮನವನ್ನು ಸೂಚಿಸಲು ಕೋಟೆಗಳ ಮೇಲಿರಿಸಿದ ತೋಪುಗಳು ಧ್ವನಿ ಮಾಡಿದವು. ಅರಸನ ಶೌರ್ಯ, ಸಾಹಸದ ಮಾತುಗಳು ರಾಜಧಾನಿಯ ತುಂಬೆಲ್ಲ ಹರಡಿದವು. ಅರಸನ ಹಿಂಭಾಗದಲ್ಲಿ ಹನುಮಧ್ವಜ ಅಭಿಮಾನದಿಂದ ನಲಿಯುತ್ತಿತ್ತು. ವೇಣುಗೋಪಾಲಸ್ವಾಮಿಯ ಪೂಜೆಗಾಗಿ ತೆರಳಿದರು. ಪ್ರಜೆಗಳು ಆ ದೇವರ ಹೆಸರಿನೊಂದಿಗೆ ಹಾಗೂ ಅರಸನ ಹೆಸರಿನಿಂದ ಜೈಜೈಕಾರ ಹಾಕಿದರು. ನಂತರ ಅರಸ ಯುದ್ಧದಲ್ಲಿ ಮಡಿದ ವೀರಸೈನಿಕರ ಸವಿನೆನಪಿಗಾಗಿ ಅವರ ಬಂಧುಗಳಿಗೆ ಅಪಾರ ಧನವನ್ನು ನೀಡಿ ಗೌರವಿಸಿದನು. ಆದರೂ ತನ್ನ ಪಕ್ಷಕ್ಕಾದ ಸಾವು ನೋವುಗಳು ಕೀರ್ತಿವೆತ್ತ ಯೋಧರ ಮರಣ, ಅಪಾರ ವಸ್ತುಗಳ ಹಾನಿ, ಹೀಗೆ ಹತ್ತಾರು ವಿಷಯಗಳು ಅರಸನ ತಲೆ ತಿನ್ನುತ್ತಿದ್ದವು. ಪುರುಷಕಾರಿ ಲೋಕಯ್ಯನ ಗ್ರಂಥ ಈ ರೀತಿ ವಿವರಣೆಯನ್ನು ನೀಡುತ್ತದೆ.

ಬಾದಷಹನೂ ರಾಜನಿಗೆ ಅನೇಕ ಬೊಹುಮಾನ ವಗೈರಾ ಕೊಟ್ಟು |
ಕಲಬುರಗೀ | ಚಿತ್ತಾಪುರ | ದಂಡೋತಿ | ಸೇಡುಮಾ | ಪಂಚಯಾಲ್ |
ಈ ತಾಲೂಕಿಗಳಲ್ಲಿರುಸುಂವರ್ತನ | ಫಶಿಕೀ | ಫಲಗೀ | ಅಡ್ನೋಡಿ

ಬೇಗಾರು ಸಹಿತ ೩೦,೦೦೦೦ದ ರೂಪಾಯಿ ರುಸುಂ ಸನದು
ಮಾಡಸಿ ಕೊಟ್ಟರು || ಆಗ್ಗೆ ರಾಜನು ಭಾಳ ಖುಷೀ ಆಗಿ ಹುಜಿರಿನ
ಅಪ್ಪಣೀ ತೆಗೆದುಕೊಂಡು | ಸುರಪುರಕ್ಕೆ ಬಂದು ವೇಣುನಾದನ
ದರ್ಶನ ತೆಗೆದುಕೊಂಡು | ದೇವ ಬ್ರಾಹ್ಮಣರಿಗೆಲ್ಲರಿಗೂ ದಾನವಂ
ಕೊಟ್ಟು | ದರ್ಬಾರು ಪ್ರವೇಶವಂ ಮಾಡಿದರೂ|[೨೫೩]

ಈ ರೀತಿ ಕರ್ನಾಟಕದ ನಾಯಕ ಅರಸರು ಯುದ್ಧದಲ್ಲಿ ಜಯಶಾಲಿಗಳಾದಾಗ ವಿಜಯೋತ್ಸವವನ್ನು ಆಚರಿಸುತ್ತಿದ್ದರು. ಇವರ ವಿಜಯೋತ್ಸವದ ಸವಿನೆನಪಿಗೆ ಬಡಬಗ್ಗರಿಗೆ, ಮಡಿದ ಸೈನಿಕರ ಕುಟುಂಬಕ್ಕೆ, ಬ್ರಾಹ್ಮಣರಿಗೆ, ದೇವರಿಗೆ ದಾನಗಳನ್ನು ನೀಡಿದರೆ ಹೊರತು, ಶಾಸನಗಳನ್ನು, ವಿಜಯಸ್ತಂಭಗಳನ್ನು ನೆಟ್ಟ ಸಂದರ್ಭಗಳು ಇಲ್ಲ. ಬಹುಶಃ ಈ ನಾಯಕ ಅರಸರಿಗೆ ತಮ್ಮ ಹೆಸರು ವಿಜಯೋತ್ಸವದೊಂದಿಗೆ ಶಾಶ್ವತವಾಗಿ ಉಳಿಯಲಿ ಎಂಬ ಆಕಾಂಕ್ಷೆ ಇರಲಿಲ್ಲವೆಂದು ಹೇಳಬಹುದು. ಇವರಿಗೆ ತಮ್ಮ ಹೆಸರಿಗಿಂತ ರಾಜ್ಯದ ಒಳಿತು ಬಹಳ ಮುಖ್ಯವಾಗಿತ್ತು ಎನ್ನಬಹುದು.

## ೪.೭ ಕಪ್ಪಕಾಣಿಕೆ ಪದ್ಧತಿ

ಒಂದು ರಾಜಮನೆತನದ ಬೊಕ್ಕಸದ ಖರ್ಚುವೆಚ್ಚಗಳು ಆ ಮನೆತನದ ಆರ್ಥಿಕ ಸ್ಥಿತಿಗತಿಯನ್ನ ವಲಂಬಿಸಿರುತ್ತಿದ್ದವು. ಹೀಗಾಗಿ ಕೆಲವು ಬಲಿಷ್ಠ ಅರಸುಮನೆತನಗಳು ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುವುದಕ್ಕೆ ಇಲ್ಲವೇ ಕೆಲವರನ್ನು ಅಧೀನದಲ್ಲಿಟ್ಟುಕೊಂಡು ಅಧಿಕಾರ ಚಲಾಯಿಸಲು ಅನೇಕ ಮಾರ್ಗಗಳನ್ನು ಅನುಸರಿಸುತ್ತಿದ್ದವು. ಆ ಮಾರ್ಗಗಳಲ್ಲಿ ಕಪ್ಪಕಾಣಿಕೆ ಪದ್ಧತಿಯೂ ಒಂದು. ಕಪ್ಪ ಎಂದರೆ ಸಾಮಂತರಿಂದ ಅಧಿರಾಜನಿಗೆ ನಿಯತವಾಗಿ ಸಲ್ಲುವ ಹಣ. ಅಂದರೆ ಸಾಮಂತರು ಚಕ್ರವರ್ತಿಗೆ ಕೊಡುವ ಕಾಣಿಕೆಯಾಗಿತ್ತು.[೨೫೪] ಕಪ್ಪಕಾಣಿಕೆಯು, ಪೊಗದಿ, ಖಂಡಣಿ, ನಜರು, ನಜರಾಣೆ ಎಂಬಿತ್ಯಾದಿ ಸಮಾನಾರ್ಥಕ ಪದಗಳನ್ನೂ ಹೊಂದಿರುವುದುಂಟು. ಇಲ್ಲಿ ಮಾಂಡಲೀಕರು ತಮ್ಮ ರಾಜ್ಯದ ಉತ್ಪನ್ನದಲ್ಲಿ ಒಂದಿಷ್ಟನ್ನು ಕಪ್ಪಕಾಣಿಕೆಯೆಂದು ತಾವಾಗಿಯೇ ತಮ್ಮ ಮೇಲಿನ ರಾಜ ಅಥವಾ ಸಾಮ್ರಾಟನಿಗೆ ಸಲ್ಲಿಸಬೇಕಾಗುತ್ತಿತ್ತು. ಒಂದು ವೇಳೆ ಮಾಂಡಲಿಕರಿಂದ ಕಪ್ಪಕಾಣಿಕೆಯು ಬಾರದಿದ್ದರೆ ಅವರ ಮೇಲಿನ ರಾಜ ಆ ರಾಜ್ಯವನ್ನು ಆಕ್ರಮಿಸುವುದರೊಂದಿಗೆ ಧನಕನಕ ಸಂಗ್ರಹ ಮಾಡಿಕೊಳ್ಳುತ್ತಿದ್ದನು.

ಕರ್ನಾಟಕದ ನಾಯಕ ಅರಸರು ಮೊದಲು ಪಾಳೆಯಗಾರರಾಗಿದ್ದಾಗ ತಮ್ಮ ಪ್ರದೇಶದಲ್ಲಿ ಬಿಗಿಯಾದ ಕಾನೂನುಗಳನ್ನು ಜಾರಿಗೊಳಿಸುತ್ತಾ, ಅಲ್ಲಿನ ಉತ್ಪನ್ನದಲ್ಲಿ ಪಾಲನ್ನು ಪಡೆಯುತ್ತಾ, ತಮ್ಮ ಅಧಿಕಾರ, ಪ್ರಭಾವವನ್ನು ಉಪಯೋಗಿಸುವುದಲ್ಲದೆ ತಾವು ಸಂಗ್ರಹಿಸಿದ ದ್ರವ್ಯದಲ್ಲಿ ತಮ್ಮ ಮೇಲಿನ ಪ್ರಭುವಿಗೆ ನಿಗದಿಪಡಿಸಿದ ಸಮಯಕ್ಕೆ ಸರಿಯಾಗಿ ಪೊಗದಿಯನ್ನು ಸಲ್ಲಿಸುವುದರ ಮೂಲಕ ತಮ್ಮ ಸ್ವಾಮಿಭಕ್ತಿಯನ್ನು ತೋರ್ಪಡಿಸಿಕೊಳ್ಳುತ್ತಿದ್ದರು. ಯುದ್ಧಗಳಲ್ಲಿ ಭಾಗವಹಿಸಿ ತಮ್ಮ ಶೌರ್ಯಸಾಹಸಗಳನ್ನು ಪ್ರದರ್ಶಿಸುತ್ತಾ, ಪ್ರಭುವಿನಿಂದ ಬಿರುದುಗಳನ್ನೂ ಪಡೆದು, ಕೆಲವು ಸಲ ತಾವು ಪ್ರಭುವಿನಂತೆ ವರ್ತಿಸುತ್ತಿದ್ದರು.

ಬಲವಿಲ್ಲದ ಸಣ್ಣಪುಟ್ಟ ಅರಸರು ಬಲಿಷ್ಠನಾದವನಿಗೆ ತಲೆಬಾಗಿ ಪೊಗದಿಹಣವನ್ನು ಸಲ್ಲಿಸುವುದರ ಮೂಲಕ ಸಾಮಂತರಾಗುತ್ತಿದ್ದರು. ತಮ್ಮನ್ನು ತಾವು ಅರಸರೆಂದು ಕರೆದುಕೊಂಡರೂ, ಪ್ರಭುಗಳಿಗೆ ಅಧೀನರಾಗಿದ್ದು ಆಡಳಿತ ಕಾರ್ಯ ನಿರ್ವಹಿಸಬೇಕಾಗಿತ್ತು[೨೫೫] ಎಂಬ ಅಭಿಪ್ರಾಯವನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ವ್ಯಕ್ತಪಡಿಸಿರುವುದು ಅರ್ಥಪೂರ್ಣವಾಗಿದೆ.

ವಿಜಯನಗರದ ಅಧೀನದಲ್ಲಿ ಅನೇಕ ಪಾಳೆಯಪಟ್ಟುಗಳು ಹುಟ್ಟಿದವು. ಇವು ವಿಜಯನಗರದ ಅರಸರಿಗೆ ವಿಧೇಯರಾಗಿದ್ದರೂ, ವಿಜಯನಗರದ ಅಸಹಾಯಕ ಸ್ಥಿತಿಯಲ್ಲಿ ಸ್ವತಂತ್ರಗೊಳ್ಳಬೇಕೆಂಬ ಹಂಬಲದಲ್ಲಿದ್ದವು. ವಿಜಯನಗರದ ಆಡಳಿತದಲ್ಲಿದ್ದ ಅನೇಕ ಅಧಿಕಾರಿಗಳು, ಸೇನಾಧಿಕಾರಿಗಳು ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು. ಆಗ ಅಧಿರಾಜರು ಇವರನ್ನು ವಿರೋಧಿಸಲಿಲ್ಲ. ಕಾರಣ ಅವರನ್ನು ಅಂಕಿತದಲ್ಲಿಟ್ಟುಕೊಳ್ಳುವುದು ಸುಲಭವಾಗಿರಲಿಲ್ಲ. ಹೀಗಾಗಿ ಇವರ ನಾಮಮಾತ್ರ ಸಾಮಂತಿಕೆ ಮತ್ತು ಅಧೀನತೆಯನ್ನು ಒಪ್ಪಿ ಅವರು ಆಗಲೋ, ಈಗಲೋ ಕೊಡುತ್ತಿದ್ದ ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತಾ ತಾವು ಅವರ ನಾಮಮಾತ್ರವಾದರೂ ಸರಿಯೇ ಅಧಿರಾಜರು ಎನ್ನುವುದರಲ್ಲೇ ತೃಪ್ತರಾಗಿದ್ದರು.[೨೫೬] ಹೀಗಾಗಿ ಸಾಮಾನ್ಯವಾಗಿ ಎಲ್ಲಾ ಪಾಳೆಯಗಾರರು ಆ ಸಂದರ್ಭದಲ್ಲಿ ಕಪ್ಪಕಾಣಿಕೆಯನ್ನು ನೀಡುವ ಮೂಲಕ ವಿಜಯನಗರಕ್ಕೆ ವಿಧೇಯರಾಗಿದ್ದರು.

ಡೊಮಿಂಗೋಸ್ ಪಿಯಾಸ್ ವಿಜಯನಗರದ ಅರಸರು ಸ್ವೀಕರಿಸುತ್ತಿದ್ದ ಕಪ್ಪಕಾಣಿಕೆಯ ಕುರಿತಾಗಿ ಹೀಗೆ ಹೇಳುತ್ತಾನೆ : ಬಿಸನಗರ ರಾಜನಿಗೆ ೫ ಮಂದಿ ಸಾಮಂತ ರಾಜರಿದ್ದಾರೆ. ಇವರಲ್ಲದೆ ಅನೇಕ ಸರದಾರರು, ದಂಡನಾಯಕರು ಅನೇಕ ಚಿಕ್ಕಪುಟ್ಟ ರಾಜ್ಯಗಳ ಒಡೆಯರಾಗಿದ್ದಾರೆ. ರಾಜನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಾರೆ. ಅದೇ ರೀತಿ ಪ್ರತಿವರ್ಷ ರಾಜನ ಹುಟ್ಟುಹಬ್ಬದ ದಿನ ಅತ್ಯಂತ ಅಮೂಲ್ಯವಾದ ಬಹು ಬೆಲೆಯುಳ್ಳ ಆಭರಣಗಳನ್ನು ಕಾಣಿಕೆಯನ್ನಾಗಿ ಅರ್ಪಿಸುತ್ತಾರೆ.[೨೫೭] ರಾಜನಿಗೆ ಮಗಳೋ ಮಗನೋ ಜನಿಸಿದರೆ ರಾಜ್ಯದ ಎಲ್ಲ ನಾಯಕರು ಹಾಗೂ ಗಣ್ಯರುಗಳು ಉಡುಗೊರೆಯಾಗಿ ಹಣವನ್ನು ಇಲ್ಲವೇ ಆಭರಣವನ್ನು ಅರ್ಪಿಸಬೇಕಾಗಿತ್ತು. ಹಾಗೆಯೇ ಪ್ರತಿವರ್ಷವು ರಾಜನ ಹುಟ್ಟುಹಬ್ಬದ ದಿನದಂದು ಕಾಣಿಕೆಯನ್ನು ಒಪ್ಪಿಸಬೇಕಿತ್ತು. ಹೊಸ ವರುಷದ ಆರಂಭದ ದಿನವೂ ಈ ನಾಯಕರುಗಳು ರಾಜನಿಗೆ ಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಅಲ್ಲದೆ ಪಟ್ಟಾಭಿಷೇಕ, ವಿವಾಹೋತ್ಸವ, ಇಲ್ಲವೇ ರಾಜ್ಯಕ್ಕೆ ಆರ್ಥಿಕ ಮುಗ್ಗಟ್ಟಾದಾಗ, ಯುದ್ಧದಲ್ಲಿ ಸೋತಾಗ, ಯುದ್ಧದ ಖರ್ಚನ್ನು ಭರಿಸಲು ಕಾಣಿಕೆಯನ್ನು ಸಲ್ಲಿಸಬೇಕಾಗಿತ್ತು. ಕಪ್ಪಕಾಣಿಕೆ ಹಣ, ಇಲ್ಲವೇ ವಸ್ತುಗಳ ರೂಪದಲ್ಲಿರಬಹುದಾಗಿತ್ತಲ್ಲದೆ ಯುದ್ಧದಲ್ಲಿ ಜಯಗಳಿಸಿದ ತಮ್ಮ ರಾಜನಿಗೆ ಕಾಣಿಕೆಯ ರೂಪದಲ್ಲಿ ಕೆಲವು ಪಾಳೆಯಗಾರರು ಬಡ ಸುಂದರ ಸ್ತ್ರೀಯರನ್ನು ಸಲ್ಲಿಸುತ್ತಿದ್ದರಂತೆ. ಕರ್ನಾಟಕದ ನಾಯಕ ಅರಸುಮನೆತನಗಳು, ವಿಜಯನಗರದ ಅರಸರಿಗೆ, ಮೊಗಲರಿಗೆ, ಮರಾಠರಿಗೆ, ನಿಜಾಮರಿಗೆ, ಹೈದರ್‌ಅಲಿ, ಟಿಪ್ಪುವಿಗೆ, ಇಂಗ್ಲೀಷರಿಗೆ ಕಪ್ಪಕಾಣಿಕೆಯನ್ನು ಸಲ್ಲಿಸಿರುವುದುಂಟು.

ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕ (ಕ್ರಿ.ಶ. ೧೬೮೯-೧೭೨೧)ನ ಕಾಲದಲ್ಲಿ ಮೊಗಲರು ಬಿಜಾಪುರವನ್ನು ಅಧೀನ ಮಾಡಿಕೊಂಡು ಶಿರಾದವರೆಗೂ ತಮ್ಮ ಪ್ರಭಾವ ಬೀರಿದರು. ಬೂದಿಹಾಳು ಮತ್ತು ಬಸವಾಪಟ್ಟಣಗಳು ಅವರ ಪರಗಣಗಳಾದವು. ಚಿತ್ರದುರ್ಗವೂ ಸೇರಿದಂತೆ ಹಲವಾರು ಸಂಸ್ಥಾನಗಳು ಮೊಗಲರಿಗೆ ಕಪ್ಪ ಕೊಡಬೇಕಾಯಿತು.[೨೫೮] ದಿಲಾವರ್‌ಭಕ್ಷನ ದಂಡು ದುರ್ಗದ ಗಡಿಗಳ ಮೇಲೆ ದಾಳಿ ಮಾಡಿದಾಗ ಗುಂಟನೂರು ಮಲ್ಲಪ್ಪನ ಮುಖಾಂತರ ಅವನಿಗೆ ಮೂರುಲಕ್ಷ ವರಹಗಳನ್ನು ನೀಡುವುದರ ಮೂಲಕ ಸಂಧಿ ಮಾಡಿಕೊಳ್ಳಲಾಯಿತು.[೨೫೯] ರಾಯದುರ್ಗದವರು, ಚಿತ್ರದುರ್ಗದ ಮೇಲೆ ದಂಡೆತ್ತಿ ಬಂದರು. ಶತ್ರುಗಳ ಪರವಾಗಿ ಕೇಶವಾಚಾರಿಯು, ಧನೋಜಿ ಎಂಬ ಮರಾಠಿ ಸರದಾರನನ್ನು ಜೊತೆಯಲ್ಲಿ ಕರೆದುಕೊಂಡು ಬಂದು ಒಡ್ಡಿನಹಳ್ಳಿ ಬಳಿಯ ಹಳ್ಳದಲ್ಲಿಳಿದು ಚಿತ್ರದುರ್ಗದವರೆಗೆ ಹಾವಳಿ ಮಾಡಿದಾಗ ಭರಮಪ್ಪನಾಯಕನು ಧನೋಜಿಗೆ ಹಣವನ್ನು ನೀಡಿ ಸಮಾಧಾನಪಡಿಸಿದನು.[೨೬೦]

ಕ್ರಿ.ಶ.೧೭೨೪ರಲ್ಲಿ ಸಾಹುಮಹಾರಾಜನು ಕರ್ನಾಟಕದ ಮೇಲೆ ದಂಡಯಾತ್ರೆಯನ್ನು ಪ್ರಾರಂಭಿಸಿದನು. ಕರ್ನಾಟಕದ ಪಾಳೆಯಗಾರರಿಂದ ಪೊಗದಿಯನ್ನು ವಸೂಲಿಮಾಡಲು, ಫತೆಸಿಂಗ್‌ಭೋನ್‌ಸ್ಲೆಯನ್ನು ಮುಖ್ಯ ಸೇನಾಪತಿಯನ್ನಾಗಿ, ಶ್ರೀಪತಿರಾವ್, ಖಂಡೇರಾವ್ ದಾಬಡೆ ಮತ್ತು ಬಾಜಿರಾವ್‌ರವರನ್ನು ಸೇನಾಧಿಕಾರಿಗಳನ್ನಾಗಿ ನೇಮಿಸುತ್ತಾನೆ. ಇವರು ಕ್ರಿ.ಶ.೧೭೨೬ ಮಾರ್ಚ್ ೧೬ ರಂದು ಚಿತ್ರದುರ್ಗಕ್ಕೆ ಬರುತ್ತಾರೆ. ಬಾಜಿರಾಯನು ಚಿತ್ರದುರ್ಗದ ಅರಸ ಹಿರೇ ಮದಕರಿನಾಯಕನಿಗೆ ಪೊಗದಿಯನ್ನು ನೀಡುವಂತೆ ಹೇಳಿಕಳುಹಿಸುತ್ತಾನೆ. ಆಗ ಹಿರೇ ಮದಕರಿನಾಯಕನು ಮರಾಠರ ದಬ್ಬಾಳಿಕೆಯನ್ನು ವಿರೋಧಿಸುತ್ತಾನೆ. ಯುದ್ಧಕ್ಕೆ ಕರೆಯುತ್ತಾನೆ. ಆಗ ಕೂನಬೇವಿನ ಹಳ್ಳಿಯ ಬಳಿ ಮರಾಠರಿಗೂ, ನಾಯಕನಿಗೂ ಘೋರ ಕದನ ನಡೆಯುತ್ತದೆ. ನಾಯಕನ ಸೈನಿಕರಿಗೆ ಪರಾಭವವಾಗುತ್ತದೆ. ಆಗ ಹಿರೇಮದಕರಿಯು ಮರಾಠರಿಗೆ ಪೊಗದಿಯನ್ನು ಪಾವತಿಮಾಡಿ[೨೬೧] ಅಲ್ಲಿಂದ ಅವರನ್ನು ಕಳುಹಿಸುತ್ತಾನೆ. ಕ್ರಿ.ಶ. ೧೭೪೦ರಲ್ಲಿ ಮಹಾರಾಷ್ಟ್ರ ಪನ್ನಾಳದ ಫತೇಸಿಂಗನು ೧೬೦೦೦ ಕುದುರೆ, ೭೦೦ ಆನೆ ರಾವುತರು ಮತ್ತು ೧ ಲಕ್ಷ ಕಾಲ್ಬಲದೊಡನೆ ಹೊರಟು ಹಿರಿಯೂರು ಬಳಿಯಲ್ಲಿ ಬೀಡುಬಿಡುತ್ತಾನೆ. ಆಗ ಹಿರೇ ಮದಕರಿನಾಯಕನು ೬೦,೦೦೦ ವರಹ ನಜರನ್ನು ಒಪ್ಪಿಸುವುದರೊಡನೆ ಅವನನ್ನು ಸಂಧಿಸುತ್ತಾನೆ.[೨೬೨] ಮೊಗಲರಿಗೆ ಹಾಗೂ ಮರಾಠರಿಗೆ ಕರ್ನಾಟಕದ ಹಲವು ರಾಜ್ಯಗಳು ಪೊಗದಿಯನ್ನೂ, ಚೌಥವನ್ನೂ, ನೀಡುವ ಪರಿಪಾಠವಿಟ್ಟುಕೊಂಡಿದ್ದವು. ಹೀಗಾಗಿ ಚಿತ್ರದುರ್ಗದ ಅರಸರಿಂದಲೂ ಮರಾಠಾ ಪೇಶ್ವೆಗಳು ಚೌಥವನ್ನು ಸಂಗ್ರಹಿಸುತ್ತಿದ್ದರು. ಕಸ್ತೂರಿ ರಂಗಪ್ಪನಾಯಕನೂ ಮರಾಠರಿಗೆ ಆಗಾಗ್ಗೆ ಚೌತವನ್ನು ಕೊಡಬೇಕಾಗಿತ್ತು.[೨೬೩]

ಕ್ರಿ.ಶ. ೧೭೬೨ರಲ್ಲಿ ಹೈದರಾಲಿ ಖಾನನು ಚಿತ್ರದುರ್ಗದ ಮೇಲೆ ಮೊದಲಬಾರಿಗೆ ದಂಡೆತ್ತಿ ಬಂದು ಧರ್ಮಪುರ, ಪರಶುರಾಂಪುರ, ವೇಣುಕಲ್ಲು, ಯಿಕ್ಕನೂರು, ದೊಡ್ಡೇರಿ, ತಳಕು, ಗೌರಸಮುದ್ರ,

ನಾಯಕನಹಟ್ಟಿ, ಹಿರಿಯೂರು, ಹೊಸದುರ್ಗ, ಜಾನಕಲ್ಲು, ಭರಮಣ್ಣನಾಯಕನದುರ್ಗ, ಹೊಳಲ್ಕೆರೆ, ರಾಮಗಿರಿ, ರಂಗಯ್ಯನದುರ್ಗ, ಬಾಗೂರು ಈ ಎಲ್ಲಾ ಗಡಿದುರ್ಗಗಳ ಮೇಲೆ ಠಾಣೆ ಹಾಕಿದಾಗ ಹಿರೇ ಮದಕರಿನಾಯಕನು ಹೈದರಾಲಿಗೆ ಎರಡುಲಕ್ಷ ವರಹಗಳನ್ನು ಕೊಟ್ಟು[೨೬೪] ಸಂಧಾನ ಮಾಡಿಕೊಳ್ಳಬೇಕಾಯಿತು.

ಹೈದರಾಲಿಯು ಕರಾವಳಿ ಪ್ರದೇಶವನ್ನು ಹಾಗೂ ಮದಕರಿನಾಯಕನ ಸಹಾಯದಿಂದ ಬಿದನೂರು, ನಿಜಗಲ್ಲು ಪ್ರದೇಶಗಳನ್ನು ಗೆದ್ದುಕೊಂಡಾಗ, ಮದಕರಿನಾಯಕನ ಪರಾಕ್ರಮವನ್ನು ಅರಿತು ಒಳೊಳಗೆ ಕುದಿಯಹತ್ತಿದನು. ಮದಕರಿನಾಯಕನ ಕುರಿತಾಗಿ ಅಸೂಯೆಪಡುತ್ತಾ, ಕ್ರಿ.ಶ. ೧೭೭೬ರಲ್ಲಿ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಿ ಮದಕರಿನಾಯಕರಿಂದ ೨ ಲಕ್ಷ ವರಹಗಳನ್ನು ಪಡೆದು ಹಿಂದಕ್ಕೆ ಹೋದನು. ನಂತರದಲ್ಲಿ ಮದಕರಿನಾಯಕ ಕಪ್ಪಕಾಣಿಕೆಗಳನ್ನು ಕೊಡುವುದು ತಡಮಾಡಿದಾಗ ಅವನನ್ನು ಸದೆಬಡಿಯಲು ಹೈದರಾಲಿ ಮುಂದಾಗುತ್ತಾನೆ. ರಾಯದುರ್ಗ, ಹರಪನಹಳ್ಳಿ, ರತ್ನಗಿರಿಯವರ ಸಹಾಯಪಡೆದು ಚಿತ್ರದುರ್ಗದ ಮೇಲೆ ಮುತ್ತಿಗೆ ಪ್ರಾರಂಭಿಸಿದನು. ಇದರಲ್ಲಿ ಟಿಪ್ಪುಸುಲ್ತಾನನು ಭಾಗವಹಿಸಿದ್ದನು. ಆರುಲಕ್ಷ ವರಹಗಳನ್ನು ಕೊಡುವಂತೆ ಮದಕರಿನಾಯಕನಿಗೆ ಹೇಳಿ ಕಳುಹಿಸುತ್ತಾನೆ. ಆಗ ಮದಕರಿನಾಯಕನು ಹೈದರನಿಂದ ಬೇಸತ್ತು ಯುದ್ಧದಲ್ಲಿ ಹೈದರನನ್ನು ಸಂಧಿಸಲು ನಿರ್ಧರಿಸುತ್ತಾನೆ.[೨೬೫] ಕ್ರಿ.ಶ. ೧೭೭೭ರಲ್ಲಿ ಹೈದರಾಲಿಯು ಮರಾಠ ಮತ್ತು ನಿಜಾಮರ ದಾಳಿಯನ್ನು ಎದುರಿಸಬೇಕಾಗಿ ಬಂದಾಗ ಚಿತ್ರದುರ್ಗದ ಕೊನೆಯ ಮದಕರಿನಾಯಕ ಸೇನಾ ಸಹಾಯವನ್ನು ಮಾಡಲಿಲ್ಲ. ಹೀಗಾಗಿ ಸಿಟ್ಟಿಗೆದ್ದ ಹೈದರ್ ಚಿತ್ರದುರ್ಗವನ್ನು ದಂಡಿಸಲು ಮುಂದಾದನು. ಮದಕರಿನಾಯಕ ದಂಡ ನೀಡುವುದಾಗಿ ಹೇಳಿದರೂ ಹೈದರಾಲಿ ಒಪ್ಪಲಿಲ್ಲ. ಮುತ್ತಿಗೆ ಹಾಗೆಯೇ ಮುಂದುವರೆಯಿತು. ಆಗ ಒಪ್ಪಂದವಾಗಿ ಮದಕರಿನಾಯಕನು ದಂಡವೆಂದು ಹದಿಮೂರು ಲಕ್ಷ ಪಗೋಡಗಳನ್ನು ನೀಡಬೇಕಾಯಿತು.[೨೬೬]

ಹೀಗೆ ಚಿತ್ರದುರ್ಗದ ನಾಯಕ ಅರಸರು ಮೇಲಿಂದ ಮೇಲೆ ಕಪ್ಪಕಾಣಿಕೆಗಳನ್ನು ಸಲ್ಲಿಸಿ ಸಂಧಾನ ಮಾಡಿಕೊಳ್ಳಬೇಕಾದ ಸಂದರ್ಭಗಳು ಬರುತ್ತಿದ್ದವು. ಕಿರುಕುಳ, ಕಾಳಗಗಳು ಸಾಮಾನ್ಯವಾಗಿದ್ದರಿಂದ ಯುದ್ಧದ ಸಂದರ್ಭದಲ್ಲಿ ಸಂಪತ್ತು ಲೂಟಿಯಾಗದಂತೆ ಸಂರಕ್ಷಿಸಿಕೊಳ್ಳುವ ಅನಿವಾರ್ಯತೆ ಇರುತ್ತಿತ್ತು. ಹಾಗೂ ರಾಜ್ಯದ ಬೊಕ್ಕಸದಲ್ಲಿ ಹಣ ಸಂಗ್ರಹವನ್ನು ತೆರಿಗೆಗಳಿಂದ, ಕಾಣಿಕೆಗಳಿಂದ ಸಂಗ್ರಹಿಸುತ್ತಿದ್ದರು. ಭರಮಪ್ಪನಾಯಕನು ಆಯಗಾರರ ಬಿಟ್ಟಿ ಚಾಕರಿ ಮಾಡಬೇಕೆಂದು ನಿರ್ಣಯ ಮಾಡಿದ್ದನು. ಹಾಗೂ ಈತನ ಕಾಲದಲ್ಲಿ ರಾಜಕುಟುಂಬದವರು ಉಚ್ಚಂಗಮ್ಮ ಹಾಗೂ ಇನ್ನಿತರ ದೇವತೆಗಳ ಪೂಜೆಗೆ ಹೊರಡುವಾಗ ಅವರು ಭೇಟಿಯಾಗುವ ಸ್ಥಳಗಳಲ್ಲಿ ಪ್ರತಿ ಹಳ್ಳಿಯ ತಳವಾರನು ಆಡಳಿತಗಾರರಿಗೆ ಒಂದು ತುಪ್ಪದ ಕೊಡ ಮತ್ತು ಒಂದು ಮೇಕೆಯನ್ನು ನೀಡಬೇಕಾಗಿತ್ತು. ಅಲ್ಲದೆ ವಿನಾಯಕ ಚತುರ್ದಶಿಯಂದು ತಿರುಕನ ವೇಷ ಧರಿಸಿ ಅರಸ ಪ್ರತಿಗ್ರಾಮದ ಗೌಡನಿಂದ ಒಂದು ವರಹ ಕಾಣಿಕೆಯನ್ನು ಪಡೆಯುತ್ತಿದ್ದನು. ಪ್ರತಿಯೊಬ್ಬ ನೇಯ್ಗೆಯವನು ಮಗ್ಗವೊಂದಕ್ಕೆ ಪ್ರತಿವರ್ಷ ನೂಲೊಂದನ್ನು ಅರಮನೆಗೆ ಕಾಣಿಕೆಯಾಗಿ

ನೀಡಬೇಕಾಗಿತ್ತು. ಹಳ್ಳಿಯ ಗೌಡರು ಅರಮನೆಯ ಕುದುರೆ ಲಾಯಕ್ಕೆ ಹತ್ತು ಹೇರು ಹುಲ್ಲನ್ನು ನೀಡಬೇಕಾಗಿತ್ತಲ್ಲದೆ, ಧಾರ್ಮಿಕ ಸಮಾರಂಭ ಹಾಗೂ ಹಬ್ಬ ಹರಿದಿನಗಳಿಗೆ ಧನ ಹಾಗೂ ವಸ್ತುರೂಪದ ತೆರಿಗೆಗಳನ್ನು ವಿಧಿಸಿ ಸಂಗ್ರಹಿಸುತ್ತಿದ್ದರು.[೨೬೮]

ಅಲ್ಲದೆ ತಮ್ಮ ಪ್ರದೇಶದ ಮೇಲೆ ಸಂಪೂರ್ಣ ಸ್ವಾತಂತ್ರ್ಯವನ್ನು ಸಾಧಿಸಿದ್ದರಲ್ಲದೆ ತಮ್ಮ ಅಧೀನದ ಭೂಪ್ರದೇಶದ ಸಂಪತ್ತು ತಮ್ಮ ಇಚ್ಛೆಗನುಗುಣವಾಗಿ ಬಳಕೆಯಾಗುವಂತೆ ವ್ಯವಸ್ಥೆ ಮಾಡಿದ್ದರು. ಕೃಷಿಯೋಗ್ಯ ಭೂಮಿ ಹೊರತುಪಡಿಸಿ ಉಳಿದ ಭೂಮಿಯು ಇವರಿಗೆ ಸೇರಿತ್ತಲ್ಲದೆ, ಕೃಷಿಯೋಗ್ಯ ಭೂಮಿಯಿಂದ ತೆರಿಗೆಗಳನ್ನು ಪಡೆಯುತ್ತಿದ್ದರು. ರಾಜ್ಯದ ಬೊಕ್ಕಸಕ್ಕೆ ಖರ್ಚುವೆಚ್ಚಗಳನ್ನು ದೊರೆಗಳ ಇಚ್ಛೆಗೆ ಬಿಡಲಾಗಿತ್ತು. ಅರಮನೆ ಸುಖಭೋಗ ಜೀವನವನ್ನು ಆಗ ಪ್ರಶ್ನಿಸುವಂತಿರಲಿಲ್ಲ. ಆದರೆ ಪಾಳೆಯಗಾರರು ಕೇವಲ ವೈಭವ, ಭೋಗಜೀವನಗಳಲ್ಲಿ ನಿರತರಾಗದೆ ಜನಸಾಮಾನ್ಯರಿಗೆ ಉಪಯುಕ್ತವಾದ ಕಾರ್ಯಗಳನ್ನು ಕೈಗೊಂಡು ಪ್ರಜಾವಾತ್ಸಲ್ಯವನ್ನು ಗಳಿಸಿದ್ದುಂಟು. ಇವರ ಆಳ್ವಿಕೆಯಲ್ಲಿ ತೆರಿಗೆಗಳು ವಿಜಯನಗರ ಕಾಲಕ್ಕಿಂತಲೂ ಹಗುರವಾಗಿದ್ದವು.[೨೬೯] ಇವರು ಜನರನ್ನು ಹಿಂಸಿಸುತ್ತಿರಲಿಲ್ಲ. ಚಿತ್ರದುರ್ಗವು ಆರ್ಥಿಕವಾಗಿ ಸುಸ್ಥಿತಿಯಲ್ಲಿತ್ತು ಎಂಬುದಕ್ಕೆ ಹೈದರಾಲಿಯು ದುರ್ಗದಿಂದ ಲೂಟಿ ಹೊಡೆದ ಸಂಪತ್ತೇ ಸಾಕ್ಷಿ. ೩ ದಿನಗಳ ಕಾಲ ಲೂಟಿ ಮಾಡಿ ಖಜಾನೆಯಿಂದ ೬೪,೦೦,೦೦೦ ಬೆಳ್ಳಿನಾಣ್ಯ, ೧,೦೦,೦೦೦ ರಾಯಲ್, ೧೭,೦೦,೦೦೦ ಅಷರಫಿ, ೨೫,೦೦,೦೦೦ ದಾಬೋಲಿಕದಲಿ, ೧೦,೦೦,೦೦೦ ಚವುರಿ ಹಾಗೂ ಇನ್ನಿತರ ಬಂಗಾರದ ನಾಣ್ಯಗಳನ್ನು ದೋಚಿದನು.[೨೭೦]

ವಿಜಯನಗರದ ಪತನದ ನಂತರ ಐದು ಷಾಹಿ ಮನೆತನಗಳು ವಿಜಯನಗರದ ಅಧೀನದ ಪಾಳೆಯಪಟ್ಟುಗಳನ್ನು ಹಂಚಿಕೊಂಡವು. ಅದರಲ್ಲಿ ಸಗರನಾಡಿನ ಸುರಪುರದ ಪೂರ್ವ ವಂಶಜರೂ ಸೇರಿದ್ದರು. ಹೀಗಾಗಿ ಸಗರನಾಡು ಭಾಗದ ಸೀಮೆ ವಿಜಾಪುರ ಬಾದಷಹರ ಒಡೆತನಕ್ಕೆ ಅಧಿಕೃತವಾಗಿ ಒಳಪಟ್ಟಿತು.[೨೭೧] ಆಗ ಸುರಪುರ ಸಂಸ್ಥಾನದ ಸ್ಥಾಪನೆಗೆ ನಾಂದಿಹಾಡಿದ ಗಡ್ಡಿಪಿಡ್ಡನಾಯಕ (ಕ್ರಿ.ಶ. ೧೬೩೬-೧೬೬೬)ನು ಇಪ್ಪತ್ತೆರಡು ಜಮೀನುದಾರರಿಂದ ಕಪ್ಪ ಕಾಣಿಕೆ ಪಡೆದು ಆಳ್ವಿಕೆ ಪ್ರಾರಂಭಿಸಿದನು. ನಂತರ ಬಿಜಾಪುರದ ಆದಿಲ್‌ಷಾಹಿಗಳ ಸಾಮಂತಿಕೆಯನ್ನು ಒಪ್ಪಿಕೊಂಡು ಚೌಥ ಮತ್ತು ಇನ್ನಿತರ ಕಾಣಿಕೆಗಳನ್ನು ಅವರಿಗೆ ಒಪ್ಪಿಸುವುದಲ್ಲದೆ ಸೈನ್ಯಸಹಾಯವನ್ನು ಒದಗಿಸಬೇಕಾಗಿತ್ತು.

ಮೊಗಲರ ಕಾಲಕ್ಕೂ ಈ ಪದ್ಧತಿ ಮುಂದುವರಿಯಿತು. ಔರಂಗಜೇಬನ ಸೇನಾಪತಿ ದಿಲೇರಖಾನನು ಕ್ರಿ.ಶ. ೧೬೮೦ರಲ್ಲಿ ದಕ್ಷಿಣಭಾರತದ ಮೇಲೆ ದಾಳಿ ಮಾಡಿದನು. ಆಗ ಶಹಾಪುರದಿಂದ ೧೦ ಕಿ.ಮೀ ದೂರದಲ್ಲಿರುವ ಗೋಗಿಯಲ್ಲಿ ತನ್ನ ಬಿಡಾರವನ್ನು ಹೂಡಿ, ಸುರಪುರದ ಅರಸ ಹಸರಂಗಿ ಪಾಮನಾಯಕ (ಕ್ರಿ.ಶ. ೧೬೬೬-೧೬೮೭)ನಿಗೆ ೧೫ ಲಕ್ಷ ಕಪ್ಪಕಾಣಿಕೆ ಕಳಿಸಲು ಸಂದೇಶ ಕಳುಹಿಸಿದನು. ಆಗ ಹಸರಂಗಿ

ಪಾಮನಾಯಕ ಕಪ್ಪಕಾಣಿಕೆ ಕೊಡಲು ಒಪ್ಪದೆ ಯುದ್ಧಕ್ಕೆ ಸಿದ್ಧನಾದನು. ಕ್ರಿ.ಶ.೧೬೮೦ ಫೆಬ್ರವರಿ ೨೧ರಂದು ಹಸರಿಂಗಿ ಪಾಮನಾಯಕನು ದಿಲೇರಖಾನನನ್ನು ಸೋಲಿಸುವುದರ ಮೂಲಕ ಆತನಿಗೆ ಜೀವಭಿಕ್ಷೆಯನ್ನು ನೀಡಿದನು.[೨೭೨]

ಪೀತಾಂಬರ ಬಹರಿ ಪಿಡ್ಡನಾಯಕ (ಕ್ರಿ.ಶ. ೧೬೮೭-೧೭೨೬)ನು ಮರಾಠರೊಂದಿಗೆ ಸ್ನೇಹ ಬೆಳೆಸಿ ಅವರಿಗೆ ಸೈನ್ಯದ ಸಹಾಯವನ್ನು ನೀಡಹತ್ತಿದ. ಅಲ್ಲದೆ ಔರಂಗಜೇಬನ ಆಧಿಪತ್ಯವನ್ನು ಒಪ್ಪದೆ ತನ್ನ ರಾಜ್ಯದ ಸರದೇಸಗತಿಗಳ ದಾಹಿಜಾ ರಸೂವನ್ನು ಎತ್ತಲಾರಂಭಿಸಿದಾಗ, ಪಿಡ್ಡನಾಯಕನ ವಿರುದ್ಧ ಔರಂಗಜೇಬನ ಅಮಲ್ದಾರರು ದೂರಿಕೊಂಡರೂ ಪ್ರಯೋಜನವಾಗಲಿಲ್ಲ. ಅವರಿಗೆ ನೀಡಬೇಕಾಗಿದ್ದ ನಜರಾಣೆಯ ಕಾಣಿಕೆಯನ್ನು ಸಲ್ಲಿಸಲಿಲ್ಲ. ಇದರಿಂದ ಔರಂಗಜೇಬನು ಕೋಪಗೊಂಡು ಕ್ರಿ.ಶ. ೧೬೯೧ರಲ್ಲಿ ತನ್ನ ಮಗ ಕಾಮಬಕ್ಷ ಹಾಗೂ ಸರದಾರ ಹಮೀದೊದ್ದೀನ್, ಬಹಿರಾಮಖಾನರನ್ನು ಪಿಡ್ಡನಾಯಕನ ವಿರುದ್ಧ, ವಾಗಿನಗೇರಿಯನ್ನು ವಶಪಡಿಸಿಕೊಳ್ಳಲು ಕಳುಹಿಸಿದನು. ಕಾಮಬಕ್ಷನು ೨ ತಿಂಗಳುಗಳವರೆಗೆ ವಾಗಿನಗೇರಿಯಲ್ಲಿ ತಳವೂರಿದರೂ ಪ್ರಯೋಜನವಾಗಲಿಲ್ಲ. ಮತ್ತೇ ಔರಂಗಜೇಬನು ರೋಹುಲ್ಲಾಖಾನ ಮತ್ತು ಮುಸ್ತಫಖಾನ್ ಸರದಾರರನ್ನೂ ಕಳುಹಿಸಿದನು. ಅವರು ೫ ತಿಂಗಳುಗಳವರೆಗೆ ವಾಗಿನಗೇರಿ ಕೋಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರೂ ವಶವಾಗಲಿಲ್ಲ. ಆಗ ಔರಂಗಜೇಬ ಇನ್ನೊಬ್ಬ ಮಗ ಆಜಮ್‌ನನ್ನು ಕಳುಹಿಸಿದಾಗ, ಆಜಮ್ ಒಂದು ವರ್ಷದವರೆಗೆ ಅಲ್ಲಿದ್ದು ವಾಗಿನಗೇರಿಯ ಸುತ್ತಮುತ್ತಲಿನ ಪ್ರದೇಶವನ್ನು ನಾಶಗೊಳಿಸಲು ಪ್ರಯತ್ನಿಸಿದಾಗ ಪೀತಾಂಬರಿ ಬಹರಿ ಪಿಡ್ಡನಾಯಕನು ಸಂಧಿಯನ್ನು ಬಯಸಿ ಆಜಮನಿಗೆ ಎರಡುಲಕ್ಷ ರೂ.ಗಳ ಕಾಣಿಕೆಯನ್ನು ಕೊಡಲು ಒಪ್ಪಿದನು. ಇದಲ್ಲದೆ ಬಾದಶಾಹ್‌ನಿಗೆ ಏಳುಲಕ್ಷ ರೂ.ಗಳ ನಜರಾಣೆ ಕಪ್ಪವನ್ನು ಸಲ್ಲಿಸಲು ಒಪ್ಪಿಕೊಂಡನು.[೨೭೩]

ಮೊಂಡಗ್ಯೆ ವೆಂಕಟಪ್ಪ ನಾಯಕ(ಕ್ರಿ.ಶ. ೧೭೪೭-೧೭೫೨)ನು ಪಾಂಡಿಚೇರಿ ಯುದ್ಧದಲ್ಲಿ ಹೈದ್ರಾಬಾದ್ ನಿಜಾಮನ ಪಕ್ಷ ವಹಿಸಿ, ಮುಜಫರಜಂಗ, ಚಂದಾಸಾಹೇಬ, ಫ್ರೆಂಚರನ್ನು ಅಲ್ಪಾವಧಿಯಲ್ಲಿ ಸೋಲಿಸಿದನು. ಆಗ ನಾಸರಜಂಗನು ವೆಂಕಟಪ್ಪನಾಯಕನಿಗೆ ಹಾನಿಯಾದುದರಿಂದ ದರಬಾರದ ಲೂಟಿಯನ್ನು ದೊರೆಗೆ ಹಾಗೂ ಊರಲೂಟಿಯನ್ನು ವೆಂಕಟಪ್ಪನಾಯಕನ ಸೈನಿಕರಿಗೆ ಗೊತ್ತುಮಾಡಿದನಲ್ಲದೆ, ಹೈದ್ರಾಬಾದ್ ಪಟ್ಟಣದವರೆಗೆ ಎರಡು ಆಣೆಯಂತೆ 'ಬೇಡರ ಠಣಿಕೇದಾರಿ' ಎಂಬ ರುಸೂಮು ವೆಂಕಟಪ್ಪನಾಯಕನಿಗೆ ಕೊಟ್ಟನು.[೨೭೪] ಇದರಿಂದ ಸುರಪುರದ ಆರ್ಥಿಕಮಟ್ಟ ಸುಧಾರಿಸಿತು. ನಂತರ ಪೇಶ್ವೆ ಹಾಗೂ ನಿಜಾಮ ರಾಜ್ಯಗಳು ಒಂದಾಗಿ ಸುರಪುರವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಾಗ ಅವರಿಗೆ ಸುರಪುರದ ಅರಸರು ಪರಂಪರಾಗತವಾಗಿ ಕಪ್ಪಕಾಣಿಕೆಯನ್ನು ಒಪ್ಪಿಸ ಬೇಕಾಗಿತ್ತು. ಕ್ರಿ.ಶ. ೧೭೬೭ರಲ್ಲಿ ನಿಜಾಮ ಮತ್ತು ಪೇಶ್ವೆಗಳ ಮಧ್ಯೆ ಆದ ಒಪ್ಪಂದದಂತೆ ಮುಮ್ಮಡಿ ಪಾಮನಾಯಕನು ಕೊಡಬೇಕಾದ ಪೇಷಕಷ ಈ ರೀತಿ ಇತ್ತು :

ನಿಜಾಮನಿಗೆ ನೀಡಬೇಕಾದ ಪೇಷಕಷ -

ರೂ. ೫೦,೦೦೦ - ಐನ ಖಂಡಣಿ (ಒಟ್ಟು ಖಂಡಣಿ)

ರೂ. ೦೨,೦೦೦ - ರಾಬೇತಾ

ರೂ. ೧೦,೦೦೦ - ನಜರಾಣಿ ಖಾಸ ನಿಜಾಮನಿಗೆ,

ರೂ. ೧೦,೦೦೦ ದಿವಾಣಿ ರುಕುನುದ್ದೌಲಾ

ರೂ. ೬೬೬೬ ದರ್ಬಾರಿ ಖರ್ಚು

ರೂ. ಒಟ್ಟು ೭೯,೧೬೬.೦೦

ಪೇಶ್ವೆ ಸರಕಾರದ ಪೇಷಕಷ -

ರೂ. ೫೦,೦೦೦ - ಐನ ಖಂಡಣಿ

ರೂ. ೫,೦೦೦ - ದರ್ಬಾರಿ ಖರ್ಚು

ರೂ. ೧,೫೦೦ - ಪೈಕಿಸೂಟ

ರೂ. ೪೧೦,೦೦೦ ಜಾತಾ ಬಾಕಿ

ರೂ. ೧೦,೦೦೦ ಪೇಶ್ವೆಯು ಖಾಸ ಸವಾರಿ ಬಂದುದಕ್ಕೆ

ರೂ. ೨೯,೦೦೦ ಕಾಪಡಖಾನಾ

ರೂ. ೧೪,೦೦೦ ಚೌಥ, ರೂ. ೧೫೦೦೦ ವಜಾ

ರೂ. ಒಟ್ಟು ೯೪,೦೦೦.೦೦[೨೭೫]

ಆ ಸಂದರ್ಭದಲ್ಲಿ ಇಷ್ಟು ಹಣವನ್ನು ಕೊಡಬೇಕಾದಾಗ ಸುರಪುರ ಅರಸರಿಗೆ ಆರ್ಥಿಕ ಮುಗ್ಗಟ್ಟು ತಲೆದೋರಿತು. ಈ ಹಣ ಸಂದಾಯವಾಗದಿದ್ದರೆ, ಸುರಪುರದ ಕಂದಾಯ ಅಧಿಕಾರಗಳನ್ನು ರದ್ದುಪಡಿಸುವುದಾಗಿ ನಿಜಾಮ ಮತ್ತು ಪೇಶ್ವೆಯರು ತಿಳಿಸಿದರು. ಇಷ್ಟಲ್ಲದೆ ಪ್ರತಿವರ್ಷ ೧೪,೦೦೦ ರೂ. ಚೌಥವನ್ನು ಪೇಶ್ವೆಗೆ ನೀಡಬೇಕಲ್ಲದೆ, ಸುರಪುರ ಸಂಸ್ಥಾನದಲ್ಲಿ ಉತ್ತರಾಧಿಕಾರಿಗಳಾಗಬೇಕಾದರೂ ನಿಜಾಮನಿಗೆ ನಜರಾಣಿ ಸಲ್ಲಿಸಬೇಕಾಗಿತ್ತು. ಇವೆಲ್ಲವುಗಳ ಮಧ್ಯೆ ಸುರಪುರ ಸಿಲುಕಿ ಹಾಕಿಕೊಂಡಿತು.

ಆಗ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ.೧೭೭೩-೧೮೦೨)ನು ತಮ್ಮ ರಾಜ್ಯಕ್ಕೆ ಒಳಪಟ್ಟ ಪ್ರದೇಶಗಳ ರುಸೂಮುಗಳ ವಸೂಲಿಯನ್ನು ಪ್ರಾರಂಭಿಸಿದನು. ಅಂಕಪ್ಪನಾಯಕ, ದಂಡಪ್ಪ, ಸಖನೀಸ ಎಲ್ಲಪ್ಪರವರು ಬೆನಕನಹಳ್ಳಿ, ಚಿತ್ತಾಪುರ, ಕೊರಳಿ, ದಂಡಪತಿಯನ್ನು ಸುಲಿದು ೫ ಲಕ್ಷ ರೂ. ತಂದರು. ನಂತರ ನಿಷ್ಕೀ ಮಲಕಪ್ಪನು ಗೆದ್ದಲಗೂಟಕ್ಕೆ ಹೋಗಿ ಹಣ ತಂದನು. ಅದರಂತೆ ಆನೆಹೊಸೂರು, ಪಟ್ಟಗೂರಿ ಸುಲಿದುಕೊಂಡು ಬಂದರು. ಮಲಗಾಣೆ, ಸಿಂದ್ಗಿ, ಚಿತ್ತಾಪುರ, ಮುದಗಲ್, ನಾಲ್ವತ್ವಾಡ, ಕಲ್ಬುರ್ಗಿ,

ಎಳಮೇಲಿ, ರಾಯಚೂರು, ತಾಳಿಕೋಟೆ ಫಂಡ್ರಾಪುರ ಮುಂತಾದ ನಾಲ್ಕು ಕಡೆಯಿಂದ ಕಪ್ಪವನ್ನು ತರಲಾಯಿತು.[೨೭೬] ಆಗ ಪೇಶ್ವೆಗಳ ಬಿಜಾಪುರ ಪ್ರಾಂತ್ಯದಲ್ಲಿ ಇಮ್ಮಡಿ ವೆಂಕಟಪ್ಪನಾಯಕ ರುಸುಮುಗಳನ್ನು ಎತ್ತಿದ್ದಾನೆಂಬ ಆರೋಪದ ಮೇಲೆ ಹಾಗೂ ತಮಗೆ ಇಲ್ಲಿಯವರೆಗೆ ಸುರಪುರದವರಿಂದ ಸಲ್ಲಬೇಕಾದ ಕಾಣಿಕೆ ಸಲ್ಲಿಸಿರುವುದಿಲ್ಲವೆಂದು ಪೇಶ್ವೆಗಳು ಕಲ್ಕತ್ತಾ ನ್ಯಾಯಾಲಯದ ಮೊರೆಹೋದರು. ಸಾಲ ವಸೂಲಿಯ ಆದೇಶ ಪಡೆದುಕೊಂಡರು. ಆಗ ಸುರಪುರ ಸಾಲವನ್ನು ತೀರಸಬೇಕಾಯಿತು. ಅಲ್ಲದೆ ನಿಜಾಮನಿಗೆ ಸಲ್ಲಿಸಬೇಕಾಗಿದ್ದ ೮ ಲಕ್ಷ ರೂ. ಬಾಕಿಯು ೧೩ ಲಕ್ಷಕ್ಕೇರಿತ್ತು. ಇವೆಲ್ಲವುಗಳ ಮಧ್ಯೆ ಕ್ರಿ.ಶ. ೧೮೧೩ರಲ್ಲಿ ಸುರಪುರ ಸಂಸ್ಥಾನದಲ್ಲಿ ಭೀಕರ ಬರಗಾಲಕ್ಕೆ ತುತ್ತಾಗಿತ್ತು. ಹೀಗಾಗಿ ಸಾಕಷ್ಟು ಆರ್ಥಿಕ ತೊಂದರೆಯನ್ನು ಅನುಭವಿಸಬೇಕಾಯಿತು.

ಕೃಷ್ಣಪ್ಪನಾಯಕ ಸುರಪುರದ ಅಧಿಕಾರ ಸ್ವೀಕರಿಸುವಾಗ ಮಲತಮ್ಮ ಹಣಮಪ್ಪನಾಯಕ ನಿಜಾಮನಲ್ಲಿಗೆ ಹೋಗಿ ಸಿಂಹಾಸನಾರೋಹಣಕ್ಕೆ ತಡೆಯೊಡ್ಡಿದನು. ಆಗ ನಿಜಾಮ ಈ ಅವಕಾಶವನ್ನು ಸದುಪಯೋಗ ಪಡಿಸಿಕೊಂಡನು. ತನಗೆ ಯಾರು ೧೫ ಲಕ್ಷ ರೂ.ಗಳನ್ನು ನಜರಾಣೆಯನ್ನಾಗಿ ಸಲ್ಲಿಸುವರೋ ಅವರು ಸುರಪುರದ ಉತ್ತಾರಾಧಿಕಾರಿಯಾಗಲು ಅರ್ಹರೆಂದು ಆದೇಶ ಹೊರಡಿಸಿದನು. ಆಗ ಕೃಷ್ಣಪ್ಪನಾಯಕ ಆ ಆದೇಶಕ್ಕೆ ಬದ್ಧನಾಗಿ ೧೫ ಲಕ್ಷ ಹಣದಲ್ಲಿ ನಾಲ್ಕುವರೆ ಲಕ್ಷ ಹಣವನ್ನು ಸಿಂಹಾಸನರೋಹಣ ಸಮಾರಂಭದಲ್ಲಿ ಕೊಟ್ಟನು. ಉಳಿದ ಹಣದಲ್ಲಿ ೧,೨೫,೦೦೦ ರೂ.ಗಳನ್ನು ಕಂತಿನ ಮೇಲೆ ನೀಡಲು ಕೇಳಿದನು. ಇದಕ್ಕೆ ನಿಜಾಮನು ಒಪ್ಪಿದನು. ನಂತರದಲ್ಲಿ ಕೊಡಬೇಕಾಗಿದ್ದ ಹಣವನ್ನು ಕೊಡಲು ಸಂಸ್ಥಾನಕ್ಕೆ ಆದಾಯದ ಮೂಲಗಳಿರಲಿಲ್ಲ ಆಗ ಸಂಸ್ಥಾನ ಭೀಕರ ಆರ್ಥಿಕ ದಿವಾಳಿತನಕ್ಕೆ ಒಳಗಾಯಿತು. ಅದೇ ಸಂದರ್ಭದಲ್ಲಿ ಬಾಕಿ ವ್ಯವಹಾರ ಬಗೆಹರಿಸಲು ಬಂದಿದ್ದ ಬ್ರಿಟಿಷ್ ಅಧಿಕಾರಿ ಕ್ಯಾ.ಗ್ರಿಸ್ಲೇಯು ಹಣವನ್ನು ವಸೂಲಿ ಮಾಡಲು ಸುರಪುರದ ಅರಸ ಕೃಷ್ಣಪ್ಪನಾಯಕನನ್ನು ಪೀಡಿಸತೊಡಗಿದನು. ಆಗ ಸಂಸ್ಥಾನಕ್ಕೆ ಇದನ್ನು ಮರುಪಾವತಿಸುವುದು ಅಸಾಧ್ಯವಾಯಿತು. ಆಗ ಮೋತಿಗೀರ ಗೋಸಿಯಾ ಎಂಬ ಹೈದ್ರಾಬಾದ್ ಲೇವಾದೇವಿ ವ್ಯಾಪಾರಿಯೊಂದಿಗೆ ಬಡ್ಡಿರೂಪದಲ್ಲಿ ಸಾಲ ಪಡೆದು ಆತನಿಗೆ ಜಮೀನನ್ನು ಒತ್ತೆ ಇಡಲಾಯಿತು. ನಂತರ ರಾಣಿ ಈಶ್ವರಮ್ಮನ ಕಾಲಕ್ಕೆ ಸಂಸ್ಥಾನ ವಿಪರೀತ ಆರ್ಥಿಕ ತೊಂದರೆ ಅನುಭವಿಸಿತು. ನಾಲ್ವಡಿ ವೆಂಕಟಪ್ಪನಾಯಕನ ಕಾಲದಲ್ಲಿ ಟೇಲರನ ಸಂಬಳಕ್ಕೂ ಗತಿಯಿಲ್ಲದಾಯಿತು. ಹೀಗೆ ತಮಗೆ ಸಲ್ಲಬೇಕಾದ ಕಪ್ಪಕಾಣಿಕೆಗಾಗಿ ಪೇಶ್ವೆ ಮತ್ತು ನಿಜಾಮರು ಬ್ರಿಟಿಷರ ಮೂಲಕವಾಗಿ ಸುರಪುರ ಅರಸುಮನೆತನವನ್ನು ವ್ಯವಸ್ಥಿತವಾಗಿ ಸುಲಿದಿದ್ದಾರೆ.[೨೭೭] ಇಲ್ಲಿಯ ಖಜಾನೆಯನ್ನು ಬರಿದು ಮಾಡುವುದರ ಮೂಲಕ ಈ ಮನೆತನದವರ ಆರ್ಥಿಕ ಮೂಲಗಳನ್ನು ಕಬಳಿಸುವಲ್ಲಿ ಯಶಸ್ವಿಯಾದರು. ಹೀಗೆ ಸುರಪುರ ಸಂಸ್ಥಾನ ಆರ್ಥಿಕವಾಗಿ ಬಹಳಷ್ಟು ತೊಂದರೆಗೀಡಾಯಿತು. ಪ್ರಾರಂಭದಲ್ಲಿ ಸಾಕಷ್ಟು ಆರ್ಥಿಕವಾಗಿ ಸಬಲತೆಯನ್ನು ಹೊಂದಿದ್ದುದು ಕೊನೆಗೆ ಕಪ್ಪಕಾಣಿಕೆಯನ್ನು ಸಲ್ಲಿಸುವ ನೆಪದಲ್ಲಿ ದೀವಾಳಿತನಕ್ಕೆ ಬಲಿಯಾಗಿ ತತ್ತರಿಸಿಹೋಯಿತು.

ಆನೆಗೊಂದಿ ನಾಯಕ ಅರಸರು ಕ್ರಿ.ಶ. ೧೭೪೯ ರಿಂದ ೧೭೭೫ರವರೆಗೆ ಮರಾಠರಿಗೆ ಕಪ್ಪಕಾಣಿಕೆಯನ್ನು ನೀಡಿದರು. ಮರಾಠರು ವಾರ್ಷಿಕವಾಗಿ ೭೦೦೦ ಪಗೋಡ ತೆರಿಗೆ ಹೇರಿದರು.[೨೭೮] ನಂತರದಲ್ಲಿ ಕ್ರಿ.ಶ. ೧೭೭೫ರಲ್ಲಿ ಹೈದರ್‌ಅಲಿ ೧೨,೦೦೦ ಪಗೋಡಗಳನ್ನು ಇವರಿಂದ ಎತ್ತಿದನು.[೨೭೯] ಟಿಪ್ಪುಸುಲ್ತಾನನ ಮರಣದ ನಂತರ, ಈ ಪ್ರದೇಶ ಬ್ರಿಟಿಷರ ಆಧಿಪತ್ಯಕ್ಕೆ ಒಳಪಟ್ಟಿತು. ಬ್ರಿಟಿಷರು ಈ ಪ್ರದೇಶವನ್ನು ನಿಜಾಮನಿಗೆ ಕೊಟ್ಟರು. ಆಗ ಇವರು ನಿಜಾಮನಿಗೆ ಕಪ್ಪಕಾಣಿಕೆಯನ್ನು ನೀಡಬೇಕಾಗಿದ್ದಿತು.[೨೮೦] ರಾಜ್ಯದ ಆದಾಯದಿಂದಲೇ ಇವರು ತಮ್ಮ ಮೇಲಿನ ರಾಜರಿಗೆ ಕಪ್ಪಕಾಣಿಕೆಯನ್ನು ನೀಡಿದರು. ಗುಡಗುಂಟಿ ಸಂಸ್ಥಾನ ಉತ್ಪನ್ನವು ಸುಮಾರು ರೂ. ೫೦,೦೦೦ ಇತ್ತು. ಇದು ನಿಜಾಮ ಸರಕಾರಕ್ಕೆ ವರ್ಷಕ್ಕೆ ೭೦೦೦ ರೂ.ಗಳ ಕಪ್ಪಕಾಣಿಕೆಯನ್ನು ಕೊಡಬೇಕಾಗುತ್ತಿತ್ತು.[೨೮೧]

ಕನಕಗಿರಿಯ ಅರಸ ಇಮ್ಮಡಿ ಉಡಿಚನಾಯಕನ ಕಾಲದಲ್ಲಿ ಕ್ರಿ.ಶ.೧೬೫೩ರಲ್ಲಿ ಅಫಜಲ್‌ಖಾನನು ಕನಕಗಿರಿಯ ಮೇಲೆ ದಾಳಿ ಮಾಡಿದನು. ಈ ದಾಳಿಯನ್ನು ಇಮ್ಮಡಿ ಉಡಿಚನಾಯಕನು ಸಮರ್ಥವಾಗಿ ಎದುರಿಸಿದನು. ಆದರೆ ಕ್ರಿ.ಶ.೧೬೫೭ರಲ್ಲಿ ವಿಜಾಪುರದ ಷಹಜಿಯ ದಾಳಿಯಿಂದ ತತ್ತರಿಸಿ ಹೋಗಿ ೨ನೇ ಅಲಿಆದಿಲ್ ಷಾಹನಿಗೆ ಕಪ್ಪಕಾಣಿಕೆಯನ್ನು ನೀಡಲು ಒಪ್ಪಿಕೊಂಡನು.[೨೮೨] ನಂತರದಲ್ಲಿ ಕೊನೆಯವರೆಗೂ ಹೈದ್ರಾಬಾದ್ ನಿಜಾಮನ ಅಧೀನದಲ್ಲಿದ್ದು ಅವರಿಗೆ ಕಪ್ಪಕಾಣಿಕೆಯನ್ನು ಈ ಮನೆತನದವರು ನೀಡಿದ್ದಾರೆ.

ಗುಡೇಕೋಟೆಯ ಅರಸ ಬೊಮ್ಮಂತ ರಾಜ (ಕ್ರಿ.ಶ.೧೬೩೭-೧೬೭೬)ನು ಗುಡೇಕೋಟೆ, ಸಂಡೂರು, ಬಾಣಾರಾವಿ ಸೀಮೆಯನ್ನು ಆಳುತ್ತಿದ್ದನು. ಆಗ ಆದೋನಿಯ ನವಾಬನಿಗೆ ಪೊಗದಿಯನ್ನು ಸಲ್ಲಿಸುತ್ತಿದ್ದನು.[೨೮೩] ನಂತರ ಅಧಿಕಾರಕ್ಕೆ ಬಂದ ಚಿನ್ನಯರಾಜನ ಮಗ ಜಟ್ಟಿಂಗರಾಜ(ಕ್ರಿ.ಶ.೧೬೮೭-೧೭೩೭)ನು ಆದೋನಿ ನವಾಬರಿಗೆ ಪೂರ್ವಿಕರು ಸಲ್ಲಿಸುತ್ತಾ ಬಂದಿದ್ದ ಪೊಗದಿಯನ್ನು ಸಲ್ಲಿಸಿದನು.[೨೮೪] ನಂತರ ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಗುಡೇಕೋಟೆ ಪ್ರದೇಶವು ಹೈದ್ರಾಬಾದ್ ನಿಜಾಮನ ಆಧಿಪತ್ಯಕ್ಕೆ ಸೇರಿತು. ಆಗ ಸಹಾಯಕ ಸೈನ್ಯಪದ್ಧತಿಯನ್ನು ಒಪ್ಪಿಕೊಂಡ ಹೈದ್ರಾಬಾದ್ ನಿಜಾಮನು ಈ ಪ್ರದೇಶವನ್ನು ಸಂಭಾವನೆ ಬಾಬ್ತು ಎಂಬುದಾಗಿ ಬ್ರಿಟಿಷರಿಗೆ ಕಾಣಿಕೆಯಾಗಿ ನೀಡಿದನು. ನಂತರ ಬ್ರಿಟಿಷರು ಗುಡೇಕೋಟೆಯನ್ನು ಬಳ್ಳಾರಿಯ ಕೂಡ್ಲಿಗಿಗೆ ಸೇರಿಸಿಕೊಂಡರು. ನಂತರ ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿಕೊಂಡರು.

ಜರಿಮಲೆಯ ಬೊಮ್ಮಣ್ಣನಾಯಕನಿಂದ ಕ್ರಿ.ಶ.೧೭೨೮ರಲ್ಲಿ ಮರಾಠ ದಂಡನಾಯಕ ಸಿದ್ದೋಜಿ ಘೋರ್ಪಡೆಯು, ಸೊಂಡೂರು, ಕುಡತಿನಿಗಳನ್ನು ಪಡೆದು ೮ ವರ್ಷಗಳ ಕಾಲ ಚೌಥ್ ನೀಡಲು ಹೇಳಿದ.[೨೮೫] ಅಲ್ಲದೇ ಹೈದರಾಲಿಗೆ ವೀರಮದಕರಿನಾಯಕ ಸೋತಾಗ ಜರಿಮಲೆಯ ಪರಿವಾರದವರು ಜರಿಮಲೆಗೆ ಬಂದರು. ಆಗ ಹೈದರಾಲಿ ಜರಿಮಲೆಯವರಿಂದ ೩೦೦೦ ಪಗೋಡ ಹಣವನ್ನು

ವಾರ್ಷಿಕವಾಗಿ ಪಡೆಯುತ್ತಿದ್ದನು.[೨೮೬] ನಂತರ ಇವರು ನಿಜಾಮನ ಅಧೀನಕ್ಕೆ ಒಳಪಟ್ಟಾಗ, ಕ್ರಿ.ಶ.೧೮೦೦ರಲ್ಲಿ ವರ್ಷಕ್ಕೆ ೭೦೦೦ ರೂ.ಗಳನ್ನು ಪೊಗದಿ ಹಣವಾಗಿ ನೀಡುತ್ತಾ ಬಂದರು.[೨೮೭] ನಾಯಕನಹಟ್ಟಿ ಹಾಗೂ ಹರತಿ ನಾಯಕ ಅರಸರು, ತಮ್ಮ ಪ್ರದೇಶದ ಜನರು ನೀಡುತ್ತಿದ್ದ ತೆರಿಗೆಗಳಿಂದ, ಕಾಣಿಕೆಗಳಿಂದ ಆರ್ಥಿಕವಾಗಿ ಸಬಲರಾದರು. ಇವರು ಸಿರಾ ಪಾಳೆಯಗಾರರ ಅಧೀನ ಸಾಮಂತರೆನಿಸಿದ ಮೇಲೆ ಅವರಿಗೆ ವರುಷಕ್ಕೆ ೩೦೦ ವರಹ ಪೊಗದಿ ಕೊಟ್ಟರು.[೨೮೮]

ಹೀಗೆ ಕರ್ನಾಟಕದ ನಾಯಕ ಅರಸುಮನೆತನಗಳು ಸಾಂದರ್ಭಿಕವಾಗಿ ತಮ್ಮ ಮೇಲಿನ ಪ್ರಭುತ್ವವನ್ನು ಒಪ್ಪಿಕೊಂಡೋ, ಇಲ್ಲವೇ ಒಪ್ಪದೆಯೋ ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತ ತಮ್ಮ ತಮ್ಮ ರಾಜ್ಯದಲ್ಲಿ ಆಡಳಿತದ ಸ್ವಾತಂತ್ರ್ಯವನ್ನು ಕಾಯ್ದುಕೊಂಡಿದ್ದರು. ನಾಯಕ ಅರಸರ ಸಹಾಯದಿಂದಲೇ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ರಾಜ್ಯವನ್ನು ಕಟ್ಟುವ ಪ್ರಯತ್ನ ಮಾಡಿದರು. ಜೊತೆಗೆ ನಾಯಕ ಅರಸರು ಹೈದರಾಲಿ ಮತ್ತು ಟಿಪ್ಪುವಿನ ದಾಳಿಯನ್ನು ಎದುರಿಸಬೇಕಾಗಿತ್ತು ಆ ಸಂದರ್ಭದಲ್ಲಿ ಹೈದರಾಲಿ ಮತ್ತು ಟಿಪ್ಪು ಕಪ್ಪಕಾಣಿಕೆಗಳನ್ನು ಸಂಗ್ರಹಿಸುವ, ಖಜಾನೆಯನ್ನು ಲೂಟಿ ಮಾಡುವ ಆಸೆಗಾಗಿ ಹಾತೊರೆದರು. ಚಿತ್ರದುರ್ಗದ ಅರಸರು ಇದನ್ನು ವಿರೋಧಿಸುತ್ತಿದ್ದರು. ಆದರೆ ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಹರತಿನಾಯಕ ಅರಸುಮನೆತನಗಳು ತಮ್ಮ ಸ್ಥಾನವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ತಮಗೆ ಆಶ್ರಯ ನೀಡುವವರಿಗೆ ಕಪ್ಪಕಾಣಿಕೆಗಳನ್ನು ನೀಡಿದವು. ಕೆಲವು ಸಲ ಬಂಧುತ್ವದ ಮನೆತನಗಳೊಂದಿಗೆ ಯುದ್ಧಕ್ಕೆ ನಿಂತು ತಮ್ಮತಮ್ಮೊಳಗೆ ಸೋತು ಹಾಳಾಗುತ್ತಿದ್ದವು. ಇದನ್ನು ಅರಿತುಕೊಂಡ ಹೈದರಾಲಿ, ಟಿಪ್ಪುಸುಲ್ತಾನ, ಬ್ರಿಟಿಷರು ಮುಂತಾದವರು ಪ್ರಬಲ ನಾಯಕ ಅರಸು ಮನೆತನಗಳ ಅಧಿಕಾರ ಮತ್ತು ಆರ್ಥಿಕ ಸಂಪತ್ತನ್ನು ಕೊಳ್ಳೆ ಹೊಡೆದರು. ಪಾಳೆಯಗಾರರಿಂದ ಹೈದರಾಲಿಗೆ ಪೇಷ್ಕಣಿ ಹಣ ೨೦,೦೦,೦೦೦(ಇಪ್ಪತ್ತು ಲಕ್ಷ) ವರಹಗಳಷ್ಟು ಬರುತ್ತಿತ್ತು.[೨೮೯]

ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ ನಾಯಕ ಅರಸುಮನೆತನಗಳು ಮರಾಠರ, ಆದಿಲ್‌ಶಾಹಿಗಳ, ಮೊಗಲರ ಮತ್ತು ನಿಜಾಮರ ದಾಳಿಗಳನ್ನು ಎದುರಿಸಲು ಪ್ರಯತ್ನಿಸುತ್ತಿದ್ದವು. ಪ್ರಯತ್ನ ವಿಫಲವಾದಾಗ ಕಪ್ಪಕಾಣಿಕೆಗಳನ್ನು ಸಲ್ಲಿಸುವುದರ ಮೂಲಕ ಅಧಿಕಾರವನ್ನು ನಡೆಸಿದರು. ಇಲ್ಲಿಯೂ ತಮ್ಮತಮ್ಮೊಳಗೆ ಆಂತರಿಕ ಕಲಹಗಳಿದ್ದವು. ಆ ಕಲಹಗಳನ್ನೇ ಬಳಸಿಕೊಂಡು, ನಿಜಾಮರು, ಮರಾಠರು, ಆದಿಲ್‌ಶಾಹಿಗಳು, ಮೊಗಲ್ ಹಾಗೂ ಇಂಗ್ಲೀಷರು ಸುರಪುರ ಸಂಸ್ಥಾನವನ್ನು ಕಬಳಿಸಲು ಪ್ರಯತ್ನಿಸಿದರು. ಅಂತಿಮ ಹಂತದಲ್ಲಿ ಅದನ್ನು ಸಾಲಗಾರ ಸಂಸ್ಥಾನವೆಂಬ ಹಣೆಪಟ್ಟಿಯನ್ನು ಕಟ್ಟುವಷ್ಟರ ಮಟ್ಟಿಗೆ ಸಫಲರಾದರು. ಆದರೆ ಇಷ್ಟೆಲ್ಲಾ ತೊಂದರೆಗಳ ಮಧ್ಯೆ ಕರ್ನಾಟಕದ ನಾಯಕ ಅರಸುಮನೆತನಗಳು ತಮ್ಮ ಅಧೀನದ ಜಮೀನುದಾರರಿಗೆ, ಜಹಗೀರುದಾರರಿಗೆ, ನಾಡಗೌಡ, ಕುಲಕರ್ಣಿ ಮುಂತಾದ ಅಧಿಕಾರಿಗಳಿಗೆ ಹಣ

ವಸೂಲಿಗಾಗಿ ಕಿರುಕುಳ ನೀಡದೆ, ಪ್ರಜೆಗಳ ಕಲ್ಯಾಣದೃಷ್ಟಿಯಿಂದ ಸಂಸ್ಥಾನದ ಆಡಳಿತವನ್ನು ಸರಿದೂಗಿಸಿಕೊಂಡು ಹೋಗಿರುವುದು ಅವರ ಉನ್ನತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯೆನ್ನಬಹುದು.

## ೪.೮ ಬೇಟೆಯ ಪದ್ಧತಿ

ಬೇಟೆ ಆದಿಮಾನವನ ಆಹಾರ ಸಂಗ್ರಹಣೆಯ ಪ್ರಮುಖ ವೃತ್ತಿ. ವಿಶ್ವದಲ್ಲಿ ಮಾನವ ಜನಾಂಗ ಉಗಮವಾದ ತರುವಾಯ ಹಸಿವಿಗಾಗಿ ಕಂಡುಕೊಂಡ ಮೊದಲ ಪ್ರಯೋಗ. ಆನಂತರ ಮಾನವನ ವಿಕಾಸವಾದಂತೆಲ್ಲಾ ಬೇಟೆ ಅನೇಕ ಆಯಾಮಗಳನ್ನು ಪಡೆದುಕೊಂಡಿತು. ಬಲಿಷ್ಠಪ್ರಾಣಿಗಳ ಸಂಹಾರಕ್ಕೆ ಮಾನವ ಸಿದ್ಧನಾಗಿ ಬೇಟೆಗಾರನಾಗಿ ಪರಿವರ್ತಿತನಾದ ಮೇಲೆ ಇದಕ್ಕೊಂದು ಸ್ಥಾನ ಲಭಿಸಿತು. ಆಗ ಬೇಟೆಗಾರರ ಒಂದು ವರ್ಗವೇ ಸೃಷ್ಟಿಯಾಯಿತು. ಅದುವೇ ಬೇಡ ಜನಾಂಗ. ಬೇಟೆ ಇವರ ಹವ್ಯಾಸವಾಗಿ ಪರಿವರ್ತಿಸಲ್ಪಟ್ಟಿತು. ಬೇಟೆಯಲ್ಲಿ ತೋರುತ್ತಿದ್ದ ಸಾಹಸ ಧೈರ್ಯಗಳೇ ಇವರನ್ನು ಕೆಲ ರಾಜಮನೆತನಗಳು, ಸಾಮ್ರಾಜ್ಯಗಳು, ಸೈನಿಕರಾಗಿ, ಸೈನ್ಯದ ನಾಯಕರನ್ನಾಗಿ ನೇಮಿಸಿಕೊಳ್ಳಲು ಕಾರಣವಾಯಿತು. ನಂತರದಲ್ಲಿ ಇವರು ಅನೇಕ ಪಾಳೆಯಪಟ್ಟುಗಳನ್ನು ಕಟ್ಟಿಕೊಂಡು ಅರಸರಾದಾಗಲೂ ಬೇಟೆ ಇವರ ಹವ್ಯಾಸವಾಗಿ ಮುಂದುವರೆಯಿತು. ಬೇಟೆಯಾಡುವಲ್ಲಿ ದೇಹವನ್ನು ದಣಿಸುವುದರಿಂದ ಶರೀರ ತೆಳ್ಳಗಾಗಿ ಚುರುಕಾಗುವುದಲ್ಲದೇ ಅಂದಗೊಳ್ಳುತ್ತದೆ. ಮೈಮನಗಳನ್ನು ತಣಿಸುವ ಒಂದು ವಿನೋದವಾಗಿತ್ತು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ.೧೭೭೩-೧೮೦೨)ನು ಬೇಟೆಯನ್ನು ಒಂದು ವಿನೋದವೆಂದು ತಿಳಿದಿದ್ದ. ಆತನ ದೇಹ ತೆಳಗಿದ್ದು, ಬಹಳ ಚುರುಕಾಗಿದ್ದಕ್ಕೆ ಕಾರಣ ಆತನ ದಿನನಿತ್ಯದ ಬೇಟೆಯಾಗಿತ್ತು.

ಹೊಯ್ಸಳ, ಕುಮ್ಮಟದುರ್ಗ, ವಿಜಯನಗರ, ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕ್ಯಾದಿಗೇರಾ, ತರಿಕೇರೆ, ಹರಪನಹಳ್ಳಿ ಮುಂತಾದ ಸ್ಥಳಗಳಲ್ಲಿ ಅರಸರ ಬೇಟೆಗೆ ಹೋದಾಗ ಮೊಲವೊಂದು ನಾಯಿಯನ್ನು ಬೆನ್ನಟ್ಟಿ ಬರುವ ದೃಶ್ಯವನ್ನು ಕಂಡು ಅಲ್ಲಿಯೇ ತಮ್ಮ ರಾಜ್ಯಗಳನ್ನು ಸ್ಥಾಪಿಸಿದ ಬಗ್ಗೆ ಕೆಲವು ಐತಿಹ್ಯಗಳಿವೆ. ಇವುಗಳಿಂದ ಒಂದು ಮನೆತನದ ಸ್ಥಾಪನೆ, ಬೇಟೆಯೊಂದಿಗೆ ತಳುಕು ಹಾಕಿಕೊಂಡಿರುವುದನ್ನು ನೋಡಬಹುದಾಗಿದೆ. ಇವರು ಬೇಟೆಯಾಡುವುದರಲ್ಲಿ ತಮ್ಮ ಬಲಪ್ರದರ್ಶನದೊಂದಿಗೆ, ಬೇಟೆಯ ಕುರಿತಾದ ಜಾಣ್ಮೆಯನ್ನು ಹೊಂದಿದವರಾಗಿದ್ದರಲ್ಲದೇ ಪ್ರಾಣಿಗಳ ಸ್ವಭಾವ, ಗಾಳಿಬೀಸುವ ದಿಕ್ಕು, ಪ್ರಾಣಿಗಳಿರುವ ಸ್ಥಳ, ಮಲಗುವ ಎಡೆ, ಅವುಗಳು ನುಸುಳುವ ಕಂಡಿ, ಪ್ರತಿ ಕಂಡಿಗಳು, ಹೆಜ್ಜೆಯ ಗುರುತುಗಳು, ನೆಲದ ತಗ್ಗು, ದಿನ್ನೆ, ಹೆದರಿಕೆ,ಬೆದರಿಕೆಗಳನ್ನು ತಿಳಿದುಕೊಂಡವರಾಗಿರುತ್ತಿದ್ದರು.

ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ ರಕ್ಷಣೆ ಇದು ರಾಜರ ಗುರಿ. ಕೆಲವು ಸಂದರ್ಭಗಳಲ್ಲಿ ಪ್ರಜೆಗಳು ಕಾಡಿನಲ್ಲಿ ಮೃಗಗಳ ಹಾವಳಿ ಹೆಚ್ಚಾದಾಗ ರಾಜನ ಬಳಿಗೆ ಬಂದು, ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಳ್ಳುತ್ತಿದ್ದರು.

ಆಗ ಅರಸರು ಬೇಟೆಗಳನ್ನು ಕೈಗೊಳ್ಳುತ್ತಿದ್ದರು. ಅರಸರ ಬೇಟೆಗೆಂದೇ ಅರಣ್ಯದ ಕೆಲವು ಭಾಗಗಳನ್ನು ಪ್ರತ್ಯೇಕವಾಗಿ ಕಾದಿರಿಸಿ, ಅಲ್ಲಿ ಕಾಡುಪ್ರಾಣಿಗಳನ್ನು ಪುಷ್ಟಿಯಾಗಿ ಬೆಳೆಸಿ ಯೋಗ್ಯರೀತಿಯಲ್ಲಿ ಸಂರಕ್ಷಿಸುತ್ತಿದ್ದರು. ಅಂತಹ ಕಾಡುಗಳನ್ನು ಕಾಯ್ದಿರಿಸಿದ ಮನೆತನಗಳಲ್ಲಿ ಆನೆಗೊಂದಿ, ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ ಪ್ರಮುಖವಾದವುಗಳು. ಸುರಪುರದಲ್ಲಿ ಇಂದಿಗೂ ಅರಸರ ಬೇಟೆಯ ಹೊರಕೆರೆಯ ಅರಣ್ಯ, ಗುಡಗುಂಟಿಯಲ್ಲಿಯ ದೊರೆಗಳ ಬೇಟೆ ಅರಣ್ಯ, ಗುಂತಗೋಳದ ಅರಸರ ಬೇಟೆ ಗುಡ್ಡ ಎಂದು ಹೆಸರಾಗಿವೆ.[೨೯೦] ಈ ಅರಸರಿಗೆ ಪ್ರಾಣಿಗಳನ್ನು ಬೇಟೆಯಾಡಿ ಕೊಲ್ಲುವುದೇ ಒಂದು ಕ್ರೀಡಾವಿಹಾರವಾಗಿತ್ತು.

ಕುಮ್ಮಟದುರ್ಗದ ನಾಯಕ ಅರಸರ ಬೇಟೆಯು ಮುಂದೆ ಎಲ್ಲಾ ನಾಯಕ ಅರಸುಮನೆತನಗಳಿಗೆ ವ್ಯವಸ್ಥಿತ ಸಾಂಸ್ಕೃತಿಕ ಅಡಿಪಾಯವನ್ನು ಹಾಕಿದೆ. ಈ ಅರಸರು ಬೇಟೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡುದ್ದಲ್ಲದೇ, ಇದು ಅವರ ಯುದ್ಧ ನೈಪುಣ್ಯತೆಗೆ ಮಾದರಿ ತರಬೇತಿಯಾಗಿತ್ತು. ಕುಮ್ಮಟದುರ್ಗದ ರಾಜ ಕಂಪಿಲರಾಯ ಒಂದು ಸಲ ಒಡ್ಡೋಲಗ ನಡೆಸುತ್ತಿರುವಾಗ, 'ಒಬ್ಬ ಬೇಡರೊಡೆಯ ಆಗಮಿಸಿ ಅರಸನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಹಾಕಿ ನಂತರ, 'ಮಹಾಸ್ವಾಮಿ, ಕಾಡಿನಲ್ಲಿ ಮೃಗಗಳ ಹಾವಳಿ ಹೆಚ್ಚಾಗಿದೆ. ಹೀಗಾಗಿ ಅವುಗಳನ್ನು ಬೇಟೆಯಾಡಲು ಪ್ರಭುಗಳ ಸವಾರಿ ಈಗಲೇ ಚಿತ್ತೈಸಬೇಕೆಂದು ವಿನಂತಿ ಮಾಡಿಕೊಂಡನು. ಕಂಪಿಲನು ಆ ಬೇಡರೊಡೆಯನನ್ನು ಸತ್ಕರಿಸಿ ಬೇಟೆಗಾಗಿ ತೆರಳಲು ಸಂಕೇತವಾದ್ಯಗಳನ್ನು ಬಾರಿಸುವಂತೆ ಆಜ್ಞಾಪಿಸಿದನು. ಮರುಕ್ಷಣದಲ್ಲಿಯೇ ಕಂಪಿಲನ ಬಳಿಯಿದ್ದ ಬೇಡರ ಪಡೆಯೇ ಅಲ್ಲಿ ನೆರೆಯಿತು.[೨೯೧] ಅವರು ಬಿಲ್ಲು, ಬಾಣ, ಕತ್ತಿ, ಕುಡುಗೋಲು, ಬಲೆ ಮತ್ತು ಬೇಟೆ ನಾಯಿಗಳೊಂದಿಗೆ ಹಾಗೂ ಅರಣ್ಯದಲ್ಲಿ ತಂಗಲು ಗುಡಿ, ಗುಂಡಾರ, ಸರಾಕಿ ಪೆಟ್ಟಿಗೆ, ಗಿಂಡಿ, ಪಡಗ, ಮೆಲ್ಪಾಸು, ಮಂಚಗಳೊಂದಿಗೆ ರಾಜನೊಂದಿಗೆ ಬೇಟೆಗೆ ಸಿದ್ಧರಾದರು.

ವಂದಿಮಾಗಧರು ಕಂಪಿಲನನ್ನು ಬೇಟೆಗಾಗಿ ತೆರಳುವಂತೆ ಮಾಡಿ ಪರಾಕು ಹೇಳಿದರು. ರಾಜನು ರಕ್ಷಣೆಗಾಗಿ ತಕ್ಕ ವ್ಯವಸ್ಥೆ ಮಾಡಿ ಬೇಟೆಯ ಪಡೆಯನ್ನು ಬಂದು ಕೂಡಿಕೊಳ್ಳುವಂತೆ ಕುಮಾರರಾಮನಿಗೆ ಹೇಳಿಕಳುಹಿಸಿ ತಾನು ವಿಳಂಬ ಮಾಡದೆ ಹೊಸಮಲೆಯ ಅರಣ್ಯಕ್ಕೆ ತೆರಳಿದನು. ಹೊಸಮಲೆದುರ್ಗದ ಅರಣ್ಯದಲ್ಲಿ ಕರಡಿ, ಕಡವೆ, ಕಸ್ತೂರಿ ಮೃಗ, ಹುಲಿ, ಹುಲ್ಲೆ, ಕಾಡೆಮ್ಮೆ, ಮುಳ್ಳುಹಂದಿ, ಸಾರಂಗ, ಮೊಲ, ಮುಂಗುಸಿ, ನಾನಾ ಪ್ರಾಣಿಗಳು ಇದ್ದವು. ಬೇಟೆಗಾಗಿ ತೆರಳಿದ ಬೇಟೆಗಾರರ ದಂಡು ತಾವು ಬೇಟೆಗಾಗಿ ಸಾಕಿದ್ದ ಹುಲಿ, ಹುಲ್ಲೆ, ಸಾಳುವ ಮತ್ತು ನಾಯಿಗಳಿಂದ ಬೇಟೆಯಾಡಿ ಉಳಿದ ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಅರಣ್ಯದ ತುಂಬೆಲ್ಲಾ ರಾಜ ಕಂಪಿಲರಾಯ ಮೊದಲಿಗನಾಗಿ ಬೇಟೆಯಾಡುವನು. 'ಬೇಟೆ ಉಗ್ರರೂಪ ತಾಳಿದಾಗ ಹರಿಣ, ಹುಲಿ, ಚಿರತೆಗಳನ್ನು ಅರಸರು ಬೇಟೆಯಾಡುತ್ತಿದ್ದರು.[೨೯೨] ಹಾಗೆಯೇ, ಕಾಗೆ, ನವಿಲು, ಕಬ್ಬಾಯ, ಗುಬ್ಬಿ, ಕೊಂಬೆ ಗೂಬೆ, ಮರವ, ಪಾರಿವ, ಜಾಗರಿಕ, ಹರಡೆ-

ಹಂಗ, ಗೊರವಕ್ಕ ಮೂಗಿಲಹಣ್ಣಿನ ಹಸುಬ ಎಂಬ ಪಕ್ಷಿಗಳ ಹೆಸರನ್ನು ರಾಮನಾಥಚರಿತೆ(೨೭-೨೮)ಯಲ್ಲಿ ಹೆಸರಿಸಲಾಗಿದೆ. ಕೊಕ್ಕರೆ, ಗಿಳಿ, ಗೌಜು, ಸರಲೆ ಇತರ ಪಕ್ಷಿಗಳು ಬೇಟೆಗೊಳಗಾದವೆಂದು ದೇವರಾಜಕವಿ ಸೊಬಗಿನಸೋನೆಯಲ್ಲಿ ಹೇಳುತ್ತಾನೆ.[೨೯೩]

ನಂಜುಂಡಕವಿಯು ರಾಮನಾಥಚರಿತೆಯಲ್ಲಿ ಕಂಪಿಲರಾಯ ಬೇಟೆಗೆ ಹೊರಟ ಸನ್ನಿವೇಶವನ್ನು, ಅವನನ್ನು ಬೇಡತಿಯರು ಹಿಂಬಾಲಿಸುವುದನ್ನು, ಬೇಟೆಯ ವಿವಿಧ ಸಾಧನಗಳನ್ನು ಹೇಳುತ್ತಾನೆ. ಬೇಡರಂತೆ ಬೇಡತಿಯರೂ ತಮಗೆ ತಕ್ಕಂತೆ ತೊಡೆ, ಚಲ್ಲಣ, ಮೊಲೆಕಟ್ಟು, ಹೆಣೆದ ಜಡೆ, ಕಲ್ಲಿ ಸುರಗಿಗಳಿಂದ ಬಂದರು.[೨೯೪] ಬೇಡರು ಹೆಬ್ಬಲೆ ತೆರೆಸೀಲೆ, ಕಾಲ್ಕಾಣ್ಣೆ, ಬೆಳ್ಳಾರ ಹಬ್ಬುಗೆ ವಲೆ, ಕುಡುಗೋಲು, ಕತ್ತಿ, ಕೊಡಲಿ, ಹೇರಿಟ್ಟ ಬಡಿಗೋಲು, ಇಡುಕೈದು, ಗುಡಿ, ಗುಡಾರ, ಸರಾತಿ ಪೆಟ್ಟಿಗೆ, ಗಿಂಡು ಪಡಿಗ, ಮಂಚ[೨೯೫] ಮುಂತಾದ ಸಕಲ ಸಾಮಗ್ರಿಗಳನ್ನು ಅಣಿಮಾಡಿಕೊಂಡು ಹೋಗುತ್ತಿದ್ದರು.

ಚಿತ್ರದುರ್ಗ ಪಾಳೆಯಗಾರರು ಬೇಟೆಯಾಡುವುದರಲ್ಲಿ ನಿಷ್ಣಾತರಾಗಿದ್ದರಲ್ಲದೇ, ಇವರು ಮದಿಸಿದ ಆನೆಯನ್ನು ಪಳಗಿಸಿದ್ದುದೇ ಇವರಿಗೆ 'ಮದಕರಿ' ಬಿರುದು ಬರಲು ಕಾರಣವಾಯಿತೆಂಬ ಐತಿಹ್ಯವಿದೆ. ಅದರಂತೆ ಕಸ್ತೂರಿ ರಂಗಪ್ಪನಾಯಕ ಮತ್ತು ರಾಜಾ ವೀರಮದಕರಿನಾಯಕರುಗಳ 'ಗಾದ್ರಿಮಲೆಹೆಬ್ಬುಲಿ' ಎಂಬ ಬಿರುದು ಹುಲಿಬೇಟೆಯ ಪ್ರತೀಕವಾಗಿಯೇ ಬಂದುದೆಂದು ಹೇಳಬಹುದು. ಜಂಪಳ್ಳಿನಾಯಕ ಬೇಟೆಯನ್ನು ಹವ್ಯಾಸವನ್ನಾಗಿ ಮಾಡಿಕೊಂಡ ಓರ್ವ ವೀರ. ಈತ ಅಡವಿ ಬೆಟ್ಟಗುಡ್ಡಗಳಲ್ಲಿ ಬೇಟೆಯಾಡಿದ ವಿವರವನ್ನು ಕೋಲಾಟಪದ ಈ ರೀತಿ ವಿವರಿಸುತ್ತದೆ.

ಗರಡಿಮನೆಗೋಗಿ ಬರುವ ಜಂಪಣ್ಣಾಗೆ
ಒಂಟಿ ಕೊರಳಿಗೆ ಕೀಲು ಸರಪಳಿ ಹಾಕಿ
ಆರಾಳ ನಡುವೆ ಬರುವಾನೆ ಕೋಲು[೨೯೬]

ಸುರಪುರದ ಭಾಗದಲ್ಲಿ ಹುಲಿಯೊಂದು ಪ್ರಜೆಗಳಿಗೆ ತೊಂದರೆ ಕೊಡುತ್ತಿತ್ತು. ಊರೊಳಗೆ ನುಗ್ಗಿ ಅನೇಕ ಅನಾಹುತಗಳನ್ನು ಮಾಡಿತ್ತು. ಸಾಕಷ್ಟು ಸಾಕುಪ್ರಾಣಿಗಳು, ಜನರು ಅದಕ್ಕೆ ಬಲಿಯಾಗಿದ್ದರು. ಆಗ ಪ್ರಜೆಗಳು ಬಂದು ಅರಸ ಪಾಮನಾಯಕರಲ್ಲಿ ಬಿನ್ನವಿಸಿಕೊಂಡರು. ಆಗ ಪಾಮನಾಯಕ ಬೇಟೆನಾಯಿಗಳೊಂದಿಗೆ ಹಾಗೂ ತಾವು ಸಾಕಿದ ಗಿಡುಗದೊಂದಿಗೆ ಕಾಡಿಗೆ ಹೊರಟರು. ಆಗಲೇ ಇವರ ಬರುವಿಕೆಯನ್ನು ಅರಿತಿದ್ದ ಕಾಡಿನ ಜನ ಶಿಕಾರಿಯು ಎಲ್ಲಿದೆ ಎಂಬುದನ್ನು ವಾಲೀಕಾರನ ಮುಖಾಂತರ ತಿಳಿಸಿದ್ದರು.

ಪಾಮನಾಯಕರು ತಮ್ಮ ಪ್ರಾತಃವಿಧಿಗಳನ್ನೆಲ್ಲ ಮುಗಿಸಿಕೊಂಡ ನಂತರ ನಿಧಾನವಾಗಿ ಡೇರೆಯಿಂದ ಹೊರ ಭಾಗಕ್ಕೆ ಬಂದು ನಿಂತುಕೊಂಡರು. ಅವರ ಬಲಗೈ ಮೇಲೆ ಸಾಕಿದ ಗಿಡುಗ ಪಕ್ಷಿಯಿತ್ತು. ಡೇರೆಯ ಹೊರಭಾಗದಲ್ಲಿ ಕಟ್ಟಿದ ಬೇಟೆಯ ನಾಯಿಗಳು ತಮ್ಮ ಧಣಿಯನ್ನು ನೋಡುತ್ತಿದ್ದಂತೆ ಧಾವಿಸಿಬರಲು

ಚಡಪಡಿಸಿದವು.[೨೯೭] ರಾಜರು ಬೇಟೆಯಾಡುವ ಸಂದರ್ಭಗಳಲ್ಲಿ ನಾಯಿಗಳನ್ನು ಬಳಸಿಕೊಳ್ಳುತ್ತಿದ್ದರು. ಕಾರಣ ನಾಯಿಗಳ ಮೂಗು ಬಹಳ ಚುರುಕು. ವಾಸನೆಯ ಬಲದಿಂದಲೇ ಶತ್ರುಗಳ ಜಾಡು ಹಿಡಿಯುತ್ತವೆ. ಹೀಗಾಗಿ ದೂರದಿಂದಲೇ ಬೇಟೆಯನ್ನು ಗುರುತಿಸಲು ಅಪಾಯವನ್ನು ಗ್ರಹಿಸಲು ನಾಯಿಗಳನ್ನು ಬೇಟೆಯಲ್ಲಿ ಬಳಸುವ ಪದ್ಧತಿ ಬೆಳೆಯಿತು. ಅಲ್ಲದೆ ನಾಯಿಯು ಸ್ವಾಮಿನಿಷ್ಠೆಗೆ ಹೆಸರಾಗಿದ್ದುದರಿಂದ ಒಡೆಯನಿಗೆ ಆಪತ್ತು ಬಂದಾಗ ಅವನನ್ನು ರಕ್ಷಿಸಲು ಧಾವಿಸುತ್ತಿತ್ತು.[೨೯೮] ಈ ನಾಯಿಗಳಿಗೆ ಶಿಸ್ತಿನಿಂದ ಬೇಟೆಯಾಡುವುದನ್ನು, ಕಲಿಸಿರುತ್ತಿದ್ದರು.

ಪಾಮನಾಯಕರು ಭಲ್ಲೆಯನ್ನು ಹಿಡಿದು ಹುಲಿಯಿದ್ದ ಕಡೆಗೆ ಹೊರಟರು ಅವರ ಜೊತೆಗಿನ ಬೇಟೆನಾಯಿಗಳು, ಉತ್ಸಾಹದಿಂದ ಹೊರಟಿದ್ದವು. ನಾಯಕರು ಅವುಗಳ ಕೊರಳಪಟ್ಟಿ ಬಿಚ್ಚಿದರು. ಅವು ಅರಣ್ಯದ ನಾಲ್ಕುದಿಕ್ಕಿಗೆ ಹೋದವು. ವಾಸನೆಯ ಮೂಲಕ ಹುಲಿಯಿದ್ದ ಗವಿಯ ಸಮೀಪ ಆಗಮಿಸಿದವು. ಹೊರಗಡೆ ಬೊಗಳಲಾರಂಭಿಸಿದವು. ಹುಲಿ ಹಿಂದಿನ ರಾತ್ರಿ ಸಾಕಷ್ಟು ಆಹಾರ ಸೇವಿಸಿ ನಿದ್ರಿಸುತ್ತಿತ್ತು. ನಾಯಿಗಳ ಕಿರುಚಾಟ ಕೇಳಿ ಮೆಲ್ಲಗೆ ಎದ್ದು ಹೊರಗಡೆ ಬರಲಾರಂಭಿಸಿತು. ಪಾಮನಾಯಕರು ಇನ್ನೂ ದೂರವಿದ್ದರು. ಆ ಹುಲಿಯನ್ನು ನೋಡಿದ ನಾಯಿಗಳಿಗೆ ಹುರುಪು ಹೆಚ್ಚಿತು. ಹುಲಿ ಗವಿಯಿಂದ ಹೊರಬಂದ ಕೂಡಲೇ ಎರಡು ನಾಯಿಗಳು ಹಿಂಬದಿಯಿಂದ ಬೊಗಳಿದರೆ, ಇನ್ನೆರಡು ನಾಯಿಗಳು ಅದರ ಪಕ್ಕದಲ್ಲಿ ಅವಿತುಕೊಂಡಿದ್ದವು. ಈ ನಾಯಿಗಳಿಗೆ ಈಗಾಗಲೇ ಬೇಟೆಯ ತರಬೇತಿ ನೀಡಲಾಗಿತ್ತು.

ಹುಲಿಯು ಹೊರಬಂದಿತು. ನಾಯಿಗಳು ರಭಸದಿಂದ ಹುಲಿಯ ಮೇಲೆರಗಲು ಪ್ರಯತ್ನಿಸಿದವು. ಹುಲಿಯ ಕೋಪ ಇಮ್ಮಡಿಯಾಯಿತು. ನಾಯಿಗಳ ಮೇಲೆ ಹಾರಲು ಪ್ರಯತ್ನಿಸಿತು. ಒಂದು ನಾಯಿ ಹಿಂದಿನಿಂದ ಅದರ ಅಂಡನ್ನು ಹಿಡಿಯಲು ಪ್ರಯತ್ನಿಸಿತು. ಆಗ ಹುಲಿ, ಅದರ ಕಡೆ ತಿರುಗಿತು. ಇನ್ನೊಂದು ನಾಯಿ ಅದರ ಕುತ್ತಿಗೆಗೆ ಹಾರಿತು. ಆಗ ನಾಯಕರು ಆ ನಾಯಿಗಳ ಹೆಸರನ್ನು ಹುರುಪಿನಿಂದ ಹೇಳುತ್ತಾ ಪ್ರೋತ್ಸಾಹಿಸುತ್ತಿದ್ದರು. ಆಗ ಹುಲಿಗೆ ಮನುಷ್ಯನ ವಾಸನೆ ಮತ್ತು ಧ್ವನಿ ತಾಗಿದ ಕೂಡಲೇ ಅರಸ ಪಾಮನಾಯಕರ ಮೇಲೆ ಆಕ್ರಮಣ ಮಾಡಿತು. ಅವರ ಹೆಗಲ ಮೇಲಿದ್ದ ಗಿಡುಗ ಹಾರಿ ಹುಲಿಯ ಕಣ್ಣನ್ನು ಕುಕ್ಕಲು ಪ್ರಯತ್ನಿಸುತ್ತಿತ್ತು. ಪಾಮನಾಯಕರು ಕೈಯಲ್ಲಿಯ ಭಲ್ಲೆಯಿಂದ ಹುಲಿಯ ವಕ್ಷಸ್ಥಳಕ್ಕೆ ತಿವಿದರು. ತಕ್ಷಣವೇ ಹುಲಿ ಗುಡುಗು ಹಾಕಿ ನೆಲಕ್ಕುರುಳಿತು.[೨೯೯]

ಈ ರೀತಿಯ ಘಟನೆಗಳು ಸುರಪುರದ ಅರಸರ ಕಾಲದಲ್ಲಿ ಜರುಗಿವೆ. ರಾಜಾ ನಾಲ್ವಡಿ ವೆಂಕಟಪ್ಪನಾಯಕರು ದಿನಗಟ್ಟಲೇ ಕಾಡಿಗೆ ಬೇಟೆಗೆಂದು ಹೋಗುತ್ತಿದ್ದರು.[೩೦೦] ಇವರು ಹುಲಿ, ಜಿಂಕೆ, ಹಂದಿಗಳನ್ನು ಬೇಟೆಯಾಡುತ್ತಿದ್ದರಲ್ಲದೆ ಬೆಟ್ಟಗಳಲ್ಲಿಯ ಚಿರತೆಗಳನ್ನು ಜೀವಂತವಾಗಿ ಹಿಡಿದು ಹಿಂಗಾಲಿಗೆ ಸರಪಳಿಗಳನ್ನು ಕಟ್ಟಿ ನಾಯಿಯೊಡನೆ ಕಾದಾಡಿಸುತ್ತಿದ್ದರು. ಯಾರ ನಾಯಿ ಇದನ್ನು ಗಾಯಗೊಳಿಸಿ ನಿಸ್ತೇಜಗೊಳಿಸುತ್ತದೆಯೋ, ಅಂಥ ನಾಯಿಯ ಪಾಲಕರಿಗೆ ಬಹುಮಾನವನ್ನು

ಕೊಡುತ್ತಿದ್ದರು.[೩೦೧] ಒಂದು ವೇಳೆ ತಮಗೆ ಬೇಕಾದಲ್ಲಿ ಇನ್ನೂ ಹೆಚ್ಚಿನ ಮೊತ್ತವನ್ನು ಪೋಷಕರಿಗೆ ನೀಡಿ ಆ ನಾಯಿಗಳನ್ನು ತಮ್ಮ ವಶಕ್ಕೆ ಪಡೆದುಕೊಳ್ಳುತ್ತಿದ್ದರು.

ಇಮ್ಮಡಿ ವೆಂಕಟಪ್ಪನಾಯಕನ ಕಾಲದಲ್ಲಿ ರೂ.೨೫೦೦ ವೆಚ್ಚದಿಂದ ನಿರ್ಮಾಣಗೊಂಡ ಬಹುಮುಖ್ಯ ಕೆರೆಯೆಂದರೆ ಹೊಸಕೇರಿಕೆರೆ. ಇದನ್ನು ವಿವಿಧ ಉದ್ದೇಶಗಳಿಗಾಗಿ ಕಟ್ಟಲಾಗಿತ್ತು.[೩೦೨] ಅದರಲ್ಲಿ ಬೇಟೆಯಾಡುವುದು, ಬೇಟೆಗಾಗಿ ಬಳಸಿಕೊಳ್ಳುವ ಪ್ರಾಣಿಗಳಿಗೆ ತರಬೇತಿ ನೀಡಲು ಅನುಕೂಲವಾಗಿತ್ತು. ಹೊಸಕೇರಿಯ ಸುತ್ತಲೂ ಅಪಾರ ಪ್ರಾಣಿ ಪಕ್ಷಿಗಳ ಸಂಪತ್ತು ಇತ್ತು. ಸುರಪುರದ ಅರಸರಿಗೆ ಬೇಟೆಯಾಡಲು ಅದೊಂದು ಮನೋರಂಜನೆಯ ಸ್ಥಳವೂ ಆಗಿತ್ತು. ಅದಕ್ಕಾಗಿ ಆ ಕೆರೆಯ ಪಕ್ಕದಲ್ಲಿ ವಿಶ್ರಾಂತಿ ಬಂಗಲೆಯನ್ನು ನಿರ್ಮಿಸಿದ್ದರು. ಅದಕ್ಕೆ 'ಹೊಸಕೇರಿಯ ಬೇಟೆಯ ಮಹಲು' ಎಂದು ಕರೆಯುತ್ತಾರೆ. ಅಲ್ಲಿ ಕುಳಿತು ಕೆರೆಗೆ ನೀರಿಗಾಗಿ ಬರುವ ಪ್ರಾಣಿಗಳನ್ನು ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಆನೆಗೊಂದಿಯ ತಿರುಮಲದೇವರಾಯರಿಗೆ ಬೇಟೆಯಾಡುವುದೇ ಒಂದು ಹುಚ್ಚಾಗಿತ್ತಂತೆ; ಅವರು ಎರಡು ಮೂರು ದಿನಗಟ್ಟಲೇ ಬೇಟೆಗೆ ಹೋಗುತ್ತಿದ್ದರು. ಅವರಿಗೆ ಜಿಂಕೆಯ ಬೇಟೆಯೆಂದರೆ ಪಂಚಪ್ರಾಣ ವಾಗಿತ್ತು.[೩೦೩]

ಗುಡೇಕೋಟೆಯ ಅರಸರು ಮಂಗಳಕರ ವೇಳೆಯಲ್ಲಿ ಪರಿವಾರದೊಂದಿಗೆ ಬೇಟೆಗೆ ಹೋಗುತ್ತಿದ್ದರು. ಗುಡೇಕೋಟೆಯ ಸುತ್ತಲೂ ಅರಣ್ಯ ದಟ್ಟವಾಗಿರುವುದರಿಂದ, ಮೊಲ, ಜಿಂಕೆ, ಚಿಗರೆ ಮುಂತಾದ ಪ್ರಾಣಿಗಳ್ನು ಬೇಟೆಯಾಡುತ್ತಿದ್ದರು. ಈ ಮನೆತನದ ಅರಸರು ಉತ್ತಮ ಬೇಟೆಯಾಡಿದವರಿಗೆ ಬಹುಮಾನವನ್ನು ನೀಡುತ್ತಿದ್ದರು. ಇದನ್ನು ನೋಡಿದರೆ ಈ ಅರಸರು ಬೇಟೆಗೆ ಪ್ರೋತ್ಸಾಹ ನೀಡುತ್ತಿದ್ದರೆಂದು ತಿಳಿಯಬಹುದು.[೩೦೪] ಇವರ ಬೇಟೆಯ ಗುರುತಿಗಾಗಿ ಅಲ್ಲಿಯ ಆಂಜನೇಯ ದೇವಾಲಯದಲ್ಲಿ ಬೇಟೆ ಶಿಲ್ಪ ಇದೆ.

ಜರಿಮಲೆ ಅರಸರ ಪೂರ್ವಜರಾದ ಸಿದ್ದಪ್ಪನಾಯ್ಕ, ಲಿಂಗಳನಾಯ್ಕ, ಓಬಳನಾಯ್ಕ, ಮಲ್ಲಿಕಾರ್ಜುನ ನಾಯ್ಕ ಮುಂತಾದವರು ಬಳ್ಳಾರಿ ಜಿಲ್ಲೆಯ ಗಂಗಮ್ಮನಹಳ್ಳಿ ದೋಣಿಗುಡ್ಡದವರೆಗೂ ಬಂದಾಗ, ಅಲ್ಲಿ ಶ್ರೀಮರುಳಸಿದ್ದಾರ್ಯಸ್ವಾಮಿಗಳ ದರ್ಶನವಾಯಿತು. ಇವರ ಆಶೀರ್ವಾದದಂತೆ ಜಗಳೂರು ತಾಲೂಕಿನ ಮಳೆಭೂಪಸಮುದ್ರಕ್ಕೆ ಬಂದು ನೆಲೆಸಿದರು. ಅಲ್ಲಿ ಒಂದು ಕಾಡುಹಂದಿ ಊರಜನರಿಗೆ ಉಪದ್ರವ ನೀಡುವುದನ್ನು ಆ ಊರಿನ ಮುಖಂಡ ಅರುಹಿದಾಗ, ಈ ಏಳುಜನ ನಾಯಕರು ಆ ಹಂದಿಯನ್ನು ಹಿಂಬಾಲಿಸಿದರಂತೆ. ಪರಾರಿಯಾದ ಹಂದಿ ನೀರ್ಕಲ್‌ಕೆರೆನಳ್ಳಿ(ಚಿಕ್ಕಕೆರೆನಹಳ್ಳಿ)ವರೆಗೆ ಬಂದಿತು. ಅಲ್ಲಿದ್ದ ಹಳ್ಳದಲ್ಲಿ ಮೈನೆನಸಿಕೊಂಡು ಗುಡ್ಡದಲ್ಲಿ ಹೋಗಿ ಅಡಗಿತು. 'ಏಳುಮಂದಿ ನಾಯಕರ ಪೈಕಿ ಭೂಮರಾಜು ಎಂಬುವನು ಆ ಹಂದಿಗೆ ಭರ್ಚಿ ಹಾಕಿದ. ಹಂದಿ ಸಿಂಹದ ಗರ್ಜನೆ ಮಾಡಿತು. ಪಕ್ಕದ ಗುಂಡು ಆಭಯಂಕರ ಗರ್ಜನೆಗೆ ಸಿಡಿಯಿತಂತೆ. ಹೀಗಾಗಿ ಆ ಗುಂಡನ್ನು 'ಹಂದಿವಡೆದ ಕಲ್ಲು' ಎಂದು

ಕರೆಯುತ್ತಾರೆ.[೩೦೫] ಈ ಅರಸರ ಮನೆಯಲ್ಲಿ ಅವರು ಬೇಟೆಯಾಡಿದ ಕುರುಹಾಗಿ ಕಾಡುಕೋಣ ಮತ್ತು ಜಿಂಕೆಯ ಕೊಂಬುಗಳಿರುವುದನ್ನು ನೋಡಬಹುದಾಗಿದೆ.

ತರೀಕೆರೆ ಪಾಳೆಯಗಾರರ ಸರ್ಜಪ್ಪನಾಯಕ ಬೇಟೆಯ ಮೂಲಕವೇ ರಾಜ್ಯ ಸ್ಥಾಪಿಸಿದನು. ಇಲ್ಲಿಯೂ ಮೊಲ ಮತ್ತು ನಾಯಿಯ ಕತೆ ಹೆಣೆದುಕೊಂಡಿದೆ. ಇದೇ ವಂಶದ ರಂಗಪ್ಪನಾಯಕನನ್ನು ಕೆಂದಹುಲಿ ಎದೆಯ ಮೇಳೆ ಕುಳಿತು ಖಂಡ ಖಂಡವನ್ನು ಕಿತ್ತರೂ ಏನೂ ಮಾಡಲಾಗುವುದಿಲ್ಲ. ಈ ನಾಯಕನು ಮೈಸೂರು ಭಾಗದ ಕೆಂದಹುಲಿ ಎಂಬ ವೀರನೊಡನೆ ಹೋರಾಡಿ ಕೆಳಗುರುಳುತ್ತಾನೆ. ಹಿರಿಯ ಮಗ ಸರ್ಜಪ್ಪನಾಯಕನ ಪರಾಕ್ರಮ ಕಂಡು ಮೈಸೂರು ಕೋಟೆ ಮುಚ್ಚಲಾಯಿತು. ಇವನು ಕರಿಮುಂಟಿಬಾರೆಯಲ್ಲಿ 'ಕರಿಹುಲಿ'ಯನ್ನು ಕೊಂದು ತಂದೆಗೆ ನೀರು ಚಿಮಿಕಿಸಿ ಎಚ್ಚರಗೊಳ್ಳುವಂತೆ ಮಾಡುತ್ತಾನೆ. ನಂತರ ಗರಡಿ ಮನೆಗೆ ಹೋಗಿ ಹುಲಿಯಾಗಿ ಬಂದು ವಿರೋಧಿಯನ್ನು ಕೊಲ್ಲುತ್ತಾನೆ. ಇದು ಈತನ ಶೌರ್ಯದ ಪ್ರತೀಕವೇ ಸರಿ. ಇವರು ಕುದುರೆ ಮೇಲೇರಿ ಮಲೆನಾಡಿನ ಪ್ರದೇಶದಲ್ಲಿ ಬೇಟೆಯಾಡುತ್ತಿದ್ದರು.[೩೦೬]

ಗುಡುಗುಂಟಿ ಅರಸು ಮನೆತನದ ರಾಜಾ ಜಡಿಸೋಮಪ್ಪನಾಯಕರು ಚಿರತೆಯೊಂದಿಗೆ ಹೋರಾಡಿ ಕೊಂದ ಘಟನೆ ಜನಜನಿತವಾಗಿದೆ. ಇವರಿಗೆ ಮೊಲ ಮತ್ತು ಚಿಗರೆ ಬೇಟೆಯ ಮೇಲೆ ಅತಿ ವ್ಯಾಮೋಹವಂತೆ. ಇವರ ಬೇಟೆಯ ದ್ಯೋತಕವಾಗಿ, 'ಬೇಟೆಯ ಕಟ್ಟೆ'ಯೆಂದು ಒಂದು ಕಟ್ಟೆಯನ್ನು ಗುಡುಗುಂಟಾದಲ್ಲಿ ನಿರ್ಮಿಸಿದ್ದಾರೆ. ಇವರು ಪ್ರಾಣಿಗಳ ಸುಳಿವಿನ ದಿಕ್ಕನ್ನು ಗುರುತಿಸಿ ಬೇಟೆಯಾಡುವಲ್ಲಿ ನಿಷ್ಣಾತರಾಗಿದ್ದರು. ರಾಜಾ ಸೋಮಲಿಂಗನಾಯಕರು ಕೆಲವು ಬಾರಿ ಪಂಜರಗಳಲ್ಲಿ ಕುಳಿತು, ಕೆಲವು ಬಾರಿ ಬಂಡಿಯಲ್ಲಿ ಕುಳಿತು ಬೇಟೆಯಾಡುತ್ತಿದ್ದರು.[೩೦೭] ಗುಂತಗೋಳದ ಅರಸರು ಮಲಗಿದ ಪ್ರಾಣಿಯನ್ನು ಬೇಟೆಯಾಡುತ್ತಿರಲಿಲ್ಲ. ಅದು ದ್ರೋಹವೆಂದು ತಿಳಿಯುತ್ತಿದ್ದರು. ಅದನ್ನು ಎಚ್ಚರಿಸಿಯೇ ಬೇಟೆಯಾಡುತ್ತಿದ್ದರು. ರಾಜಾ ನರಸಿಂಹನಾಯಕರು 'ಬೇಟೆಯ ದೊರೆಯೆಂದೇ ಖ್ಯಾತರಾಗಿದ್ದರು.[೩೦೮] ಇವೆಲ್ಲವು ಈ ಅರಸರ ಅಧಿಕಾರಾವಧಿಯಲ್ಲಿ ನಡೆದ ಕೆಲವು ಘಟನೆಗಳಾದರೆ, ಇವರು ಅಂದು ಆಡುತ್ತಿದ್ದ ಬೇಟೆಯ ರೀತಿಗಳನ್ನು ಈ ರೀತಿ ವಿಂಗಡಿಸಬಹುದಾಗಿದೆ :

### ೪.೮.೧ ಯುಗಾದಿಯ ಬೇಟೆ

ಹಿಂದೂಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ಯುಗಾದಿಯೂ ಒಂದು. ಇದು ಕಾಲಮಾನವನ್ನಾಧರಿಸಿ ಆಚರಿಸುವ ಹಬ್ಬ, ಈ ಹಬ್ಬವನ್ನು ವರ್ಷದ ಮೊದಲಹಬ್ಬವೆಂತಲೂ ಪರಿಗಣಿಸುತ್ತಾರೆ. ಈ ಹಬ್ಬದಲ್ಲಿಯ ಬೇಟೆಯನ್ನು ನಾಯಕ ಮನೆತನದ ಅರಸರು ವಿಶಿಷ್ಟ ರೀತಿಯಿಂದ ಆಚರಿಸುತ್ತಾ ಬಂದಿದ್ದಾರೆ. ಸಾಂಪ್ರದಾಯಿಕವಾಗಿ ಹಿಂದಿನಿಂದಲೂ ನಡೆದುಕೊಂಡು ಬಂದ ಪದ್ಧತಿ ಪ್ರಕಾರ ಅಮಾವಾಸ್ಯೆಯ ದಿನ ಬೆಳಗ್ಗೆ ಅರಮನೆಯನ್ನು ಸಾರಿಸಿ ಪವಿತ್ರಗೊಳಿಸುತ್ತಿದ್ದರು. ನಂತರ ಎರಡನೆಯ ದಿನ ಪಾಡ್ಯದಂದು

ಹಿರಿಯರಹಬ್ಬವೆಂದು ಆಚರಿಸುತ್ತಿದ್ದರು. ಅಂದು ಇವರು ತಮ್ಮ ಸಿಬ್ಬಂದಿಗೆ ಹೇಳಿ ಬೇಟೆಯ ಆಯುಧಗಳನ್ನು ಅಣಿ ಮಾಡಿಸುತ್ತಿದ್ದರು. ಅಂದು ಅವುಗಳಿಗೆ ಪೂಜೆಮಾಡಲಾಗುತ್ತದೆ.[೨೦] ಪಾಡ್ಯದ ಮರುದಿನ ಬೇಟೆಗೆ ಹೋಗುತ್ತಿದ್ದರು.

ಬೇಟೆಗೆ ತೆರಳುವಾಗ ಆಯುಧಗಳಾದ ಗಂಡ್ಗೊಡ್ಲಿ, ಚಂದ್ರಾಯುಧ, ಭರ್ಚಿ, ಈಟಿ, ಕೋಲು, ಬಂದೂಕು, ಬೇಟೆನಾಯಿಗಳ ಸಂಗಡ ಸನ್ನದ್ಧರಾಗಿ, ವಾದ್ಯಗಳ ಅರ್ಭಟದೊಂದಿಗೆ ತೆರಳುತ್ತಿದ್ದರು. ಜೊತೆಗಾರರು ಕುಣಿಯುತ್ತಿದ್ದರು. ಬೇಟೆಗೆ ತೆರಳುವಾಗ ಕುಣಿಯುವುದು ವಾಡಿಕೆ. ಸುರಪುರದ ಅರಸು ಮನೆತನದಲ್ಲಿ ಪೀತಾಂಬರ ಬಹರಿ ಪಿಡ್ಡನಾಯಕರು ಬೇಟೆಯ ನೃತ್ಯದ ಒಂದು ತಂಡವನ್ನೇ ಕಟ್ಟಿದ್ದರು.[೩೧೦]

ಅರಸನ ಅಧೀನದ ಕೆಲವು ಊರುಗಳಲ್ಲಿಯೂ ಸಹ ಅಲ್ಲಿಯ ನಾಯಕ ಜನಾಂಗದ ಬೇಟೆಗಾರರು ಬೇಟೆಗೆ ತೆರಳುತ್ತಿದ್ದರು. ಅಲ್ಲಿಗೆ ರಾಜ ಇಲ್ಲವೇ ರಾಜ ಪ್ರತಿನಿಧಿಗಳು ಹೋಗಿ ಅನುಮತಿಯನ್ನು ನೀಡಬೇಕಾಗಿತ್ತು. ಸುರಪುರಕ್ಕೆ ಸಂಬಂಧಿಸಿದಂತೆ ವೆಂಕಟಾಪುರ, ಲಕ್ಷ್ಮೀಪುರ, ಹಸನಾಪುರ, ವನದುರ್ಗಗಳಲ್ಲಿ ಈ ಪದ್ಧತಿ ಇತ್ತು. ಹಾಗೆಯೇ ಬಳ್ಳಾರಿಯ ಜಿಲ್ಲೆಯ ಕಮಲಾಪುರದ ಏಳುಕೇರಿಗಳಾದ ಬಂಡೆಕೇರಿ, ಪೆದಿಕೇರಿ, ತಿಮ್ಮಾತಕೇರಿ, ಗೋನಾಳಕೇರಿ, ಚಾವಡಿಕೇರಿ, ಮಲಮತ್ತಿಕೇರಿ ಮತ್ತು ಉಸಿ ಈ ಕೇರಿಗಳಿಗೆ ಏಳುಜನ ಗುರಿಕಾರರಿದ್ದು, ಬೇಟೆಗೆ ಹೊರಡುವ ಮುನ್ನ ಆನೆಗೊಂದಿ ನಾಯಕ ಅರಸರನ್ನು ಕರೆಯಿಸುತ್ತಿದ್ದರು. ಬಂದ ಅರಸರು ನಾಯಕರ ಪ್ರತಿಷ್ಠಿತ ಚಾವಡಿಕೇರಿಯಕಟ್ಟೆಯ ಮೇಲೆ ಕುಳಿತುಕೊಂಡು ಬೇಟೆಗೆ ಹೋಗುವವರಿಗೆ ಶುಭವಾಗಲೆಂದು ಹಾರೈಸುತ್ತಿದ್ದರು. ಕೆಲವು ಸಾರಿ, ಅರಸ ಬರದಿದ್ದಾಗ, ಇಲ್ಲಿಯವರಲ್ಲಿ ಒಬ್ಬರು ಆನೆಗೊಂದಿಗೆ ಹೋಗಿ ಅರಸರ ಒಪ್ಪಿಗೆ ತರುತ್ತಿದ್ದರು. ಅರಸರಿಂದ ಒಪ್ಪಿಗೆ ದೊರೆತ ವಿಷಯ ತಿಳಿಯುತ್ತಿದ್ದಂತೆಯೇ ಯುವಕರು ಉತ್ಸಾಹದ ಕೂಗು ಹಾಕುತ್ತಿದ್ದರು. ಈಗಲೂ ಈ ಸಂಪ್ರದಾಯ ಇಲ್ಲಿದೆ. ಈ ಸಂದರ್ಭದಲ್ಲಿ ಬೇಟೆ ಮೂರುದಿನಗಳ ಕಾಲ ನಡೆಯುತ್ತಿತ್ತು. ಅರಸ ಕೆಲವು ಸಲ ಒಂದುದಿನ ಮಾತ್ರ ಬೇಟೆಗೆ ಹೋಗುತ್ತಿದ್ದನು. ೨ನೇ ದಿನ ಆ ಊರಿನ ಬೇಡರು ಹೋಗುತ್ತಿದ್ದರು. ಕೆಲವು ಅರಸರು ಮೂರುದಿನಗಳ ಕಾಲ ಬೇಟೆಗೆ ತೆರಳುತ್ತಿದ್ದರು. ಈ ಬೇಟೆಯು ಅರಸರ ಅಧೀನದ ಹಳ್ಳಿಗಳಲ್ಲಿಯೂ ನಡೆಯುತ್ತಿದ್ದಿತು. ಕೆಲವು ಸಲ ಅರಸರು ಬೇಟೆಗೆ ಹೋಗದೆ, ಕುರಿ ಇಲ್ಲವೇ ತೆಂಗಿನಕಾಯಿ ಕಟ್ಟಿ ಬಂದೂಕಿನಿಂದ ಹೊಡೆಯುವುದರ ಮೂಲಕ ಬೇಟೆಗೆ ನಾಂದಿ ಹಾಡುತ್ತಿದ್ದರು.

### ೪.೮.೧.೧ ಅರಸರ ಬೇಟೆ

ಮೊದಲದಿನದ ಬೇಟೆಯನ್ನು ಅರಸರ ಬೇಟೆ ಇಲ್ಲವೆ ದೊರೆಗಳ ಬೇಟೆಯೆಂದು ಕರೆಯುತ್ತಿದ್ದರು. ಅಂದರೆ ಆ ದಿನ ಬೇಟೆಯಾಡಿದ ಪ್ರಾಣಿಗಳನ್ನು ಅರಸರಿಗೆ ಮತ್ತು ಅವರ ಪರಿವಾರದವರಿಗೆ ನೀಡಬೇಕಾಗಿತ್ತು. ಕೆಲವು ಕಡೆ ಅರಸರೇ ಬೇಟೆಗೆ ಹೋಗುತ್ತಿದ್ದುದರಿಂದ ಅರಸನಿಗೆ ಬೇಟೆಯ ಮೊದಲ ಪಾಲು ದಕ್ಕುತಿತ್ತು.

ಆದರೆ ಬೇರೆ ಹಳ್ಳಿಗಳಲ್ಲಿ ಸುರಪುರ ಅರಸರ ಅಧೀನದ ವಾಗನಗೇರಿ, ವನದುರ್ಗ, ಕಕ್ಕೇರಿಗಳಲ್ಲಿ, ಗುಡಗುಂಟಿಯ ಕೋತಾ, ಐದಭಾವಿ, ದೇವರಭೂಪೂರಗಳಲ್ಲಿ ದೇವದುರ್ಗದ ಜಾಲಹಳ್ಳಿ, ಗಲಗ, ಅರಕೇರಾಗಳಲ್ಲಿ ಈ ಪದ್ಧತಿ ಇಂದಿಗೂ ಮುನ್ನಡೆದಿದೆ. ಕನಕಗಿರಿಯ ಅರಸರ ಹಳ್ಳಿಗಳಲ್ಲಿ ಅರಸರ ಹೆಸರಿನಿಂದಲೇ ಒಂದು ಬೇಟೆಪಾಲು ನೀಡುವ ಪದ್ಧತಿ ಇದೆ. ಅದನ್ನು ಆ ಭಾಗದ ಕಟ್ಟೀಮನಿಯವರು ಸ್ವೀಕರಿಸುತ್ತಾರೆ. ದೇವದುರ್ಗದ ಅರಸರ ಅಧೀನದ ತಳವಾರ ದೊಡ್ಡಿ, ಆರೇರಾ ಮರಾಠದೊಡ್ಡಿ, ಜಕ್ಕಲವರದೊಡ್ಡಿ, ಮಟ್ಲವರದೊಡ್ಡಿ, ಹಸಿಮಗನದೊಡ್ಡಿ, ಗೂರೇರದೊಡ್ಡಿ, ಕಾಳೇರದೊಡ್ಡಿ ಇವರೆಲ್ಲರೂ ಸೇರಿ, ಅರಸರ ಅರಮನೆಯ ಮುಂದೆ ನೆರೆಯುವರು. ಜೊತೆಯಲ್ಲಿ ಗುರಿಕಾರರು, ಶೆಟ್ಟಿ, ಪಡಶೆಟ್ಟಿ, ಗುಮ್ಮೇದಾರರು ಉಳಿದೆಲ್ಲಾ ವಚನದಾರರೆಲ್ಲಾ ಸೇರಿ ರಾಜನಿಗೆ 'ಸಲಾಮು' ಕೊಡುವ ಪದ್ಧತಿ ಇದೆ. ನಂತರ ಬೇಟೆಗೆ ಹೊರಡುವಾಗಲೇ ಮಾರುತಿ ದೇವಾಲಯದ ಹತ್ತಿರದ ಓಕುಳಿಕೊಡಗಳಲ್ಲಿಯ ಓಕುಳಿ ಹಾಕುವ ಪದ್ಧತಿ ಇಂದಿಗೂ ಇಲ್ಲಿದೆ.[೩೧೧]

### ೪.೮.೧.೨ ದೈವದ ಬೇಟೆ

ಎರಡನೆಯ ದಿನದ ಬೇಟೆ ಇದಾಗಿದ್ದು, ಈ ಬೇಟೆಗೆ ಅರಸನೂ ತೆರಳಬಹುದಾಗಿತ್ತು. ಈ ಜನಾಂಗದ ಬೇಟೆಯನ್ನು ಜನಾಂಗದ ಹಿರಿಯರಾದ ಕಟ್ಟೆಮನೆಯವರು, ಗುರಿಕಾರರು, ಗುಮ್ಮೇದಾರರು, ತಳವಾರ ಅವರನ್ನು ದೈವದವರೆಂದು ಕರೆಯುತ್ತಿದ್ದರು. ಈ ಬೇಟೆಯನ್ನು ಅವರೇ ಹಂಚಿಕೊಳ್ಳುತ್ತಿದ್ದರು.

### ೪.೮.೧.೩ ಸಾರ್ವಜನಿಕ ಬೇಟೆ

ಇದು ಮೂರನೆಯ ದಿನದ ಬೇಟೆಯಾಗಿದ್ದು, ಬೇಟೆಗೆ ಹೋದಾಗ ಯಾರು ಪ್ರಾಣಿಗಳನ್ನು ಕೊಲ್ಲುವರೋ ಅವರೇ ಈ ಬೇಟೆಯನ್ನು ಒಯ್ಯುತ್ತಿದ್ದರು. ಅರಸರೂ ಈ ಬೇಟೆಯ ತಂಡದಲ್ಲಿರುತ್ತಿದ್ದರು. ಈ ಬೇಟೆಗೆ ಸುರಪುರದ ಇಮ್ಮಡಿ ಪಾಮನಾಯಕನಿಂದ(ಕ್ರಿ.ಶ.೧೭೨೭-೧೭೪೧) ಇಲ್ಲಿಯವರೆಗಿನ ರಾಜವಂಶಸ್ಥರವರೆಗೂ ಬೇಟೆಗೆ ತೆರಳಿದ್ದುಂಟು.[೩೧೨] ಈ ಮೂರುದಿನಗಳ ಕಾಲ ಹೋಗುವ ಬೇಟೆಯಲ್ಲಿ ಬೇಡರೇ ಅಧಿಕ ಸಂಖ್ಯೆಯಲ್ಲಿರುತ್ತಿದ್ದರು. ಇಂದು ಪ್ರಮುಖವಾಗಿ ದಸರಾ ಮತ್ತು ಯುಗಾದಿ ಹಬ್ಬಗಳಲ್ಲಿ ಬೇಟೆಗೆ ಹೋಗುವಾಗ ಗುರಿಕಾರ, ಗುಮ್ಮೇದಾರ, ಕುಲಕರ್ಣಿ, ಗೌಡ, ತಳವಾರ ಮತ್ತು ಅರಸರು ಬೇಟೆಗೆ ಹೊರಟವರೊಂದಿಗೆ ಊರು ದಾಟುವವರೆಗೆ ಹೋಗಿಬರುತ್ತಿದ್ದರು.

ಅರಸರು ಬೇಟೆಗೆ ಹೋಗುವ ಸಂದರ್ಭದಲ್ಲಿ ಬೇಟೆಯ ಹಿಂದಿನ ರಾತ್ರಿ ಅರಸರೊಂದಿಗೆ ಬೇಟೆಗೆ ಹೋಗುವ ಬೇಟೆಗಾರರೆಲ್ಲ ಸೇರಿ ನಾಳೆ ಯಾವ ಸಮಯಕ್ಕೆ ಬೇಟೆಗೆ ಹೋಗುವುದೆಂದು ನಿರ್ಧರಿಸುತ್ತಿದ್ದರು. ಕನಕಗಿರಿಯ ಅರಸ ಹಿರೇನಾಯಕ (ಕ್ರಿ.ಶ.೧೭೮೮-೧೮೩೩) ಬೇಟೆಯ ಒಂದು ಸಮಿತಿಯನ್ನೇ ಮಾಡಿದ್ದ.[೩೧೩] ಅದರಂತೆ ಬೆಳಿಗ್ಗೆ ತಮಟೆ ಹೊಡೆದು ಬೇಟೆಗೆ ಬರಲು ಸಿದ್ಧರಾಗಲು ಹೇಳುತ್ತಿದ್ದರು. ನಂತರ ಬೇಟೆಗಾರರ

ತಂಡ ವಾದ್ಯಸಮೇತ ಬೇಟೆನಾಯಿಗಳು ಮತ್ತು ಆಯುಧಗಳೊಂದಿಗೆ ಅರಸನ ಮುಂದಾಳತ್ವದಲ್ಲಿ ಊರಿನ ಪೂರ್ವದಿಕ್ಕಿನ ಹೆಬ್ಬಾಗಿಲಿನಿಂದ ಕಾಡಿನ ಕಡೆಗೆ ನಡೆಯುತ್ತಿದ್ದರು. ಸಾಯಂಕಾಲ ಬೇಟೆಯನ್ನಾಡಿ ವಾದ್ಯಗಳ ಸಮೇತ ಕೇಕೇ ಹಾಕುತ್ತಾ ಊರಿಗೆ ಪೂರ್ವದಿಕ್ಕಿನ ಹೆಬ್ಬಾಗಿಲಿನ ಮೂಲಕವೇ ಪ್ರವೇಶಿಸಿದ ಮೇಲೆ ಅರಸನಿಗೆ ಊರಿನ ಸುಮಂಗಲೆಯರು ಆರತಿ ಎತ್ತುವ ಮೂಲಕ ಸ್ವಾಗತಿಸುತ್ತಿದ್ದರು. ಅರಸರು ತಮ್ಮೊಂದಿಗೆ ಬೇಟೆಗೆ ಬಂದು ಬೇಟೆಗಾರರಲ್ಲಿ ತನ್ನ ಶೌರ್ಯ ಹಾಗೂ ಚಾಣಾಕ್ಷತನವನ್ನು ಪ್ರದರ್ಶಿಸಿದ ಬೇಟೆಗಾರನನ್ನು ಬಹುಮಾನ ನೀಡಿ ಸತ್ಕರಿಸುತ್ತಿದ್ದರು. ಆರತಿ ಮಾಡಿದವರಿಗೆ ಕಾಣಿಕೆಗಳನ್ನು ನೀಡುವ ಪದ್ಧತಿ ಸುರಪುರ, ಗುಡಗುಂಟಿ, ಗುಂತಗೋಳ ಮತ್ತು ದೇವದುರ್ಗದ ಅರಸುಮನೆತನಗಳಲ್ಲಿ ಇಂದಿಗೂ ಇದೆ. ಬೇಟೆಯ ಸಂದರ್ಭದಲ್ಲಿಯ 'ಬೇಟೆಯ ನೃತ್ಯ' ಅರಸನ ಜೊತೆಗಿನ ಆ ಮೆರವಣಿಗೆಯ ಸಂದರ್ಭ ಒಂದು ಹಬ್ಬದಂತಿರುತ್ತಿತ್ತು.[೩೧೪]

### ೪.೮.೨ ಸಾಮಾನ್ಯ ದಿನಗಳ ಬೇಟೆ

ಅರಸರು ಕೇವಲ ಹಬ್ಬ ಹರಿದಿನಗಳಲ್ಲಿ ಬೇಟೆಗೆ ಹೋಗುವುದಲ್ಲದೆ ಆಗಾಗ ಸಾಮಾನ್ಯ ದಿನಗಳಲ್ಲಿ ಬೇಟೆಗೆ ತೆರಳುತ್ತಿದ್ದರು. ರೆಸಿಡೆಂಟ್ ಮೆಡೋಸ್ ಟೇಲರನು ಸುರಪುರವನ್ನು ಬಿಟ್ಟುಹೋಗುವಾಗ, ಆ ದುಃಖದ ದೃಶ್ಯವನ್ನು ಸಹಿಸದ ನಾಲ್ವಡಿ ವೆಂಕಟಪ್ಪನಾಯಕ ಬೇಟೆಗೆ ಹೋದನು.[೩೧೫] ಕೆಲವು ಸಲ ಅರಮನೆಯಲ್ಲಿ ಬೇಸರವಾದಾಗ ಬೇಟೆಗೆ ಬೇಡರೊಂದಿಗೆ ತೆರಳುತ್ತಿದ್ದರು. ಧೈರ್ಯಶಾಲಿ ಗಳಾದ ಬೇಡರು ಅರಣ್ಯದಲ್ಲಿದ್ದ ಕಾಡುಪ್ರಾಣಿಗಳ ಚಲನವಲನದ ಕುರಿತು ಅರಿತವರಾಗಿದ್ದು, ದುರ್ಗಮ ವಾದ ಕಾಡಿನಲ್ಲಿ ಸಂಚರಿಸುವುದೆಂದರೆ ಸಾಹಸದ ಕೆಲಸವೇ ಆಗಿತ್ತು. ಬೇಡರು ಕಾಡಿನೊಂದಿಗೆ ಅನ್ಯೋನ್ಯ ಸಂಬಂಧ ಹೊಂದಿದ್ದರಿಂದ ರಾಜನು ಬೇಟೆಗೆ ಹೋಗುವಾಗ ಕರೆದುಕೊಂಡು ಹೋಗುತ್ತಿದ್ದ. ರಾಜನಿಗೆ ಬೇಟೆಯಾಡುವ ಕಲೆಯನ್ನು ಬೇಡರು ಹೇಳಿಕೊಡುತ್ತಿದ್ದರು. ಹಾಗೂ ಪ್ರಾಣಿಗಳನ್ನು ಗುರಿಯಿಟ್ಟು ಹೊಡೆಯುವುದರಲ್ಲಿ ಪ್ರವೀಣರಾಗಿದ್ದರು. ಸುರಪುರದಲ್ಲಿ ಬೇಟೆ ತರಬೇತಿಯ ಒಂದು ಪಡೆಯೇ ಇತ್ತು. ಅವರು ಅರಸು ಮಕ್ಕಳಿಗೆ ಬೇಟೆಯ ರೀತಿನೀತಿಗಳನ್ನು ಕಲಿಸುತ್ತಿದ್ದರು. ಈ ಬೇಡರಿಂದ ಗುರಿಯನ್ನು ಕಲಿತ ಕೃಷ್ಣಪ್ಪನಾಯಕರು ಸಾಮಾನ್ಯ ಬೇಡರನ್ನು ಮೀರಿಸುವಷ್ಟು ಪ್ರವೀಣರಾದರು.[೩೧೬]

ನಾಯಕ ಅರಸರು ಹೆಚ್ಚಾಗಿ ಹಂದಿ, ನವಿಲು, ಚಿಗರೆ ಹಾಗೂ ಶೌರ್ಯ ಸಾಹಸಕ್ಕೆ ಹೆಸರಾದ ಹುಲಿ, ಸಿಂಹಗಳ ಹಾಗೂ ಇಂತಹ ಅನೇಕ ಕಾಡುಮೃಗಗಳ ಬೇಟೆಯಾಡುತ್ತಿದ್ದರು. ಅದರಲ್ಲೂ ಇವರಿಗೆ ರುಚಿಕಟ್ಟಾದ ಆಹಾರವನ್ನು ಒದಗಿಸುವ ಮೊಲ, ಚಿಗರೆ, ಹಂದಿ ಬೇಟೆಗಳಲ್ಲಿ ಅಪಾರ ಆಸಕ್ತಿ.

### ೪.೮.೩ ಚಿಗರೆ ಬೇಟೆ

ಇದೊಂದು ಪ್ರತಿಷ್ಠಿತ ಬೇಟೆ ಹಾಗೂ ಅತಿ ಹೆಚ್ಚು ಪ್ರಚಲಿತವಾದದ್ದು. ದಟ್ಟವಾದ ಅರಣ್ಯಗಳಲ್ಲಿ ಚಿಗರೆ ಬೇಟೆಯಾಡಲಾಗುತ್ತಿತ್ತು. ಈ ಬೇಟೆಗೆ ಬಲೆ ಮತ್ತು ಬಂದೂಕುಗಳನ್ನು ಬಳಸುತ್ತಿದ್ದರು. ಕೆಲವು

ನಾಯಕ ಅರಸುಮನೆತನಗಳಾದ ಸುರಪುರ, ಆನೆಗೊಂದಿ, ಗುಡಗುಂಟಿ, ದೇವದುರ್ಗ, ಕನಕಗಿರಿ, ಜರಿಮಲೆಗಳಲ್ಲಿ ಈ ವಂಶಜರು ಚಿಗರೆಗಳ ಕೋಡುಗಳನ್ನು ತೂಗು ಹಾಕಿರುವುದನ್ನು ಇಂದಿಗೂ ಕಾಣಬಹುದಾಗಿದೆ. ಇಂದಿಗೂ ಕೆಲವರು ವಿನೋದಕ್ಕಾಗಿ ಚಿಗರೆಮರಿಗಳನ್ನು ಸಾಕುತ್ತಿದ್ದಾರೆ. ಸುರಪುರ ಮತ್ತು ಗುಡಗುಂಟಿ ಅರಮನೆಗಳಲ್ಲಿವೆ.

### ೪.೮.೪ ಮೊಲದ ಬೇಟೆ

ಮೊಲ ಚುರುಕು ಮತ್ತು ಜಾಣ್ಮೆಗೆ ಹೆಸರಾದುದು. ಇದನ್ನು ನಿಶಾಚರ ಪ್ರಾಣಿ ಎಂದು ಕರೆಯುತ್ತಾರೆ. ರಾತ್ರಿ ಸಂದರ್ಭದಲ್ಲಿ ಇದು ಆಹಾರಕ್ಕಾಗಿ ಅಲೆಯುತ್ತದೆ. ಹೀಗಾಗಿ ಕೆಲವು ಅರಸರು ಬ್ಯಾಟರಿಯ ಬೆಳಕಿನಿಂದ ರಾತ್ರಿ ಇದನ್ನು ಬೇಟೆಯಾಡುತ್ತಿದ್ದರು. ಆಗ ಬ್ಯಾಟರಿಯ ಬೆಳಕು ಮೊಲದ ಕಣ್ಣನ್ನು ಕುಕ್ಕುವುದರಿಂದ ಅದು ಓಡದೆ ನಿಲ್ಲುತ್ತಿತ್ತು. ಆಗ ಅದನ್ನು ಬೇಟೆಯಾಡುತ್ತಿದ್ದರು. ಗುಂತಗೋಳದ ಅರಸ ಅಮರಪ್ಪನಾಯಕರು ಮೊಲದ ಬೇಟೆಯಲ್ಲಿ ಪ್ರವೀಣರಾಗಿದ್ದರು.[೩೧೭]

### ೪.೮.೫ ಉಡದ ಬೇಟೆ

ಇದೊಂದು ಚಾಣಾಕ್ಷತನದ ಬೇಟೆ. ರಾಜಮಹಾರಾಜರು ಕೋಟೆಗಳನ್ನು ಹತ್ತಲು ಉಡವನ್ನು ಉಪಯೋಗಿಸುತ್ತಿದ್ದರು. ಇದು ಜಿಗುಟುತನಕ್ಕೆ ಹೆಸರಾಗಿದೆ. ಹೆಚ್ಚಾಗಿ ಸರೋವರ, ದೊಡ್ಡ ಗಾತ್ರದ ಸೇತುವೆ ಕೆರೆ-ಕಟ್ಟೆ, ದಟ್ಟಕಾಡು ಮುಂತಾದವುಗಳಲ್ಲಿ ವಾಸವಾಗುತ್ತಿದ್ದು, ಮಳೆ ಬಂದಾಗ ಹಸಿಮಣ್ಣು, ಕೀಟಗಳನ್ನು ತಿನ್ನಲು ಬರುತ್ತದೆ. ಆಗ ಅದನ್ನು ಬೇಟೆಯಾಡುತ್ತಾರೆ. ಅರಸರು ಈ ಬೇಟೆಯಲ್ಲಿ ನಿಸ್ಸೀಮರು, ಉಡವೊಂದು ಸಿಕ್ಕರೆ ಮನೆಯಲ್ಲಿ ಹಬ್ಬದ ವಾತಾವರಣವೇ ಸೃಷ್ಟಿಯಾಗುತ್ತಿತ್ತು. ಚಿತ್ರದುರ್ಗ, ಸುರಪುರ, ಗುಡಗುಂಟಿ, ದೇವದುರ್ಗದವರು ಈ ಬೇಟೆಯಾಡುತ್ತಿದ್ದರು. ಆದರೆ ಕನಕಗಿರಿ, ಗುಂತಗೋಳ, ನಾಯಕನಹಟ್ಟಿಯವರು, ಈ ಬೇಟೆಯನ್ನು ನಮ್ಮ ಪೂರ್ವಜರು ತಿನ್ನುತ್ತಿದ್ದರೂ, ನಾವು ಮಾತ್ರ ಈಗ ಸೇವಿಸುವುದಿಲ್ಲವೆನ್ನುತ್ತಾರೆ.[೩೧೮]

### ೪.೮.೬ ಅರಸರ ಬೇಟೆಯ ಉಡುಗೆ-ತೊಡುಗೆಗಳು

ಬೇಟೆಗೆ ತೆರಳುವಾಗ ಅರಸರು ವಿವಿಧ ಬಗೆಯ ಉಡುಗೆ ತೊಡುಗೆಗಳನ್ನು ಧರಿಸಿ ತೆರಳುತ್ತಿದ್ದರು. ಆ ಸಂದರ್ಭ ಯುದ್ಧಕ್ಕೆ ಹೊರಟ ದಂಡಿನಂತಿರುತ್ತಿತ್ತು. ಆನೆಗೊಂದಿಯ ಅರಸರು ಬೇಟೆಗೆ ತೆರಳುವಾಗ ದಪ್ಪಚರ್ಮದ ಕೆರ, ದಪ್ಪನೆಯ ಚಡ್ಡಿ ಇಲ್ಲವೆ ಬಿಗಿಯಾದ ಪೈಜಾಮವನ್ನು ಹಾಕಿರುತ್ತಿದ್ದರು, ತಲೆಗೆ ಹಾಕಿಕೊಳ್ಳಲು ದಾರಕಟ್ಟಿದ ಒಂದು ಟೋಪಿ, ಅದು ಕೆಳಗೆ ಬೀಳದಂತೆ ದಾರದಿಂದ ಗಲ್ಲಕ್ಕೆ ಕಟ್ಟಿಕೊಳ್ಳಲಾಗುತ್ತಿತ್ತು.[೩೧೯] ಸುರಪುರದ ಅರಸರು ಬೂದಿಬಣ್ಣದ ಮತ್ತು ಪಟ್ಟೆಪಟ್ಟೆಯಾಕಾರದ ಅಂಗಿ

ಪ್ಯಾಂಟನ್ನು ಧರಿಸುತ್ತಿದ್ದರು. ಅವರು ಕೆಲವು ಸಲ ಅರಣ್ಯಕ್ಕೆ ತೆರಳುವಾಗ ಕುದುರೆಯ ಮೇಲೆ ಸಾಗುತ್ತಿದ್ದರು. ಅರಣ್ಯ ತಲುಪಿದ ನಂತರ ಕುದುರೆಯನ್ನು ಒಂದೆಡೆ ಕಟ್ಟುತ್ತಿದ್ದರು.[೩೨೦] ಗುಡಗುಂಟಿ ಅರಸರು ಹಸಿರುಬಣ್ಣದ ಅಂಗಿಯನ್ನು ಧರಿಸುತ್ತಿದ್ದರಲ್ಲದೆ ಉತ್ತರೀಯದಿಂದ ಕೂಡಿದ ಅಂಗಿಯನ್ನು ಧರಿಸುತ್ತಿದ್ದರು. ಹಸಿರುಬಣ್ಣದ ಅಂಗಿಯನ್ನು ಹಾಕಿದರೆ ಹಸಿರಿನೊಂದಿಗೆ ಬೇಟೆಗಾರನನ್ನು ಅಡವಿಯಲ್ಲಿ ಬೇಟೆಯಪ್ರಾಣಿಗಳು ಓಡುವ್ವದಿಲ್ಲ ಎಂಬ ನಂಬಿಕೆ ಇತ್ತು.[೩೨೧] ರಾಜರು ಬೇಟೆಗಾಗಿ ದಟ್ಟಕಾಡುಗಳನ್ನು ಪ್ರವೇಶಿಸಿ ತೆಗ್ಗು-ತೆವರಗಳನ್ನು ದಾಟಿ ಓಡಬೇಕಾಗುತ್ತಿತ್ತು. ಹೀಗಾಗಿ ಬಿಗಿಯಾದ ಚಣ್ಣ, ಬೂಟಿನಂತಹ ಪಾದರಕ್ಷೆ, ಬಿರುಸಾದ ಬಟ್ಟೆಯ ಅಂಗಿ, ಬಿಗಿಯಾದ ಪೇಟ, ನಡುಪಟ್ಟಿ, ಅದಕ್ಕೊಂದು ಕಿರುಗತ್ತಿ ಜೋತು ಬಿದ್ದಿರುತ್ತಿದ್ದದ್ದು ಸಾಮಾನ್ಯವಾಗಿರುತ್ತಿತ್ತು.

### ೪.೮.೭ ಅರಸರ ಬೇಟೆಯ ಆಯುಧೋಪಕರಣಗಳು

ಅರಸರು ಬೇಟೆಗೆ ತೆರಳುವಾಗ ಪಳಗಿದ ನಾಯಿಗಳನ್ನು ಕರೆದೊಯ್ಯುತ್ತಿದ್ದರು. ಸುರಪುರದ ಅರಸ ಕೃಷ್ಣಪ್ಪನಾಯಕ ಆ ನಾಯಿಗೆ ಪ್ರಾಣಿಯ ಚರ್ಮದಿಂದ ಮಾಡಿದ ಹಗ್ಗವನ್ನು ಕಟ್ಟಿರುತ್ತಿದ್ದ. ಜೊತೆಗೆ ದೊಡ್ಡಬಲೆ, ಸಣ್ಣಬಲೆ, ಬೀಸುವಬಲೆಗಳನ್ನು ಭಲ್ಲೆ, ಬಾಚಿ ಮತ್ತು ಮಚ್ಚುಗಳನ್ನು ಒಯ್ಯುತ್ತಿದ್ದರು. ದೇವದುರ್ಗದ ಅರಸ ಕೊಳ್ಳಿರಂಗಪ್ಪನಾಯಕ ಬೇಟೆಗೆ ಬಿಲ್ಲು-ಬಾಣಗಳನ್ನು ಬಳಸುತ್ತಿದ್ದ. ಬಾಣ ಬಿಡುವುದರಲ್ಲಿ ನಿಸ್ಸೀಮನಾಗಿದ್ದ ಈತನ ಬಾಣದ ಗುರಿ ಹುಸಿಹೋಗುತ್ತಿರಲಿಲ್ಲ.[೩೨೨] ಈ ಮನೆತನದಲ್ಲಿ ಬೇಟೆಗಾಗಿ ಬಳಸುತ್ತಿದ್ದ ಕಿರುಗತ್ತಿ, ಬಾಣ, ಕೈಯಿಂದ ಎಸೆಯುವ ಶೂಲದಂಥ ಆಯುಧಗಳನ್ನು ಇಂದಿಗೂ ಕಾಣಬಹುದು. ಕನಕಗಿರಿ ಅರಸು ಮನೆತನದವರಲ್ಲಿ ಸುರಿಗೆ ಕತ್ತಿ, ಬಡಿಗೋಲು, ಬಿದರ ಬಡಿಗೆ, ಕತ್ತಿ, ಗುರಾಣಿ, ಕಾವಣೆ, ಕೈಬಿಲ್ಲುಗಳು ಆಯುಧೋಪಕರಣಗಳಾಗಿವೆ. ಇಂದಿಗೂ ಈ ಮನೆತನದವರು ಇದರಲ್ಲಿಯ ಕೆಲವು ಆಯುಧಗಳನ್ನು ಬಳಸುವುದಲ್ಲದೆ ಆಧುನಿಕ ಉಪಕರಣಗಳಾದ ರಿವಾಲ್ವರ್, ರೈಫಲ್, ನಾಡ ಬಂದೂಕುಗಳನ್ನು ಬೇಟೆಯಾಡಲು ಬಳಸುವುದುಂಟು. ಇವರು ತಮ್ಮ ಮನೆಯಲ್ಲಿರುವ ಆಯುಧಗಳಿಗೆ ದೇವರಿಗೆ ನೀಡುವ ಭಕ್ತಿ-ಗೌರವಗಳನ್ನು ನೀಡುತ್ತಿರುವುದು ವಿಶಿಷ್ಟವಾಗಿದೆ. ತಮ್ಮ ಮನೆಯ ಹಿರಿಯರಹಬ್ಬ ಮತ್ತು ದಸರಾ, ಯುಗಾದಿಯ ಸಂದರ್ಭಗಳಲ್ಲಿ ಈ ಆಯುಧಗಳಿಗೂ ಪೂಜೆ ಸಲ್ಲಿಸುವರು.[೩೨೩]

### ೪.೮.೮ ಅರಸರು ಅನುಸರಿಸುತ್ತಿದ್ದ ಬೇಟೆಯ ವಿಧಾನಗಳು

ಅರಸರು ಬೇಟೆಯಾಡುವುದರಲ್ಲಿ ಅನೇಕ ತಂತ್ರ ಹಾಗೂ ವಿಧಾನಗಳನ್ನು ಅನುಸರಿಸುತ್ತಿದ್ದರು. ಈ ತಂತ್ರ ಹಾಗೂ ವಿಧಾನಗಳು ಆಯಾ ಭೌಗೋಳಿಕ ಪರಿಸರ ಹಾಗೂ ಅಲ್ಲಿ ಲಭ್ಯವಿರುವ ಪ್ರಾಣಿಗಳನ್ನವಲಂಬಿಸಿದ್ದವು.

**೪.೮.೮.೧ ಬಲೆಯ ಬೇಟೆ**

ಅರಸರು ಜಿಂಕೆ, ಮೊಲಗಳಿಗೆ ಬಲೆಗಳನ್ನು ಹಾಕಿ ಬೇಟೆಯಾಡುತ್ತಿದ್ದರು. ದೇವದುರ್ಗದ ರಾಜಾ ರಾಮಪ್ಪನಾಯಕ ಅನೇಕ ಸಾರಿ ಜಿಂಕೆ ಮೊಲಗಳಿಗೆ ಬಲೆಹಾಕಿ ಬೇಟೆಯಾಡುವಾಗ ಒಂದು ಸಲವಾದರೂ ತಪ್ಪಿಸಿಕೊಂಡ ಉದಾಹರಣೆಗಳಿಲ್ಲ. ಬೇಟೆಗೆ ಬಲೆ ಹಾಕುವುದೂ ಒಂದು ತಂತ್ರವಾಗಿತ್ತು.[೩೨೪]

**೪.೮.೮.೨ ಸಾರಾಕಿ ಬೇಟೆ**

ಮೊಲ, ಜಿಂಕೆ, ಉಡ ಮುಂತಾದ ಪ್ರಾಣಿಗಳು ನೀರುಕುಡಿಯಲು ಬಂದಾಗ, ಇಲ್ಲವೇ ಅವುಗಳು ಸುಳಿದಾಡುವ ಸ್ಥಳದಲ್ಲಿ ಅವಿತು ಗುರಿಯಿಟ್ಟು ಹೊಡೆಯುವ ಬೇಟೆ. ಇಂಥ ಬೇಟೆಗಳನ್ನು ಅನೇಕ ಸಾರಿ ಈ ಅರಸುಮನೆತನದವರು ಆಡಿದ್ದುಂಟು. ಸುರಪುರದ ಇಮ್ಮಡಿ ವೆಂಕಟಪ್ಪನಾಯಕನು ಹೊಸಕೇರಿ ಎಂಬಲ್ಲಿ ಎರಡು ಕೆರೆಗಳನ್ನು ಮತ್ತು ಅರಸನು ಬೇಟೆಗೆ ಬಂದಾಗ ಇಳಿದುಕೊಳ್ಳಲು ಅರಮನೆ ಕಟ್ಟಿಸಿದನು. ಈತ ಸಾರಾಕಿ ಬೇಟೆಯಲ್ಲಿ ಪ್ರವೀಣನಾಗಿದ್ದನು. ಹಾಗೂ ಗುಡಗುಂಟಿಯ ನಾಯಕನಕೆರೆಗೆ ಬರುವ ಪ್ರಾಣಿಗಳನ್ನು ಗುಡಗುಂಟಿಯ ಅರಸ ಲಿಂಗನಾಯಕ ಸಾಕಷ್ಟು ಸಲ ಬೇಟೆಯಾಡಿದ್ದಾನೆ.[೩೨೫]

**೪.೮.೮.೩ ಮರಸು ಬೇಟೆ**

ರಾತ್ರಿ ಚಂದ್ರನಬೆಳಕಿನಲ್ಲಿ ಒಂದು ಎತ್ತರವಾದ ಸ್ಥಳದಲ್ಲಿ ಕುಳಿತು ಪ್ರಾಣಿಗಳಿಗೆ ಗುರಿಯಿಟ್ಟು ಹೊಡೆಯುವ ಬೇಟೆ ಇದಾಗಿದೆ. ಗುಂತಗೋಳದ ಅರಸ ಬಸಪ್ಪನಾಯಕನು ಜಲದುರ್ಗದ ಭಾಗಕ್ಕೆ ರಾತ್ರಿ ಸಂದರ್ಭದಲ್ಲಿ ಬಂದು, ಅಲ್ಲಿಯ ಎತ್ತರದ ಗುಡ್ಡದ ಮೇಲೆ ಕುಳಿತು ಬೇಟೆಯಾಡುತ್ತಿದ್ದರು. ಹೀಗಾಗಿ, ಅಲ್ಲಿಯ ಒಂದು ಗುಡ್ಡವನ್ನು 'ಬಸಪ್ಪರಾಜರ ಬೇಟೆ ಮೊರಡಿ'[೩೨೬] ಎಂದು ಕರೆಯುತ್ತಾರೆ.

**೪.೮.೮.೪ ಬೆಳಕಿನ ಬೇಟೆ**

ಇದನ್ನು ಲೈಟಿನ ಬೇಟೆ ಎಂದು ಕರೆಯುತ್ತಾರೆ. ಈ ಅರಸರು ರಾತ್ರಿಯಲ್ಲಿ ಬೇಟೆಗೆ ತೆರಳುತ್ತಿದ್ದರು. ಕೃತಕವಾದ ಬ್ಯಾಟರಿಬೆಳಕಿನಿಂದ ಅವುಗಳನ್ನು ಹಣೆಗೆ ಇಲ್ಲವೆ ನಡುವಿಗೆ ಕಟ್ಟಿಕೊಂಡು ಗುಹೆಯಲ್ಲಿ ಅಡಗಿಕೊಂಡಿದ್ದ ಪ್ರಾಣಿಗಳನ್ನು ಶಂಖ ಕಹಳಾದಿ ವಾದ್ಯಗಳಿಂದ ಧ್ವನಿ ಮಾಡಿ ಎಬ್ಬಿಸಿ ಬೇಟೆಯಾಡುತ್ತಿದ್ದರು. ಪ್ರಾಣಿಗಳು ಬೇಟೆಯಾಡುವವರನ್ನು ಕಂಡರೆ ಹೆದರುತ್ತಿದ್ದವು. ಪ್ರಾಣಿಗಳು ಗುಹೆಯಿಂದ ಹೊರಬರದಿದ್ದರೆ ಗುಹೆಯ ಬಾಯಿಗೆ ಹುಲ್ಲು ಕಟ್ಟಿಗೆ ಹಾಕಿ ಬೆಂಕಿಹಚ್ಚಿ ಪ್ರಾಣಿಗಳು ಸಾಯುವಂತೆ ಇಲ್ಲವೆ ಹೊರಬರುವಂತೆ ಮಾಡುತ್ತಿದ್ದರು. ಪ್ರಾಣಿಗಳ ಹೆಜ್ಜೆಗಳನ್ನು ಗುರುತಿಸಿಕೊಂಡು ಹೋಗಿ ಬೇಟೆಯಾಡುವ ತಂತ್ರ ಇವರಿಗೆ ಗೊತ್ತಿತ್ತು.

ಅಂದಿನ ನಾಯಕ ಅರಸರು ಕಟ್ಟಿಸಿದ ಕೋಟೆಯ ಕೆಲವು ಹೆಬ್ಬಾಗಿಲುಗಳಿಗೆ ಬೇಟೆಗಾರರ ಹೆಬ್ಬಾಗಿಲುಗಳೆಂದು ಕರೆಯುತ್ತಾರೆ. ದಸರಾ ಮತ್ತು ಯುಗಾದಿಯ ಸಂದರ್ಭದಲ್ಲಿ ಪ್ರಜೆಗಳು ಅರಸರೊಂದಿಗೆ

ಬೇಟೆಗೆ ತೆರಳಿ, ಮರಳುವಾಗ ಪ್ರಾಣಿಗಳನ್ನು ಹೊತ್ತು ಬೇಟೆಯ ಹೆಬ್ಬಾಗಿಲಿನಿಂದ ಪ್ರವೇಶಿಸುತ್ತಿದ್ದರು. ಗುಡುಗುಂಟಿ ಅರಸರ ಕೋಟೆಯ ಕಕ್ಕೇರಿ ವಿಭಾಗದ ಬಾಗಿಲನ್ನು ಗುಂತಗೋಳದ ದಕ್ಷಿಣದಿಕ್ಕಿನ ಬಾಗಿಲನ್ನು ಬೇಟೆಬಾಗಿಲೆಂದು ಕರೆಯುತ್ತಾರೆ. ಇವುಗಳೆಲ್ಲಾ ಅರಸರಿಗಿದ್ದ ಬೇಟೆಯ ಬಗೆಗಿನ ಉತ್ಸಾಹ ಮತ್ತು ಮಹತ್ವವನ್ನು ಹೇಳುತ್ತವೆ.

### ೪.೮.೯ ಬೇಟೆಯ ಬಗೆಗಿನ ನಾಯಕ ಅರಸರ ನಂಬಿಕೆ

ಬೇಟೆಯ ಕುರಿತಾಗಿ ಇವರ ನಂಬಿಕೆ, ರೂಢಿ-ಸಂಪ್ರದಾಯಗಳು ಅಪಾರವಾಗಿವೆ ಮತ್ತು ವಿಶಿಷ್ಟವಾಗಿವೆ. ಕೆಲವು ಸಲ ಇವುಗಳನ್ನು ಶುಭ ಮತ್ತು ಅಶುಭ ಎಂತಲೂ ನಂಬುತ್ತಿದ್ದರು. ಇವರು ಬೇಟೆಗೆ ತೆರಳುವಾಗ ಪಂಚಾಂಗ ಕೇಳುವುದು, ದಿಕ್ಕುಗಳನ್ನು ಪ್ರತಿನಿಧಿಸಿ ಬೇಟೆಗೆ ತೆರಳುವುದು, ಬೇಟೆಗೆ ಹೋಗುವಾಗ ದೇವತೆಯನ್ನು ಪೂಜಿಸುವುದು, ಆಗ ದೇವತೆಯ ವಿಗ್ರಹದಿಂದ ಬಲಕ್ಕೆ ಹೂ ಬಿದ್ದರೆ ಶುಭ, ಎಡಕ್ಕೆ ಹೂ ಬಿದ್ದರೆ ಅಶುಭವೆಂಬ ನಂಬಿಕೆ ಇತ್ತು. ಬೇಟೆ ಫಲಕಾರಿಯಾದರೆ, ಅದರ ಅರ್ಧಭಾಗವನ್ನು ಆ ದೇವರಿಗೆ ಎಡೆ ಮಾಡುವುದು ಇಂಥವುಗಳು ನಡೆದಿವೆ. ಅರಸರು ತಿರುಪತಿ ತಿಮ್ಮಪ್ಪನನ್ನು ಬೇಟೆಗಾರರ ದೇವರೆಂದು ಕರೆದುಕೊಂಡಿರುವುದು ಸತ್ಯದ ಸಂಗತಿ.[೩೨೭]

ಗುಡಗುಂಟಿಯ ಅರಸ ಲಿಂಗನಾಯಕ ಬೇಟೆಗೆ ಹೊರಡಲು ಜೋತಿಷ್ಯ ಕೇಳಿ, ರಾಹುಕಾಲ ಬಿಟ್ಟು ಗುಳಿಕಕಾಲದಲ್ಲಿ ಬೇಟೆಗೆ ತೆರಳಿದ್ದ.[೩೨೮] ದೇವದುರ್ಗದ ಅರಸ ಕೊಳ್ಳಿರಂಗಪ್ಪನಾಯಕ, ಹಲ್ಲಿ ಲೋಚಗುಟ್ಟುವ ಶಬ್ದದ ಸಂಜ್ಞೆಯ ಮೇಲೆ ಬೇಟೆಯ ಗುಟ್ಟನ್ನು ತಿಳಿಯುತ್ತಿದ್ದನು. ಗುಂತಗೋಳದ ಅಮರಪ್ಪನಾಯಕರು ಕಾಗೆ ಕೂಗಿದರೆ, ಅಡ್ಡಬಂದರೆ, ರೆಕ್ಕೆಯಿಂದ ಬಡಿದರೆ ಬೇಟೆಗೆ ತೆರಳುತ್ತಿರಲಿಲ್ಲ.[೩೨೯] ಊರಿನ ಬುಡ್ಡೆಕಲ್ಲಿಗೆ ಹಾಗೂ ಬೇಟೆಯ ಆಯುಧಗಳಿಗೆ ಪೂಜೆಸಲ್ಲಿಸುತ್ತಿದ್ದರು. ಕತ್ತೆ ಒದರಿದರೆ, ಕಾಗೆ, ಗೂಗೆಗಳು ಕೂಗಿದರೆ, ಬೇಟೆಯ ಆಯುಧಗಳು ಬಾಗಿಲುಗಳಿಗೆ ತಗುಲಿದರೆ ಬೇಟೆ ಸಿಗಲಾರದೆಂಬ ನಂಬಿಕೆ ಇತ್ತು. ಬೇಟೆಗೆ ತೆರಳಿದಾಗ ತೋಳವನ್ನು ನೋಡಿದರೆ ಬೇಟೆ ಸಿಗುವುದೆಂಬ ನಂಬಿಕೆ ಬೇರೂರಿತ್ತು.

ಹಂದಿಬೇಟೆಯ ಕುರಿತಾಗಿ, ಅದು ವಿಷ್ಣುವಿನ ಅವತಾರವೆಂದೂ ಧನಸಂಪತ್ತಿಗೂ ವರಹಗಳೆಂದು ಕರೆಯುತ್ತಿದ್ದುದರಿಂದ ಅದನ್ನು ಪೂಜಿಸುತ್ತಿದ್ದರು. ಹಂದಿಬೇಟೆಯನ್ನು 'ಹಂದಿ ಹುಲುಸು' ಎಂದು ಕರೆಯುತ್ತಿದ್ದರು. ಗರ್ಭವಾದ ಮೊಲ, ಜಿಂಕೆಗಳನ್ನು ಬೇಟೆಯಾಡಿದರೆ ಕಷ್ಟನಷ್ಟಕ್ಕೆ ಗುರಿಯಾಗಬೇಕಾಗುತ್ತದೆಂಬ ನಂಬಿಕೆಯೂ ಇವರಲ್ಲಿತ್ತು. ಗುಡಗುಂಟಿಯ ಲಿಂಗನಾಯಕ ಒಂದುಬಾರಿ ಗರ್ಭವಾದ ಜಿಂಕೆಯನ್ನು ಬೇಟೆಯಾಡಿದನು. ಪ್ರಾಯಶ್ಚಿತ್ತವಾಗಿ ಗುಡಗುಂಟಿಯ ದುರ್ಗಾದೇವಿಗೆ ಒಂದು ತಿಂಗಳಿನವರೆಗೆ ನಡೆದುಕೊಂಡನೆಂದು ಹೇಳುತ್ತಾರೆ.[೩೩೦] ಜರಿಮಲೆಯವರು ಹಂದಿಯನ್ನು ಬೇಟೆಯಾಡುತ್ತಿದ್ದರು. ಆದರೆ ಅದನ್ನು ಸೇವಿಸುತ್ತಿರಲಿಲ್ಲ. ಕಾರಣ ಉಜ್ಜನಿಯ ಮರುಳಸಿದ್ಧೇಶ್ವರ ಒಂದು ಸಾರಿ ಹಂದಿಯಾಗಿ ಕಾಣಿಸಿಕೊಂಡಿದ್ದ ಎಂಬ ನಂಬಿಕೆ ಇದೆ.[೩೩೧]

### ೪.೮.೧೦ ಬೇಟೆಯ ಕುರಿತಾದ ನಿರ್ಬಂಧಗಳು

ಬೇಟೆಯ ಹೆಸರಿನಲ್ಲಿ ಪ್ರಾಣಿ, ಪಕ್ಷಿಗಳು ವಿಪರೀತ ನಾಶವಾಗಿ ಪ್ರಕೃತಿಯ ಸಮತೋಲನ ತಪ್ಪುತ್ತಿರುವುದು, ಧರ್ಮಗಳು ಪ್ರಾಣಿದಯೆ ಬೋಧಿಸುವುದರಿಂದ ಪ್ರಾಣಿಗಳಿಗೂ ಬದುಕುವ ಸ್ವಾತಂತ್ರ್ಯವಿರುವುದರಿಂದ ಬೇಟೆಗೆ ಕಡಿವಾಣ ಹಾಕುವ ನಿರ್ಬಂಧಗಳು ಇತ್ತೀಚೆಗೆ ಹುಟ್ಟಿಕೊಂಡವು. ಹಿಂಸೆಯ ಅರಿವು ಇಲ್ಲದಂತಹ ಕಾಲಕ್ಕೆ ಬೇಟೆಯಾಡುವುದರ ಬಗ್ಗೆ ಯಾವ ಪ್ರತಿರೋಧವಿರಲಿಲ್ಲ. ಆದರೆ ಅಹಿಂಸೆ ಬಗ್ಗೆ ತಿಳಿದುಕೊಂಡ ಅಲ್ಪಸ್ವಲ್ಪ ಜನರು ಬೇಟೆಯಾಡುವುದನ್ನು ನಿಲ್ಲಿಸಿದರು. ನಿತ್ಯಮಾಂಸಾಹಾರಿಗಳಾಗಿದ್ದ ಕೆಲವರು ಸಸ್ಯಾಹಾರಿಗಳಾದರು.[೩೩೨] ಕೊಲ್ಲುವ ಕ್ರಿಯೆಯನ್ನು ಒಂದು ಅನಿವಾರ್ಯ ಅಹಾರೋತ್ಪಾದನಾ ವಿಧಾನವೆಂದು ಭಾವಿಸಿದ್ದರಿಂದ ಅದರಲ್ಲಿ ಹಿಂಸೆಯ ಕಲ್ಪನೆ ಇರಲು ಸಾಧ್ಯವಿಲ್ಲ. ಊರುಗಳು ಹುಟ್ಟಿ ಬೆಳೆಯುತ್ತಾ ಬಂದಂತೆ ಅಹಿಂಸೆಯ ಕಲ್ಪನೆಗಳು ಬಲಿಯುತ್ತಾ ಬಂದಿದೆ ಎಂದು ಬರಗೂರು ರಾಮಚಂದ್ರಪ್ಪನವರು ಉಪಸಂಸ್ಕೃತಿ ಮಾಲೆಯ ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ.[೩೩೩]

ಇಂಗ್ಲಿಷ್‌ರು ಕೆಲವು ನಿಯಮಗಳನ್ನು ಜಾರಿಗೆ ತಂದರು. ಹೈದ್ರಾಬಾದ್ ಫಾರೆಸ್ಟ್ ಆ್ಯಕ್ಟ್ ೧೮೫೫, ಮದ್ರಾಸ್ ಫಾರೆಸ್ಟ್ ಆ್ಯಕ್ಟ್ ೧೮೬೫, ೧೮೮೨, ೧೯೯೮ರ ಶಾಸನಗಳು ಮತ್ತು ಮೈಸೂರು ಆ್ಯಕ್ಟ್ ೧೯೦೦ ಮತ್ತು ಇಂಡಿಯನ್ ಫಾರೆಸ್ಟ್ ಆ್ಯಕ್ಟ್ ೧೯೨೭ ಇವು ಪ್ರಮುಖವಾದವು. ೧೮೭೧ರ ಟ್ರೆಸ್ ಪಾಸ್ ಆ್ಯಕ್ಟ್ ಸೆಕ್ಷ್ಯನ್ ೧೧ರ ಪ್ರಕಾರ ಕೆಲವು ಪ್ರಾಣಿಗಳ ನಾಶಕ್ಕೆ ದಂಡವನ್ನು ವಿಧಿಸಿದೆ. ಬ್ರಿಟಿಷರ ನಂತರ ಅರಣ್ಯ ರಕ್ಷಣೆಯ ಕೆಲಸ ಕಂದಾಯ ಇಲಾಖೆಗೆ ವರ್ಗಾವಣೆಗೊಂಡಿತು.

ಭಾರತದ ಸಂವಿಧಾನದಲ್ಲಿ ವನ್ಯಮೃಗ ಸಂರಕ್ಷಣೆ ಆಯಾ ರಾಜ್ಯಗಳ ಹೊಣೆ ಎಂದಿರುವುದರಿಂದ ಪ್ರತಿರಾಜ್ಯಗಳು ವನ್ಯಪ್ರಾಣಿಗಳ ರಕ್ಷಣೆಗೆ ಕಾನೂನುಗಳನ್ನು ರಚಿಸಿವೆ. ಹಾಗೂ ೧೯೫೨ರಲ್ಲಿ ರಾಷ್ಟ್ರೀಯ ಅರಣ್ಯಾಭಿವೃದ್ಧಿ ಧೋರಣೆಯನ್ನು ಭಾರತ ಸರ್ಕಾರ ಪ್ರಕಟಿಸಿತು. ಇಂದು ಸರ್ಕಾರ ಜಾರಿಗೆ ತಂದಿರುವ ೧೯೬೩ರ ಕರ್ನಾಟಕ ಅರಣ್ಯ ಶಾಸನ, ೧೯೭೨ರ ವನ್ಯಮೃಗ ಸಂರಕ್ಷಣೆ ಕಾಯ್ದೆ ಹಾಗೂ ಆಯಾ ಭಾಗದ ಜಿಲ್ಲಾಧಿಕಾರಿಗಳು ಪೋಲೀಸ್ ಕಾಯ್ದೆಯ ಸೆಕ್ಷನ್ ೩೫ರ ಅನ್ವಯ ನಿಷೇದಾಳಿಯನ್ನು ಜಾರಿಗೆ ಮಾಡಿರುವುದರಿಂದ ಇವೆಲ್ಲವುಗಳು ಬೇಟೆಯ ಮೇಲೆ ನಿರ್ಬಂಧಗಳನ್ನು ಹಾಕಿವೆ.

ಸರ್ಕಾರ ಅರಸುಮನೆತನದಲ್ಲಿದ್ದವರ ಆಯುಧಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡಿದೆ. ಇನ್ನು ಕೆಲವು ಮನೆತನದವರು ಆಯುಧಗಳನ್ನು ಮಾರಿಕೊಂಡಿದ್ದಾರೆ. ಇನ್ನು ಕೆಲವು ಮನೆತನದವರು ಆಯುಧಗಳು ತಮ್ಮಲ್ಲಿದ್ದರೂ ಅವುಗಳನ್ನು ತುಕ್ಕುಹಿಡಿಯಲು ಬಿಟ್ಟಿರುವುದು ಶೋಚನೀಯ. ಇಂಥ ಅನೇಕ ಕಾರಣಗಳಿಂದ ಇಂದು ಈ ಅರಸರ ಮನೆತನಗಳಲ್ಲಿಯ ಬೇಟೆ ಸಂಸ್ಕೃತಿ ಮಾಯ ವಾಗುತ್ತಿದೆ. ಇಂದು ಸಂಸ್ಕೃತೀಕರಣ, ನಗರೀಕರಣ, ಜಾಗತೀಕರಣಗಳ ಪ್ರಭಾವವೂ ಆಗಿದೆ. ಬಹುಕಾಲದಿಂದ ಬಂದ

ಅರಸರ ಬೇಟೆಯು ಇಂದು ತನ್ನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಹಿರಿಮೆಯನ್ನು ಕಳೆದುಕೊಳ್ಳುತ್ತಿದೆ. ದಸರಾ ಮತ್ತು ಯುಗಾದಿಗಳಲ್ಲಿ ಕೇವಲ ಸಾಂಪ್ರದಾಯಿಕವಾಗಿ ಬೇಟೆಗೆ ತೆರಳುವ ಸ್ಥಿತಿ ನಿರ್ಮಾಣಗೊಂಡಿದೆ. ಈ ಮನೆತನಗಳಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾದಂತೆಲ್ಲ ಅವರ ಆಚರಣೆಗಳು ಮಾರ್ಪಾಡುಗೊಳ್ಳುತ್ತಿವೆ ಹಾಗೂ ಸಂಕುಚಿತಗೊಳ್ಳುತ್ತಿವೆ. ಇಂದು ಕೆಲವು ಅರಸುಮನೆತನಗಳಲ್ಲಿ ಬೇಟೆಯಾಡುವುದು ನಿಂತಿದೆ. ಕೆಲವು ಕಡೆ ಹಿಂದಿನಿಂದ ಹಿರಿಯರು ಮಾಡಿಕೊಂಡು ಬಂದ ಸಂಪ್ರದಾಯ ನಾವು ಬಿಡಬಾರದು ಎಂಬ ಭಾವನೆಯಿಂದ ಮುಂದುವರಿಸಿದ್ದಾರೆ.

ಒಟ್ಟಿನಲ್ಲಿ ಬೇಡರು ಉಪಜೀವನಕ್ಕಾಗಿ, ವೃತ್ತಿಯಾಗಿ, ಸಾಹಸ ವಿನೋದಕ್ಕಾಗಿ, ಬೇಟೆಯಾಡುತ್ತಾ ಬಂದವರು. ಆದರೆ ರಾಜರು ಮೋಜಿಗಾಗಿ, ವಿನೋದಕ್ಕಾಗಿ ಹಾಗೂ ಪ್ರಜೆಗಳ ಮತ್ತು ಬೆಳೆಗಳ ರಕ್ಷಣೆಗಾಗಿ ಬೇಟೆಯಾಡುತ್ತಾ ಬಂದಿದ್ದಾರೆ. ಆದರೆ ಬೇಡರು ಬೇಟೆ ಮೂಲಕ ಸಾಧಿಸಿಕೊಂಡ ಶೌರ್ಯಪರಾಕ್ರಮಗಳಿಂದಾಗಿ ರಾಜಕೀಯ ಅಧಿಕಾರಕ್ಕೇರಿದ ಉದಾಹರಣೆಗಳಿವೆ. ವಿಜಯನಗರ ಕಾಲದಲ್ಲಿ ಬೇಟೆಗಾರರು, ಸೈನಿಕರು, ದಂಡನಾಯಕರು, ಅಮರನಾಯಕರು ಆದದ್ದಲ್ಲದೆ ಸಾಮ್ರಾಜ್ಯದ ಅವನತಿಯ ನಂತರ ಪಾಳೆಯಗಾರರಾಗಿದ್ದುದು ವಿಶೇಷ. ಅರಸರ ಬೇಟೆಗೆ ಬೇಟೆಗಾರರು ಮಾರ್ಗದರ್ಶಕರಾದ ಸಂಗತಿ ಸಬಾಲ್ಟನ್ ಚರಿತ್ರೆಗೆ ಸಮರ್ಪಕ ಅಂಶವೆನ್ನಬಹುದು. ಇಂದು ಸರ್ಕಾರ ಅರಣ್ಯ ಅಭಿವೃದ್ಧಿ ಯೋಜನೆಗಳ ಮೂಲಕ ವನ್ಯಜೀವಿಗಳನ್ನು ಸಂರಕ್ಷಿಸುತ್ತಿರುವುದು ಸ್ವಾಗತಾರ್ಹ. ಇಂದು ಬೇಟೆಯಾಡುವುದು ಅಪರಾಧವಾಗಿದ್ದು ಸಾಂಪ್ರದಾಯಿಕವಾಗಿ ಅದು ಉಳಿದುಕೊಂಡು ಬಂದಿರುವುದು ಆಧುನಿಕ ಬೇಟೆಯ ಸ್ವರೂಪವೆನಿಸಿದೆ.

## ೪.೯ ಶವಸಂಸ್ಕಾರ ಪದ್ಧತಿ

ಹುಟ್ಟು ಸಹಜ, ಸಾವು ಅನಿವಾರ್ಯ. ಬದುಕಿರುವಾಗ ಚಟುವಟಿಕೆಗಳ ಬೀಡಾಗಿ ಮಾನವನಿಗೆ ಅಸ್ತಿತ್ವ ನೀಡಿದ ದೇಹವನ್ನು ಅದು 'ಶವ'ವಾದ ಮೇಲೂ ಗೌರವದಿಂದ ಕಾಣಬೇಕು. ಅದಕ್ಕೆ ತಕ್ಕ ರೀತಿಯಲ್ಲಿ ಅಂತ್ಯಸಂಸ್ಕಾರ ಮಾಡಬೇಕೆಂಬ ಭಾವನೆ ಬಹುಕಾಲದಿಂದಲೂ ಬಂದಿದೆ. ಇದು ಎಲ್ಲಾ ಮತ, ಧರ್ಮ, ಕಾಲಗಳಿಂದಲೂ ಮಾನವ ದೇಹಕ್ಕೆ ನಡೆಸಿಕೊಂಡು ಬಂದಿರುವ ಗೌರವಸೂಚಕವಾದ ಕ್ರಿಯೆ. ಇಲ್ಲಿ ಪ್ರಾದೇಶಿಕ, ಧಾರ್ಮಿಕ ಭಿನ್ನತೆಗಳು ಕಂಡುಬಂದರೂ ಅಂತಿಮವಾಗಿ ಮಡಿದ ದೇಹಕ್ಕೆ ವಿಧಿವಿಧಾನಗಳ ಮೂಲಕ ಸಲ್ಲಿಸುವ ಅಂತ್ಯಸಂಸ್ಕಾರ.

ಶವಸಂಸ್ಕಾರದ ರೀತಿನೀತಿಗಳು ಜನಾಂಗದಿಂದ ಇನ್ನೊಂದು ಜನಾಂಗಕ್ಕೆ ಭಿನ್ನವಾಗಿರುವಂತೆ, ಒಂದು ಅರಸು ಮನೆತನದಿಂದ ಇನ್ನೊಂದು ಅರಸು ಮನೆತನಕ್ಕೆ ಭಿನ್ನವಾಗಿರುವುದನ್ನು ಗುರುತಿಸಬಹುದು. ಶವಸಂಸ್ಕಾರವು ಆಯಾ ಅರಸುಮನೆತನಗಳು ಅವಲಂಬಿಸಿದ ಧಾರ್ಮಿಕ ವಿಧಿವಿಧಾನಗಳು, ನಂಬಿಕೆಗಳು ಹಾಗೂ ಆಚರಣೆಗಳನ್ನು ಅವಲಂಬಿಸಿದೆ.

ಶವಸಂಸ್ಕಾರದಲ್ಲಿ ನಾಲ್ಕು ವಿಧಗಳಿವೆ. ಶವವನ್ನು ದಹನ ಮಾಡುವುದು, ಹೂಳುವುದು, ಪುಣ್ಯನದಿಗಳಲ್ಲಿ ವಿಸರ್ಜಿಸುವುದು ಹಾಗೂ ಪಕ್ಷಿಗಳ ಭಕ್ಷಣೆಗೆ ಬಿಡುವುದು. ಆದರೆ ನಾಯಕ ಅರಸುಮನೆತನಗಳಲ್ಲಿ ಶವಸಂಸ್ಕಾರವು ಎರಡು ರೀತಿಯಿಂದ ನಡೆಯುತ್ತಿತ್ತು. ಚಿತ್ರದುರ್ಗ, ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ ಅರಸುಮನೆತನದವರು ವೈಷ್ಣವ ಪದ್ಧತಿಗನುಗುಣವಾಗಿ ದಹನ ಮಾಡಿದರೆ, ಗುಡಗುಂಟಿ, ಗುಂತಗೋಳ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ನಾಯಕ ಅರಸುಮನೆತನಗಳು ಶೈವ ಪದ್ಧತಿಗನುಗುಣವಾಗಿ ಶವವನ್ನು ಹೂಳುತ್ತಿದ್ದರು. ಹೀಗಾಗಿ ನಾಯಕ ಅರಸುಮನೆತನಗಳವರ ಶವಸಂಸ್ಕಾರ ಪದ್ಧತಿ ಸಾಮಾನ್ಯ ಬೇಡ(ನಾಯಕ) ಜನಾಂಗಕ್ಕಿಂತಲೂ ಬಹಳ ವೈಶಿಷ್ಟ್ಯತೆಯಿಂದ ಕೂಡಿದ್ದಾಗಿದೆ. ಆದರೆ ಈ ಎಲ್ಲಾ ಮನೆತನದವರು ಸತ್ತದಿನವೆ ಶವಸಂಸ್ಕಾರ ಮಾಡುತ್ತಿದ್ದರು.

ವೈಷ್ಣವಪದ್ಧತಿಯ ನಾಯಕ ಅರಸರು ಮೃತನಾದ ಕೂಡಲೇ ಅರಸನ ಕೈಕಾಲುಗಳನ್ನು ತಕ್ಷಣ ಮಡಿಸುತ್ತಿದ್ದರು. ಪ್ರಾಣವಾಯು ಹೋದ ಸ್ಥಳದಲ್ಲಿ ಆಕಳು ಸಗಣೆಯಿಂದ ಎರಡು ಮೊಳ ಉದ್ದ, ಎರಡು ಮೊಳ ಅಗಲ ಸಾರಿಸುತ್ತಿದ್ದರು. ಸಾರಿಸಿದ ಜಾಗದಲ್ಲಿ ದರ್ಬೆಯನ್ನು ಹಾಕುತ್ತಿದ್ದರು. ಮೇಲೆ ಚಾಪೆಯನ್ನು ಹಾಕಿ ಪುನಃ ಶವವನ್ನು ಇಡುತ್ತಿದ್ದರು. ಶವದ ಮೇಲೆ ಯಾವ ಸಂದರ್ಭದಲ್ಲಿಯೂ ಕಣ್ಣೀರು ಬೀಳದಂತೆ ನೋಡಿಕೊಳ್ಳುತ್ತಿದ್ದರು. ಶೈವ ಸಂಪ್ರದಾಯಸ್ಥ ನಾಯಕ ಅರಸು ಮನೆತನಗಳಲ್ಲಿಯೂ ಸತ್ತ ಅರಸನ ಕೈಕಾಲುಗಳನ್ನು ಮಡಿಸುತ್ತಿದ್ದರು. ನಂತರದಲ್ಲಿ ವೈಷ್ಣವ ಸಂಪ್ರದಾಯಸ್ಥರು ಶವವನ್ನು ಹೊರಗೆತಂದು ಹಾಲು, ಮೊಸರು, ತುಪ್ಪ, ಗೋಮೂತ್ರ, ಸಗಣೆಗಳನ್ನು ಬೆರೆಸಿ (ಇದನ್ನು ಪಂಚಗವ್ಯ ಎಂದು ಕರೆಯುತ್ತಾರೆ.)[೩೩೪] ಲೇಪನ ಮಾಡಿ, ಸ್ನಾನ ಮಾಡಿಸುತ್ತಿದ್ದರು. ನಂತರ ಶವವನ್ನು ಮಲಗಿಸಿ ದೇಹದ ಪಕ್ಕದಲ್ಲಿ ಸಿಹಿ-ತುಳಸಿ ಟೊಂಗೆಗಳನ್ನಿಡುತ್ತಿದ್ದರು. ಹೊಸ ಬಿಳಿಬಟ್ಟೆಯಿಂದ ಶಿರವನ್ನು ಬಿಟ್ಟು ಉಳಿದ ದೇಹವನ್ನು ಮುಚ್ಚುತ್ತಿದ್ದರು. ಅರಮನೆಯ ಮುಂದೆ ಅಗ್ನಿಯನ್ನು ಹಾಕಿರುತ್ತಿದ್ದರು.

ಶೈವಪದ್ಧತಿಯ ಅರಸುಮನೆತನದವರು ಮೃತದೇಹಕ್ಕೆ ಸ್ನಾನ ಮಾಡಿಸುತ್ತಿದ್ದರು. ಗುಡಗುಂಟಿಯ ಅರಸರ ಶವಕ್ಕೆ ಸ್ನಾನ ಮಾಡಿಸುವಾಗ ಆ ಮನೆತನದ ರಾಜಗುರುಗಳು, ಕಕ್ಕೇರಿ ಸೋಮನಾಥ ದೇವಾಲಯದ ಪೂಜಾರಿಗಳು ಹಾಗೂ ದೇವರಭೂಪೂರಿನ ಶ್ರೀ ಗಜದಂಡಸ್ವಾಮಿಗಳ ಸಮ್ಮುಖದಲ್ಲಿ ಶವದ ತಲೆಗೆ ಬಲಗಾಲನ್ನಿರಿಸಿ ಸ್ನಾನ ಮಾಡಿಸುತ್ತಿದ್ದರು.[೩೩೫] ಈಗಲೂ ಈ ಸಂಪ್ರದಾಯ ಮುಂದುವರೆದಿದೆ. ನಂತರ ಅರಸನ ಸೋದರಮಾವ ಇಲ್ಲವೇ ಸಮೀಪದ ಬಂಧುಗಳು ಬಟ್ಟೆಯನ್ನು ತೊಡಿಸಿ, ರುಮಾಲನ್ನು ಸುತ್ತುತ್ತಿದ್ದರು. ನಂತರ ಹಣೆಗೆ ವಿಭೂತಿ ಕುಂಕುಮವನ್ನು ಹಚ್ಚಿ, ನಾಲ್ಕು ಸಲ ಆರತಿಯನ್ನು ಬೆಳಗುತ್ತಿದ್ದರು. ಆಗ ಶವವನ್ನು ಗೋಡೆಗೆ ಬೆನ್ನುಮಾಡಿ ಕೂಡಿಸುತ್ತಿದ್ದರು. ಇದನ್ನು ಗೂಟಕ್ಕೆ ಬಡಿಯುವುದು ಎಂದು ಕರೆಯುತ್ತಾರೆ. ರಾಣಿ ತೀರಿದರೆ ಆಕೆಗೆ ತವರು ಮನೆಯವರು ತಂದ ಸೀರೆ ಕುಪ್ಪಸವನ್ನು ತೊಡಿಸುತ್ತಿದ್ದರು. ಆಕೆಯ ಶಿರವನ್ನು ಹೂವಿನದಂಡೆಯಿಂದ ಅಲಂಕರಿಸುತ್ತಿದ್ದರು. ವೈಷ್ಣವ

ಪದ್ಧತಿಯ ಅರಸುಮನೆತನಗಳಲ್ಲಿ ರಾಣಿ ತೀರಿದರೆ ಆಕೆಯ ದೇಹವನ್ನು ಮಲಗಿಸಿ ಹೂ, ಅರಿಶಿಣ, ಕುಂಕುಮ ದಿಂದ ಅಲಂಕಾರ ಮಾಡಿ, ಎಳ್ಳು, ಅಕ್ಕಿ ಮತ್ತು ದರ್ಬೆಯನ್ನು ಹಾಕುತ್ತಿದ್ದರು.

ಈ ಮನೆತನಗಳಲ್ಲಿ ಅರಸನ ದೇಹವನ್ನು ಅರಮನೆಯ ವರಾಂಡದಲ್ಲಿ ಇಡುತ್ತಿದ್ದರು. ಹಳ್ಳಿಗರು, ಸಾಮಂತರು, ಸಂಬಂಧಿಕರು, ದರ್ಶನ ಪಡೆಯುತ್ತಿದ್ದರು. ಆನೆಗೊಂದಿ ಅರಸುಮನೆತನದಲ್ಲಿ ಅರಸನ ದೇಹದರ್ಶನದೊಂದಿಗೆ ಅಕ್ಕಿಕಾಳುಗಳನ್ನು ಶವದ ಮೇಲೆ ಹಾಕಿ ನಮಿಸುತ್ತಿದ್ದರು.[೩೩೬] ಇಂದಿಗೂ ಈ ಪದ್ಧತಿ ಇದೆ. ಒಂದು ಕಡೆ ಅರಮನೆಯ ಮುಂದೆ ಕಟ್ಟಿಗೆಯಿಟ್ಟು ಬೆಂಕಿಯನ್ನು ಹಾಕುವರು, ಆ ಬೆಂಕಿಯ ಮೇಲೆ ಹೊಸಗಡಿಗೆಯನ್ನು ಇಟ್ಟು ಮೂರುಪಾವು ಅಕ್ಕಿಯ ಅನ್ನವನ್ನು ಪಿಂಡಕ್ಕಾಗಿ ತಯಾರಿಸುತ್ತಿದ್ದರು. ಇನ್ನೊಂದೆಡೆ ಶವಸಂಸ್ಕಾರದ ಸಲುವಾಗಿ ಸ್ಮಶಾನದಲ್ಲಿ ಹೂಳುವ ಇಲ್ಲವೆ ಸುಡುವ ಸ್ಥಳವನ್ನು ತಯಾರು ಮಾಡಲು ಆ ವೃತ್ತಿಯನ್ನು ಮಾಡುತ್ತಿದ್ದ ಹೊಲೆಯರು, ಮಾದಿಗರನ್ನು ಕಳುಹಿಸುತ್ತಿದ್ದರು. ಇವರು ಈ ವೃತ್ತಿಯನ್ನು ಮಾಡುತ್ತಿದ್ದರಿಂದ ಸುರಪುರದ ಅರಸರು ಇನಾಮುಗಳನ್ನು ನೀಡಿದ್ದಾರೆ.[೩೩೭]

ವೈಷ್ಣವ ಅರಸರ ಶವ ಒಯ್ಯಲು ಬಿದಿರುಗಳಿಂದ ಇಲ್ಲವೆ, ಅತ್ತಿ ಮರದ(ಹಾಲುಗಂಬ) ಟೊಂಗೆಗಳಿಂದ ಚಟ್ಟವನ್ನು ತಯಾರಿಸುತ್ತಿದ್ದರು. ಈ ಚಟ್ಟವನ್ನು ತಯಾರಿಸುವವರಿಗೆ ಸುರಪುರ ಮತ್ತು ದೇವದುರ್ಗದ ಅರಸುಮನೆತನದಲ್ಲಿ 'ಸಾತಾನಿಯರು' ಎಂದು ಕರೆಯುತ್ತಿದ್ದರು.[೩೩೮] ಇವರಿಗೆ ಸುರಪುರ ಮತ್ತು ದೇವದುರ್ಗದ ಅರಸರು ಇನಾಮು ಭೂಮಿಗಳನ್ನು ನೀಡಿದ್ದಾರೆ. ಈಗಲೂ ಈ ಮನೆತನದವರು ಅರಸರ ಶವಸಂಸ್ಕಾರದ ಸಂದರ್ಭದಲ್ಲಿ ಚಟ್ಟವನ್ನು ತಯಾರಿಸುತ್ತಾರೆ. ಶೈವಪದ್ಧತಿಯ ಅರಸರಿಗೆ ಶವಸಂಸ್ಕಾರಕ್ಕೆ ವಿಮಾನಾಕಾರ ಇಲ್ಲವೇ ತೇರಿನಾಕಾರದಲ್ಲಿ ಬಿದಿರುಗಳಿಂದ ಇಲ್ಲವೆ ಉತ್ತಮ ಕಟ್ಟಿಗೆಗಳಿಂದ ಮಂಟಪವನ್ನು ಮಾಡುತ್ತಿದ್ದರು. ಈ ಮಂಟಪಕ್ಕೆ ಬಣ್ಣದ ಹಾಳೆಗಳಿಂದ ಶೃಂಗರಿಸುತ್ತಿದ್ದರಲ್ಲದೆ, ಹೂವಿನ ಸರಗಳನ್ನು ಹಾಕಿರುತ್ತಿದ್ದರು ಹಾಗೂ ತೆಂಗಿನ ಪರಕೆಗಳನ್ನು ಕಟ್ಟಿರು ತ್ತಿದ್ದರು. ಈ ಮನೆತನಗಳಲ್ಲಿ ವಿವಾಹವಾಗದವರು ತೀರಿಕೊಂಡಿದ್ದರೆ ಅವರಿಗೆ ಚಟ್ಟ, ಮಂಟಪವನ್ನು ಮಾಡಿರುತ್ತಿರಲಿಲ್ಲ. ಕೌದಿ ಇಲ್ಲವೆ ತಟ್ಟಿನಲ್ಲಿ ಮಲಗಿಸಿ ಒಯ್ಯುತ್ತಿದ್ದರು.

ವೈಷ್ಣವಪದ್ಧತಿಯ ಅರಸರ ಶವವನ್ನು ಚಟ್ಟದಲ್ಲಿ ಶವದ ಮುಖ ಮೇಲೆ ಮಾಡಿ ಉದ್ದಕ್ಕೆ ಮಲಗಿಸುತ್ತಾರೆ. ಸತ್ತ ಸಮಯದಲ್ಲಿ ಶವದ ಕಾಲು ಮಡಿಚಿರುವುದು ಹಾಗೆಯೇ ಇರುತ್ತದೆ. ಇದರ ಮೇಲೆ ಬಿಳಿದಾದ ಹೊಸಬಟ್ಟೆಯನ್ನು ಭದ್ರವಾಗಿ ಉರಿಯಿಂದ ಕಟ್ಟುತ್ತಾರೆ. ಶೈವಪದ್ಧತಿಯ ಅರಸು ಮನೆತನದ ಶವವನ್ನು ಮಂಟಪದಲ್ಲಿ ಕೂಡಿಸುವುದಕ್ಕಿಂತ ಮೊದಲು, ಗೂಟಕ್ಕೆ ಬಡಿದಾಗ ಇಟ್ಟ ಪಟಗಾವನ್ನು ಆ ಅರಸುಮನೆತನದ ಉತ್ತರಾಧಿಕಾರಿಯ ತಲೆಗೆ ಹಾಕುವು ದಲ್ಲದೆ, ಮನೆತನದ ರಾಜಗುರುಗಳಿಂದ ಪಟ್ಟದಕತ್ತಿಯನ್ನು ಕೊಡಿಸುತ್ತಿದ್ದರು. ಈ ಪದ್ಧತಿ ಇಂದಿಗೂ ಗುಡಗುಂಟಿ ಮತ್ತು ಗುಂತಗೋಳ ಮನೆತನದಲ್ಲಿದೆ.[೩೩೯] ನಂತರ ಶವವನ್ನು ಮಂಟಪದಲ್ಲಿ ಕೂಡಿಸುತ್ತಿದ್ದರು. ಪೂಜೆಯಾಗುತ್ತಿತ್ತು. ಆಗ ಶವಯಾತ್ರೆ ಪ್ರಾರಂಭವಾಗುತ್ತಿತ್ತು. ವೈಷ್ಣವ ಅರಸು ಮನೆತನದಲ್ಲಿ ಮೊದಲು ಮೃತರ ಸಂಬಂದಿ

ಕರಲ್ಲೊಬ್ಬ ಒಂದು ಕಡೆಯಿಂದ ಚಟ್ಟ ಹೊರುತ್ತಿದ್ದನು. ಅವನು ಚಟ್ಟವನ್ನು ಎತ್ತುವಲ್ಲಿ ನೆರವಾಗಲು ಮೂವರು ಬ್ರಾಹ್ಮಣರನ್ನು ಕರೆಯುತ್ತಿದ್ದರು. ಅವರೇ ಚಟ್ಟವನ್ನು ಹೊರುತ್ತಿದ್ದರು.

ಈ ಎರಡು ಮನೆತನಗಳ ಅಂತ್ಯಕ್ರಿಯೆಯನ್ನು ಆ ಅರಸನ ಹಿರಿಯ ಮಗ ಮಾಡುವುದು ಪರಂಪರಾಗತವಾಗಿ ಬಂದ ರೂಢಿಯಾಗಿತ್ತು. ಹಿರಿಯ ಮಗ ತೀರಿದ್ದರೆ ಕೊನೆಯ ಮಗ ಮಾಡಬಹುದಿತ್ತು. ಆದರೆ ನಡುವಿನ ಮಗನಿಗೆ ಆ ಹಕ್ಕು ಇರಲಿಲ್ಲ. ಕೆಲವು ಅರಸರುಗಳಿಗೆ ಗಂಡು ಸಂತಾನವಿಲ್ಲದಿದ್ದಾಗ, ಅರಸರು ಸಾಯುವ ಮುನ್ನ ತಮ್ಮ ಬಳಿಕ ಸಿಂಹಾಸನಕ್ಕೆ ಉತ್ತರಾಧಿಕಾರಿ ಯಾರು ಎಂಬುದನ್ನು ಮೊದಲೇ ನಿರ್ಧರಿಸಿದ್ದರೆ ಯಾವುದೇ ಸಮಸ್ಯೆ ಬರುತ್ತಿರಲಿಲ್ಲ. ಆದರೆ ಉತ್ತರಾಧಿಕಾರಿ ಯಾರೆಂದು ಮೊದಲೇ ನಿರ್ಧರಿಸಲ್ಪಟ್ಟಿರದಿದ್ದರೆ, ಸತ್ತ ಅರಸನ ಅಣ್ಣನ ಇಲ್ಲವೇ ತಮ್ಮಂದಿರ ಮಕ್ಕಳು ಅಂತ್ಯಕ್ರಿಯೆಯನ್ನು ಮಾಡುವ ಹಕ್ಕನ್ನು ಹೊಂದಿದ್ದರು. ಇದನ್ನೇ ನಾಯಕ ಅರಸರು ಅನುಸರಿಸಿಕೊಂಡು ಬಂದರು.

ವೈಷ್ಣವಪದ್ಧತಿಯಂತೆ ಶವದ ಮುಂದೆ ಅನ್ನದ ಗಡಿಗೆಯನ್ನು ತೆಳುಹಗ್ಗದಿಂದ ಕಟ್ಟಿಕೊಂಡು, ಮೃತ ಅರಸನ ಹಿರಿಯ ಮಗ ಇಲ್ಲವೆ, ವಾರಸುದಾರ ಹಿಡಿದುಕೊಂಡು ಹಿಂತಿರುಗಿ ಶವವನ್ನು ನೋಡದೇ ಮುಂದಕ್ಕೆ ಸಾಗುತ್ತಿದ್ದನು. ಇದಕ್ಕೆ ಪಿಂಡ ಎಂದು ಕರೆಯುತ್ತಿದ್ದರು. ಸ್ಮಶಾನದ ಅರ್ಧದಾರಿಗೆ ಹೋದ ಮೇಲೆ ದಾರಿಯಲ್ಲಿ 'ತಂಗ್ಟಿ' ಇಲ್ಲವೆ ಯಾವುದಾದರೂ ಹಸಿರು ಪೊದೆಯ ಮೇಲೆ ಅಥವಾ ಬುಡಕ್ಕೆ ಸಿದಿಗೆ, ಅನ್ನದ ಗಡಿಗೆಯನ್ನು ಇಡುತ್ತಿದ್ದರು. ಸ್ಮಶಾನ ಯಾತ್ರೆಯಲ್ಲಿ ಪಾಲ್ಗೊಂಡವರೆಲ್ಲ ಸಣ್ಣ ಸಣ್ಣ ಕಲ್ಲುಗಳನ್ನು ತೆಗೆದುಕೊಂಡು ಆ ಮಡಿಕೆಯನ್ನು ಒಡೆಯುತ್ತಿದ್ದರು. ಇದನ್ನು 'ದಿಂಬ್ಡಿಗುಡ್ಡ' ಎಂದು ಕರೆಯುತ್ತಿದ್ದರು.[೩೪೦] ಇಲ್ಲಿಗೆ ಸತ್ತ ಅರಸನ ಅನ್ನದ ಋಣ ತೀರಿತು ಎಂಬ ಭಾವನೆ ಇತ್ತು. ಈ ಪದ್ಧತಿಯನ್ನು ಕೇವಲ ಚಿತ್ರದುರ್ಗದ ಅರಸು ಮನೆತನದಲ್ಲಿ ಕಾಣಬಹುದಾಗಿತ್ತು. ವೈಷ್ಣವ ಪದ್ಧತಿಯನ್ನು ಸ್ವೀಕರಿಸಿದ ಸುರಪುರ, ಆನೆಗೊಂದಿ, ದೇವದುರ್ಗ, ಕನಕಗಿರಿ ಅರಸುಮನೆತನದಲ್ಲಿ ಈ ಪದ್ಧತಿ ಇರಲಿಲ್ಲ. ಈ ಮನೆತನದವರಲ್ಲಿ ಅರಸನ ಹಿರಿಯಮಗ ಇಲ್ಲವೆ ಸಂಬಂಧಿ ನೀರಿನ ಮಗೆಯನ್ನು ಹಾಗೂ ಬೆಂಕಿಯ ಕುಂಡವನ್ನು ಹಿಡಿದು ಹೊರಟಿರುತ್ತಿದ್ದನು. ಕನಕಗಿರಿ ಅರಸರು ಸ್ಮಶಾನಕ್ಕೆ ತೆರಳುತ್ತಿರಲಿಲ್ಲ. ಈಗಲೂ ತೆರಳುವುದಿಲ್ಲ. ಅಗ್ನಿಯ ಕುಂಡವನ್ನು ಹಿಡಿಯಲು ಒಬ್ಬರನ್ನು ನೇಮಿಸಿರುತ್ತಿದ್ದರು. ಅವರನ್ನು 'ಗುಂಡಾಣೆ'ಯರೆಂದು ಕರೆಯುತ್ತಾರೆ.[೩೪೧] ಅವರೇ ಅರಸರ ಪರವಾಗಿ ಇಲ್ಲವೇ ಅರಸರ ಬಂಧುಗಳ ಪರವಾಗಿ ಎಲ್ಲಾ ಕ್ರಿಯಾ ವಿಧಿವಿಧಾನಗಳನ್ನು ಜರುಗಿಸುತ್ತಿದ್ದರು. ಇಂದಿಗೂ ಅವರು ಅದನ್ನು ಮುಂದುವರಿಸಿದ್ದಾರೆ. ಅರಸರು ಅವರಿಗೆ ಇನಾಮುಗಳನ್ನು ಹಾಕಿಕೊಟ್ಟಿದ್ದಾರೆ.

ಗುಡಗುಂಟಿ, ಗುಂತಗೋಳ, ಗುಡೇಕೋಟೆ, ಜರಿಮಲೆ, ಮತ್ತೋಡು, ಹರತಿ ಮನೆತನಗಳಲ್ಲಿ ಅರಸು ಮನೆತನದಲ್ಲಿ ಶವಸಂಸ್ಕಾರ ಮಾಡಲೆಂದೇ ನೇಮಿಸಿದವರಲ್ಲಿ ಒಬ್ಬರು ನೀರುತುಂಬಿದ ಮಗೆಯನ್ನು ಹಿಡಿಯುತ್ತಿದ್ದರು. ಹಾಗೂ ಕೆಲವು ಸಲ ಸ್ವಂತ ಮಕ್ಕಳೇ ನೀರುತುಂಬಿದ ಮಗೆಯನ್ನು ಹಿಡಿದು ತಲೆಗೆ

ಕಂಬಳಿ, ಟೋಪಿ ಇಲ್ಲವೆ ರುಮಾಲು ಧರಿಸಿ ಸ್ಮಶಾನಕ್ಕೆ ಸಾಗುತ್ತಿದ್ದರು. ಗುಡಗುಂಟಿಯಲ್ಲಿ ರಾಣಿ ಗೌರಮ್ಮ ತೀರಿಕೊಂಡಾಗ ಸ್ವತಃ ಅವರ ಮಗ ರಾಜಾ ಅಮರಪ್ಪನಾಯಕರು ನೀರುತುಂಬಿದ ಮಗೆ ಹಿಡಿದು ತಲೆಯ ಮೇಲೆ ಕಂಬಳಿ ಧರಿಸಿ ಸ್ಮಶಾನಕ್ಕೆ ಸಾಗಿದ್ದರು.[೩೪೧] ಗುಂತಗೋಳ ಅರಸು ಮನೆತನದಲ್ಲಿಯೂ ಈ ಪದ್ಧತಿ ಇದೆ.

ಸ್ಮಶಾನಯಾತ್ರೆಯ ಸಂದರ್ಭದಲ್ಲಿ ರಾಣಿಯರು ಸ್ಮಶಾನಕ್ಕೆ ತೆರಳುತ್ತಿರಲಿಲ್ಲ. ಕಾರಣ ಅವರಿಗೆ ಘೋಷಾಪದ್ಧತಿ ಇತ್ತು. ಅರಸರ ಸಂಬಂಧಿಕರು, ಇಡೀ ರಾಜ್ಯದ ಅಧೀನದ ಅಧಿಕಾರಿವರ್ಗ, ಪ್ರಜಾವರ್ಗ, ಸಾಗರೋಪಾದಿಯಲ್ಲಿ ಹೊರಟಿರುತ್ತಿತ್ತು. ಹಲಗೆ ಬಾರಿಸುತ್ತ, ಶಹನಾಯಿ ಬಾಜಾ ಭಜಂತ್ರಿಗಳು ಶೋಕದ ನುಡಿಯನ್ನು ಧ್ವನಿಸುತ್ತಿದ್ದವು. ಸಿಡಿಮದ್ದುಗಳು ಸಿಡಿಯುತ್ತಿದ್ದವು. ಎಲೆಗಳನ್ನು, ಹೂಗಳನ್ನು, ಮಂಡಾಳನ್ನು ಶವದ ಮೇಲೆ ತೂರುತ್ತಿದ್ದರು. ಸುರಪುರದಲ್ಲಿ ತೋಪನ್ನು ಹಾರಿಸುತ್ತಿದ್ದರು.[೩೪೩] ಆನೆಗೊಂದಿ ಅರಸರ ಶವ ಯಾತ್ರೆಯಲ್ಲಿ ಶವ ಹೊತ್ತವರಿಗೆ ಒದ್ದೆಯಾದ ಕೆಂಪು ಸೀರೆಯನ್ನು ಹಾಸುತ್ತಾ ಹೋಗುತ್ತಿದ್ದರು[೩೪೪] ಪಟಾಕಿಗಳನ್ನು ಸಿಡಿಸುತ್ತಿದ್ದರು.

ಶವವು ಸ್ಮಶಾನಕ್ಕೆ ಸಾಗಿದ ಮೇಲೆ ವೈಷ್ಣವಪದ್ಧತಿಯಂತೆ ದಹನ ಮಾಡುವಾಗ ಆಚಾರ್ಯರು ದಹನ ಮಾಡುವ ಸ್ಥಳದಲ್ಲಿ ಆಕಳ ಪಂಚಗವ್ಯದಿಂದ ಶುದ್ಧೀಕರಣ ಮಾಡುತ್ತಿದ್ದರು. ಆ ಸ್ಥಳದಲ್ಲಿ ಕಟ್ಟಿಗೆ, ಕುಳ್ಳುಗಳನ್ನು ಇಟ್ಟು ಪೂಜಿಸುತ್ತಿದ್ದರು. ನಂತರ ಚಟ್ಟವನ್ನು ಒಟ್ಟಿದ ಕಟ್ಟಿಗೆಯ ಮೇಲೆ ಉತ್ತರಕ್ಕೆ ತಲೆ ಮಾಡಿ ಇಡುತ್ತಿದ್ದರು. ಚಟ್ಟದ ಬಲಭಾಗದ ಗಳಗಳನ್ನು ಕಿತ್ತು ಎಸೆಯುತ್ತಿದ್ದರು. ಈ ಬಿದಿರಿನ ಗಳಗಳನ್ನೇ ರೈತರು ಬಿತ್ತನೆ ಸಂದರ್ಭದಲ್ಲಿ 'ಅಕ್ಕಡಿ' ಸೆಡ್ಡಿಗಾಗಿ ಬಳಸುತ್ತಿದ್ದರು. ಇವನ್ನು ಬಳಸಿದರೆ ಬೆಳೆಗಳು ಹುಲುಸಾಗಿ ಬೆಳೆಯುವುದೆಂಬ ಭಾವನೆ ಇತ್ತು.[೩೪೫] ಅದಕ್ಕಾಗಿಯೇ ಈ ಬಿದಿರುಗಳು ಸಿಗುವುದು ಪುಣ್ಯ ಹಾಗೂ ಅದೃಷ್ಟ ಎಂದು ನಂಬಿದ್ದರು. ಚಿತ್ರದುರ್ಗದಲ್ಲಿ ಮಾತ್ರ ಈ ನಂಬಿಕೆ ಇದೆ. ಆದರೆ ಉಳಿದ ಮನೆತನಗಳಲ್ಲಿ ಇಲ್ಲ.

ಗಳಗಳನ್ನು ಕೀಳುವಾಗ ಚಟ್ಟಕ್ಕೆ ಕಟ್ಟಿದ್ದ ಉರಿಯನ್ನು ಕೈಯಿಂದ ಹರಿಯಬಾರದು ಇಲ್ಲವೇ ಕೈಯಿಂದ ಬಿಚ್ಚಬಾರದು ಎಂಬ ನಂಬಿಕೆ ಇತ್ತು. ಹೀಗಾಗಿ ಶವದ ಮೇಲೆ ಒಂದು ಕಲ್ಲನ್ನು ಇಟ್ಟು, ಅದರ ಮೇಲೆ ದಾರವನ್ನು ಇಟ್ಟು ಇನ್ನೊಂದು ಕಲ್ಲಿನಿಂದ ಕತ್ತರಿಸುತ್ತಿದ್ದರು. ಶವಕ್ಕೆ ಹೊದಿಸಿದ ಬಟ್ಟೆ, ಉಡದಾರವನ್ನು ಅರಸನ ಮಗ ಕಿತ್ತು ಹಾಕುತ್ತಿದ್ದನು. ನಂತರ ಎಳ್ಳು, ನೀರನ್ನು ಸೇರಿಸಿ ಶವದ ಮೇಲೆ ಹಾಕಲಾಗುತ್ತಿತ್ತು.[೩೪೬] ನಂತರ ನೀರುತುಂಬಿದ ಮಡಿಕೆಯನ್ನು ಹೆಗಲ ಮೇಲೆ ಹೊತ್ತು ಹಿರಿಯ ಮಗ ದಹನಕ್ಕಾಗಿ ಸಿದ್ಧವಾದ ಶವವನ್ನು ಮೂರು ಸಾರಿ ಪ್ರದಕ್ಷಿಣೆ ಹಾಕಬೇಕಾಗಿತ್ತು. ಪ್ರದಕ್ಷಿಣೆ ಹಾಕುವಾಗ ಒಂದೊಂದು ಸುತ್ತಿಗೆ ಒಂದೊಂದು ರಂಧ್ರವನ್ನು ಮಡಿಕೆಗೆ ಹಾಕಲಾಗುತ್ತಿತ್ತು. ಮೂರುಸುತ್ತು ಮುಗಿಯುವುದರೊಳಗೆ ಮಡಿಕೆಯಲ್ಲಿ ನೀರು ಇರುತ್ತಿರಲಿಲ್ಲ. ಹಿಂದಕ್ಕೆ ನೋಡದೆ ಅದನ್ನು ಕೆಳಕೆ ಹಾಕಿಬಿಡುತ್ತಿದ್ದರು.

ನಂತರ ಅನ್ನದ ಪಿಂಡವನ್ನು ಎಂಟುದಿಕ್ಕಿಗೂ ಇಟ್ಟು, ಪೂಜೆಯನ್ನು ನೆರವೇರಿಸಲಾಗುತ್ತಿತ್ತು. ಮಗ ಅಗ್ನಿಯನ್ನು ಹೊತ್ತಿಸುತ್ತಿದ್ದನು. ಆಗ ಬ್ರಾಹ್ಮಣ ಪುರೋಹಿತರು, 'ಲೋಮಭ್ಯಸ್ವಾಹಾಃ ತ್ರಗ್ಭ್ಯ ಸ್ವಾಹಾಃ ಮಾಂ ಸೋಭ್ಯಸ್ವಾಹಾ' ಎಂದು ಹೇಳುತ್ತಿದ್ದರು.[೩೪೭] ನಂತರ ಅಗ್ನಿಯಲ್ಲಿ ಕೊಬ್ಬರಿ, ತುಪ್ಪ, ಎಳ್ಳು ಹಾಕಿ ಹಾಗೆಯೇ ಮನೆಗೆ ಮರಳುತ್ತಿದ್ದನು. ಶವಸಂಸ್ಕಾರಕ್ಕೆ ತೆರಳಿದವರು ದೇಹ ಸುಡುವವರೆಗೆ ಕಾಯುತ್ತಿದ್ದರು. ಕನಕಗಿರಿ ಅರಸುಮನೆತನದಲ್ಲಿ ಅರಸರ ಶವ ಸುಡುವವರೆಗೆ ಕಾಡುಸಿದ್ಧರು ಕಾಯ್ದಿರುತ್ತಿದ್ದರು.[೩೪೮] ಮೃತದೇಹ ಸಂಪೂರ್ಣವಾಗಿ ದಹಿಸಿದ ಮೇಲೆ ಸಮೀಪದ ಕೆರೆ, ಬಾವಿ, ನದಿಗಳಲ್ಲಿ ಮಿಂದು ಮನೆಗೆ ಹಿಂದಿರುಗುತ್ತಿದ್ದರು.

ವೈಷ್ಣವಪದ್ಧತಿಯ ಅರಸುಮನೆತನಗಳಲ್ಲಿ ಅರಸ ಧನಿಷ್ಠಾ ನಕ್ಷತ್ರ, ಶತತಾರ ನಕ್ಷತ್ರ, ಪೂರ್ವಭಾದ್ರ ನಕ್ಷತ್ರ, ಉತ್ತರ ಭಾದ್ರ ನಕ್ಷತ್ರ, ರೇವತಿ ನಕ್ಷತ್ರಗಳಲ್ಲಿ ಮರಣ ಹೊಂದಿದ್ದರೆ ಕೆಲವು ಕ್ರಿಯಾವಿಧಿ ವಿಧಾನಗಳನ್ನು ಅನುಸರಿಸಬೇಕಿತ್ತು. ಸುರಪುರದ ಅರಸ ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೦-೧೭೭೩)ನು ಉತ್ತರಾಭಾದ್ರ ನಕ್ಷತ್ರದಲ್ಲಿ ತೀರಿದ್ದರಿಂದ ಅವರ ಶವದ ಹತ್ತಿರ ನಾಲ್ಕು ಗೊಂಬೆಗಳನ್ನು ಮಾಡಿ ಅವುಗಳನ್ನು ನಕ್ಷತ್ರ ಮಂತ್ರವಾದ ''ಪ್ರೇತಾಜಯತಾನರ ಇಂದ್ರೋವ : ಶರ್ಮಯಚ್ಛತು' ಎಂದು ಮಂತ್ರಿಸಿ ಈ ನಕ್ಷತ್ರಗಳ ದೋಷ ಪರಿಹಾರಕ್ಕಾಗಿ ತಿಲಪಾತ್ರ (ಕಬ್ಬಿಣದ ಪಾತ್ರೆಯಲ್ಲಿ ಎಳ್ಳು ಹಾಕಿ) ಸುವರ್ಣ, ರಜತ, ರತ್ನ, ಘೃತ ಪಾತ್ರೆ (ಕಂಚಿನ ಪಾತ್ರೆ)ಯಲ್ಲಿ ತುಪ್ಪ ಹಾಕಿ ದಾನ ಮಾಡಿದ್ದರು.[೩೪೯]

ಶೈವಪದ್ಧತಿಯಂತೆ ಅರಸನ ಶವವನ್ನು ಹೂಳುತ್ತಿದ್ದರು. ಶವವನ್ನು ಸ್ಮಶಾನಕ್ಕೆ ತರುವ ಮುಂಚೆ ಮೂರು ಮೊಳ ಜಾಗವನ್ನು ಉದ್ದ ಮತ್ತು ಅಗಲದಲ್ಲಿ ಅಳತೆ ಮಾಡಿ ಕುಣಿಯನ್ನು ತೋಡಿರುತ್ತಿದ್ದರು. ಕುಣಿ ತೋಡುವಾಗ ಕುಣಿಯಲ್ಲಿ ದೊಡ್ಡಕಲ್ಲು ಬಂದರೆ ಅದರಲ್ಲಿ ಒಂದು ತೆಂಗಿನ ಕಾಯಿ ಇಟ್ಟು ಅದನ್ನು ಮುಚ್ಚುತ್ತಿದ್ದರು. ಇನ್ನೊಂದು ಕುಣಿಯನ್ನು ಬೇರೆ ಕಡೆ ತೋಡುತ್ತಿದ್ದರು. ಆ ಕುಣಿಯೊಳಗೆ ಕುಣಿಯ ಪಶ್ಚಿಮ ಅಥವಾ ದಕ್ಷಿಣದ ಗೋಡೆಗಳಲ್ಲಿ ಒಂದು ಮಾಡವನ್ನು ಮಾಡಿರುತ್ತಿದ್ದರು. ಆ ಮಾಡದಲ್ಲಿ ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಶವವನ್ನು ಕೂಡಿಸುತ್ತಿದ್ದರು. ಆಗ ಕೊನೆಯ ಪೂಜೆಯನ್ನು ಮಾಡಿ, ಐದನೆಯ ಆರತಿಯನ್ನು ಬೆಳಗುತ್ತಿದ್ದರು. ಈಗಾಗಲೇ ನಾಲ್ಕು ಆರತಿಗಳನ್ನು ಅರಮನೆಯ ಮುಂದೆ ಬೆಳಗಿರಲಾಗಿತ್ತು. ನೆರೆದ ಜನರೆಲ್ಲ ಮೂರುಹಿಡಿ ಮಣ್ಣನ್ನು ಕುಣಿಯಲ್ಲಿ ಹಾಕುತ್ತಿದ್ದರು. ನಂತರ ಉಳಿದ ಮಣ್ಣನ್ನೆಲ್ಲ ಕುಣಿಯಲ್ಲಿ ಹಾಕಿ ಮುಚ್ಚುತ್ತಿದ್ದರು. ಮುಚ್ಚಿದ ಕುಣಿಯ ಮೇಲೆ ಮೂರು ದೊಡ್ಡ ಗಾತ್ರದ ಕಲ್ಲುಗಳನ್ನು ಇರಿಸುತ್ತಿದ್ದರು. ನೀರುತುಂಬಿದ ಮಗೆಯನ್ನು ಹಿಡಿದುಕೊಂಡು ಸತ್ತ ಅರಸನ ಮಗ ಕುಣಿಯ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ ಹಾಕುತ್ತಿದ್ದನು. ಮಗೆಗೆ ಒಂದೊಂದು ಪ್ರದಕ್ಷಿಣೆಗೆ ಒಂದೊಂದು ರಂಧ್ರವನ್ನು ಹಾಕಲಾಗುತ್ತಿತ್ತು. ಆ ರಂಧ್ರದಿಂದ ಕುಣಿಯ ಸುತ್ತಲೂ ನೀರು ಬೀಳುವುದರೊಳಗೆ

ಪ್ರದಕ್ಷಿಣೆ ಮುಗಿಯುತ್ತಿತ್ತು. ತಕ್ಷಣವೇ ಮಗೆಯನ್ನು ಹಿಂದಕ್ಕೆ ಬೀಸಾಕಿ ಮರಳಿ ಹಿಂದಕ್ಕೆ ನೋಡದೆ ಮನೆಗೆ ಮರಳುತ್ತಿದ್ದನು.

ಅರಮನೆಯಲ್ಲಿ ಅರಸ ಪ್ರಾಣಬಿಟ್ಟ ಸ್ಥಳದಲ್ಲಿ ಆಕಳ ಸಗಣಿಯಿಂದ ಸಾರಿಸಿ ಅದರ ಮೇಲೆ ಮಣ್ಣಿನ ಪಣತಿಯಲ್ಲಿ ದೀಪವನ್ನು ಹಚ್ಚಿರುತ್ತಿದ್ದರು. ಶವಸಂಸ್ಕಾರದಲ್ಲಿ ಭಾಗವಹಿಸಿದ ಜನ ಅವರ ಮನೆಗೆ ಬಂದು ದೀಪವನ್ನು ನೋಡಿ, ನಮಸ್ಕರಿಸಿ ತಮ್ಮ ತಮ್ಮ ಮನೆಗೆ ತೆರಳುತ್ತಿದ್ದರು. ಕನಕಗಿರಿ ಅರಸರು ಸಾರ್ವಜನಿಕರು ಶವಸಂಸ್ಕಾರ ಮುಗಿಸಿಕೊಂಡು ಅರಮನೆಗೆ ದೀಪ ನೋಡಲು ಬರುವಷ್ಟರಲ್ಲಿಯೇ ಎಲ್ಲರೂ ಸ್ನಾನ ಮಾಡಬೇಕಾಗಿತ್ತು.[೩೫೦] ಈಗಲೂ ಈ ನಿಯಮವಿದೆ.

ಶವಸಂಸ್ಕಾರದ ಮರುದಿನ ವೈಷ್ಣವ ಪದ್ಧತಿಯ ಅರಸರಲ್ಲಿ ಶವಕ್ಕೆ ಬೆಂಕಿ ಇಟ್ಟವನು ಶವದಹನದ ಸ್ಥಳಕ್ಕೆ ಹೋಗುತ್ತಿದ್ದನು. ಶವದಹನ ಮಾಡಿದ ಸ್ಥಳಕ್ಕೆ ೩ ಸಾರಿ ಪ್ರದಕ್ಷಿಣೆ ಹಾಕಿ, ನಂತರ ಅದರ ಮೇಲೆ ಹಾಲು ಹಾಕಿ, ನೀರನ್ನು ಸಿಂಪಡಿಸಿ ಪೂಜೆ ಮಾಡುತ್ತಿದ್ದನು. ಆಗ ಅಲ್ಲಿ ಸುಡದೆ ಉಳಿದಿರುವ ಆಸ್ಥಿಯನ್ನು ಆಯ್ದು ಅವುಗಳನ್ನು ಹಾಲು, ನೀರಿನಿಂದ ತೊಳೆದು ಒಂದು ಮಣ್ಣಿನ ಮಡಕೆಯಲ್ಲಿ ಹಾಕುತ್ತಿದ್ದರು. ಇದನ್ನು ಅಸ್ಥಿ ಸಂಚಯ ಇಲ್ಲವೆ ಅಸ್ಥಿಶ್ರದ್ಧ ಎಂದು ಕರೆಯುತ್ತಾರೆ. ಬೂದಿಯನ್ನು ಒಂದು ಚೀಲದಲ್ಲಿ ತುಂಬುತ್ತಿದ್ದರು. ಅದನ್ನು ತೆಗೆದುಕೊಂಡು ಹೋಗಿ, ನದಿಗೆ ವಿಸರ್ಜನೆ ಮಾಡುತ್ತಿದ್ದರು. ಚಿತ್ರದುರ್ಗ, ಆನೆಗೊಂದಿ, ಕನಕಗಿರಿ, ಅರಸರು ತುಂಗಭದ್ರಾ ನದಿಯಲ್ಲಿ ವಿಸರ್ಜಿಸಿದರೆ ಸುರಪುರ, ದೇವದುರ್ಗ, ಅರಸರು ಕೃಷ್ಣಾನದಿಯಲ್ಲಿ ವಿಸರ್ಜಿಸುತ್ತಿದ್ದರು. ಆದರೆ ಅಸ್ಥಿಯನ್ನು ತಂದು ತಮಗೆ ಬೇಕಾದ ಸ್ಥಳಗಳಲ್ಲಿ ಹೂಳುತ್ತಿದ್ದರು. ಅವನ್ನು ಗುಡ್ಡೆ ಎಂದು ಕರೆಯುತ್ತಿದ್ದರು. ಶವವನ್ನು ದಹನ ಮಾಡಿದರು ಎನ್ನುವುದಕ್ಕೆ ಬದಲಾಗಿ ಇಂಥವರನ್ನು ಇಂಥ ಕಡೆ ಗುಡ್ಡೆ ಮಾಡಿದರು ಎನ್ನುತ್ತಿದ್ದರು. ಚಿತ್ರದುರ್ಗದ ನಾಯಕ ಅರಸರು ಅನೇಕ ಕಡೆಗಳಲ್ಲಿ ಗುಡ್ಡೆಗೆ ಈಶ್ವರ ಪ್ರತಿಷ್ಠೆ ಮಾಡಿಸಿ ಗುಡಿ ಕಟ್ಟಿಸಿದ್ದಾರೆ.[೩೫೧]

ಮೂರನೇ ದಿನದ ಕಾರ್ಯಕ್ರಮ ವಿಶೇಷತೆಯಿಂದ ಕೂಡಿರುತ್ತದೆ. ಇದನ್ನು ಶ್ರಾದ್ಧ ಇಲ್ಲವೇ ತಿಥಿ ಎಂದು ಕರೆಯುವರು. ಸುರಪುರ, ದೇವದುರ್ಗ, ಕನಕಗಿರಿ, ಗುಡಗುಂಟಿ, ಗುಂತಗೋಳದವರು ಮೂರು ದಿನದ ಕರ್ಮವೆಂದು ಕರೆಯುತ್ತಾರೆ. ಆತ್ಮವು ಈ ಧರೆಯ ಮೇಲೆ ಮೂರುದಿನಗಳವರೆಗೆ ಇರುವುದಾಗಿ ನಂಬಲಾಗಿದೆ. ಆಮೇಲೆ ಆತ್ಮವು ತನ್ನ ಪೂರ್ವಜರನ್ನು ಸೇರಿಕೊಳ್ಳಲು ಸಾಮೂಹಿಕ ಪ್ರಾರ್ಥನೆಯನ್ನು ಆನೆಗೊಂದಿ ಅರಸರು ನಡೆಸುತ್ತಿದ್ದರು. ತೀರಿದ ಅರಸನಿಗೆ ಇಷ್ಟವಾದ ಸಿಹಿ, ಕಾರ, ಮಾಂಸ ಇತ್ಯಾದಿ ಅಡಿಗೆಯನ್ನು ಮಾಡಲಾಗುತ್ತಿತ್ತು. ಅರಸ ಸುರಪಾನಿಯಾಗಿದ್ದರೆ, ಸುರಪಾನವನ್ನು ಬಟ್ಟಲಿನಲ್ಲಿ ತೆಗೆದುಕೊಂಡು ದಹನಮಾಡಿದ ಸ್ಥಳದಲ್ಲಿಯ ಮಣ್ಣುಗುಡ್ಡೆಯ ಮೇಲೆ ಇಡುತ್ತಿದ್ದರು. ಹೂಳುವ ಮನೆತನದವರು ಕುಣಿಯ ಮೇಲೆ ಇಟ್ಟು ಕಾಗೆ ಬಂದು ಮುಟ್ಟುವ ತನಕ ಕಾಯುತ್ತಿದ್ದರು. ಇದನ್ನು

ಮೂರನೆಯ ದಿನದ ಪಿಂಡವೆಂತಲೂ ಕರೆಯುತ್ತಿದ್ದರು. ಕಾಗೆ ಮುಟ್ಟುವ ತನಕ ಬಂಧು, ಬಳಗ ಸಮಾಧಿಯ ಸಮೀಪದಲ್ಲಿ ಕಾದಿರುತ್ತಿದ್ದರು. ಒಂದು ವೇಳೆ ಕಾಗೆ ಒಂದು ಪಿಂಡವನ್ನು ಮುಟ್ಟದಿದ್ದ ಪಕ್ಷದಲ್ಲಿ ಮೃತ ಅರಸನ ಮನೆಯ ಹಿರಿಯರು ಎಲ್ಲಾ ಸದಸ್ಯರನ್ನು ಚೆನ್ನಾಗಿ ನೋಡಿಕೊಳ್ಳುವುದಾಗಿಯೂ ಹಾಗೂ ಮೃತನ ಆಸೆಗಳನ್ನು ಈಡೇರಿಸುವುದಾಗಿಯೂ ಮನಸ್ಸಿನಲ್ಲಿ ಹೇಳಿಕೊಂಡು ಮೃತರ ಆತ್ಮಕ್ಕೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಇಷ್ಟಾದ ಮೇಲೆಯೂ ಕಾಗೆಯು ಪಿಂಡವನ್ನು ಮುಟ್ಟದಿದ್ದರೆ, ಹಸುವಿಗೆ ತಿನ್ನಿಸುತ್ತಿದ್ದರು. ಹಸು ಸಿಗದಿದ್ದರೆ ಗಂಗೆಗೆ ಒಯ್ದು ಹಾಕಿ ಬರುತ್ತಿದ್ದರು.[೩೫೨] ಇಲ್ಲಿ ಕಾಗೆ ಮುಟ್ಟಿದರೆ ಮಾತ್ರ ಮರಣ ಹೊಂದಿದವರು ಸ್ವರ್ಗ ಸೇರಿದರು, ಅವರಿಗೆ ಮೋಕ್ಷ ಲಭಿಸಿತು ಹಾಗೂ ಅವರಿಗೆ ಯಾವುದೇ ರೀತಿಯ ಆಸೆ ಇರಲಿಲ್ಲವೆಂದು ತಿಳಿಯುತ್ತಿದ್ದರು. ಪಿಂಡವನ್ನು ಕಾಗೆ ಮುಟ್ಟದಿದ್ದರೆ ಮೃತರಿಗೆ ಇನ್ನೂ ಬದುಕಬೇಕೆಂಬ ಆಸೆ ಇದೆ ಎಂಬ ನಂಬಿಕೆ ಇತ್ತು. ಈ ಪದ್ಧತಿ ವೈಷ್ಣವ ಹಾಗೂ ಶೈವಪದ್ಧತಿಯ ನಾಯಕ ಅರಸರ ಮನೆತನಗಳಲ್ಲಿಯೂ ಇತ್ತು.

ಶೈವನಾಯಕ ಅರಸುಮನೆತನಗಳಲ್ಲಿ ಹತ್ತನೆಯ ದಿನದಂದು ಇಡೀ ಅರಮನೆಯನ್ನು ಶುಚಿಗೊಳಿಸುತ್ತಿದ್ದರು. ಅದೇ ದಿನದಂದು ರಾತ್ರಿ ದಶಪಿಂಡ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿದ್ದರು. ಈ ಕಾರ್ಯಕ್ರಮ ನಡೆಯುವುದಕ್ಕಿಂತ ಮುಂಚಿನ ಅಂದರೆ ಅರಸ ತೀರಿದಂದಿನಿಂದ ಈ ದಿನದವರೆಗೆ ಅರಮನೆಯಲ್ಲಿ ಯಾವುದೇ ಶುಭಕಾರ್ಯಗಳು ನಡೆಯುತ್ತಿದ್ದಿಲ್ಲ. ಸಿಹಿ ಅಡುಗೆ ಮಾಡುತ್ತಿರಲಿಲ್ಲ. ಹೊಸಬಟ್ಟೆ ಧರಿಸುತ್ತಿರಲಿಲ್ಲ. ಯಾರಿಗೂ ಭಿಕ್ಷೆ ಹಾಕುವಂತಿರಲಿಲ್ಲ. ಈ ರೀತಿಯ ಕಟ್ಟುಪಾಡುಗಳನ್ನು ಅನುಸರಿಸುತ್ತಿದ್ದರು. ಈ ದಿನಗಳನ್ನು ಶೋಕಸೂಚಕ ದಿನಗಳೆಂಬ ಭಾವನೆ ಇತ್ತು. ಈ ದಿನ ತೀರಿದ ಅರಸನ ಭಾವಚಿತ್ರ ಇಲ್ಲವೇ ನೀರು ತುಂಬಿದ ಒಂದು ಮಗಿಯನ್ನು ಇಟ್ಟು ಪೂಜಿಸುತ್ತಿದ್ದರು. ಗುಡಗುಂಟಿ ಅರಸರು ಮಗಿಯ ಜೊತೆಗೆ ಡೊಳ್ಳನ್ನು ಇಟ್ಟು ಪೂಜಿಸುವ ಸಂಪ್ರದಾಯವನ್ನು ಹೊಂದಿದ್ದರು.[೩೫೩] ಈ ದಿನದ ಕಾರ್ಯಕ್ರಮಕ್ಕೆ ನಂಟರುಗಳು ಬರುತ್ತಿರಲಿಲ್ಲ. ಕೇವಲ ಮನೆಯವರೇ ಆಚರಿಸುತ್ತಿದ್ದರು. ಇದೇ ಕಾರ್ಯಕ್ರಮವನ್ನು ವೈಷ್ಣವಪದ್ಧತಿಯ ಅರಸುಮನೆತನಗಳು ಹನ್ನೊಂದನೆಯ ದಿನದಂದು ಆಚರಿಸುತ್ತಿದ್ದರು.

ಹನ್ನೊಂದನೆಯ ದಿನದ ಕಾರ್ಯಕ್ರಮವನ್ನು ವೈಕುಂಠ ಸಮಾರಾಧನೆ, ಕೈಲಾಸ ಆರಾಧನೆ ಎಂದು ಕರೆಯುತ್ತಿದ್ದರು. ಇದನ್ನು ವೈಷ್ಣವ ಅರಸುಮನೆತನಗಳಾದ ಚಿತ್ರದುರ್ಗ, ಸುರಪುರ, ದೇವದುರ್ಗ, ಕನಕಗಿರಿಯವರು ಹನ್ನೊಂದನೆಯ ದಿನ ಮಾಡಿದರೆ, ಆನೆಗೊಂದಿ ಅರಸರು ಹದಿಮೂರನೆಯ ದಿನದಲ್ಲಿ ಮಾಡುತ್ತಿದ್ದರು. ಈ ದಿನದವರೆಗೆ ಅರಸ ಮರಣಿಸಿದ ಸ್ಥಳದಲ್ಲಿ ದೀಪವನ್ನು ಇಟ್ಟಿರುತ್ತಿದ್ದರು. ಅದು ನಂದದಂತೆ ನೋಡಿಕೊಳ್ಳುತ್ತಿದ್ದರು. ಈ ದಿನದಂದು ಪ್ರೇತಾತ್ಮಕ್ಕೆ ತೃಪ್ತಿ ತರುವ ನಂಬಿಕೆ ಹೊಂದಿರುತ್ತಿದ್ದರು.

ಚಿತ್ರದುರ್ಗದ ಅರಸು ಮನೆತನದಲ್ಲಿ ಒಂದು ಕಳಸವನ್ನಿಟ್ಟು ಮೃತ ಅರಸನ ಆತ್ಮವನ್ನು ಆಹ್ವಾನಿಸುತ್ತಿದ್ದರು. ಬಾಳೆಯ ಎಲೆಗಳನ್ನು ಕಳಸದ ಮುಂದೆ ಹಾಕಿ ಮೃತ ಅರಸನಿಗೆ ಪ್ರಿಯವಾಗಿದ್ದ ತಿನಿಸುಗಳನ್ನು ಇಟ್ಟಿರುತ್ತಿದ್ದರು. ಮಾಂಸವನ್ನು ಕಡ್ಡಾಯವಾಗಿ ಇಡುತ್ತಿದ್ದರು. ಹೊಸ ಬಟ್ಟೆಯಿಟ್ಟು ಪೂಜೆ, ಮಂಗಳಾರತಿ, ಧೂಪ, ನೈವೇದ್ಯ ಮಾಡುತ್ತಿದ್ದರು. ಎಲ್ಲರೂ ಎಡೆಗೆ ನಮಸ್ಕರಿಸುತ್ತಿದ್ದರು.[೩೫೪]

ಸುರಪುರ ಅರಸು ಮನೆತನದಲ್ಲಿ ಮರಣ ಹೊಂದಿದ ಅರಸರ ಭಾವಚಿತ್ರಕ್ಕೆ ಇಲ್ಲವೆ ಆತ ಜೀವಬಿಟ್ಟ ಸ್ಥಳದಲ್ಲಿ ತುಂಬಿದ ನೀರಿನ ಮಗೆಯನ್ನಿರಿಸುತ್ತಿದ್ದರು. ಮಗೆಗೆ ಅರಿಶಿಣ, ಕುಂಕುಮ, ವಿಭೂತಿ ಹಚ್ಚಿ ಹೊಸಬಟ್ಟೆಯನ್ನು ಏರಿಸುತ್ತಿದ್ದರು. ಅಕ್ಷತೆಯನ್ನು ಹಾಕುತ್ತಿದ್ದರು. ಹಾಗೂ ಮಡಿದ ಅರಸನ ಇಷ್ಟದ ಪಕ್ವಾನ್ನಗಳನ್ನು ಬಾಳೆಯ ಎಲೆಯಲ್ಲಿ ಎಡೆಯಿಡಲಾಗುತ್ತಿತ್ತು. ಈ ದಿನದಂದು ಅತ್ಯಂತ ಸಮೀಪದ ಬಂಧುಗಳು ಮನೆಯ ಹಿರಿಯರಿಗೆ ಹೊಸಬಟ್ಟೆಯನ್ನು ನೀಡುತ್ತಿದ್ದರು. ಅಲ್ಲದೆ ಅರಮನೆಯಲ್ಲಿ ಬಡ ಬಗ್ಗರಿಗೆ ಅನ್ನಸಂತರ್ಪಣೆ ನಡೆಯುತ್ತಿತ್ತು. ಮೃತ ಅರಸರ ವಸ್ತ್ರಗಳನ್ನು ಬಡ ಬಗ್ಗರಿಗೆ ಹಂಚಲಾಗುತ್ತಿತ್ತು. ಹಾಗೂ ಮೃತರ ಆತ್ಮಕ್ಕೆ ಶಾಂತಿ ಸಿಗಲು ಬ್ರಾಹ್ಮಣರಿಗೆ ದಾನ ನೀಡುತ್ತಿದ್ದರು. ಸುರಪುರದ ಅರಸ ಮುಮ್ಮಡಿ ಪಿಡ್ಡನಾಯಕ (ಕ್ರಿ.ಶ. ೧೮೦೨-೧೮೦೮)ನ ತಾಯಿ ತೀರಿಕೊಂಡಾಗ ಮುಮ್ಮಡಿ ಪಿಡ್ಡನಾಯಕನು ಕರ್ಮಗಳನ್ನು ಮಾಡಿಸಿದನಲ್ಲದೆ ಬುಕ್ಕರಾಯದ ರಂಗಾಚಾರ್ಯನಿಗೆ ಕೊಳ್ಳೂರಿನಲ್ಲಿ ಇಕ್ಕಳ ಭೂಮಿ, ಚಿಕ್ಕ ಕುಂಬಾರ ಗುಡಿ ಹೊಲವನ್ನು ದಾನವಾಗಿ ನೀಡಿರುತ್ತಾನೆ. ಕಾಮಸಮುದ್ರದ ರಾಮಾಚಾರ್ಯರಿಗೆ ಮುಡಬೂಳ ಇಪ್ಪತ್ತು ಬಿಘೆ ಕಾಗರಾಳದಲ್ಲಿ ೨೦ ಬಿಘೆ, ಕನಕಗಿರಿ ವೆಂಕಣ್ಣಭಟ್ಟನಿಗೆ ಹಯ್ಯಾಳ ಒಕ್ಕಳ ಮತ್ತು ಕಾಗರಾಳ ೨೦ ಬಿಘೆ, ದಪ್ತರದ ಪರಮಪ್ಪಪುತ್ರಗೆ ಕನ್ನೆಹಳ್ಳಿ ೪೦ ಬಿಘೆ ದಾನವನ್ನು ನೀಡುತ್ತಾನೆ. ಹಾಗೆಯೇ ರಾಣಿ ಕಾಟಮ್ಮಳೂ ಹರಿಪಾದ ಸೇರಿದಾಗ ಪಿಡ್ಡನಾಯಕನು ಕರ್ಮಗಳನ್ನು ಮಾಡಿಸಿ ೬೪ ದಾನಗಳನ್ನು ಕೊಡುತ್ತಾನೆ.[೩೫೫]

ನಂತರ ಮೃತ ಅರಸನ ಗುಡ್ಡೆಗೆ ವೈಷ್ಣವಪದ್ಧತಿಯಂತೆ ಬೃಂದಾವನವನ್ನು ನಿರ್ಮಿಸಲಾಗುತ್ತಿತ್ತು. ಹಾಗೂ ಶೈವಪದ್ಧತಿಯಂತೆ ಶೈವಮನೆತನದ ಅರಸರ ಸಮಾಧಿಯನ್ನು ನಿರ್ಮಿಸಲಾಗುತ್ತಿತ್ತು. ಇಂಥ ಅನೇಕ ಸಮಾಧಿಗಳನ್ನು ಈ ಅರಸು ಮನೆತನದವರು ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ವೈಷ್ಣವ ಪದ್ಧತಿಯ ಪ್ರಕಾರ ಇವುಗಳಿಗೆ ಬೃಂದಾವನವೆಂದು ಕರೆಯುತ್ತಾರೆ. ಶೈವಪದ್ಧತಿಯ ಪ್ರಕಾರ ಸಮಾಧಿ ಎಂದು ಕರೆಯುತ್ತಾರೆ. ಆದರೆ ಈಗ ಸಾಮಾನ್ಯವಾಗಿ ಇವೆರಡಕ್ಕೂ ಸಮಾಧಿಗಳೆಂದು ಕರೆಯುವುದು ವಾಡಿಕೆಯಾಗಿದೆ. ಚಿತ್ರದುರ್ಗದ ಮೊದಲ ಅರಸ ಮತ್ತಿತಿಮ್ಮಣ್ಣನಾಯಕ (ಕ್ರಿ.ಶ. ೧೫೬೫-೧೫೮೯) ಸ್ವರ್ಗಸ್ಥನಾದಾಗ, ಆತನ ಮಗನಾದ ಓಬಣ್ಣನಾಯಕ ತಂದೆಯ ಶವವನ್ನು ದಹನ ಮಾಡಿ ವೃದ್ಧಾಚಾರ ಸಂಪ್ರದಾಯದಂತೆ ತುಂಗಭದ್ರನದಿಯಲ್ಲಿ ಬೂದಿಯನ್ನು ವಿಸರ್ಜಿಸಿ ಉತ್ತರಕ್ರಿಯಾದಿಗಳನ್ನು ಮಾಡುತ್ತಾನೆ. ತಂದೆಯ ಅಸ್ಥಿಗಳನ್ನು ಜಿಂಕಲ ಓಬಯ್ಯನ ಮೂಲಕ ತರಿಸಿಕೊಂಡು ಮತ್ತಿ ಗ್ರಾಮದಲ್ಲಿ ಒಂದು ಗುಡ್ಡೆ

ನಿರ್ಮಿಸುತ್ತಾನೆ.[೩೫೬]

ಓಬಣ್ಣನಾಯಕ (ಕ್ರಿ.ಶ. ೧೫೮೯-೧೬೦೨) ಮರಣ ಹೊಂದಿದಾಗ ಇವನ ಅಸ್ಥಿಯನ್ನು ಮಗ ಕಸ್ತೂರಿ ರಂಗಪ್ಪ ನಾಯಕನು ಹಡವನಹಾಳು ಗ್ರಾಮಕ್ಕೆ ತೆಗೆದುಕೊಂಡು ಹೋಗಿ ಸಮಾಧಿ ಮಾಡುತ್ತಾನೆ.[೩೫೭] ಇಮ್ಮಡಿ ಮದಕರಿನಾಯಕ(ಕ್ರಿ.ಶ. ೧೬೫೨-೧೬೭೪)ನು ತೀರಿದಾಗ ಅರಮನೆಯಲ್ಲಿಯೇ ಈತನ ಶವವನ್ನು ದಹನ ಮಾಡುತ್ತಾರೆ.[೩೫೮] ಬಿಚ್ಚುಗತ್ತಿ ಭರಮಣ್ಣನಾಯಕ(ಕ್ರಿ.ಶ. ೧೬೮೯-೧೭೨೧)ನ ಗುಡ್ಡೆಯನ್ನು ಆತನ ಮಗ ಹಿರೇಮದಕರಿನಾಯಕ ಮಾಡಿಸಿದನೆಂದು ವಂಶಾವಳಿಯಲ್ಲಿ ಹೇಳಿದೆ. ಚಿತ್ರದುರ್ಗದ ಟೀಕಿನ ಮೇಲಕ್ಕೆ ಬಂದರೆ ಅಲ್ಲಿ ಒಂದು ಪೌಳಿಗೋಡೆ ಇದೆ. ಅದನ್ನು ಪ್ರವೇಶಿಸಿದರೆ ಎಡದಲ್ಲಿ ಪಶ್ಚಿಮ ಭಾಗಕ್ಕೆ ಬಂಡೆಯೊಂದರ ಅಡಿಯಲ್ಲಿ ಭರಮಣ್ಣನಾಯಕನ ಸಮಾಧಿ ಇದೆ. ಹಿರೇ ಮದಕರಿನಾಯಕ(ಕ್ರಿ.ಶ. ೧೭೨೧-೧೭೪೯) ಮಾಯಕೊಂಡದ ಕಾಳಗದಲ್ಲಿ ಮಡಿದಾಗ ಆತನ ಶವವನ್ನು ಮಾಯಕೊಂಡದಲ್ಲಿಯೇ ದಹನ ಮಾಡಲಾಯಿತು. ಅಸ್ಥಿಯನ್ನು ಚಿತ್ರದುರ್ಗಕ್ಕೆ ತಂದು ಬೆಟ್ಟದ ಮೇಲೆ ಸಮಾಧಿ ಮಾಡಿದರು. ಭರಮಣ್ಣನಾಯಕನ ಸಮಾಧಿಯ ಬಲಗಡೆಯ ಪೂರ್ವದಲ್ಲಿ ಗೂಡುಮಂಟಪದಂತೆ ಕಾಣುವುದೇ ಹಿರೇ ಮದಕರಿನಾಯಕನ ಸಮಾಧಿ. ಉಳಿದ ಅಸ್ಥಿಯನ್ನು ಕಾಳಗದಲ್ಲಿ ಪ್ರಾಣತೆತ್ತ ಅವನ ಆನೆ ಕುದುರೆಗಳನ್ನು ಹಾಗೂ ಆಯುಧಗಳನ್ನೂ ಮಾಯಕೊಂಡದಲ್ಲೇ ಹೂಳಿ ಅದರ ಮೇಲೆ ಮಂಟಪವನ್ನು ನಿರ್ಮಿಸಿದರು.[೩೫೯]

ಹೈದರ್ ಚಿತ್ರದುರ್ಗದ ವೀರಮದಕರಿನಾಯಕನನ್ನು ಶ್ರೀರಂಗಪಟ್ಟಣದ ಸೆರೆಯಲ್ಲಿಟ್ಟಾಗ ಆತ ಮೃತನಾದಾಗ ಅನೇಕ ದಾನ ಧರ್ಮ ಮಾನ ಮರ್ಯಾದೆಗಳೊಡನೆ ಅವನ ದೇಹವನ್ನು ಪಶ್ಚಿಮವಾಹಿನೀ ತೀರದಲ್ಲಿ ದಹನ ಮಾಡಿಸಿದನು.[೩೬೦] ಅಕ್ಕತಂಗಿಹೊಂಡದ ಪಶ್ಚಿಮದ ನಾಗತಿಬಾಗಿಲಿನ ಹತ್ತಿರ ಓಬಮ್ಮನಾಗತಿಯ ಹಾಗೂ ಮತ್ತಿತರರ ಸಮಾಧಿಗಳಿದ್ದವೆಂದು ಜನ ಹೇಳುತ್ತಾರೆ. ಈಗ ಅವು ಇಲ್ಲ. ಹಾಳಾಗಿರಬಹುದು.

ಸುರಪುರದ ಅರಸ ಪಾಮನಾಯಕ (ಕ್ರಿ.ಶ.೧೬೬೬-೧೬೮೭) ಔರಂಗಜೇಬನಿಗೆ ಶರಣುಹೋಗಿ ಸಗರ ಕಿಲ್ಲೆಯನ್ನು ಅವರಿಗೆ ಬಿಟ್ಟುಕೊಟ್ಟಾಗ ಕ್ರಿ.ಶ.೧೬೮೭ರಲ್ಲಿ ಪಾಮನಾಯಕನನ್ನು ಔರಂಗಜೇಬನ ಬಳಿ ಕರೆದೊಯ್ಯುತ್ತಾರೆ. ಅಲ್ಲಿ ಐದುದಿನಗಳ ನಂತರ ಒಮ್ಮಿಂದೊಮ್ಮೆಲೆ ಆತ ಮರಣ ಹೊಂದುತ್ತಾನೆ. ಆಗ ಈತನ ಶವವನ್ನು ಪಲ್ಲಕ್ಕಿಯೊಳಗೆ ಇರಿಸಿ ಸಂಗಡಿಗರು ತೆಗೆದುಕೊಂಡು ತಿರುಗಿ ಬರುತ್ತಾರೆ. ನಂತರ ವೈಷ್ಣವಪದ್ಧತಿಯ ಪ್ರಕಾರ ದಹನ ಮಾಡಿದರು.[೩೬೧] ಗುಡಗುಂಟಿ ನಾಯಕ ಅರಸರ ಸಮಾಧಿಗಳು ಕಾಸಬಾವಿಯ ಹತ್ತಿರ ಇವೆ. ಆ ಸಮಾಧಿಗಳಲ್ಲಿ ರಾಜಾಲಿಂಗನಾಯಕ, ರಾಜಾ ಜಡಿಸೋಮಪ್ಪನಾಯಕ, ತಿಪ್ಪರಾಜ, ರಾಜಾ ಜಡಿಸೋಮಪ್ಪನಾಯಕ ಇನ್ನೂ ಮುಂತಾದವರ ಸಮಾಧಿಗಳಿವೆ.[೩೬೨] ದೇವದುರ್ಗದ ಅರಸರಾದ ಕಿಲಚನಾಯಕ, ರಂಗಪ್ಪನಾಯಕ, ಕೃಷ್ಣಪ್ಪನಾಯಕ, ಕೇಶವನಾಯಕರ ಸಮಾಧಿಗಳು

ದೇವದುರ್ಗದ ಅಮರಪ್ಪನಗುಡ್ಡದ ಪೂರ್ವದಿಕ್ಕಿಗಿವೆ. ಆದರೆ ಕೊಳ್ಳಿರಂಗಪ್ಪನಾಯಕನ ಸಮಾಧಿ ವೇಣುಗೋಪಾಲ ದೇವಾಲಯದ ದಕ್ಷಿಣಕ್ಕಿದೆ. ಹಸಿರು ಕಲ್ಲಿನಿಂದ ನಿರ್ಮಿಸಿದ ಈ ಸಮಾಧಿ ಬಹಳ ಸುಂದರವಾಗಿದೆ. ಹುಲಿಹೈದರ್‌ನ ಉತ್ತರ ದಿಕ್ಕಿಗೆ ಕನಕಗಿರಿ ಅರಸರ ಗೋರಿಗಳಿವೆ. ಇದನ್ನು ಸ್ಥಳೀಯರು 'ರಾಜಘಾಟ್' ಎಂದು ಕರೆಯುತ್ತಾರೆ. ರಂಗನಾಥಪ್ಪನಾಯಕ, ರಂಗಪ್ಪನಾಯಕ, ವುಡಸಿನಾಯಕರ ಸಮಾಧಿಗಳು ಅಲ್ಲಿವೆ.

ಮರಣೋತ್ತರಕ್ರಿಯೆಗಳಿಗೆ ಸಂಬಂಧಿಸಿದಂತೆ ನಡೆಯುವ ಸಂಸ್ಕಾರಗಳಲ್ಲಿ ವರ್ಷಕ್ಕೊಮ್ಮೆ ಮಾಡುವ ಶ್ರಾದ್ಧವೂ ಒಂದು. ಪರಲೋಕ ಸಾಧನೆಗೆ ನೆರವಾಗಲೆಂದು ಹಾಗೂ ಮಡಿದವರ ಆತ್ಮಕ್ಕೆ ಶಾಂತಿ ಸಿಗದೆ ತಮ್ಮನ್ನು ಪೀಡಿಸಬಹುದೆಂಬ ಮೂಲ ನಂಬಿಕೆ ಹಾಗೂ ಸತ್ತವರನ್ನು ವರ್ಷಕ್ಕೊಮ್ಮೆಯಾದರು ಸ್ಮರಿಸಿಕೊಳ್ಳುವ ಸಲುವಾಗಿ ಪ್ರತಿ ಮಹಾಲಯ ಅಮಾವಾಸ್ಯೆಯ ೧೫ ದಿನಗಳಲ್ಲಿ ಯಾವುದಾದರೊಂದು ದಿನ ತಿಥಿಯನ್ನು ಮಾಡುತ್ತಾರೆ. ಚಿತ್ರದುರ್ಗದ ನಾಯಕ ಅರಸರು ಬಾದ್ರಪದಮಾಸದಲ್ಲಿ ತಮ್ಮ ಹಿರಿಯರ ಹೆಸರಿನಲ್ಲಿ ಅಂದು ಅವರು ಮರಣಿಸಿದ ಮಿತಿಯ ದಿನದಂದು ಶ್ರಾದ್ಧ ಅಥವಾ ಪಕ್ಷ ಕ್ರಿಯೆ ಮಾಡುತ್ತಾರೆ. ಆದುದರಿಂದ ಈ ಮಾಸಕ್ಕೆ ಪಕ್ಷಮಾಸ ಎಂದು ಕರೆಯುತ್ತಾರೆ.[೩೬೩]

ಆನೆಗೊಂದಿ ಅರಸು ಮನೆತನದವರು, ವರ್ಷಕ್ಕೊಮ್ಮೆ ಶ್ರಾವಣಮಾಸದಲ್ಲಿ ಹಿರಿಯರ ನೆನಪಿಗಾಗಿ ರುದ್ರಾಭಿಷೇಕವನ್ನು ಮಾಡಿಸುತ್ತಾರೆ. ಹಾಗೂ ಅಂದು ಹೋಮ, ವಾಸ್ತುಶಾಂತಿ, ಕನಕಾಭಿಷೇಕವನ್ನು ಹಮ್ಮಿಕೊಳ್ಳುವುದುಂಟು. ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿಯವರು ಭಾದ್ರಪದಮಾಸದಲ್ಲಿ (ಇತಾರ ಅಮಾವಾಸ್ಯೆ) ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಇದನ್ನು ಬಳಗದಲ್ಲಿ ಹಾಕಿಕೊಳ್ಳುವುದು ಎಂದು ಕರೆಯುತ್ತಾರೆ. ಅಂದು ಅರಮನೆಯನ್ನು ಸ್ವಚ್ಛಗೊಳಿಸಿ ಪೂರ್ವಜರ, ಸತ್ತವರ ಹೆಸರಿನಲ್ಲಿ ಹೊಸಬಟ್ಟೆ ಏರಿಸಿ, ಅವರ ಭಾವಚಿತ್ರವನ್ನಿಟ್ಟು ಅರಮನೆಯಲ್ಲಿ ಪೂಜೆ ಸಲ್ಲಿಸುತ್ತಾರೆ. ಹಾಗೂ ಇದೇ ಸಂದರ್ಭದಲ್ಲಿ ಸ್ಮಶಾನದಲ್ಲಿರುವ ತಮ್ಮ ಹಿರಿಯರ ಸ್ಮಾರಕಗಳಿಗೆ ಪೂಜೆ ಸಲ್ಲಿಸುತ್ತಾರೆ. ಈ ನಾಯಕ ಅರಸುಮನೆತನಗಳಲ್ಲಿ ತಮ್ಮ ಹಿರಿಯರಿಗೆ ಶ್ರಾದ್ಧ ಕಾರ್ಯಕ್ರಮವನ್ನು ಪ್ರತಿವರ್ಷವೂ ಮಾಡಿಯೇ, ಇತರ ಶುಭಕಾರ್ಯಗಳನ್ನು ಮಾಡುವರು.

ಈ ರೀತಿ ಕರ್ನಾಟಕದ ನಾಯಕ ಅರಸರು ವೈಷ್ಣವ ಹಾಗೂ ಶೈವಪದ್ಧತಿಯಂತೆ ಶವಸಂಸ್ಕಾರ ಪದ್ಧತಿಯ ವಿಧಿವಿಧಾನಗಳನ್ನು ಅನುಸರಿಸುತ್ತಾ, ಸಾಮಾನ್ಯ ನಾಯಕರಿಗಿಂತ (ಬೇಡರಿಗಿಂತ) ಇವರು ವಿಶಿಷ್ಟವಾಗಿ ಆಚರಿಸುತ್ತಿದ್ದರು. ಅಲ್ಲದೇ ತಮ್ಮ ಪೂರ್ವಜರನ್ನು ಗೌರವಾದರಗಳಿಂದ ಶವಸಂಸ್ಕಾರ ಮಾಡಿ, ದಹಿಸಿ, ದೇಹದ ಅವಶೇಷಗಳನ್ನು ಹೂಳಿ, ಅದರ ಮೇಲೆ ಮಂಟಪ ಕಟ್ಟಿಸಿರುವುದು ಅಂದಿನವರ ನಾಗರಿಕ ಭಾವನೆಗಳಿಗೆ ಹಿಡಿದ ಕೈಗನ್ನಡಿ ಎನ್ನಬಹುದು. ವೈಷ್ಣವಪದ್ಧತಿಯ ಅಂತ್ಯಸಂಸ್ಕಾರದ ವಿಧಿ ವಿಧಾನಗಳಲ್ಲಿ ಕೆಲವಾರು ಮಾರ್ಪಾಡುಗಳನ್ನು ಮಾಡಿಕೊಂಡ ಇವರು ಪಿಂಡ ಪ್ರಧಾನಕ್ಕೆ ಮಾಂಸವನ್ನು

ಎಡೆ ಇಡುತ್ತಿದ್ದುದನ್ನು ಕಾಣಬಹುದಾಗಿದೆ. ಆದರೆ ಉಳಿದ ಕ್ರಿಯಾವಿಧಿ ವಿಧಾನಗಳನ್ನು ಇಂದಿಗೂ ಎಲ್ಲ ನಾಯಕ ಅರಸುಮನೆತನಗಳೂ ಚಾಚೂ ತಪ್ಪದೆ ಪಾಲಿಸುತ್ತಿವೆ.

**ಟಿಪ್ಪಣಿಗಳು**

೧. ಪುಟ್ಟಣ್ಣ ಎಂ.ಎಸ್., **ಪಾಳಯಗಾರರ : ಐದು ಉಪನ್ಯಾಸಗಳು,** ೧೯೨೩, ಪು.೮೦-೮೧.

೨. ನಾಗೇಗೌಡ ಹೆಚ್.ಎಲ್.(ಸಂ), **ಪ್ರವಾಸಿ ಕಂಡ ಇಂಡಿಯಾ, ಸಂಪುಟ ೨,** ೧೯೬೬, ಪು.೧೬೨.

೩. ಅದೇ, ಪು.೪೧೦.

೪. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳಯಗಾರರು,** ೧೯೯೭, ಪು.೩೭.

೫. ಎಂ.ಜಿ.ನಾಗರಾಜ್ ಮತ್ತು ಪಿ.ವಿ.ಕೃಷ್ಣಮೂರ್ತಿ(ಸಂ), **ಇತಿಹಾಸ ದರ್ಶನ,** ಸಂಪುಟ ೧೮, ಪು.೨೬೬.

೬. ಕಪಟರಾಳ್ ಕೃಷ್ಣರಾವ್, **ಸುರಪುರ ಸಂಸ್ಥಾನದ ಇತಿಹಾಸ,** ೧೯೭೭, ಪು.೧೩೦-೧೩೧.

೭. ಅಮರೇಶ ಯತಗಲ್, *ಗುಡಗುಂಟಿ ಸಂಸ್ಥಾನ,* **ಘಟ್ಟಹೊಸಹಳ್ಳಿ ಘಟಿಗ,** ೨೦೦೨, ಪು.೨೫.

೮. ಕೃಷ್ಣಮಾಚಾರ್ಯ ಬಿ. ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೯. ರಂಗರಾಜ ದೇವೇಂದ್ರಪ್ಪ, **ಸುರಪುರ ಸಂಸ್ಥಾನ : ಒಂದು ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೧೯೯೫, ಪು.೫೫.

೧೦. ಅಚ್ಯುತದೇವರಾಯ, ಆನೆಗೊಂದಿ ಸಂಸ್ಥಾನ ಇವರ ಹೇಳಿಕೆಯಿಂದ.

೧೧. ರಂಗರಾಜ ದೇವೇಂದ್ರಪ್ಪ, **ಪೂರ್ವೋಕ್ತ,** ಪು.೧೦೭.

೧೨. ಲಕ್ಷ್ಮಣ್ ತೆಲಗಾವಿ, *ಶ್ರೀಬೃಹನ್ಮಠ ಮತ್ತು ಚಿತ್ರದುರ್ಗ ನಾಯಕ ಅರಸರ ಸಂಬಂಧ,* **ಚಿನ್ಮೂಲಾದ್ರಿ ಚೇತನ,** ಸ್ಮರಣ ಸಂಚಿಕೆ, ೧೯೮೯, ಪು.೨೦೪.

೧೩. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ಪಾಳೆಯಗಾರರು ಮತ್ತು ಶ್ರೀ ಕೂಡಲೀ ಶೃಂಗೇರಿ ಮಠಾಧೀಶರು,* **ಚಿತ್ರಕಲ್ಲು,** ಸ್ಮರಣ ಸಂಚಿಕೆ, ೧೯೭೪, ಪು.೭.

೧೪. ಕಪಟರಾಳ ಕೃಷ್ಣರಾವ್, **ಪೂರ್ವೋಕ್ತ** ಪು.೪.

೧೫. ರಂಗರಾಜ ದೇವೇಂದ್ರಪ್ಪ, **ಪೂರ್ವೋಕ್ತ,** ಪು.೨೮.

೧೬. ಹುಲ್ಲೂರು ಶ್ರೀನಿವಾಸ ಜೋಯಿಸ(ಸಂ), **ಚಿತ್ರದುರ್ಗದ ಬಖೈರು,** ೧೯೬೮, ಪು.೫೧.

೧೭. ಕೃಷ್ಣಮಾಚಾರ್ಯ ಬಿ., **ಮರೆಯಲಾಗದ ಸುರಪುರ ರಾಜರ ಚರಿತ್ರೆ,** ೨೦೦೩, ಪು.೯.

೧೮. ಕಿಲಚನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೯. ರಂಗರಾಜ ದೇವೇಂದ್ರಪ್ಪ, **ಪೂರ್ವೋಕ್ತ,** ಪು.೧೦೧.

೨೦. ಕಪಟರಾಳ ಕೃಷ್ಣರಾವ್, **ಪೂರ್ವೋಕ್ತ** ಪು.೧೨೯.

೨೧. ವೆಂಕಟಪ್ಪನಾಯಕ(ತಾತ), ಸುರಪುರ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೨೨. ಪುರುಷೋತ್ತಮ ಬಿಳಿಮಲೆ, ಚಲುವರಾಜು, **ಹಂಪಿ ಜಾನಪದ,** ೧೯೯೬, ಪು.೬೨

೨೩. ಅಮರಪ್ಪನಾಯಕರು ಗುಡಗುಂಟಿ ಸಂಸ್ಥಾನ ಇವರ ಹೇಳಿಕೆಯಿಂದ

೨೪. ಕೇಶವರಾವ್ ಎಂ.ಎನ್., *ಗೋತ್ರಪದ್ಧತಿಯ ವೈಜ್ಞಾನಿಕ ಮತ್ತು ಸಮಾಜಶಾಸ್ತ್ರೀಯ ವಿಶ್ಲೇಷಣೆಗಳು,* **ಹೊಸತು ಪತ್ರಿಕೆ,** ೨೦೦೪, ಪು.೧೫

೨೫. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ : ಸಂಬಂಧ ಕೆಲವು ಸಮಸ್ಯೆಗಳು,* **ಇತಿಹಾಸ ದರ್ಶನ** ಸಂ.೧೫, ಪು.೨೭೧

೨೬. ಬಸವರಾಜ ಎಚ್.ಎಂ., **ಗುಡೇಕೋಟೆ : ಒಂದು ಚಾರಿತ್ರಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಿದ ಎಂ.ಫಿಲ್.ಸಂಪ್ರಬಂಧ, ೨೦೦೨, ಪು.೫೫

೨೭. ಕಪಟರಾಳ್ ಕೃಷ್ಣರಾವ್, **ಪೂರ್ವೋಕ್ತ,** ಪು.೭೮

೨೮. ಅದೇ, ಪು.೭೮

೨೯. ಬಸವರಾಜ ಎಚ್.ಎಂ., **ಪೂರ್ವೋಕ್ತ,** ಪು.೫೫

೩೦. ನವೀನಚಂದ್ರನಾಯಕ, ಕನಕಗಿರಿ ನಾಯಕ ವಂಶಸ್ಥರ ಹೇಳಿಕೆಯಿಂದ.

೩೧. ಶ್ರೀನಿವಾಸನಾಯಕ ಬಿ.ಎಸ್., **ಚಿತ್ರದುರ್ಗದ ಕಾಮಗೇತಿ ಅರಸರು,** ೧೯೮೪, ಪು.೧೧

೩೨. ಪುರುಷಕಾರಿ ಲೋಕಯ್ಯ, **ಸುರಪುರ ಸಂಸ್ಥಾನದ ಚರಿತ್ರೆ,** ಹಸ್ತಪ್ರತಿ, ಪು.೩೩

೩೩. ರಾಣಿ ಹೇಮಾವತಿ, ಸುರಪುರ ಸಂಸ್ಥಾನ ಇವರ ಹೇಳಿಕೆಯಿಂದ.

೩೪. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರ ಹೇಳಿಕೆಯಿಂದ.

೩೫. ಪುಟ್ಟಣ್ಣ ಎಂ.ಎಸ್., **ಪೂರ್ವೋಕ್ತ,** ೧೯೯೭, ಪು.೨೮

೩೬. ಬಸಣ್ಣ ಜಾವೂರು ಸಾ.ಗುಂತಗೋಳ ಇವರ ಹೇಳಿಕೆಯಿಂದ.

೩೭. ಪುರುಷಕಾರಿ ಲೋಕಯ್ಯ, **ಸುರಪುರ ಸಂಸ್ಥಾನದ ಚರಿತ್ರೆ,** ಹಸ್ತಪ್ರತಿ, ಪು.೩೪

೩೮. ಅದೇ, ಪು.೩೪

೩೯. ಅದೇ, ಪು.೩೪

೪೦. ಅದೇ, ಪು.೩೫

೪೧. ಅದೇ, ಪು.೩೫

೪೨. ವೀರನಾಯಕ ಹರತಿ ಹೆಚ್.ವಿ., **ಕ್ಷಾತ್ರಾಂಶ ಪ್ರಬೋಧ,** ೧೯೮೭, ಪು.೨೨

೪೩. ಅದೇ, ಪು.೨೨

೪೪. ಗೋಪಾಲಸ್ವಾಮಿನಾಯಕ ಸಿ.ಪಿ., ಕಾಟಪ್ಪನ ಹಟ್ಟಿ ಇವರ ಹೇಳಿಕೆಯಿಂದ.

೪೫. ಅಚ್ಯುತದೇವರಾಯ, ಆನೆಗೊಂದಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೪೬. ಅಮರಪ್ಪನಾಯಕ, ಗುಡಗುಂಟಿ ರಾಜವಂಶಸ್ಥರ ಹೇಳಿಕೆಯಿಂದ.

೪೭. ಸುಂದರರಾಜು, ಪುರೋಹಿತರು, ಚಳ್ಳಕೆರೆ ಇವರ ಹೇಳಿಕೆಯಿಂದ.

೪೮. ವೆಂಕಟಪ್ಪನಾಯಕ, ಸುರಪುರ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೪೯. ಚಚ್ಚಪ್ಪನಾಯಕ, ಕನಕಗಿರಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೫೦. ಕಿಲಚನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೫೧. ಬಸವರಾಜನಾಯಕ, ಕಾಟಪ್ಪನಹಟ್ಟಿ ಇವರ ಹೇಳಿಕೆಯಿಂದ.

೫೨. ಪುರುಷಕಾರಿ ಲೋಕಯ್ಯ, ಪೂರ್ವೋಕ್ತ, ಪು.೩೬

೫೩. ಅದೇ, ಪು.೩೬

೫೪. ಅದೇ, ಪು.೩೭

೫೫. ಅದೇ, ಪು.೩೭

೫೬. ಅದೇ, ಪು.೩೭

೫೭. ಅದೇ, ಪು.೩೭

೫೮. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ಪಾಳೆಯಗಾರರು ಮತ್ತು ಶ್ರೀಕೂಡಲೀ ಶೃಂಗೇರಿ ಮಠಾಧೀಶರು,* ಚಿತ್ರಕಲ್ಲು, ಸ್ಮರಣ ಸಂಚಿಕೆ, ೧೯೭೪, ಪು.೧೦.

೫೯. ಅದೇ, ಪು.೧೦

೬೦. ಪುಟ್ಟಣ್ಣ ಎಂ.ಎಸ್., ಪಾಳಯಗಾರರು : ಐದು ಉಪನ್ಯಾಸಗಳು, ೧೯೨೩, ಪು.೫೫

೬೧. ಅಮರಪ್ಪನಾಯಕ ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೬೨. ಕೃಷ್ಣ ಎ.(ಸಂ), ಸಗರನಾಡ ದರ್ಶನ, ಸ್ಮರಣಸಂಚಿಕೆ, ೧೯೮೫, ಪು.೨೭೮

೬೩. ವೀರನಾಯಕ ಹರತಿ ಹೆಚ್.ವಿ., ಪೂರ್ವೋಕ್ತ, ೧೯೮೭, ಪು.೨೨

೬೪. ಪುರುಷಕಾರಿ ಲೋಕಯ್ಯ, ಪೂರ್ವೋಕ್ತ, ಪು.೩೭

೬೫. ಅದೇ, ಪು.೩೭

೬೬. ಅದೇ, ಪು.೩೭

೬೭. ಅದೇ ಪು.೩೮

೬೮. ಅದೇ ಪು.೩೮

೬೯. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರ ಹೇಳಿಕೆಯಿಂದ.

೭೦. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೯೭, ಪು.೪೨

೭೧. ಅದೇ ಪು.೭

೭೨. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಪಿಎಚ್.ಡಿ.ಮಹಾಪ್ರಬಂಧ, ಧಾರವಾಡ ವಿಶ್ವವಿದ್ಯಾಲಯ, ೨೦೦೪, ಪು.೧೯೧.

೭೩. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೧೯೭೪, ಪು.೪೬.

೭೪. ಅದೇ, ಪು.೭೪.

೭೫. ಅದೇ, ಪು.೧೬.

೭೬. ಅದೇ, ಪು.೩೦.

೭೭. ಅದೇ, ಪು.೧೦೧.

೭೮. ಅದೇ, ಪು.೧೩೨.

೭೯. ಅದೇ, ಪು.೫೬.

೮೦. ಲಕ್ಷ್ಮಣ್ ತೆಲಗಾವಿ, *ಮಾಯಾಕೊಂಡದ ಕಾಳಗ ಕುರಿತ ಕೋಲುಪದ,* ವೀರಾಗ್ರಣಿ ವಿಶೇಷ ಸಂಚಿಕೆ, ೧೯೮೩-೮೪, ಪು.೧೨

೮೧. ಹುಲ್ಲೂರು ಶ್ರೀನಿವಾಸ ಜೋಯಿಸರು, ಹೀರೇಮದಕರಿನಾಯಕನ ತಾರಾವಳಿ, ಶರಣಸಾಹಿತ್ಯ, ೧೯೪೬, ಪು.೩೭-೩೮.

೮೨. ಶ್ರೀನಿವಾಸನಾಯಕ ಬಿ.ಎಸ್., ಚಿತ್ರದುರ್ಗದ ಕಾಮಗೇತಿ ಅರಸರು, ೧೯೮೪, ಪು.೧೧, ೧೨

೮೩. ಕಣ್ಣನ್ ಕೆ.ಎಸ್.(ಸಂ), ಅಹೋಬಲನ ವಿರೂಪಾಕ್ಷ ವಸಂತೋತ್ಸವ ಚಂಪೂ, ೨೦೦೧, ಪು.೨೬.

೮೪. ಲಕ್ಷ್ಮಣ್ ತೆಲಗಾವಿ, *ಅಹೋಬಲನ ವಿರೂಪಾಕ್ಷ ವಸಂತೋತ್ಸವ ಚಂಪೂ-ಕೆಲವು ಜಿಜ್ಞಾಸೆಗಳು,* ವಾಲ್ಮೀಕಿ ಬಂಧು, ೭-೫, ಜುಲೈ, ೨೦೦೨, ಪು.೧೪.

೮೫. ರಂಗರಾಜ ದೇವೇಂದ್ರಪ್ಪ, ಸುರಪುರ ಸಂಸ್ಥಾನ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೧೯೯೫, ಪು.೧೫೧.

೮೬. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೮೯.

೮೭. ಅದೇ, ಪು.೭೨.

೮೮. ಕಪಟರಾಳ್ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೮೧.

೮೯. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೨೩.

೯೦. ಬಸವರಾಜ ಉಪ್ಪಿನ, ಬಾನಯ್ಯ ಗರುಡಾದ್ರಿ, ೧೯೯೫, ಪು.೧೨

೯೧. ದುರಗಪ್ಪ ಬಡಿಗೇರ, ಸಾ.ರಾಯದುರ್ಗ, ತಾ.ಲಿಂಗಸೂಗೂರು ಇವರ ಹೇಳಿಕೆಯಿಂದ.

೯೨. ಬಸವರಾಜಪ್ಪ ಜಾಗಟಕಲ್ ಸಾ. ಗುಡಗುಂಟಿ ಇವರ ಹೇಳಿಕೆಯಿಂದ.

೯೩. ಶರಣಬಸಪ್ಪ ಪಿ. ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ೧೯೯೪, ಪು.೧೫೮-೧೬೧.

೯೪. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೬೧.

೯೫. ಶರಣಬಸಪ್ಪ ಪಿ.ಕೋಲ್ಕಾರ, ಪೂರ್ವೋಕ್ತ, ಪು.೭೩.

೯೬. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೬೧

೯೭. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೧೫೮.

೯೮. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೧೯೭೪, ಪು.೪೫೬.

೯೯. ಶರಣಬಸಪ್ಪ ಪಿ.ಕೋಲ್ಕಾರ, ಪೂರ್ವೋಕ್ತ, ಪು.೧೫೮-೧೬೫.

೧೦೦. ಕೃಷ್ಣಸ್ವಾಮಿ ಕ.ರಾ., ಪೂರ್ವೋಕ್ತ, ಪು.೧೬.

೧೦೧. ಕೃಷ್ಣಮಾಚಾರ್ಯ ಬಿ., ರಾಜಗುರುಗಳು, ಸುರಪುರ ಇವರ ಹೇಳಿಕೆಯಿಂದ

೧೦೨. ಶರಣಬಸಪ್ಪ ಪಿ.ಕೋಲ್ಕಾರ, ಪೂರ್ವೋಕ್ತ, ಪು.೧೬೧-೧೬೫.

೧೦೩. ಕೃಷ್ಣಸ್ವಾಮಿ ಕ.ರಾ., ಪೂರ್ವೋಕ್ತ, ಪು.೭೪.

೧೦೪. ಅದೇ, ಪು.೧೦೦

೧೦೫. ಅದೇ, ಪು.೧೦೦

೧೦೬. ಪುರುಷಕಾರಿ ಲೋಕಯ್ಯ, ಸುರಪುರ ಸಂಸ್ಥಾನದ ಚರಿತ್ರೆ (ಹಸ್ತಪ್ರತಿ ಇಸ್ವಿ ಇಲ್ಲ), ಪು.೭೭

೧೦೭. ರಾಣಿ ಹೇಮಾವತಿ, ಸುರಪುರ ರಾಜವಂಶಸ್ಥರು, ಇವರ ಹೇಳಿಕೆಯಿಂದ.

೧೦೮. ರಾಣಿ ಜಯಲಕ್ಷ್ಮಮ್ಮದೇವಿ, ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರು, ಇವರ ಹೇಳಿಕೆಯಿಂದ.

೧೦೯. ಶರಣಬಸಪ್ಪ ಪಿ.ಕೋಲ್ಕಾರ, ಪೂರ್ವೋಕ್ತ, ಪು.೩೫.

೧೧೦. ರಾಣಿ ಜಾನಕಿದೇವಿ, ಸುರಪುರ ಸಂಸ್ಥಾನದ ವಂಶಸ್ಥರು ಇವರ ಹೇಳಿಕೆಯಿಂದ.

೧೧೧. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೩೨.

೧೧೨. ಕಿಲಚನಾಯಕ, ದೇವದುರ್ಗದ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೧೩. ಪುರುಷಕಾರಿ ಲೋಕಯ್ಯ, ಪೂರ್ವೋಕ್ತ, ಪು.೩೭

೧೧೪. ರಾಣಿ ಜಯಲಕ್ಷ್ಮಮ್ಮದೇವಿ, ಗುಡಗುಂಟಿ ಸಂಸ್ಥಾನ, ಇವರ ಹೇಳಿಕೆಯಿಂದ.

೧೧೫. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೬೩.

೧೧೬. ವೆಂಕಟರಾವ್ ಮುಜುಮದಾರ, ಗುಡಗುಂಟಿ, ಇವರ ಹೇಳಿಕೆಯಿಂದ.

೧೧೭. ಶಾರದಾ ರಾಮಣ್ಣ, ಜಾನಪದ ನೆಲೆಯಲ್ಲಿ ಮಹಿಳೆ, ೧೯೯೩, ಪು.೩೯.

೧೧೮. ರಾಜಶೇಖರಪ್ಪ ಬಿ., *ಚಿತ್ರದುರ್ಗ ಪಾಳೆಯಗಾರರ ಕಾಲದ ತಿಂಡಿ ತಿನಿಸುಗಳು,* ನಿರಂತರ, ೨೦೦೧, ಪು.೧೨.

೧೧೯. ಅದೇ, ಪು.೧೫.

೧೨೦. ಕೃಷ್ಣಪ್ಪ ಎಂ.ವಿ., ತಳವಾರ ಎಚ್.ಡಿ.(ಸಂ), ವಿಜಯನಗರ ಅಧ್ಯಯನ, ಸಂಪುಟ.೬, ೨೦೦೧, ಪು.೯೯.

೧೨೧. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು-ರಾಜಕೀಯ ಚಿತ್ರ,* ದವನಸಿರಿ, ಸ್ಮರಣ ಸಂಚಿಕೆ, ೧೯೯೨, ಪು.೭೫.

೧೨೨. ವೆಂಕಟಪ್ಪನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ.

೧೨೩. ಕೃಷ್ಣಪ್ಪ ಎಂ.ವಿ., ತಳವಾರ ಎಚ್.ಡಿ.(ಸಂ), ಪೂರ್ವೋಕ್ತ, ಪು.೯೯-೧೦೦.

೧೨೪. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೭೯.

೧೨೫. ಲಕ್ಷ್ಮಣ್ ತೆಲಗಾವಿ(ಸಂ), ಚಿತ್ರಕಲ್ಲು, ಸ್ಮರಣಸಂಚಿಕೆ, ಪು.೨೯.

೧೨೬. ರಾಜಶೇಖರಪ್ಪ ಬಿ., ನಿರಂತರ, ೨೦೦೧, ಪು.೧೨.

೧೨೭. ಬಸವರಾಜ ಎಚ್.ಎಂ., ಪೂರ್ವೋಕ್ತ, ೨೦೦೨, ಪು.೬೮.

೧೨೮. ಶ್ರೀನಿವಾಸನಾಯಕ, ಚಿತ್ರದುರ್ಗ ರಾಜವಂಶಸ್ಥರು, ಅರೇಹಳ್ಳಿ, ಹಟ್ಟಿ ಇವರ ಹೇಳಿಕೆಯಿಂದ.

೧೨೯. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೫.

೧೩೦. ರಾಮಪ್ಪನಾಯಕ ದೇವದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೧. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರು ಹೇಳಿಕೆಯಿಂದ

೧೩೨. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೭

೧೩೩. ಕೃಷ್ಣಪ್ಪ ಎಂ.ವಿ., ತಳವಾರ ಎಚ್.ಡಿ.(ಸಂ), ಪೂರ್ವೋಕ್ತ, ಪು.೯೯.

೧೩೪. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೭.

೧೩೫. ರಾಣಿ ಜಯಲಕ್ಷ್ಮಮ್ಮದೇವಿ, ಗುಡಗುಂಟಿ ರಾಜವಂಶಸ್ಥರ ಹೇಳಿಕೆಯಿಂದ.

೧೩೬. ನರಸಿಂಹಾಚಾರ್ ಡಿ.ಎಲ್., ವಡ್ಡಾರಾಧನೆ, ೧೯೯೮, ಪು.೧೨೨.

೧೩೭. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಸ್ಥರು ಇವರ ಹೇಳಿಕೆಯಿಂದ

೧೩೮. ರಾಮದೇವರಾಯ ಆನೆಗೊಂದಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೩೯. ಜ್ಞಾನಗಂಗೋತ್ರಿ, ಸಂಪುಟ.೧, ೧೯೭೦, ಪು.೩೬೮.

೧೪೦. ಕೃಷ್ಣಪ್ಪ ಎಂ.ವಿ., ತಳವಾರ ಎಚ್.ಡಿ.(ಸಂ), ಪೂರ್ವೋಕ್ತ, ಪು.೧೦೦.

೧೪೧. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೨೦೦೧, ಪು.೧೧೬.

೧೪೨. ವಿಜಯನಗರ ಅಧ್ಯಯನ, ಸಂಪುಟ ೨, ಪು.೮೯.

೧೪೩. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೧೧೮.

೧೪೪. ಕಿಲಚನಾಯಕ ದೇವದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೪೫. ಬಸಣ್ಣ ಜಾವೂರು ಸಾ.ಗುಂತಗೋಳ ಇವರ ಹೇಳಿಕೆಯಿಂದ

೧೪೬. ಕೃಷ್ಣಮಾಚಾರ್ಯ ಬಿ., ರಾಜಗುರುಗಳು, ಸುರಪುರ ಇವರ ಹೇಳಿಕೆಯಿಂದ

೧೪೭. ಕೃಷ್ಣಸ್ವಾಮಿ ಕ.ರಾ., ಪೂರ್ವೋಕ್ತ, ಪು.೨೪

೧೪೮. ಅದೇ, ಪು.೧೦೨

೧೪೯. ಅದೇ, ಪು.೬೦

೧೫೦. ಅದೇ, ಪು.೬೦

೧೫೧. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೧೫೨. ನಾಗೇಗೌಡ ಹೆಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂ.೧, ೧೯೬೬, ಪು.೩೫೭.

೧೫೩. ಅಮರಪ್ಪನಾಯಕ, ಗುಡಗುಂಟಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೫೪. ಉಡಚೇಂದ್ರನಾಯಕ, ಕನಕಗಿರಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೫೫. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೨೦೯.

೧೫೬. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೧೦೭.

೧೫೭. ಕಿಲಚನಾಯಕ ದೇವದುರ್ಗ ಸಂಸ್ಥಾನ ಇವರ ಹೇಳಿಕೆಯಿಂದ

೧೫೮. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೮೦

೧೫೯. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೧೫.

೧೬೦. ಅದೇ, ಪು.೧೭

೧೬೧. ಅದೇ, ಪು.೧೭

೧೬೨. ವೆಂಕಟಪ್ಪನಾಯಕ(ತಾತ), ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ.

೧೬೩. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೬೮.

೧೬೪. ಅದೇ, ಪು.೬೮

೧೬೫. ಚಂದ್ರಹಾಸನಾಯಕ, ದೇವದುರ್ಗ ಸಂಸ್ಥಾನದ ರಾಜ ವಂಶಸ್ಥರು ಇವರ ಹೇಳಿಕೆಯಿಂದ.

೧೬೬. ವಾಸುದೇವನಾಯಕ, ಸುರಪುರ ಸಂಸ್ಥಾನ ಇವರ ಹೇಳಿಕೆಯಿಂದ.

೧೬೭. ವಸು ಎಂ.ವಿ.(ಸಂ), ದಕ್ಷಿಣ ಕರ್ನಾಟಕದ ಅರಸುಮನೆತನಗಳು, ೨೦೦೧, ಪು.೧೧೬-೧೧೭

೧೬೮. ದುರಗಪ್ಪ ಎಂ.ಕೆ., ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ : ಸ್ಥಿತ್ಯಂತರಗಳು, ಚಾರಿತ್ರಿಕ ಅಧ್ಯಯನ, ೨೦೦೩, ಪು.೧೬೧.

೧೬೯. ಶ್ರೀಮಜ್ಜಗದ್ಗುರು ಶ್ರೀಕೂಡ್ಲೀಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ, ಭಾಗ ೧, ೧೯೬೫, ಪು. ಪ್ರಸ್ತಾವನೆ. ೨೯.

೧೭೦. ಅಮರೇಶ ಯತಗಲ್, *ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದರುಗಳು,* ಇತಿಹಾಸ ದರ್ಶನ. ಸಂ. ೧೯, ೨೦೦೪, ಪು.೩೩೩.

೧೭೧. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನದ ಇತಿಹಾಸ, ೧೯೭೭, ಪು.೧೨೪

೧೭೨. ಲಕ್ಷ್ಮಣ್ ತೆಲಗಾವಿ, ಇದು ಚಿತ್ರದುರ್ಗ, ೧೯೯೭, ಪು.೧೩

೧೭೩. ಲಕ್ಷ್ಮಣ್ ತೆಲಗಾವಿ(ಸಂ), ಚಿತ್ರಕಲ್ಲು ಸ್ಮರಣ ಸಂಚಿಕೆ, ೧೯೭೪, ಪು.೧೧

೧೭೪. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೧೯೭೪, ಪು.೨೪

೧೭೫. ಮೀರಾಸಾಬಿಹಳ್ಳಿ ಶಿವಣ್ಣ, ದುರುಗ ಜಾನಪದ, ೧೯೯೯, ಪು.೪೮

೧೭೬. ಅದೇ, ಪು.೪೯

೧೭೭. ಕೃಷ್ಣಸ್ವಾಮಿ ಕ.ರಾ., ಪೂರ್ವೋಕ್ತ, ಪು.೫೨

೧೭೮. ಸೈದಾಪುರ ಎಸ್.ವೈ., ಉತ್ತರ ಕರ್ನಾಟಕದ ಜನಪದ ವೀರಗೀತೆಗಳು, ೨೦೦೩, ಪು.೧೩೫

೧೭೯. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು-ರಾಜಕೀಯ ಚಿತ್ರ,* ದವನಸಿರಿ ಸ್ಮರಣ ಸಂಚಿಕೆ, ೧೯೯೨, ಪು.೭೬

೧೮೦. ಅದೇ, ಪು.೭೬

೧೮೧. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೫೪ ೫೫

೧೮೨. ಹುಲ್ಲೂರು ಶ್ರೀನಿವಾಸ ಜೋಯಿಸ, *ಹಿರೇಮದಕರಿ ನಾಯಕನ ತಾರಾವಳಿ,* ಶರಣ ಸಾಹಿತ್ಯ ಮಾಸಿಕ ಪತ್ರಿಕೆ, ೧೯೪೬, ಪು.೩೭

೧೮೩. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ದವನಸಿರಿ, ೧೯೯೨, ಪು.೮೫

೧೮೪. ಕಪಟರಾಳ ಕೃಷ್ಣರಾವ್, ಸುರಪುರದ ಸಂಸ್ಥಾನದ ಇತಿಹಾಸ, ೧೯೭೭, ಪು.೧೫

೧೮೫. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೬೦

೧೮೬. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೧೨೩

೧೮೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೬೦

೧೮೮. ಅಮರೇಶ ಯತಗಲ್, *ಗುಡಗುಂಟಿ ಸಂಸ್ಥಾನ,* ಘಟ್ಟಿಹೊಸಹಳ್ಳಿ ಗಟ್ಟಿಗ, ೨೦೦೨, ಪು.೨೫

೧೮೯. ಅಮರೇಶ ಯತಗಲ್, *ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದರುಗಳು,* ಇತಿಹಾಸದರ್ಶನ, ಸಂ.೧೯, ೨೦೦೪, ಪು.೩೩೨

೧೯೦. ದುರಗಪ್ಪ ಎಂ.ಕೆ., ಪೂರ್ವೋಕ್ತ, ೨೦೦೩, ಪು.೧೦೧

೧೯೧. ಚಿತ್ರಲಿಂಗಯ್ಯ ಎಂ.ವಿ., *ಹರತಿ ಪಾಳೆಯಗಾರರ ಮೂಲ ವಂಶಾವಳಿ : ಒಂದು ವ್ಯಾಸಂಗ,* ಹರತಿಸಿರಿ, ೧೯೮೭, ಪು.೨೯೦

೧೯೨. ವಸು ಎಂ.ವಿ.(ಸಂ), ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೧೬೦

೧೯೩. ಅದೇ, ಪು.೧೬೦

೧೯೪. ಲಕ್ಷ್ಮಣ್ ತೆಲಗಾವಿ, ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ, ೨೦೦೪, ಪು.೩

೧೯೫. ವಸು ಎಂ.ವಿ., ಪೂರ್ವೋಕ್ತ, ೨೦೦೧, ಪು.೧೬೧

೧೯೬. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.xvii

೧೯೭. ಭಾಸ್ಕರ್‌ರಾವ್ ಮುಡಬೂಳ, ಮರೆತುಹೋದ ಸುರಪುರ ಇತಿಹಾಸ, ೨೦೦೧, ಪು.೧೩

೧೯೮. ಕೋಸಲ ನೃಪವೃತ್ತಾಂತ ಹಸ್ತಪ್ರತಿ, ಪು.೨೦

೧೯೯. ನಿಂಗಣ್ಣ ಸಣ್ಣಕ್ಕಿ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಚರಿತ್ರೆ, ೧೯೯೯, ಪು.೩೪

೨೦೦. ಗಂಡುಗಲಿ ಟಿ.ಎನ್., ಪ್ರಮುಖ, ೧೯೯೫, ಪು.೩೨

೨೦೧. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೯

೨೦೨. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ೧೯೭೦, ಪು.೪೬೯

೨೦೩. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೩

೨೦೪. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೦೫

೨೦೫. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡದ ಕಾಳಗ ೧೭೪೮,* ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾ ಸಮ್ಮೇಳನ, ಸ್ಮರಣ ಸಂಚಿಕೆ, ೧೮.೩.೧೯೭೩, ಪು.೧೧

೨೦೬. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ ೧೯೭೬, ಪು.೪೫

೨೦೭. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೧೧೯-೧೨೦

೨೦೮. ಪ್ರಜಾವಾಣಿ ದಿನಪತ್ರಿಕೆ, ೨೪.೪.೨೦೦೫

೨೦೯. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೧೭೬

೨೧೦. ರಂಗರಾಜ ವನದುರ್ಗ, ಪೂರ್ವೋಕ್ತ, ಪು.೨೦೬

೨೧೧. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ೨೦೦೪, ಪು.೩೬

೨೧೨. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೭೯

೨೧೩. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೭೯

೨೧೪. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೧೬

೨೧೫. ಅದೇ, ಪು.೩೦

೨೧೬. ಅದೇ, ಪು.೩೬

೨೧೭. ಅದೇ, ಪು.೪೦

೨೧೮. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ದವನಸಿರಿ ಪು.೮೦

೨೧೯. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಪೂರ್ವೋಕ್ತ, ಪು.೬೮

೨೨೦. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ನಾಯಕ ಅರಸರ ವಂಶಸ್ಥರ ಹೇಳಿಕೆಯಿಂದ

೨೨೧. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ೯೭

೨೨೨. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೯೩

೨೨೩. ಅಮರೇಶ ಯತಗಲ್, ಪೂರ್ವೋಕ್ತ, ಪು.೨೯

೨೨೪. ಕಿಲಚನಾಯಕ ದೇವದುರ್ಗ ರಾಜವಂಶಸ್ಥರು ಇವರ ಹೇಳಿಕೆಯಿಂದ

೨೨೫. ತೇಜೇಶ್ವರ ಎಚ್.(ಸಂ), ಸಾಧನೆಯ ಸಿರಿ, ಸ್ಮರಣ ಸಂಚಿಕೆ, ೧೯೯೫, ಪು.೧೧

೨೨೬. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೮೦

೨೨೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೯೮

೨೨೮. ಅದೇ, ಪು.೩೦೩

೨೨೯. ಕನ್ನಡ ನಿಘಂಟು ಸಂಪುಟ-೮, ಕನ್ನಡ ಸಾಹಿತ್ಯ ಪರಿಷತ್ತು, ೧೯೯೫, ಪು.೭೮೮೬

೨೩೦. ಶಾಂತಿನಾಥ ದಿಬ್ಬದ, ಪಂಪಭಾರತ : ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೧೯೮೧, ಪು.೧೪೮

೨೩೧. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗದ ಪಾಳೆಯಗಾರರು ಮತ್ತು ಶ್ರೀಕೂಡಲೀ ಶೃಂಗೇರಿ ಮಠಾಧೀಶರು,* ಚಿತ್ರಕಲ್ಲು ಸ್ಮರಣ ಸಂಚಿಕೆ, ೧೯೭೪, ಪು.೬

೨೩೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಪು.೩೨೩

೨೩೩. ಅದೇ ಪು.೩೨೫

೨೩೪. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ಪು.vi

೨೩೫. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡ : ಚಿತ್ರದುರ್ಗದ ಹಿರೇಮದಕರಿನಾಯಕ ಮಡಿದ ಸ್ಥಳ, ೧೬.೮.೧೯೭೪,* ಚಿತ್ರದುರ್ಗ ಜಿಲ್ಲಾ ಅಭಿವೃದ್ಧಿ ವಾರ್ತೆ, ಪು.೧೮

೨೩೬. ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೫೯

೨೩೭. ಶ್ರೀನಿವಾಸನಾಯಕ ಬಿ.ಎಸ್., ಚಿತ್ರದುರ್ಗದ ರಾಜವಂಶಸ್ಥರು ಇವರ ಹೇಳಿಕೆಯಿಂದ.

೨೩೮. ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ, ಪೂರ್ವೋಕ್ತ ೧೯೭೬, ಪು.೫೭

೨೩೯. ಅದೇ ಪು.೯೭

೨೪೦. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು - ರಾಜಕೀಯ ಚಿತ್ರ*, ದವನಸಿರಿ, ಸ್ಮರಣ ಸಂಚಿಕೆ ೧೯೯೨, ಪು.೮೨

೨೪೧. ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ, ಪೂರ್ವೋಕ್ತ, ೧೯೭೬, ಪು.೧೦೦.

೨೪೨. ಹುಲ್ಲೂರು ಶ್ರೀನಿವಾಸ ಜೋಯಿಸ(ಸಂ), ಚಿತ್ರದುರ್ಗದ ಬಖೈರು, ೧೯೬೮, ಪು.೩೦-೩೧

೨೪೩. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೪೭

೨೪೪. ಆದ್ಯರಾಮಾಚಾರ್ಯ, ಬೆಂಗಳೂರು ಇವರ ಹೇಳಿಕೆಯಿಂದ.

೨೪೫. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೪೪

೨೪೬. ಕೃಷ್ಣ ಎ.(ಸಂ), ಸಗರನಾಡ ದರ್ಶನ, ಸ್ಮರಣ ಸಂಚಿಕೆ ೧೯೮೫, ಪು.೧೯೨.

೨೪೭. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೯೮

೨೪೮. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೧೧೯

೨೪೯. ಪುರುಷಕಾರಿ ಲೋಕಯ್ಯ, ಸುರಪುರ ರಾಜರ ಚರಿತ್ರೆ ಹಸ್ತಪ್ರತಿ, ಪು.೨೯

೨೫೦. ಕೃಷ್ಣ ಎ.(ಸಂ), ಪೂರ್ವೋಕ್ತ, ಪು.೨೮೦

೨೫೧. ಅದೇ ಪು.೨೮೧

೨೫೨. ಭಾಸ್ಕರರಾವ್ ಮುಡಬೂಳ, ಮರೆತುಹೋದ ಸುರಪುರ ಇತಿಹಾಸ, ೨೦೦೧, ಪು.೨೬

೨೫೩. ಪುರುಷಕಾರಿ ಲೋಕಯ್ಯ, ಪೂರ್ವೋಕ್ತ, ಪು.೨೩

೨೫೪. ವೆಂಕಟಸುಬ್ಬಯ್ಯ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು, ಸಂ.೩, ೧೯೭೬, ಪು.೧೫೦೧

೨೫೫. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* ಚಂದ್ರವಳ್ಳಿ, ಭಾಗ ೧, ೧೯೭೬, ಪು.೬೩-೬೪

೨೫೬. ಅಬ್ದುಲ್ ಸತ್ತಾರ್, ತರೀಕೆರೆಯ ಪಾಳೆಯಗಾರರು, ೧೯೯೭, ಪು.೧-೨

೨೫೭. ಪ್ರಕಾಶ್ ಎಂ.ಪಿ., ಡೊಮಿಂಗೋಸ್ ಪಿಯಾಸ್ ಕಂಡ ವಿಜಯನಗರ, ೨೦೦೦, ಪು.೨೮

೨೫೮. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೮೧

೨೫೯. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು-ರಾಜಕೀಯ ಚಿತ್ರ*, ದವನಸಿರಿ ಸ್ಮರಣ ಸಂಚಿಕೆ, ೧೯೯೨, ಪು.೭೯

೨೬೦. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ೧೯೯೭, ಪು.೫೬

೨೬೧. ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ, ಚಂದ್ರವಳ್ಳಿ ಭಾಗ ೨, ಪು.೨೪

೨೬೨. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೮೦

೨೬೩. ಅದೇ, ಪು.೮೨

೨೬೪. ಅದೇ, ಪು.೮೪

೨೬೫. ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ಪೂರ್ವೋಕ್ತ, ಪು.೬೯

೨೬೬. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೧೯೭೪, ಪು.೧೨೫

೨೬೭. ಪುಟ್ಟಣ್ಣ ಎಂ.ಎಸ್. ಪೂರ್ವೋಕ್ತ, ಪು.೩

೨೬೮. ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ ಭಾಗ ೩, ಪು.೪೧-೪೨

೨೬೯. ಗೋಪಾಲರಾವ್ ಎಚ್.ಎಸ್.(ಸಂ), ನಾಗಾಭಿನಂದನ, ಎಂ.ಜಿ.ನಾಗರಾಜ್ ಅವರ ಅಭಿನಂದನಾ ಗ್ರಂಥ, ೧೯೯೪, ಪು.೧೫೧

೨೭೦. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೧೧೯ ೧೨೦

೨೭೧. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೨೧

೨೭೨. ಭಾಸ್ಕರರಾವ್ ಮುಡಬೂಳ, *ಸುರಪುರ ರಾಜರು,* ವಿಕ್ರಮ ಪತ್ರಿಕೆ ೭.೭.೧೯೯೪, ಪು.೪

೨೭೩. ಪಾಟೀಲ ಎಂ.ಬಿ.(ಸಂ), ಗುಲ್ಬರ್ಗಾ ಜಿಲ್ಲಾ ಗೆಜೆಟಿಯರ್, ೧೯೯೭, ಪು.೭೮

೨೭೪. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನದ ಇತಿಹಾಸ, ೧೯೭೭, ಪು.೮೭

೨೭೫. ಅದೇ, ಪು.೯೯

೨೭೬. ಅದೇ, ಪು.೧೨೧

೨೭೭. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೧೦

೨೭೮. Sewell Robert : A Forgotten Empire, 1988, P.234

೨೭೯. Ibid, P.234

೨೮೦. Sewell Robert : Indian Historical Research, Vol.76, 1962, P.113

೨೮೧. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪು.೬

೨೮೨. ಶರಣಬಸಪ್ಪ ಪಿ. ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ೧೯೯೪, ಪು.೬೧

೨೮೩. ಕಲಬುರ್ಗಿ ಎಂ.ಎಂ.(ಸಂ), ಕರ್ನಾಟಕದ ಕೈಫಿಯತ್ತುಗಳು, ೧೯೯೪, ಪು.೫೪೯

೨೮೪. ಬಸವರಾಜ ಎಚ್.ಎಂ., ಪೂರ್ವೋಕ್ತ, ೨೦೦೨, ಪು.೪೪

೨೮೫. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ೨೦೦೪, ಪು.೩೮

೨೮೬. ಅದೇ, ಪು.೩೯

೨೮೭. ಅದೇ, ಪು.೩೯

೨೮೮. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* ಚಂದ್ರವಳ್ಳಿ ಭಾಗ ೧, ೧೯೭೬, ಪು.೬೭

೨೮೯. ಶರ್ಮ ತಿ.ತಾ.(ಸಂ), ಚಾರಿತ್ರಿಕ ದಾಖಲೆಗಳು, ೧೯೯೯, ಪು.೧೦೫

೨೯೦. ಬಸವರಾಜಪ್ಪ ಜಾಗಟಗಲ್, ಸಾ.ಗುಡಗುಂಟಿ ಇವರ ಹೇಳಿಕೆಯಿಂದ

೨೯೧. ವರದರಾಜರಾವ್ ಜಿ., ಕುಮ್ಮಟದ ಕೇಸರಿ, ೧೯೭೩, ಪು.೭೭

೨೯೨. ವಿರೂಪಾಕ್ಷಿ ಪೂಜಾರಹಳ್ಳಿ, ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ,ಹಂಪಿ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೦, ಪು.೫೧

೨೯೩. ಅದೇ, ಪು.೫೬

೨೯೪. ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ೧೯೮೩, ಪು.೪೯೩

೨೯೫. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ೨೦೦೦, ಪು.೫೫

೨೯೬. ಅದೇ, ಪು.೧೬೫

೨೯೭. ಆದ್ಯರಾಮಾಚಾರ್ಯ, *ಸುರಪುರದ ಪಾಮನಾಯಕರು ಬೇಟೆಯಾಡಿದರು,* ಕಸ್ತೂರಿ, ಜನವರಿ ೨೦೦೨,

೨೯೮. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನಶಿಲ್ಪ, ೧೯೯೯, ಪು.೧೦೬

೨೯೯. ಆದ್ಯರಾಮಾಚಾರ್ಯ, ಬೆಂಗಳೂರು ಇವರ ಹೇಳಿಕೆಯಿಂದ

೩೦೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೧೦೭

೩೦೧. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ

೩೦೨. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೬೭

೩೦೩. ರಾಮದೇವರಾಯ, ಆನೆಗೊಂದಿ ಅರಸರ ವಂಶಸ್ಥರು ಇವರ ಹೇಳಿಕೆಯಿಂದ

೩೦೪. ಬಸವರಾಜ ಎಚ್.ಎಂ., ಪೂರ್ವೋಕ್ತ, ೨೦೦೨, ಪು.೫೩

೩೦೫. ಸಿದ್ಧಪ್ಪನಾಯಕ ಜರಿಮಲೆ, ಅರಸು ಮನೆತನದ ವಂಶಸ್ಥರ ಹೇಳಿಕೆಯಿಂದ

೩೦೬. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ೨೦೦೨, ಪು.೧೯

೩೦೭. ಬಸವರಾಜಪ್ಪ ಜಾಗಟಗಲ್ ಸಾ.ಗುರುಗುಂಟಾ ಇವರ ಹೇಳಿಕೆಯಿಂದ

೩೦೮. ಬಸವಣ್ಣ ಜಾವೂರು ಸಾ.ಗುಂತಗೋಳ ಇವರ ಹೇಳಿಕೆಯಿಂದ

೩೦೯. ವೆಂಕಟಪ್ಪನಾಯಕ (ತಾತ) ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೧೦. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ

೩೧೧. ಕಿಲಚನಾಯಕ, ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೧೨. ವಾಸುದೇವನಾಯಕ, ಸುರಪುರ ರಾಜವಂಶಸ್ಥರ ಹೇಳಿಕೆಯಿಂದ

೩೧೩. ಚಚ್ಚಪ್ಪನಾಯಕ, ಹುಲಿಹೈದರ್ ರಾಜವಂಶಸ್ಥರ ಹೇಳಿಕೆಯಿಂದ

೩೧೪. ವಾಸುದೇವ ನಾಯಕ, ಸುರಪುರ ಇವರ ಹೇಳಿಕೆಯಿಂದ

೩೧೫. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೧೭೭

೩೧೬. ವೆಂಕಟಪ್ಪನಾಯಕ (ತಾತ) ಸುರಪುರ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೧೭. ಶ್ರೀನಿವಾಸನಾಯಕ, ಗುಂತಗೋಳ ಸಂಸ್ಥಾನದ ವಂಶಸ್ಥರ ಹೇಳಿಕೆಯಿಂದ

೩೧೮. ಅದೇ,

೩೧೯. ರಾಮದೇವರಾಯ ಆನೆಗೊಂದಿ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೨೦. ಆಗಸ್ಟೀನ್ ಜೆ., ವಕೀಲರು ಸುರಪುರ ಇವರ ಹೇಳಿಕೆಯಿಂದ

೩೨೧. ಜಡಿಸೋಮನಾಯಕ ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೨೨. ರಾಮಪ್ಪನಾಯಕ ದೇವದುರ್ಗ ಸಂಸ್ಥಾನ ಇವರ ಹೇಳಿಕೆಯಿಂದ

೩೨೩. ವೆಂಕಟಪ್ಪನಾಯಕ(ತಾತಾ) ಸುರಪುರ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೨೪. ಕಿಲಚನಾಯಕ ದೇವದುರ್ಗ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೨೫. ಅಮರಪ್ಪನಾಯಕ ಗುಡಗುಂಟಿ ಸಂಸ್ಥಾನ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೨೬. ಬಸಣ್ಣ ಜಾವೂರು ಸಾ.ಗುಂತಗೋಳ ಇವರ ಹೇಳಿಕೆಯಿಂದ

೩೨೭. ರಾಮಚಂದ್ರರಾವ್ ಎಸ್.ಕೆ., **ತಿರುಪತಿ ತಿಮ್ಮಪ್ಪ**, ೧೯೮೦, ಪು.೩೩

೩೨೮. ಅಮರಪ್ಪನಾಯಕ, ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೨೯. ರಾಯಪ್ಪ ನಾಯಕ ಗುಂತಗೋಳ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೩೦. ಅಮರಪ್ಪ ನಾಯಕ ಗುಡಗುಂಟಿ ಸಂಸ್ಥಾನದ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೩೧. ಸಿದ್ಧಪ್ಪ ನಾಯಕರು, ಜರಿಮಲೆ ಸಂಸ್ಥಾನದ ರಾಜವಂಶಸ್ಥರ ಹೇಳಿಕೆಯಿಂದ

೩೩೨. ದುರಗಪ್ಪ ಎಂ.ಕೆ., **ಪೂರ್ವೋಕ್ತ**, ೨೦೦೩, ಪು.೧೩೩

೩೩೩. ರಮೇಶ್ ಸ.ಚಿ., **ಬೇಟೆ : ಸಾಂಸ್ಕೃತಿಕ ಪದಕೋಶ**, ೨೦೦೧, ಪು.೯

೩೩೪. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗದ ರಾಜವಂಶಸ್ಥರ ಹೇಳಿಕೆಯಿಂದ.

೩೩೫. ಬಸಣ್ಣ ಜಾವೂರು ಸಾ.ಗುಂತಗೋಳ ಇವರ ಹೇಳಿಕೆಯಿಂದ.

೩೩೬. Natalie Tobert- Anegondi, Architectural Ethnography of a Royal village, 2000, Pp.41

೩೩೭. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೩೩೮. ರಂಗರಾಜ ದೇವೇಂದ್ರಪ್ಪ, **ಪೂರ್ವೋಕ್ತ**, ೧೯೯೫, ಪು.೨೬೧

೩೩೯. ಬಸಣ್ಣ ಜಾವೂರು ಸಾ. ಗುಂತಗೋಳ ಇವರ ಹೇಳಿಕೆಯಿಂದ

೩೪೦. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗದ ರಾಜವಂಶಸ್ಥರ ಹೇಳಿಕೆಯಿಂದ

೩೪೧. ಉಡಿಚೇಂದ್ರನಾಯಕ ಕನಕಗಿರಿ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೪೨. ಭಾಸುತ್ಕರ್ ಎಂ.ಎಸ್., ಬರಹಗಾರರು, ಗುಡಗುಂಟಿ ಇವರ ಹೇಳಿಕೆಯಿಂದ

೩೪೩. ಮದನಗೋಪಾಲನಾಯಕ, ಮಾಜಿ ಸಚಿವರು, ಸುರಪುರ ಇವರ ಹೇಳಿಕೆಯಿಂದ.

೩೪೪. Natalie Tobert- Anegondi, Architectural Ethnograpy of a Royal village, 2000, Pp.41

೩೪೫. ಶ್ರೀನಿವಾಸನಾಯಕ ಬಿ.ಎಸ್., ಚಿತ್ರದುರ್ಗದ ರಾಜವಂಶಸ್ಥರು, ಅರೆಹಳ್ಳಿಹಟ್ಟಿ ಇವರ ಹೇಳಿಕೆಯಿಂದ.

೩೪೬. ಸುಂದರರಾಜು, ಪುರೋಹಿತರು ಚಳ್ಳಕೆರೆ ಇವರ ಹೇಳಿಕೆಯಿಂದ

೩೪೭. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೩೪೮. ನವೀನಚಂದ್ರನಾಯಕ ಕನಕಗಿರಿ ರಾಜವಂಶಸ್ಥರು ಇವರ ಹೇಳಿಕೆಯಿಂದ

೩೪೯. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ.

೩೫೦. ಚಚ್ಚಪ್ಪನಾಯಕ, ಕನಕಗಿರಿ ರಾಜವಂಶಸ್ಥರು ಇವರ ಹೇಳಿಕೆಯಿಂದ.

೩೫೧. ಪುಟ್ಟಣ್ಣ ಎಂ.ಎಸ್., ಪಾಳಯಗಾರರ : ಐದು ಉಪನ್ಯಾಸಗಳು, ೧೯೨೩, ಪು.೮೧.

೩೫೨. ಗೋಪಾಲಸ್ವಾಮಿನಾಯಕ ಸಿ.ಪಿ., ಕಾಟಪ್ಪನಹಟ್ಟಿ ಚಳ್ಳಕೆರೆ ಇವರ ಹೇಳಿಕೆಯಿಂದ.

೩೫೩. ಬಸಣ್ಣ ಜಾವೂರ, ಸಾ.ಗುಂತಗೋಳ ಇವರ ಹೇಳಿಕೆಯಿಂದ.

೩೫೪. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗದ ರಾಜವಂಶಸ್ಥರು ಇವರ ಹೇಳಿಕೆಯಿಂದ.

೩೫೫. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೧೮೮.

೩೫೬. ರಾಜಾ ಬಿಚ್ಚುಕತ್ತಿ *ಪರಶುರಾಮಪ್ಪನಾಯಕರು,* ಚಿತ್ರದುರ್ಗದ ಗಜಕೇಸರಿ, ಭಾಗ-೧, ೧೯೬೧, ಪು.೪೫

೩೫೭. ಅದೇ ಪು.೫೩

೩೫೮. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೯೭, ಪು.೩೭.

೩೫೯. ಲಕ್ಷ್ಮಣ್ ತೆಲಗಾವಿ, *ಮಾಯಕೊಂಡ : ಚಿತ್ರದುರ್ಗದ ಹಿರೇಮದಕರಿನಾಯಕ ಮಡಿದ ಸ್ಥಳ, ೧೯೭೪* ಅಗಸ್ಟ್, ಚಿತ್ರದುರ್ಗ ಜಿಲ್ಲಾ ಅಭಿವೃದ್ಧಿ ವಾರ್ತೆ, ಪು.೧೯

೩೬೦. ಲಕ್ಷ್ಮಣ್ ತೆಲಗಾವಿ, ಎಂ.ವಿ.ಶ್ರೀನಿವಾಸ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೧೧೬

೩೬೧. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೫೩-೫೪

೩೬೨. ಬಸಣ್ಣ ಜಾವೂರು, ಸಾ.ಗುಂತಗೋಳ ಇವರ ಹೇಳಿಕೆಯಿಂದ

೩೬೩. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ನಾಯಕರ ವಂಶಸ್ಥರ ಹೇಳಿಕೆಯಿಂದ.

# ಅಧ್ಯಾಯ ೫

# ಸಾಹಿತ್ಯ, ಶಿಕ್ಷಣ ಮತ್ತು ಕಲೆ

೫

# ಸಾಹಿತ್ಯ, ಶಿಕ್ಷಣ ಮತ್ತು ಕಲೆ

## ೫.೧ ಸಾಹಿತ್ಯ

ಭಾವ, ಭಾಷೆಗಳ ಮಧುರ ಸಂಗಮವೇ ಸಾಹಿತ್ಯ, ಇದು ಜನಾಂಗದ ಜೀವನದ ಭಾಷಾರೂಪದ ಕನ್ನಡಿಯಾಗಿದೆ. ಸಾಹಿತ್ಯ ಕೇವಲ ಜೀವನದ ಪ್ರತಿಬಿಂಬವಷ್ಟೇ ಅಲ್ಲ, ಅದು ಜೀವನದ ಅಪ್ರತ್ಯಕ್ಷ ವಿಮರ್ಶೆಯೂ ಹೌದು, ಅದು ಸಮಕಾಲೀನ ಸಮಾಜದ ಚಿತ್ರಣವನ್ನು ನೀಡುತ್ತದೆ. ಅಲ್ಲದೆ ಸಾಹಿತ್ಯ ಆ ಕಾಲದ ರಾಜರುಗಳ ಮತ್ತು ಅಲ್ಲಿಯ ಜನಾಂಗದ ಹೃದಯದ ಮಿಡಿತವೆ ಆಗಿದೆ. ಜನರ ಮನೋಭಾವನೆಗಳನ್ನು, ರಾಜರ ಆಸೆ-ಆಕಾಂಕ್ಷೆಗಳನ್ನು, ಅವರೆಲ್ಲರೂ ಬದುಕಿ ಬಾಳಿದ ರೀತಿ-ನೀತಿಗಳನ್ನು ಪ್ರತಿಬಿಂಬಿಸುವಂತಹದ್ದಾಗಿದೆ. ಆಯಾ ರಾಜರುಗಳು ಬಾಳಿ ಬೆಳಗಿದ ಹಾಗೂ ಅವರ ಕಾಲದ ಸಾಮಾಜಿಕ, ಸಾಂಸ್ಕೃತಿ, ಧಾರ್ಮಿಕ, ಆರ್ಥಿಕ, ಅಂಶಗಳನ್ನು ಚಿತ್ರಿಸುವಲ್ಲಿ ಸಹಾಯಕವಾಗುತ್ತದೆ. ಒಂದು ಅರಸು ಮನೆತನದ ಸರ್ವತೋಮುಖ ಅಭಿವೃದ್ಧಿಯ ಸೂಚಕವೆಂದರೆ ಅಲ್ಲಿಯ ರಾಜರ ಹಾಗೂ ಅವರ ಕಾಲದ ಸಾಹಿತ್ಯ ಸಂಸ್ಕೃತಿಯೆಂತಲೇ ಅರ್ಥ.[೧]

ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಕರ್ನಾಟಕ ನಾಯಕ ಅರಸರು ನೀಡಿದ ಪ್ರೋತ್ಸಾಹ, ಸಲ್ಲಿಸಿದ ಸೇವೆ ಶ್ಲಾಘನೀಯವಾದುದು. ಕವಿಜನ ಪೋಷಕರು, ಸಾಹಿತ್ಯಾಭಿಮಾನಿಗಳು, ಆಗಿದ್ದರಲ್ಲದೆ, ಬೆರಳೆಣಿಕೆಯಷ್ಟು ಅರಸರು ಸ್ವತಃ ಕೃತಿ ರಚನೆ ಮಾಡಿದ್ದಾರೆ. ಅದಕ್ಕೆ ಕಾರಣಗಳೂ ಇಲ್ಲದಿಲ್ಲ. ದೇಹದಾರ್ಢ್ಯ, ಯುದ್ಧವಿದ್ಯೆ, ರಣರಂಗದ ವಿಚಾರ, ರಾಜ್ಯಾಡಳಿತ, ಪ್ರಜಾಪಾಲನೆ, ರಕ್ಷಣೆ, ಸಂಪನ್ಮೂಲಗಳ ಕ್ರೋಢೀಕರಣ ಧರ್ಮ-ಸಂಸ್ಕೃತಿಯ ಅಭಿವೃದ್ಧಿ, ಆಂತರಿಕ ಶತ್ರುಗಳ ನಿಯಂತ್ರಣ ಇಂಥ ಹಲವಾರು ವಿಷಯಗಳಲ್ಲಿ ಅರಸನ ಸಕಲ ವೇಳೆ, ಬುದ್ಧಿ, ಶ್ರಮ ವ್ಯಯವಾಗುತ್ತಿರುವಾಗ ಸಾಹಿತ್ಯ ರಚನೆಗೆ ಕೈ ಹಾಕುವುದು ದುಸ್ತರವಾಗಿದ್ದು, ಇಂಥದಕ್ಕೆ ನಾಯಕ ಅರಸರೂ ಅಪವಾದವಲ್ಲ. ಆದರೆ ಇಂಥ ಸಂದಿಗ್ಧಗಳ ನಡುವೆಯೂ ಕೆಲ ಅರಸರು ಕೃತಿ ರಚಿಸಿದ ಉದಾಹರಣೆಗಳು ನಾಯಕ ಅರಸುಮನೆತನಗಳಲ್ಲಿ ಇವೆ. ಇವರಲ್ಲಿ ಸುರಪುರದ ಅರಸ ಮುಮ್ಮಡಿ ರಾಘವ ಪಾಮನಾಯಕ (ಕ್ರಿ.ಶ.೧೭೫೦-೧೭೭೩)ನು ಪ್ರಮುಖನಾಗಿದ್ದಾನೆ. ಹೀಗಾಗಿ ಇಲ್ಲಿ ನಾಯಕ ಅರಸರು ಹಾಗೂ ಇನ್ನಿತರು ರಚಿಸಿದ ಕೃತಿಗಳನ್ನು ಅವಲೋಕಿಸುತ್ತಾ, ಸಮಕಾಲೀನವಾಗಿ ಆ ಸಾಹಿತ್ಯ ಕೃತಿಗಳು ಬಿಂಬಿಸುವ ವಿವರಗಳನ್ನು ಪರಿಶೀಲಿಸುವ ಅಗತ್ಯವಿದೆ.

ಚಿತ್ರದುರ್ಗದ ನಾಯಕ ಅರಸರು ಸಾಹಿತ್ಯಕ್ಷೇತ್ರಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ವೀರಶೈವ, ಶ್ರೀವೈಷ್ಣವ, ಶೈವ ಹಾಗೂ ಇತರ ಸಾಹಿತ್ಯಕ್ಕೆ ಇವರ ಕಾಣಿಕೆ ಸಂದಿದೆ. ಚಿತ್ರದುರ್ಗದ ನಾಯಕ ಅರಸರಾದ ಬಿಚ್ಚುಗತ್ತಿ ಭರಮಣ್ಣನಾಯಕ (ಕ್ರಿ.ಶ. ೧೬೮೯-೧೭೨೧) ಹಿರೇಮದಕರಿನಾಯಕ(ಕ್ರಿ.ಶ. ೧೭೨೧-೧೭೪೮) ಹಾಗೂ ಕೊನೆಯ ಮದಕರಿನಾಯಕ(ಕ್ರಿ.ಶ.೧೭೫೪-೧೭೭೯)ನ ಕಾಲದಲ್ಲಿ ಕೆಲವು ಸಾಹಿತ್ಯ ಕೃತಿಗಳು ರಚನೆಯಾದದ್ದು ತಿಳಿಯುತ್ತದೆ. ಅವುಗಳಲ್ಲಿ ಭರಮಣ್ಣನಾಯಕನ ಸಮರವಿಜಯ, ಹಿರೇಮದಕರಿ ನಾಯಕನತಾರಾವಳಿ, ಮದಕರಿರಾಜೇಂದ್ರದಂಡಕ, ಚಿತ್ರದುರ್ಗದಬಖೈರ್, ಕೋಲು ಪದಗಳು, ಲಾವಣಿಗಳು ಪ್ರಮುಖವಾದವು.

ಭರಮಣ್ಣನಾಯಕನ ಸಮರವಿಜಯವು, ಚಿತ್ರದುರ್ಗದ ಮಹಾಪ್ರತಾಪಶಾಲಿ ಅರಸ ಭರಮಣ್ಣನಾಯಕನ ಕಾಲದಲ್ಲಿ ನಡೆದ ಯುದ್ಧಗಳ ಗೆಲುವನ್ನು ವಿವರಿಸುವ ಪದ್ಯಕೃತಿಯಾಗಿದೆ. ಇದನ್ನು ಬರೆದ ಕವಿಯ ಹೆಸರು ತಿಳಿದಿಲ್ಲ. ಇದು ಹುಲ್ಲೂರು ಶ್ರೀನಿವಾಸ ಜೋಯಿಸರಿಗೆ ಚಿನ್ನದ ಮನೆಯವರು ಬರೆದಿರುವ ಚಿತ್ರದುರ್ಗದ ಪಾಳೆಯಗಾರರ ಚರಿತ್ರೆಯಲ್ಲಿ ದೊರಕಿದೆ.[೨] ಇದು ಭರಮಣ್ಣ ನಾಯಕನ ಕಾಲದಲ್ಲಿ ರಚಿತವಾದುದು, ಎಂಬ ವಿವರಣೆಯನ್ನು ಹುಲ್ಲೂರು ಶ್ರೀನಿವಾಸ ಜೋಯಿಸರು ನೀಡುತ್ತಾರಲ್ಲದೆ, ಇದರಲ್ಲಿದ್ದ ಲೋಪದೋಷಗಳನ್ನು ಸರಿಪಡಿಸಿ ಓದುಗರ ಗಮನಕ್ಕೆ ತಂದ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಇದರಲ್ಲಿ ೩೭ ನುಡಿಗಳಿವೆ. ಮೂರುಸಾಲಿನ ನುಡಿಗಳೇ ಹೆಚ್ಚಿವೆ. ನಾಲ್ಕು ನುಡಿಗಳಲ್ಲಿ ನಾಲ್ಕು ಸಾಲುಗಳಿವೆ. ಒಂದು ನುಡಿ ಆರುಸಾಲನ್ನು ಹೊಂದಿದೆ. ಇನ್ನೊಂದು ನುಡಿ ಏಳುಸಾಲನ್ನು ಹೊಂದಿದೆ.

ಭರಮಣ್ಣನಾಯಕನ ಜನಹಿತ ಕಾರ್ಯಗಳು, ಧಾರ್ಮಿಕ ವಿಧಿಗಳು ಹಾಗೂ ಆತನು ಕೈಗೊಂಡ ಯುದ್ಧದ ಗೆಲುವಿನ ವಿವರಣೆಯು ಇದರಲ್ಲಿದೆ. ಜನಹಿತ ಕಾರ್ಯ ಕೈಗೊಂಡ ಭರಮಣ್ಣನ ಕುರಿತಾಗಿ ಸಮರವಿಜಯವು, ದೇಶದೇಶಾಧಿಪರು ಕರಸೆ ನಿನ್ನಯ ಕೀರ್ತಿ ವಸುಧೀಶರೊಳಗಧಿಕ ಬಲವಂತನೆಂದು ಶರಣಜನಬಂಧು ಸಲೆ ಕೃಪಾಸಿಂಧು ಚಿನ್ಮೂಲಗಿರಿಯೀಶ ಚನ್ನವಿಲಾಸ ಮೊನ್ನೆಯಲಲಾಮ ಅಮಿತ ಗುಣಧಾಮ ಕೊಡುಗೈಯ ಕರ್ಣ ಕರುಣಸಂಪೂರ್ಣ ನುಡಿ ರಾಮಬಾಣ ನೂತನ ಶರೀರ ನೂತನವತಾರ ನೆರೆ ಪುಣ್ಯಕಾಂತ ಪರಮಾಯುವಂತ ಕತ್ತುರಿಯ ಭೋಗಿ ಪರಬಲ ಸಂಹಾರಿ ಭರಮೇಂದ್ರ ವಿಜಯೀಭವ ದಿಗ್ವಿಜಯೀಭವ[೩] ಎಂದು ಆತನನ್ನು ಬಣ್ಣಿಸುತ್ತದೆ.

ಭರಮಣ್ಣನಾಯಕನ ಪುತ್ರ ಹಿರಿಯ ಮದಕರಿನಾಯಕ (ಕ್ರಿ.ಶ. ೧೭೨೧-೧೭೪೮)ನು ಚಿತ್ರದುರ್ಗದ ಶೂರ ಅರಸ. ಕವಿಗಳಿಗೆ ಆಶ್ರಯದಾತನಾದ ಈತನ ಕಾಲದಲ್ಲಿ ತಾರಾವಳಿ, ಕೋಲುಪದ, ದಂಡಕ ಲಾವಣಿಗಳನ್ನು ರಚಿಸಿದ್ದಾರಲ್ಲದೆ, ಅನೇಕ ಕವಿಗಳು ಅರಸನ ಕೀರ್ತಿಯನ್ನು ಹಾಡಿದ್ದಾರೆ. ಅನೇಕ ಜನಪದ ಮತ್ತು ಶಿಷ್ಟಸಾಹಿತ್ಯಕೃತಿಗಳೂ ದೊರೆತಿವೆ.[೪] ಅವುಗಳಲ್ಲಿ ಪದ್ಯರೂಪದ ತಾರಾವಳಿಯೂ ಒಂದಾಗಿದೆ.

ತಾರಾವಳಿ ಎಂಬುದು ತಾರೆ ಮತ್ತು ಆವಳಿ ಎಂಬ ಎರಡು ಶಬ್ದಗಳು ಸೇರಿದ ಸಮಸ್ತ ಪದ. 'ತಾರೆ' ಎಂದರೆ ನಕ್ಷತ್ರ, 'ಆವಳಿ' ಎಂದರೆ ಸಾಲು ಅಥವಾ ಸಮೂಹ ತಾರಾವಳಿ ಎಂದರೆ ನಕ್ಷತ್ರಗಳ ಸಾಲು, ಜ್ಯೋತಿಷ್ಯಶಾಸ್ತ್ರದಲ್ಲಿ ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರ, ಆರಿದ್ರ, ಪುನರ್ವಸು, ಪುಷ್ಯ, ಆಶ್ಲೇಷಾ, ಮಾಘ, ಪೂರ್ವಾ, ಉತ್ತರಾ, ಹಸ್ತ, ಚಿತ್ತ, ಸ್ವಾತಿ, ವಿಶಾಖಾ, ಅನುರಾಧಾ, ಜ್ಯೇಷ್ಠ, ಮೂಲಾ, ಪೂರ್ವಾಷಾಢ, ಉತ್ತರಾಷಾಢ, ಶ್ರಾವಣ, ಧನಿಷ್ಠ, ಶತ-ತಾರಾ, ಪೂರ್ವಭಾದ್ರಪದ, ಉತ್ತರಬಾದ್ರಪದ, ರೇವತಿ ಎಂಬ ೨೭ ತಾರೆ (ನಕ್ಷತ್ರ)ಗಳು ಇರುವಂತೆ ಪುಸ್ತಕ ಸಾಹಿತ್ಯ ಪ್ರಕಾರದಲ್ಲೂ ೨೭ ನಕ್ಷತ್ರಗಳ ಸಂಕೇತವಾಗಿ ೨೭ ನುಡಿ ಅಥವಾ ಪದ್ಯಗಳಿರುತ್ತವೆ.[೫] ಇದೇ ಇದರ ಪ್ರಮುಖ ಲಕ್ಷಣ. ಪ್ರಾರಂಭದಲ್ಲಿ ಪಲ್ಲವಿ ಇರುತ್ತದೆ. ಸಾರವನ್ನು ಒಳಗೊಂಡ ಇದು ಪ್ರತಿ ನುಡಿಗೊಮ್ಮೆ ಪುನರಾವರ್ತನೆಯಾಗುತ್ತದೆ. ಪಲ್ಲವಿಗಿಂತ ಮೊದಲು ಕೆಲವು ಕೃತಿಗಳಲ್ಲಿ ಒಂದು ವೃತ್ತವು ಇರುತ್ತದೆ. ಪಲ್ಲವಿಯ ನಂತರ ಹಲವು ನುಡಿಗಳಿರುತ್ತವೆ. ಅಲ್ಲಿಯ ನುಡಿಗಳು ಇಷ್ಟೇ ಪಾದಗಳನ್ನು ಪಡೆದಿರಬೇಕೆಂಬ ನಿಯಮವಿರುವುದಿಲ್ಲ.[೬] ಹಿರೇಮದಕರಿನಾಯಕನ ತಾರಾವಳಿಯು ಈ ಲಕ್ಷಣಗಳನ್ನು ಹೊಂದಿದೆ.

ಹಿರೇಮದಕರಿನಾಯಕನತಾರಾವಳಿಯು ಹಿರೇ ಮದಕರಿನಾಯಕನ ಹಿರಿಯ ಮಗ ಕಸ್ತೂರಿ ರಂಗಪ್ಪನಾಯಕನ ಯುವರಾಜ್ಯಾಭಿಷೇಕ, ಫತೇಹಜಂಗನ ಭೇಟಿ ಮತ್ತು ಸಂತೆಬೆನ್ನೂರು ವಿಜಯ ಎಂಬ ಮೂರು ವಿಷಯಗಳನ್ನು ಒಳಗೊಂಡಿದೆ ಹಿರೇಮದಕರಿನಾಯಕನನ್ನು ತಾರಾವಳಿಯಲ್ಲಿ ಕ್ಷೀರಾಬ್ಧಿಯಲಿ ಚಂದ್ರ ಪುಟ್ಟಿದಂದದಲಿ ನಾರಿ ಸಿದ್ದಾಂಬೆ, ಭರಮೇಂದ್ರನುದರದಲಿ ಭೂರಮಣ ಮದಕರಿ ಜನಿಸಿ ಸುಖವಿರಲಿ ವರವಿತ್ತು ಸಿದ್ದರಂಗಯ್ಯ ರಕ್ಷಿಸಲಿ'' ಎಂದು ಹಾರೈಸಿದೆ. ಅಲ್ಲದೆ ಈ ತಾರಾವಳಿಯು ಆತನ ಸಾಹಸ ಕಾರ್ಯಗಳನ್ನು ವರ್ಣಿಸುತ್ತದೆ.[೭] ಹುಲ್ಲೂರು ಶ್ರೀನಿವಾಸ ಜೋಯಿಸರು ಹಿರೇಮದಕರಿ ನಾಯಕನನ್ನು ಕುರಿತಾದ 'ಧುರವಿಜಯ' ಮತ್ತು 'ದೊರೆ ರಾಯ' ಎಂಬ ಹಾಡುಗಳನ್ನು ಪ್ರಕಟಿಸಿರುವರು. 'ಧುರವಿಜಯ' ಹಿರೇಮದಕರಿ ನಾಯಕನನ್ನು ಕೊಂಡಾಡುತ್ತಾ ಆತನಿಗೆ ಒಳಿತನ್ನು ಹಾರೈಸಿದರೆ, 'ದೊರೆರಾಯ'ವು ಹಿರೇಮದಕರಿನಾಯಕ ಘರ್ಷಣೆಯಲ್ಲಿ ತೊಡಗಿದ್ದ ವಿಷಯವನ್ನು ಹರಹುತ್ತದೆ. ಚಿತ್ರದುರ್ಗವನ್ನು ಆಳಿದ ಕೊನೆಯ ಅರಸ ರಾಜಾ ವೀರಮದಕರಿನಾಯಕನ ಕುರಿತಾಗಿ ಬರೆದ 'ಮದಕರಿ ರಾಜೇಂದ್ರದಂಡಕ'ವನ್ನು ಕವಿ ಚಂದ್ರಭೀಮಯ್ಯನು ಮದಕರಿನಾಯಕನ ಪ್ರೋತ್ಸಾಹದಿಂದ ಬರೆಯುತ್ತಾನೆ ಎಂಬುದಕ್ಕೆ ಒಂದು ವೃತ್ತಾಂತ ಹೀಗಿದೆ :

ಚಂದ್ರಭೀಮಯ್ಯ ಕವಿ ಕೊಡಗನೂರು ಪ್ರಾಂತ್ಯದಲ್ಲಿ ಗ್ರಾಮಾಧಿಕಾರಿಯಾಗಿದ್ದನು. ತನ್ನ ಕೆಲಸದಲ್ಲಿಯ ದಕ್ಷತೆಯಿಂದ ಅರಸನ ಪ್ರೀತಿಗೆ ಪಾತ್ರನಾಗಿದ್ದನು. ಒಮ್ಮೆ ಆ ಪ್ರಾಂತ್ಯದಲ್ಲಿ ಬರಗಾಲ ಕಾಣಿಸಿಕೊಂಡಾಗ ರಾಜನಿಗೆ ನೀಡಲು ಸಂಗ್ರಹಮಾಡಿದ್ದ ಧಾನ್ಯದಲ್ಲಿ ಬರಪೀಡಿತ ಜನರಿಗೆ ಹಂಚಿದ್ದನು. ಸಂದರ್ಭಕ್ಕಾಗಿ ಕಾಯುತ್ತಿದ್ದ ಈತನ ವಿರೋಧಿಗಳು ಅರಸನಿಗೆ ಚಾಡಿ ಹೇಳಿದರು. ಅರಸ ರಾಜಾವೀರ ಮದಕರಿನಾಯಕ

ಈತನನ್ನು ಸೆರೆಯಲ್ಲಿಡುತ್ತಾನೆ. ರಾಜಭಕ್ತನಾದ ಚಂದ್ರಭೀಮಯ್ಯ ಕವಿ ಸೆರೆಮನೆಯಲ್ಲಿ ಈ ದಂಡಕವನ್ನು ರಚಿಸಿದನು. ಒಮ್ಮೆ ಅರಸ ರಾಜಾ ವೀರಮದಕರಿ ಅಲ್ಲಿಗೆ ಹೋದಾಗ ಈ ಕೃತಿಯನ್ನು ಅರಸನೆದುರು ವಾಚಿಸುತ್ತಾನೆ. ಕೇಳಿ, ಹರ್ಷಿತನಾದ ಅರಸ ಈತನನ್ನು ಸೆರೆಯಿಂದ ಬಿಡಿಸಿ ಸನ್ಮಾನ ಮಾಡುತ್ತಾನೆ.[೯]

ಚಂದ್ರಭೀಮಯ್ಯ ಕವಿ, ಈ ದಂಡಕದಲ್ಲಿ ಆ ಕಾಲದ ವೇಷಭೂಷಣಗಳನ್ನು, ಅರಸನ ಆಸ್ಥಾನದಲ್ಲಿ ನಡೆಯುತ್ತಿದ್ದ ನಿತ್ಯ ವ್ಯವಹಾರಗಳನ್ನು ನಡೆನುಡಿಗಳನ್ನು ವಿವರಿಸಿರುವುದಲ್ಲದೆ, ನಾನಾಜಿ ಫೌಜಿಗೂ ಹಾಗೂ ಮದಕರಿನಾಯಕನ ಫೌಜಿಗೂ ನಡೆದ ಕಾಳಗದ ವಿಷಯ ಈ ದಂಡಕದಲ್ಲಿದೆ. ಅಲ್ಲದೆ ಇದರಿಂದ ಮದಕರಿ ಅರಸನ ದಿನಚರಿಯೂ ತಿಳಿಯುತ್ತದೆ. ಈ "ದಿನಚರಿಯಂತೆ ಒಂದು ದಿನ ಉದಯಕಾಲದಲ್ಲೆದ್ದು ಚಂದ್ರಮೌಳೀಶ್ವರನನ್ನು ಧ್ಯಾನಿಸಿ, ಪಂಚಾಂಗವನ್ನು ಕೇಳಿ, ದೇಹ ನೈರ್ಮಲ್ಯವನ್ನು ಹೊಂದಿ, ಸುಗಂಧ ಪರಿಮಳದ ನೀರಿನಿಂದ ಮುಖವನ್ನು ತೊಳೆದು, ಹಣೆಯಲ್ಲಿ ಭಂಡಾರವನ್ನಿಟ್ಟು, ವಸ್ತ್ರಾಲಂಕೃತನಾಗಿ, ಮಂದಿಗಳು ಪರಾಕು ಹೇಳುತ್ತಿರಲು, ಗರಡಿಮನೆಯನ್ನು ಹೊಕ್ಕು ಶ್ರೀಕೃಷ್ಣನ ಸಂದರ್ಶನದಿಂದ ಆನಂದಿತನಾಗಿ ದಂಡೆಯನ್ನು ಮಾಡಿ, ಮಲ್ಲರೊಡನೆ ಕುಸ್ತಿಯನ್ನು ಮಾಡಿ, ಅವರನ್ನು ತಲ್ಲಣಗೊಳಿಸಿ ಅರಮನೆಗೆ ಹಿಂತಿರುಗಿದನು. ಸತ್ಸಂಪ್ರದಾಯಗಳಿಂದ ಮಂಗಳಸ್ನಾನ ಮಾಡಿ, ಚಂದ್ರಮೌಳೀಶ್ವರನನ್ನು ಧ್ಯಾನಿಸಿ, ಶೇಷಗಂಧ ಪ್ರಸಾದಗಳನ್ನು ಧರಿಸಿ, ಸನ್ಮಿತ್ತರ ಪಂಗ್ತಿಯಲ್ಲಿ ಭೋಜನ ಮಾಡಿ, ಚಿನ್ನದ ತಟ್ಟೆಯಲ್ಲಿ ಕೈ ತೊಳೆದು, ಭೂಷ ವಿಶೇಷಗಳನ್ನು ಧರಿಸಿ, ಕರ್ಪೂರ ತಾಂಬೂಲವನ್ನು ಸವಿದು, ಧನುರ್ಬಾಣಗಳನ್ನೂ, ಗಂಡುಗೊಡಲಿ ಮೊದಲಾದ ಆಯುಧಗಳನ್ನೂ ಧರಿಸಿ ಹೊರಟು, ಭಾರಿ ಹಜಾರವನ್ನು ಸೇರಿ ಸಿಂಹಾಸನಾರೂಢನಾಗಿ, ಪೂರ್ಣೇದುವಂತೆ ರಾರಾಜಿಸುತ್ತಿದ್ದನು. ಆಗ ಆಶ್ರಿತರು ಕಪ್ಪವನ್ನು ಒಪ್ಪಿಸಿದರು."[೧೦] ಹೀಗೆ ನಡೆದ ಸಭೆಯ ವರ್ಣನೆಯು ಇದರಲ್ಲಿ ತುಂಬಾ ಸೊಗಸಾಗಿ ಬರುತ್ತದೆ.

ಮದಕರಿಯ ಆಸ್ಥಾನದಲ್ಲಿ ಮರಾಠರ ಪೇಶ್ವೆ, ಮಾಧವರಾವ್‌ನಿಂದ ಪುಣೆಯ ಪ್ರತಿನಿಧಿಯಾಗಿ ಬಂದು ಉಪಸ್ಥಿತನಿದ್ದವನು ಭೀಮೋಜಿ ಪಂತ ಎಂಬುವನು. ಪೇಶ್ವೆಗಳಿಗೆ ಬರೆದ ಬರಹವೆ ಚಿತ್ರದುರ್ಗದ ಬಖೈರು. ಈ ಬಖೈರು ಚಿತ್ರದುರ್ಗ ಅರಸರ ಪೂರ್ವಚರಿತ್ರೆಯನ್ನು ತಿಳಿಸುವುದರೊಂದಿಗೆ ಹೈದರನಿಗೂ ಮತ್ತು ರಾಜಾ ಮದಕರಿನಾಯಕನಿಗೂ ನಡೆದ ಕದನದ ವಿವರವನ್ನು ಒಳಗೊಂಡಿದೆ. ಹೈದರನು ರಾಜಾ ಮದಕರಿನಾಯಕನನ್ನು ಸ್ವಾಧೀನಪಡಿಸಿಕೊಳ್ಳಲು ಹೂಡಿದ ಉಪಾಯಗಳನ್ನು ಹಾಗೂ ಹೈದರ್ ರಾಜಾ ಮದಕರಿನಾಯಕನ ಸ್ನೇಹಿತನಾಗಲು ಬಯಸಿದನ್ನೂ ಅದು ಸಾಧ್ಯವಾಗದ ಸಂದರ್ಭವನ್ನು ರಾಜಾ ಮದಕರಿಯು ಹೈದರ್‌ನೊಂದಿಗೆ ಯುದ್ಧಮಾಡಲು ಅಣಿಯಾದ ಸಂದರ್ಭವನ್ನೂ, ಮರಾಠರ ನೆರವು ಸಕಾಲಕ್ಕೆ ಸಿಗದಿದ್ದಾಗ ಹೆದರದೆ ವೈರಿಗಳನ್ನು ಎದುರಿಸಿದ ಪರಾಕ್ರಮವನ್ನೂ ಅರಸನ ಗೆಲುವಿಗೆ

ಕಾರಣರಾದ ಸೈನಿಕರ ಸ್ವಾಮಿನಿಷ್ಠೆಯನ್ನೂ, ಚಿತ್ರದುರ್ಗದ ಪಡೆಯಲ್ಲಿದ್ದ ಕೆಲವು ಮುಸ್ಲಿಂ ಸೈನಿಕರ ವಂಚನೆಯನ್ನೂ ಈ ಬಖೈರು ವಿವರಿಸುತ್ತದೆ.

ಈ ಬಖೈರು ಪ್ರಾರಂಭವಾಗುವುದು ಹೀಗೆ "ಶ್ರೀಮಂತ ಮಹಾರಾಜ, ದಕ್ಷಿಣದೇಶದಲ್ಲಿ ಚಿನ್ಮೂಲಾದ್ರಿ ಎಂಬ ಪರ್ವತಶ್ರೇಷ್ಠಕ್ಕೆ ಕಾಮಗೇತ್ಲುವಂಶ ರಾಜಾ ಮದಕರಿನಾಯ್ಕ ಎಂಬುವನು ಮಹಾ ಪರಾಕ್ರಮಿಶಾಲಿ, ಧರ್ಮಪುಣ್ಯ ಯಶೋಮೂರ್ತಿ ಅವತಾರನಾಗಿ ಕಲಿಯುಗಕ್ಕೆ ಧರ್ಮರಾಯಪ್ರಾಯ ಸಂಪತ್ಸವೃದ್ಧಿಯಿಂದ ಪುತ್ರಮಿತ್ರ ಬಂಧುಜನ ಸಹಿತಾ ಸಿಂಹಾಸನಾರೂಢರಾಗಿ ಸಕಲ ಧರ್ಮಶಾಸ್ತ್ರದಿಂದ ರಾಜ್ಯಭಾರಮಾಡುತ್ತಾ ಇರುವಲ್ಲಿ ಈ ದೇಶದಲ್ಲಿ ಷಡ್ರುತು ಒಂದೇ ಪ್ರಕಾರ ನಡೆಯುತ್ತಿತ್ತು. ಬ್ರಾಹ್ಮಣ ಜನ ಯಾವತ್ತೂ ತ್ರಿಕಾಲ ಸಂಧ್ಯಾ ಜಪತಪ ದೇವತಾರ್ಚನ ಆಹ್ನೀಕಸ್ತೋತ್ರ ಷಟ್ಕರ್ಮದಿಂದ ಮಹಾರಾಜ ರಾಜಾಸಾಹೇಬ್ ಇವರಿಗೆ ಶ್ರೇಯಃಪ್ರಾರ್ಥನೆ ಮಾಡುತ್ತಾ ಪರಮಸಂತೋಷದಿಂದ ಇದ್ದರು.[೧೨]

ಹೈದರಾಲಿ ಚಿತ್ರದುರ್ಗದ ಕೋಟೆಯ ಕುರಿತಾಗಿ ನೀಡದ ವಿವರಣೆ ಬಖೈರಿನಲ್ಲಿ ಈ ರೀತಿ ಇದೆ: "ಚಿತ್ರದುರ್ಗದ ಷಹರು ಪನಾಖಿಲ್ಲೆ, ಬಹಳ ಕಂದಕ, ಬಹಳವಾಗಿ ನೀರು ಕಾಣುತ್ತೆ. ಎಲ್ಲಿ ನೋಡಿದಾಗ್ಯೂ ಬತೇರಿ ಮೇಲೆ ತೋಪುಗಳೇ ಕಾಣುತ್ತೆ. ಶಿವಾಯಿ ಸುವರ್ಣ ಕಲಶಗಳು ಝಳಝಳಾಯ ಮಾನವಾಗಿ ಕಾಣುತ್ತೆ. ಅನೇಕ ಧ್ವಜಪೂರಿತ ಲಂಕಾಪಟ್ಟಣ ಪ್ರಕಾರ ಕಾಣುತ್ತೆ. ಒಂದು ದೊಡ್ಡ ಟೇಕಡಿ ಮೇಲೆ ಕುಸುಂಬಿ ಝೂಂಡ್ಯ ನಿಲ್ಲಿಸಿದ್ದಾರೆ. ಈ ಮೇರೆಗೆ ಶೋಭಾಯಮಾನವಾಗಿ ಕಾಣುತ್ತೆ. ಕಿಲ್ಲೆ ನೋಡಿದರೆ ಜಂಬೂದ್ವೀಪಕ್ಕೆ ಕುವಲಯ ಮಧ್ಯ ದೇಶಾಖ್ಯ ಕುಲಕ್ಕೆ ಕರ್ಣಿಕ ಪ್ರಾಯದ್ವಿರಾಜಮಾನವಾಗಿ ಕಾಣುತ್ತೆ. ಈ ಊರು ಧೊರೆ ಲಾಲಗಡದ ಮೇಲೆ ನಮ್ಮನ್ನು ನೋಡುವುದಕ್ಕೆ ನಾನಾವಿಧ ಆಪ್ತಗಿರಿ ಚಾಮರ ವಗೈರೆ ಶ್ವೇತಛತ್ರಿ ಹಿಡಿದು ಇದೆ. ಮೊಹರ್ಚಲ್ಲು ಹಾಕುತ್ತೆ. ಹತ್ತಿರ ದೊಡ್ಡ ದೊಡ್ಡ ಸರದಾರರು ನಿಂತು ಇದ್ದಾರೆ. ಭಾಟ, ಭಟಂಗಿ, ತಾಫೇದಾರರು ೧೦-೧೨ ಜೋಡಿ ನಿಂತಿದ್ದಾರೆ. ಈ ಮೇರೆಗೆ ಕಾಣುತ್ತೆ. ಶಿವಾಯಿ ಬಹಳವಾಗಿ ಉಪವನದಲ್ಲಿರುವ ಮಲ್ಲಿಕಾ, ಜಾಜಿ, ಪಂಚ ಗುಲಾಬ್, ಕಮಲ, ವಗೈರೆ ಪುಷ್ಪದ ಸುವಾಸನೆ ಬರುವುದರಿಂದ ಮನಸ್ಸು ಹರ್ಷಾಯಮಾನವಾಗಿ ಕಾಣುತ್ತೆ. ಶಿವಾಯಿ ನಾನಾ ಪಕ್ಷಿ ಜಾತಿ ಇದೆ. ಫೌಜು ಬಂದದ್ದು ಭಯವಿಲ್ಲದೆ ಷಹರಿನ ಹೆಂಗಸರು ಅಲಂಕಾರರಾಗಿ ತಿರುಗುವುದಕ್ಕೆ ಕಾಣುತ್ತೆ. ನಾವು ಇಷ್ಟು ಷಹರು ನೋಡಿದೆವು. ಈ ಷಹರಿನ ಆತ್ಯೈಶ್ವರ್ಯ ಒಪ್ಪಂದ ಯಾವುದೂ ಇಲ್ಲ. ಕರ್ಣಾಟಕ ದೇಶ ಶ್ರೀರಂಗಪಟ್ಟಣ, ಶ್ರೀರಂಗಸ್ವಾಮಿ, ಕಾವೇರಿ ನದಿಯಿಂದ ಶ್ರೇಷ್ಠ. ಇದು ಇಲ್ಲದಿದ್ದರೆ ಈ ಊರಿಗೇನು ಹೆಚ್ಚು ಕಾಣುವುದಿಲ್ಲ. ಶಿವಾಯಿ ಜನಾನು ಬಹಳ ಮರ್ದಮಯಿದೆ. ಇಲ್ಲಿಯ ರಾಜಾನೂ ಬಹಳ ಮರ್ದಮ. ಈ ಫೌಜೂನೂ ಬಹಳ ಮೊಗರೂರು ಇದೆ. ಏಕಾ ಏಕೀ ಹಲ್ಲಾ ಮಾಡುವುದಕ್ಕೆ ಆಗುವುದಿಲ್ಲಾ. ಸ್ವಾಧೀನಕ್ಕೆ ಬರುವುದು ಬಹಳ ಕಠಿಣವಿದೆ.[೧೩]

ಮದಕರಿಯ ಆಸ್ಥಾನದಲ್ಲಿ ಕೋನಪ್ಪ ಎಂಬ ಇನ್ನೊಬ್ಬ ಕವಿ ಆಶ್ರಯದಾತನಾಗಿದ್ದು, ಕೃಷ್ಣಾರ್ಜುನರ ಸಂಗರವನ್ನು ರಚಿಸಿದ್ದಾನೆ. ಅಲ್ಲದೇ ಚನ್ನಬಸವಣ್ಣ ಎಂಬ ಕವಿ, ವೀರಮದಕರಿನಾಯಕನು ಹರಪನಹಳ್ಳಿಯ ಪಾಳೆಯಗಾರರನ್ನು, ರಾಯದುರ್ಗದ ಪಾಳೆಯಗಾರ ಹಾಗೂ ಸವಣೂರಿನ ನವಾಬರನ್ನು ಸೋಲಿಸಿದ ವಿಷಯವಾಗಿ ಲಾವಣಿಯನ್ನು ರಚಿಸಿದ್ದಾನೆ.[೧೪] ಹಾಗೂ ಈತನ ಆಸ್ಥಾನದಲ್ಲಿ 'ನಂಜಾ' ಎನ್ನುವ ವೀರಶೈವ ಕವಿಯು ಕಪೋತವಾಕ್ಯ ಎಂಬ ಆಖ್ಯಾನವನ್ನು ಸಾಂಗತ್ಯ ರೂಪದಲ್ಲಿ[೧೫] ರಚಿಸಿರುವನು. ಹಾಗೆಯೇ ಲಾಳಸಿಂಗಿ ಸೋಮಣ್ಣನು ರುಕ್ಮಾಂಗಧ ಚರಿತ್ರೆ, ಸ್ಮರವಿಜಯ, ಲಿಖಿತ ಲೀಲಾ, ಲಕ್ಷ್ಮೀ ಸ್ವಯಂವರ ಮುಂತಾದ ಯಕ್ಷಗಾನ ಬಯಲು ನಾಟಕಗಳನ್ನು ರಚಿಸಿರುವನು, 'ಹಗಲುಕಗ್ಗೊಲೆಯಮಾನ್ಯ' ಎಂಬ ಈತನ ಕೃತಿ ಪ್ರಸಿದ್ಧವಾದುದು.[೧೬]

ಚಿತ್ರದುರ್ಗ ಅರಸರ ಪರಾಕ್ರಮ ಪ್ರತಿಷ್ಠೆ, ಅವರ ಸೇನೆ ಆರಾಧ್ಯದೇವರು ಮುಂತಾದವುಗಳ ಕುರಿತಾಗಿ ಆ ಕಾಲದಲ್ಲಿ ಯಥೇಚ್ಛ ಜನಪದಸಾಹಿತ್ಯ ಹುಟ್ಟಿತು. ಹೆಚ್ಚಾಗಿ ಜನಪದಸಾಹಿತ್ಯ ಹಿರೇ ಮದಕರಿ ಹಾಗೂ ಕಡೇ ಮದಕರಿನಾಯಕರ ಕುರಿತಾಗಿಯೇ ಇದೆ. ಈ ಸಾಹಿತ್ಯದ ಕುರಿತಾಗಿ ಪ್ರೊ.ಲಕ್ಷ್ಮಣ್ ತೆಲಗಾವಿ, ಕೃಷ್ಣಮೂರ್ತಿ ಹನೂರು, ಮೀರಾಸಾಬಿಹಳ್ಳಿ ಶಿವಣ್ಣ ಅವರು ಲೇಖನಗಳನ್ನು ಪ್ರಕಟಿಸಿದ್ದಾರೆ. ಈ ಗೀತೆಗಳಲ್ಲಿ ಚಿತ್ರದುರ್ಗದ ರಾಜಕೀಯ, ಸಾಮಾಜಿಕ, ಧಾರ್ಮಿಕ ಅಂಶಗಳು ಪ್ರಮುಖವಾಗಿ ಎದ್ದು ಕಾಣುತ್ತವೆ.

ಮತ್ತಿ ತಿಮ್ಮಣ್ಣನಾಯಕನು ಕಲ್ಬುರ್ಗಿಯ ಮೇಲೇರಿ ಹೋಗಿ ಅಲ್ಲಿಯ ನವಾಬನನ್ನು ಗೆದ್ದು ವಿಜಯನಗರದ ಪತಾಕೆಯನ್ನು ಕೋಟೆಯ ಮೇಲೆ ಹಾರಿಸಿದ ಸಂದರ್ಭದ ಕುರಿತ ಕೋಲು ಮೇಳದ ಪದ್ಯ ಈ ರೀತಿ ವಿವರಣೆ ನೀಡುತ್ತದೆ.

> ಕಲ್ಬುರ್ಗಿ ಮೇಲೇರಿ | ಬರಬೇಕೋ | ರನ್ನಾದಿ
> ಕಲ್ಬುರ್ಗಿ ಮೇಲೇರಿ | ಬರಬೇಕೋ | ನೀನೀಗ
> ಕರಸಪ್ಪ ನಿನ್ನಾಯ | ಬೇಡರ ಭಂಟರಾ || ಕೋಲನಿ ||
> ಕರಸಪ್ಪ ನಿನ್ನಾಯ | ಬೇಡರದಂಡನ್ನು
> ಹೊಡೆಸಪ್ಪ | ದಿಬ್ಬಕ್ಕೆ ಡೇರ್ರೇವ | ರನ್ನಾದಿ || ಕೋಲನಿ[೧೭]

ಓಬಣ್ಣನಾಯಕನ ಕಾಲದಲ್ಲಿ ಜನ ಕೋಲುಹೊಯ್ಯುತ್ತ ರಸಸಿದ್ದರ ಮೇಲಿನ ಪದಗಳನ್ನು ಹಾಡುತ್ತಾ ಇದ್ದರೆಂದು ವಂಶಾವಳಿಗಳಲ್ಲಿ ಪ್ರಸ್ತಾಪ ಬರುತ್ತದಲ್ಲದೆ ಸ್ವತಃ ಅರಸ ಓಬಣ್ಣನಾಯಕ ಪ್ರತಿ ಸೋಮವಾರ ಸಂಪಿಗೆಸಿದ್ದೇಶ್ವರ ಗುಡಿಗೆ ಬಂದು ದೇವರಸೇವೆಯನ್ನು ಮಾಡಿ ಸಿದ್ದರ ಮೇಲಿನ ಪದಗಳನ್ನು ಹೇಳುತ್ತಾ ಕೋಲುಗಳನ್ನು ಹುಯ್ಯುತ್ತಿದ್ದನು.[೧೮]

ಚಿತ್ರದುರ್ಗದ ಜಂಪಳ್ಳಿನಾಯಕನ ಕುರಿತಾದ ಜನಪದಗೀತೆಯ ನುಡಿಯೊಂದು

ಗರಡಿಮನೆಗೋಗಿ ಬರುವ ಜಂಪಣ್ಣಗೆ
ಒಂಟಿಕೊರಳಿಗೆ ಗಂಟಿದ ಸರಮಾಲೆ
ಆನೆಯಕೊರಳಿಗೆ ಕೀಲುಸರಪಳಿ ಹಾಕಿ
ಆರಾಳ ನಡುವೆ ಬರುವಾನೆ [೧೯]

ಎಂಬ ನುಡಿ ಆತನ ಗರಡಿಕಲೆಯನ್ನು ತಿಳಿಸುತ್ತದೆ.

ಚಿತ್ರದುರ್ಗದ ಏಳುಸುತ್ತಿನ ಕೋಟೆಯ ಕುರಿತಾಗಿ,

ಏಳುಸುತ್ತಿನ ಕ್ಯಾಟೆ ಹೇಳಿ ಕಟ್ಟಿಸಿದನಯ್ಯ
ಚಿತ್ರಕಲ್ಲುದುರುಗದ ನಾಡ | ಮೆದಕೇರಪ್ಪ
ಅವುನು ಏಳುಸುತ್ತೀನ ಕೋಟೆ ಒಳಗವುನೆ ||[೨೦]

ಮದಕರಿನಾಯಕ ತನ್ನ ಶತ್ರುಗಳನ್ನು ಓಡಿಸಿದ ಪರಿಯನ್ನು ಜನಪದರು ಈ ರೀತಿ ಹೇಳುತ್ತಾರೆ:

ಬರುವಂಥ ದಂಡ ಹಿಂದಕೆ ತಿರುವಿದನೆ
ಕೆಂಧೂಳು ಕೆಸರ್ಯಾಕೆ ಎದ್ದವು | ಆ ದಂಡ
ಹಿಂದಾಕೆ ಮೆದಕೇರಿ ತಿರುವ್ಯಾನೆ[೨೧]

ವೈರಿ ಪಾಳೆಯದವರ ಸೋಲನ್ನು ಹೀಗೆ ಛೇಡಿಸಲಾಗಿದೆ.

ಮೀಸೆ ತುರುಕಾರು ಕಾಸೀಗೆ ಸಲ್ಲಾರು
ಸಾವುಗಲ್ಲಡಿಗೆ ವೊಲಿವೂಡಿ | ತುರುಕಾರು
ಸೋತ್ರೆಂದು ಕಾಳೆ ಯಿಡುದಾರು[೨೨]

ಅಭೇದ್ಯ - ಕೋಟೆಯನ್ನು ಏರಿದ ವೈರಿಗಳು ದಾರಿ ತಪ್ಪಿಸಿಕೊಂಡುದರ ಕುರಿತಾಗಿ,

ಏರಲಾರದ ಗುಡ್ಡ ಏರ್‍ಯಾರೆ ತುರುಕರು
ಏರೀ ಮತ್ತಿಳಿಯ ದಾರಿ ಅರಿಯಾರು | ತುರುಕರು
ನೀರಿಗೆ ಬಾಯ ಬಿಡುತಾರೆ||
ಹತ್ತಲಾರದ ದುರುಗ ಹತ್ಯಾರು ತುರುಕರು
ಹತ್ತಿ ಇಳಿಯಾದ ದಾರಿ ತಿಳಿಯಾರು | ತುರುಕರು
ರೊಟ್ಟಿಗೆ ಬಾಯ ಬಿಡುತಾರೆ[೨೩]

ಮದಕರಿನಾಯಕ ಮಾಯಕೊಂಡದ ಕಾಳಗದಲ್ಲಿ ರಣರಂಗದಲ್ಲಿ ಮಡಿದ ಪರಿಯನ್ನು ಜನಪದರು ಈ ರೀತಿ ಚಿತ್ರಿಸುತ್ತಾರೆ :

ಮಾಯಕೊಂಡದ ಮಟ್ಟಿಯ ಮೇಲೆ
ಮಾಯವಾದನು ಮದಕರಿಭೂಪ
ಮಾಯಕೊಂಡದಾಗ ಮಾಗುಡಿ ಬಯಲಾಗೆ
ರಣಭೂಮ್ಯಾಗೇ ಸಮಾಧಿ ಮಾಡಿದರೋ[೨೪]

ಚಿತ್ರದುರ್ಗ ಜಿಲ್ಲೆಯ ಒಡ್ಡನಹಳ್ಳಿಯ ತಿಪ್ಪಯ್ಯ ಇವರು ಹಾಡಿದ ಉಚ್ಚಂಗಮ್ಮನ ಜನಪದ ಗೀತೆಯನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಸಂಗ್ರಹಿಸಿದ್ದಾರೆ. ಆ ಜನಪದ ಹಾಡಿನಲ್ಲಿ ಉಚ್ಚಂಗಮ್ಮನ ವರ್ಣನೆ ಇರುವುದಲ್ಲದೆ ಚಿತ್ರದುರ್ಗದ ಅರಸರ ಸಂಬಂಧವನ್ನು ಹೇಳುವ ನುಡಿ ಹೀಗಿದೆ.

ಕರಿಯ ಅಂಚಿನ ಸೀರೆ ಹರುಗಲ್ಲರುವಾರ
ಹಿರಿಯ ದುರ್ಗಾದ ದೊರೆಗಳು | ಕೊಟ್ಟ ಸ್ಯಾಲೆ
ಶಿವದಾರದ ಮೇಲೆ ಹೊಳೆದಾವೋ

ಹೀಗೆ ಈ ಜನಪದಗೀತೆಗಳ ಅಂತರಂಗವನ್ನು ಬಗೆದು ನೋಡಿದರೆ ಚಿತ್ರದುರ್ಗದ ಅರಸರ ಕಾಲದ ಸಾಂಸ್ಕೃತಿಕ, ಸಾಮಾಜಿಕ, ಸೈನಿಕರ ಕುರಿತಾಗಿ ವಿವಿಧ ಮಗ್ಗುಲಗಳನ್ನು ಸೂಕ್ಷ್ಮವಾಗಿ ಪರಿಚಯಿಸುತ್ತವೆ. ಜನರಿಗೆ ಚಿತ್ರದುರ್ಗದ ಅರಸರ ಬಗ್ಗೆ ಇದ್ದ ಪ್ರೀತಿ, ಅಭಿಮಾನ, ಗೌರವಗಳು ಎದ್ದುಕಾಣುತ್ತವೆ. ಅಲ್ಲದೆ ಏಕನಾಥೇಶ್ವರಿ, ಕೆಳದುರ್ಗದ ಉಚ್ಚಂಗಿ ಎಲ್ಲಮ್ಮ ಗ್ರಾಮೀಣ ಜನತೆಯ ಮೇಲೆ ಪ್ರಭಾವ ಬೀರಿದ ಅಂಶ ವ್ಯಕ್ತವಾಗುತ್ತದೆ. ಅಲ್ಲದೆ ಆ ಕಾಲದಲ್ಲಿ ಜನಪದರ ಮನಗೆದ್ದ ಚಿತ್ರದುರ್ಗದ ಅರಸರು ಅನೇಕ ಕಥೆಗಳಲ್ಲಿ ಚಿತ್ರಿತವಾಗಿರುವುದು, ಜನರ ಮೇಲಾದ ಅವರ ಪ್ರಭಾವವನ್ನು ತಿಳಿಸುತ್ತದೆ. ಅಲ್ಲದೆ ಈ ಅರಸರ ಛಲ, ಧೀಮಂತಿಕೆ ಮಹತ್ವಾಕಾಂಕ್ಷೆಯ ಹಂಬಲಗಳು, ಜನತೆಯ ಮನದಲ್ಲಿ ಹಾಡುಗಳಾಗಿ, ಕತೆಗಳಾಗಿ, ಐತಿಹ್ಯಗಳಾಗಿ ರೂಪುಗೊಂಡಿವೆ.

ಹೀಗೆ ಚಿತ್ರದುರ್ಗ ಅರಸರ ಕುರಿತಾದ ಸಾಹಿತ್ಯ ವಿಪುಲವಾಗಿದೆ. ಆದರೆ ಈ ಅರಸರು ಸ್ವತಃ ಸಾಹಿತ್ಯ ಕೃಷಿ ಮಾಡಲಿಲ್ಲ. ಆದರೆ ಈ ಮನೆತನದ ಕೆಲವರು ರಾಮಾಯಣ ಮಹಾಭಾರತದಂತಹ ಕೃತಿಗಳನ್ನು ಓದಿ ಅರಗಿಸಿಕೊಂಡ ಸಂಗತಿ ಇತ್ತೀಚಿನ ತಲೆಮಾರುಗಳಲ್ಲಿ ನಡೆದಿದೆ, ಅವರಲ್ಲಿ ಪಿ.ವೀರಭದ್ರ ನಾಯಕರ ತಾತ ರಾಜಾ ನಾರಾಯಣಸ್ವಾಮಿನಾಯಕರು ಒಬ್ಬರಾಗಿದ್ದರು.[೨೫] ಹಾಗೂ ಅರಸುಮನೆತನದ ವಂಶಸ್ಥರು ಈಚೆಗೆ ಕೆಲವು ಕೃತಿಗಳನ್ನು ಬರೆದಿದ್ದಾರೆ. ಅವರಲ್ಲಿ 'ಚಿತ್ರದುರ್ಗದ ಗಜಕೇಸರಿ' ಭಾಗ ೧ ಬರೆದ ರಾಜಾ ಬಿಚ್ಚುಕತ್ತಿ ಪರಶುರಾಮಪ್ಪನಾಯಕರು ಹಾಗೂ 'ಚಿತ್ರದುರ್ಗದ ಕಾಮಗೇತಿ ಅರಸರು' ಕೃತಿ ರಚಿಸಿದ ಬಿ.ಎಸ್.ಶ್ರೀನಿವಾಸನಾಯಕರು ಪ್ರಮುಖರು.

ಕರ್ನಾಟಕ ನಾಯಕ ಅರಸುಮನೆತನಗಳಲ್ಲಿ ಸುರಪುರ ಅರಸರು ಸಾಹಿತ್ಯಲೋಕಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಸ್ವತಃ ಅರಸರೇ ಕೃತಿ ರಚಿಸಿದ ಉದಾಹರಣೆಗಳು ಈ ಮನೆತನದಲ್ಲಿ

ಸಿಗುತ್ತವೆ. ಸಂಸ್ಕೃತ, ಕನ್ನಡ, ತೆಲುಗುಭಾಷೆಗಳಲ್ಲಿ ಸಾಹಿತ್ಯ ರಚನೆಯಾಗುವಲ್ಲಿ ಇವರ ಪಾತ್ರ ಹಿರಿದು. ಪ್ರಾರಂಭದಲ್ಲಿ ಸಂಸ್ಕೃತಭಾಷೆಗೆ ಪ್ರಥಮ ಪ್ರಾಶಸ್ತ್ಯವಿದ್ದಿತು. ನಂತರದಲ್ಲಿ ತೆಲುಗು ಈ ಅರಸರ ಮಾತೃಭಾಷೆಯಾದುದರಿಂದ ತೆಲುಗಿನಲ್ಲಿ ಕೃತಿ ರಚಿಸಿದ ಉದಾಹರಣೆಗಳಿವೆ.

ಆಗ ರಮಣಪ್ಪನಾಯಕನು ಯಾವಾಗಲೂ ಪುರಾಣ ಪುಣ್ಯಕಥೆಗಳನ್ನು ಕೇಳುತ್ತಾ ಪಂಡಿತರ ಸಮಾಗಮದಲ್ಲಿ ಕಾಲ ಕಳೆಯುತ್ತಿದ್ದನು. ಜೊತೆಗೆ ಪುರಾಣ, ಪುಣ್ಯಕಥೆ, ಸಾಹಿತ್ಯರಚನೆಯಂಥ ಕೆಲಸಗಳಲ್ಲಿ ನಿರತನಾಗಿದ್ದನು.[೨೬] ಅರಸ ಮೊಂಡಗೈ ವೆಂಕಟಪ್ಪನಾಯಕ(ಕ್ರಿ.ಶ. ೧೭೪೭-೫೨)ನು ಪಾಂಡಿಚೇರಿ ಯುದ್ಧಕ್ಕೆ ಹೋದಾಗ ಇಡೀ ರಾಜ್ಯದ ಜವಾಬ್ದಾರಿಯನ್ನು ತನ್ನ ಚಿಕ್ಕಪ್ಪ ರಮಣಪ್ಪನಾಯಕನಿಗೆ ನೀಡಿದ್ದ. ವೆಂಕಟಪ್ಪನಾಯಕನ ಇನ್ನೊಬ್ಬ ಚಿಕ್ಕಪ್ಪ ವಾಸವದೇವನಾಯಕನೆಂಬುವನಿದ್ದನು. ಈತನೂ ರಮಣ್ಣಪ್ಪನಾಯಕನಂತೆ ಒಳ್ಳೆಯ ಸುಸ್ವಭಾವದವನಾಗಿದ್ದನು. ಇವರೀರ್ವರು ಪಂಡಿತರೆನಿಸಿಕೊಂಡು ವೈರಾಗ್ಯಶಾಲಿಗಳಾಗಿದ್ದರು. ಇವರಿಬ್ಬರ ವಿಷ್ಣುಭಕ್ತಿ ಪರವಾದ 'ಪದಗಳು', 'ಮುಂಡಿಗೆಗಳು' ಇಂದಿಗೂ ಪ್ರಚಾರದಲ್ಲಿವೆ.[೨೭] 'ಮುಂಡಿಗೆ' ಎಂದರೆ ಭಾರವಾದ ವಸ್ತು, ಸುಲಭವಿಲ್ಲದ ಕ್ರಿಯೆ. ಅಗ್ರಾಹ್ಯ ಚಿಂತನೆ ಎಂಬರ್ಥಗಳಿವೆ. ಇದನ್ನು ವಚನಗಳ ಬೆಡಗಿಗೆ ಸಂವಾದಿಯಾಗಿ ಬಳಸಿದರಲ್ಲದೆ ಅನುಭಾವ ಸಾಹಿತ್ಯಕ್ಕೆ ಆಕರವಾಗಿಸಿಕೊಂಡರು.[೨೮] ಪಾಂಡಿತ್ಯ ಪ್ರದರ್ಶನ ಮತ್ತು ಪರೀಕ್ಷೆಗೆ ಬಳಸಿಕೊಳ್ಳುವ ಮುಂಡಿಗೆಯು ಜ್ಞಾನಿಗಳ ಆಂತರಿಕ ಭಾಷೆ ಹಾಗೂ ಆತ್ಮಾನುಭವ, ತತ್ವಾನುಭವದ ತುತ್ತೂರಿಯೆಂತಲೂ ಕರೆಯುತ್ತಾರೆ. ಪದ್ಯರೂಪವನ್ನು ಹೊಂದಿದ ಮುಂಡಿಗೆಯು ವೃತ್ತ ಷಟ್ಪದಿ, ಛಂದಸ್ಸುಗಳಿಗೆ ಒಳಪಟ್ಟಿದೆ. ವೀರೋಚಿತ, ಭಾವಗಾಂಭೀರ್ಯಗಳಲ್ಲದೆ, ಏಕನಿಷ್ಠೆ, ಅನನ್ಯಭಕ್ತಿ ಭಾವದ ಮೂಲಮಂತ್ರವೆನಿಸಿರುವ ಈ ಪದ್ಯದ ರೂಪವನ್ನು ಸುರಪುರ ಅರಸರ ಸಂಸ್ಥಾನದಲ್ಲಿ ಸಮರ್ಥವಾಗಿ ಬಳಸಲಾಗಿದೆ. ಮೊಂಡಗೈ ವೆಂಕಟಪ್ಪನಾಯಕನ ಚಿಕ್ಕಪ್ಪ ವಾಸುದೇವನಾಯಕನು ತನ್ನ ಹರಿಭಕ್ತಿಸಾರ ಸಾಹಿತ್ಯ ರಚನೆಗೆ 'ಮುಂಡಿಗೆ' ರೂಪವನ್ನೇ ಬಳಸಿಕೊಂಡರು.[೨೯] ಹೀಗಾಗಿ ಜನರು ಇಂದಿಗೂ 'ಮುಂಡಿಗೆ' ವಾಸುದೇವನಾಯಕರೆಂದೇ ಕರೆಯುತ್ತಾರೆ.

ಹರಿಯ ದಶಾವತಾರಗಳಾದ ಮತ್ಸ್ಯಾವತಾರ, ಕೂರ್ಮಾವತಾರ, ವರಾಹಾವತಾರ, ನೃಸಿಂಹಾವತಾರ, ವಾಮನಾವತಾರ, ಪರಶುರಾಮಾವತಾರ, ಶ್ರೀರಾಮಾವತಾರ, ಬಲರಾಮ, ಕೃಷ್ಣಾವತಾರ, ಬೌದ್ಧವತಾರ, ಕಲ್ಕಿ ಅವತಾರಗಳನ್ನು ಮುಂಡಗಿಯಲ್ಲಿ ರಚಿಸಿದ್ದಾರೆ. ವಾಸುದೇವನಾಯಕರ ಮುಂಡಿಗೆಯ ಫಲಶ್ರುತಿ ಇಂತಿದೆ :

> ಹರಿಶಬ್ದದಿಂ ಪ್ರಣವೋಚ್ಛಾರಣವು ಜಗಕೆ | ಸಿರಿದೇವಿ ಭೂದೇವಿ ಪಟ್ಟದ
> ರಸಿಯರು | ಸರಸಿಜೋದ್ಭವನು ಮನ್ಮಥನು | ಈ ಇಬ್ಬರಿಂದೆ ಆಗು
> ವದು ಸೃಷ್ಟಿ | ನಿರುತ ಈ ಐದು ಪ್ರಶ್ನೆಯ ಹೊರತು ಉತ್ಪತ್ತಿ |
> ಕರೆದು ತೋರುವರಿಲ್ಲವೆಂದು | ಮುಂಡಿಗಿಲಿದಕೆ | ಸುರರಿಗೆಯು ನರರಿ

ಗೆಯು ದಾನವ ಸಮೂಹಕ್ಕೆ | ಶ್ರೀಕೃಷ್ಣನೇ ಪರಬ್ರಹ್ಮನು ||
ಹರಿಹರ ಬ್ರಹ್ಮನದೇಕಾಕೃತಿಯ ಸ್ತ್ರೋತ್ರಗಳು | ಬರದೋದಿ ಕೇಳುತಿಹ
ಸಜ್ಜನ ಸಮೂಹಕ್ಕೆ | ಕರಿ ತುರಗ ಛತ್ರಚಾಮರ ಪದಾತಿಗಳ ಸಂದೋಹ
ಶಾಶ್ವತ ಪದವಿ | ವರಪುತ್ರ ಪೌತ್ರ ಕಳತ್ರ ಬಾಂಧವರ ಧರಿಯೊಳಾ
ಚಂದ್ರಾರ್ಕ ವೃದ್ಧಿ, ಗುಣಕೀರ್ತಿ ಬಲ | ಸಿರಿಸಹಿತ ಕರುಣದಲಿ ನಾಲ್ಕು
ಹಸ್ತಗಳಿಂದ | ಸುರಪುರದ ಕೃಷ್ಣ ಕೊಡುವನನವರತ ||[೩೦]

ಸುರಪುರ ಅರಸರಲ್ಲಿ ಮುಮ್ಮಡಿ ರಾಘವ ಪಾಮನಾಯಕನ (ಕ್ರಿ.ಶ. ೧೭೫೨-೧೭೭೩) ಕಾಲವನ್ನು ಸುವರ್ಣಯುಗವೆಂದು ಕರೆಯುತ್ತಾರೆ. ಅಲ್ಲದೆ, ಈತನನ್ನು ಸುರಪುರದ ಕೃಷ್ಣದೇವರಾಯನೆಂದು ಕರೆಯುತ್ತಾರೆ. ಕಾರಣ ಭಾರ್ಗವಪುರಾಣದ ವಸ್ತುವಾದ ಆಳ್ವಾರರ ಚರಿತ್ರೆಯನ್ನು ತೆಲುಗುಭಾಷೆಯಲ್ಲಿ ಮೊಟ್ಟಮೊದಲು 'ಆಮುಕ್ತಮಾಲ್ಯದಾ' ಎಂಬ ಹೆಸರಿನಿಂದ ಬರೆದವನು ಅರಸನಾದ ಕೃಷ್ಣದೇವರಾಯನು ಆ ತರುವಾಯ, ಆಳ್ವಾರರ ಕುರಿತಾಗಿಯೇ ಭಾರ್ಗವಪುರಾಣವನ್ನು ಬರೆದವನು ರಾಘವಪಾಮನಾಯಕ.[೩೧] ಸ್ವತಃ ಸಾಹಿತಿಯಾದ ಈತ ಕಾವ್ಯ, ಅಲಂಕಾರಶಾಸ್ತ್ರಗಳನ್ನು ಬಲ್ಲ ಉದ್ದಾಮ ಪಂಡಿತನಾಗಿದ್ದು 'ಭಾರ್ಗವ ಪುರಾಣ'ವೆಂಬ ಬೃಹತ್‌ಕಾವ್ಯವನ್ನು ತೆಲುಗುಭಾಷೆಯಲ್ಲಿ ರಚಿಸಿದನು. ಆ ಕಾಲದ ಪಂಡಿತರ ಈ ಕೃತಿಯ ಬಗ್ಗೆ ಮೆಚ್ಚುಗೆಯನ್ನಿತ್ತರು.

ಭಾರ್ಗವಪುರಾಣವು ಮಹಾನ್ ಭಗವದ್ಭಕ್ತರಾದ ಹನ್ನೆರಡು ಜನ ಆಳ್ವಾರರ ಚರಿತ್ರೆಯನ್ನು ನೀಡುತ್ತದೆ. ಇದರಲ್ಲಿ ವಿಶಿಷ್ಟಾದ್ವೈತ ಸಂಪ್ರದಾಯಕ್ಕನುಸಾರ ಎಂಟು ಆಶ್ವಾಸ(ಅಧ್ಯಾಯ)ಗಳಿವೆ. ಪ್ರಥಮ ಆಶ್ವಾಸ(ಅಧ್ಯಾಯ)ದ ಪ್ರಾರಂಭಕ್ಕೆ ಇಷ್ಟದೇವತೆಯಾದ ಸುರಪುರ ವೇಣುಗೋಪಾಲನನ್ನು ಸ್ತುತಿಸಲಾಗಿದೆ. ಅಲ್ಲದೆ ಷಷ್ಠ್ಯಂತಗಳು, ನಿತ್ಯಸೂರಿಗಳ ಚರ್ಚೆ, ಕಾಸಾರಯೋಗಿ, ಭೂತಯೋಗಿ, ಮಹಾದಾಹ್ವಯರ ಜನನ, ಪುಣ್ಯಕ್ಷೇತ್ರಗಳ ದರ್ಶನ ವಿಷಯಗಳಿವೆ. ವೆಂಕಟಾಚಲ ಹಾಗೂ ಹಸ್ತಗಿರಿಗಳನ್ನು ಸಂದರ್ಶನ ಮಾಡಿ, ವಿವಿಧ ಸೇವೆಗಳನ್ನು ಪೂರೈಸುವುದಲ್ಲದೇ ಶ್ರೀರಂಗದಲ್ಲಿ ವಾಸ ಮಾಡಿ ನಂತರದಲ್ಲಿ ತೀರ್ಥಯಾತ್ರೆಗೆ ತೆರಳುವುದು, ಭಕ್ತಿ-ಸಾರರ ಜನನದೊಂದಿಗೆ ಆತನ ತಪಸ್ಸಿನ ಆಚರಣೆ, ಖನಿಕೃಷ್ಣನ ವೃತ್ತಾಂತಗಳೂ ಇವೆ. ಮೂರನೆಯ ಆಶ್ವಾಸದಲ್ಲಿ ಭಕ್ತಿಸಾರರ ಚರಿತ್ರೆ ಪೂರ್ಣಗೊಂಡಿದೆ. ಶಠಕೋಪರ ಹಾಗೂ ಮಧುರಕವಿಯಾಳ್ವರರುಗಳ ಚರಿತ್ರೆಯನ್ನು ವಿವರಿಸಿದ್ದಾರೆ. ನಾಲ್ಕನೆಯ ಆಶ್ವಾಸದಲ್ಲಿ ಕುಲಶೇಖರ ಆಳ್ವಾರರ ಸಮಗ್ರ ವೃತ್ತಾಂತವಿದೆ. ಐದನೆಯ ಆಶ್ವಾಸದಲ್ಲಿ ಮುನಿವಾಹನ ಹಾಗೂ ವಿಪ್ರನಾರಾಯಣರ ವಿಷಯಗಳಿವೆ.[೩೨]

ಆರನೆಯ ಆಶ್ವಾಸವು, ವಿಷ್ಣುಚಿತ್ತರ ಜನನ, ಪುಷ್ಪಮಾಲಿಕಾ ಕೈಂಕರ್ಯ, ಪಾಂಡ್ಯರಾಜನು ನಿಗದಿಗೊಳಿಸಿದ ಪಂಥವನ್ನು ಗೆದ್ದು ಸನ್ಮಾನಿತನಾಗುವಿಕೆ, ಭೂದೇವಿಯು ತುಲಸೀವನದಲ್ಲಿ ಆವಿರ್ಭವಿಸಿ ವಿಷ್ಣುಚಿತ್ತರಿಗೆ

ಗೋಚರಿಸುವುದು, ಅವರ ಸಾಕುಮಗಳಾಗಿ ಈ ಗೋದಾದೇವಿ ಬೆಳೆದು ಶ್ರೀರಂಗನಾಥನಲ್ಲಿ ಮನಸ್ಸುಳ್ಳವಳಾಗುವಿಕೆ, ತಾನು ಮುಡಿದ ಮಾಲೆಯನ್ನು ಶ್ರೀರಂಗನಾಥನಿಗೆ ಅರ್ಪಿಸುವ ಸಂಗತಿಗಳಿದ್ದರೆ, ಏಳನೆಯ ಆಶ್ವಾಸದಲ್ಲಿ ಶ್ರೀರಂಗನಾಥ ಮತ್ತು ಗೋದಾದೇವಿಯ ವಿವಾಹದೊಂದಿಗೆ ಪರಕಾಲದ ಹುಟ್ಟು, ಕುಮುದವಲ್ಲಿಯ ವೃತ್ತಾಂತ ಸಹಸ್ರಭಾಗವತರ ಭೋಜನಪ್ರಸಂಗ, ಚೋರತನ, ತಿರುಮಂಗೈ ಭಕ್ತನಾಗಿ ಪರಿವರ್ತನೆಯಾದ ವಿಷಯ, ಶ್ರೀರಂಗದೇವಾಲಯದ ಗೋಪುರ, ಸಪ್ತಪ್ರಾಕಾರಗಳನ್ನು ನಿರ್ಮಿಸುವಿಕೆ ಯೋಗಸಮಾಧಿ ತೆಗೆದುಕೊಳ್ಳುವಿಕೆಯ ವಿವರಗಳಿವೆ. ಎಂಟನೆಯ ಆಶ್ವಾಸವೂ ಪೂರ್ತಿಯಾಗಿ ಆಚಾರ್ಯರಾಮಾನುಜರಿಗೆ ಮೀಸಲಾಗಿದೆ. ಕೊನೆಯ ಭಾಗದಲ್ಲಿ ಹರಿಯ ಅರ್ಚಾರವತಾರ ಪ್ರಭಾವ, ಭಾಗವತ ಪೂಜಾಪ್ರಭಾವ ದುಶ್ಶೀಲನಚರಿತ್ರೆ, ಭಗವತ್ ಭಾಗವತ ಸೇವಾಫಲದೊಂದಿಗೆ ಪೂರ್ಣವಾಗುತ್ತದೆ.[೩೩]

ರಾಘವ ಪಾಮನಾಯಕರ ಆಸ್ಥಾನದಲ್ಲಿ ಅನೇಕ ವಿದ್ವಾಂಸರಿದ್ದರು. ಅವರನ್ನು ಆಂಧ್ರಪ್ರದೇಶದ ಬುಕ್ಕಪಟ್ಟಣದಿಂದ ಆಹ್ವಾನಿಸಲಾಗಿತ್ತು. ಆ ಆಸ್ಥಾನಿಕರುಗಳೆಲ್ಲಾ ಅನೇಕ ಕೃತಿಗಳನ್ನು ಬರೆದು ಸುರಪುರ ಸಂಸ್ಥಾನವನ್ನು ಸಾಹಿತ್ಯಿಕವಾಗಿ ಶ್ರೀಮಂತಗೊಳಿಸಿದ್ದಾರೆ. ಇಲ್ಲಿ ಕೇವಲ, ಆ ಕಾಲದ ಪಂಡಿತರು ಹಾಗೂ, ಅವರ ಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ ನೀಡಲಾಗುತ್ತದೆ.

ಸುರಪುರದ ಆಸ್ಥಾನದಲ್ಲಿದ್ದ ಇಮ್ಮಡಿ ವೆಂಕಟಾಚಾರ್ಯರು ಸಂಸ್ಥಾನದ ಪ್ರಥಮ ವಿದ್ವಾಂಸರು. ಇವರ ಆರು ಕೃತಿಗಳು ಇಂತಿವೆ. ಆನಂದ ತಾರಮ್ಯಖಂಡನಂ, ಜನನ್ಮಿಧ್ಯಾತ್ವ ಖಂಡನಂ, ವೇದಾಂತ ದೇಶಿಕ ದಂಡಂ, ವೇದಾಂತದೇಶಿಕ ಅಷ್ಟೋತ್ತರ ಶತನಾಮಸ್ತೋತ್ರಂ ಸಿದ್ಧಾಂತರತ್ನಾವಲಿ, ಸಿದ್ಧಾಂತ ವೈಜಯಂತಿ[೩೪] ಈ ಕೃತಿಗಳು ಸಂಸ್ಕೃತದಲ್ಲಿದ್ದು, ವೇದ, ಪಂಚತಂತ್ರ ಇತ್ಯಾದಿ ವೈವಿಧ್ಯಮಯ ವಿಷಯಗಳನ್ನೊಳಗೊಂಡಿವೆ. ಇನ್ನೋರ್ವ ಪಂಡಿತರು ಅಣ್ಣಯ್ಯದೀಕ್ಷಿತರು. ಇವರಿಗೆ ಇಮ್ಮಡಿ ಅಣ್ಣಯ್ಯಾಚಾರ್ಯರೆಂದು ಕರೆಯುತ್ತಿದ್ದರು. ಇವರ ಕೃತಿಗಳಲ್ಲಿ 'ಹರಿ'ಯ ಮಹಿಮೆಯನ್ನು ಒಳಗೊಂಡ ಸ್ತೋತ್ರಗೀತೆಗಳಾಗಿವೆ. ಅವು ತಿರುಪತಿಯ ಶ್ರೀನಿವಾಸನ ಲೀಲೆಯೊಂದಿಗೆ ಸಮೀಕರಣಗೊಳ್ಳುತ್ತವೆ. ಆ ಕೃತಿಗಳೆಂದರೆ ಆನಂದ ತಾರತಮ್ಯ ಖಂಡನಂ(ಸಾರ) ತತ್ವಗುಣಾದರ್ಶಸಾವ್ಯಾಖ್ಯಾ, ವ್ಯಾವಹಾರಿಕ ಸತ್ಯತ್ವ ಖಂಡನಸಾರ ಅಥವಾ ವ್ಯವಹಾರಿಕ ಸತ್ಯತ್ವ ಖಂಡನಂ, ರಸೋದಾರಭಾಣ, ಶ್ರೀನಿವಾಸಸ್ತುತಿ, ನೃಸಿಂಹ ವಿಂಶತಿ, ಕಾವ್ಯಾಲಂಕಾರಸಂಗ್ರಹ, ಅಭಿನವಕರ್ಣಾಮೃತ.[೩೫]

ಇವರ ಆಸ್ಥಾನದಲ್ಲಿದ್ದ ಶ್ರೀನಿವಾಸಾಚಾರ್ಯರು ಅಭಿನವ ನಿಗಮಾಂತ ದೇಶಿಕನೆಂಬ ಬಿರುದಿಗೆ ಪಾತ್ರರಾದ ಇವರು, ಸುರಪುರಸಂಸ್ಥಾನದ ಸಾಹಿತ್ಯಲೋಕಕ್ಕೆ ಅಪಾರ ಕೃತಿಗಳನ್ನು ನೀಡಿದ್ದಾರೆ. ಅವುಗಳೆಂದರೆ ತತ್ವಮಾರ್ತಾಂಡ, ನಯದ್ಯುಮಣಿ, ಹರಿಗುಣದರ್ಪಣ, ಭೇದದರ್ಪಣ, ದೇವತಾಪ್ರಸಾದ ದರ್ಪಣ,

ಪ್ರತಿತಂತ್ರದರ್ಪಣ, ಪ್ರಣವದರ್ಪಣ, ತತ್ವದರ್ಪಣ, ಜಿಜ್ಞಾಸಾದರ್ಪಣ, ಷಷ್ಠೀದರ್ಪಣ, ಸಾರದರ್ಪಣ, ಗುಣಮೀಮಾಂಸಾ, ಸಿದ್ಧಾಂತಚಿಂತಾಮಣಿ, ಪುಚ್ಛಬ್ರಹ್ಮವಾದ ನಿರಾಕರಣಾನಂದ, ತಾರತಮ್ಯ ಖಂಡನ, ವಿಜಯ ಪರಾಜಯ, ಸಂಗತಿರತ್ನಪ್ರಕಾಶಿಕಾ, ಜ್ಞಾನರತ್ನಪ್ರಕಾಶಿಕಾ, ವಿರೋಧ ವರೂಥಿನಿ ಪ್ರಮಾಥಿನಿ ತಪ್ತ ಮುದ್ರಾ ವಿದ್ರಾವಣ ಪ್ರದ್ರಾವಣ, ಅರುಣಾಧಿಕರಣ ಸರಣಿ ವಿವರಣೆ, ಓಂಕಾರ ವಾದಾರ್ಥ ಅಥವಾ ನಯಮಣಿ ಕಲಿಕಾ, 'ಣ'ತ್ವ ದರ್ಪಣ, ವಿರೋದ ನಿರೋಧ ಅಥವಾ ಭಾಷ್ಯ ಪಾದುಕಾದತ್ತರತ್ನ ಪ್ರದೀಪಿಕಾ, ನೀತಿಶತಕಂ, ಸುಭಾಷಿತಾನಿ, ವ್ಯಾವಹಾರಿತ್ವ ಖಂಡನಂ, ದಾಸ ಪ್ರಕರಣೆ, ಸಿದ್ಧಾಂತ ಚಂದ್ರಿಕಾ, ಆಗಮ ಪ್ರಾಮಾಣ್ಯ ಗಮನಿಕಾ, ಏಕಾದಶೀ ನಿರ್ಣಯ, ಶೃತ ಪ್ರಕಾಶಿಕಾ, ಊರ್ಧ್ವಪುಂಡ್ರ ಪರ್ವವಿದ್ಯಾಂಗ ನಿರ್ಣಯ, ವಾದಾವಳಿ, ಮಾಧ್ವಮತಶತಧೂಷಿಣೀ, ಬ್ರಹ್ಮನಂದೀಯ ಖಂಡನಂ, ಭೇದೆಧಿಕ್ಕಾರನ್ಯಕ್ಕಾರ, ಉಪಸಂಹಾರ ವಿಜಯ ಪರಾಜಯ, ಚತುಃಸೂತ್ರೀ, ತ್ರಯ್ಯಂತ ಘುಂಟಾಪಥದುರುಪದೇಶಧಿಕ್ಕಾರ, ರಹಸ್ಯ ತ್ರಯಸಾರ ಗಾಥಾವ್ಯಾಖ್ಯಾಗ್ರಹಣಭುಕ್ತ ದೀಪಿಕಾ, ಜಯಂತೀನಿರ್ಣಯ.[೩೬] ಈ ಎಲ್ಲಾ ಕೃತಿಗಳು ಸಂಸ್ಕೃತಭಾಷೆಯಲ್ಲಿದ್ದು, ನಾಲ್ಕುವೇದಗಳ ಸಂಕ್ಷಿಪ್ತ ಸಾರದೊಂದಿಗೆ ನ್ಯಾಯ, ನೀತಿ, ತರ್ಕಗಳನ್ನು ವಿಶ್ಲೇಷಿಸಿದ್ದಾರೆ.

ಪಾಮನಾಯಕನ ಕಾಲದ ಇನ್ನಿತರ ಪಂಡಿತರೆಂದರೆ, ಪರವಸ್ತು ವೆಂಕಯ್ಯ ಆಂಧ್ರಭಾಷಾಕವಿ ರಾಮಾನುಜಾಚಾರ್ಯ, ನಂಬುಲಾರ್ಯ (ಚಿತ್ರ ಕವಿತ್ವ) ಉದ್ದಾರ್ ತಿಪ್ಪಣ್ಣ (ಕನ್ನಡ ಕವಿ) ತೋಟಯ್ಯ (ಶೃಂಗಾರ ಶಾಸ್ತ್ರ ಬಲ್ಲ) ವೈಷ್ಣವೋತ್ತಮ ಚಲುವಯ್ಯ, ವಿಷ್ಣು ಭಕ್ತ ಗೋಪ್ಯ, ರಾಜವೈದ್ಯ ಅಂಕಣ್ಣ ಬಾಣಕಾರ, ವೈದ್ಯದೇವಿಕೇರಿ ತಿಮ್ಮಪ್ಪ, ತಿಮ್ಮಣ್ಣಭಟ್ಟ. (ಜ್ಯೋತಿಷಿ) ಸಂಗಾವಿ ತುಕ್ಕಣ್ಣಭಟ್ಟ, ಶೀನಯ್ಯ; ಹಾಗೂ ಸಂಸ್ಥಾನದ ಷಟ್ಪದಿಯಬ್ರಹ್ಮನೆಂದು ಹೆಸರುವಾಸಿಯಾದ 'ಮಹಾಮೂರ್ತಿ' ಎಂಬ ಕವಿ ಸುರಪುರದ ನಾಕಾಪುರಮಠದಲ್ಲಿದ್ದು, 'ಅಷ್ಟಾವರಣತಿಲಕ'ವೆಂಬ ಷಟ್ಪದಿಕಾವ್ಯವನ್ನು ರಚಿಸಿದನು.[೩೭]

ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೪೭-೧೭೫೨)ನ ದಿನಚರಿಯು ಆತನ ದಿನನಿತ್ಯದ ರಾಜಕೀಯ ಕಾರ್ಯಗಳನ್ನು ಒಡ್ಡೋಲಗದ ವಿವರವನ್ನು ನಮಗೆ ಒದಗಿಸುತ್ತದೆ.[೩೮] ಈತನ ಕಾಲದಲ್ಲಿಯೂ ಅನೇಕ ಪಂಡಿತರು ಆಸ್ಥಾನದಲ್ಲಿದ್ದು ಅನೇಕ ಸಂಸ್ಕೃತ, ತೆಲುಗು ಕೃತಿಗಳನ್ನು ರಚಿಸಿದ್ದಾರೆ. ಅವರುಗಳಲ್ಲಿ ಖ್ಯಾತ ಸಂಸ್ಕೃತ ಪಂಡಿತರಿಂದ ಕಿರೀಟ ವೆಂಕಟಾಚಾರ್ಯರು ಒಬ್ಬರು. ಈತನಿಗೆ 'ಕವಿತಾರ್ಕಿಕ ಕಂಠೀರವ', 'ಶ್ಲೇಷಯಮಕಚಕ್ರವರ್ತಿ', ತರ್ಕಾಲಂಕಾರವಾಚಸ್ಪತಿ', 'ಸಕಲಭಾಷಾ ವಿಶೇಷ', 'ಕವಿತಾಧುರಂಧರ', 'ಪ್ರತಿದಿನಪ್ರಬಂಧಪರಮೇಶ್ವರ' ಎಂಬ ಬಿರುದುಗಳಿದ್ದವು.[೩೯] ಈತನ ಕೃತಿಗಳು ಛಂದಸ್ಸಿನ ತಾಳ, ಲಯಗಳಿಂದೊಡಗೂಡಿವೆ.

ಗಜಸೂತ್ರವಾದಾರ್ಥ, ಶೃಂಗಾರ ತರಂಗಿಣಿ ಝುಂಝೂ ಮಾರುತಮ್, ಭಾವಶತಕಂ, ಅಚಲಾತ್ಮಜಾ ಪರಿಣಯಮು, ಸಿದ್ಧಾಂತಚಿಂತಾಮಣಿ, ಅಲಂಕಾರಕೌಸ್ತುಭಃ, ಕೃಷ್ಣಭಾವಶತಕಂ, ಪ್ರಾಮಣ್ಯವಾದ

ಖಂಡನಮ್, ರಸಿಕಮನೋಲ್ಲಾಸಭಾಣಃ, ಶುಕಾಭಿಪತನಂ, ಉಷಾಪರಿಣಯಮ್, ಯತಿರಾಜದಂಡಕಮ್, ಹಯಗ್ರೀವದಂಡಕಮ್, ದಶಾವತಾರ ಸ್ತೋತ್ರಮ್[೪೦] ಗಳಾಗಿವೆ. ಅಲ್ಲದೆ ತೆಲಗು ಭಾಷೆಯಲ್ಲಿ ಬರೆದ ಇವರ ಮಂಗಲ ಪದ್ಯಗಳು ಸುರಪುರ ಸಂಸ್ಥಾನದ ಕಲ್ಯಾಣಕಾರ್ಯದಲ್ಲಿ ಹಾಡಲ್ಪಡುತ್ತಿದ್ದವು. ಅವುಗಳಲ್ಲಿ ಬಹುಮುಖ್ಯವಾದ

ನೀಸೇವ ಪಡುಡ್ನೈನ ನಾಸವುಡಮಿತ
ಸಂತೋಷಮುತೋಚೆಂದಿ ಭಾಸುರ ಪದವಿ
ನೀ ಸಾಟಿಲೇಶನುಚುನೇ ಸಾರಿ ಬಲ್ಕಿದ ನೀಕದಯಲೇದ?
ನೀ ಭಕ್ತಜನಮುಲಲೋನ ನೇಸೊಕ ದಾಸುಡುನು ಕಾದ ?
ನೀ ಪಾದಸೇವಕು ವ್ರೋವು ಕುಂಡುಟ ನೀ ಕುಮರಿಯಾದ ?
ಓತಲ್ಲಿ ವಿನಮಣಿ ವಾಸಿಗಾನಮು ದಿನಮು ಪಲುಮರ
ವೇಸರಕ ವೇಂಕಟದಾಸನೇಲಿನ ಲೋಕಚನ ನಿಕಿ... ಮೀರು[೪೧]

ಬುಚ್ಚಿ ವೆಂಕಟಾಚಾರ್ಯ, ಸುರಪುರ ಸಂಸ್ಥಾನದಲ್ಲಿ ೧೮ ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ. ಈತನ ಕೃತಿಗಳೆಂದರೆ ವಿಷ್ಣುಸಪ್ತವಿಭಕ್ತಿಸ್ತೋತ್ರ, ವೇದಾಂತಕಾರಿಕಾವಲಿ, ಮತ್ತು ಇಂದ್ವಷ್ಟೋತ್ತರ ಶತನಾಮಸ್ತೋತ್ರಂಗಳಾಗಿವೆ.

ಪುರುಷಕಾರಿ ಕೇಶವಯ್ಯ ಸುರಪುರ ಸಂಸ್ಥಾನದ ತೆಲುಗುಕವಿಗಳಲ್ಲಿ ವಿಶಿಷ್ಟ ಹೆಸರು ಪಡೆದಿದ್ದಾನೆ. ಈತ ಕನ್ನಡದಲ್ಲಿ ವೆಂಕಟೇಶಮಹಾತ್ಮೆ ಹಾಗೂ ತೆಲುಗಿನಲ್ಲಿ ದಶರಥನಂದನಚರಿತ್ರೆಯನ್ನು ರಚಿಸಿದ್ದಾನೆ.[೪೨] ಈತ ರತ್ನತ್ರಯರಂತೆ ಧಾರ್ಮಿಕ ಹಾಗೂ ಲೌಕಿಕಮಾರ್ಗವನ್ನು ಅನುಸರಿಸಿದವನು.

ಮುಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೮೧೮-೧೮೨೭)ನು ಶೂರನಾಗಿದ್ದಂತೆ ಸಾಹತ್ಯಪ್ರೇಮಿಯೂ ಆಗಿದ್ದ. ಈತನ ರಾಣಿಯಾದ ರಂಗಮ್ಮಳು ಒಳ್ಳೆಯ ಕವಿಯತ್ರಿಯಾಗಿದ್ದಳು.[೪೩] ಈತನ ಕಾಲದಲ್ಲಿ ವಿದ್ವಜ್ಜನರ ಸ್ಪರ್ಧೆ ನಡೆಯುತ್ತದೆ. ಹರಪನಹಳ್ಳಿಯ ಅರಸ ಸುರಪುರದ ಅರಸರ ಆಸ್ಥಾನದ ಪಂಡಿತರನ್ನು ಪರೀಕ್ಷೆಮಾಡಲು ಅವರ ಪ್ರತಿಭೆಯನ್ನು ಅಳೆಯಲು, ತನ್ನ ಆಸ್ಥಾನದ ಹಾಗೂ ತಂಜಾವೂರಿನ ಪಂಡಿತರನ್ನು ಕರೆದುಕೊಂಡು ಸುರಪುರಕ್ಕೆ ಬರುವುದಾಗಿ ಮುಮ್ಮಡಿ ವೆಂಕಟಪ್ಪನಾಯಕನಿಗೆ ಪತ್ರ ಬರೆಯುತ್ತಾನೆ. ಆಗ ವೆಂಕಟಪ್ಪನಾಯಕನು ಸುರಪುರದ ಸಿದ್ದನತೋಟದಲ್ಲಿ ಸ್ಪರ್ಧೆಯ ಏರ್ಪಾಡು ಮಾಡುತ್ತಾನೆ. ಹರಪನಹಳ್ಳಿಯವರು ಆಗಮಿಸುತ್ತಾರೆ. ಸುರಪುರ ಆಸ್ಥಾನದ ಸರ್ವ ಕಲಾವಿದರು ಭಾಗವಹಿಸುತ್ತಾರೆ. ಸ್ಪರ್ಧೆಯು ಮೂರುತಿಂಗಳುಗಳವರೆಗೆ ನಡೆಯುತ್ತದೆ. ಕೊನೆಗೆ ಸುರಪುರದ ಪಂಡಿತರಿಗೆ ಜಯ ಲಭಿಸುತ್ತದೆ. ಸೋತ ಹರಪನಹಳ್ಳಿಯ ಪಂಡಿತರಿಗೆ ಸುರಪುರದ ವೆಂಕಟಪ್ಪನಾಯಕ ೩.೦೦,೦೦೦

ರೂ.ಗಳನ್ನು ವೆಚ್ಚ ಮಾಡಿದನಲ್ಲದೆ, ಎಲ್ಲವೂ ಮುಗಿದ ನಂತರ ಪರಸ್ಪರ ಸತ್ಕಾರವನ್ನು ಮಾಡಿ[೪೪] ಕಳುಹಿಸಿದನು :

ಲೋಕಯ್ಯನ ಗ್ರಂಥದಲ್ಲಿ ಇದರ ಕುರಿತಾದ ವಿವರ ಇಂತಿದೆ.

ಬೆಳೆಸಿದನು ಕವಿಗಳನ ಸುರಪುರ
ದೊಳಗೆ ವರಕವಿಗಳು ನುತಿಸಲಿಕೆ
ಲಲಿತ ಪಂಡಿತ ಗಾಯಕರ ದೈವಜ್ಞ ವೈದ್ಯರನ|
ವಿಲಸಿತ ಸುಬೆದಾರರನ ನಿ
ರ್ಮಲ ರಸಜ್ಞರ ಕಾರ್ಯರಚನ ರನಾ
ಸಲೆ ಭಟರ ಚಿತ್ರಗಾರರ ಅತಿಧನಿಕರನಮಾಡಿ ||
ಗಗನ ಸುರಪುರಕನ್ನಲೇಸೀ
ಜಗದ ಸುರಪುರಯೆಂದು ಸರ್ವರು
ಅಗಣಿತದಿ ದೇಶದೇಶಕೆ ಹೆಸರು ಪಡೆದಾನೂ[೪೫]

ರಾಜಾ ಕೃಷ್ಣಪ್ಪನಾಯಕನೂ ಅನೇಕ ವಿದ್ವಾಂಸರಿಗೆ ಆಶ್ರಯ ನೀಡಿ ಸಾಹಿತ್ಯ ರಚನೆಗೆ ಅವಕಾಶ ಮಾಡಿಕೊಡುತ್ತಾನೆ. ಆಗ ಕೊಂಡಾಪುರದ ಪ್ರಸಿದ್ಧ ಕವಿಗಳಾದ ವರದಾಚಾರ್ಯ ಮತ್ತು ಹಯಗ್ರೀವಾ ಚಾರ್ಯರು ಈತನ ಆಸ್ಥಾನಕ್ಕೆ ಆಗಮಿಸುತ್ತಾರೆ. ಹಯಗ್ರೀವಾಚಾರ್ಯರು 'ಹಯಗ್ರೀವಚಂದ್ರಿಕಾ' ಎಂಬ ವ್ಯಾಕರಣಗ್ರಂಥವನ್ನು ರಚಿಸುತ್ತಾನೆ. ಅಷ್ಟಾವದಾನಿ ವೆಂಕಯ್ಯಶಾಸ್ತ್ರಿಯವರು 'ಯುಧಿಷ್ಠರಾಶ್ವಮೇಧ' ಪ್ರೌಢ ಚಂಪೂಗ್ರಂಥವನ್ನು, ಹಾಗೂ 'ಆರ್ಯರಾಮಾಯಣ'ವನ್ನು ರಚಿಸುತ್ತಾರೆ. ಮಹಾಭಾರತ ಮತ್ತು ರಾಮಾಯಣವನ್ನು ಸಂಸ್ಥಾನದ ಜನತೆಗೆ ಹೊಸ ಬಗೆಯಲ್ಲಿ ನೀಡಿದ ಮೊದಲಿಗರಾಗುತ್ತಾರೆ. ಇವರ ಮಗ ನರಸಿಂಹಶಾಸ್ತ್ರಿ 'ಶಂಕರಗುರುಸ್ತೋತ್ರ' ಹಾಗೂ 'ದ್ವಾತ್ರಿಂಶದ್ವೀಪಪಂಚನ'ವೆಂಬ ಸಂಸ್ಕೃತ ಕೃತಿಗಳನ್ನು[೪೬] ರಚಿಸಿದ್ದಾನೆ.

ಸುರಪುರದ ಅರಸರ ಆಸ್ಥಾನದಲ್ಲಿದ್ದ ಹೆಬ್ಬಾಳಶಾಸ್ತ್ರಿಗಳಿಂದ ಕನ್ನಡ ಮತ್ತು ಮರಾಠಿ ಪಂಚಾಂಗಗಳು ಹೊರನಾಡಿನಲ್ಲಿ ಖ್ಯಾತಿಯನ್ನು ಪಡೆದವು. ಸುರಪು ಸಂಸ್ಥಾನ ಸ್ಥಾಪನೆಯ ಕಾಲದಿಂದಲೂ ಸುರಪುರ ಪಂಚಾಂಗವು ಪ್ರಚಲಿತದಲ್ಲಿದೆ. ಹೀಗೆ ಸುರಪುರ ಸಂಸ್ಥಾನದಲ್ಲಿ ಸಾಹಿತ್ಯ ಚಟುವಟಿಕೆಗಳು ವಿಪುಲವಾಗಿ ಅವಿರತವಾಗಿ ನಡೆದುಕೊಂಡು ಬಂದುವಲ್ಲದೆ ಇಲ್ಲಿಯ ಅರಸರು ಸಂಸ್ಕೃತ, ತೆಲುಗು, ಕನ್ನಡ, ಉರ್ದು ಮುಂತಾದ ಭಾಷೆಗಳನ್ನು ಪೋಷಿಸಿದರಲ್ಲದೆ, ಅವುಗಳ ಪ್ರವರ್ಧಮಾನಕ್ಕೆ ಕಾರಣರಾದರು. ಆ ಕಾಲದ ಸುರಪುರ ಸಂಸ್ಥಾನದ ಪಂಡಿತರು ಸಂಸ್ಕೃತ, ತೆಲುಗು ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಇವರು ವಿಶೇಷವಾಗಿ ಶಾಸ್ತ್ರಸಾಹಿತ್ಯ ಹಾಗೂ ಕಾವ್ಯಸಾಹಿತ್ಯ ಪ್ರಕಾರಗಳಿಗೆ ಹೆಚ್ಚಿನ ಒತ್ತನ್ನು ನೀಡಿದ್ದುದು ಕಂಡುಬರುತ್ತದೆ.

ಸುರಪುರ ಅರಸರ ಶೌರ್ಯ, ಧೈರ್ಯ, ರಣತಂತ್ರ, ದೇಶಪ್ರೇಮ, ತ್ಯಾಗ, ಬಲಿದಾನಗಳು, ಸಾಮಾನ್ಯ ಜನತೆಯ ಮೇಲೆ ಅಚ್ಚೊತ್ತಿದಂತೆ ಪ್ರಭಾವ ಬೀರಿದ ಪರಿಣಾಮವಾಗಿ ಈ ಕುರಿತು ಅಪಾರ ಜನಪದ ಸಾಹಿತ್ಯ ನಿರ್ಮಾಣವಾಗಿದೆ. ಜನಸಾಮಾನ್ಯರು ಕಾವ್ಯಕಟ್ಟಿ ಎದೆ ತುಂಬಿ ಹಾಡಿದ ರಸಭರಿತ ಹಾಡುಗಳು ಯಾವ ವರಕವಿಗೂ ಕಡಿಮೆಯಿಲ್ಲದ ಮಟ್ಟದಲ್ಲಿವೆ. ಇಂಥ ಹಾಡುಗಳನ್ನು ಸುರಪುರ ಸಂಸ್ಥಾನದಲ್ಲಿ ಕಟ್ಟಲ್ಪಟ್ಟವು ಹಾಡಲ್ಪಟ್ಟವು. ಅವು ಸುರಪುರದ ಲಾವಣಿಗಳೆಂದೇ ಹೆಸರಾಗಿವೆ.

ದುಂದುಮಿಪದಕ್ಕೆ ದುಂದುಭಿ, ದುಂದುಮೆಪದವೆಂತಲೂ ಕರೆಯುತ್ತಾರೆ. ಈ ದುಂದುಮೆ ಪದಗಳನ್ನು ಹಾಡುವುದು ಹೋಳಿಹಬ್ಬದ ಸಂದರ್ಭದಲ್ಲಿ ಇದನ್ನು ವಾದ್ಯವೃಂದದೊಂದಿಗೆ ಹಾಡುವ ರೂಢಿ ನಮ್ಮ ನಾಡಿನಲ್ಲಿ ಶಿವಶರಣರಕಾಲದಿಂದ ಪ್ರಚಲಿತದಲ್ಲಿದೆ ಎಂಬುದು ವಿದ್ವಾಂಸರ ಅಭಿಮತ.[೪೭] ಅರಸರ ಪರಿಸರದಲ್ಲಿ ದುಂದುಮೆಗಳನ್ನು ಹಾಡುತ್ತಿದ್ದರು. ಅವಸರ ಶೃಂಗಾರಪ್ರಿಯತೆ, ಕಲಾಪ್ರಿಯತೆ ಇದಕ್ಕೆ ಕಾರಣ. ಸುರಪುರದ ದುಂದುಮೆಗಳು, ಕಿತ್ತೂರಿನ ದೊರೆ ಮಲ್ಲಸರ್ಜನದುಂದುಮೆಗಳು ಪ್ರಸಿದ್ಧವಾಗಿವೆ. ಕಾವ್ಯಕ್ಷೇತ್ರದಲ್ಲಿ ಸುರಪುರದ ದುಂದುಮೆಗೆ ವಿಶಿಷ್ಟ ಸ್ಥಾನಿವಿದೆ. ಇಂದಿಗೂ ಸುರಪುರದಲ್ಲಿ ದುಂದುಮಿ ಹಾಡುಗಾರಿಕೆ ಜೀವಂತವಾಗಿದೆ. ಇದರ ಕರ್ತೃ ಅನಾಮಧೇಯ. ಇದು ಸುರಪುರದ ರಾಜಕೀಯ ಆಗುಹೋಗುಗಳನ್ನು ಅಲ್ಲಿಯ ಸಾಂಸ್ಕೃತಿಕ ಬದುಕನ್ನು ವಿವರಿಸುತ್ತದೆ. ಸುರಪುರದ ಡೊಣ್ಣಿಗೇರಿಯವರು, ಬೇಡರು, ಮ್ಯಾದಾರರು, ಹರಿಜನರು, ಬೋವಿಯವರು ಈ ಹಾಡುಗಳನ್ನು ಹಾಡುವಲ್ಲಿ ನಿಷ್ಣಾತರು. ಸುರಪುರದಲ್ಲಿ ೧೪ ಕೇರಿಯ ಓಣಿಗಳಿವೆ. ಈ ಓಣಿಯ ಜನ ಹೋಳಿ ಹುಣ್ಣಿಮೆಯ ಸಂದರ್ಭದಲ್ಲಿ ಕಾಮನನ್ನು ಸುಟ್ಟ ಜಾಗದಲ್ಲಿ ಪ್ರತಿಯೊಂದು ಓಣಿಯ ಹಿರಿಯ-ಕಿರಿಯರು ಇದರಲ್ಲಿ ಭಾಗವಹಿಸುತ್ತಿದ್ದರು. ಎಲ್ಲರೂ ಹಾಡುಗಳನ್ನು ಹಾಡುತ್ತಾ, ಕಾಮನ ಉರಿಯನ್ನು ಸುತ್ತುತ್ತಿದ್ದರು. ಸುಮಾರು ರಾತ್ರಿ ೧ ಗಂಟೆಯವರೆಗೂ ಇದು ನಡೆಯುತ್ತಿತ್ತು. ಅರಸರು ಕಲಾವಂತರಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಇಂದಿಗೂ ಈ ಸಂಪ್ರದಾಯ ಮುಂದುವರೆದಿದೆ.

ಸುರಪುರದ ಅರಸ ರಾಜಾ ಕೃಷ್ಣಪ್ಪನಾಯಕ(ಕ್ರಿ.ಶ. ೧೮೨೭-೧೮೪೩)ನು ರಸಿಕ, ಶೃಂಗಾರಪ್ರಿಯ ಹಾಗೂ ಕಲಾಪ್ರಿಯನಾಗಿದ್ದ, ದಿನಗಟ್ಟಲೆ ಅನೇಕ ದುಂದುಮೆಗಳನ್ನು ಸ್ವತಃ ಹಾಡುತ್ತಿದ್ದನಂತೆ.[೪೮] ಹೋಳಿ ಹಬ್ಬದಂದು ಸುರಪುರದ ಅರಮನೆಯ ಆವರಣದಲ್ಲಿ ಇಂದಿಗೂ ಸುಸ್ಥಿತಿಯಲ್ಲಿದ್ದ ಓಕುಳಿಹೊಂಡದಲ್ಲಿ ಬಣ್ಣ ತುಂಬಿರಲಾಗುತ್ತಿತ್ತು. ಅರಸ ಪರಿವಾರ, ಬಂಧು, ಬಳಗ ಪಾತರದ ಸ್ತ್ರೀ ಸಮೂಹದೊಂದಿಗೆ ಹೋಳಿಯಾಡುತ್ತ ಸಂಭ್ರಮಿಸುತ್ತಿದ್ದನು. ನಂತರ ಅರಸನ ಕುರಿತಾಗಿ ದುಂದುಮಿಪದ ಕಟ್ಟಿ ಅಲ್ಲಿಯ ಜನ ಹಾಡತೊಡಗಿದರು.

ಕ್ರಿ.ಶ. ೧೮೫೭ರಲ್ಲಿ ಉತ್ತರಭಾರತದಲ್ಲಿ ಸ್ವಾತಂತ್ರ್ಯದ ಕಿಡಿ ಹೊತ್ತಿದಾಗ ಸಗರನಾಡಿನ ಸುರಪುರ ತನ್ನ ವೀರೋಚಿತ ಪರಂಪರೆಗನುಗುಣವಾಗಿ ಅಳಿಲುಸೇವೆ ಸಲ್ಲಿಸಿತು. ೨೪ ವರ್ಷದ ತರುಣ ನಾಲ್ವಡಿ

ವೆಂಕಟಪ್ಪನಾಯಕ ತನ್ನ ಜನರ ಕುಟಿಲತಂತ್ರದ ದಳ್ಳುರಿಯಲ್ಲಿ ಸುಟ್ಟು ಭಸ್ಮವಾದುದು ಇತಿಹಾಸ ಪ್ರಸಿದ್ಧ. ಇದರ ಕುರಿತಾದ ಸುರಪುರ ನಾಲ್ವಡಿ ವೆಂಕಟಪ್ಪನಾಯಕನ ದುಂದುಮೆಯ ಹಾಡಿನ ನುಡಿಗಳನ್ನು ನೋಡಬಹುದು :

ಕೇಮಲಸಾಹೇಬ ಸುರಪುರಕ ಬಂದು
ಬಾವಾನಭಾವಿಯ ಸ್ಥಳದಲ್ಲಿ ಇಳಿದು
ಬುದ್ಧಿವಂತರನ್ನೆಲ್ಲ ಬಳಿಯಲ್ಲಿ ಕರೆದು
ನಾನಾ ತರದ ವಿದ್ಯಾ ಮಾಡಿದರು ಪಂದು[೪೯]

ಹೀಗೆ ಕೇಮಲಸಾಹೇಬ ಸುರಪುರದ ಸೈನ್ಯದ ಹಾಗೂ ಆಡಳಿತದ ಅಧಿಕಾರಿಗಳನ್ನು ತನ್ನೆಡೆಗೆ ಸೆಳೆದುಕೊಂಡನು.

ಆನೆ ಕುದುರಿ ಒಂಟಿ ಹರಾಜು ಮಾಡಿದರು
ಮಿಗಿಲಾದ ಬಂಗಾರ ವಸ್ತು ನೋಡಿದರು
ಚೆಲುವಾದ ಸಾಮಾನು ಒಂಟಿ ಮ್ಯಾಲೇರಿದರು
ಕೇಮಲಸಾಹೇಬನ ಕವಲ ಸಾರಿದರು.[೫೦]

ಹೀಗೆ ಸುರಪುರದ ಸಂಪತ್ತನ್ನು ಲೂಟಿ ಮಾಡಿದರು. ನಾಲ್ವಡಿ ವೆಂಕಟಪ್ಪನಾಯಕ ಸುರಪುರದಿಂದ ಪರಾರಿಯಾಗುತ್ತಾನೆ. ನಿಜಾಮರು ಆತನನ್ನು ಬಂಧಿಸುತ್ತಾರೆ. ವಿಚಾರಣೆ ಮಾಡುತ್ತಾರೆ. ಆಗ ನಾಲ್ವಡಿ ವೆಂಕಟಪ್ಪನಾಯಕ :

ಮುಂದಾಗಿ ನಾನು ಲಡಾಯಿ ಮಾಡಿಲ್ಲ
ಕಾಟಗ ಮಂದಿs ಮಾತು ನಾನು ಕೇಳಲಿಲ್ಲ
ಲಡಾಯಿಗೆ ಅಪ್ಪಣೆ ನಾನು ಕೊಟ್ಟಿಲ್ಲ
ಆದಂತ ಸುದ್ದಿಯ ಭೀಮರಾಯ ಬಲ್ಲ[೫೧]

ಎಂದು ಉತ್ತರಿಸುತ್ತಾನೆ. ಕೊನೆಗೆ ನಾಲ್ವಡಿ ವೆಂಕಟಪ್ಪನಾಯಕನನ್ನು ಮೋಸದಿಂದ ಕೊಲ್ಲುತ್ತಾರೆ.

ವೆಂಕಟಪ್ಪನಾಯಕ 'ಮೃಗಜಾತಿಶೂರ'
ಕೇಳೆ ಇದ್ದಿಲ್ಲ ಇಂಥ ಸರದಾರ
ಒದಗಿ ಬಂದಿತು ಬೇಗ ಕಂಪನಿ ಸರಕಾರ
ಸ್ಥಿರವಾಗಿ ಇರಲಿಲ್ಲ ಮುಂದಿನ ವಿಸ್ತಾರ.[೫೨]

ಹೀಗೆ ದುಂದುಮಿ ಹಾಡು ನಾಲ್ವಡಿ ವೆಂಕಟಪ್ಪನಾಯಕನ ವ್ಯಕ್ತಿತ್ವವನ್ನು ಗುಣಗಾನ ಮಾಡುತ್ತದೆ.

ಸುರಪುರದ ಅರಸ ರಾಜಾ ನಾಲ್ವಡಿ ವೆಂಕಟಪ್ಪನಾಯಕನು ಬ್ರಿಟಿಷರ ವಿರುದ್ಧ ಒಳಸಂಚನ್ನು ಹೂಡುತ್ತಿರುವ ಸಂಗತಿ ಬ್ರಿಟೀಷರಿಗೆ ತಲುಪಿದಾಗ, ಬ್ರಿಟಿಷರು ೨೪ನೇ ಡಿಸೆಂಬರ್ ೧೮೫೭ ರಂದು ರೆಸಿಡೆಂಟ್‌ನ ಆದೇಶದ ಪ್ರಕಾರ ಕೆಂಬೆಲ್ಲ್‌ನು ಸುರಪುರದ ಅರಸನ ವಿಚಾರಣೆಗೆ ಡಿಸೆಂಬರ್ ೨೪ರಂದು ಸುರಪುರಕ್ಕೆ ಬರುವನು. ಆಗ ಕೆಂಬೆಲ್ಲ್ ತನ್ನ ವರದಿಯನ್ನು ಬ್ರಿಟಿಷ್ ಸರಕಾರಕ್ಕೆ ಸಲ್ಲಿಸಿದನು. ನಂತರದಲ್ಲಿ ಬ್ರಿಟಿಷರು ಸುರಪುರದ ಮೇಲೆ ದಾಳಿ ಮಾಡುತ್ತಾರೆ. ಆ ದಾಳಿಯನ್ನು ಕುರಿತು ಲಾವಣಿಕಾರರು ಹಾಡಿರುವುದು ಹೀಗೆ :

ಏನು ಶಿಸ್ತಿಲಿತ್ತು ಸುರಪೂರ | ಎಲ್ಲೆಲ್ಲಿ ಇಲ್ಲದರಬಾರ
ಕ್ಯಾಮೆಲಸಾಯಬ ಚತೂರ | ಮಾಡಿದ ಫಿತೂರ
ವೆಂಕಟಪ್ಪನಾಯ್ಕ ರಣಶೂರ | ರಾಜಾಧಿರಾಜ ಗಂಭೀರ
ಯಾರ‍್ಯಾರು ಇಲ್ಲ ಆತಗೆದುರ | ದೇಶಕ್ಕೆ ಬಾಳ ಮಂಜೂರ[೫೩]

ನಂತರ ಬ್ರಿಟಿಷರು ಸುರಪುರದ ಮೇಲೆ ದಾಳಿ ಮಾಡಿದುದು ಹೀಗೆ

ಸಾವಿರಮಂದಿ ಸೋಲ್ಜರ | ಬೇಕೆಂಥ ಮಂದಿ ಐನೂರ
ಮೈಸೂರ ಕುದುರೆ ಮುನ್ನೂರ | ತೋಪು ತಯ್ಯಾರ[೫೪]

ಬ್ರಿಟಿಷರು ಮೋಸದಿಂದ ಮಾಡಿದ ದಾಳಿಗೆ ತತ್ತರಿಸಿ ಸುರಪುರ ತೊರೆದು ಹೊರಟ ನಾಲ್ವಡಿ ವೆಂಕಟಪ್ಪ ನಾಯಕ

ಎರಡು ದಿವಸಕ ಹೊಂಟನು ಶಹರ | ಧೋರಿ ತಂದ ಕಣ್ಣೀರ ನೀರ
ಎರವಾಯಿತೆನಗೆ ಸುರಪೂರ | ದುಕ್ಕಬಲು ಘೋರಂ[೫೫]

ಈ ರೀತಿ ವ್ಯಥೆ ಪಡುತ್ತಾನೆ.

ನಾಲ್ವಡಿ ವೆಂಕಟಪ್ಪನಾಯಕನನ್ನು ಬ್ರಿಟಿಷರು ಮೋಸದಿಂದ ಬಂಧಿಸಿದಾಗ, ಆತನ ರಾಣಿಯ ಕುರಿತಾಗಿ ಲಾವಣಿ ಈ ರೀತಿ ಹೇಳುತ್ತದೆ.

ನಾನ್ಹೆಂಗ ಇರಲಿ ಸಣ್ಣಾಕಿ | ಅರಮನೆವಳಗ ಒಬ್ಬಾಕಿ
ದೇವರಗಿ ಮಾಡತಾಳ ಹರಕಿ | ಧೋರೆಯ ನವನಾಯ್ಕಿ[೫೬]

ಹೀಗೆ ಲಾವಣಿ ಮುಂದುವರೆಯುತ್ತದೆ.

ಹೀಗೆ ಸುರಪುರದ ದುಂದುಮಿ ಮತ್ತು ಲಾವಣಿಕಾರರು ಯಾವ ಮಹಾಕವಿಗಳಿಗೂ ಕಡಿಮೆಯಿಲ್ಲದಂತೆ ರಸವತ್ತಾಗಿ, ಸತ್ವಶಾಲಿಯಾಗಿ ಸುರಪುರ ನಾಯಕ ಅರಸರ ಸಾಹಸ, ದೇಶಪ್ರೇಮ, ತ್ಯಾಗಗಳನ್ನು ಚಿತ್ರಿಸಿದ್ದಾರೆ. ನಾಯಕರು ಸಮರಕುತೂಹಲಿಗಳಾಗಿದ್ದ ಸಂಗತಿಯನ್ನು ಹಾಡುಗಳಲ್ಲಿ ಮನೋಜ್ಞಾನವಾಗಿ ಚಿತ್ರಿಸಲಾಗಿದೆ.

ಗುಡಗುಂಟಿ ಅರಸರ ಆಸ್ಥಾನದಲ್ಲಿ ಜ್ಯೋತಿಷಿ, ಪುರಾಣಿಕ, ವಿದ್ವಾಂಸರಿಗೆ, ಕಲಾವಿದರಿಗೆ ರಾಜಾಶ್ರಯ ವಿತ್ತು. ಶ್ರೀರಾಮಾಚಾರ್ಯ ಜೋಶಿ ಹಾಗೂ ಕಂಠೀರವ ದೇಶಪಾಂಡೆಯವರೆಂಬ ವಿದ್ವಾಂಸರಿದ್ದರು.[೫೭] ಇವರ ಕಾಲದಲ್ಲಿ ರಚನೆಯಾದ ಯಾವುದೇ ಕೃತಿಗಳ ಬಗ್ಗೆ ಮಾಹಿತಿ ಇಲ್ಲ. ಆದರೆ ಅರಸರಲ್ಲಿ ಪ್ರಸಿದ್ಧ ಅರಸನಾದ ತಿಪ್ಪರಾಜನ ರಾಜವೈಭವ, ದೈವಭಕ್ತಿ, ದರಬಾರಿನ ಸಡಗರ ಸಂಭ್ರಮವನ್ನು ಕಣ್ಣಿಗೆ ಕಟ್ಟುವಂತೆ ಡೊಳ್ಳಿನಹಾಡೊಂದು ವಿವರಿಸುತ್ತದೆ :

ಗುಡಗುಂಟಿ ಸಂಸ್ಥಾನದೊಳಗ ತಿಪ್ಪರಾಜರಿದ್ದಾರೋ
ಬೆಳಗ ಮುಂಜಾನೆ ಎದ್ದಾರೋ, ಜಾಮಜಳಕ ಮಾಡ್ಯಾರೋ
ನಾಲ್ಕು ಅಗಸಿ ಸೈನಿಕರನ್ನ ರಾಜವಾಡೆಗೆ ಕರಿಸ್ಯಾರೋ
ನಾಲ್ಕು ಅಗಸಿ ಸೈನಿಕರು ರಾಜವಾಡೆಗೆ ಬಂದಾರೋ
ರಾಜವಾಡೆಗೆ ಬಂದಾರೋ, ಸಲಾಮು ಹೊಡೆದು ನಿಂತಾರೋ

ಹೀಗೆ ನ್ಯಾಯ ತೀರ್ಮಾನವನ್ನು ಅರಸರು ಮಾಡುತ್ತಿದ್ದರು. ಇವರ ಉಡುಗೆ ತೊಡುಗೆಯ ಕುರಿತಾಗಿ

ತಿಪ್ಪರಾಜರು ಮೂವತ್ತು ಮೊಳದ ರುಂಬಾಲು ಸುತ್ತ್ಯಾರೋ
ಮೋಡಿ ಹೊಡೆದು ಸುತ್ತ್ಯಾರೋ, ಶಿರಪೇಚ ಇಟ್ಟಾರೋ
ಕುದುರೆಗೆ ಜೀನ ಬಿಗದಾರೋ, ಕುದುರೆ ಮ್ಯಾಗ ಕುಂತಾರೋ,
ಚೋಪದಾರರು ಬಂದಾರೋ, ಬೆಳ್ಳಿ ಬೆತ್ತ ಹಿಡಿದಾರೋ
ರಾಜವಾಡೆ ಬಿಟ್ಟಾರೋ, ಅಮರಯ್ಯನ ಕಡೆ ಹೊಂಟಾರೋ

ತಿಪ್ಪರಾಜರು ಹಿಂದಂಡು, ಮುಂದಂಡಿನ್ಯಾಗ ಹೊಂಟಾರೋ
ಅಮರಯ್ಯನಾಕ ಹೋಗ್ಯಾರೋ, ದ್ವಾರಬಾಗಿಲಿಗಿಳಿದಾರೋ
ಹೊಂಡದ ಕಡೆ ನಡೆದಾರೋ, ಹೊಂಡದಾಗ ಮುಳಗಿ ಎದ್ದಾರೋ
ಅಮರಯ್ಯನ ಗುಡಿ ಪ್ರದಕ್ಷಿಣೆ ಹಾಕ್ಯಾರೋ, ದರುಶನಕ ಬಂದಾರೋ
ಕಾಯಿ ಹೊಡೆಸ್ಯಾರೋ, ಅಮರಯ್ಯನ ದರುಶನ ಪಡೆದಾರೋ

ತೇರಿನ ಕಡೆ ಹೊಂಟಾರೋ, ಕೈಯ್ಯ ಮುಗದಾರೋ
ತೇರು ಸಾಗಿಸ್ಯಾರೋ, ಕಾಯಿ ಹಣ್ಣು ತೂರ್ಯಾರೋ
ಚಪ್ಪಳೆ ತಟ್ಟ್ಯಾರೋ, ಕಡೇ ಬಸವಾಗ ಎಳಿಸ್ಯಾರೋ
ಪೂಜೆ ಸಲ್ಲಿಸ್ಯಾರೋ, ತೇರು ಹೊಳ್ಳಿ ಸಾಗಿಸ್ಯಾರೋ
ಹೊಳ್ಳಿ ನೋಡ್ಯಾರೋ, ತೇರಿಗೆ ಕೈಯ್ಯ ಮುಗಿದಾರೋ

ಕುದುರೆಮ್ಯಾಗ ಕುಂತಾರೋ, ಗುಡಗುಂಟಿ ದಾರಿ ಹಿಡಿದಾರೋ
ನಡುದಂಡಿನ್ಯಾಗ ಬಂದಾರೋ, ರಾಜವಾಡಿ ತಲುಪ್ಯಾರೋ
ಅಮ್ಮ ಬಸ್ಸಮ್ಮಾಜಿ ಬಂದಾರೋ, ಕಳಸ ತಂದಾರೋ
ಕಳಸ ತಂದಾರೋ, ತಿಪ್ಪರಾಜಗ ದೃಷ್ಟಿ ತೆಗೆದಾರೋ
ದೃಷ್ಟಿತೆಗೆದಾರೋ, ರಾಜವಾಡೆಗೆ ಬರಿಸ್ಯಾರೋ[೫೮]

ಗುಡಗುಂಟಿ ಅರಸರಾದ ರಾಜಾ ನರಸಿಂಹನಾಯಕರ ಆಸ್ಥಾನದಲ್ಲಿ ಬಸವಣ್ಣ ಜಾವೂರ ಎಂಬ ನಾಟಕಕಾರರಿದ್ದರು. ಅವರು 'ರಾಜಾ' ಎಂಬ ನಾಟಕವನ್ನು ರಚಿಸಿದ್ದರು. ಅದು ಗುಡಗುಂಟಿ ರಾಜರ ಕುರಿತಾದ ನಾಟಕ. ಗುಂತಗೋಳ ಸಂಸ್ಥಾನದ ಗಡಿಯನ್ನು ಸೂಚಿಸುವ ಜನಪದ ನುಡಿಯೊಂದ ಇಂತಿದೆ.

ಮಾಮಲೆ ಮುದಗಲ್, ಕಿಲ್ಲೆ, ಜಲದುರ್ಗ
ಸಮತ್ ಗೋನವಾಟ್ಲ | ಸಂಸ್ಥಾನ ಗುಂತಗೋಳ
ನಮ್ಮ ರಾಜರದು[೫೯]

ಗುಂತಗೋಳದ ರಾಜಾ ರಾಯಪ್ಪನಾಯಕರು ಆಧ್ಯಾತ್ಮಿಕ ಜೀವಿಗಳಾಗಿದ್ದರು. ಇವರು ಆಗಾಗ ಜಲದುರ್ಗಕ್ಕೆ ಬರುತ್ತಿದ್ದರು. ಇಲ್ಲಿ ಮೌನಾಚರಣೆ ಕೈಗೊಳ್ಳುತ್ತಿದ್ದರು. ಇವರ ಕುರಿತಾದ ಆರತಿ ಪದ್ಯದ ಒಂದು ನುಡಿ ಇಂತಿದೆ :

ರನ್ನದಾರುತಿ ಬೆಳಗಿರೇ, ರಾಜಾರಾಯಣ್ಣ
ನಾಯಕರಿಗೆ ಚಿನ್ನದಾರುತಿ ಬೆಳಗಿರೇ
ಜಲದುರ್ಗ ಆಧ್ಯಾತ್ಮ ಭವದೊಳಗೆ
ಪವಡಿಸಿ ಮೌನಾಚರಣೆಗೈದ ರಾಯನಿಗೆ
ರನ್ನದಾರುತಿ ಬೆಳಗಿರೇ ರಾಜಾರಾಯಣ್ಣ
ನಾಯಕರಿಗೆ ಚಿನ್ನದಾರುತಿ ಬೆಳಗಿರೇ[೬೦]

ಕನಕಗಿರಿ ನಾಯಕ ಅರಸರು ತಮ್ಮ ಆಸ್ಥಾನದಲ್ಲಿ ಸಾಹಿತಿಗಳಿಗೆ ಆಶ್ರಯ ನೀಡಿದ್ದರು. ಹಿರೇ ರಂಗಪ್ಪನಾಯಕನ ಆಸ್ಥಾನದಲ್ಲಿ ಚಿದಾನಂದಾವಧೂತರೆಂಬುವವರಿದ್ದರು. ಇವರು ಚಿದಾನಂದವಚನ, ಚಿದಾನಂದಕೀರ್ತನೆ ಕಾಮವಿಡಂಬನೆ ಕೃತಿಗಳನ್ನು ರಚಿಸಿದರು. ವಿಜಯ ವೆಂಕಟಾಚಾರ್ಯರೆಂಬ ಕನ್ನಡ ಹಾಗೂ ಸಂಸ್ಕೃತ ಪಂಡಿತರು ಇವರ ಆಸ್ಥಾನದಲ್ಲಿದ್ದು. ಭಟ್ಟಂಗಿಗಳನ್ನು ಹಾಗೂ ದಂಡಕಗಳನ್ನು ರಚಿಸಿದ್ದಾರೆ. ಸದ್ಯ ಇವರ ಒಂದು ದಂಡಕ ಹಾಗೂ ೨೭ ಭಟ್ಟಂಗಿಗಳು ಲಭ್ಯವಿದೆ.[೬೧] ಕವಿ ಶಿರಗುಪ್ಪ ಸದಾಶಿವಯ್ಯನು ಅರ್ಧಕ್ಕೆ ನಿಂತಿದ್ದ ಅಪರಾಳ ತಮ್ಮಣ್ಣನ ಶ್ರೀಕೃಷ್ಣಪಾರಿಜಾತ ನಾಟಕವನ್ನು ಹಿರೇರಂಗಪ್ಪನಾಯಕನ ಇಚ್ಛೆಯ ಮೇರೆಗೆ ಪೂರ್ತಿಗೊಳಿಸಿದನು. ಇಂದು ಶ್ರೀಕೃಷ್ಣಪಾರಿಜಾತವು ಕನ್ನಡನಾಡಿನ ಅತ್ಯಂತ ಜನಪ್ರಿಯ ನಾಟಕವಾಗಿದೆ. ಇದು ಕನಕಗಿರಿ ನಾಯಕ ಅರಸರ ಕೊಡುಗೆ ಎನ್ನಬಹುದಾಗಿದೆ.

ಈ ಅರಸರ ಕುರಿತಾಗಿ ಅನೇಕ ಜನಪದಹಾಡುಗಳು ರಚನೆಗೊಂಡಿವೆ. ಅರಸ ನವಾಬ ಉಡಿಚನಾಯಕನ ಭಕ್ತಿಗೆ ಒಲಿದ ಶ್ರೀಲಕ್ಷ್ಮೀನರಸಿಂಹನ ಜಾತ್ರೆಯ ಸಂದರ್ಭದಲ್ಲಿ ತೇರನ್ನು ಎಳೆಯಿಸಿದ ಕುರಿತಾದ ಜನಪದ ನುಡಿಯೊಂದು ಹೀಗಿದೆ.

ಅಪ್ಪನ ತೇರಿಗೆ ಇಪ್ಪತ್ತು ಮಿಣಿ ಬಂದು |
ಚಿಕ್ಕಿನಾಮದ ದೊರಿ ಬಂದು | ಉಡಚಪ್ಪನಾಯ್ಕ
ಚಪ್ಪಾಳೆ ಇಟ್ಟು ತೇರ ಎಳಿಸ್ಯಾನ[೬೨]

ತೇರು ಸಾಗುವಾಗ ಮಹಾಲಕ್ಷ್ಮೀದೇವಿ ಪತಿ ಕನಕಾಚಲನಿಗೆ ಆರತಿ ಎತ್ತಿದ ಹಾಡು ಇಂತಿದೆ :

ಕನಕರಾಯನ ತೇರು ಕುಣಕುಣಿದು ಎಳಿವಾಗ
ಹಣಕಿ ನೋಡ್ಯಾಳ ಲಚಮವ್ವ | ಗಂಡಗ
ಕಣಕದಾರುತಿ ಬೆಳಗ್ಯಾಳ[೬೩]

ಕನಾಕಾಚಲನ ತೇರು ಕೊಪ್ಪಳ ಜಿಲ್ಲೆಯ ಅತಿ ದೊಡ್ಡ ತೇರಾಗಿದೆ. ಆ ತೇರಿನ ನಿರ್ಮಾಣದ ಕುರಿತಾಗಿ ಜನಪದ ನುಡಿಯೊಂದು,

ಕನಗೇರಿಕಿಲ್ಲೇವು ಮಳಮಳ ತುರೇವು
ಮೂಲ ಕಟ್ಟೈತಿ ಮಲಕೀಲೆ | ಕನಕರಾಯನ
ತೇರು ಕಟ್ಟೈತೆ ಗಗನಕ[೬೪]

ಹೀಗೆ ಈ ಜನಪದಗೀತೆಯಲ್ಲಿ ಕನಕಗಿರಿ ಅರಸರ ಕಾಲದ ಕನಕಗಿರಿಯ ಜಾತ್ರೆಯ ವರ್ಣನೆ ಇದೆ.

ಗುಡೇಕೋಟೆ ಅರಸರ ಕುರಿತಾದ ಕೋಲಾಟದ ಪದವೊಂದು ಲಭ್ಯವಿದೆ. ಈ ಕೋಲಾಟದಲ್ಲಿ ಗುಡೇಕೋಟೆ ಹಾಗೂ ಅರಸನ ಪರಿಚಯ ನೀಡುತ್ತದೆ :

ಗುಡಿಯ ಕೋಟೆಂಬುದು ಕರಿಯಕಲ್ಲಿನ ಮೇಲೆ
ಸಿಂಬೆ ಸುತ್ತಾಯ್ತೆ ಬೇಗಿನ ಪಳೆಯ
ಚೆನ್ನಾಗಿ ಗೌಡನೆಂತ ಲೋಲುಗಾರನೋ
ಜಟಿಂಗರಾಜನೆಂತಾ ಮೋಜುಗಾರನೋ

ಅರಸನ ಉಡುಗೆ-ತೊಡುಗೆಯ ಕುರಿತಾಗಿ :

ವಾರೇ ಮುಂಡಾಸದವನು ಗೀರ ಗಂಧದವರು
ಬಂಟರಿರುವುದೇ ಜರಿಮಲೆ
ಚೆನ್ನಾನಿಗೌಡನೆಂತ ಲೋಲುಗಾರನೇ
ಜಟಿಂಗರಾಜನೆಂತಾ ಮೋಜುಗಾರನೇ[೬೫]

ಹೀಗೆ ಈ ಕೋಲುಪದ ಮುಂದುವರೆಯುತ್ತದೆಯಲ್ಲದೆ, ಮುಂದೆ ಜಟ್ಟಿಂಗರಾಜ ಅರಸರ ಬದುಕು ಹಾಗೂ ಬೇಟೆಯ ಸಂಗತಿಗಳು ನಿರೂಪಿಸಲ್ಪಟ್ಟಿವೆ. ಅಲ್ಲದೆ, ಗುಡೇಕೋಟೆ ಅರಸರ ಹೆಣ್ಣುಮಕ್ಕಳಾದ ನೀಲಮ್ಮಾಜಿ, ಬಸಮ್ಮಾಜಿಯವರು ಹರಪನಹಳ್ಳಿ ೨ನೇ ಸೋಮಶೇಖರನಾಯಕನ ಮಡದಿಯರನ್ನೂ ಕುರಿತು ಕೋಲುಪದವು ಕೆಲ ಮಾಹಿತಿಗಳನ್ನು ಒದಗಿಸುತ್ತದೆ. ಮತ್ತೊಡು ಅರಸರಲ್ಲಿ ಹಾಲಪ್ಪನಾಯಕನು ವೀರಶೈವ ಧರ್ಮಗ್ರಂಥಗಳನ್ನು ಅಧ್ಯಯನ ಮಾಡಿದ್ದನು. ಹೀಗಾಗಿ ಒಂದು ಶಾಸನದಲ್ಲಿ ಹಾಲಪ್ಪ ನಾಯಕನನ್ನು ಶೈವಶಾಸ್ತ್ರ ಪಾರಂಗತ[೬೬] ಎಂದು ಕರೆಯಲಾಗಿದೆ.

ಹೀಗೆ ಕರ್ನಾಟಕದ ನಾಯಕ ಅರಸುಮನೆತನದವರು ಸಾಹಿತ್ಯಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ವಿಶೇಷವಾಗಿ ವೈಷ್ಣವ, ಶೈವಕ್ಷೇತ್ರಕ್ಕೂ ಇವರ ಸಾಹಿತ್ಯ ಸೇವೆ ಸಂದಿದೆ. ನ್ಯಾಯ ಪಕ್ಷಪಾತಿಗಳಾಗಿದ್ದ ನಾಯಕ ಅರಸರು ಪರಂಪರೆಯ ಮೌಲ್ಯಗಳನ್ನು ಎತ್ತಿ ಹಿಡಿಯುವುದರೊಂದಿಗೆ ಮುಕ್ತ ಮನಸ್ಸಿನಿಂದ ಎಲ್ಲಾ ಪಂಥಗಳ ಕವಿಗಳಿಗೆ, ಪಂಡಿತರುಗಳಿಗೆ ಆಶ್ರಯದಾತರಾಗಿದ್ದರು. ಇವರ ಕಾಲದ ಜನಪದಸಾಹಿತ್ಯವಂತೂ ಇವರನ್ನು ಮುಕ್ತಕಂಠದಿಂದ ಹಾಡಿ ಹೊಗಳಿದೆ. ಇವರ ಕುರಿತಾಗಿ ಯಥೇಚ್ಛವಾಗಿ ಹೊರಬಂದ ಜನಪದ ಸಾಹಿತ್ಯ ಇವರು ಆ ಜನತೆಯೊಂದಿಗೆ ಹೊಂದಿದ್ದ ಮುಕ್ತವಾದ ಪರಿಸರವನ್ನು ಪ್ರತಿಬಿಂಬಿಸುತ್ತದೆ.

## ೫.೨ ಶಿಕ್ಷಣ

ಶಿಕ್ಷಣದ ಅರ್ಥ ವಿಶಾಲವಾದುದು. ಅದು ಕಾಲದಿಂದ ಕಾಲಕ್ಕೆ ಅಗತ್ಯತೆಗನುಗುಣವಾಗಿ ಬದಲಾಗುತ್ತಾ ಬಂದಿದೆ. ಒಂದು ಕಾಲಕ್ಕೆ ವೇದ ಉಪನಿಷತ್ತುಗಳ ಪಠಣಕ್ಕೆ ಸೀಮಿತಗೊಂಡಿದ್ದ ಶಿಕ್ಷಣ ನಂತರದಲ್ಲಿ ರಕ್ಷಣಾ ಸಾಧನವಾಗಿಯೂ ಮಾರ್ಪಟ್ಟಿತು. ಈ ಹಿನ್ನೆಲೆಯಲ್ಲಿ ಮನುಷ್ಯನ ಪ್ರಗತಿಗೆ ಶಿಕ್ಷಣ ಅತ್ಯವಶ್ಯವಾಯಿತು. ಶಿಕ್ಷಣವೆಂದರೆ ಕೇವಲ ಅಕ್ಷರ ಜ್ಞಾನವಲ್ಲ; ವಿವಿಧ ಕ್ಷೇತ್ರಗಳ, ವಿವಿಧ ವಿಷಯಗಳ ತಿಳುವಳಿಕೆ ಹಾಗೂ ಅದೊಂದು ಶಾಸ್ತ್ರೀಯವಾದ ಜ್ಞಾನ ವ್ಯಕ್ತಿಯಲ್ಲಿ ಆತ್ಮವಿಶ್ವಾಸ, ತಿಳುವಳಿಕೆ ಶಕ್ತಿಯನ್ನು ನೀಡುವುದಲ್ಲದೆ ಅವನನ್ನು ಮಾನಸಿಕವಾಗಿ, ದೈಹಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಅಭಿವೃದ್ಧಿಗೊಳಿಸಿ ಜೀವನವನ್ನು ಯಶಸ್ವಿಯಾಗಿ ಸಾಗಿಸಲು, ಸಮಸ್ಯೆಗಳಿಗೆ ಪರಿಹಾರ ಹುಡುಕಲು ಇದೊಂದು ಪ್ರಯೋಜನಕಾರಿ ಸಾಧನ.

ಕರ್ನಾಟಕ ನಾಯಕ ಅರಸುಮನೆತನಗಳು ತಮ್ಮ ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಅರಸರ ಮಕ್ಕಳಿಗೆ ಐದನೇ ವರ್ಷದಲ್ಲಿ ಶಿಕ್ಷಣ ಪ್ರಾರಂಭವಾಗುತ್ತಿತ್ತು. ರಾಜಗುರುಗಳ ಇಲ್ಲವೇ ಶ್ರೇಷ್ಠ ವಿದ್ವಾಂಸರ ಸಮ್ಮುಖದಲ್ಲಿ ಒಳ್ಳೆಯ ಮುಹೂರ್ತವನ್ನು ನೋಡಿ ಗಜಾನನ ಮತ್ತು ಶಾರದೆಯ ಪೂಜೆಯೊಂದಿಗೆ ಶಿಕ್ಷಣವನ್ನು ಪ್ರಾರಂಭ ಮಾಡಲಾಗುತ್ತಿದ್ದಿತು. ಸರಳವಾದ ಅಕ್ಷರಾಭ್ಯಾಸವು ಇರುತ್ತಿತ್ತಲ್ಲದೆ ಓದು ಬರಹವನ್ನು ಕಲಿಸಲಾಗುತ್ತಿತ್ತು. ಜೊತೆಗೆ ಇವತ್ತಿನ ರಾಜಕುಮಾರ ಮುಂದಿನ ಆ ರಾಜ್ಯದ ಅರಸನಾಗುವನಾದ್ದರಿಂದ ಆತನಿಗೆ ವಿಶೇಷವಾದ ಶಿಕ್ಷಣ ಕೊಡಿಸುತ್ತಿದ್ದರು. ಹಾಗೂ ಹೃದಯ ಸಂಸ್ಕಾರ, ಬುದ್ಧಿ ವೈಶಾಲ್ಯ, ವಿವೇಕ, ಸ್ಥೈರ್ಯ, ಸಹನೆ ಮುಂತಾದ ಗುಣಗಳಿಗೆ ಮಹತ್ವ ನೀಡಲಾಗುತ್ತಿತ್ತು. ರಾಜನೀತಿಯನ್ನು ತಿಳಿಸುವುದಲ್ಲದೆ ಕುಸ್ತಿ, ಕುದುರೆಸವಾರಿ, ಕತ್ತಿವರಸೆ, ಆನೆಸವಾರಿ, ಬಿಲ್ಲು ಹೂಡುವಿಕೆ, ಭಲ್ಲೆ ಎಸೆಯುವುದು, ಖಡ್ಗಯುದ್ಧ ಮುಂತಾದವುಗಳನ್ನು ಕಲಿಸುತ್ತಿದ್ದರು. ಜೊತೆಗೆ ಶಾಸ್ತ್ರ ಶಿಕ್ಷಣವೂ, ಲೌಕಿಕ ಶಿಕ್ಷಣವೂ ಅವಶ್ಯವಾಗಿತ್ತು. ಹೀಗಾಗಿ ಶಾಸ್ತ್ರ, ಪುರಾಣ, ನೀತಿಕತೆ ಹಾಗೂ ಜೀವನ ನಡೆಸುವ

ರೀತಿನೀತಿಗಳನ್ನು ಹೇಳಿಕೊಡಲಾಗುತ್ತಿತ್ತು.[೧೭] ಅಲ್ಲದೆ ಯುದ್ಧಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ವಿದ್ಯೆಗಳಿಗೆ ಹೆಚ್ಚು ಗಮನ ಕೊಡುತ್ತಿದ್ದರು.[೧೮]

ಅಂಗಸಾಧನೆಗೆ ಮಹತ್ವವನ್ನು ನೀಡಿದ್ದರು. ಅಂಗಸಾಧನೆ ಎಂದರೆ ದೇಹದ ಒಂದೊಂದು ಅಂಗ, ಅವಯವ, ಮಾಂಸಖಂಡ ಕಸರತ್ತುಗಳಿಂದ ಉಪಕರಣಗಳ ಸಹಾಯದಿಂದ ಅವು ಶಕ್ತಿಯುತವಾಗಲೆಂದು ಶ್ರಮದ ಕೆಲಸಗಳನ್ನು ಮಾಡಿಸುತ್ತಿದ್ದರು.

ಸುರಪುರದ ನಾಲ್ವಡಿ ವೆಂಕಟಪ್ಪನಾಯಕನಿಗೆ ಸುರಪುರದ ಅರಸನೆಂದು ಘೋಷಿಸಿದಾಗ ಆತನಿಗೆ ಕೇವಲ ಹತ್ತುವರ್ಷಗಳಾಗಿದ್ದವು. ಆಗ ಬ್ರಿಟಿಷ್ ಗೌರ್ನರ್ ಜನರಲ್‌ನು ಹೈದ್ರಾಬಾದ್ ರೆಸಿಡೆಂಟನ ಮೂಲಕ ನೂತನ ಅರಸ ಪ್ರೌಢಾವಸ್ಥೆಗೆ ಬರುವವರೆಗೆ ಉತ್ತಮ ಶಿಕ್ಷಣ ನೀಡಬೇಕೆಂದು ಆದೇಶ ನೀಡುತ್ತಾನೆ. ಆಗ ಸುರಪುರದಲ್ಲಿ ಬ್ರಿಟಿಷ್ ಪ್ರತಿನಿಧಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಮೆಡೋಸ್ ಟೇಲರನಿಗೆ ಆ ಜವಾಬ್ದಾರಿ ಬೀಳುತ್ತದೆ. ಆಗ ಟೇಲರ್ ಡಾ.ಸೆಲ್ಲರ್ಸ್ ಹಾಗೂ ಡಾ.ಮುರೆಯವರಿಂದ ನಾಲ್ವಡಿ ವೆಂಕಟಪ್ಪನಾಯಕನಿಗೆ ಶಿಕ್ಷಣವನ್ನು ಕೊಡಿಸಿದ. ಇವರು ಸುರಪುರದಲ್ಲಿ ಶ್ರೇಷ್ಠ ವೈದ್ಯರಾಗಿದ್ದರು. ಪ್ರವೃತ್ತಿಯಿಂದ ಶಿಕ್ಷಕರಾಗಿದ್ದುಕೊಂಡು ನಾಲ್ವಡಿ ವೆಂಕಟಪ್ಪನಾಯಕನಿಗೆ ಉತ್ತಮ ಶಿಕ್ಷಣ ನೀಡಿದರು. ಕುದುರೆಸವಾರಿ, ಗರಡಿಮನೆ, ಕತ್ತಿವರಸೆ, ಯುದ್ಧಕಲೆಗಳಲ್ಲಿ ಈತನನ್ನು ತೊಡಗಿಸಲಾಯಿತಲ್ಲದೆ ಮೆಡೋಸ್ ಟೇಲರ್‌ನು ಪಾಶ್ಚಾತ್ಯ ಕಥೆಗಳನ್ನು ಹಾಗೂ ಮೈನವಿರೇಳುವ ಘಟನೆಗಳನ್ನು ಹೇಳುತ್ತಿದ್ದನು.[೧೯] ಆನೆಗೊಂದಿಯಲ್ಲಿಯೂ ಅರಸರಿಗಾಗಿ ಶಿಕ್ಷಣ ನೀಡಲು ಒಂದು ಪಾಠಶಾಲೆ ಇತ್ತು. ತಿರುಮಲ ದೇವರಾಯನು, ರಾಜ ಕುಮಾರರಿಗೆ ಶಿಕ್ಷಣ ನೀಡಲು ಅಧ್ಯಾಪಕರನ್ನು ನೇಮಿಸಿದ್ದನು. ಅವರು ಯುದ್ಧಕಲೆಯ ಶಿಕ್ಷಣದ ಜೊತೆಗೆ ನೀತಿಶಾಸ್ತ್ರಗಳ ಕುರಿತಾದ ಶಿಕ್ಷಣವನ್ನು ನೀಡುತ್ತಿದ್ದರು.[೨೦]

ನಾಯಕ ಅರಸರ ಮೂಲಭಾಷೆ ತೆಲುಗು ಇವರು ಶ್ರೀಶೈಲದಿಂದ ಬಂದವರಾಗಿದ್ದರಿಂದ ಕೆಲವು ಮನೆತನಗಳಲ್ಲಿ ಈಗಲೂ ತೆಲುಗು ಮಾತನಾಡುತ್ತಾರೆ. ನಂತರದಲ್ಲಿ ಇವರು ಕನ್ನಡ ಮಾತನಾಡಲು ಪ್ರಾರಂಭಿಸಿದರು. ಈ ಜನಾಂಗದ ಚರಿತ್ರೆಗೆ ಸಂಬಂಧಿಸಿದ ಕೆಲವು ದಾಖಲೆಗಳು ತೆಲುಗಿನಲ್ಲಿವೆ. ಕರ್ನಾಟಕದಲ್ಲಿ ಜೀವಿಸಲು ಪ್ರಾರಂಭಿಸಿದಂದಿನಿಂದ ಕನ್ನಡದಲ್ಲಿ ದಾಖಲೆಗಳು ಸೃಷ್ಟಿಯಾದವು. ಹೀಗಾಗಿ ಇವರ ಭಾಷೆ ಕೆಲವು ಕಡೆ ತೆಲುಗು ಕನ್ನಡ ಮಿಶ್ರಿತವಾಗಿರುವುದನ್ನು ಕಾಣಬಹುದಾಗಿದೆ. ಮ್ಯಾಸನಾಯಕ ಅರಸು ಮನೆತನಗಳಾದ ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ದೊರೆಗಳಹಟ್ಟಿ ಇವರ ಮಾತೃಭಾಷೆ ತೆಲುಗು. ಕನ್ನಡವನ್ನೂ ಮಾತನಾಡುತ್ತಾರೆ. ಆದರೆ ಸುರಪುರ, ಗುಡಗುಂಟಿ, ಕನಕಗಿರಿ, ಗುಂತಗೋಳ, ದೇವದುರ್ಗದವರು, ಊರನಾಯಕರು. ಈ ಅರಸುಮನೆತನಗಳ ಮಾತೃಭಾಷೆ ಕನ್ನಡ. ಆದರೆ ಇವರು ತೆಲುಗು ಮಾತೃಭಾಷೆಯುಳ್ಳ ಮ್ಯಾಸನಾಯಕ ಅರಸುಮನೆತನಗಳೊಂದಿಗೆ ಹಾಗೂ ಆಂಧ್ರ

ಪ್ರದೇಶದ ರತ್ನಗಿರಿ, ಪ್ಯಾಪಲಿ ಮುಂತಾದ ಅರಸುಮನೆತನಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಿರುವುದರಿಂದ ತೆಲುಗು ಮಾತನಾಡುವುದನ್ನು ಕಲಿತಿದ್ದಾರೆ. ಹೈದ್ರಾಬಾದ್‌ಕರ್ನಾಟಕ ಪ್ರದೇಶದ ಸುರಪುರ, ಗುಡಗುಂಟಿ, ದೇವದುರ್ಗ, ಗುಂತಗೋಳ, ಕನಕಗಿರಿ, ಅರಸರು ಉರ್ದು ಭಾಷೆಯಲ್ಲಿಯೂ ಪ್ರವೀಣರಾಗಿದ್ದರು. ಕಾರಣ ಆದಿಲ್‌ಷಾಹಿ ಹಾಗೂ ನಿಜಾಮರ ಆಡಳಿತಕ್ಕೆ ಒಳಪಟ್ಟಿದ್ದರು. ಜೊತೆಗೆ ತೆಲುಗು, ಸಂಸ್ಕೃತ ಭಾಷೆಗಳಿಗೂ ಪ್ರಾಶಸ್ತ್ಯವಿತ್ತು. ಸುರಪುರದ ಅರಸ ಇಮ್ಮಡಿ ಪಾಮನಾಯಕ ತೆಲುಗು ಭಾಷೆಯಲ್ಲಿ 'ಭಾರ್ಗವಪುರಾಣ' ಎಂಬ ಕೃತಿಯನ್ನು ರಚಿಸಿದನು. ಈ ಮನೆತನದ ಅರಸರು ಉರ್ದುವನ್ನು ಸ್ಪಷ್ಟವಾಗಿ ಓದುವ, ಬರೆಯುವ ಮತ್ತು ಮಾತನಾಡುವ ಸಾಮರ್ಥ್ಯವನ್ನು ಹೊಂದಿದ್ದರು.

ಅಲ್ಲದೆ, ಸುರಪುರದ ಅರಸರು ಆಡಳಿತದ ದೃಷ್ಟಿಯಿಂದ ಪೇಶ್ವೆಗಳನ್ನು ಬಹಳಷ್ಟು ಅವಲಂಬಿಸಿದ್ದುದ್ದರಿಂದ ಕೊನೆಯವರೆಗೂ ಮರಾಠಿಯನ್ನೇ ಸಂಸ್ಥಾನದ ಆಡಳಿತಭಾಷೆಯಾಗಿ ಬಳವಡಿಸಿಕೊಂಡಿದ್ದರೆಂಬುದು ವಿಶೇಷವಾಗಿದೆ.[೨೧] ಹೀಗಾಗಿ ಅಂದು ಸುರಪುರದ ಅರಸರ ಮಾತೃಭಾಷೆ ತೆಲುಗು, ಆಡಳಿತಭಾಷೆ ಮರಾಠೀ, ಸಂಪರ್ಕಭಾಷೆ ಇಂಗ್ಲೀಷ್. ಜೊತೆಗೆ ಉರ್ದು, ಕನ್ನಡ ಸ್ಥಳೀಯ ಭಾಷೆಗಳಾಗಿದ್ದವು ಹೀಗಾಗಿ ಈ ಎಲ್ಲಾ ಭಾಷೆಗಳನ್ನೂ ಕಲಿಯಬೇಕಾಗಿತ್ತು. ನಾಲ್ವಡಿ ವೆಂಕಟಪ್ಪನಾಯಕ ಇಂಗ್ಲಿಷ್, ಉರ್ದು, ಪರ್ಷಿಯನ್, ತೆಲುಗು, ಮರಾಠೀ ಭಾಷೆಗಳನ್ನು ಕಲಿತನು. ಲೆಕ್ಕಶಾಸ್ತ್ರದಲ್ಲಿ ಈತನಿಗೆ ಅಲರ್ಜಿ. ಮೆಡೋಸ್ ಟೇಲರ್ ಸ್ವತಃ ಸಾರ್ವಜನಿಕ ವ್ಯವಹಾರದ ಕುರಿತ ಶಿಕ್ಷಣವನ್ನು[೨೨] ನೀಡುತ್ತಿದ್ದನು. ಆನೆಗೊಂದಿ ಅರಸರ ಮನೆಯಲ್ಲಿ ತೆಲುಗು ಮಾತೃಭಾಷೆಯಾಗಿತ್ತು. ಆದರೆ ವ್ಯಾವಹಾರಿಕವಾಗಿ ಕನ್ನಡ ಭಾಷೆಯನ್ನು ಬಳಸುತ್ತಿದ್ದರು.

ದೇವದುರ್ಗದ ಅರಸರು ಕನ್ನಡಭಾಷೆಯ ಜೊತೆಗೆ ತೆಲುಗು, ಹಿಂದಿ, ಉರ್ದು, ಭಾಷೆಗಳನ್ನು ಮಾತನಾಡುತ್ತಿದ್ದರು. ಈ ಮನೆತನದ ಕೆಲವು ಅರಸರಿಗೆ ಫಾರ್ಸಿ ಓದಲು ಬರೆಯಲು ಬರುತ್ತಿತ್ತು.[೨೩] ಕನಕಗಿರಿಯ ಅರಸ ರಾಜಾರಂಗಪ್ಪನಾಯಕನು ಉರ್ದುಭಾಷೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದಿದ್ದನು. ಆದರೆ ಅವರ ಶಿಕ್ಷಣದ ಭಾಷೆ ಕನ್ನಡವಾಗಿತ್ತು. ಈ ಮನೆತನದ ಅರಸು ಮಕ್ಕಳಿಗೆ ಮನೆಯಲ್ಲಿ ಶಿಕ್ಷಣದ ವ್ಯವಸ್ಥೆಯನ್ನು ಮಾಡಲಾಗಿತ್ತು. ಅವರು ಯುದ್ಧಕೌಶಲ್ಯಗಳನ್ನು ಹೇಳಿಕೊಡುತ್ತಿದ್ದರು. ದೇವದುರ್ಗದ ಸಮೀಪದ ಚಂದನಕೇರಿಯ ಎತ್ತರವಾದ ಕಟ್ಟೆಯ ಮೇಲೆ ಮಾಸ್ತರನ ದೇವಾಲಯವಿದೆ. ಇದು ದೇವದುರ್ಗ ನಾಯಕ ಅರಸರಿಗೆ ಮತ್ತು ಸೈನಿಕರಿಗೆ ಯುದ್ಧಕೌಶಲ್ಯವನ್ನು ಹೇಳಿಕೊಡುತ್ತಿದ್ದ ಗುರುವಿನ ಸಮಾಧಿ. ಇಂದಿಗೂ ಇದನ್ನು ಮಾಸ್ತರನ ಬೃಂದಾವನ ಎಂದು ಕರೆಯುತ್ತಾರೆ.

ನಾಯಕ ಅರಸುಮನೆತನದ ಕುಟುಂಬಗಳಲ್ಲಿ ಘೋಷಾಪದ್ಧತಿ ಆಚರಣೆಯಲ್ಲಿದ್ದುದರಿಂದ ಸ್ತ್ರೀಯರಿಗೆ ಶಿಕ್ಷಣವನ್ನು ಅರಮನೆಯಲ್ಲಿಯೇ ನೀಡಲಾಗುತ್ತಿತ್ತು. ಕೆಲವು ಅರಸುಮನೆತನಗಳಾದ ಗುಂತಗೋಳ,

ದೇವದುರ್ಗ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನಗಳು, ಸ್ತ್ರೀ ಶಿಕ್ಷಣದ ಬಗ್ಗೆ ನಿರ್ಲಕ್ಷ್ಯ ಧೋರಣೆಯನ್ನು ಹೊಂದಿದ್ದವು. ದೊರೆ ಮನೆತನದ ಹೆಣ್ಣು ಕಲಿಯಬಾರದು ಎಂಬ ನಂಬಿಕೆ ಇತ್ತು.[೨೪] ಇಂದಿಗೂ ಈ ಮನೆತನದವರು ಹೆಣ್ಣುಮಕ್ಕಳನ್ನು ಓದಿಸುವ ಪದ್ಧತಿ ಇಲ್ಲವೆಂದು ಹೇಳುತ್ತಾರೆ. ಆದರೆ ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಕನಕಗಿರಿ ಅರಸು ಮನೆತನಗಳಲ್ಲಿ ಸ್ತ್ರೀಗೆ ಶಿಕ್ಷಣ ವ್ಯವಸ್ಥೆ ಕಲ್ಪಿಸಿದ್ದರಲ್ಲದೇ ಅವರಿಗೆ ಶಿಕ್ಷಣ ನೀಡಲು ವಿದ್ಯಾಗುರು ಇರುತ್ತಿದ್ದನು. ಅವರ ಪೆಟ್ಟಿಗೆಯಲ್ಲಿ ಪುಸ್ತಕಗಳೂ ಇರುತ್ತಿದ್ದವು. ಅವರಿಗೆ ಅಕ್ಷರವಿದ್ಯೆಯ ಜೊತೆಗೆ ಸಂಗೀತ, ನೃತ್ಯ, ಆಡಳಿತದ ಜ್ಞಾನ ಇತ್ಯಾದಿ ಶಿಕ್ಷಣವನ್ನು ದೊರಕಿಸಲಾಗುತ್ತಿತ್ತು. ಸಂಭಾವನೆ ಹಾಗೂ ಇತರ ಕಾಣಿಕೆಗಳನ್ನು ನೀಡುವುದರ ಮೂಲಕ ಅಧ್ಯಾಪಕರನ್ನು ಗೌರವಿಸುತ್ತಿದ್ದರು. ವಿದ್ಯಾವಂತರಾದ ಕೆಲವು ರಾಣಿಯರು ರಾಜಕೀಯ ಅನುಭವ ಮತ್ತು ಸ್ವಾತಂತ್ರ್ಯ ಪಡೆದುಕೊಂಡು ಸಾರ್ವಜನಿಕ ಕೆಲಸಗಳನ್ನು ಮಾಡುತ್ತಿದ್ದರು. ಅವರಲ್ಲಿ ಚಿತ್ರದುರ್ಗ ಅರಸುಮನೆತನದ ರಾಣಿಯರಾದ ಓಬಳಮ್ಮ ನಾಗತಿ, ಸುರಪುರದ ರಾಣಿ ಅಮ್ಮಾನಾಗತಿ, ರಾಣಿ ಕಾಂತಮ್ಮ, ರಾಣಿ ಈಶ್ವರಮ್ಮ, ಕನಕಗಿರಿಯ ರಾಣಿ ವೆಂಕಟಮ್ಮ ಹಾಗೂ ರಾಣಿ ಗೌರಮ್ಮ, ಗುಡಗುಂಟಿಯ ರಾಣಿ ಗೌರಮ್ಮ ಪ್ರಮುಖರಾದವರು. ಅದರಲ್ಲೂ ಸುರಪುರದ ಮುಮ್ಮಡಿ ವೆಂಕಟಪ್ಪನಾಯಕನ ರಾಣಿಯಾದ ರಂಗಮ್ಮ ಒಳ್ಳೆಯ ಕವಿಯತ್ರಿಯಾಗಿದ್ದಳು[೨೫] ಎಂಬುದು ಅಂದಿನ ಕಾಲದ ಸ್ತ್ರೀಯ ಶಿಕ್ಷಣದ ಪ್ರೋತ್ಸಾಹಕ್ಕೆ ಹಿಡಿದ ಕನ್ನಡಿಯಾಗಿದೆ.

ನಾಯಕ ಅರಸರು ಸೈನಿಕ ಶಿಕ್ಷಣಕ್ಕೂ ಪ್ರಾಶಸ್ತ್ಯ ನೀಡಿದ್ದರು. ಇಂದಿನಂತೆಯೇ ಅಂದೂ ಎತ್ತರ ದೇಹದಾರ್ಢ್ಯತೆ ಮೊದಲಾದವನ್ನು ಮುಖ್ಯವಾಗಿ ಗಮನಿಸಿಯೇ ಎಲ್ಲದರಲ್ಲಿಯೂ ನಿರೀಕ್ಷಿತ ಮಟ್ಟವನ್ನು ಮುಟ್ಟಿದರೆ ಮಾತ್ರ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಆನಂತರ ಸೈನಿಕರಿಗೆ ಯುದ್ಧದ ತರಬೇತಿಯ ಶಿಕ್ಷಣ ನೀಡಿ ಯಾವ ಕ್ಷಣದಲ್ಲಿಯಾದರೂ ಸಂಭವಿಸುತ್ತಿದ್ದ ಯುದ್ಧಕ್ಕೆ ಸದಾ ಸಿದ್ಧವಾಗಿರುವಂತೆ ಸೂಚನೆ ನೀಡಿರಲಾಗುತ್ತಿತ್ತು.[೨೬] ಹೀಗಾಗಿ ಸೈನಿಕರ ಮಕ್ಕಳಿಗೆ ವಿಶೇಷ ಸವಲತ್ತುಗಳನ್ನು ಕಲ್ಪಿಸಲಾಗುತ್ತಿತ್ತು. ಚಿತ್ರದುರ್ಗದ ನಾಯಕ ಅರಸರು ಯುದ್ಧದಲ್ಲಿ ಮಡಿದ ವೀರಸೈನಿಕರ ಮಕ್ಕಳಿಗೆ ಹಾಲು, ಬೆಣ್ಣೆ, ಹಣವೆಂದು ಆ ಹುಡುಗರು ಪ್ರೌಢರಾಗುವವರೆಗೆ ಅವರ ಪೋಷಣೆಗೆ ಸಹಾಯ ಮಾಡುತ್ತಿದ್ದರು. ಆ ಹುಡುಗರು ದೊಡ್ಡವರಾದ ಮೇಲೆ ಅವರಿಗೆ ದಂಡಿನಲ್ಲಿ ಚಾಕರಿ ಕೊಡುತ್ತಿದ್ದರು.[೨೭]

ಸುರಪುರದ ನಾಯಕ ಅರಸರು ತಮ್ಮ ಸಂಸ್ಥಾನದಲ್ಲಿ ಹುಟ್ಟಿದ ಪ್ರತಿಯೊಂದು ಮಗುವನ್ನು ಸೈನಿಕರನ್ನಾಗಿ ತಯಾರಿಸುತ್ತಿದ್ದರು. ಬೇಡರ ಕುಟುಂಬದ ಸದಸ್ಯರ ಸಂಖ್ಯೆಯನ್ನು ಗುರಿಕಾರ ತಿಳಿದಿರುತ್ತಿದ್ದ.

ಯಾವುದೇ ಕುಟುಂಬದಲ್ಲಿ ಗಂಡುಮಗು ಜನಿಸಿದರೆ ದರಬಾರದಿಂದ ನಾಲ್ಕುರೂಪಾಯಿ ಸಂಬಳವನ್ನು ಆ ಹುಡುಗನು ಪ್ರೌಢನಾಗುವವರೆಗೆ ನೀಡಲಾಗುತ್ತಿತ್ತು. ಆ ಮಧ್ಯೆ ಆ ಹುಡುಗನಿಗೆ ಗರಡಿ ಸಾಧನೆ, ಮಲ್ಲವಿದ್ಯೆ, ಕತ್ತಿವರಸೆ, ಕುದುರೆ ಸವಾರಿ, ಈಜು, ಮುಷ್ಠಿಕಾಳಗ, ತುಬಾಕಿಯಿಂದ ಗುರಿ ಹೊಡೆಯುವುದು, ತುಬಾಕಿಗೆ ಬೇಕಾಗುವ ಸಿಡಿಮದ್ದನ್ನು ತಯಾರಿಸಿಕೊಳ್ಳುವುದು, ದಾಂಡು, ಪಟ್ಟೆಯನ್ನು ತಿರುಗಿಸುವುದು ಮುಂತಾದ ಸೈನಿಕ ವಿದ್ಯೆಗಳಲ್ಲಿ ನೈಪುಣ್ಯತೆ ಪಡೆದುಕೊಳ್ಳುವಂತೆ ತರಬೇತಿ ಕೊಡಲಾಗುತ್ತಿತ್ತು.[೭೮] ಇವರೇ ಮುಂದೆ ಯುದ್ಧವಿದ್ಯೆಯಲ್ಲಿ ನಿಷ್ಣಾತರಾಗುತ್ತಿದ್ದರು. ತಮ್ಮ ಒಡೆಯನಿಗಾಗಿ ಪ್ರಾಣವನ್ನು ಮುಡುಪಾಗಿಟ್ಟು, ಹೋರಾಡುತ್ತಿದ್ದರು. ಅರಸನು ಯುದ್ಧಕ್ಕೆ ಹೋಗಬೇಕಾಗಿದ್ದಾಗ ಸರದಾರರಿಗೆ ವಿಷಯ ತಿಳಿಸಿ ಕೊಂಬುಗಳನ್ನು ಊದಿಸುತ್ತಿದ್ದನು. ತಕ್ಷಣವೇ ತರಬೇತಿ ಪಡೆದ ಸೈನಿಕರೆಲ್ಲ ಬಂದು ಸೇರುತ್ತಿದ್ದರು.

ನಾಯಕ ಅರಸರು ಗರಡಿಶಿಕ್ಷಣಕ್ಕೆ ಪ್ರಾಶಸ್ತ್ಯವನ್ನು ನೀಡಿದ್ದರು. ಗರಡಿ ಎನ್ನುವುದು 'ಗರುಡ' ಪದದಿಂದ ಬಂದಿದೆ. 'ಗರುಡ' ಎಂದರೆ ಅಂಗರಕ್ಷಕ. ಅಂಗರಕ್ಷಕನಿಗೆ ಮಲ್ಲವಿದ್ಯೆ ಅಥವಾ ಕುಸ್ತಿಯ ಜ್ಞಾನ ಅವಶ್ಯ. ಅದನ್ನು ರೂಢಿ ಮಾಡುವ ಸ್ಥಳ ಗರಡಿ. ಇತ್ತೀತ್ತಲಾಗಿ ಗರಡಿಗಳೆಂದರೆ ಮಲ್ಲವಿದ್ಯೆ, ಕುಸ್ತಿವಿದ್ಯೆ ಕಲಿಸುವ ವಿದ್ಯಾಕೇಂದ್ರಗಳಾಗಿವೆ.[೭೯] ಉತ್ತಮ ಸೈನಿಕರನ್ನು ಸಿದ್ಧಗೊಳಿಸುವ ಸೈನಿಕ ಶಾಲೆಗಳಾಗಿವೆ. ಯಾವುದೇ ಆಯುಧಗಳ ಉಪಯೋಗವಿಲ್ಲದೇ ಕೇವಲ ದೈಹಿಕ ಶಕ್ತಿ ಸಾಮರ್ಥ್ಯದ ಮೂಲಕ ಗೆಲ್ಲುವ ಕ್ರೀಡೆಯನ್ನು ಇಲ್ಲಿ ಕಲಿಸಲಾಗುತ್ತಿತ್ತು.

ನಾಯಕ ಅರಸುಮನೆತನಗಳಲ್ಲಿ ಮೊಟ್ಟ ಮೊದಲ ಗರಡಿಮನೆ 'ಕಂಪ್ಲಿಯ ಗರಡಿಮನೆ'. ಆ ನಂತರದಲ್ಲಿ ಈ ಗರಡಿ ಮನೆಗಳು ಎಲ್ಲಾ ಕಡೆ ಪಸರಿಸಿದವು. ಚಿತ್ರದುರ್ಗ, ಸುರಪುರ, ಆನೆಗೊಂದಿ, ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿಗಳಲ್ಲಿ ಅರಸರ ಕಾಲದಲ್ಲಿ ಗರಡಿಮನೆಗಳಿದ್ದವು. ಗರಡಿಕಲೆಯನ್ನು ರೂಢಿಸಿಕೊಂಡ ಕುಸ್ತಿಪಟುಗಳಿಗೆ 'ಜಟ್ಟಿಗಳೆಂದು ಕರೆಯುತ್ತಾರೆ. ಇವರು ನಾಯಕ ಅರಸರಿಗೆ ಆಶ್ರಯದಲ್ಲಿದ್ದು ಅರಸರಿಗೆ ಮಲ್ಲಯುದ್ಧ ಕಲೆಯನ್ನು ಕಲಿಸುವ ಗುರುಗಳಾಗಿದ್ದರು. ಚಿತ್ರದುರ್ಗ, ಸುರಪುರ, ಗುಡಗುಂಟಿ, ದೇವದುರ್ಗ, ಕನಕಗಿರಿಯಲ್ಲಿ ಇವರದೊಂದು ಜಾತಿಯಾಗಿಯೇ ಸೃಷ್ಟಿಯಾಗಿದೆ. ಇವರನ್ನು ಜಟ್ಟಿ ಮನೆತನದವರೆಂದು ಕರೆಯುತ್ತಾರೆ. ಇವರು ನಾಯಕ ಅರಸರ ಕಾಲದಲ್ಲಿ ಅರಮನೆಯ ಆವರಣದಲ್ಲಿ ಗರಡಿಮನೆಯ ಪ್ರದರ್ಶನ ನೀಡುತ್ತಿದ್ದರು.

ಸೈನಿಕರಿಗೆ ಹಾಗೂ ಅರಸರಿಗೆ ಕೋಟೆ ಏರುವ, ಬಗೆಬಗೆಯ ಬಂಡೆಗಲ್ಲುಗಳನ್ನು ಹತ್ತುವ ಬರಿಗಾಲಲ್ಲಿ ಎಣ್ಣೆಹಚ್ಚಿ ಜಾರುವ, ಕಲ್ಲನ್ನು ಏರಿಳಿಯುವ ತರಬೇತಿ ಯುದ್ಧಾಸ್ತ್ರಗಳಲ್ಲಿ ತಯಾರಿ, ಅಶ್ವಾರೋಹಣ, ಗಜಾರೋಹಣ, ಕಾಡುಮೃಗಗಳೊಂದಿಗೆ ಹೋರಾಟ, ಆನೆ ಕುದುರೆಗಳೊಂದಿಗೆ

ಹೋರಾಡುವ ತರಬೇತಿಯನ್ನು ಇಲ್ಲಿ ನೀಡಲಾಗುತ್ತಿತ್ತು. ಅಲ್ಲದೆ ಗುದಗತ್ತಿ, ಬಾಕು, ಕಠಾರಿ, ಕೋವಿಗಳನ್ನು ಹಿಡಿದು ಹೋರಾಡುವಂತಹ ರಣಶಿಕ್ಷಣವನ್ನು ಕೊಡುತ್ತಿದ್ದರು. ಇವುಗಳಲ್ಲಿ ಕೆಲವನ್ನು ಗರಡಿ ಮನೆಗಳಲ್ಲಿ ತರಬೇತಿ ನೀಡಿದರೆ, ಕೆಲವನ್ನು ಬಯಲುಪ್ರದೇಶದಲ್ಲಿ ನೀಡಲಾಗುತ್ತಿತ್ತು. ಚಿತ್ರದುರ್ಗದ ಅರಸರ ಕಾಲದಲ್ಲಿ ಚಿತ್ರದುರ್ಗದ ಬೆಟ್ಟದ ಮೇಲೆ, ಕೆಳಗೆ, ಅನೇಕ ಗರಡಿ ಮನೆಗಳಿವೆ. ಕರ್ನಾಟಕದ ಯಾವ ನಾಯಕ ಅರಸು ಮನೆತನಗಳಲ್ಲೂ ಇಷ್ಟೊಂದು ಗರಡಿಮನೆಗಳು ಕಂಡುಬರುವುದಿಲ್ಲ. ಹೀಗಾಗಿ ಜನಪದರು ಚಿತ್ರದುರ್ಗವನ್ನು ಬಯಲು ಗರಡಿ ಮನೆಯೆಂದು ಕರೆದಿದ್ದಾರೆ. ಈ ಗರಡಿ ಮನೆಗಳಲ್ಲಿ ದೊಡ್ಡಗರಡಿ, ಸಣ್ಣಗರಡಿ, ಬುರುಜಿನಹಟ್ಟಿಗರಡಿ, ಕೆಳಕೋಟೆಯಲ್ಲಿರುವ ರಾಯರಗರಡಿ, ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜಿನ ಹಿಂಭಾಗದ ಆಂಜನೆಯಗರಡಿಗಳು ಪ್ರಮುಖವಾಗಿವೆ.

ಒಂದನೇ ಕಸ್ತೂರಿ ರಂಗಪ್ಪನಾಯಕ(ಕ್ರಿ.ಶ. ೧೬೦೨-೧೬೫೨)ನ ಕಾಲದಲ್ಲಿ ಏಕನಾಥೇಶ್ವರಿ ದೇವಾಲಯದ ವಾಯುವ್ಯದಲ್ಲಿ ಗುಡ್ಡದ ಪಾರ್ಶ್ವದಲ್ಲಿ ಒಂದು ಗರಡಿ ಮಾಡಿಕೊಳ್ಳಲಾಗಿತ್ತು. ಎರಡನೇ ಕಸ್ತೂರಿರಂಗಪ್ಪನಾಯಕನ (ಕ್ರಿ.ಶ. ೧೭೪೯-೧೭೫೪) ಕಾಲದಲ್ಲಿ ಇನ್ನೊಂದು ಗರಡಿಯನ್ನು ಕಟ್ಟಿಸಿದ್ದನ್ನು ವಂಶಾವಳಿಗಳು ಮಾಹಿತಿ ನೀಡುತ್ತವೆ. ಸ್ವತಃ ಇವರು ಮಲ್ಲಯುದ್ಧದಲ್ಲಿ ನಿಷ್ಣಾತರಾಗಿದ್ದರು. ಹಾಗೂ ಗರಡಿಕಲೆಗೆ ಪ್ರೋತ್ಸಾಹ ಕೊಟ್ಟಿದ್ದರು. ಭರಮಣ್ಣನಾಯಕನ ಮಗ ಹಿರೇಜಂಪಣ್ಣನಾಯಕ ಗರಡಿ ಮನೆಯ ಗರುಡಾಳೆನಿಸಿದ್ದ ಎಂಬುದಕ್ಕೆ ಕೋಲಾಟದ ನುಡಿಯೊಂದು ಈ ರೀತಿ ಹೇಳುತ್ತದೆ.

ಗರಡಿಮನೆಗೋಗಿ ಬರುವ ಜಂಪಣ್ಣಗೆ
ಒಂಟಿ ಕೊರಳಿಗೆ ಗಂಟಿಯ ಸರಮಾಲೆ
ಆನೆಯ ಕೊರಳಿಗೆ ಕೀಲುಸರಪಳಿ ಹಾಕಿ
ಆರಾಳ ನಡುವೆ ಬರುವಾನೆ ಕೋಲು ||[೮೦]

ಮದಕರಿರಾಜೇಂದ್ರದಂಡಕವು ಕೊನೆಯ ಮದಕರಿನಾಯಕನು ತನ್ನ ದಿನಚರಿಯಂತೆ ಬೆಳಗ್ಗೆ ಎದ್ದು ಚಂದ್ರಮೌಳೀಶ್ವರನನ್ನು ಧ್ಯಾನಿಸಿ, ಪಂಚಾಂಗವನ್ನು ಕೇಳಿ, ದೇಹನೈರ್ಮಲ್ಯವನ್ನು ಹೊಂದಿ, ಸುಗಂಧ ಪರಿಮಳದ ನೀರಿನಿಂದ ಮುಖವನ್ನು ತೊಳೆದು, ಹಣೆಯಲ್ಲಿ ಭಂಡಾರವನ್ನಿಟ್ಟು, ವಸ್ತ್ರಾಲಂಕಾರ ಭರಿತನಾಗಿ ಗರಡಿಮನೆಯನ್ನು ಹೊಕ್ಕು ಜಟ್ಟಿಯರ ಜೊತೆ ಕುಸ್ತಿಯಾಡಿ ಮಲ್ಲರನ್ನು ತಲ್ಲಣಗೊಳಿಸುತ್ತಿದ್ದನೆಂದು[೮೧] ಹೇಳುತ್ತದೆ. ಮದಕರಿನಾಯಕನು ಗರಡಿ ಮನೆಯಿಂದ ಬರುವ ಪರಿಯನ್ನು ಕೋಲುಪದ ಈ ರೀತಿ ಹೇಳುತ್ತದೆ.

ಎರಡು ಕಯ್ಯಿಗೆ ಎರಡು ಮೂರಡಿ ಸರಪಣಿ ಹಾಕಿ
ಗರುಡಿಮನೆಯಿಂದ ಬರುವೋನೆ | ಕೋಲು....

ಗರುಡಿಮನೆಯಿಂದ ಬರುವಾಗ ಮೆದಕೇರಣ್ಣನ
ಗರುಡಾಳನೆಂದು ಕರೆದಾರೇ | ಕೋಲು[೮೨]

ಗರಡಿಮನೆಯನ್ನು ಉಲ್ಲೇಖಿಸುವ ಶಾಸನವೊಂದು ಬೆಳಕಿಗೆ ಬಂದಿದೆ. ಏಕನಾಥೇಶ್ವರಿ ದೇವಾಲಯದ ಹಿಂಭಾಗದಲ್ಲಿ ವಾಯುವ್ಯದಿಕ್ಕಿನ ಭೀಮನಕಲ್ಲು, ಕೋಡುಗಲ್ಲುಗಳ ಮಧ್ಯೆ ಈ ಗರಡಿ ಇದ್ದು, ಕಡಿದಾದ ಬಂಡೆಯ ಬುಡದಲ್ಲಿ ಕಟ್ಟಿ ನಿರ್ಮಿಸಲಾಗಿರುವ ಗರಡಿಯಲ್ಲಿ ಶಾಸನವಿದ್ದು, ಚಿತ್ರದುರ್ಗದ ಶಾಸನೋಕ್ತ ಗರಡಿ ಮನೆಯೆನಿಸಿದೆ.[೮೩]

ಚಿತ್ರದುರ್ಗದ ಅರಸರು ಅಂಗಸಾಧನೆಯಲ್ಲಿ ವಿಶೇಷ ಸಾಧನೆಯನ್ನು ಮಾಡಿದ್ದರು. ದೊಡ್ಡ ದೊಡ್ಡ ಸಂಗ್ರಾಣಿಕಲ್ಲುಗಳನ್ನು ಎರಡು ಕೈಯ್ಯಲ್ಲಿ ಹಿಡಿದು ಇವೆರಡಕ್ಕಿಂತಲೂ ಭಾರವಾದ ಇನ್ನೊಂದು ಕಲ್ಲನ್ನು ಕತ್ತಿಗೆ ಹಾಕಿಕೊಂಡು ಸಾಧನೆ ಮಾಡುತ್ತಿದ್ದರು. ಅಲ್ಲದೆ ಇವರಿಗೆ ಅಂಗಸಾಧನೆ, ಅಂಬು ಹೊಡೆಯುವುದು, ದೊಣ್ಣೆವರಸೆ ಮಾಡುವುದು, ಕತ್ತಿಪಠಾ ತಿರುಗಿಸುವುದರಲ್ಲಿ ಪರಿಣತರಾಗಿದ್ದರು. ಇವರ ದೈಹಿಕ ಶಕ್ತಿ ಎಷ್ಟಿತ್ತೆಂಬುದಕ್ಕೆ ಒಂದು ಪ್ರಸಂಗ ಇಂತಿದೆ. ಹಿರೇಮದಕರಿನಾಯಕನು ದೊರೆಯಾಗಿ ಒಡ್ಡೋಲಗದಲ್ಲಿ ಕುಳಿತಿರುವಾಗ ಓಲಗಶಾಲೆಯಲ್ಲಿ ಸಭಿಕರು ಕಂಬ ಒರಗಿಕೊಂಡು ಕೂತಿರಲು ದೊರೆಯ ತಮ್ಮನೊಬ್ಬನು ಆ ಕಂಬವನ್ನು ತನ್ನ ಬಲದಿಂದ ಎತ್ತಿ ಹತ್ತಿರ ಕೂತಿದ್ದವರ ಅಂಗಿಯ ಮೇಲೆ ಇಟ್ಟಿದ್ದನು. ಕೊನೆಗೆ ದರ್ಬಾರು ಆದಮೇಲೆ ಆ ಮನುಷ್ಯ ಎದ್ದಾಗ ಅಂಗಿ ಹರಿದುಹೋಗಿ ಸಭಿಕರ ವಿನೋದಕ್ಕೆ ಗುರಿಯಾಗಿದ್ದನು.[೮೪] ಚಿತ್ರದುರ್ಗದ ಕೋಟೆಯ ಸಿದ್ದಯ್ಯನಬಾಗಿಲ ಬಳಿಯಲ್ಲಿಯ ಮುಂದಿನ ವಿಶಾಲವಾದ ಅಂಕಣದಲ್ಲಿ ನಾನಾ ಬಗೆಯ ಕ್ರೀಡೆಗಳು ನಡೆಯುತ್ತಿದ್ದವಂತೆ, ಅಲ್ಲದೆ ಗೋಪಾಲಸ್ವಾಮಿಯ ಹೊಂಡದ ಜಾರುಬಂಡೆಯು ಕ್ರೀಡೆಯ ತರಬೇತಿ ಸ್ಥಳವಾಗಿತ್ತು.

ಸುರಪುರದ ಅರಸ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨)ನು ದಿನಾಲು ಪ್ರಾತಃಕಾಲದಲ್ಲಿ ಎದ್ದು ಪ್ರಾತರ್ವಿಧಿ ಮುಗಿದ ಮೇಲೆ ಗರಡಿಮನೆಯಲ್ಲಿ ಹೋಗಿ ಅಂಗಸಾಧನೆ ಮಾಡುತ್ತಿದ್ದನು. ಅರಸ ಬರುವಷ್ಟರಲ್ಲಿಯೇ ಜಟ್ಟಿಯರು ಬಂದಿರುತ್ತಿದ್ದರು. ಇವರನ್ನು ಉಸ್ತಾದ್ ಎಂದು ಕರೆಯುತ್ತಿದ್ದರು. ಇವರೇ ರಾಜನಿಗೆ ಮಲ್ಲಯುದ್ಧ, ಕಂಭಕಟ್ಟುವುದು, ಕುಸ್ತಿಯಾಡುವುದು, ಗರಡಿಸಾಧನೆ ಕಲಿಸುತ್ತಿದ್ದರು. ಅರಸ ಇವರನ್ನೇ ಗುರುಗಳೆಂದು ಭಾವಿಸುತ್ತಿದ್ದನು. ಅಂಗಸಾಧನೆಯಾಗಿ ಗರಡಿಕಾರ್ಯಗಳು ಮುಗಿದ ಮೇಲೆ ಕುದುರೆಸವಾರರು ಅರಸನ ಕುದುರೆಯನ್ನು ತಂದು ನಿಲ್ಲಿಸುತ್ತಿದ್ದರು. ಆ ಸವಾರರೊಡನೆ ಕುದುರೆ ಸವಾರಿಯನ್ನು ಮತ್ತು ಭಲ್ಲೆ ಬಗೆಯುವುದು, ಪಟ್ಟಿಹೊಡೆಯುವುದನ್ನು ಮಾಡುತ್ತಿದ್ದನು.[೮೫]

ಸುರಪುರದಲ್ಲಿ ಜಟ್ಟಿಯರಿಗಾಗಿಯೇ ಒಂದು ಕೇರಿ ಇದೆ. ಇವರು ತೆಲುಗು ಮಾತನಾಡುವರು. ಅರಸರು ಇವರಿಗೆ ಇನಾಮುಭೂಮಿಗಳನ್ನು ನೀಡಿದ್ದಾರೆ. ಇವರನ್ನು ಅರಸರಲ್ಲದೆ ಇತರ ಬೇಡರು ಸಹಾ

ಗುರುಗಳೆಂದು ಭಾವಿಸುತ್ತಿದ್ದರು. ಸುರಪುರದಲ್ಲಿ ೧೪ ಕೇರಿಗಳಲ್ಲಿ ಗರಡಿಮನೆಗಳಿದ್ದವಲ್ಲದೆ, ಎಲ್ಲಾ ಕಡೆ ಗರಡಿಯಲ್ಲಿ ಸೈನಿಕರಿಗೆ ಮಲ್ಲಯುದ್ಧ, ಗುಂಡುಎತ್ತುವ, ಪಟೇತಿರುಗಿಸುವ ಸೈನಿಕ ಶಿಕ್ಷಣವನ್ನು ಅರಸು ಕೊಡಿಸುತ್ತಿದ್ದರು. ಇದರಂತೆ ಸಂಸ್ಥಾನದ ಗ್ರಾಮಗಳಲ್ಲಿ ಗರಡಿಮನೆಗಳಿದ್ದು, ಅಲ್ಲಿಯೂ ಗರಡಿ ಶಿಕ್ಷಣವನ್ನು ಕೊಡಲು ಅರಸರು ಆಜ್ಞೆ ಮಾಡಿದ್ದರು.

ಸುರಪುರದ ಅರಸರು ಜಟ್ಟಿಕಾಳಗಗಳನ್ನು ನಡೆಸುತ್ತಿದ್ದರು. ಬೇರೆ ಬೇರೆ ರಾಜ್ಯಗಳಿಂದ ಜಟ್ಟಿಯರು ಸುರಪುರಕ್ಕೆ ಆಗಮಿಸುತ್ತಿದ್ದರು. ಮೈಸೂರಿನಿಂದ ಅನೇಕ ಜಟ್ಟಿಯರನ್ನು, ಸುರಪುರದ ಅರಸರು ಕರೆಯಿಸಿ ಇಲ್ಲಿಯೇ ಇಟ್ಟುಕೊಂಡು ಅವರ ಖರ್ಚನ್ನು ನೋಡಿಕೊಳ್ಳುತ್ತಿದ್ದರು. ಮೂರು ತಿಂಗಳಿನವರೆಗೆ ಎರಡೂ ಪಕ್ಷದವರು ಗರಡಿಗಾಗಿ ತಯಾರಾದ ಮೇಲೆ ಒಂದು ದಿನ ಗರಡಿಕಾಳಗವನ್ನು ನಡೆಸಲಾಗುತ್ತಿತ್ತು.

ಕಾಳಗವು ಸುರಪುರದ ಅರಮನೆಯ ಅರಸರ ಪಟಾಂಗಣದಲ್ಲಿ ನಡೆಯುತ್ತಿತ್ತು. ಅಲ್ಲಿ ಕೆಮ್ಮಣ್ಣಿನ ಬಣವನ್ನು ತಯಾರಿಸಿರುತ್ತಿದ್ದರು. ಕಾಳಗದ ದಿನ ಜಟ್ಟಿಯರು ತಲೆಕ್ಷೌರ ಮಾಡಿಸಿಕೊಳ್ಳುತ್ತಿದ್ದರು. ಅವರು ಕಾಳಗಕ್ಕೆ ತೆರಳುವಾಗ, ಅವರ ಪತ್ನಿಯರು ತಮ್ಮ ಪತಿಯರು ಮರಳಿ ಬರುವರೋ ಇಲ್ಲವೆಂಬ ಶಂಕೆಯಿಂದ ದುಃಖದಿಂದ ಆರತಿ ಬೆಳಗುತ್ತಿದ್ದರು. ಕಾಳಗದಲ್ಲಿ ಪ್ರವೇಶಿಸುವ ಮುನ್ನ ಜಟ್ಟಿಯರು ಅರಸರಿಗೆ ಹಾಗೂ ಉಳಿದ ಹಿರಿಯರಿಗೆಲ್ಲ ನಮಸ್ಕರಿಸಿ ಕಾಳಗಕ್ಕೆ ಪ್ರವೇಶಿಸುತ್ತಿದ್ದರು. ಚಡ್ಡಿಯುಟ್ಟು, ಕೈಯ್ಯಲ್ಲಿ ವಜ್ರಮುಷ್ಠಿಗಳನ್ನು ಬೆರಳಿಗೆ ಕಟ್ಟಿಕೊಂಡು ಕಾಳಗ ಮಾಡುತ್ತಿದ್ದರು. ವಜ್ರಮುಷ್ಠಿಯಿಂದ ತಲೆಗೆಲ್ಲ ಹೊಡೆಯುತ್ತಿದ್ದರು. ಹೊಡೆತವನ್ನು ತಪ್ಪಿಸಿಕೊಳ್ಳುತ್ತ ಎದುರಾಳಿಯನ್ನು ಸೋಲಿಸ ಬೇಕಾಗುತ್ತಿತ್ತಲ್ಲದೆ, ಅನೇಕ ಪ್ರಸಂಗಗಳಲ್ಲಿ ಪ್ರಜ್ಞೆ ತಪ್ಪುತ್ತಿತ್ತು. ಆವೇಶಭರಿತವಾಗಿರುವ ಈ ಕಾಳಗದಲ್ಲಿ ಗೆದ್ದ ಜಟ್ಟಿ, ಸೋತವನನ್ನು ಜನರು ಬಿಡಿಸುವುದರೊಳಗಾಗಿ, ಒಮ್ಮೊಮ್ಮೆ ಹಿಸುಕಿ ಕೊಂದೇ ಬಿಡುತ್ತಿದ್ದನು. ಈ ರೀತಿ ಆವೇಶದಿಂದ ಸುರಪುರ ಸಂಸ್ಥಾನದಲ್ಲಿ ಅರಸನ ಸಮ್ಮುಖದಲ್ಲಿ ಜಟ್ಟಿಕಾಳಗವು ನಡೆಯುತ್ತಿತ್ತು. ಕೊನೆಗೆ ಗೆದ್ದವರಿಗೆ ಅರಸ ಸನ್ಮಾನ ಸತ್ಕಾರಗಳನ್ನು ಮಾಡುತ್ತಿದ್ದನು.

ಆನೆಗೊಂದಿಯಲ್ಲಿಯೂ ಅರಸರ ದಿವಾನದಲ್ಲಿ ಗರಡಿಮನೆಯಿತ್ತು. ಇಲ್ಲಿಯ ಅರಸರು ದಿನಾಲು ಗರಡಿ ಸಾಧನೆಯನ್ನು ಮಾಡುತ್ತಿದ್ದರು. ಇವರು ಕಸರತ್ತಿಗೆ ಬಳಸುವ ಗುಂಡುಗಳು, ದಂಡಿಗೆಗಳು ಈ ವಂಶಸ್ಥರ ಮನೆಯಲ್ಲಿವೆ. ಗುಡಗುಂಟಿ ಅರಸರು ಗರಡಿ ಶಿಕ್ಷಣಕ್ಕೆ ಆದ್ಯತೆ ನೀಡಿದ್ದರು. ಗುಡಗುಂಟಿಯ ಕೋಟೆಯೊಳಗೆ ಸೋಮನಾಥನ ದೇವಸ್ಥಾನದ ಪಕ್ಕದಲ್ಲಿ ಸುಸಜ್ಜಿತವಾದ ಕಲ್ಲಿನಿಂದ ನಿರ್ಮಿಸಿದ ಗರಡಿ ಮನೆಯಿದೆ. ಅರಸ ಸೋಮಲಿಂಗನಾಯಕರ ಕಾಲದಲ್ಲಿ ಆ ಗರಡಿಮನೆಯನ್ನು ನಿರ್ಮಿಸಲಾಯಿತು. ಈ ಅರಸ ದಿನಾಲು ಗರಡಿ ಕಲಿಯಲು ಗರಡಿಮನೆಗೆ ಹೋಗುತ್ತಿದ್ದನು. ನಂತರದ ಅರಸರಾದ ಲಿಂಗನಾಯಕ, ರಾಜಾ ಜಡಿಸೋಮಪ್ಪನಾಯಕ, ತಿಪ್ಪರಾಜ ಜಡಿಸೋಮಪ್ಪನಾಯಕರು ಗರಡಿ ಕಲೆಯಲ್ಲಿ

ಪ್ರವೀಣರಾಗಿದ್ದರು.[೮೬] ಇವರ ಕಾಲದಲ್ಲಿ ಶೂರರಾದ ಅನೇಕ ಜಟ್ಟಿಗಳಿದ್ದರು. ಈ ಅರಸರು ಅನುವಂಶಿಕ ಜಟ್ಟಿಗಳಿಗೆ ತುಂಬಾ ಪ್ರೋತ್ಸಾಹ ಕೊಡುತ್ತಿದ್ದರು. ಈ ಜಟ್ಟಿಗಳು ಬೆಳ್ಳಗ್ಗೆ ಎದ್ದೊಡನೆ ಗುಡಗುಂಟಿಯ ಕೋಟೆಯೊಳಗಿನ ಗರಡಿ ಮನೆಗೆ ಹೋಗಿ, ಅಲ್ಲಿ ಮಲ್ಲಯುದ್ಧ ಮಾಡುತ್ತಿದ್ದರು. ನಂತರ ಮನೆಗೆ ಮರಳಿ ಸ್ನಾನ ಸಂಧ್ಯಾವಂದನೆ ಪೂರೈಸಿ ಅರಮನೆಯಲ್ಲಿ ಅರಸರ ಸೇವೆಯನ್ನು ಮಾಡುತ್ತಿದ್ದರು.

ದೇವದುರ್ಗದಲ್ಲಿಯೂ ಗರಡಿಮನೆಗಳಿದ್ದವು. ಅರಸರ ಮಕ್ಕಳಿಗೆ ಇಲ್ಲಿ ಗರಡಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಗರಡಿ ಅಭ್ಯಾಸ ಮಾಡುವ ಅಖಾಡದ ಸ್ಥಳವನ್ನು ಇಂದಿಗೂ ದೇವದುರ್ಗದಲ್ಲಿ ನೋಡಬಹುದಾಗಿದೆ. ಜಟ್ಟಿಮನೆತನದವರು ದೇವದುರ್ಗದಲ್ಲಿ ಇದ್ದಾರೆ. ಅರಸರ ಅರಮನೆಯ ಹಬ್ಬಗಳಲ್ಲಿ ಇವರು ಭಾಗವಹಿಸುತ್ತಿದ್ದರು. ಇವರಿಗೆ ಅರಸರು ಜಮೀನನ್ನು ನೀಡಿದ್ದಾರೆ. ಇಂದಿಗೂ ಆ ಜಮೀನುಗಳಿಗೆ ಜಟ್ಟಿಯರಹೊಲಗಳೆಂದು ಕರೆಯುತ್ತಾರೆ.

ನಾಯಕ ಅರಸರು ಪ್ರಜಾಪಾಲಕರು, ಧರ್ಮಸಹಿಷ್ಣುಗಳು, ಸಾಹಿತ್ಯ, ಶಿಕ್ಷಣ ಪ್ರಿಯರಾಗಿದ್ದರಿಂದ ಇವರ ಆಸ್ಥಾನದಲ್ಲಿ ಅನೇಕ ವಿದ್ವಾಂಸರು, ಪಂಡಿತರು, ಸಂಗೀತಗಾರರಿದ್ದರು. ಅಲ್ಲದೆ ಅನೇಕ ಅಗ್ರಹಾರಗಳು ಮತ್ತು ಬ್ರಹ್ಮಪುರಿಗಳು ಸ್ಥಾಪಿಸಲ್ಪಟ್ಟ ಉದಾಹರಣೆಗಳಿವೆ. ಅವುಗಳಿಗೆ ದಾನ-ದತ್ತಿಗಳನ್ನು ನೀಡುವುದರ ಮೂಲಕ ಪೋಷಿಸಿ ಬೆಳೆಸಿದರು. ಇದು ನಾಯಕ ಅರಸರು ಪ್ರಾಚೀನಕಾಲದಿಂದಲೂ ಬಂದ ಅಗ್ರಹಾರ ಪದ್ಧತಿಯನ್ನು ಅನುಸರಿಸಿರುವುದನ್ನು ಗುರುತಿಸಬಹುದಾಗಿದೆ.

ಚಿತ್ರದುರ್ಗದ ಅರಸನಾದ ಇಮ್ಮಡಿ ಮದಕರಿನಾಯಕ(ಕ್ರಿ.ಶ. ೧೬೫೨-೧೬೭೪)ನು ಕಡಲೆಗುದ್ದು ಗ್ರಾಮದಲ್ಲಿ ಅಗ್ರಹಾರವನ್ನು ಸ್ಥಾಪಿಸಿ, ಅದನ್ನು ಕ್ಷಾತ್ರಭಟ್ಟರ ಅಭಿವೃದ್ಧಿಗೆ ಖರ್ಚು ಮಾಡುವಂತೆ ಆದೇಶಿಸಿ ಶಿಲಾಶಾಸನವನ್ನು ಬರೆಸಿದನು.[೮೭] ಚಿಕ್ಕಣ್ಣನಾಯಕನ ಪುತ್ರ, ಮದಕರಿನಾಯಕನು ಜಗಳೂರು ಸೀಮೆಯಲ್ಲಿದ್ದು ಕಸವನಳ್ಳಿಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಸೀನಯ್ಯನೆಂಬುವವನಿಗೆ ವಹಿಸಿಕೊಟ್ಟನು.[೮೮] ಅಲ್ಲದೆ ಕೃಷ್ಣದೇವರಾಯನ ಕಾಲದಲ್ಲಿ ಸ್ಥಾಪಿಸಲಾಗಿದ್ದ ಆನೆಸಿದ್ರಿ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ ಶಿಲಾಶಾಸನವನ್ನು[೮೯] ಹೊರಡಿಸುತ್ತಾನೆ. ಬಿಚ್ಚುಗತ್ತಿ ಭರಮಣ್ಣನಾಯಕ (ಕ್ರಿ.ಶ. ೧೬೮೯-೧೭೨೧)ನು ಬಿಳಿಚೋಡುಸೀಮೆಯ ಕಲ್ಲೇನಹಳ್ಳಿ ಗ್ರಾಮ[೯೦] ಹಾಗೂ ಚಿತ್ರದುರ್ಗಸೀಮೆಗೆ ಸೇರಿದ ಹುಳುವಧಾರ ಗ್ರಾಮಗಳನ್ನು[೯೧] ಅಗ್ರಹಾರಗಳನ್ನಾಗಿ ಮಾಡಿದನು. ಹಿರೇಮದಕರಿನಾಯಕ (ಕ್ರಿ.ಶ. ೧೭೨೧-೧೭೪೯)ನು ಹಿಂದೆ ಸ್ಥಾಪಿಸಲ್ಪಟ್ಟ ಆನೆಸಿದ್ರಿ ಅಗ್ರಹಾರವನ್ನು ಕವಿಕೋನಪ್ಪನ ಅಗ್ರಹಾರವೆಂದು ಮರುನಾಮಕರಣ ಮಾಡುವುದರೊಂದಿಗೆ ಅದಕ್ಕೆ ಬೇಕಾದ ದತ್ತಿಯನ್ನು ನೀಡಿದನು.[೯೨] ಅಲ್ಲದೆ ಕೊಡಗನೂರುಸೀಮೆಗೆ ಸೇರಿದ ಹಾಳುಬಿದ್ದಿದ್ದ ಮಲ್ಲಣ್ಣಹಳ್ಳಿಯನ್ನು ದುರಸ್ತಿಗೊಳಿಸಿ ಅದಕ್ಕೆ 'ಮದಕರಿಪುರ'

ವೆಂದು ನಾಮಕರಣ ಮಾಡಿ ಅಗ್ರಹಾರ ಸ್ಥಾಪಿಸಿದನು. ತರುವಾಯ ಇದನ್ನು ಶಾಮಾಚಾರ್ಯರೆಂಬುವವರಿಗೆ[೯೩] ವಹಿಸಿಕೊಡಲಾಯಿತು.

ಸುರಪುರನಾಯಕ ಅರಸರಲ್ಲಿ ಕೃಷ್ಣಪ್ಪನಾಯಕ (ಕ್ರಿ.ಶ. ೧೮೨೭-೧೮೪೩)ನು 'ಚೈನಯಜ್ಞ ಮಾಡಲು ಸುರಪುರದಲ್ಲಿರುವ ಸಿದ್ಧನತೋಟಕ್ಕೆ ಕಡಪ, ಗುಂಟೂರು, ನೆಲ್ಲೂರು, ಪಂಢರಪುರ ಮುಂತಾದ ಪ್ರದೇಶಗಳಿಂದ ಆಗಮಿಸಿದ್ದ ದ್ವೈತ, ಅದ್ವೈತ ಹಾಗೂ ವಿಶಿಷ್ಟಾದ್ವೈತಮತದ ಬ್ರಾಹ್ಮಣ ಪಂಡಿತರಿಗೆ ಸುರಪುರಕ್ಕೆ ಹೊಂದಿಕೊಂಡಿರುವ ರಂಗಂಪೇಟೆಯಲ್ಲಿರುವ ಸ್ಥಳಗಳನ್ನು ಅಗ್ರಹಾರ ರೂಪದಲ್ಲಿ ನೀಡಿದ್ದನು. ಹಾಗೂ ಒಬ್ಬೊಬ್ಬ ಬ್ರಾಹ್ಮಣನಿಗೆ ೪೦ ಭಿಘೆ ಇನಾಮುಭೂಮಿ ಹಾಗೂ ಗ್ರಾಮಗಳನ್ನು ಜಾಗೀರು ಹಾಕಿಕೊಟ್ಟಿದ್ದನು.[೯೪] ಈ ರಂಗಂಪೇಟೆಯಲ್ಲಿರುವ ಅಗ್ರಹಾರದಲ್ಲಿ ರಾಮಾಚಾರ್ಯರೆಂಬ ವೇದಾಧ್ಯಯನ ಪಂಡಿತರು ನೂರಾರು ವಿದ್ಯಾರ್ಥಿಗಳಿಗೆ ಸಂಸ್ಕೃತ ಅಧ್ಯಯನ ಮಾಡಿಸುತ್ತಿದ್ದರು. ಆಗ ಈ ಅಗ್ರಹಾರದ ಪರಿಸರವು ವಿದ್ಯಾಕೇಂದ್ರದ ತಾಣವೆಂಬುವಷ್ಟರ ಮಟ್ಟಿಗೆ ತನ್ನ ಪ್ರಭಾವವನ್ನು ಹೊಂದಿತ್ತು.[೯೫]

ಅದೇ ರಂಗಂಪೇಟೆಯ ಅಗ್ರಹಾರದಲ್ಲಿ ಒಂದು ಸಂಸ್ಕೃತ ಪಾಠಶಾಲೆಯಿತ್ತು. ಬಡಶೇಷ ತಿರುಮಲರಾಯರು, ಗದ್ವಾಲ ಪಾಂಡುರಂಗಾಚಾರ್ಯರು, ದೀಕ್ಷಾಚಾರ್ಯರು, ತಿರುಮಲರಾಯರು ಸನಾತನಧರ್ಮದ ಅಭಿಮಾನಿಗಳು ವೇದ ಹಾಗೂ ವೇದಾಂಗಗಳ ಅಭಿವೃದ್ಧಿಯಾಗಲೆಂದು ವಿಭುದಾನಂದಕರೀ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ಯೋಗ್ಯವಾದ ಅಧ್ಯಾಪಕರನ್ನು ನೇಮಿಸಿದರು. ಆಂಧ್ರಪ್ರದೇಶದಿಂದ ಬಂದ ಝುಲ್ಲಿಪಾಳಿ ಸೀತಾರಾಮಶಾಸ್ತ್ರಿಗಳು ಪ್ರಧಾನಾಧ್ಯಾಪಕರಾಗಿದ್ದರಲ್ಲದೆ, ಶ್ರೀಪುಣೆ ರಾಘುವಾಚಾರ್ಯರು ಕಾವ್ಯಪಂಡಿತರು, ಅವಧಾನಿ ಶೇಷಾಚಾರ್ಯರು, ವ್ಯಾಕರಣಪಂಡಿತರು, ದೇವಪೂರದ ವೆಂಕಣ್ಣಭಟ್ಟರು ವೇದ ಮತ್ತು ಯಾಜ್ಞಿಕ ಪಂಡಿತರು ಋಗ್ವೇದಾದಿನಗಳನ್ನು ಬೋಧಿಸಿದಂತವರು. ವರದಾಚಾರ್ಯರೆಂಬುವರು ಶುಕ್ಲಯಜುರ್ವೇದ ಕಾಣ್ವಶಾಖೆಯ ಯಾಜ್ಞಿಕದ ಗುರುಗಳು. ಹೆಬ್ಬಾಳ ನಾರಾಯಣಶಾಸ್ತ್ರಿಗಳು ವ್ಯಾಕರಣಾಭ್ಯಾಸ ಮಾಡಿಸುತ್ತಿದ್ದರು.[೯೬] ಇದಕ್ಕೆಲ್ಲಾ ಸುರಪುರದ ಅರಸರ ಪೋಷಣೆ ಇತ್ತು. ಸ್ವತಂತ್ರ ನಂತರದಲ್ಲಿ ಈ ಅರಸರ ವಂಶಸ್ಥರು ತಮ್ಮ ಹಳೆಯ ದರಬಾರನ್ನೇ ಸರ್ಕಾರಕ್ಕೆ ಬಿಟ್ಟುಕೊಟ್ಟು, ಅಲ್ಲಿ ಸರ್ಕಾರಿ ಶಾಲೆ ನಡೆಯುವಂತೆ ಮಾಡಿದರು. ಹಾಗೆಯೇ ಗುಡಗುಂಟಿ ಅರಸರ ವಂಶಸ್ಥರು ಹಿಂದೆ ಅರಸರ ಅಧಿಕಾರಾವಧಿಯಲ್ಲಿಯ ಕಚೇರಿಯನ್ನು ಇಂದು ಸರ್ಕಾರಿ ಶಾಲೆ ನಡೆಸಲು ದಾನ ನೀಡಿದ್ದಾರೆ. ಇವುಗಳು ಇವರಲ್ಲಿಯ ವಿದ್ಯಾಭಿಮಾನವನ್ನು ತೋರಿಸುತ್ತವೆ.

ಕನಕಗಿರಿ ನಾಯಕ ಅರಸರು ಆಸ್ಥಾನದಲ್ಲಿ ಬ್ರಾಹ್ಮಣ ಪುರೋಹಿತರಿಗೆ ಆಶ್ರಯ ನೀಡಿದ್ದರಲ್ಲದೆ, ಅಗ್ರಹಾರವನ್ನು ನಿರ್ಮಾಣ ಮಾಡಿ ಅವರಿಗೆ ಉಂಬಳಿಯನ್ನು ನೀಡಿದ್ದರು. ಮತ್ತೋಡು ನಾಯಕ ಅರಸರು ಶಿಕ್ಷಣಪ್ರೇಮಿಗಳಾಗಿದ್ದು ವೀರಶೈವ ಧರ್ಮಗ್ರಂಥಗಳನ್ನು ಅಧ್ಯಯನ ಮಾಡಿದ್ದರಲ್ಲದೇ ಅರಸ

ಹಾಲಪ್ಪನಾಯಕನು ಶೈವಶಾಸ್ತ್ರ ಪಾರಂಗತನಾಗಿದ್ದನು.[೯೭] ಅಲ್ಲದೇ ಈತ ತನ್ನ ಅಜ್ಜ ದೊಡ್ಡಣ್ಣ ನಾಯಕನು ಸ್ಥಾಪಿಸಿದ ಗಂಜಿಗೆರೆ ಅಗ್ರಹಾರ ಹಾಳುಬಿದ್ದಿರುವುದನ್ನು ನೋಡಿ, ಆ ಅಗ್ರಹಾರವನ್ನೂ ಅದರ ಕೆರೆಯನ್ನೂ ಜೀರ್ಣೋದ್ಧಾರ ಮಾಡಿ, ಅದಕ್ಕೆ ಮೊದಲಿದ್ದ ನರಸಾಪುರವೆಂಬ ಹೆಸರನ್ನು ಪುನಃ ಇಟ್ಟು ಅಗ್ರಹಾರದ ಚಟುವಟಿಕೆಗಳು ಮೊದಲಿನಂತೆಯೇ ಮುಂದುವರೆಯುವ ವ್ಯವಸ್ಥೆ ಮಾಡಿದನು.[೯೮]

ಹರತಿಯ ನಾಯಕ ಅರಸರು ವಿದ್ಯಾಪ್ರೇಮಿಗಳಾಗಿದ್ದು ತಿಮ್ಮಣ್ಣನಾಯಕ ಮತ್ತು ಹೊಟ್ಟೆಣ್ಣನಾಯಕರು ಸೂರ್ಯ ಮತ್ತು ಚಂದ್ರಗ್ರಹಣ ಪರ್ವದಿನಗಳಲ್ಲಿ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ನಿಡುಗಲ್ ದುರ್ಗದ ಮಂಗಳವಾಡಾ ಹೋಬಳಿಯಲ್ಲಿನ ಬೂದುಸುಗೊಂಡನಹಳ್ಳಿಯನ್ನು ಅಪ್ಪಾವಧಾನಿಗೆ ಅಗ್ರಹಾರವನ್ನಾಗಿ ಮಾಡಿ ದಾನ ನೀಡಿದರು.[೯೯]

ಹೀಗೆ ಕರ್ನಾಟಕದ ನಾಯಕ ಅರಸರು ಅನೇಕ ಪಂಡಿತರಿಗೆ, ವಿದ್ಯಾಸಂಸ್ಥೆಗಳಿಗೆ ಉದಾರವಾದ ದಾನ ನೀಡಿದ್ದಾರೆ. ಈ ದಾನದ ಪರಂಪರೆಯು ಪ್ರಾಚೀನಕಾಲದಿಂದಲೂ ನಡೆದುಕೊಂಡು ಬಂದು ಇಂದಿನವರೆಗೂ ಅವ್ಯಾಹತವಾಗಿ ಮುಂದುವರೆದುಕೊಂಡು ಬಂದಿದೆ. ಈ ಮನೆತನದ ಅರಸರು ಶಿಕ್ಷಣದ ಅಭಿವೃದ್ಧಿಗಾಗಿ, ರಾಜ್ಯದ ಜನತೆಗಾಗಿ ಸಾಕಷ್ಟು ಖರ್ಚು ಮಾಡಿದರು ನಿಜ. ಆದರೆ ತಾವು ಮಾತ್ರ ಓದು ಬರಹ ಬರುವಷ್ಟೇ ಕಲಿತಿರುವುದನ್ನು ನೋಡಿದರೆ ಅವರು ವಂಶಪಾರಂಪರ್ಯವಾದ ಆಳ್ವಿಕೆಯ ಕಡೆಗೆ ಗಮನಹರಿಸಿದರೆ ವಿನಹ ಶಿಕ್ಷಣ ಕುರಿತಾಗಿ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲವೆಂದು ಕಾಣುತ್ತದೆ. ಅವರು ಕಲಿತಿದುದು ಯುದ್ಧ ಹಾಗೂ ಆಡಳಿತ ವ್ಯವಹಾರಕ್ಕೆ ಬೇಕಾದ ಶಿಕ್ಷಣವನ್ನು ಮಾತ್ರ. ಹೀಗಾಗಿ ಇವರನ್ನು ಶೈಕ್ಷಣಿಕವಾಗಿ ಹಿಂದುಳಿದವರೆಂದೇ ಗುರುತಿಸಬೇಕಾಗುತ್ತದೆ. ಓದುವುದು, ಬರೆಯುವುದು ಬ್ರಾಹ್ಮಣರ ಕೆಲಸ. ಇಂಥ ಕೆಲಸಗಳಲ್ಲಿ ತೊಡಗುವುದು ಅಪಮಾನಕರವೆಂದೂ, ಶೂರರಿಗೆ ಸಲ್ಲದೆಂದೂ ಭಾವಿಸಿದ್ದರು.[೧೦೦]

ಹೈದ್ರಾಬಾದ್ ಸಂಸ್ಥಾನ ಸಾಲರ್‌ಜಂಗನ ಕಾಲದಲ್ಲಿ ಆಧುನಿಕ ಶಿಕ್ಷಣದ ಕಡೆಗೆ ಕಾಲಿಡತೊಡಗಿತು. ಶಿಕ್ಷಣದಲ್ಲಿ ಬೇಕಾದಷ್ಟು ಬದಲಾವಣೆಗಳನ್ನು ತರಲು ಸಾಲರ್‌ಜಂಗ್ ನಿರ್ಧರಿಸಿದನು. ಆ ಸಂದರ್ಭದಲ್ಲಿ ಹೈದ್ರಾಬಾದ್ ಕರ್ನಾಟಕ ಭಾಗದ ನಾಯಕ ಅರಸರ ಮಕ್ಕಳಿಗಾಗಿ, ಹೈದ್ರಾಬಾದ್ ನಿಜಾಮ ಶಿಕ್ಷಣ ಪಡೆಯುವ ಮುಕ್ತ ಅವಕಾಶ ನೀಡಿದ್ದನು. ಆಗ ಅನೇಕ ಸಂಸ್ಥಾನಿಕರ ಮಕ್ಕಳು ಹೈದ್ರಾಬಾದ್‌ನಲ್ಲಿ ಶಿಕ್ಷಣ ಪಡೆಯುತ್ತಿದ್ದರು.

ಪ್ರಸ್ತುತ ದಿನಗಳಲ್ಲಿ ಕರ್ನಾಟಕದ ನಾಯಕ ಅರಸರುಮನೆತನದವರ ಶಿಕ್ಷಣ ಸ್ಥಿತಿಗತಿಯನ್ನು ಸಮೀಕ್ಷಿಸಲಾಗಿದೆ. ಈ ಸಮೀಕ್ಷೆಯಿಂದ ಅಂಕಿ ಅಂಶಗಳು ಲಭ್ಯವಾಗಿವೆ. ಇವುಗಳ ಮೂಲಕ ಅವರ ಶಿಕ್ಷಣದ ಮಟ್ಟವನ್ನು ಅರಿಯಬಹುದು :

| ಅರಸು ಮನೆತನ | ಪ್ರಾಥಮಿಕ ಶಿಕ್ಷಣ | ಪ್ರೌಢ ಶಿಕ್ಷಣ | ಪದವಿ ಪೂರ್ವ | ವೃತ್ತಿಪರ ತರಬೇತಿ | ಪದವಿ | ಕಾನೂನು ಪದವಿ | ಇತರೆ |
|---|---|---|---|---|---|---|---|
| ಚಿತ್ರದುರ್ಗ | ೧೦ | ೮ | ೨ | ೨ | ೨ | ೨ | - |
| ಸುರಪುರ | ೧೭ | ೧೦ | ೪ | - | ೪ | ೨ | ೧ ಇಂಜಿನಿಯರ್ |
| ಆನೆಗೊಂದಿ | ೧೫ | ೮ | ೬ | - | ೪ | ೨ | - |
| ಗುಡಗುಂಟಿ | ೦೪ | ೦೨ | ೨ | - | ೧ | ೧ | - |
| ಗುಂತಗೋಳ | ೩ | - | - | - | ೩ | ೧ | - |
| ದೇವದುರ್ಗ | ೧ | ೩ | ೨ | ೨ | ೧ | ೧ | - |
| ಕನಕಗಿರಿ | ೧೦ | ೫ | ೨ | ೨ | ೧ | - | - |
| ಗುಡೇಕೋಟೆ | ೬ | ೨ | ೨ | - | - | - | - |
| ಜರಿಮಲೆ | ೩ | ೧ | - | - | - | - | - |
| ನಾಯಕನಹಟ್ಟಿ | ೭ | ೪ | - | - | ೧ | - | - |
| ಮತ್ತೋಡು | ೬ | ೨ | ೬ | - | ೨ | - | ೧. ಕೆ.ಎ.ಎಸ್.<br>೧. ಐ.ಎ.ಎಸ್.<br>೧. ಎಂ.ಬಿ.ಬಿ.ಎಸ್<br>೭. ಇಂಜನಿಯರ್ |

ಚಿತ್ರದುರ್ಗ ನಾಯಕ ಅರಸರ ವಂಶಸ್ಥರು ಚಳ್ಳಕೆರೆ, ಕಾಟಪ್ಪನಹಟ್ಟಿ, ಅರೆಹಳ್ಳಿಹಟ್ಟಿ, ಗುಡೇಕೋಟೆಗಳಲ್ಲಿ ವಾಸವಾಗಿದ್ದಾರೆ. ಸದ್ಯ ಈ ಮನೆತನದಲ್ಲಿ ಒಟ್ಟು ೨೬ ಜನ ವಿದ್ಯಾವಂತರಿದ್ದಾರೆ. ಸುರಪುರ ಅರಸುಮನೆತನದಲ್ಲಿ ೩೮ ಜನ ವಿದ್ಯಾವಂತರಿದ್ದಾರೆ. ಈ ಮನೆತನದಲ್ಲಿ ಬ್ಯಾರಿಸ್ಟರ್ ರಾಜಾ ವೆಂಕಟಪ್ಪ ನಾಯಕರು ಲಂಡನ್ನಿನಲ್ಲಿ ಬ್ಯಾರಿಸ್ಟರ್ ಪದವಿಯನ್ನು ಪಡೆದವರು. ಆನೆಗೊಂದಿ ಅರಸು ಮನೆತನದವರು ಸದ್ಯ ಹೊಸಪೇಟೆ, ಆನೆಗೊಂದಿಯಲ್ಲಿ ನೆಲೆಸಿದ್ದಾರೆ. ಈ ಕುಟುಂಬದಲ್ಲಿ ೩೫ ಜನ ವಿದ್ಯಾವಂತರಿದ್ದಾರೆ. ಗುಡಗುಂಟಿ ಅರಸುಮನೆತನದಲ್ಲಿ ೧೦ ಜನ ವಿದ್ಯಾವಂತರಿದ್ದಾರೆ. ಗುಂತಗೋಳದ ಅರಸುಮನೆತನದವರು ಗುಡಗುಂಟಿಯಲ್ಲಿ ವಾಸವಾಗಿದ್ದು ಆ ಮನೆತನದಲ್ಲಿ ಏಳುಜನ ವಿದ್ಯಾವಂತರಿದ್ದಾರೆ. ಇವರಲ್ಲಿ ರಾಜಾ ವೆಂಕಟಪತಿ ಅರಸರು ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಪದವಿ ಪಡೆದವರು. ದೇವದುರ್ಗ ಅರಸು ಮನೆತನದವರು ದೇವದುರ್ಗದಲ್ಲಿ ವಾಸವಾಗಿದ್ದು, ಅವರಲ್ಲಿ ೧೦ ಜನ ವಿದ್ಯಾವಂತರಿದ್ದಾರೆ. ಕನಕಗಿರಿ ಅರಸುಮನೆತನದವರು ಹುಲಿಹೈದರ್‌ನಲ್ಲಿ ವಾಸವಾಗಿದ್ದು, ಅವರಲ್ಲಿ ೨೦ ಜನ ವಿದ್ಯಾವಂತರಿದ್ದಾರೆ. ಗುಡೇಕೋಟೆ ಅರಸುಮನೆತನದವರು ಗುಡೇಕೋಟೆಯಲ್ಲಿಯೇ ನೆಲೆಸಿದ್ದು, ೧೦ ಜನ ವಿದ್ಯಾವಂತರಿದ್ದಾರೆ. ಜರಿಮಲೆ ಅರಸುಮನೆತನದವರು ಜರಿಮಲೆಯಲ್ಲಿ ವಾಸವಾಗಿದ್ದು ೪ ಜನ ಪ್ರೌಢಶಿಕ್ಷಣದವರೆಗೆ ಮಾತ್ರ ಓದಿದ್ದಾರೆ. ನಾಯಕನಹಟ್ಟಿ ಮನೆತನದಲ್ಲಿ ೧೨ ಜನ ವಿದ್ಯಾವಂತರಿದ್ದಾರೆ. ಮತ್ತೋಡು ಅರಸು

ಮನೆತನದವರಲ್ಲಿ ೨೪ ಜನ ವಿದ್ಯಾವಂತರಿದ್ದು, ಅವರಲ್ಲಿ ಹಾಲಪ್ಪ ಪಾಳ್ಳೆಗಾರ್ ಐ.ಎ.ಎಸ್ ಅಧಿಕಾರಿಯಾಗಿದ್ದರೆ, ಸಿದ್ದರಾಮಣ್ಣನಾಯಕ ಪಾಳ್ಳೆಗಾರ್ ಅವರು ಕೆ.ಎ.ಎಸ್ ಅಧಿಕಾರಗಳಾಗಿದ್ದರು. ಅಲ್ಲದೆ, ಈ ಮನೆತನದ ಒಂದು ಕುಟುಂಬದವರು ವಿದೇಶದಲ್ಲಿ ನೆಲೆಗೊಂಡಿದ್ದರೆ, ಮತ್ತೊಂದು ಕುಟುಂಬದವರು ಮತ್ತೋಡಿನ ಅರಸಿನ ತೋಟದಲ್ಲಿ ವಾಸವಾಗಿದ್ದಾರೆ.

ಈ ಸಮೀಕ್ಷೆಯನ್ನು ನೋಡಿದಾಗ ನಾಯಕ ಅರಸುಮನೆತನಗಳಲ್ಲಿ ಇತ್ತೀಚಿಗೆ ಶೈಕ್ಷಣಿಕ ಪ್ರಗತಿ ಕಂಡುಬರುತ್ತಿದೆ. ಸುರಪುರ, ಆನೆಗೊಂದಿ, ಗುಂತಗೋಳ, ಮತ್ತೋಡು ಅರಸುಮನೆತನಗಳಲ್ಲಿ ಮಾತ್ರ ಉನ್ನತ ಶಿಕ್ಷಣವನ್ನು ಪಡೆದಿರುವುದನ್ನು ಕಾಣಬಹುದಾಗಿದೆ. ಆರ್ಥಿಕವಾಗಿ ಹಿಂದುಳಿದ ಹಾಗೂ ಕೃಷಿಯಾಧಾರಿತ ಜೀವನದ ಅರಸುಮನೆತನಗಳ ಕುಟುಂಬಗಳ ಶೈಕ್ಷಣಿಕ ಗುಣಮಟ್ಟ ಚೆನ್ನಾಗಿಲ್ಲ. ಆದರೂ ಈಗಿನ ತಲೆಮಾರಿನಲ್ಲಿ ಅನಕ್ಷರಸ್ಥರಾರೂ ಈ ಮನೆತನದ ಕುಟುಂಬಗಳಲ್ಲಿ ಇಲ್ಲದಿರುವುದು ಕಂಡುಬರುತ್ತದೆ.

### ೫.೩ ಕಲೆ

ಕರ್ನಾಟಕದ ನಾಯಕ ಅರಸರು ಕಲಾಪ್ರಿಯರು, ಕಲೆಯ ಆಶ್ರಿತರೂ ಆಗಿದ್ದರು. ಇವರ ಆಶ್ರಯದಲ್ಲಿ ರೂಪಗೊಂಡ ಕಲೆ ಇವರ ಸೌಂದರ್ಯಪ್ರಜ್ಞೆ ಹಾಗೂ ಧಾರ್ಮಿಕತೆಯ ಮಟ್ಟವನ್ನು ತಿಳಿಯಲು ಸಹಾಯಕಾರಿಯಾಗಿದೆ. ಇವರ ಕಾಲದಲ್ಲಿ ಅನೇಕ ದೇವಾಲಯಗಳಲ್ಲಿ, ಮಠಗಳಲ್ಲಿ, ಅರಮನೆಗಳಲ್ಲಿ ಕಲೆಯನ್ನು ಅರಳಿಸಲು ಪ್ರಯತ್ನಿಸಿದರು. ಈ ಹಿನ್ನೆಲೆಯಲ್ಲಿ ಕಲಾಜಗತ್ತಿಗೆ ನಾಯಕ ಅರಸರು ಪ್ರೋತ್ಸಾಹಿಸಿದ ಪರಿಣಾಮವಾಗಿ ಚಿತ್ರಕಲೆ, ವಾಸ್ತುಶೈಲಿ ಹಾಗೂ ಮೂರ್ತಿಶಿಲ್ಪಗಳು ಸಮಕಾಲೀನ ಸಾಂಸ್ಕೃತಿಕ ಸಂದರ್ಭಗಳಾಗಿ ಪ್ರತಿಬಿಂಬಿತವಾಗಿದೆ. ವಿಶೇಷವಾಗಿ ಭಿತ್ತಿಚಿತ್ರಕಲೆಗೆ ನೀಡಿದ ಆಸಕ್ತಿ ಇವರ ಕಲಾ ಪ್ರಜ್ಞೆಯ ದ್ಯೋತಕವೆನ್ನಬೇಕು. ಪರಂಪರೆಯಲ್ಲಿ ವಿಜಯನಗರೋತ್ತರ ಲಕ್ಷಣಗಳೇ ಕಂಡುಬಂದರೂ ದೇಸಿತನದ ಸುಪ್ತ ಭಾವಾಭಿವ್ಯಕ್ತಿ ಇವರ ಕಲಾಮಾಧ್ಯಮದಲ್ಲಿ ಕಾಣಬಹುದಾಗಿದೆ.

#### ೫.೩.೧ ಚಿತ್ರಕಲೆ

ಚಿತ್ರಕಲೆ ಒಂದು ಅವ್ಯಕ್ತ ಭಾಷೆ. ಇದನ್ನು ನೋಡಿ ಗ್ರಹಿಸಲು ಸಾಧ್ಯ. ಇದು ಸಂಸ್ಕೃತಿಯ ಒಂದು ಭಾಗ. ಇದರಿಂದ ಮಾನವ ಅಭಿವ್ಯಕ್ತಿಯು ಹೇಗೆ ವ್ಯಕ್ತವಾಗಿದೆ ಎಂಬುದನ್ನು ತಿಳಿಯಬಹುದಾಗಿದೆ. ಜೊತೆಗೆ ಚಿತ್ರಕಲೆ ಸಾಂಸ್ಕೃತಿಕ ಇತಿಹಾಸದ ಆಕರವೂ ಹೌದು. ಈ ಚಿತ್ರಕಲೆ ಪರಂಪರೆಯನ್ನು ಧರ್ಮಪ್ರಚಾರದ ಸಾಧನವಾಗಿ, ವೈಯಕ್ತಿಕ ಭಾವನೆಗಳ ಅಭಿವ್ಯಕ್ತಿಗಾಗಿ, ಸಮಾಜವನ್ನು ರೂಪಿಸುವಲ್ಲಿ ಮನರಂಜನೆಗಾಗಿ, ರಾಜಕೀಯ ವೈಭವಗಳಿಗಾಗಿ ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ. ಚಿತ್ರಕಲೆ ಲಲಿತಕಲೆಯ ಮುಖ್ಯವಾದ ಒಂದು ವಿಭಾಗ. ಬಣ್ಣವನ್ನು ಉಪಯೋಗಿಸಿ ಎರಡು ಆಯಾಮಗಳ

ಮೇಲ್ಮೈಯಲ್ಲಿ ಚಿತ್ರರಚನೆ ಮಾಡುವ ಕಲೆಗೆ ಚಿತ್ರಕಲೆ ಎನ್ನುವರು. ಇದು ವಾಸ್ತು ಮತ್ತು ಶಿಲ್ಪಗಳಷ್ಟೇ ಹಳೆಯದಾಗಿದೆ.[೧೦೧]

ಚಿತ್ರಕಲೆಯನ್ನು ಭಿತ್ತಿಗಳ ಮೇಲೆ, ಗಾಜಿನ ಮೇಲೆ, ಕಾಗದಗಳ ಮೇಲೆ ನೋಡಬಹುದಾಗಿದೆ. ಯಾವುದೇ ಕಟ್ಟಡಗಳ ಯಾವುದೇ ಭಾಗದಲ್ಲಿ ಚಿತ್ರವನ್ನು ರಚಿಸಿ ಅಲಂಕರಿಸಿದ ವಿಧಾನವೇ ಭಿತ್ತಿಚಿತ್ರಕಲೆ. ಭಿತ್ತಿಚಿತ್ರಕಲೆಗೆ ಆಂಗ್ಲಭಾಷೆಯಲ್ಲಿ mural painting ಎಂದು ಕರೆಯುತ್ತಾರೆ. mural ಪದ ಲ್ಯಾಟೀನ್ ಭಾಷೆಯ murus ದಿಂದ ಬಂದಿದ್ದು. ಇದರ ಅರ್ಥ ಗೋಡೆ ಎಂದಾಗುತ್ತದೆ.[೧೦೨] ಗೋಡೆಯ ಮೇಲೆ ಬಣ್ಣದಿಂದ ಬರೆದ ಮತ್ತು ಕೊರೆದು ಅಂಟಿಸಿದ ಚಿತ್ರಗಳು mural ವ್ಯಾಪ್ತಿಗೆ ಬರುತ್ತವೆಯೆಂದು ಕೇಂಬ್ರಿಜ್ ವಿಶ್ವಕೋಶ ವಿವರಿಸುತ್ತದೆ. ಭಿತ್ತಿಚಿತ್ರವೆಂದರೆ ಗೋಡೆಯ ಮೇಲೆ ರಚಿಸಿರುವ ಚಿತ್ರ. ಭಿತ್ತಿ ಎಂಬುದಕ್ಕೆ ಗೋಡೆ, ಕುಡ್ಯ, ಮೂಲ, ತಳ, ಹಿನ್ನೆಲೆ, ಚಿತ್ರವನ್ನು ರಚಿಸಲು ಬೇಕಾದ ಸಾಧನಗಳಾದ ಬಟ್ಟೆ, ಗೋಡೆ ಎಂಬ ಅರ್ಥವಿದೆ.[೧೦೩]

ಗೋಡೆ ಇಲ್ಲವೆ ಮೇಲ್ಭಾವಣಿಗಳ ಮೇಲೆ ವರ್ಣದಿಂದ ರಚಿಸಿರುವ ಚಿತ್ರಗಳಾಗಿರಬಹುದು ಹಾಗೂ ಬಣ್ಣದ ಕಲ್ಲಿನ ತುಂಡುಗಳನ್ನು ಅಂಟಿಸಿ ರೂಪಿಸಿದ ಚಿತ್ರಗಳು ಭಿತ್ತಿಚಿತ್ರಗಳಾಗಿವೆ.[೧೦೪] ಗೋಡೆಗಳ ಮೇಲೆ ಬಿಡಿಸುವ ಚಿತ್ರಗಳನ್ನು ಭಿತ್ತಿಚಿತ್ರವೆಂದು ಕರೆಯುತ್ತೇವೆ. ಭಿತ್ತಿಚಿತ್ರಕಲೆಯ ಪ್ರಾಚೀನತೆಯ ಬಗ್ಗೆ ನಿಖರವಾದ ಕಾಲಸೂಚಿ ಹೇಳುವುದು ಅಸಾಧ್ಯವಾದುದಾದರೂ ಮನುಷ್ಯ ಕಲೆಯನ್ನು ತನ್ನ ಜೀವನದಲ್ಲಿ ಎಂದು ಕಂಡುಕೊಂಡನೋ ಅದೇ ಆ ಕಲೆಯ ಕಾಲವಾಗಿರಬಹುದು.[೧೦೫]

ಭಿತ್ತಿಚಿತ್ರಕಲೆ ಸೂಕ್ಷ್ಮಶಿಲಾಯುಗ, ನೂತನಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗದಲ್ಲಿ ಮಾನವ ಬೆಟ್ಟ, ಗುಡ್ಡಗಳಲ್ಲಿ ಕೆತ್ತಿದ ಚಿತ್ರಗಳ ಸ್ವರೂಪ ಬೇರೆ. ಏಕೆಂದರೆ ಅದರ ರಚನೆಯ ನೀತಿ ನಿಯಮಗಳಾಗಲಿ, ಉದ್ದ, ಅಗಲ, ಆಳತೆ ವಿಧಾನ ಗೊತ್ತಿರಲಿಲ್ಲ. ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮುಂತಾದ ರಾಜಮನೆತನಗಳ ಕಾಲದಲ್ಲಾಗಲೇ ಆ ಕಲೆಯಲ್ಲಿ ಪ್ರಾವಿಣ್ಯತೆಯನ್ನು ಸಾಧಿಸಲಾಯಿತು. ಆಗ ಇವರೆಲ್ಲ ಭಿತ್ತಿಚಿತ್ರಗಳಿಗೆ ಪ್ರಾಶಸ್ತ್ಯ ನೀಡಿದರು. ಛಾಯಾಗ್ರಹಣದ ಸೌಲತ್ತುಗಳು ಭಾರತದಲ್ಲಿ ಲಭ್ಯವಾಗುವತನಕ ರಾಜಮಹಾರಾಜರು ಅನುಕೂಲವಿದ್ದ ಇತರರೆಲ್ಲ ತಮ್ಮನ್ನು ರೂಪಿಸಿಕೊಳ್ಳಲು ಚಿತ್ರಕಲೆಗೆ ಮೊರೆಹೋಗಬೇಕಾಗಿತ್ತು.[೧೦೬]

ವಿಜಯನಗರ ಕಾಲದಲ್ಲಿ ಯಥೇಚ್ಛವಾಗಿ ದೇವಾಲಯಗಳು, ಭವನಗಳ ನಿರ್ಮಾಣ ಕಾರ್ಯ ನಡೆದಂತೆ ಭಿತ್ತಿಚಿತ್ರ ರಚನೆಯೂ ಸಾಗಿದ್ದಿತು. ಇವರ ಸಾಮಂತ ಅರಸರು ಹಾಗೂ ಅಧೀನದ ನಾಯಕ ಪಾಳೆಯಗಾರರು ಈ ಕಲೆಗೆ ಪ್ರೋತ್ಸಾಹವನ್ನು ನೀಡಿದ್ದಾರೆ. ವಿಜಯನಗರ ಪತನಾನಂತರ ಕರ್ನಾಟಕದಲ್ಲಿ ಮೈಸೂರು ಅರಸರು, ಸುರುಪುರದ ಅರಸರು, ಗುಡಗುಂಟಿ ಅರಸರು, ಕನಕಗಿರಿ ಅರಸರು, ನಿಪ್ಪಾಣಿ

ದೇಸಾಯಿಯರು, ನರಗುಂದ ಸಂಸ್ಥಾನದವರು, ವಿಜಾಪುರದ ಬಹಮನಿ ಸುಲ್ತಾನರು, ಇನ್ನಿತರ ಪಾಳೆಯಗಾರರು ಈ ಕಲೆಯನ್ನು ಬೆಳೆಸಿದರು.[೧೦೭]

ಕರ್ನಾಟಕದ ನಾಯಕ ಅರಸುಮನೆತನಗಳ ಕಾಲದಲ್ಲಿ ದೇವಾಲಯಗಳ, ಅರಮನೆಗಳ, ಮಠಮಾನ್ಯಗಳ ಚರ್ಚುಗಳ, ಮಸೀದಿಗಳ, ಸಮಾಧಿಗಳ ಮೇಲೆ ಹಾಗೂ ಮೇಲ್ಛಾವಣಿ, ಜಂತಿ-ತೊಲೆ, ಬೋದಿಗೆ, ಕಂಬ, ಬಾಗಿಲು, ಗೋಡೆ, ಕಿಟಕಿ-ಕಮಾನುಗಳ ಮೇಲೆ ವರ್ಣಚಿತ್ರಗಳನ್ನು ಬಿಡಿಸಿರುವುದನ್ನು ಕಾಣಬಹುದಾಗಿದೆ. ಈ ಚಿತ್ರಗಳ ಶೈಲಿ, ವಿನ್ಯಾಸ, ವಿಷಯವಸ್ತು, ವ್ಯಕ್ತಿಯಿಂದ-ವ್ಯಕ್ತಿಗೆ, ಸಮುದಾಯದಿಂದ ಸಮುದಾಯಕ್ಕೆ, ರಾಜಮನೆತನದಿಂದ ಇನ್ನೊಂದು ರಾಜಮನೆತನಕ್ಕೆ ವಿಭಿನ್ನವಾಗಿರುವುದಲ್ಲದೆ, ವೈವಿಧ್ಯತೆಗಳಿಂದ ಕೂಡಿರುವುದುಂಟು. ಅಲ್ಲಿಯ ಅರಸರ ಹಾಗೂ ಪ್ರಜೆಗಳ ಆಚಾರ-ವಿಚಾರ, ಜೀವನ ವಿಧಾನ, ಪ್ರಾದೇಶಿಕತೆ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಅಂಶಗಳು ಇದಕ್ಕೆ ಕಾರಣವಾಗಿರಬಹುದು.

ನಾಯಕ ಅರಸರ ಭಿತ್ತಿಚಿತ್ರದ ನೆಲೆಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

೧. ಅರಮನೆಯ ಭಿತ್ತಿಚಿತ್ರಕಲೆ

೨. ಗುರುಮನೆ(ಮಠಗಳ)ಯ ಭಿತ್ತಿಚಿತ್ರಕಲೆ

೩. ದೇವಾಲಯದಲ್ಲಿಯ ಭಿತ್ತಿಚಿತ್ರಕಲೆ

### ೫.೩.೧.೧ ಅರಮನೆಯ ಭಿತ್ತಿಚಿತ್ರಕಲೆ

ಚಿತ್ರದುರ್ಗದ ಅರಮನೆ ನಾಶವಾಗಿದ್ದರಿಂದ ಇಲ್ಲಿ ಇಂತಹ ಚಿತ್ರಗಳನ್ನು ಗುರುತಿಸಲು ಸಾಧ್ಯವಾಗಲಾರದು. ಆದರೆ ಅರಮನೆಯ ಪ್ರವೇಶದ ಬಳಿಯಲ್ಲಿ ಸಂದರ್ಶಕರು ಕುಳಿತುಕೊಳ್ಳಲು ಚಾವಡಿಯೊಂದಿದ್ದು, ಅದನ್ನು ಬಣ್ಣದಚಾವಡಿ ಎನ್ನಲಾಗುತ್ತಿತ್ತು. ಇದರ ಒಳಭಿತ್ತಿಗಳ ಮೇಲೆ ಕೆಲವು ವ್ಯಕ್ತಿಗಳ ಹಾಗೂ ಇನ್ನಿತರ ವರ್ಣಚಿತ್ರಗಳನ್ನು ಬಿಡಿಸಲಾಗಿದ್ದಿತು. ಇದರಂತೆಯೇ, ಆದರೆ ಶ್ರೀರಂಗಪಟ್ಟಣದ ದರಿಯಾ ದೌಲತ್‌ನಲ್ಲಿ ೧೮ನೇ ಶತಮಾನದ ಅನೇಕ ಐತಿಹಾಸಿಕ ಗಣ್ಯವ್ಯಕ್ತಿಗಳ ಭಿತ್ತಿಚಿತ್ರಗಳಿದ್ದು, ಅನೇ ಚಿತ್ರಪಟ್ಟಿಕೆಯಲ್ಲಿ ಚಿತ್ರದುರ್ಗದ ಮದಕರಿನಾಯಕನ ಚಿತ್ರವಿದೆ.[೧೦೮]

ಸುರಪುರನಾಡು ಕಲೆ ಮತ್ತು ಸಂಸ್ಕೃತಿಗಳ ಸಂಗಮ. ವಿಜಯನಗರ ಮತ್ತು ದಖ್ಖನ್‌ರಾಜ್ಯಗಳು ಅವನತಿ ಹೊಂದಿದ ಮೇಲೆ ಕಲೆಗೆ ಪ್ರಮುಖ ತಾಣ ಸುರಪುರವಾಯಿತು.[೧೦೯] ಈ ಮನೆತನದ ಅರಸರು ಅನೇಕ ಕಲಾಕಾರರಿಗೆ ಆಶ್ರಯದಾತರಾದರು. ಇಲ್ಲಿ ಆಶ್ರಯ ಪಡೆದ ಅನೇಕ ಕುಟುಂಬಗಳಲ್ಲಿ 'ಸಾತಾನಿ' ಮನೆತನವೂ ಒಂದು. ಇವರು ಸುಪ್ರಸಿದ್ಧ ತೆಲುಗು ಸಾಹಿತಿಗಳು ಗಾಯಕರು, ವೈದ್ಯರು ಆಗಿದ್ದರಲ್ಲದೇ ವಿಶೇಷವಾಗಿ ಚಿತ್ರಕಲೆಯಲ್ಲಿ ಪ್ರಾವಿಣ್ಯತೆಯನ್ನು ಸಂಪಾದಿಸಿದ್ದರು. ಅಂತಹ ಒಂದು ಮನೆತನದ ಕವಲು

ಗರುಡಾದ್ರಿ ಕುಟುಂಬ.[೧೧೦] ಇವರು ಮೂಲತಃ ಆಂಧ್ರದವರು, ಜೇಟಿವೆಲಯ್ಯ ಮತ್ತವರ ಪುತ್ರ ಬೆನಕಯ್ಯ ಈ ಕಲೆಯ ಮೂಲಪುರುಷರು. ಈತನ ಹಿರಿಯ ಮಗನೇ ಪ್ರಸಿದ್ಧ ಕಲಾವಿದ ಬಾನಯ್ಯ ಗರುಡಾದ್ರಿ. ಈ ಮನೆತನದವರು ಸುರಪುರ ಸಂಸ್ಥಾನದಲ್ಲಿ ಪೀತಾಂಬರ ಬಹರಿ ಪಿಡ್ಡನಾಯಕ(ಕ್ರಿ.ಶ. ೧೬೮೭-೧೭೨೬)ನ ರಾಜಾಶ್ರಯ ಪಡೆದರಲ್ಲದೇ ಈ ಅರಸರ ಆರಾಧ್ಯದೈವ ಶ್ರೀವೇಣುಗೋಪಾಲನ ಅರ್ಚಕರಾಗಿದ್ದರು ಹಾಗೂ ದೇವಸ್ಥಾನದ ಮೇಲ್ವಿಚಾರಕರಾಗಿದ್ದರು.[೧೧೧]

ಈ ಕಲಾವಿದರಿಂದ ೧೭ನೇ ಶತಮಾನದಲ್ಲಿ ಭಿತ್ತಿಚಿತ್ರಕಲೆ ಆರಂಭವಾಯಿತು.[೧೧೨] ಸುರಪುರದ ಅರಸರ ಆಸ್ಥಾನದಲ್ಲಿ ಅನೇಕ ಚಿತ್ರಕಲಾವಿದರು ನೆಲೆಸಿದ್ದರು. ಅವರಿಗೆಲ್ಲಾ ಇನಾಮುಭೂಮಿಗಳನ್ನು ನೀಡಿದ್ದಾರೆ. ಶಹಾಪುರ ತಾಲೂಕಿನ ಮುಡಬೂಳ, ಶಾಕಾಪುರ, ತೆಗ್ಗಳ್ಳಿ ಗ್ರಾಮಗಳಲ್ಲಿ ಅಂದಾಜು ೨೦೦ ಎಕರೆ ಭೂಮಿಯನ್ನು ಇನಾಮು ನೀಡಿದ್ದಾರೆ.[೧೧೩] ಇಂದಿಗೂ ಈ ಹೊಲಗಳನ್ನು ಗರುಡಾದ್ರಿಯವರ ಹೊಲ, ಕಲಾಕಾರರ ಹೊಲಗಳೆಂದು ಕರೆಯುತ್ತಾರೆ. ಅರಸ ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ. ೧೭೭೩ - ೧೮೦೨) ಹಾಗೂ ಮುಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ. ೧೮೧೮-೧೮೨೭)ರ ಕಾಲದಲ್ಲಿ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು.[೧೧೪]

ಸುರಪುರದ ಅರಮನೆಯಲ್ಲಿ ರಚಿಸಿದ ಕಲಾಕೃತಿಗಳಲ್ಲಿ ಅರಸರ, ಅವರ ಪರಿವಾರದವರ ಹಾಗೂ ವೈಷ್ಣವಧರ್ಮೀಯ ಕಲಾಕೃತಿಗಳು ಚಿತ್ರಣಗೊಂಡಿವೆ. ಅರಮನೆಯ ಬಾಗಿಲ ಎದುರುಗೋಡೆಯ ಮೇಲೆ ಎರಡು ಕಂಬಗಳುಳ್ಳ ಐದು ಅಡಿ ಕಮಾನಿನ ಆಕಾರದ ಗೌರಿ ಗೂಡು ಇದೆ. ಇದರಲ್ಲಿ ವಿಷ್ಣುಶಯನನ ದೃಶ್ಯವಿದೆ. ಅವನ ಕೆಳಗೆ ಏಳುಮುಖಗಳಿಂದ ಕೂಡಿದ ಕಾಳಿಂಗಸರ್ಪದ ಮೇಲೆ ಶಯನವಾದ ವಿಷ್ಣುವಿನ ಪಾದಗಳ ಸೇವೆಯಲ್ಲಿರುವ ಶ್ರೀದೇವಿ ಮತ್ತು ಭೂದೇವಿಯರಿದ್ದಾರೆ. ಅವನ ನಾಭಿಯಲ್ಲಿ ಕಮಲವನ್ನು ಕಾಣಬಹುದು. ಕಮಲದಲ್ಲಿ ಬ್ರಹ್ಮನು ನಾಲ್ಕುಮುಖಗಳುಳ್ಳವನಾಗಿ ಕೈಗಳಲ್ಲಿ ನಾಲ್ಕು ವೇದಗಳಿವೆ. ಈ ಚಿತ್ರದ ಕೆಳಭಾಗದಲ್ಲಿ ಜಯ, ವಿಜಯ ಎಂಬ ಇಬ್ಬರು ದ್ವಾರಪಾಲಕರು ನಿಂತಿದ್ದಾರೆ. ಮಧ್ಯದಲ್ಲಿ ದ್ವಾರಬಾಗಿಲು ಅರ್ಧತೆರೆದ ರೀತಿಯಲ್ಲಿ ಚಿತ್ರಿಸಲ್ಪಟ್ಟಿದೆ. ಹಾಗೂ ಈ ಕಮಾನಿನ ಎಡ ಬಲದಲ್ಲಿ ಹನುಮಂತ ಹಾಗೂ ಗರುಡನನ್ನು ಚಿತ್ರಿಸಲಾಗಿದೆ. ಈಗ ಇದರ ಮೇಲೆ ಸುಣ್ಣವನ್ನು ಬಳಿದಿರುವುದರಿಂದ ಚಿತ್ರಗಳು ಮಸುಕಾಗಿ ಕಾಣುತ್ತವೆ.

ಅರಮನೆಯ ಒಳಗೆ ಗಾಜಿನ ಫಲಕಗಳ ಮೇಲೆ ಶೃಂಗಾರಭರಿತವಾದ ಸುಂದರಸ್ತ್ರೀಯರ ಚಿತ್ರಗಳಿವೆ. ಇಮ್ಮಡಿ ವೆಂಕಟಪ್ಪನಾಯಕ(ಕ್ರಿ.ಶ.೧೭೭೩-೧೮೦೨)ನು ಅರಮನೆಯಲ್ಲಿ ಚಿತ್ರಗಳನ್ನು ಬರೆಯಿಸಲು ಬಯಸಿದ್ದುಂಟು. ಇಲ್ಲಿ ಇನ್ನೂ ಗಣ್ಯರ ನೂರಾರು ಭಾವಚಿತ್ರಗಳನ್ನು ಸಂಪ್ರದಾಯಶೈಲಿಯಲ್ಲಿ ರಚಿಸಿರುವುದನ್ನು ಕಾಣಬಹುದಾಗಿದೆ. ಮುಖ್ಯವ್ಯಕ್ತಿಯು ತೆರೆ ಪರದೆ ಅಥವಾ ಕಮಾನುಗಳ ಕಂಬಗಳ

ಮಧ್ಯೆ ಇರುವಂತೆ ರೂಪಿಸಿರುವ ಈ ಚಿತ್ರಗಳಲ್ಲಿ ಉಡುಪು ಕೇಶಾಲಂಕಾರಗಳೊಂದಿಗೆ ಮುಖದ ಭಾವನೆ, ಆಕಾರ ಇತ್ಯಾದಿಗಳಲ್ಲಿ ಸೂಕ್ಷ್ಮವಾದ ವ್ಯತ್ಯಾಸವನ್ನು ಕಲಾವಿದ ತಂದಿದ್ದಾನೆ.[೧೧೫] ಇದು ಈಗ ಹಾಳಾಗಿರುವುದರಿಂದ ಗುರುತಿಸುವುದು ಕಷ್ಟಸಾಧ್ಯ.

ಬಾನಯ್ಯ ಗರುಡಾದ್ರಿ, ಸುರಪುರದವರ ಆಸ್ಥಾನ ಕಲಾವಿದನಾಗಿದ್ದುದರಿಂದ ಹೆಚ್ಚಾಗಿ ಅರಸರ ಕೋರಿಕೆಯಂತೆ ಚಿತ್ರಗಳನ್ನು ರಚಿಸಬೇಕಾಗಿದ್ದಿತು. ಅಂದು ಅನೇಕ ರಾಜರುಗಳ, ಮಂತ್ರಿಗಳ, ಸುಬೇದಾರರ, ದಿವಾನರ ಮತ್ತು ಆಸ್ಥಾನದ ಭಾವಚಿತ್ರಗಳ ರಚನೆಗಳಿವೆ. ಕುದುರೆಸವಾರ ಮತ್ತು ಬೇಟೆಯ ದೃಶ್ಯದ ಚಿತ್ರಗಳು ಸಾಕಷ್ಟಿವೆ. ಸುರಪುರದ ಅರಸರು ತಿರುಪತಿಯ ಶ್ರೀವೆಂಕಟರಮಣನ ಪರಮಭಕ್ತರಾಗಿರುವುದರಿಂದ ಪೂಜೆಗಾಗಿ ಶ್ರೀವೆಂಕಟರಮಣನ ಚಿತ್ರಗಳನ್ನು ಮಾಡಿಸಿದರಲ್ಲದೆ ವೇಣುಗೋಪಾಲಸ್ವಾಮಿಯ ಗುಡಿಯ ನಕಾಶೆಯನ್ನು ಹಾಗೂ ಉತ್ಸವದಲ್ಲಿ ಬಳಸುವ ವಾಹನಗಳ ಮೂರ್ತಿಗಳನ್ನು ಮಾಡಿಸಿದರು. ಅನೇಕ ಕಡೆಗಳಲ್ಲಿ ಕೃಷ್ಣನ ಲೀಲೆಯ ಚಿತ್ರಗಳು, ಶಿವಪಾರ್ವತಿ, ಲಕ್ಷ್ಮೀ, ಸರಸ್ವತಿ, ಹನುಮ, ಗರುಡದೇವತೆಗಳ ಚಿತ್ರಗಳನ್ನು ಬಿಡಿಸಲು ಮುಮ್ಮಡಿ ಪಾಮನಾಯಕ(ಕ್ರಿ.ಶ. ೧೮೧೮-೧೮೨೧)ನು ಪ್ರೋತ್ಸಾಹ ನೀಡಿದನು. ಇನ್ನೂ ಕೆಲವು ಅರಸರ ವೈಯಕ್ತಿಕ ಚಿತ್ರಗಳನ್ನು ಗರುಡಾದ್ರಿಯವರು ಚಿತ್ರಿಸಿದ್ದಾರೆ. ಹಸರಂಗಿ ಪಾಮನಾಯಕ, ಒಂದನೆಯ ಪಿಡ್ಡನಾಯಕ, ಒಂದನೆಯ ವೆಂಕಟಪ್ಪನಾಯಕ, ಮುಮ್ಮಡಿ ಪಾಮನಾಯಕ, ನಾಲ್ವಡಿ ವೆಂಕಟಪ್ಪನಾಯಕರ ಚಿತ್ರಗಳೂ ರಚಿಸಲ್ಪಟ್ಟಿವೆ. ಇವರು ಶ್ರೀವೈಷ್ಣವ ಮತವನ್ನು ಅನುಸರಿಸಿದ್ದರಿಂದ ಹಣೆಯ ಮೇಲೆ ನಾಮಧರಿಸಿರುವುದನ್ನು ಅವರ ಚಿತ್ರಗಳಲ್ಲಿ ಕಾಣಬಹುದಾಗಿದೆ.[೧೧೬]

ಮಹಾರಾಷ್ಟ್ರದ ದಕ್ಷಿಣ ಪ್ರದೇಶದಲ್ಲಿ ಮದುಮಗನಿಗೆ ಮೊದಲ ದೀಪಾವಳಿಯಲ್ಲಿ ಕೊಡುವ ಕಾಣಿಕೆಗಳಲ್ಲಿ 'ಗಂಜೀಫ' ಇರುವುದರಿಂದ ಇಂದಿಗೂ ಎಲೆಗಳ ಕಟ್ಟಿನೊಂದಿಗೆ ಆಟ ಆಡುವ ವಿಧಾನದ ಪುಸ್ತಕವನ್ನು ಕೊಡುತ್ತಾರೆ. ಸುರಪುರದ ರಾಣಿವಾಸದವರಿಗೆ ಕೊಡುವ ಅಲಂಕಾರದ ವಸ್ತುಗಳೊಂದಿಗೆ ಗಂಜೀಫ ಇರುತ್ತಿದ್ದವೆಂದು ತಿಳಿದುಬರುತ್ತದೆ.[೧೧೭] ಇವರ ಅನೇಕ ಆಚರಣೆಗಳಲ್ಲಿ ಚಿತ್ರಿತ ಗಂಜೀಫ ಎಲೆಗಳನ್ನು ಕೊಡುತ್ತಿದ್ದು ಆ ಕಲೆ ನಾಶವಾಗದಂತೆ ಉಳಿಯಲು ಪ್ರೇರೇಪಿಸಿದ ಮನೆತನ ಸುರಪುರದ್ದಾಗಿದೆ.

ನಾಲ್ವಡಿ ವೆಂಕಟಪ್ಪನಾಯಕ(ಕ್ರಿ.ಶ. ೧೮೩೫-೧೮೫೮)ನ ತಲೆಬರಹದ ಶ್ರೀಜಯಚಾಮರಾಜೇಂದ್ರ ವಸ್ತುಸಂಗ್ರಹಾಲಯ ಹಾಗೂ ಜಗನ್ಮೋಹನ ಪ್ಯಾಲೆಸ್‌ಗಳಲ್ಲಿದೆ. ಇದು ದಕ್ಷಿಣಭಾರತದ ರಾಜರುಗಳೊಂದಿಗೆ ಸಮಾಲೋಚನೆಯಲ್ಲಿ ತೊಡಗಿರುವುದಾಗಿದೆ. ನಡುವೆ ರಾಜಾವೆಂಕಟಪ್ಪನಾಯಕ ಕಾರ್ಪೆಟ್ಟಿನ ಮೇಲೆ ಕುಳಿತಿದ್ದಾನೆ. ಹಿಂದೆ ದರ್ಬಾರಿನ ಜನರು ಕುಳಿತಿದ್ದಾರೆ. ಕುಡತಾ ಪೈಜಾಮದಂತಹ ಉಡುಪು, ಕೈಯಲ್ಲಿ ಕೋಲುಗಳು ಮತ್ತು ಚಿಕ್ಕ ಹತಿಯಾರಗಳು ಇವೆ. ಹಿಂದೆ ಹಾಗೂ ಎದುರುಗಡೆ ನಿಂತ ವ್ಯಕ್ತಿಗಳ ಕೈಯಲ್ಲಿ ತಲವಾರಗಳಿವೆ. ಎದುರು ಬದಿಯಲ್ಲಿ ಕುಳಿತ ಕೆಲವು ಜನರ ಕೈಯಲ್ಲಿ ಸಂಗೀತ ವಾದ್ಯಗಳಿವೆ.[೧೧೮]

ಹೀಗೆ ಸುರಪುರದ ಅರಸರ ಕಾಲದಲ್ಲಿ ರಚಿಸಿದ ಚಿತ್ರಗಳ ತಂತ್ರ, ರೇಖಾವಿನ್ಯಾಸ ವರ್ಣಸಂಯೋಜನೆ, ಆಯ್ದುಕೊಂಡ ವಿಷಯಗಳು ಉನ್ನತ ಸ್ಥಾನ ಪಡೆದಿವೆಯಲ್ಲದೆ ಸುರಪುರದ ಅರಸರ ಈ ಕಲೆಯು ಮೂಲಕ ಅಂದಿನ ಚಿತ್ರಕಲೆಯ ವೈಶಿಷ್ಟ್ಯತೆಯನ್ನು ಗುರುತಿಸಬಹುದು.

ಆನೆಗೊಂದಿಯ ಅರಮನೆಯಲ್ಲಿ ಕೆಲವು ಚಿತ್ರಗಳಿದ್ದವು. ಅರಮನೆ ಬಿದ್ದಿರುವುದರಿಂದ ಅವು ಈಗ ಇಲ್ಲ. ಹಾಳಾಗಿವೆ[೧೧೯] ಕೆಲ ಗೋಡೆಗಳಿದ್ದರೂ ಈಗ ಅವುಗಳನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ಇವರ ವಂಶಸ್ಥರಲ್ಲಿ ತಿರುಮಲ ದೇವರಾಯ(ಕ್ರಿ.ಶ. ೧೮೬೬-೧೮೭೧) ಮತ್ತು ದರ್ಬಾರ ಕೃಷ್ಣದೇವರಾಯ (ಕ್ರಿ.ಶ. ೧೯೧೧-೧೯೬೬) ಅರಸರು ಚಿತ್ರಗಳು ಕೈಯಿಂದ ಚಿತ್ರಿಸಿದವು.

ಗುಡಗುಂಟಿಯ ಅರಮನೆಯ ಗೋಡೆಗಳಲ್ಲಿ ಅವರ ಮನೆದೈವ ಕಕ್ಕೇರಿಯ ಸೋಮನಾಥ, ಅರಸ ಸೋಮಸಜ್ಜನಾಯಕನಿಗೆ ಆಶೀರ್ವಾದ ನೀಡುತ್ತಿರುವ ಚಿತ್ರವಿತ್ತು.[೧೨೦] ಹಾಗೂ ಇನ್ನಿತರ ಹೂ, ಗಿಡ, ಪಕ್ಷಿಗಳ ಚಿತ್ರಗಳನ್ನು ಬಿಡಿಸಲಾಗಿತ್ತು. ಈಗ ಅವುಗಳು ಸ್ಪಷ್ಟವಾಗಿ ಕಾಣುತ್ತಿಲ್ಲ. ಕೆಲವು ಅಲ್ಲಲ್ಲಿ ಮಸುಕು ಮಸುಕಾಗಿ ಕಂಡರೆ, ಅರಮನೆಯ ಕೆಲಭಾಗಗಳು ಆಧುನೀಕರಣಕ್ಕೊಳಗಾಗಿರುವುದರಿಂದ ಅವೆಲ್ಲ ಹಾಳಾಗಿವೆ. ಅರಮನೆಯ ರಕ್ಷಣೆಯ ಕುರಿತು ಇವರ ವಂಶಸ್ಥರು ಕಾಳಜಿ ವಹಿಸುವುದು ಅವಶ್ಯವಿದೆ.

ಗುಂತಗೋಳದ ಅರಸ ರಾಜಾರಾಯಪ್ಪನಾಯಕನು ಒಬ್ಬ ಆಧ್ಯಾತ್ಮಿಕ ಜೀವಿಗಳಾಗಿದ್ದನಲ್ಲದೆ[೧೨೧] ಚಿತ್ರಕಾರನೂ ಆಗಿದ್ದನು. ಅರಮನೆಯ ಗೋಡೆಯ ಮೇಲೆ ಹಾಗೂ ಕಾಗದದ ಮೇಲೆ ಇವರ ಮನೆದೇವರು ಅಮರೇಶ್ವರನ ಪವಾಡದ ಹಾಗೂ ರಾಮಾಯಣ ಮಹಾಭಾರತದ ಕೆಲವು ಚಿತ್ರಗಳನ್ನು ಬಿಡಿಸಿದ್ದರು. ಅವು ಮೊನ್ನೆ ಮೊನ್ನೆಯವರೆಗೂ ಇದ್ದವು. ಈಗ ಅವು ನಾಶವಾಗಿವೆ.[೧೨೨] ಇದಕ್ಕೆ ಕಾರಣ ಈ ಮನೆತನದ ವಂಶಸ್ಥರು ಬೇರೆಡೆ ವಾಸಿಸುತ್ತಿದ್ದುದು. ಅವುಗಳ ಕುರಿತು ಈಗ ಕಾಳಜಿ ಇಲ್ಲವಾಗಿದೆ.

ಮತ್ತೋಡು ಅರಸರು ಕುಶಲ ಕಸಬುದಾರರಿಗೆ ಶಿಲ್ಪಿಗಳಿಗೆ ಪ್ರೋತ್ಸಾಹ ನೀಡಿದ್ದರು. ಮತ್ತೋಡು ಗಾಜಿನ ಬಳೆಗಳಿಗೆ ಪ್ರಸಿದ್ಧವಾಗಿತ್ತಲ್ಲದೆ ಕಪ್ಪು, ಹಸಿರು, ನೀಲಿ, ಕೆಂಪು ಮತ್ತು ಹಳದಿಬಣ್ಣದ ಬಳೆಗಳು ಆಕರ್ಷಿತವಾಗಿದ್ದವು. ಈ ಬಳೆಗಳಿಗೆ ಗಾಜನ್ನು ಸ್ಥಳೀಯವಾಗಿಯೇ ತಯಾರಿಸುತ್ತಿದ್ದರು. ಬಳೇಗಾರರ ಕೇರಿಯೇ ಪ್ರತ್ಯೇಕವಾಗಿತ್ತು. ಹೊಳೆವ ಹೊಂಗಲಶಗಳ ಉಪ್ಪರಿಗೆಗಳಿಂದ ಚಿತ್ರವಿಚಿತ್ರವಾದ ಗೋಡೆಗಳಿಂದಲಂಕೃತವಾದ ಅರಮನೆಯಿತ್ತು.[೧೨೩] ಅರಮನೆಯ ಗೋಡೆಗಳು ಹಾಗೂ ಮುರುಘಮಠದ ಗೋಡೆಗಳು ಬಣ್ಣಗಳ ಕೆಲಸದಿಂದ ಕೂಡಿದ್ದು, ಬಂಗಾರದಂತೆ- ಹೊಳೆಯುತ್ತಿದ್ದವು ಎಂದು ಹೊಳಲ್ಕೆರೆಯ ನೇರಲಕೆರೆಯಲ್ಲಿ ದೊರೆತ ತಾಮ್ರಶಾಸನ ಹೇಳುತ್ತದೆ.[೧೨೪]

### ೫.೩.೧.೨ ಮಠಗಳಲ್ಲಿ ಚಿತ್ರಕಲೆ

ವಿಜಯನಗರದ ತರುವಾಯ ಹಿಂದೂಧರ್ಮ, ಸಂಸ್ಕೃತಿಗಳನ್ನು ಪೋಷಿಸಿಕೊಂಡು ಬಂದವರಲ್ಲಿ ನಾಯಕ ಅರಸುಮನೆತನದವರೂ ಸೇರುತ್ತಾರೆ. ಇವರು ವೀರಶೈವಧರ್ಮಕ್ಕೆ ಆಶ್ರಯ ನೀಡಿದರಲ್ಲದೇ ವೀರಶೈವಮಠಗಳನ್ನು ಸ್ಥಾಪಿಸಿ, ಅವುಗಳನ್ನು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿ ಹೊರಹೊಮ್ಮಲು ಕಾರಣರಾದರು. ಈ ಮಠಗಳು ಸಮಾಜ ಸೇವೆಗಾಗಿ ಹಾಗೂ ಧರ್ಮರಕ್ಷಣೆಗಾಗಿ ಜನ್ಮ ತಾಳಿ ಸಮಾಜದ ಜನತೆಯ ಪವಿತ್ರಸ್ಥಳಗಳಾಗಿ ಭಕ್ತಿ, ಕಾಯಕ, ದಾಸೋಹಗಳ ತ್ರಿವೇಣಿ ಸಂಗಮಗಳಾದದ್ದು ವಿಶೇಷವಾಗಿದೆ. ಸುರಪುರದ ಹತ್ತಿರದ ರಂಗಂಪೇಟೆಯಲ್ಲಿ ರುದ್ರಸ್ವಾಮಿಮಠ ಮತ್ತು ವಿರಕ್ತ-ಮಠವೆಂಬ ಎರಡು ಮಠಗಳಿವೆ. ಈ ಮಠಗಳಲ್ಲಿಯೂ ಭಿತ್ತಿಚಿತ್ರಗಳಿದ್ದು, ಸುರಪುರದ ಅರಸರು ಗರುಡಾದ್ರಿಯ ಮನೆತನದ ವರಿಂದ ಧಾರ್ಮಿಕ ಅಂಶಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಬರೆಸಿದ್ದಾರೆ.

ರುದ್ರಸ್ವಾಮಿಯಮಠದಲ್ಲಿ ಮದುವೆಯ ಸಮಾರಂಭದಲ್ಲಿ ಋಷಿಯು ಕೈಯ್ಯನ್ನು ಮೇಲೆತ್ತಿ ಆಶೀರ್ವಾದ ಮಾಡುತ್ತಿರುವುದು. ಸಂಗೀತದ ವೃಂದಗಳು ಒಂದು ಭಾಗದಲ್ಲಾದರೆ, ಎರಡನೆಯ ಭಾಗದಲ್ಲಿ ಸರಸ್ವತಿಯು ವೀಣೆಯನ್ನು ಹಿಡಿದು ಕಮಲಮುಖಿಯಾಗಿ ಕುಳಿತಿರುವ ಚಿತ್ರವಿದೆ. ಮೂರನೆಯ ಭಾಗದಲ್ಲಿ ದೇವತೆಗಳು ಮತ್ತು ಅಸುರರ ನಡುವೆ ಕಾಳಿಂಗಸರ್ಪವನ್ನು ದೊಡ್ಡದಾದ ಬೆಟ್ಟಕ್ಕೆ ಕಡೆಗೋಲನ್ನಾಗಿ ಮಾಡಿಕೊಂಡು ಅದಕ್ಕೆ ಸುತ್ತಿ ಸಮುದ್ರಮಂಥನ ಮಾಡುವ ದೃಶ್ಯವಿದೆ. ನಾಲ್ಕನೆಯ ಭಾಗದಲ್ಲಿ ಅಸುರರು ಗಗನದಲ್ಲಿ ಹಾರಾಡುತ್ತಾ ದೇವತೆಗಳ ಮೇಲೆ ಯುದ್ಧಮಾಡುವ ದೃಶ್ಯವಿದೆ. ಯುದ್ಧದಲ್ಲಿ ಭಾಗವಹಿಸಿದ ದೇವತೆ ರಥಾರೂಢವಾಗಿದ್ದು, ರಥಕ್ಕೆ ನಾಲ್ಕು ಅಶ್ವಗಳನ್ನು ಕಟ್ಟಿರುವುದು, ಈ ಚಿತ್ರದ ಕೆಳಗಿನ ಭಾಗದಲ್ಲಿ ಒಂದು ಹೂದಾನಿ, ಅದರ ಅಕ್ಕಪಕ್ಕ ಎರಡು ಗರುಡಪಕ್ಷಿಗಳಿರುವುದು ವಿಶೇಷ.

ಮಠದ ಎದುರಿನ ಬಾಗಿಲಿನ ಅಕ್ಕಪಕ್ಕಗಳಲ್ಲಿ ದ್ವಾರಪಾಲಕರಿದ್ದು, ಕೈಯಲ್ಲಿ ಗದೆ, ಆಯುಧಗಳನ್ನು ಹಿಡಿದು ನಿಂತಿರುವರು; ಹಾಗೂ, ಬಾಗಿಲಿನ ಮೇಲೆ ಬಲಗಡೆಯಲ್ಲಿ ಚಾಮರವನ್ನು ಬೀಸುತ್ತಾ ಇರುವ ಒಬ್ಬ ವ್ಯಕ್ತಿಯ ಮುಖದಲ್ಲಿ ಆಯಾಸದ ಭಾವನೆಗಳಿವೆ. ಮುಂದೆ ಸರ್ಪಶಯನದಲ್ಲಿ ವಿಷ್ಣು ಮಲಗಿರುವನು. ಕೆಳಗೆ ಮೂರುಮುಖದ ದತ್ತಾತ್ರೇಯನಿದ್ದಾನೆ. ಆತನ ಪಾದದ ಬಳಿಯಲ್ಲಿ ನಾಯಿ ಯೊಂದಿದೆ. ಉಳಿದ ಗೋಡೆಯ ಭಾಗದ ಚಿತ್ರಗಳು ನಾಶವಾಗಿವೆ. ಎಡಗಡೆ ಗೋಡೆಯ ಮೇಲೆ ಹೂವಿನ ಮಾಲೆಯನ್ನು ಕಂಬಗಳಿಗೆ ನೇತುಹಾಕಿರುವುದು ಕಂಡುಬಂದಿದ್ದು, ಬಹುಶಃ ಇದು ಸಭಾಂಗಣವಿರಬಹುದು.

ಇಲ್ಲಿಯ ವಿರಕ್ತಮಠದಲ್ಲಿಯ ಚಿತ್ರಗಳಲ್ಲಿ ಬಾಳೆಯಹಣ್ಣಿನ ತೋಟದಲ್ಲಿ ಮಂಗವೊಂದು ಕುಳಿತು ಹಣ್ಣು ತಿನ್ನುತ್ತಿದೆ. ಇದರ ಮೇಲ್ಭಾಗದಲ್ಲಿ ಎರಡುಮುಖದ ಗರುಡ ಇದ್ದು, ನಾಲ್ಕು ಆನೆಗಳನ್ನು ಹಿಡಿದು ಆಕಾಶದಲ್ಲಿ ಹಾರುವಂತಿದೆ. ಇದರ ಮುಂದೆ ಹೆಣ್ಣುಮಕ್ಕಳ ಮುಖದ ಎರಡು ಕಾಮಧೇನುಗಳು, ಚಿತ್ರದ

ಮಧ್ಯದಲ್ಲಿ ಮಾವಿನಮರ, ಅದರ ಪಕ್ಕದಲ್ಲಿ ಹಾರುತ್ತಿರುವ ಎರಡು ಪಕ್ಷಿಗಳು, ಕೆಳಭಾಗದಲ್ಲಿ ಭೀಮ ಕಿಚಕನ ವಧೆಮಾಡುತ್ತಿರುವುದು, ಬೃಹನ್ನಳೆಯ ವೇಷದಲ್ಲಿ ಅರ್ಜುನ ನಿಂತಿರುವುದು, ಮತ್ತೊಂದು ಚಿತ್ರದಲ್ಲಿ ಪರಮಾತ್ಮ ತಪಸ್ಸು ಮಾಡುತ್ತಿದ್ದು ಮನ್ಮಥ ಹೂಬಾಣವನ್ನು ಬಿಡುತ್ತಿದ್ದಾನೆ. ಇವನು ರಥದಲ್ಲಿ ನಿಂತಿದ್ದು, ಪರಮಾತ್ಮನ ಹಿಂದೆ ರತಿದೇವಿಯು ಕುಳಿತಿರುವಳು. ನಂತರ ಇನ್ನೊಂದು ಕಡೆ ಗೌಳಿಗ ಮತ್ತು ಮಹಿಳೆ, ವ್ಯಾಯಮಶಾಲೆ, ಅದರ ಕೆಳಗೆ ಮಹಿಷಾಸುರಮರ್ದಿನಿ ದತ್ತಾತ್ರೇಯ, ಆತನ ಸುತ್ತಲು ನಾಲ್ಕು ನಾಯಿಗಳು, ಎರಡು ಗೋವು, ಎರಡು ಕರುಗಳನ್ನು ಚಿತ್ರಿಸಲಾಗಿದೆ. ಬಾಗಿಲ ಬಳಿ ಮಹಿಳೆಯರು ಆರತಿ ಹಿಡಿದಿರುವುದು, ಪೂಜೆಯಲ್ಲಿ, ಪೂಜಾಸಾಮಾಗ್ರಿಗಳೊಂದಿಗೆ ನಿರತರಾದವರು, ಪಾರ್ವತಿಕಲ್ಯಾಣ, ಸಮುದ್ರಮಂಥನ, ದ್ರೌಪದಿಯ ಸ್ವಯಂವರ, ಮುಂತಾದ ಮಹಾಭಾರತದ ಸನ್ನಿವೇಶದ ಚಿತ್ರಗಳಿವೆ. ಇವುಗಳ ರಚನೆಗೆ ಸುರಪುರದ ಅರಸ ಮುಮ್ಮಡಿ ಪಾಮನಾಯಕರು ಕಾರಣೀಭೂತರಾಗಿದ್ದಾರೆ.

ಆನೆಗೊಂದಿಯ ಹುಚ್ಚಪ್ಪಯ್ಯನಮಠದಲ್ಲಿಯೂ ಭಿತ್ತಿಚಿತ್ರಗಳಿವೆ. ಇಲ್ಲಿ ಪ್ರಮುಖವಾಗಿ ಆನೆಗೊಂದಿ ನಾಯಕ ಅರಸರ ಕಾಲದಲ್ಲಿ ರೂಢಿಯಲ್ಲಿದ್ದ ಕೋಲಾಟ, ಹಾವಾಡಿಗರಾಟ, ಮುಖವೀಣೆ, ಶಂಖ, ಕಿನ್ನರಿವಾದ್ಯ, ಮದ್ದಲೆವಾದನ, ಹಲಗೆವಾದನ, ದಪ್ಪು, ಕಹಳೆ, ಕೊಂಬು, ಮಲ್ಲಯುದ್ಧ ಮುಂತಾದ ಚಿತ್ರಗಳನ್ನು ಬಿಡಿಸಲಾಗಿದೆ. ಈ ಚಿತ್ರಗಳನ್ನು ಇಲ್ಲಿಯ ಅರಸರೇ ತಮ್ಮ ಆಸ್ಥಾನದ ಚಿತ್ರಕಲಾವಿದರಿಂದ ಬಿಡಿಸಿದ್ದಾರೆ.[೧೨೫] ಮಠದ ಅಂಕಣದಲ್ಲಿ ಹೂಗೊಂಚಲು, ಅದರಲ್ಲಿ ಅಳಿಲುಗಳಿರುವಂತೆ ಚಿತ್ರಿಸಲಾಗಿದೆ. ಅಲ್ಲೇ ಇಬ್ಬರು ಸ್ತ್ರೀಯರು ಮತ್ತು ಅನೇಕ ಚಿಕ್ಕ ಆಕೃತಿಗಳು ನೃತ್ಯ ಮಾಡುತ್ತಿರುವಂತಿವೆ. ಅದನ್ನು ಇಬ್ಬರು ಪುರುಷರು ನಿಂತು ನೋಡುತ್ತಿದ್ದಾರೆ. ಮೇಲ್ಭಾಗದಲ್ಲಿ ದೊಡ್ಡ ಕಮಲಾಕೃತಿಯಿದೆ. ಇನ್ನೊಂದು ಅಂಕಣದಲ್ಲಿ ಇಬ್ಬರು ರಾಣಿಯರನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು, ಹೊರಟಿರುವ ದೃಶ್ಯವಿದೆ. ಮತ್ತೊಂದು ಅಂಕಣದಲ್ಲಿ ಕಿರೀಟಧಾರಿಯಾದ, ಗಡ್ಡಬಿಟ್ಟಿರುವ ವ್ಯಕ್ತಿ ಒಂಟೆಯ ಮೇಲೆ ಕುಳಿತು ಸವಾರಿ ಹೊರಟಿರುವ ಚಿತ್ರಣವಿದೆ. ಅವನ ಮುಂದೆ ಆನೆ. ಇದರ ಜೊತೆಗೆ ನವನಾರೀಕುಂಜರ ಮತ್ತು ಪಂಚನ್ನಾರೀ ತುರಗ ಚಿತ್ರಗಳನ್ನೂ ಸಹ ನೋಡಬಹುದು. ಇವುಗಳ ಮುಂದೆ ಚಾಮರ ಹಿಡಿದ ಮತ್ತು ವಸ್ತ್ರವನ್ನು ಹಾರಾಡಿಸುತ್ತಿರುವ ಸ್ತ್ರೀಯರನ್ನು ಚಿತ್ರಿಸಿದೆ.[೧೨೬] ಸದ್ಯ ಈ ಚಿತ್ರಗಳೆಲ್ಲಾ ಮಸುಕು ಮಸುಕಾಗಿವೆ. ಅವುಗಳಿಗೆ ರಕ್ಷಣೆಯಿಲ್ಲ. ಗುಡಗುಂಟಿಯ ರಾಜಗುರು ಮಠದಲ್ಲಿಯೂ ಚಿತ್ರಗಳಿದ್ದವು. ಈಗ ಒಂದು ಭಾಗದ ಗೋಡೆ ಬಿದ್ದು ಹೋಗಿರುವುದರಿಂದ ಚಿತ್ರಗಳು ಹಾಳಾಗಿವೆ.[೧೨೭]

### ೫.೩.೧.೩ ದೇವಾಲಯಗಳಲ್ಲಿಯ ಭಿತ್ತಿಚಿತ್ರಗಳು

ಕನಕಗಿರಿಯ ಕೆಲವಡಿ ಉಡಚನಾಯಕ(ಕ್ರಿ.ಶ. ೧೫೩೩-೧೫೭೮)ನು ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯವನ್ನು ತನ್ನ ಆಳ್ವಿಕೆಯಲ್ಲಿ ವಿಸ್ತರಿಸಿ ಕಟ್ಟಿಸಿದನು. ಆಗ ಆತ ಕಟ್ಟಿಸಿದ ರಂಗಮಂಟಪ ಮತ್ತು

ಪ್ರಧಾನದ್ವಾರದ ಗೋಪುರದಲ್ಲಿ ಭಿತ್ತಿಚಿತ್ರಗಳನ್ನು[೧೨೮] ಬರೆಸಿದ್ದಾನೆ. ಈ ದೇವಾಲಯದ ಭಿತ್ತಿ-ಚಿತ್ರಗಳನ್ನು ರಂಗಮಂಟಪದ ಚಿತ್ರಗಳು, ಪ್ರಧಾನ ಗೋಪುರದ ಚಿತ್ರಗಳೆಂದು ವಿಂಗಡಿಸಬಹುದು.

### ೫.೩.೧.೩.೧ ರಂಗಮಂಟಪದ ಚಿತ್ರಗಳು

ದೇವಾಲಯದ ವಿಶಾಲ ಹಾಗೂ ಆಕರ್ಷಕ ಭಾಗವಾದ ಇದು ೫೮ ಅಡಿ ಉದ್ದ, ೩೬ ಅಡಿ ಅಗಲವಿದೆ. ಇದು ಸ್ತಂಭಗಳಿಂದ ಕೂಡಿದ ತೆರೆದಮಂಟಪ. ಮಂಟಪದ ಭಿತ್ತಿನಲ್ಲಿ ವರ್ಣಚಿತ್ರಗಳಿವೆ. ಈಗ ಅವು ಹಾಳಾಗಿದ್ದು ಗುರುತಿಸಲಾಗದೆ ಬರೀ ವರ್ಣ ಉಳಿಕೆಗಳು ಮಾತ್ರ ಉಳಿದಿವೆ. ಈ ರಂಗ ಮಂಟಪದ ಭಿತ್ತಿನ ಮಧ್ಯಭಾಗದಲ್ಲಿ ಕಮಲಾಕೃತಿಯ ನಕ್ಷೆಯನ್ನು ನಿರ್ಮಿಸಲಾಗಿದ್ದು, ನಡುವೆ ಭುವನೇಶ್ವರಿ ಇದ್ದು ಸುತ್ತಲೂ ವರ್ಣಚಿತ್ರಗಳನ್ನು ಬಿಡಿಸಲಾಗಿದೆ. ನಾಶವಾದ ಚಿತ್ರಗಳ ಬಣ್ಣಗಳ ಉಳಿಕೆಗಳಲ್ಲಿ ಇಂದು ಮರದ ಮೇಲೆ ಆಡುತ್ತಿರುವ ಬಾಲಕನ ಚಿತ್ರವನ್ನು ಮಾತ್ರ ಅಸ್ಪಷ್ಟವಾಗಿ ಗುರುತಿಸಬಹುದು. ಇದು ಬಹುಶಃ ಕೃಷ್ಣನು ತನ್ನ ಬಾಲ್ಯದಿನಗಳಲ್ಲಿ ಗೋಪಾಲಕರೊಡನೆ ಆಡುತ್ತಿರುವ ಮರಕೋತಿಯ ಆಟವನ್ನು ಸೂಚಿಸುತ್ತಿರಬಹುದು.[೧೨೯]

### ೫.೩.೧.೩.೨ ಪ್ರಧಾನಗೋಪುರದ ಚಿತ್ರಗಳು

ಮೂರು ಅಂಕಣಗಳಾಗಿ ಪ್ರಧಾನಗೋಪುರದ ಮೇಲ್ಛಾವಣಿಯನ್ನು ವಿಂಗಡಿಸಲಾಗಿದೆ. ಈ ಮೂರು ಭಾಗಗಳಲ್ಲಿ ವರ್ಣಚಿತ್ರಗಳಿವೆ. ಮೇಲ್ಛಾವಣಿಯು ಆಯತಾಕಾರದಲ್ಲಿರುವುದರಿಂದ ಚಿತ್ರಗಳನ್ನು ಆಯತ ಮತ್ತು ಚೌಕಗಳಲ್ಲಿ ಸಂಯೋಜಿಸಲಾಗಿದೆ. ಚಿತ್ರಣವಾದ ಪ್ರದೇಶ ಚಚ್ಚೌಕವಾಗಿದೆ. ಒಂದರೊಂದಳಗೆ ಸೇರಿದ ನಾಲ್ಕು ಪಟ್ಟಿಗಳಲ್ಲಿ ಚಿತ್ರರಚನೆ ಮಾಡಿದ್ದಾರೆ. ನಡುವಿನ ಅಂಕಣದ ಮಧ್ಯಭಾಗದಲ್ಲಿ ವೃತ್ತ ಭಾಗ, ಅದರ ನಡುವೆ ಬಾಲಕೃಷ್ಣನ ಚಿತ್ರವಿದೆ. ಗಿಳಿಯ ಮೇಲೆ ಕುಳಿತ ಇಬ್ಬರು ಸ್ತ್ರೀಯರು. ಚಕ್ರ, ಬಿಲ್ಲು ಬಾಣ ಹಿಡಿದು ಎದುರುಬದುರಾಗಿ ಕಾದಾಡುತ್ತಿದ್ದಾರೆ. ರತಿ ಮನ್ಮಥರ ಚಿತ್ರ, ವಿಷ್ಣುವಿನ ದಶಾವತಾರ ಚಿತ್ರಗಳಿವೆ. ಮಿಥುನಕ್ರಿಯೆಯ ಚಿತ್ರ ಹಾಗೂ ಒಟ್ಟು ಚಿತ್ರರಚನೆಯ ನಾಲ್ಕು ಮೂಲೆಯಲ್ಲಿ ಸಿಂಹದ ಚಿತ್ರಗಳಿವೆ. ಇನ್ನು ತೊಲೆಯ ಮೇಲೆ ಚಿತ್ರಿಸಿದ ಚಿತ್ರಗಳಲ್ಲಿ ಕಮಲದ ಹೂಗಳು, ಮೀನು, ಹಾವು, ಕಪ್ಪೆ, ಹಂಸಗಳು, ನೃತ್ಯಗಾರ್ತಿಯರ ಚಿತ್ರಗಳು ಇವೆ. ಈ ರೀತಿ ಚಿತ್ರಗಳನ್ನು ಬಿಡಿಸುವಲ್ಲಿ ಕನಕಗಿರಿಯ ನಾಯಕರ ಪ್ರಭಾವ ಕಾಣಬಹುದು.[೧೩೦]

ಹೀಗೆ ನಾಯಕ ಅರಸುಮನೆತನಗಳ ಚಿತ್ರಕಲೆಯಲ್ಲಿ ಸುರಪುರ ನಾಯಕ ಅರಸುಮನೆತನಕ್ಕೆ ಅಗ್ರಸ್ಥಾನವನ್ನು ನೀಡಬಹುದು. ಅಲ್ಲಿಯ ಚಿತ್ರಗಳ ತಂತ್ರ, ರೇಖಾವಿನ್ಯಾಸ ಉನ್ನತ ಸ್ಥಾನ ಪಡೆದಿವೆ. ಮೈಸೂರಿನ ಸಾಂಪ್ರದಾಯಿಕ ಕಲಾಕೃತಿಗಳು, ವಿಜಯನಗರದ ಶೈಲಿಯ ಚಿತ್ರಗಳು, ಬಿಜಾಪುರದ ಆದಿಲ್ ಶಾಹಿ ಮನೆತನದವರಿಂದ ಬಂದ ಕಲಾಕೃತಿಗಳಿಗಿಂತ ಸುರಪುರದ ಅರಸರ ಕಲಾಕೃತಿಗಳು ತಮ್ಮದೇ ಆದ

ವಿಶಿಷ್ಟತೆಯನ್ನು ಪಡೆದಿವೆ. ಇಲ್ಲಿಯ ಕೃತಿಗಳ ಸೊಗಸು, ಸೌಂದರ್ಯ ಮತ್ತು ನಯ ನಾಜೂಕು ತಮ್ಮದೇ ಆದ ಸ್ಥಾನ ಹೊಂದಿವೆ. ಇದಕ್ಕೆ ಆಂಧ್ರದ ಅನಂತಪುರ ಜಿಲ್ಲೆಯ ಗರುಡಾದ್ರಿ ಮನೆತನದವರೆಲ್ಲರ ಶ್ರಮ, ಸುರಪುರದ ನಾಯಕ ಅರಸರ ರಾಜಾಶ್ರಯ ಜನರ ಮನದಲ್ಲಿ ಅಜರಾಮರವಾಗಿ ಉಳಿದಿದೆ.

ಗರುಡಾದ್ರಿ ಬಾನಯ್ಯನವರ ಅನೇಕ ಕಲಾಕೃತಿಗಳು ಇಂದಿನ ಕಲಾವಿದರಿಗೆ ಸ್ಫೂರ್ತಿ ನೀಡಿವೆ. ಗುಲಬರ್ಗಾದ ವಿಜಯ ಹಾಗರಗುಂಡಗಿಯವರು ಈ ನಿಟ್ಟಿನಲ್ಲಿ ಮುಂದುವರೆಯುತ್ತಿರುವ ಪ್ರಮುಖರಲ್ಲಿ ಒಬ್ಬರು. ಇಂದು ಅವರ ಸಂಗ್ರಹದಲ್ಲಿ ನಾಲ್ವಡಿ ವೆಂಕಟಪ್ಪನಾಯಕ ಕುದುರೆಸವಾರಿ ಮಾಡುತ್ತಿರುವ ಚಿತ್ರವಿದ್ದು, ಈ ಕುದುರೆ ದಖನಿ ಮೊಗಲ್‌ಶೈಲಿಯ ಚಿತ್ರಗಳಲ್ಲಿ ಕಂಡುಬರುವ ಕುದುರೆಯ ಆಕೃತಿಗಳನ್ನು ಹೋಲುತ್ತದೆ. ಅಲ್ಲದೆ ಚಿತ್ರದಲ್ಲಿಯ ನಿಸರ್ಗ ಹಾಗೂ ಅರಸರ ಸೇವಕರು ಧರಿಸಿರುವ ಉಡುಪು ಮೊಗಲ್‌ಶೈಲಿಯ ಅನುಕರಣೆ.[೩೧]

ಹೀಗೆ ಸುರಪುರದ ಅರಸರು ಗರುಡಾದ್ರಿಯಂತಹ ಕಲಾಕಾರರಿಗೆ ಆಶ್ರಯದಾತರಾಗಿ ಅನೇಕ ಕಲಾಕೃತಿಗಳನ್ನು ರಚಿಸಲು ಪ್ರೇರಣೆ ನೀಡಿ ಸುರಪುರವನ್ನು ಶ್ರೀಮಂತಗೊಳಿಸಿದ್ದಾರೆ. ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಕುಂಚಪ್ರಪಂಚಕ್ಕೆ ನೀಡಿದ್ದಾರೆ. ಇವರ ಕಾಲದ ಕಲಾಕೃತಿಗಳು ಲೇಪಾಕ್ಷಿ ಮಾದರಿಯನ್ನು ಹೋಲುತ್ತಿದ್ದರೂ ವರ್ಣ ಹಾಗೂ ರೇಖಾವಿಕಾಸಗಳಲ್ಲಿ ಸಾಕಷ್ಟು ಹೊಸತನವನ್ನು ಪಡೆದಿವೆ. ಕೂದಲಿನಷ್ಟೇ ತೆಳುವಾದ ಕುಂಚದ ಗೆರೆಗಳೂ ಹಾಗೂ ಪೌರಾಣಿಕಚಿತ್ರಗಳಲ್ಲಿ ರಚಿಸಿದ ಪ್ರಭಾವಳಿಗಳಲ್ಲಿನ ಸೂಕ್ಷ್ಮವಾದ ಕುಸುರಿನ ಕೆಲಸಗಳು ನೋಡುಗರನ್ನು ಮುಗ್ಧರನ್ನಾಗಿ ಮಾಡುತ್ತವೆ.[೧೩೨]

ತಮ್ಮದೇ ವಿಶಿಷ್ಟಶೈಲಿಯ ಚಿತ್ರಕಲೆಯನ್ನು ಹೊಂದಿರುವ ಈ ನಾಯಕ ಅರಸುಮನೆತನಗಳು ಪ್ರಮುಖ ಸ್ಥಾನವನ್ನು ಗಳಿಸಿವೆಯಾದರೂ ಸುರಪುರ ನಾಯಕ ಅರಸರನ್ನು ಹೊರತು ಪಡಿಸಿ, ಉಳಿದ ಚಿತ್ರದುರ್ಗ, ಆನೆಗೊಂದಿ, ಗುಡಗುಂಟಿ, ದೇವದುರ್ಗ, ಗುಂತಗೋಳ, ಗುಡೇಕೋಟೆ, ಜರಿಮಲೆ, ಕನಕಗಿರಿ, ಮತ್ತೋಡು. ತರೀಕೆರೆ, ಹರತಿ ಮುಂತಾದ ನಾಯಕ ಅರಸುಮನೆತನಗಳಲ್ಲಿ, ಈ ಕಲೆಗೆ ಸಂಬಂಧಿಸಿದ ಆಧಾರಗಳು ಲಭ್ಯವಿಲ್ಲ. ಆದರೆ ಸುರಪುರದ ಕಲೆ ವಿಶ್ವವಿಖ್ಯಾತಿ ಪಡೆದಿರು ವುದು ಹೆಮ್ಮೆಯ ಸಂಗತಿ. ಲಂಡನ್‌ನ ಕಲಾಸಂಗ್ರಹಾಲಯ, ಇಂಗ್ಲೆಂಡಿನ ವಿವಿಧ ನಗರಗಳಲ್ಲಿ, ದೆಹಲಿ, ಮುಂಬೈ, ಹೈದ್ರಾಬಾದ್‌ನ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಸಾಲಾರಜಂಗ ವಸ್ತುಸಂಗ್ರಹಾಲಯಗಳಲ್ಲಿ ಹಾಗೂ ಸುರಪುರದ ರಾಜವಂಶಸ್ಥರ. ಶ್ರೀಮಂತರ, ಜಾಗೀರುದಾರರ ಮನೆಗಳಲ್ಲೂ ಇಂಥ ಕಲಾಕೃತಿಗಳನ್ನು ನೋಡಬಹುದು. ಆದರೆ ಇಂದು ಇವು ಅಳಿವಿನ ಅಂಚಿನಲ್ಲಿವೆ. ಇವುಗಳ ಕುರಿತಾದ ನಿಷ್ಕಾಳಜಿ ಆ ವಂಶಸ್ಥರಲ್ಲಿ ಇಲ್ಲದಿರುವುದು ಖೇದನೀಯ. ಸುರಪುರದಲ್ಲಿ ಒಂದು ಕಲಾಗ್ಯಾಲರಿಯನ್ನು ಪ್ರಾರಂಭಿಸಿ ಇವುಗಳನ್ನು ರಕ್ಷಿಸುವುದು ಅತ್ಯವಶ್ಯ.

### ೫.೩.೨ ಶಿಲ್ಪಕಲೆ

ಶಿಲ್ಪ ಎಂಬುದು ಒಂದು ಸ್ವತಂತ್ರವಾದ ಕಲಾಕೃತಿ ಹಾಗೂ ಮೂರ್ತಿಗಳ ನಿರ್ಮಾಣವಾಗಿದೆ. ಅದಕ್ಕೆ ತನ್ನದೆ ಆದ ರೂಪರಚನೆ ಇರುವುದುಂಟು. ಈ ಶಿಲ್ಪಗಳನ್ನು ದೇವಾಲಯಗಳು, ಗುಡಿಗುಂಡಾರಗಳು, ಕೋಟೆಗಳ ಪ್ರಾಕಾರಗಳು, ಹಾಸುಬಂಡೆಗಳು, ಕಲ್ಲುಗುಂಡುಗಳು, ದೇವಾಲಯದ ಒಳಮೈ ಹಾಗೂ ಹೊರಮೈ ಕಲ್ಲುಗಳು ಮುಂತಾದವುಗಳ ಮೇಲೆ ಕೆತ್ತಲಾಗುತ್ತದೆ. ಈ ಶಿಲ್ಪಗಳಲ್ಲಿ ಉಬ್ಬುಶಿಲ್ಪಗಳು, ಬಿಡಿಶಿಲ್ಪಗಳು, ಗಾರೆಶಿಲ್ಪಗಳು, ಪೂರ್ಣಶಿಲ್ಪಗಳು ಪ್ರಮುಖವಾಗಿದವು. ಇವು ಐತಿಹಾಸಿಕ ಸ್ಮಾರಕಗಳೂ ಹೌದು.

ಕರ್ನಾಟಕದ ನಾಯಕ ಅರಸರಿಗೆ ಸಂಬಂಧಿಸಿದಂತೆ ಕೆಲವು ಶಿಲ್ಪಗಳಿವೆ. ಅವುಗಳಲ್ಲಿ ಕೆಲವು ಉಬ್ಬು ಶಿಲ್ಪಗಳಾದರೆ ಇನ್ನೂ ಕೆಲವು ಗಾರೆಶಿಲ್ಪಗಳು ಹಾಗೂ ಕಂಬಶಿಲ್ಪಗಳಾಗಿವೆ. ಚಿತ್ರದುರ್ಗ ನಾಯಕ ಅರಸರ ಶಿಲ್ಪಗಳಿಗೆ ಸಂಬಂಧಿಸಿದಂತೆ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು, ಚಿತ್ರದುರ್ಗ ಅರಸರ ಆರಾಧ್ಯ ದೇವತೆಯಾದ ಏಕನಾಥೇಶ್ವರಿಯ ಮೂಲ ಮುಖಮಂಟಪದ ಹುಟ್ಟು ಬಂಡೆಯ ಮೇಲೆ ಇರುವ ಉಬ್ಬುಶಿಲ್ಪ ಚಿತ್ರದುರ್ಗದ ಮೊದಲನೆಯ ಅರಸ ಮತ್ತಿತಿಮ್ಮಣ್ಣನಾಯಕ (ಕ್ರಿ.ಶ.೧೫೬೮-೧೫೮೯)ನದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆ ಶಿಲ್ಪದ ಕುರಿತಾಗಿ ಇವರು ನೀಡುವ ವಿವರಣೆ ಇಂತಿದೆ : ಈ ಶಿಲ್ಪ ೬೦ ಸೆಂ.ಮೀ ಉದ್ದ, ೪೦.ಸೆಂ.ಮೀ ಅಗಲದ ವಿಸ್ತಾರದ ಬಂಡೆಯಲ್ಲಿದೆ. ಇಲ್ಲಿಯ ಅರಸ ಬಲಗೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಇಳಿಬಿಟ್ಟಿರುವ ಎಡಗೈಯಲ್ಲಿ ಓರೆಯಂಥ ಸಾಧನ ಹಿಡಿದಿದ್ದಾನೆ. ವೀರಗಚ್ಚೆ ಹಾಕಿದ್ದಾನೆ. ರಾಜಪೋಷಾಕು ತೊಟ್ಟು ಸರ್ವಾಭರಣ ಭೂಷಿತನಾಗಿದ್ದಾನೆ. ಸೊಂಟದ ಬಲಭಾಗದಲ್ಲಿ ಕಠಾರಿ ಸಿಕ್ಕಿಸಿಕೊಂಡಿರುವನು. ತಲೆಗೆ ವಿಶಿಷ್ಟವಾದ ಪೇಟ ಧರಿಸಿದ್ದಾನೆ. ರೋಷ ಆವೇಷಗಳಿಂದ ಖಡ್ಗವನ್ನು ಝಳಪಿಸುತ್ತಿರುವ ಭಂಗಿಯಲ್ಲಿ ಈತನನ್ನು ಬಿಡಿಸಲಾಗಿದೆ. ಇದು ಕಾಮಗೇತಿ ನಾಯಕವಂಶಜರ ಸ್ವಾತಂತ್ರ್ಯದಾಹವನ್ನು ಎತ್ತಿ ಸಾರುತ್ತಿದೆ.[೧೩೩]

ಏಕನಾಥೇಶ್ವರಿ ದೇವಾಲಯದ ದೀಪದಕಂಬವನ್ನು ಕ್ರಿ.ಶ. ೧೬೬೨-೬೩ರಲ್ಲಿ ಇಮ್ಮಡಿ ಮದಕರಿನಾಯಕ ನಿರ್ಮಾಣ ಮಾಡಿಸಿದನೆಂದು ವಂಶಾವಳಿಗಳಲ್ಲಿ ಹೇಳಲಾಗಿದೆ. ಈ ಸ್ತಂಭದ ಬುಡದಲ್ಲಿ ಏಕನಾಥೇಶ್ವರಿ ದೇವಾಲಯಕ್ಕೆ ಅಭಿಮುಖವಾಗಿ ನಿಂತ ಗಡ್ಡಮೀಸೆಗಳಿರುವ ಶಿಲ್ಪವನ್ನು ಗಡ್ಡದ ಮದಕರಿನಾಯಕನದೆಂದು ಕರೆಯುತ್ತಾರೆ. ಈತ ವಿಜಯನಗರ ಕಾಲದ ಆಭರಣಗಳು, ತಲೆಯುಡಿಗೆ, ದಟ್ಟಿ ಅಥವಾ ಕಾಸೆ, ಬಾಕುಗಳನ್ನು ಧರಿಸಿದ್ದಾನೆ. ಇದೇ ಶಿಲ್ಪದ ಬಲಗಡೆ ದೀಪಸ್ತಂಭದ ಪೂರ್ವಕ್ಕೆ ಸ್ತ್ರೀಶಿಲ್ಪವಿದ್ದು, ಇದು ಕನಕಮ್ಮನಾಗತಿಯದು.[೧೩೪]

ಕೊನೆಯ ಮದಕರಿನಾಯಕ ತನ್ನ ವಿವಾಹದ ಸಂದರ್ಭದಲ್ಲಿ ಶ್ರೀಕೂಡಲೀ ಶೃಂಗೇರಿಮಠದ ಸ್ವಾಮಿಗಳಿಗೆ ದಾನವಾಗಿ ತೋಟವನ್ನು ನೀಡಿದ್ದನು. ಆ ತೋಟದಲ್ಲಿ ಕೂಡಲೀ ಶೃಂಗೇರಿಮಠದ

ಪೀಠಾಧೀಶರಲ್ಲಿ ಒಬ್ಬರಾದ ತೃತೀಯ ಶಂಕರಭಾರತಿಸ್ವಾಮಿಗಳ (ಕ್ರಿ.ಶ. ೧೭೧೪-೧೭೬೬) ಸಮಾಧಿ ಮಂಟಪ ಇದೆ. ಇದರ ಮೇಲೆ ಹಿರೇ ಮದಕರಿನಾಯಕ ಮತ್ತು ಹರಪನಹಳ್ಳಿಯ ಸೋಮಶೇಖರನಾಯಕರು ಆನೆಯ ಮೇಲೆ ಕುಳಿತು ಪರಸ್ಪರ ಹೋರಾಡಿದ್ದರ ಉಬ್ಬುಶಿಲ್ಪವಿದೆ.[೧೩೫] ಗೋಪಾಲಸ್ವಾಮಿಹೊಂಡದ ಪಕ್ಕದ ದಿಬ್ಬದಮೇಲಿನ ಗೋಪಾಲಸ್ವಾಮಿ ದೇವಾಲಯದ ನವರಂಗ ದ್ವಾರದ ಮೇಲಿನ ಕಲ್ಲುಚಪ್ಪಡಿಯಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕ ಹಾಗೂ ನಾಗತಿಯರ ಉಬ್ಬುಶಿಲ್ಪವಿದೆ.[೧೩೬] ಸುರಪುರ ಅರಸರ ಆರಾಧ್ಯದೈವ ಶ್ರೀ ವೇಣುಗೋಪಾಲಸ್ವಾಮಿಯ ದೇವಾಲಯದ ಮುಖಮಂಟಪ ಕಟ್ಟೆಯಾಕಾರದ ಕಟಾಂಜನವನ್ನು ಹೊಂದಿದೆ. ಅದರ ಒಳ ಹಾಗೂ ಹೊರಭಾಗದಲ್ಲಿ ಆನೆ, ಕುದುರೆ, ಒಂಟೆ, ಚಿಗರೆ, ಚಿರತೆ, ಕುಸ್ತಿ ಹಿಡಿದ ಜಟ್ಟಿಗಳು ಸರಸವಾಡುವ ಮಂಗ, ನೃತ್ಯದಲ್ಲಿರುವ ಮೇಳದ ಉಬ್ಬುಚಿತ್ರಗಳಲ್ಲದೆ, ಅರಸ ಹಾಗೂ ರಾಜಭಟರ ಉಬ್ಬುಚಿತ್ರಗಳೂ[೧೩೭] ಇವೆ. ಈ ಉಬ್ಬುಚಿತ್ರದಲ್ಲಿರುವ ಸುರಪುರ ಅರಸನ ಹೆಸರು ಕಂಡು ಹಿಡಿಯುವುದು ಕಷ್ಟ.

ಕನಕಗಿರಿಯ ಕನಕಾಚಲಪತಿ ದೇವಾಲಯದ ಮುಂದಿನ ಗೃಹದಲ್ಲಿ ಕನಕಗಿರಿ ಅರಸರ ಕೆಲವು ಪ್ರತಿಮೆಗಳಿವೆ. ಅವುಗಳಲ್ಲಿ ಅರಸರ ಪ್ರತಿಮೆ ಒಂದರಲ್ಲಿ ಅರಸ ಸಮಭಂಗಿಯಲ್ಲಿ ನಿಂತಿದ್ದಾನೆ. ಕೈಗಳು ಪ್ರಣಾಮಮುದ್ರೆಯಲ್ಲಿದ್ದು ತಲೆಯಮೇಲೆ ಪೇಟ ಕಿವಿಯಲ್ಲಿ ಪುಷ್ಪಕುಂಡಲಗಳು, ಕೊರಳಲ್ಲಿ ಮಾಲೆ, ಮಣಿಸರಗಳು ಹಾಗೂ ಬಲತೋಳಿಗೆ ಬಾಹುಬಂಧ, ಬಲಕಾಲಿನಲ್ಲಿ ಕಡಗಗಳನ್ನು ಧರಿಸಿದ್ದಾನೆ. ಉದ್ದವಾದ ನಿಲುವಂಗಿ, ಸೊಂಟದ ಕೆಳಗೆ ನಿಲುವಂಗಿಯ ನೆರಿಗೆಗಳಿವೆ, ಸೊಂಟಕ್ಕೆ ವಸ್ತ್ರ ಸುತ್ತಿದ್ದು, ಎರಡೂ ಕೊನೆಗಳು ಮುಂದೆ ಬಂದಿವೆ. ಸೊಂಟದ ಬಲಭಾಗದಲ್ಲಿ ಚೂರಿಯನ್ನು ಸಿಕ್ಕಿಸಲಾಗಿದೆ.[೧೩೮]

ಅರಸನ ಎರಡನೇ ಪ್ರತಿಮೆಯಲ್ಲಿ ಶಿಲ್ಪ ಸಮಭಂಗಿದಲ್ಲಿದೆ. ಕೈಗಳು, ಪ್ರಣಾಮ(ಅಂಜಲಿ) ಮುದ್ರೆಯಲ್ಲಿವೆ. ತಲೆಗೆ ಪೇಟ, ಕಿವಿಗೆ ಪುಷ್ಪಕುಂಡಲಗಳು, ಕೊರಳಿಗೆ ಪದಕಹಾರ, ಮಣಿಸರಗಳು, ಮುಂಗೈಗೆ ಕಡಗ, ಮಣಿಬಂಧ, ಬೆರಳಿಗೆ ಉಂಗುರಗಳನ್ನು ಧರಿಸಿದ್ದಾನೆ. ಉದ್ದವಾದ ನಿಲುವಂಗಿಯನ್ನು ಧರಿಸಿದ್ದು, ಸೊಂಟದ ಕೆಳಗೆ ಅದು ಅಗಲವಾಗಿ ಹರಡಿದೆ. ಸೊಂಟಕ್ಕೆ ಕಟ್ಟಿದ ಎರಡು ತುದಿಗಳು ಮುಂದೆ ಇಳಿಬಿದ್ದಿವೆ. ಮುಖದಲ್ಲಿ ಉದ್ದವಾದ ಮೀಸೆಗಳಿದ್ದು, ಭುಜಭಾಗ ವಿಸ್ತಾರವಾಗಿದೆ. ತೋಳು ಕೈಗಳು ಬಲಿಷ್ಠವಾಗಿವೆ.[೧೩೯]

ಅಲ್ಲಿಯೇ ಇನ್ನೊಂದು ಪ್ರತಿಮೆ ಇದೆ. ಇದನ್ನು ನವಾಬ ಉಡಚನಾಯಕನ ಪ್ರತಿಮೆಯೆಂದು ನಂಬಲಾಗಿದೆ. ಇದು ಉಳಿದ ಪ್ರತಿಮೆಗಳಿಗಿಂತ ದೊಡ್ಡದು. ಇಲ್ಲಿ ಅರಸ ಸಮಭಂಗಿಯಲ್ಲಿ ನಿಂತಿದ್ದಾನೆ. ಕೈಗಳು ಪ್ರಣಾಮ ಮುದ್ರೆಯಲ್ಲಿವೆ. ಮುತ್ತಿನೆಳೆಗಳ ಗುಚ್ಛನಿಂದ ಕೂಡಿದ ತಲೆಯ ಮೇಲಿನ ಪೇಟ ಬಲಕ್ಕೆ ವಾಲಿದೆ. ಕಿವಿಯಲ್ಲಿ ಪುಷ್ಪಕುಂಡಲಗಳು, ಕೊರಳಲ್ಲಿ ಮಣಿಸರಗಳು, ಮುಂಗೈಯಲ್ಲಿ ಕಡಗಗಳಿವೆ. ಕೈ

ಬೆರಳಿನಲ್ಲಿ ಉಂಗುರಗಳು, ಸೊಂಟದಲ್ಲಿ ಸೊಂಟಪಟ್ಟಿ, ಸೊಂಟಕ್ಕೆ ಸುತ್ತಿದ ವಸ್ತ್ರದ ಕೊನೆ ಎಡಭಾಗದಲ್ಲಿ ಇಳಿಬಿದ್ದಿದೆ. ಸೊಂಟದ ಬಲಗಡೆಗೆ ಚಿಕ್ಕ ಖಡ್ಗವಿದೆ. ಮುಖದಲ್ಲಿ ಮೀಸೆ, ಸದೃಢ ಮೈಕಟ್ಟು ಹೊಂದಿದೆ.[೧೪೦]

ಅಲ್ಲಿಯೇ ನವಾಬ ಉಡಚನಾಯಕನ ರಾಣಿಯ ಪ್ರತಿಮೆ ಇದ್ದು, ರಾಣಿ ಸಮಭಂಗದಲ್ಲಿ ನಿಂತಿದ್ದು ಕೈಗಳು ನಮಸ್ಕಾರ ಮುದ್ರೆಯಲ್ಲಿವೆ. ರಾಣಿಯ ಬೈತಲೆಯ ನಡುವೆ ಸರವಿದೆ. ಹಾಗೂ ಹಣೆಯ ಮೇಲೆ ಪದಕವಿದೆ. ಕುಬಸ, ಸೀರೆ ಧರಿಸಿದ್ದು, ಕೊರಳಲ್ಲಿ ಮಾಲ್ಯ, ಕುಚದ್ವಯುಗಳ ಮಧ್ಯೆ ಇಳಿಬಿದ್ದ ಮಣಿ ಸರಗಳು, ಬಾಹುಬಂಧಗಳು, ಮುಂಗೈಯಲ್ಲಿ ಕಂಕಣಗಳು, ಮಣಿಬಂಧಗಳು, ಸೊಂಟದಲ್ಲಿ ಮಣಿ ಸರಗಳ ಪಟ್ಟಿ, ಪಾದಸರಗಳಿವೆ.[೧೪೧] ಅಲ್ಲಿಯೇ ಇರುವ ಇನ್ನೊಂದು ಶಿಲ್ಪ ಉಡಚನಾಯಕನ ತಾಯಿಯದು. ಈ ರಾಜಮಾತೆಯು ನಿಂತಿದ್ದು, ಕೈಯಲ್ಲಿ ಕೋಲು ಹಿಡಿದಿದ್ದಾಳೆ. ಈ ಶಿಲ್ಪ ವೃದ್ಧೆಯ ಲಕ್ಷಣಗಳನ್ನು ಹೊಂದಿದೆ. ಲಂಗವನ್ನು ಉಟ್ಟು ಅದರ ಮೇಲೆ ಸೀರೆಯನ್ನು ಧರಿಸಿದ್ದಾಳೆ. ಕೊರಳಲ್ಲಿ ಮಣಿಸರವಿದೆ.[೧೪೨]

ಚಿಕ್ಕಕನಕಪ್ಪನ ಗುಡಿಯಲ್ಲಿ ಇಮ್ಮಡಿ ಕನಕಪ್ಪನಾಯಕನ ಪ್ರತಿಮೆ ಇದೆ. ಅರಸ ಸಮಭಂಗಿಯಲ್ಲಿ ನಿಂತಿದ್ದು ಆತನ ಕೈಗಳು ಅಂಜಲಿ ಮುದ್ರೆಯಲ್ಲಿವೆ. ತಲೆಯ ಮೇಲೆ ಪೇಟವಿದೆ. ಕಿವಿಯಲ್ಲಿ ಕುಂಡಲಗಳು, ಕೊರಳಲ್ಲಿ ಮಣಿಸರಗಳು, ಮುಂಗೈಯಲ್ಲಿ ಕಡಗಗಳಿವೆ. ಉದ್ದವಾದ ನಿಲುವಂಗಿ ಧರಿಸಿದ್ದಾನೆ. ಸೊಂಟದಲ್ಲಿ ಚೂರಿ ಇದೆ. ಇದೇ ರೀತಿಯ ಪ್ರತಿಮೆಗಳು ಇದೇ ದೇವಾಲಯದ ಮುಂದಿನ ದೀಪಸ್ತಂಭದ ಕಟ್ಟೆಯ ಮಾಡಿನಲ್ಲಿವೆ. ಅಲ್ಲದೆ ಅದರ ಎದುರಿಗಿರುವ ಹನುಮಪ್ಪ ಹಾಗೂ ತೊಂಡೆ ತೆವರಪ್ಪ ದೇವಾಲಯದ ದೀಪಸ್ತಂಭದ ಕೆಳಗಿನ ಕಟ್ಟೆಯ ಮಾಡಿನಲ್ಲಿಯೂ ಕೆಲ ಮೂರ್ತಿಗಳಿವೆ.[೧೪೩] ಅವು ನವಾಬ ಉಡಚನಾಯಕ ಹಾಗೂ ಆತನ ರಾಣಿಯವೆಂಬ ನಂಬಿಕೆ ಇದೆ.

ಕನಕಾಚಲಪತಿ ದೇವಾಲಯದ ಮುಂದಿರುವ ದೃಶ್ಯಶಿಲ್ಪದಲ್ಲಿ ಅಶ್ವರೂಢನಾಗಿ ಯುದ್ಧಕ್ಕೆ ಹೊರಟಿರುವ ಅರಸ ರಾಜಮಾತೆಯ ದರ್ಶನಕ್ಕಾಗಿ ಮುಂದೆ ನಿಂತರೆ, ಕುದುರೆಯ ಮುಂದೆ ಸೈನಿಕರಿದ್ದಾರೆ. ಹಿಂದೆ ಸೇವಕನೊಬ್ಬನು ಅರಸನಿಗೆ ಪತಾಕೆ ಹಿಡಿದಿದ್ದಾನೆ. ಅರಸ ತಲೆಗೆ ಪೇಟ ಹಾಗೂ ಉದ್ದವಾದ ನಿಲುವಂಗಿ ಧರಿಸಿದ್ದಾನೆ. ಕೊರಳಲ್ಲಿ ಪದಕಹಾರ, ಕಂಠಿ, ಮಣಿಸರಗಳು, ಕಿವಿ ಓಲೆಗಳು, ತೋಳ್ಬಂದಿ, ಕೈಕಡಗ, ಕಾಲ್ಗಡಗ ಧರಿಸಿದ್ದಾರೆ. ರಾಜಮಾತೆ ತಲೆಗೆ ಮುಂಡಾಸನ್ನು ಸುತ್ತಿದ್ದಾಳೆ. ಕುದುರೆಗೆ ಮುಖವಾಡ ಜೀನ ಕಾಲಿಡಲು ರಿಕಾಪುಗಳಿವೆ.[೧೪೪]

ಕನಕಗಿರಿಯಿಂದ ಗಂಗಾವತಿಗೆ ಹೋಗುವ ರಸ್ತೆಯ ಬಲಬದಿಯ ಗುಂಡಿನ ಮೇಲೆ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಉಬ್ಬುಶಿಲ್ಪದಲ್ಲಿ ಇಬ್ಬರು ರಾಣಿಯರಿಗೆ ಇಬ್ಬರು ಛತ್ರಿದಾರರಿದ್ದು, ಒಬ್ಬನು ಛತ್ರಿಯನ್ನು ಬಿಚ್ಚಿ ಹಿಡಿದಿದ್ದಾನೆ. ಅರಸ ಅಶ್ವಸವಾರನಾಗಿದ್ದಾನೆ. ಅರಸನ ನಂತರ ಹುಲಿಯೊಡನೆ ಕಾದಾಡುತ್ತಿರುವ

ಭಟನೊಬ್ಬನ ಶಿಲ್ಪವಿದೆ. ರಾತ್ರಿಯ ವೇಳೆಯಲ್ಲಿ ಪರಿವಾರ ಸಮೇತ ಹೊರಟಾಗ ಹಿಂದೆ ಬಂದಿರಬಹುದಾದ ಹುಲಿಯನ್ನು ಕಾವಲುಭಟರು ಸಂಹರಿಸುತ್ತಿರಬೇಕು.[೧೪೫] ಕನಕಗಿರಿಯ ಹಿರೇನಾಯಕನಗುಡಿಯ ಶಿಲ್ಪಫಲಕದಲ್ಲಿ ಅರಸ ಹಾಗೂ ಬೇಟೆಪಡೆಯ ಶಿಲ್ಪಫಲಕವಿದೆ. ಇಲ್ಲಿ ಖಡ್ಗ, ಡಾಲು ಹಿಡಿದ ವ್ಯಕ್ತಿಗಳು, ಹಾಗೂ ಇನ್ನೋರ್ವನು ಕೋವಿಯನ್ನು ಹಿಡಿದಿದ್ದಾನೆ. ಆತನಿಗೆ ಸೇವಕನು ಛತ್ರಿಯನ್ನು ಹಿಡಿದಿದ್ದಾನೆ. ಹೀಗಾಗಿ ಅದು ಅರಸನ ಶಿಲ್ಪವಾಗಿದೆಯೆನ್ನಬಹುದು.[೧೪೬]

ಕನಕಾಚಲಪತಿ ದೇವಾಲಯದ ಬಲ ಪ್ರಾಕಾರದಲ್ಲಿ ಅರಸನು ತನ್ನ ರಾಣಿ ಹಾಗೂ ಮಗುವಿನೊಂದಿಗೆ ಕುದುರೆಯ ಮೇಲೇರಿದ್ದು, ಕುದುರೆಯ ಹಿಂದೆ ಈಟಿ ಹಿಡಿದ ಭಟ ಹಾಗೂ ಹಿಂದೆ ಚಾಮರಧಾರನ ಶಿಲ್ಪಗಳಿವೆ.[೧೪೭] ಕನಕಗಿರಿಯ ವೆಂಕಟಪತಿಗುಡಿಯಲ್ಲಿ ಒಂದು ಅಶ್ವಸವಾರನ ಶಿಲ್ಪವಿದೆ. ಇದನ್ನು ವೆಂಕಟಪ್ಪನಾಯಕನ ಸ್ಮಾರಕವೆಂದು ಸ್ಥಳೀಯರು ಹೇಳುತ್ತಾರೆ. ಇಲ್ಲಿ ಅರಸ ಕುದುರೆ ಮೇಲೆ ಕುಳಿತಿದ್ದಾನೆ. ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಲಗಾಮನ್ನು ಹಿಡಿದಿದ್ದಾನೆ. ಕುದುರೆಯ ಹಿಂದೆ ಛತ್ರಿಹಿಡಿದ ಸೇವಕನಿದ್ದರೆ, ಕುದುರೆಯ ಕಾಲುಗಳ ಮಧ್ಯೆ ವ್ಯಕ್ತಿಯೋರ್ವ ಬಿದ್ದಿದ್ದಾನೆ.[೧೪೮]

ಕನಕಾಚಲಪತಿ ದೇವಾಲಯದ ಎಡ ಪ್ರಾಕಾರದಲ್ಲಿ ಅರಸನ ಶಿಲ್ಪವಿದೆ. ಕುದುರೆಯ ಮೇಲೆ ಕುಳಿತಿದ್ದ ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಲಗಾಮು ಇದೆ. ಉದ್ದವಾದ ನಿಲುವಂಗಿ ಧರಿಸಲಾಗಿದೆ. ಮುಂದೆ ಹಿಂದೆ ಸೇವಕರಿದ್ದು ಕೋವಿ ಹಾಗೂ ಪತಾಕೆಯನ್ನು ಹಿಡಿದಿದ್ದಾರೆ. ಇದೇ ದೇವಾಲಯದ ಬಲ ಪ್ರಾಕಾರದಲ್ಲಿ ಎರಡು ಅಶ್ವಸವಾರ ಅರಸರ ಶಿಲ್ಪಗಳಿವೆ. ಕುದುರೆಯ ಮೇಲೆ ಕುಳಿತ ಇವರು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಲಗಾಮುಗಳನ್ನು ಹಿಡಿದಿದ್ದಾರೆ. ಕುದುರೆಯ ಹಿಂದೆ ಸೇವಕನೋರ್ವ ಛತ್ರಿ ಹಿಡಿದಿದ್ದಾನೆ. ಹೀಗೆ ಕನಕಗಿರಿಯಲ್ಲಿ ಅರಸರಿಗೆ ಸಂಬಂಧಿಸಿದ ಅನೇಕ ಶಿಲ್ಪಗಳನ್ನು ಕಾಣಬಹುದು.

ಹರತಿ ನಾಯಕ ಅರಸರಿಗೆ ಸಂಬಂಧಿಸಿದಂತೆ ಕೆಲವು ಶಿಲ್ಪಗಳು ಹರ್ತಿಕೋಟೆಯಲ್ಲಿವೆ. ಉರುಸಲಮ್ಮನ ಗುಡಿಯ ಹತ್ತಿರದಲ್ಲಿರುವ ಕಪ್ಪುವರ್ಣ ಶಿಲೆ ವೀರಮಾಸ್ತಿಗಲ್ಲಿನಲ್ಲಿ ಕೈಮುಗಿದು ನಿಂತಿರುವ ರಾಜದಂಪತಿಗಳ ಉಬ್ಬುಶಿಲ್ಪವಿದ್ದು, ಇವರು ರಾಜಪೋಷಾಕನ್ನು ಧರಿಸಿದ್ದಾರೆ. ಇವರೀರ್ವರ ತಲೆಗಳ ಬಳಿ ಸೂರ್ಯ ಚಂದ್ರರ ನಡುವೆ ಲಿಂಗವನ್ನು ಕೆತ್ತಲಾಗಿದ್ದು, ಮೇಲ್ಭಾಗದಲ್ಲಿ ಏಳು ಅಂಗುಲ ಎತ್ತರದ ನಂದಿಯಿದೆ.[೧೪೯] ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ರಾಜದಂಪತಿಗಳ ಸಮಾಧಿಯ ಸ್ಥಳ ಇದೇ ಆಗಿರಬೇಕು ಹಾಗೂ ಇವರು ಹರತಿ ನಾಯಕ ಅರಸರ ವಂಶಜರಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೇ ಆಂಜನೇಯ ದೇವಾಲಯದ ಎದುರಿಗಿರುವ ಚೌಕಾಕಾರದ ದೀಪಸ್ತಂಭದಲ್ಲಿ ಒಂದು ಉಬ್ಬುಶಿಲ್ಪವಿದ್ದು, ದೈವಕ್ಕೆ ಎದುರಾಗಿ ಕೈಮುಗಿದು ನಿಂತಿರುವ ಈ ವ್ಯಕ್ತಿ ವಿಜಯನಗರ ಕಾಲದ ಉಡುಗೆ ತೊಡುಗೆ ತೊಟ್ಟಿದ್ದಾನೆ.[೧೫೦] ಈತನೋರ್ವ ರಾಜಪುರುಷನಿರಬೇಕೆಂಬ ಅಭಿಪ್ರಾಯವಿದೆ.

### ೫.೩.೩ ಸಂಗೀತ

ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ ಮತ್ತು ಕೃಷಿ ಇವು ಮನುಷ್ಯನ ಸಾಂಸ್ಕೃತಿಕ ಬದುಕಿನ ನಾಲ್ಕು ಹಂತಗಳು ಮನುಷ್ಯ ಆಹಾರ ಸಂಗ್ರಹಣೆಗಾಗಿ ಗುಡ್ಡ, ಬೆಟ್ಟ, ಕಂದರ, ಕಣಿವೆಗಳನ್ನು ಸುತ್ತುವಾಗ ಪ್ರಕೃತಿಯನ್ನು ಅನುಕರಿಸುವ ಸಂಗೀತ ಅವನಿಂದ ಹುಟ್ಟಿತು. ನಂತರ ಪ್ರಾಣಿಗಳನ್ನು ಬೇಟೆಯಾಡುವಾಗ ಪ್ರಾಣಿಗಳಂತೆ ಧ್ವನಿ ಹೊರಡಿಸುವುದನ್ನು ಕಲಿತನು. ಅವುಗಳ ಕೊಂಬಿನಿಂದಲೂ ಧ್ವನಿ ಹೊರಡಿಸಿದನು. ಇದರಿಂದ ಪ್ರಾಣಿಗಳ ಅನುಕರಣೆಯ ಮೂಲಕ ಸಂಗೀತ ಸೃಷ್ಟಿಯಾಯಿತು. ನಂತರದಲ್ಲಿ ಅದೊಂದು ಜೀವನ ವಿಧಾನದ ಒಂದು ಭಾಗವಾಯಿತು.

ಮನುಷ್ಯ ತನಗೆ ಹಿತವಾಗುವಂತೆ ಸಂತೋಷಪಟ್ಟುಕೊಳ್ಳುವಂತೆ ಮಾಧುರ್ಯ ನೀಡುವಂತೆ ಸೃಷ್ಟಿಸಿಕೊಂಡಿರುವುದೇ ಸಂಗೀತ. "ಗೀತಂ ವಾದ್ಯಂತಥಾ ನೃತ್ಯಂತ್ರಯಂ ಸಂಗೀತಮುಚ್ಯತೆ". ಅಂದರೆ ಗೀತವಾದ್ಯ, ನೃತ್ಯಗಳು ಕೂಡಿದ್ದುದು ಸಂಗೀತವೆಂದು ಕರೆಯಲ್ಪಡುತ್ತದೆ. ಸಂಗೀತವು ಜೀವಮಾನವನ್ನೆಲ್ಲ ರಸಮಯವನ್ನಾಗಿ ಮಾಡುತ್ತದೆ. ಇದು ಜನರ ಸಾಂಸ್ಕೃತಿಕ ಇತಿಹಾಸವನ್ನು ಹೇಳುವುದರೊಂದಿಗೆ ಒಂದು ಅರಸುಮನೆತನದ ಸಮೃದ್ಧಿ ವೈಭವವನ್ನು ಪ್ರದರ್ಶಿಸುತ್ತದೆ. ಅಲ್ಲದೆ ಒಂದು ಅರಸುಮನೆತನದಿಂದ ಇನ್ನೊಂದು ಅರಸುಮನೆತನದ ಸಂಬಂಧವನ್ನು ಬೆಸೆಯುವಲ್ಲಿಯೂ ಸಂಗೀತ ಕೆಲವು ಬಾರಿ ಪ್ರಮುಖ ಪಾತ್ರ ವಹಿಸಿದ್ದುಂಟು.

ಕರ್ನಾಟಕದ ನಾಯಕ ಅರಸರಲ್ಲಿ ಸಂಗೀತಗಾರರಾಗಿದ್ದುದು, ಸಂಗೀತಕ್ಕೆ ಆಶ್ರಯದಾತರಾಗಿದ್ದುದು ಕ್ವಚಿತ್ತಾದರೂ, ಸುರಪುರದಂತಹ ನಾಯಕ ಅರಸುಮನೆತನದಲ್ಲಿ ಅದು ಯಥೇಚ್ಛವಾಗಿ ಪಸರಿಸಿತು. ಎಲ್ಲಾ ಮನೆತನಗಳಲ್ಲಿ ಸಂಗೀತ ಗೋಷ್ಠಿಗಳು ನಡೆಯುತ್ತಿದ್ದಂತೆ ಈ ಮನೆತನಗಳಲ್ಲಿಯೂ ಸಂಗೀತ ಗೋಷ್ಠಿಗಳು ನಡೆದಿವೆ.

ಚಿತ್ರದುರ್ಗದ ನಾಯಕರು ಪ್ರಜಾಪಾಲಕರು, ಧರ್ಮಸಹಿಷ್ಣುಗಳು, ಕಲಾರಸಿಕರು, ಸಾಹಿತ್ಯಪ್ರಿಯರು, ಸಾಹಿತ್ಯ ಆಶ್ರಿತರೂ ಆಗಿದ್ದರು. ಹಲವಾರು ಪಂಡಿತರು, ವಕೀಲರು, ಸಂಗೀತಗಾರರು ಇವರ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದರು.[೧೫೧] ಕಡೆಯ ಅರಸ ರಾಜಾ ವೀರಮದಕರಿನಾಯಕನ ಆಸ್ಥಾನವು ಹಲವಾರು ಪಂಡಿತರಿಂದಲೂ, ವಕೀಲರಿಂದಲೂ, ಸಂಗೀತಗಾರರಿಂದಲೂ ತುಂಬಿದ್ದಿತು.[೧೫೨]

ಸುರಪುರ ಸಂಸ್ಥಾನದ ದಾಖಲೆಗಳು ತಿಳಿಸುವಂತೆ ಅರಮನೆಯಲ್ಲಿ ಮತ್ತು ವೇಣುಗೋಪಾಲ ಸ್ವಾಮಿಯ ದೇವಾಲಯದಲ್ಲಿ ದಸರಾ, ಯುಗಾದಿ, ಗೋಕುಲಾಷ್ಟಮಿ ದಿನಗಳಲ್ಲಿ ಸಂಗೀತ ಕಚೇರಿ ನಡೆಯುತ್ತಿದ್ದವು. ಜೊತೆಗೆ ಸಂಗೀತಪ್ರೇಮಿಗಳು, ಕೀರ್ತನಕಾರರು, ನೃತ್ಯಕಲಾವಿದರು ಭಾಗವಹಿಸುತ್ತಿದ್ದರು. ಅಲ್ಲದೇ ಪ್ರತಿವರ್ಷ ಕೃಷ್ಣಜನ್ಮಾಷ್ಟಮಿಯಲ್ಲಿ ಗೋಪಾಲಸ್ವಾಮಿ ದೇವಾಲಯದ ಮುಂದೆ ರಣಗಂಬ

ಹರಿಯಲು ರಾಜನು ಮೆರವಣಿಗೆಗೆ ಹೋಗಿ ದೇವಾಲಯದಲ್ಲಿ ಕುಳಿತಾಗ ಪಾತರದವರ ಕಡೆಯಿಂದ ನೃತ್ಯ ಮಾಡುವ ಕಾರ್ಯಕ್ರಮ ಜರುಗುತ್ತಿತ್ತು. ಅದು ಅವರ ಸಾಂಪ್ರದಾಯಿಕ ಹಕ್ಕು ಆಗಿತ್ತು. ರಂಗಾಸಾನಿ, ಕೃಷ್ಣಾಸಾನಿ, ಅಚ್ಚಾಸಾನಿ, ದಾಸಮ್ಮ, ಕಂಠೆಮ್ಮ ಮುಂತಾದವರು ಪ್ರಸಿದ್ಧ ನರ್ತಕಿಯರಿದ್ದರು. ಈ ಮನೆತನದವರಿಗೆ ಜೇಜಮ್ಮನ ಮನೆತನದವರೆನ್ನುತ್ತಾರೆ. ಜೇಜಮ್ಮ ರಾಜಾ ಕೃಷ್ಣಪ್ಪನಾಯಕರ ಕಾಲದವಳು.[೧೫೩]

ಕಂಠವೇಣಿ ಮನೆತನದವರು ಸುರಪುರ ಸಂಸ್ಥಾನಕ್ಕೆ ಕೀರ್ತಿ ತಂದವರು. ಇವರು ಈ ಮನೆತನದ ಸಂಗೀತಗಾರರೆಂದೇ ಹೆಸರಾಗಿದ್ದವರು. ಇವರು ಸಂಗೀತ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಭಕ್ತಿಯಿಂದ ಪೋಷಿಸಿಕೊಂಡು ಬಂದವರು. ಅನೇಕ ತರಹದ ಕಲಾವಂತರು, ಗಾಯಕರು, ನಟರು ಈ ಮನೆತನದಲ್ಲಿ ಆಶ್ರಯ ಪಡೆದಿದ್ದರು. ದಾಸವರೇಣ್ಯರಲ್ಲಿ ಆನಂದದಾಸರು ದಿನನಿತ್ಯ ಸಂಗೀತ ಮತ್ತು ನೃತ್ಯಪಾಠಗಳನ್ನು ಹೇಳುತ್ತಿದ್ದರು. ರಾಮದಾಸ ಮತ್ತು ಕೃಷ್ಣದಾಸರೆಂಬ ದಾಸದ್ವಯರು ಹರಿಯ ಸ್ತುತಿಗೀತೆಗಳನ್ನು ಬಹು ಸುಶ್ರಾವ್ಯವಾಗಿ ಹಾಡುತ್ತಿದ್ದರು.[೧೫೪] ಸುರಪುರದ ಸಂಗೀತಗಾರರು ಕರ್ನಾಟಕದ ದಾಕ್ಷಿಣಾತ್ಯ ಮತ್ತು ಹಿಂದುಸ್ತಾನಿಯ ಔತ್ತರೇಯಗಳನ್ನು ಅಳವಡಿಸಿಕೊಂಡು ಬಂದವರು. ಮುಖ್ಯವಾಗಿ ದೇಶೀಯ ಸೊಗಡು ಒಳಗೊಂಡ ಸಾಹಿತ್ಯಕ್ಕೆ ಹೆಸರಾದ ಜಾವಳಿಗಳು ಸಂಸ್ಥಾನದಲ್ಲಿ ಸದಾ ಪ್ರಚಲಿತವಿದ್ದ ಲಘುಶಾಸ್ತ್ರೀಯ ಹಾಡುಗಳಾಗಿದ್ದವು.[೧೫೫]

ಆನಂದದಾಸರು ಸುರಪುರದ ಆಸ್ಥಾನನರ್ತಕಿಯರಿಗೆ ಸಂಗೀತ ಕಲಿಸುತ್ತಿದ್ದರಲ್ಲದೆ ಅನೇಕ ಕೀರ್ತನೆ, ಅಖ್ಯಾನ ಹಾಗೂ ಕಾವ್ಯಗಳನ್ನು ರಚಿಸಿದ್ದಾರೆ. ಭಗವದ್ಗೀತೆಯನ್ನು ಕೀರ್ತನಗೀತೆಯಾಗಿ ರೂಪಾಂತರಿಸಿದ್ದರು. ರಾಜಾ ಕೃಷ್ಣಪ್ಪನಾಯಕನು ಸಂಗೀತ ಪ್ರೇಮಿಯಾಗಿದ್ದು, ದಿನಗಟ್ಟಲೆ ದುಂದುಮಿಪದಗಳನ್ನು ಹಾಡುತ್ತಿದ್ದನು. ಅಲ್ಲದೆ ಇವರು ಹೊರರಾಜ್ಯದಿಂದ ಸಂಗೀತಗಾರರನ್ನು ಕರೆಯಿಸಿ ಸಂಗೀತಗೋಷ್ಠಿ ನಡೆಸಿದವರು. ಖ್ಯಾತ ಹಿಂದುಸ್ಥಾನಿ ಸಂಗೀತಗಾರರಾಗಿದ್ದ ಹೀರಾಬಾಯಿ ಬಡೋದೆಕರ (ಹಿಂದೂಸ್ಥಾನಿ ಗಾಯಕಿ), ಪಂ.ವ್ಹಿ.ಜಿ.ಜೋಗ(ಹಿಂದೂಸ್ಥಾನಿ ಪಿಟೀಲುವಾದಕ), ಉಸ್ತಾದ ಅಮೀರ ಹುಸೇನ(ತಬಲಾ ವಾದಕ), ಪಂ.ಭೀಮಸೇನ ಜೋಶಿ(ಹಿಂದುಸ್ಥಾನಿ ಗಾಯಕ) ಮುಂತಾದವರು ಸಂಗೀತ ಗೋಷ್ಠಿಯಲ್ಲಿ ಭಾಗವಹಿಸಿದ್ದರು. ಅಲ್ಲದೆ ಕಂಠವೇಣಿ ಶ್ರೀನಿವಾಸಶಾಸ್ತ್ರಿ(ವೀಣೆ), ಶ್ರೀನಿವಾಸಶಾಸ್ತ್ರಿ ಅಷ್ಟಾವಧಾನಿ, ಷಣ್ಮುಖಪ್ಪ ಗವಾಯಿ, ಪೀಟಿಲು ತಿಮ್ಮಪ್ಪ, ಬೂದೂರು ನಾರಾಯಣಾಚಾರ, ಬೂದೂರು ರಾಘುವೇಂದ್ರಾಚಾರ, ಎಲ್.ಎಂ.ಆಚಾರಿ, ಡಬೀರ ನರಸಿಂಹಾಚಾರ್ಯರು, ಲಕ್ಷ್ಮೀನರಸಿಂಹಾಚಾರ್ಯ ಸಂಗೀತಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ ಸುರಪುರದ ಸಂಗೀತ ಕಲಾವಿದರಾಗಿದ್ದರು. ಸಂಗೀತ ಕಾರ್ಯಕ್ರಮಗಳು ಹೊಸ ದರಬಾರದ ೨ನೇ ಮಹಡಿಯ 'ಕನ್ನಡಿ ಮಹಲಿ'ನಲ್ಲಿ ಜರುಗುತ್ತಿದ್ದವು.[೧೫೬] ಇವರ ಕಾಲದಲ್ಲಿ ಸಂಗೀತ ಅಭಿವೃದ್ಧಿ ಹೊಂದಿತು. ಇವರ ಕಾಲದ

ವೇಣುಗೋಪಾಲಸ್ವಾಮಿಯ ಕೆಲವು ಶಿಲ್ಪಗಳಲ್ಲಿ ನೃತ್ಯ, ವಾದ್ಯ ಮುಂತಾದ ಸಂಗೀತದ ದೃಶ್ಯಗಳನ್ನು ನೋಡಬಹುದಾಗಿದೆ.

ರಾಜಾ ಕೃಷ್ಣಪ್ಪನಾಯಕ ಸುಪುತ್ರ ಬ್ಯಾರಿಸ್ಟರ್ ರಾಜಾ ವೆಂಕಟಪ್ಪನಾಯಕನು ಸಂಗೀತ-ಸಾಹಿತ್ಯದ ಅಭಿಮಾನಿಗಳಾಗಿದ್ದು, ಸಂಗೀತವನ್ನು ಅಪಾರವಾಗಿ ಆರಾಧಿಸುತ್ತಿದ್ದನು. ಪ್ರಸಿದ್ಧ ಸಂಗೀತ ಕಲಾವಿದರನ್ನು ಆಮಂತ್ರಿಸಿ ಸಂಗೀತಗೋಷ್ಠಿಗಳನ್ನು ನಡೆಸುತ್ತಿದ್ದನಲ್ಲದೆ, ಸಂಸ್ಥಾನದಲ್ಲಿ ಸಂಗೀತಗಾರರನ್ನು ವರ್ಷಕ್ಕೊಮ್ಮೆ ಸನ್ಮಾನಿಸಿ ಸತ್ಕರಿಸುವ ಸಂಪ್ರದಾಯವಿಟ್ಟುಕೊಂಡಿದ್ದನು. ಇವರ ಗುರು ಜಗತ್ಪ್ರಸಿದ್ದ ತಬಲಾವಾದಕ ಉಸ್ತಾದ ಶೇಖ್ ದಾವೂದರು ಅನೇಕ ಬಾರಿ ಸುರಪುರಕ್ಕೆ ಬಂದು ಇಲ್ಲಿಯ ಸಂಗೀತಗೋಷ್ಠಿಗಳನ್ನು ಕಂಡು ಖುಷಿಪಟ್ಟಿದ್ದಾರೆ[೧೫೭] ಹಾಗೂ ಸನ್ಮಾನಗೊಂಡಿದ್ದಾರೆ. ಅಲ್ಲದೇ ರಾಜಾ ಕೃಷ್ಣಪ್ಪನಾಯಕ ಪುತ್ರರಾದ ರಾಜಾ ಪಿಡ್ಡನಾಯಕ ಹಾಗೂ ರಾಜಾ ವೆಂಕಟಪ್ಪನಾಯಕರಿಗೆ ತಬಲಾವಾದನ ಕಲಿಸಿದರು. ಪ್ರತಿವರ್ಷ ದಸರಾದಲ್ಲಿ ಅರಮನೆಯ ಮುಂದೆ ಕೀರ್ತನೆ ನಡೆಯುತ್ತಿದ್ದಿತು. ಇವರ ಕಾಲದಲ್ಲಿ ಸುರಪುರಕ್ಕೆ ಪ್ರಸಿದ್ಧ ಸಂಗೀತ ಕಲಾವಿದರಾದ ಗಂಗೂಬಾಯಿ ಹಾನಗಲ್, ಖ್ಯಾತ ವೀಣಾವಾದಕ ಡಿ.ಆರ್.ಪರ್ವತೀಕರ್, ಕಲ್ಬುರ್ಗಿಯ ಪಂಡಿತ ಅವಧೂತ ಬುವಾ ಮುಂತಾದವರು ಸುರಪುರದಲ್ಲಿ ಸಂಗೀತ ಕಚೇರಿ ನಡೆಸಿದಾಗ, ಬ್ಯಾರಿಸ್ಟರ್ ವೆಂಕಟಪ್ಪನಾಯಕನು ಅವರಿಗೆ ತಬಲಾ ಸಾಥಿ ನೀಡುತ್ತಿದ್ದರು.[೧೫೮]

ಬ್ಯಾರಿಸ್ಟರ್ ವೆಂಕಟಪ್ಪನಾಯಕನ ಗರಡಿಯಲ್ಲಿ ತಯಾರಾದ ರಾಮಶಾಸ್ತ್ರಿ ಯಾಳಗಿಯವರು ದಿಲ್ಲಿಯಲ್ಲಿ ನಡೆದ ಅಖಿಲ ಭಾರತೀಯ ತಬಲಾ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಗಳಿಸಿದ್ದು, ಅವರ ತಬಲಾ ಶಿಕ್ಷಣ ಸಾಮರ್ಥ್ಯಕ್ಕೆ ನಿದರ್ಶನವಾಗಿದೆ.[೧೫೯] ಸುರಪುರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಇವರೇ ಬೆಳೆಸಿದರಲ್ಲದೆ ಶ್ರೀ ಅಷ್ಟಾವಧಾನಿ ನರಸಿಂಹಶಾಸ್ತ್ರಿಗಳು, ರಾಘವೇಂದ್ರಾಚಾರ್ಯ ಡಬೀರ, ಪಾಂಡುರಂಗಾಚಾರ್ಯ ಭಕ್ರಿ ಇವರ ಸಹಕಾರದಿಂದ ಹೊಸ ಪೀಳಿಗೆಯನ್ನು ಹುಟ್ಟು ಹಾಕಿದವರು. ಅವರಲ್ಲಿ ಭೀಮಸೇನ್ ಮಣ್ಣೂರು, ಮುರಳೀಧರ ವ್ಯಾಸ, ವೆಂಕಟದಾಸ, ರಾಮಾಶಾಸ್ತ್ರಿ ಯಾಳಗಿ, ಜಯರಾಮಾಚಾರ್ಯ ಸಗರ, ಜೆ.ಅಗಸ್ಟೀನ್ ಮುಂತಾದವರು ಪ್ರಮುಖರಾಗಿದ್ದಾರೆ. ಈ ಮನೆತನದ ರಾಜಾ ಪಿಡ್ಡನಾಯಕರೂ ಅತ್ಯುತ್ತಮ ತಬಲಾವಾದಕರಾಗಿದ್ದರು. ಇವರು ಸುರಪುರ ಸಂಸ್ಥಾನದಲ್ಲಿ ನಡೆಯುವ ನಾಟಕ, ಸಂಗೀತ ಮೊದಲಾದವುಗಳಿಗೆ ಸಾಕಷ್ಟು ಪ್ರೋತ್ಸಾಹವನ್ನು ಕೊಟ್ಟವರು.

ಗುಡಗುಂಟಿ ನಾಯಕ ಅರಸರ ಆಸ್ಥಾನದಲ್ಲಿಯೂ ಮಡಿವಾಳ ಚಂದಪ್ಪ, ಬಸಣ್ಣ ಜಾವೂರು, ಹಲಗೇರಿ ರಾಮಣ್ಣ ಎಂಬ ನಾಟಕಕಾರರಿದ್ದರು. ಅರಸ ರಾಜಾ ಜಡಿಸೋಮಪ್ಪನಾಯಕರು, ಸಂಸ್ಥಾನದಲ್ಲಿ ವೀರ ಅಭಿಮನ್ಯು, ದ್ರೌಪದಿಯ ಸ್ವಯಂವರ, ಕುರುಕ್ಷೇತ್ರ, ಗುಡಗುಂಟಿ ಅಮರೇಶ್ವರ (ಕೈಬರಹ) ತಿಂಥಣಿ ಮೋನಪ್ಪಯ್ಯ (ಕೈಬರಹ), ಕಂದಗಲ್ ಹನುಮಂತರಾಯರ ಪೌರಾಣಿಕ ನಾಟಕಗಳಾದ

ಅಕ್ಷಯಾಂಬರ, ಬಡತನದ ಭೂತ ನಾಟಕಗಳನ್ನು ಆಡಿಸಿದ್ದರಲ್ಲದೆ ಸ್ವತಃ ತಾವೇ ಬೆಳಗಿನವರೆಗೆ ಕುಳಿತು ನಾಟಕಗಳನ್ನು ನೋಡುತ್ತಿದ್ದರು. ಹಾಗೂ ಯುಗಾದಿ, ದಸರಾ, ದೀಪಾವಳಿಗಳಲ್ಲಿ ಸಂಗೀತಗೋಷ್ಠಿಗಳನ್ನು ಇವರು ಏರ್ಪಡಿಸಿದ್ದುಂಟು.[೧೬೦]

ಗುಂತಗೋಳ ನಾಯಕ ಅರಸರಲ್ಲಿ ರಾಜಾರಾಯಪ್ಪನಾಯಕನು ಆಧ್ಯಾತ್ಮಿಕ ಒಲವುಳ್ಳವರಾಗಿದ್ದರು. ಪ್ರತಿವರ್ಷ ನವರಾತ್ರಿಯ ಸಮಯದಲ್ಲಿ ಪುರಾಣವನ್ನು ಸ್ವತಃ ತಾವೇ ಪಾರಾಯಣ ಮಾಡುತ್ತಿದ್ದರು. ಇವರ ಸಂಗೀತಮಯವಾದ ಈ ಪಾರಾಯಣವನ್ನು ಕೇಳಲು ಸುತ್ತಲಿನ ಅನೇಕ ಗ್ರಾಮಸ್ಥರು ನೆರೆಯುತ್ತಿದ್ದರು. ಹಾಗೆಯೇ ಈ ಮನೆತನದ ರಾಜಾ ನರಸಿಂಹನಾಯಕನು, ಕಲಾಪ್ರೇಮಿಗಳಾಗಿದ್ದು ಶ್ರೀ ಅಮರೇಶ್ವರ ನಾಟಕ ಕಂಪನಿಯೊಂದನ್ನು ತಮ್ಮ ಸಂಸ್ಥಾನದಲ್ಲಿ ಹುಟ್ಟುಹಾಕಿ ಕಲಾಕಾರರಿಗೆ ತರಬೇತಿಯನ್ನು ನೀಡುವ ವ್ಯವಸ್ಥೆಯನ್ನು ಮಾಡಿದ್ದರು. ದುರ್ಗಾದೇವಿಯ ಮಹಾತ್ಮೆ, ಕೊಡೇಕಲ್ ಬಸವಣ್ಣ, ಜಗಜ್ಯೋತಿ ಬಸವೇಶ್ವರ ಕೈಬರಹ ನಾಟಕಗಳನ್ನು ಪ್ರದರ್ಶಿಸಿದರು ಅಲ್ಲದೆ ಇವರು ಅತ್ಯುತ್ತಮ ಸಂಗೀತಗಾರರಾಗಿದ್ದರು. ಇವರ ಆಸ್ಥಾನದಲ್ಲಿ ಬಸಣ್ಣ ಜಾವೂರರೆಂಬ ಪ್ರಸಿದ್ಧ ರಂಗಕಲಾವಿದರಿದ್ದರು.[೧೬೧]

ದೇವದುರ್ಗ ನಾಯಕ ಅರಸುಮನೆತನದ ರಾಜಾ ವಾಸುದೇವನಾಯಕನು ಶಹನಾಯಿ ವಾದಕನಾಗಿದ್ದನು. ಅಲ್ಲದೇ ಅಂದು ಸಂಗೀತಗಾರರ ಒಂದು ತಂಡವನ್ನೇ ಕಟ್ಟಿ, ಅವರಿಗೆ ಸಂಗೀತದ ಪರಿಕರಗಳನ್ನು ಕೊಡಿಸಿದ್ದರು.[೧೬೨] ಸದ್ಯ ಈ ಮನೆತನದ ಶಾಖೆಯಾದ ಅರಕೇರಿ ಸಂಸ್ಥಾನದ ವಂಶಸ್ಥರಾದ ಹನುಮಣ್ಣನಾಯಕ ದೊರೆ ಅವರು ಇಂದು ಪ್ರಸಿದ್ಧ ಹಿಂದೂಸ್ಥಾನಿ ಗಾಯಕರಾಗಿದ್ದಾರೆ. ಬಸವಾದಿ ಶರಣರ ವಚನಗಳನ್ನು ಹಿಂದೂಸ್ಥಾನಿ ಶೈಲಿಯಲ್ಲಿ ಹಾಡಿ ಜನಪ್ರಿಯಗೊಳಿಸಿದ್ದಾರೆ. ಅಲ್ಲದೇ ಇವರು ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಗಾನಗಂಧರ್ವ ಪ್ರಶಸ್ತಿ ಪುರಸ್ಕೃತರೂ ಹೌದು.

ಈ ರೀತಿ ನಾಯಕ ಅರಸುಮನೆತನಗಳು ಸಂಗೀತ ಕಲೆಗೆ ಪ್ರೋತ್ಸಾಹ ನೀಡಿರುವುದಲ್ಲದೆ ಸ್ವತಃ ಸಂಗೀತಗಾರರಾಗಿ ತಮ್ಮ ರಾಜ್ಯದಲ್ಲಿ ಸಂಗೀತಸುಧೆಯನ್ನು ಪಸರಿಸಿರುವುದು ಹಾಗೂ ಸಂಗೀತಗಾರರಿಗೆ ಆಶ್ರಯದಾತರಾಗಿ ಆ ಕಲೆಯನ್ನು ಅಭಿವೃದ್ಧಿಪಡಿಸಿದುದು ಅವರ ಸಾಂಸ್ಕೃತಿಕ ಬದುಕಿನ ಮುಖವನ್ನು ಪರಿಚಯಿಸುತ್ತದೆ.

**ಟಿಪ್ಪಣಿಗಳು**

೧. ಚಿನ್ನಸ್ವಾಮಿ ಸೋಸಲೆ ಎಸ್., ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ೨೦೦೧. ಪು.೧೨೫

೨. ಲಕ್ಷ್ಮಣ್ ತೆಲಗಾವಿ, ಎಂ.ಪಿ.ಶ್ರೀನಿವಾಸ(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬. ಪು.೪೯

೩. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು - ರಾಜಕೀಯ ಚಿತ್ರ,* ದವನಸಿರಿ ಸ್ಮರಣ ಸಂಚಿಕೆ, ೧೯೯೨, ಪು.೭೮

೪. ವಸು ಎಂ.ವಿ(ಸಂ), ದಕ್ಷಿಣ ಕರ್ನಾಟಕ ಅರಸು ಮನೆತನಗಳು, ೨೦೦೧, ಪು.೧೧೩

೫. ಬಸವರಾಜು ಎಲ್.(ಸಂ), ಶಿವದಾಸ ಗೀತಾಂಜಲಿ, ಪೀಠಿಕೆ, ೧೯೬೩, ಪು.೨೩

೬. ಚನ್ನಪ್ಪ ಎ., ಇಮ್ಮಡಿ ಮುರಿಗಾ ಗುರುಸಿದ್ಧರು : ಜೀವನ ಮತ್ತು ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೧, ಪು.೨೩೧

೭. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ನಾಯಕ ಅರಸರು - ರಾಜಕೀಯ ಚಿತ್ರ*, ಪೂರ್ವೋಕ್ತ, ಪು.೮೦

೮. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ. (ಸಂ), ಪೂರ್ವೋಕ್ತ, ೧೯೭೬, ಪು.೬೬-೬೭

೯. ಅದೇ ಪು.೬೮

೧೦. ಅದೇ ಪು.೬೯

೧೧. ಲಕ್ಷ್ಮಣ್ ತೆಲಗಾವಿ, *ಕಾಮಗೇತಿ ಅರಸರು ಕೆಲವು ವಿಚಾರಗಳು : ಪ್ರತಿಕ್ರಿಯೆ-೧೯೮೭*, ಮಾನವಿಕ ಕರ್ನಾಟಕ, ೧೯೮೭, ಪು.೫೪

೧೨. ಹುಲ್ಲೂರು ಶ್ರೀನಿವಾಸ ಜೋಯಿಸರು(ಸಂ), ಚಿತ್ರದುರ್ಗದ ಬಖೈರು, ೧೯೬೮, ಪು.೨

೧೩. ಅದೇ ಪು.೬೬-೬೭

೧೪. ವಸು ಎಂ.ವಿ(ಸಂ), ಪೂರ್ವೋಕ್ತ, ಪು.೧೧೪

೧೫. ಅದೇ ಪು.೧೧೬

೧೬. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ. (ಸಂ), ಪೂರ್ವೋಕ್ತ, ಪು.೧೬೦

೧೭. ವೀರನಾಯಕ ಹೆಚ್.ವಿ.(ಸಂ), ವಾಲ್ಮೀಕಿ ಸ್ಮರಣ ಸಂಚಿಕೆ, ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾಸಮ್ಮೇಳನ, ದಾವಣಗೆರೆ ೧೮-೩-೧೯೭೩, ಪು.೧

೧೮. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳಯಗಾರರು, ೧೯೯೭, ಪು.೨೭

೧೯. ವಿರೂಪಾಕ್ಷಿ ಪೂಜಾರಹಳ್ಳಿ, ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ಬೇಟೆ ಮತ್ತು ಬೇಡರ ಸಂದರ್ಭಗಳು : ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೦, ಪು.೧೬೫

೨೦. ಕೃಷ್ಣಸ್ವಾಮಿ ಕ.ರಾ.(ಸಂ), ಚಿತ್ರಕಲ್ಲು ಮದಕರಿ, ಪು.೩

೨೧. ಅದೇ, ಪು.೩

೨೨. ಕೃಷ್ಣಮೂರ್ತಿ ಹನೂರು(ಸಂ), ಜನಪದ ಬುಡಕಟ್ಟು ಗೀತೆಗಳು, ೧೯೯೮, ಪು.೨೦೪

೨೩. ಕೃಷ್ಣಸ್ವಾಮಿ ಕ.ರಾ.(ಸಂ), ಪೂರ್ವೋಕ್ತ, ಪು.೬

೨೪. ಮೀರಾಸಾಬಿಹಳ್ಳಿ, ಶಿವಣ್ಣ, ಮ್ಯಾಸಮಂಡಲ, ೨೦೦೩, ಪು.೮೪

೨೫. ವೀರಭದ್ರನಾಯಕ ಪಿ.ಆರ್., ಚಿತ್ರದುರ್ಗ ರಾಜವಂಶಸ್ಥರ ಹೇಳಿಕೆಯಿಂದ

೨೬. ರಂಗರಾಜ ದೇವೇಂದ್ರಪ್ಪ, ಸುರಪುರ ಸಂಸ್ಥಾನ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೧೯೯೫, ಪು.೨೭೪

೨೭. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನದ ಇತಿಹಾಸ, ೧೯೭೭, ಪು.೯೪

೨೮. ರಂಗರಾಜ, ದೇವೇಂದ್ರಪ್ಪ, ಪೂರ್ವೋಕ್ತ, ಪು.೨೭೪

೨೯. ಅದೇ ಪು.೨೭೪

೩೦. ಕೃಷ್ಣ ಎ.(ಸಂ), ಸಗರನಾಡದರ್ಶನ, ಸ್ಮರಣ ಸಂಚಿಕೆ, ೧೯೮೫, ಪು.೨೨೬-೨೨೭

೩೧. ಕೃಷ್ಣಮಾಚಾರ್ಯ ಬಿ., ಮರೆಯಲಾಗದ ಸುರಪುರ ರಾಜರ ಚರಿತ್ರೆ, ೨೦೦೩, ಪು.೧೦೧

೩೨. ಕೃಷ್ಣಮಾಚಾರ್ಯ ಬಿ., ಸುರಪುರ ಸಂಸ್ಥಾನದ ರಾಜಗುರುಗಳು ಇವರ ಹೇಳಿಕೆಯಿಂದ

೩೩. ಕೃಷ್ಣಮಾಚಾರ್ಯ ಬಿ., ಸುರಪುರ ಸಂಸ್ಥಾನದ ರಾಜಗುರುಗಳು ಇವರ ಹೇಳಿಕೆಯಿಂದ

೩೪. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೭೮

೩೫. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ೨೦೦೩, ಪು.೧೨೫

೩೬. ಅದೇ ಪು.೧೩೧

೩೭. ನರಸಿಂಹಾಚಾರ್ಯ ಆರ್., ಕರ್ನಾಟಕ ಕವಿಚರಿತ್ರೆ ಭಾಗ-೨, ೧೯೮೦, ಪು.೧೨೮

೩೮. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೧೨೭

೩೯. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೮೧

೪೦. ಕೃಷ್ಣಮಾಚಾರ್ಯ ಬಿ. ಪೂರ್ವೋಕ್ತ, ಪು.೧೯೯

೪೧. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೮೨

೪೨. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ, ಪು.೧೭೪

೪೩. ಅದೇ ಪು.೧೯೬

೪೪. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೧೪೩

೪೫. ಕೃಷ್ಣಮಾಚಾರ್ಯರು ಬಿ., ಪೂರ್ವೋಕ್ತ, ಪು.೧೯೭

೪೬. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೨೮೬

೪೭. ಸಾಯಿಬಣ್ಣ ಹನುಮಣ್ಣ ದೊರೆ, ಹೈದ್ರಾಬಾದ್ ಕರ್ನಾಟಕದಲ್ಲಿ ಜನಪದ ಸಂಗೀತ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ, ೨೦೦೦, ಪು.೧೧೮

೪೮. ಅದೇ ಪು.೧೩೦

೪೯. ಕೃಷ್ಣ ಎ. (ಸಂ), ಪೂರ್ವೋಕ್ತ, ೧೯೮೫, ಪು.೨೬೬

೫೦. ಅದೇ ಪು.೨೭೧

೫೧. ಅದೇ ಪು.೨೭೩

೫೨. ಅದೇ ಪು.೨೭೪

೫೩. ಹಾಲ್ಗೇರಿ ಚನ್ನಬಸಪ್ಪಯ್ಯ ಮಾಸನೂರ, ಸುರಪುರ ಬಂಡಾಯದ ಲಾವಣಿ, ೧೯೫೩, ಪು.೧

೫೪. ಅದೇ ಪು.೨

೫೫. ಅದೇ ಪು.೨

೫೬. ಅದೇ ಪು.೩

೫೭. ಅಮರೇಶ ಯತಗಲ್, *ಗುಡಗುಂಟಿ ಸಂಸ್ಥಾನ*, ಘಟ್ಟಿಹೊಸಹಳ್ಳಿ ಘಟ್ಟಿಗ ಸ್ಮರಣ ಸಂಪುಟ, ೨೦೦೨, ಪು.೨೮

೫೮. ನಾನು ಕ್ಷೇತ್ರಕಾರ್ಯ ಕೈಗೊಂಡಾಗ ದುರಗಪ್ಪ ಬಡಿಗೇರ ಸಾ.ರಾಯದುರ್ಗ ತಾ.ಲಿಂಗಸುಗೂರು ಇವರು ಈ ಹಾಡನ್ನು ಹೇಳಿದ್ದಾರೆ

೫೯. ಅಮರೇಶ ಯತಗಲ್, *ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದರುಗಳು*, ಇತಿಹಾಸದರ್ಶನ, ಸಂಪುಟ-೧೯, ಪು.೩೩೨

೬೦. ಶರಣಬಸಪ್ಪ ಪಿ.ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು ೧೯೯೪ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಎಂ.ಫಿಲ್.ಸಂಪ್ರಬಂಧ, ಪು.೭೫

೬೧. ಅಮರೇಶ ಯತಗಲ್ (ಸಂ), ಏಕಲವ್ಯ ಸ್ಮರಣ ಸಂಚಿಕೆ, ೨೦೦೫, ಪು.೨೩

೬೨. ಸಂಗಪ್ಪ ಹಾಲಭಾವಿ, ಲಿಂಗಸುಗೂರು ತಾಲ್ಲೂಕು ಇವರು ಹಾಡಿದುದು

೬೩. ಅದೇ ಪು.೨೩

೬೪. ಅದೇ ಪು.೨೩

೬೫. ವಿರೂಪಾಕ್ಷಿ ಪೂಜಾರಹಳ್ಳಿ. ಅಧ್ಯಾಪಕರು ಚರಿತ್ರೆ ವಿಭಾಗ ಕ.ವಿ.ಹಂಪಿ ಇವರ ಸಂಗ್ರಹದಿಂದ.

೬೬. ವಸು ಎಂ.ವಿ.(ಸಂ), ಪೂರ್ವೋಕ್ತ, ಪು.೧೭೮

೬೭. ವೆಂಕಟೇಶ ಜೋಯಿಸ ಕೆ.ಜಿ., ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೯೬, ಪು.೧೨೬

೬೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಪು.೨೫೭

೬೯. ರಂಗರಾಜ ದೇವೇಂದ್ರಪ್ಪ. ಪೂರ್ವೋಕ್ತ, ಪು.೧೦೧

೭೦. ಅದೇ,

೭೧. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೧೭೯

೭೨. ಅದೇ ಪು.೧೦೧

೭೩. ಕಿಲಚನಾಯಕ, ದೇವದುರ್ಗ ಸಂಸ್ಥಾನದ ವಂಶಸ್ಥರು, ಇವರ ಹೇಳಿಕೆಯಿಂದ

೭೪. ಕೃಷ್ಣವರ್ಮರಾಜ ಪಿ.ಜಿ., ಗುಡೇಕೋಟೆ ರಾಜವಂಶಸ್ಥರು, ಇವರ ಹೇಳಿಕೆಯಿಂದ.

೭೫. ಕೃಷ್ಣಮಾಚಾರ್ಯ ಬಿ., ಪೂರ್ವೋಕ್ತ ೨೦೦೩, ಪು.೧೯೬

೭೬. ಚಿನ್ನಸ್ವಾಮಿ ಸೋಸಲೆ ಎಸ್., ಸಾಮ್ರಾಜ್ಯ ಮತ್ತು ಸಂಸ್ಥಾನ, ೨೦೦೪, ಪು.೧೦೪

೭೭. ಪುಟ್ಟಣ್ಣ ಎಂ.ಎಸ್., ಪಾಳಯಗಾರರು : ಐದು ಉಪನ್ಯಾಸಗಳು, ೧೯೨೩, ಪು.೪೭

೭೮. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ೧೯೭೭, ಪು.೯೨

೭೯. ಮಲ್ಲಿಕಾರ್ಜುನ ಯು., ಹೊಸಪೇಟೆ ತಾಲೂಕಿನ ಗರಡಿ ಸಂಪ್ರದಾಯ, ೨೦೦೪, ಪು.೨೨

೮೦. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪು.೯೦

೮೧ ಲಕ್ಷ್ಮಣ್ ತೆಲಗಾವಿ, ಎಂ.ಪಿ.ಶ್ರೀನಿವಾಸ(ಸಂ), ಪೂರ್ವೋಕ್ತ, ೧೯೭೬, ಪು.೭೯

೮೨. ಕೃಷ್ಣಸ್ವಾಮಿ ಕ.ರಾ., ಚಿತ್ರಕಲ್ಲು ಮದಕರಿ, ೧೯೭೪, ಪು.೧೦೯

೮೩. ತಿಪ್ಪೇಸ್ವಾಮಿ ಎನ್., ರಕ್ಷಣಾ ವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಾದರಪಡಿಸಿದ ಮಹಾಪ್ರಬಂಧ, ೨೦೦೪, ಪು.೨೭೯

೮೪. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪು.೮೨

೮೫. ಕಪಟರಾಳ್ ಕೃಷ್ಣರಾವ್, ಪೂರ್ವೋಕ್ತ, ಪು.೧೨೭

೮೬. ಭೀಮಾಜಟ್ಟಿ, ಸಾ.ಗುಡಗುಂಟಿ ಇವರ ಹೇಳಿಕೆಯಿಂದ

೮೭. ಎಪಿಗ್ರಾಫಿಯಾ ಕರ್ನಾಟಿಕಾ, ಚಿತ್ರದುರ್ಗ XI, ೫೧, ಕ್ರಿ.ಶ. ೧೬೫೩

೮೮. ಅದೇ, ಜಗಳೂರು ೪೬, ಕ್ರಿ.ಶ. ೧೬೮೩

೮೯. ಅದೇ, ಹಿರಿಯೂರು ೫೮, ಕ್ರಿ.ಶ. ೧೬೮೭

೯೦. ಅದೇ, ಜಗಳೂರು, ಕ್ರಿ.ಶ. ೧೭ ೧೭೧೫

೯೧. ಅದೇ, ಚಿತ್ರದುರ್ಗ, ೫೬, ಕ್ರಿ.ಶ. ೧೭೧೮

೯೨. ಅದೇ, ಹಿರಿಯೂರು, ೫೭, ಕ್ರಿ.ಶ. ೧೭೨೧

೯೩. ಎಪಿಗ್ರಾಫಿಯಾ ಕರ್ನಾಟಿಕಾ XI, ದಾವಣಗೆರೆ ಕ್ರಿ.ಶ. ೧೭೨೮

೯೪. ರೇವಣಸಿದ್ದಯ್ಯ ಆರ್., ಶೋರಾಪುರ ತಾಲ್ಲೂಕು ದರ್ಶನ ೧೯೮೬, ಪು.೪೨

೯೫. Ramacharya his Leneage Ramachar I May, 1989

೯೬. ಕೃಷ್ಣ ಎ.(ಸಂ), **ಸಗರನಾಡದರ್ಶನ, ಸ್ಮರಣ ಸಂಚಿಕೆ,** ೧೯೮೫, ಪು.೧೬೪

೯೭. ಎಪಿಗ್ರಾಫಿಯಾ ಕರ್ನಾಟಿಕ XI, ಹೊಳಲ್ಕೆರೆ ೯೬

೯೮. ಬಾಗೂರು ಆರ್. ನಾಗರಾಜಪ್ಪ, **ಹೊಸದುರ್ಗದ ಸುತ್ತಮುತ್ತ,** ೧೯೮೪, ಪು.೬೬

೯೯. ವಸು ಎಂ.ವಿ.(ಸಂ), **ಪೂರ್ವೋಕ್ತ,** ೨೦೦೧, ಪು.೧೬೫

೧೦೦. ಕಪಟರಾಳ್ ಕೃಷ್ಣರಾವ್, **ಪೂರ್ವೋಕ್ತ,** ೧೯೭೭, ಪು.೨೩೮

೧೦೧. ಕನ್ನಡ ವಿಶ್ವಕೋಶ - ೭, ಪು.೩೮೩.

೧೦೨. Jayanth Chakravarthi, **Techniques in Indian Mural Paintings,** K.P.Bagachi and Company, Calcutta, 1980, Pp.12

೧೦೩. ಚಂದ್ರಶೇಖರ ಕಂಬಾರ(ಸಂ), ಜನಪದ ವಿಶ್ವಕೋಶ ಭಾಗ-೨, ೧೯೮೫, ಪು.೨೫೨.

೧೦೪. **The New Encyclopedia Britanica,** Vol.8, Pp.425

೧೦೫. ಯಾದಪ್ಪ ಬಿ. ಪರದೇಶಿ, ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦, ಪು.೪೮.

೧೦೬. ಸೂರ್ಯನಾಥ ಕಾಮತ್(ಸಂ), ಇತಿಹಾಸ ದರ್ಶನ ಸಂ.೬, ೧೯೯೧, ಪು.೧೮೨.

೧೦೭. ನರಸಿಂಹನ್ ಅ.ಲ., ಕರ್ನಾಟಕ ಭಿತ್ತಿ-ಚಿತ್ರ ಪರಂಪರೆ, ೧೯೯೮, ಪು.೪೮.

೧೦೮. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ಪು.೧೮೨.

೧೦೯. ಅರುಣಿ ಎಸ್.ಕೆ., ದಖನಿ ಚಿತ್ರಕಲೆ, ೨೦೦೧, ಪು.೧೦೬

೧೧೦. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ೧೯೯೫, ಪು.೩೧೧.

೧೧೧. ಬಸವರಾಜ ಉಪ್ಪಿನ ಬಾನಯ್ಯ ಗುರುಡಾದ್ರಿ, ೧೯೯೫, ಪು.೩

೧೧೨. ವಿಜಯ ಕರ್ನಾಟಕ, ದಿನಪತ್ರಿಕೆ - ೧೫.೭.೦೩

೧೧೩. ರಂಗರಾಜ ದೇವೇಂದ್ರಪ್ಪ, ಪೂರ್ವೋಕ್ತ, ಪು.೩೧೨.

೧೧೪. ಕರ್ನಾಟಕ ಭಿತ್ತಿಚಿತ್ರಕಲೆಯಲ್ಲಿ ಬಣ್ಣದ ಬಳಕೆ, ೨೦೦೪, ಪು.೧೪೫.

೧೧೫. ನರಸಿಂಹನ್ ಅ.ಲ., ಪೂರ್ವೋಕ್ತ, ಪು.೧೬೨.

೧೧೬. ಅರುಣಿ ಎಸ್.ಕೆ., ಪೂರ್ವೋಕ್ತ, ಪು.೧೧೧.

೧೧೭. ನರಸಿಂಹನ್ ಅ.ಲ., ಪೂರ್ವೋಕ್ತ, ಪು.೧೦೧.

೧೧೮. ಬಸವರಾಜ ಉಪ್ಪಿನ, ಪೂರ್ವೋಕ್ತ, ೧೯೯೫, ಪು.೧೨.

೧೧೯. ಅಚ್ಯುತದೇವರಾಯ, ಆನೆಗೊಂದಿ ರಾಜವಂಶಸ್ಥರು ಅವರ ಹೇಳಿಕೆಯಿಂದ

೧೨೦. ಅಮರಪ್ಪನಾಯಕರವ, ಗುಡಗುಂಟಿ ರಾಜವಂಶಸ್ಥರು ಅವರ ಹೇಳಿಕೆಯಿಂದ.

೧೨೧. ನಾಗರಾಜ ಎಂ.ಜಿ.(ಸಂ), ಇತಿಹಾಸ ದರ್ಶನ, ಸಂ.೧೮, ೨೦೦೩, ಪು.೩೩೩

೧೨೨. ಬಸಣ್ಣ ಜಾವೂರು, ಸಾ.ಗುಂತಗೋಳ ಇವರ ಹೇಳಿಕೆಯಿಂದ.

೧೨೩. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ಪೂರ್ವೋಕ್ತ, ೧೯೭೬, ಪು.೧೩೮

೧೨೪. ಎಪಿಗ್ರಾಫಿಯಾ ಕರ್ನಾಟಿಕಾ XI ಚಿತ್ರದುರ್ಗ ಚಳ್ಳಕೆರೆ, ೧೭೩೬.

೧೨೫. ಕೋದಂಡಪ್ಪರಾಮಪ್ಪ ಹೊಸಪೇಟೆ ಇವರ ಹೇಳಿಕೆಯಿಂದ

೧೨೬. ನೂತನ ಪತ್ರಿಕೆ, ೨೦, ಫೆಬ್ರವರಿ ೨೦೦೦, ಪು.೩೫-೩೬

೧೨೭. ಬಸವರಾಜಪ್ಪ ಜಾಗಟಕಲ್ ಸಾ. ಗುಡಗುಂಟಿ ಇವರ ಹೇಳಿಕೆಯಿಂದ.

೧೨೮. ಶರಣಬಸಪ್ಪ ಪಿ.ಕೊಲ್ಕಾರ, ಪೂರ್ವೋಕ್ತ, ೧೯೯೪, ಪು.೫೮

೧೨೯. ಯಾದಪ್ಪ ಬಿ. ಪರದೇಶಿ, ಪೂರ್ವೋಕ್ತ, ಪು.೨೩೨.

೧೩೦. ಅದೇ, ಪು.೨೩೩.

೧೩೧. ಅರುಣಿ ಎಸ್.ಕೆ., ಪೂರ್ವೋಕ್ತ, ಪು.೧೧೧.

೧೩೨. ರೇವಣಸಿದ್ದಯ್ಯ ಆರ್., ಪೂರ್ವೋಕ್ತ, ಪು.೩೪

೧೩೩. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಕೋಟೆ ಮತ್ತು ಬೆಟ್ಟ ಪರಿಸರದ ಮೂರು ವ್ಯಕ್ತಿ ಶಿಲ್ಪಗಳು,* ಇತಿಹಾಸ ದರ್ಶನ ಸಂಪುಟ-೧೪, ೧೯೯೯, ಪು.೧೩೯-೧೪೦

೧೩೪. ತಿಪ್ಪೇಸ್ವಾಮಿ ಎನ್., ಪೂರ್ವೋಕ್ತ, ೨೦೦೪, ಪು.೨೮೯

೧೩೫. ರಾಜಶೇಖರಪ್ಪ ಬಿ., ಪ್ರಾಚೀನ ಚಿತ್ರದುರ್ಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ.ಮಹಾಪ್ರಬಂಧ ೨೦೦೪, ಪು.೨೦೦

೧೩೬. ಗಂಡುಗಲಿ ಟಿ.ಎನ್., ಪ್ರಮುಖ, ೧೯೯೫, ಪು.೩೭

೧೩೭. ರಂಗರಾಜ ದೇವೇಂದ್ರಪ್ಪ. ಪೂರ್ವೋಕ್ತ, ಪು.೩೦೭

೧೩೮. ಶರಣಬಸಪ್ಪ, ಪಿ.ಕೋಲ್ಕಾರ, ಪೂರ್ವೋಕ್ತ, ೧೯೯೪, ಪು.೧೫೭

೧೩೯. ಅದೇ ಪು.೧೫೮

೧೪೦. ಅದೇ ಪು.೧೫೮

೧೪೧. ಅದೇ ಪು.೧೫೯

೧೪೨. ಅದೇ, ಪು.೧೫೯

೧೪೩. ಅದೇ ಪು.೧೬೦

೧೪೪. ಸೂರ್ಯನಾಥ ಕಾಮತ್, ಕೃಷ್ಣಮೂರ್ತಿ.ಪಿ.ವಿ (ಸಂ), ಕರ್ನಾಟಕ ಇತಿಹಾಸ ದರ್ಶನ, ಸಂಪುಟ ೧೦, ೧೯೯೫, ಪು.೩೧

೧೪೫. ಅದೇ ಪು.೩೨

೧೪೬. ಅದೇ ಪು.೩೨-೩೩

೧೪೭. ಶರಣಬಸಪ್ಪ ಪಿ. ಕೋಲ್ಕಾರ, ಪೂರ್ವೋಕ್ತ, ಪು.೧೬೪

೧೪೮೬. ಅದೇ ಪು.೧೬೫

೧೪೯. ಲಕ್ಷ್ಮಣ್ ತೆಲಗಾವಿ, ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ, ೨೦೦೪, ಪು.೧೩

೧೫೦. ಅದೇ ಪು.೧೫

೧೫೧. ದುರಗಪ್ಪ ಎಂ.ಕೆ., ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ, ೨೦೦೩, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೭೨

೧೫೨. ವಸು ಎಂ.ವಿ.(ಸಂ), ಪೂರ್ವೋಕ್ತ, ೨೦೦೧, ಪು.೧೨೩

೧೫೩. ಹನುಮಣ್ಣ, ಸಾಯಿಬಣ್ಣ ದೊರೆ, ಪೂರ್ವೋಕ್ತ, ೨೦೦೦, ಪು.೧೩೩

೧೫೪. ರಂಗರಾಜ ದೇವೇಂದ್ರಪ್ಪ, ಪೂರ್ವಕ್ತ, ೧೯೯೫, ಪು.೨೧೨.

೧೫೫. ಅದೇ ಪು.೩೧೩

೧೫೬. ಹನುಮಣ್ಣ ಸಾಯಿಬಣ್ಣದೊರೆ, ಸುರಪುರ ಇವರ ಹೇಳಿಕೆಯಿಂದ

೧೫೭. ಕೃಷ್ಣಮಾಚಾರ್ಯ ಬಿ., ರಾಜಗುರುಗಳು ಸುರಪುರ ಇವರ ಹೇಳಿಕೆಯಿಂದ

೧೫೮. ವೀರೇಂದ್ರ ಕುಲಕರ್ಣಿ. ಸುರಪುರದ ಸಂಗೀತ, ಸಂಯುಕ್ತ ಕರ್ನಾಟಕ, ೩.೧೨.೨೦೦೧

೧೫೯. ಅಗಸ್ಟೀನ್ ಜೆ., ವಿಶಿಷ್ಟ ವ್ಯಕ್ತಿತ್ವದ ಸುರಪುರ ಸಂಸ್ಥಾನದ ಬ್ಯಾರಿಸ್ಟರ್ ವೆಂಕಟಪ್ಪನಾಯಕ, ಸಂಯುಕ್ತ ಕರ್ನಾಟಕ ೧೮.೧೨.೨೦೦೨

೧೬೦. ಅಮರೇಶ ಯತಗಲ್. ಪೂರ್ವೋಕ್ತ, ೨೦೦೨, ಪು.೨೬

೧೬೧. ಅಮರೇಶ ಯತಗಲ್. ಪೂರ್ವೋಕ್ತ, ೨೦೦೬, ಪು.೩೩೩-೩೩೪

೧೬೨. ರಾಜಾಕಿಲಚನಾಯಕರು ದೇವದುರ್ಗ ಸಂಸ್ಥಾನದ ರಾಜವಂಶಸ್ಥರು ಇವರ ಹೇಳಿಕೆಯಿಂದ

೬

# ಸಮಾರೋಪ

ಬುಡಕಟ್ಟು ಸಮುದಾಯವೆಂದು ಗುರುತಿಸಿಕೊಂಡ ಬೇಡ ಜನಾಂಗ ಪ್ರಾದೇಶಿಕತೆಗನುಗುಣವಾಗಿ ಬೇಡ, ನಾಯಕ, ತಳವಾರ, ಗುರಿಕಾರ, ಪರಿವಾರ, ದೊರೆ, ಪಾಳೆಯಗಾರ ಎಂಬ ಭಿನ್ನವಾದ ಹೆಸರು ಗಳನ್ನು ಹೊಂದಿದೆ. ಮೂಲತಃ ಬೇಟೆಗಾರರಾಗಿ, ಪಶುಪಾಲಕರಾಗಿ, ಹುಲ್ಲು, ನೀರು ಹುಡುಕುತ್ತಾ ಅಲೆಮಾರಿಗಳಾಗಿ ಆಂಧ್ರಪ್ರದೇಶದ ಶ್ರೀಶೈಲ ಬಳಿಯ ಕರಿಮಲೆ ಕೊಮ್ಮಮಲೆಗಳ ಭಾಗದಿಂದ ಹಾಗೂ ತಿರುಪತಿಯ ಹತ್ತಿರದ ಜಡೇಕಲ್ಲುದುರ್ಗದ ಕಡೆಯಿಂದ ಕರ್ನಾಟಕಕ್ಕೆ ವಲಸೆ ಬಂದರು. ಕ್ಷಾತ್ರ ಪರಂಪರೆಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿದ್ದ ಇವರನ್ನು ಅನೇಕ ಅರಸುಮನೆತನಗಳು ಯುದ್ಧಾಸ್ತ್ರಗಳನ್ನಾಗಿ ಬಳಕೆ ಮಾಡಿಕೊಂಡರು. ತಮ್ಮ ಸೈನ್ಯಕ್ಕೆ ಸೇರಿಸಿಕೊಂಡರು. ಶಾತವಾಹನರ ಕಾಲಕ್ಕೆ ಬೋಜ, ಬೋಜಕ, ಬೋಜಿ ಎಂಬ ಹುದ್ದೆಯಲ್ಲಿದ್ದ ಇವರು ನಂತರ ಕದಂಬರು, ಗಂಗರು, ಚಾಲುಕ್ಯರು, ಹೊಯ್ಸಳರು, ರಾಷ್ಟ್ರಕೂಟರು, ವಿಜಯನಗರ ಅರಸರ ಕಾಲದಲ್ಲಿ ಉನ್ನತ ಹುದ್ದೆಗಳನ್ನು ಪಡೆದುಕೊಂಡರು. ವಿಜಯನಗರದ ಕಾಲದಲ್ಲಂತೂ ಇವರು ಸೈನ್ಯದ ಅನೇಕ ಹುದ್ದೆಗಳಲ್ಲಿದ್ದರು. ಬೇಡ ಕಾಲಾಳುಗಳ ಪಡೆಯೇ ಇತ್ತು. ನಂತರ ಇವರು ಹಂತ ಹಂತವಾಗಿ ಮೇಲೇರುತ್ತಾ ತಮ್ಮದೇ ಆದ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಂಡು, ಆಳ್ವಿಕೆ ಪ್ರಾರಂಭಿಸಿದರು. ಚರಿತ್ರೆಯಲ್ಲಿ ಆಳ್ವಿಕೆಯ ಜನಾಂಗವಾಗಿ ಗುರುತಿಸಲ್ಪಟ್ಟರು.

ವಿಜಯನಗರದ ಪೂರ್ವದಲ್ಲಿ ತುಂಗಭದ್ರಾನದಿತೀರದ ಕುಮ್ಮಟದುರ್ಗ ಬೇಡರ ಮನೆತನವಾಗಿತ್ತು; ಹಾಗೂ ಆನೆಗೊಂದಿಯೇ ಬೇಡ ಪಾಳೆಯಗಾರಿಕೆಯ ಮೊದಲ ಸ್ಥಳವಾಗಿದೆ. ಅಲ್ಲದೆ, ಕರ್ನಾಟಕದ ಅನೇಕ ಪಾಳೆಯಗಾರರು ಆನೆಗೊಂದಿಯೇ ತಮ್ಮ ಮೂಲಸ್ಥಳವೆಂದು ಕರೆದುಕೊಳ್ಳುತ್ತಾರೆ. ನಂತರ ವಿಜಯನಗರ ಅರಸರ ಕಾಲದಲ್ಲಿ ಅನೇಕ ಪಾಳೆಯಪಟ್ಟುಗಳು ಹುಟ್ಟಿಕೊಂಡವು. ಆಗ ಅವುಗಳೆಲ್ಲ ವಿಜಯನಗರದ ಅರಸರಿಗೆ ಆಧೀನವಾಗಿದ್ದವು. ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರ ಅಧಿಕಾರವನ್ನು ಹೊಂದಿದವು.

ವಿಜಯನಗರ ಹಾಗೂ ವಿಜಯನಗರೋತ್ತರ ಸಂದರ್ಭದಲ್ಲಿ ಅಸ್ತಿತ್ವ ಪಡೆದುಕೊಂಡ ಈ ನಾಯಕ ಅರಸರು ವಿಜಯನಗರ ಸಂಸ್ಕೃತಿಯನ್ನು ಅನುಸರಿಸಿದರು ಹಾಗೂ ಮುಂದುವರೆಸಿಕೊಂಡು ಬಂದರು.

ಇತಿಹಾಸದ ಸಂದಿಗ್ಧ ಸಮಯಗಳಲ್ಲಿ ತಮ್ಮ ಸಾಹಸವನ್ನು, ಸ್ವಾಮಿನಿಷ್ಠೆಯನ್ನು ಪ್ರದರ್ಶಿಸಿದರು. ಹೀಗಾಗಿ ಕರ್ನಾಟಕದ ಇತಿಹಾಸದಲ್ಲಿ ಇವರು ಪ್ರಮುಖಸ್ಥಾನವನ್ನು ಹೊಂದಿದ್ದಾರೆ. ತಮ್ಮ ಚಿಕ್ಕಸಂಸ್ಥಾನಗಳ ಮೂಲಕ ರಾಷ್ಟ್ರದ ಸಂಸ್ಕೃತಿಯನ್ನು ಉಳಿಸಿಕೊಂಡು ಬರಲು ಮಾಡಿದ ಇವರ ಪ್ರಯತ್ನಗಳು ಅನೇಕ. ಇವರು ದೊಡ್ಡ ಸಾಮ್ರಾಜ್ಯಗಳ ರಾಜ್ಯವಿಸ್ತರಣೆ ಹಾಗೂ ಸಂರಕ್ಷಣೆಯ ಸಂದರ್ಭಗಳಲ್ಲಿ ರಣರಂಗದಲ್ಲಿ ನೇರವಾಗಿ ಹೋರಾಡಿ ತಮ್ಮ ಮೇಲಿನ ಅರಸರಿಗೆ ಗೆಲುವನ್ನು ತಂದುಕೊಟ್ಟವರು. ನಂತರದಲ್ಲಿ ಸ್ವತಂತ್ರ ಸಂಸ್ಥಾನವನ್ನು ಸ್ಥಾಪಿಸಿ, ಬೆಳೆಯಿಸಿ, ಆಳ್ವಿಕೆ ಮಾಡಿ ಸಮಗ್ರ ಇತಿಹಾಸವನ್ನು ನಿರ್ಮಿಸುವಲ್ಲಿ ಕಾರಣೀಭೂತರಾಗಿದ್ದಾರೆ.

ಇವರು ಸ್ವತಂತ್ರ ಆಡಳಿತ ಆರಂಭಿಸಿದಂದಿನಿಂದಲೇ ಒಂದು ಸ್ವರೂಪವನ್ನು ಪಡೆದುಕೊಂಡು ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು. ಉತ್ತಮ ಆಡಳಿತವನ್ನು ಒದಗಿಸುವ ಮೂಲಕ ತಮ್ಮ ಸ್ವಂತಿಕೆಯನ್ನು ಮೆರೆದರು. ಅನ್ಯಶಕ್ತಿಗಳ ಅಡಚಣೆ ಹಾಗೂ ಆಕ್ರಮಣಗಳ ಮಧ್ಯೆ ಅನೇಕ ಸಾರ್ವಜನಿಕ ಕಲ್ಯಾಣ ಕಾರ್ಯಗಳನ್ನು ಮಾಡಿದರು. ತಮ್ಮ ತಮ್ಮ ರಾಜ್ಯವನ್ನು ಅಭಿವೃದ್ಧಿಯೆಡೆಗೆ ಕೊಂಡೊಯ್ಯಲು ಪ್ರಯತ್ನಿಸಿದರು. ಉಜ್ವಲ ಐತಿಹಾಸಿಕ ಪರಂಪರೆಯನ್ನು ಹೊಂದಿದ್ದ ಇವರಿಗೆ ಅವನತಿ ಪ್ರಾಪ್ತವಾದುದು ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ. ಆಗ ಕೆಲವು ನಾಯಕ ಅರಸುಮನೆತನಗಳು ಕ್ಷೀಣಿಸತೊಡಗಿದವು. ಇದಕ್ಕೆ ಕಾರಣ ಈ ನಾಯಕ ಅರಸುಮನೆತನಗಳಲ್ಲಿ ಮನೆಮಾಡಿದ್ದ ಪರಸ್ಪರ ಆಂತರಿಕ ಕಲಹ, ದ್ವೇಷ, ಈರ್ಷ್ಯೆ, ವೈಷಮ್ಯ, ಅಧಿಕಾರ ವಿಸ್ತರಣಾಕಾಂಕ್ಷೆಗಳೆಲ್ಲ ಒಂದೆಡೆಯಾದರೆ, ಇವುಗಳನ್ನೇ ಸದುಪಯೋಗಪಡಿಸಿಕೊಂಡ ಹೈದರ್‌ಅಲಿ, ಟಿಪ್ಪುಸುಲ್ತಾನ್, ಮರಾಠರು, ಇಂಗ್ಲಿಷರು ಮತ್ತು ಹೈದ್ರಾಬಾದ್ ನಿಜಾಮರು ಆಡಳಿತದಲ್ಲಿ ನಾಯಕ ಅರಸರ ಕ್ಷಾತ್ರತೇಜಸ್ಸಿನ ಸಾಮರ್ಥ್ಯವನ್ನು ಅರಿತರು. ಇವರು ನಾಯಕ ಅರಸರನ್ನು ಕುತಂತ್ರದಿಂದ ಮೂಲೆಗೊತ್ತಿ ಅವರ ಅಧಿಕಾರವನ್ನು ಕಬಳಿಸುವಲ್ಲಿ ಪ್ರಯತ್ನಿಸಿ ಯಶಸ್ವಿಯಾದರು. ಅಲ್ಲದೆ, ಅವರ ಸಂಪತ್ತನ್ನು ದೋಚಿದರು. ಅಧಿಕಾರ ಕಳೆದುಕೊಂಡ ನಾಯಕ ಅರಸರು ಅಧಿಕಾರ ಗಿಟ್ಟಿಸಿಕೊಳ್ಳಲು ಮರುಪ್ರಯತ್ನ ಮಾಡಿದರೂ ಯಶಸ್ಸು ಸಿಗದ ಸಂದರ್ಭಗಳು ಸೃಷ್ಟಿಯಾದವು. ಇವರ ಅವನತಿಯ ಕಾಲ ಬಂದಿತು. ಆದರೆ ಇರುವಷ್ಟು ಕಾಲ ಇವರು ವೈಭವದ ಅಧಿಕಾರ ನಡೆಸಿದರೆಂಬುದು ದಿಟ.

ನಾಯಕ ಅರಸರ ರಾಜಕೀಯ ಚರಿತ್ರೆಯಷ್ಟೆ ಅವರ ಸಾಂಸ್ಕೃತಿಕ ಜೀವನವೂ ವೈಭವಯುತವಾದುದು. ಇವರು ಹತ್ತನೇ ಶತಮಾನದಿಂದ ಹತ್ತೊಂಭತ್ತನೇ ಶತಮಾನದವರೆಗೆ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಾಡಿದ ಸಾಧನೆ ಅಪಾರ. ದಕ್ಷಿಣಭಾರತದ ಜನತೆ ಅರಾಜಕತೆಯ ಭೀತಿಯಿಂದ ತತ್ತರಿಸುತ್ತಿದ್ದ ಸಮಯದಲ್ಲಿ ಅವರಿಗೆ ರಾಜಕೀಯ ಭದ್ರತೆಯನ್ನು ಒದಗಿಸುವಲ್ಲಿ ಇವರು ಯಶಸ್ವಿಯಾದರು. ತಾವು ನೆಲೆಸಿದ್ದ ಪ್ರದೇಶಗಳಲ್ಲಿ ಕೋಟೆ-ಕೊತ್ತಲಗಳನ್ನು ಕಟ್ಟಿಸಿದರಲ್ಲದೆ, ಜನಸಾಮಾನ್ಯರ ಬದುಕಿಗೆ ರಕ್ಷಣೆ ನೀಡಿದರು;

ಹಾಗೂ ಇವರ ರಾಜಧಾನಿಗಳೆಲ್ಲವೂ ಸುರಕ್ಷಿತ ಸ್ಥಳಗಳಲ್ಲಿರುವುದು ವಿಶೇಷ. ಹೀಗಾಗಿ ಇವರಿಗೆ ಯಾವುದೇ ರೀತಿಯ ಆಂತರಿಕ ಹಾಗೂ ಬಾಹ್ಯವಾದ ಹೆದರಿಕೆಗಳು ಇರಲಿಲ್ಲ. ನೆಮ್ಮದಿಯ ಬದುಕನ್ನು ಸಾಗಿಸುವಲ್ಲಿ ಅನುಕೂಲಕರ ಪರಿಸ್ಥಿತಿ ಇದ್ದಿತು. ಅಲ್ಲದೆ, ಇವರು ಶಿಸ್ತಿಗೂ, ಸ್ವಾಮಿನಿಷ್ಠೆಗೂ, ಆದರ್ಶ ಪ್ರಾಯತನಕ್ಕೂ ಹೆಸರಾದವರು; ಸುವ್ಯವಸ್ಥಿತ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದರು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ನಾಯಕ ಅರಸರು ಪ್ರಸ್ತುತ ಅಧ್ಯಯನದ ಕೇಂದ್ರಬಿಂದುವಾದುದು ಸಹಜ. ಜೊತೆಗೆ ರಾಣಿಯರು ಹಾಗೂ ಅವರ ಇಡೀ ಕೌಟುಂಬಿಕ ಪರಿವಾರವನ್ನು ಈ ಅಧ್ಯಯನದ ವ್ಯಾಪ್ತಿಗೊಳಪಡಿಸಲಾಗಿದೆ.

ಇಲ್ಲಿಯವರೆಗೆ ನಡೆದ ಅಧ್ಯಯನಗಳಲ್ಲಿ ನಾಯಕ ಅರಸುಮನೆತನದ ರಾಜಕೀಯ ಚರಿತ್ರೆಗೆ ಅಧಿಕ ಆದ್ಯತೆ ನೀಡಲಾಗಿದೆಯೆಂಬುದು ವಾಸ್ತವ. ಆದರೆ ಅವರ ಸಾಂಸ್ಕೃತಿಕ ವಲಯದೆಡೆಗೆ ಇತಿಹಾಸಕಾರರ ದೃಷ್ಟಿ ಹರಿದುದು ತೀರಾ ಕಡಿಮೆ. ಕಾರಣ ಅದಕ್ಕೆ ಪೂರಕ ಆಕರಗಳ ಕೊರತೆ. ಈ ಕಾರಣಕ್ಕಾಗಿಯೇ ಇವರ ಮನೆತನಗಳ ಚರಿತ್ರೆ ಕ್ರಮವಾಗಿ ನಿರೂಪಿಸಲ್ಪಟ್ಟಿಲ್ಲ. ಈ ಅಧ್ಯಯನದಲ್ಲಿ ಆ ಕೊರತೆಯನ್ನು ತುಂಬುವ ನಿಟ್ಟಿನಲ್ಲಿ, ನಾಯಕ ಅರಸುಮನೆತನಗಳ ಸಾಂಸ್ಕೃತಿಕ ಜೀವನವು ಜನಸಾಮಾನ್ಯರ ಜೀವನಕ್ಕಿಂತ ಹೇಗೆ ಭಿನ್ನವಾಗಿತ್ತು ಹಾಗೂ ಅವರ ಸಾಂಸ್ಕೃತಿಕ ಜೀವನದಲ್ಲಾದ ಬದಲಾವಣೆಗಳೇನು ಇತ್ಯಾದಿ ಅಂಶಗಳನ್ನು ಪರಿಶೀಲಿಸಲಾಗಿದೆ. ರಾಜಕೀಯ ಚಿತ್ರಣದೊಂದಿಗೆ ಅವರ ಪಾರಂಪರಿಕ ಆಚಾರ-ವಿಚಾರಗಳು, ರೂಢಿ-ಸಂಪ್ರದಾಯ ಇತ್ಯಾದಿಯನ್ನು. ಹೊಸ ಪೀಳಿಗೆಗೆ ಪರಿಚಯಿಸುವುದು ಇಲ್ಲಿಯ ಪ್ರಮುಖ ಉದ್ದೇಶಗಳಲ್ಲೊಂದು.

ಒಂದು ಕಾಲಕ್ಕೆ ಗುಡ್ಡಗಾಡು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಈ ನಾಯಕ ಅರಸರು ತಮ್ಮ ಅಧಿಕಾರಾವಧಿಯಲ್ಲಿ ಜನನಾಯಕರಾಗಿ, ದಕ್ಷ ಆಡಳಿತಗಾರರಾಗಿ ಮೆರೆದುದು ವಿಶೇಷ. ತಮ್ಮ ಮೂಲ ಸಂಸ್ಕೃತಿಯ ಪ್ರೇರಣೆಯಿಂದ ಶಿಷ್ಟಸಂಸ್ಕೃತಿಯೆಡೆಗೆ ಬಂದುದು ಗಮನಾರ್ಹ; ಹಾಗೂ ಇಂದಿನ ಸಂಸ್ಕೃತಿಗೆ ಅವರ ಕಾಣಿಕೆ ಅಪಾರ. ಇವರು ಕೇವಲ ವೈಭವದ ಭೋಗಜೀವನವನ್ನು ಸವಿದವರಲ್ಲ. ಜನಸಾಮಾನ್ಯರ ಮಧ್ಯದಿಂದ ಬಂದವರಾದ್ದರಿಂದ ಜನತೆಗೆ ಹೆಚ್ಚು ಸಮೀಪವರ್ತಿಗಳಾಗಿದ್ದರು. ತಾವು ದೈವಾಂಶಸಂಭೂತರೆಂದು ಭಾವಿಸಿಕೊಳ್ಳದೆ, ಹೆಚ್ಚಿನ ವೈಭವ, ಅಟ್ಟಹಾಸ ಹಾಗೂ ದರ್ಪಗಳನ್ನು ಪ್ರದರ್ಶಿಸದೆ, ಸಾಮಾನ್ಯ ಜನರೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಪ್ರಜೆಗಳಿಗೆ ಹತ್ತಿರದವರಾಗಿ, ಅವರ ಕಷ್ಟಸುಖಗಳಲ್ಲಿ ಭಾಗಿಗಳಾಗಿ ಅವರ ಮನ ಗೆಲ್ಲುವಲ್ಲಿ ಯಶಸ್ವಿಯಾದರು. ಜನಸಾಮಾನ್ಯರಿಗೆ ಉಪಯೋಗವಾಗುವ ಅನೇಕ ಕಾರ್ಯಗಳನ್ನು ಕೈಗೊಂಡರು. ಅಪಾರ ಪ್ರಜಾವಾತ್ಸಲ್ಯದ ಪ್ರತೀಕವಾಗಿ, ಜನರಿಗೆ ಅನುಕೂಲವಾಗುವ ಹಲವಾರು ಕಾಮಗಾರಿಗಳನ್ನು ಕೈಗೊಂಡರು. ಇವರ ಕಾಲದ ಕೆರೆ, ಕಟ್ಟೆ, ಬಾವಿಗಳು ಇವರು ಕೃಷಿಗೆ ನೀಡಿದ ಆದ್ಯತೆ ಹಾಗೂ ಪ್ರೋತ್ಸಾಹವನ್ನು ತಿಳಿಸುತ್ತವೆ. ಇವರ ಕಾಲದಲ್ಲಿ ಬೃಹತ್ತಾದ ಕೋಟೆ-

ಕೊತ್ತಲಗಳು ನಿರ್ಮಾಣವಾದವು. ಇದಕ್ಕೆ ಚಿತ್ರದುರ್ಗದ ಏಳುಸುತ್ತಿನ ಕೋಟೆಯೇ ಸಾಕ್ಷಿ. ಕರ್ನಾಟಕದ ಇತಿಹಾಸದಲ್ಲಿ ಇದಕ್ಕೊಂದು ಪ್ರಮುಖ ಸ್ಥಾನವಿದೆ. ಸುಂದರವಾದ ಅನೇಕ ದೇವಾಲಯಗಳು ನಿರ್ಮಾಣವಾದವು. ಆ ದೇವಾಲಯಗಳಿಗೆ, ಮಠಮಾನ್ಯಗಳಿಗೆ ಉದಾರ ದಾನದತ್ತಿಗಳನ್ನು ನೀಡಿದರು. ಅಸಹಾಯಕರಿಗೆ, ಹಸಿದವರಿಗೆ ಬೇಡಿದ್ದನ್ನು ನೀಡಿದವರು. ಹೀಗೆ ದಾನಧರ್ಮಕ್ಕೆ ಹೆಸರಾದ ಇವರ ಉದಾರತೆಯ ಗುಣ ಮುಂದೆ ಇವರನ್ನು ಚಿಂತಾಜನಕ ಸ್ಥಿತಿಗೆ ತರಲು ಕಾರಣವಾಯಿತೆನ್ನಬಹುದು.

ಪ್ರಜೆಗಳ ಅಭಿವೃದ್ಧಿಗೆ ಶ್ರಮಿಸಿದ ನಾಯಕ ಅರಸರ ಕಾಲಾವಧಿಯಲ್ಲಿ ಜನಸಾಮಾನ್ಯರ ಮೇಲಿನ ಶೋಷಣೆ, ಪಕ್ಷಪಾತ ಇತ್ಯಾದಿ ಅತ್ಯಲ್ಪವಾಗಿತ್ತೆಂದು ಹೇಳಬಹುದಾಗಿದೆ. ಪ್ರಜೆಗಳು ನೆಮ್ಮದಿಯಿಂದ ಬದುಕನ್ನು ಸಾಗಿಸಲು ಸಹಕಾರಿಯಾದ ವಾತಾವರಣವಿದ್ದಿತು. ಅಲ್ಲದೆ, ಶಾಂತಿ-ಸುಭಿಕ್ಷೆಗಳು ನೆಲೆಸಿದ್ದವು.

ವಿಜಯನಗರದ ಅರಸೊತ್ತಿಗೆಯಿಂದ ಆರಂಭವಾದ ಸಾಂಸ್ಕೃತಿಕ ಪರಂಪರೆಯನ್ನು ಇವರು ತಮ್ಮ ಅಂತ್ಯದವರೆಗೂ ಕಾಪಾಡಿಕೊಂಡು ಬಂದವರಾಗಿದ್ದರು. ಹಿಂದೂಧರ್ಮದ ಪ್ರಭಾವಕ್ಕೊಳಗಾದ ಇವರು ಹಿಂದೂಧರ್ಮದ ರಕ್ಷಕರಾಗಿ ವಿಜಯನಗರದ ತರುವಾಯ ಶ್ರಮಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಇವರು ವೈಷ್ಣವ, ಶೈವ ಸಂಪ್ರದಾಯಗಳನ್ನು ಅನುಸರಿಸಿದರಲ್ಲದೆ, ಇವರಲ್ಲಿ ಕೆಲವರು ಲಿಂಗಧಾರಿಗಳಾಗಿ ಮುಂದುವರೆದರು. ಕೆಲವರು ಮಧ್ಯದಲ್ಲಿಯೇ ಈ ಮತವನ್ನು ಕೈಬಿಟ್ಟ ಘಟನೆಗಳು ಈ ಮನೆತನಗಳಲ್ಲಿ ಜರುಗಿವೆ. ವೈಷ್ಣವ ಸಂಪ್ರದಾಯದಂತೆ ಜನಿವಾರಧಾರಣೆಯನ್ನು ಅನುಸರಿಸಿ, ಅದು ಕ್ಷಾತ್ರತ್ವದ ಸಂಕೇತ ವೆಂದು ತಿಳಿದರು. ಆಗ ಅವರ ಮೂಲ ಆಚಾರ ವಿಚಾರಗಳು ದೂರಸರಿದವು.

ಕ್ರೂರಮೃಗಗಳೊಂದಿಗೆ ಕಾಡಿನ ಮಧ್ಯೆ ಬದುಕಿ ಬಾಳಿದ ಈ ಜನ ಅತ್ಯುತ್ತಮ ಸಾಂಸ್ಕೃತಿಕ ಬದುಕನ್ನು ನಡೆಸಿರುವುದು ಸಾಮಾನ್ಯವಲ್ಲ. ಇವರ ಆಳ್ವಿಕೆ ಕರ್ನಾಟಕ ಇತಿಹಾಸದಲ್ಲಿ ಒಂದು ಅಪೂರ್ವ ಘಟ್ಟವೇ ಸರಿ. ಇವರ ಅಧಿಕಾರ ಅಥವಾ ಸೇವೆ ಮಧ್ಯಕಾಲೀನಯುಗಕ್ಕೆ ಮಾತ್ರ ಸೀಮಿತಗೊಳ್ಳದೆ, ಆಧುನಿಕ ಯುಗಕ್ಕೂ ಮುಂದುವರೆದಿದೆ. ಭಾರತದ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಇಡೀ ದಕ್ಷಿಣಭಾರತ ದಲ್ಲಿಯೇ ಆಂಗ್ಲರ ಆಡಳಿತದ ವಿರುದ್ಧ ಸೆಟೆದು ನಿಂತು ಹೋರಾಟದ ತಳಪಾಯ ಹಾಕಿದವರಲ್ಲಿ ಸುರಪುರದ ಅರಸ ನಾಲ್ವಡಿ ವೆಂಕಟಪ್ಪನಾಯಕನು ಪ್ರಮುಖನಾಗಿದ್ದಾನೆ. ಆಂಗ್ಲರ ವಿರುದ್ಧ ಮೊದಲಬಾರಿಗೆ ಅವರ ಆಡಳಿತವನ್ನು ಧಿಕ್ಕರಿಸಿರುವುದು ಇವರ ಶೌರ್ಯ, ಸಾಹಸಕ್ಕೆ ಹಿಡಿದ ಕನ್ನಡಿ.

ಅಷ್ಟೇ ಅಲ್ಲದೆ, ಪರಧರ್ಮ, ಪರಸಂಸ್ಕೃತಿಗಳು, ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿಗಳಿಗೆ ಗಂಡಾಂತರ ವನ್ನುಂಟು ಮಾಡುವ ಸಂದರ್ಭದಲ್ಲಿ ಪೂರ್ವದಿಂದಲೂ ಬಂದ ಸಂಸ್ಕೃತಿಯನ್ನು ಕಾಪಾಡಿದುದು ಇವರ ಹಿರಿಮೆಯ ದ್ಯೋತಕ. ಆದರೆ ಇವರ ಜೀವನೋತ್ಸಾಹದ ಸಂಸ್ಕೃತಿ ದೇಶೀಯಪ್ರಜ್ಞೆಗೆ ತಟ್ಟದಿಲ್ಲದಿರುವುದು ವಿಪರ್ಯಾಸ. ಇವರು ಯಾವುದೇ ಧರ್ಮವನ್ನು ಹೀಗಳೆಯದೆ ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಹೊಂದಿದ್ದುದು ವಿಶೇಷ.

ಇವರ ಇಂಥ ಸಾಂಸ್ಕೃತಿಕ ಒಮಕಿನ ಆಚರಣೆಗಳು ಲಿಖಿತರೂಪದಲ್ಲಿ ಸೂಕ್ತರೀತಿಯಲ್ಲಿ ದಾಖಲಾಗದೆ ಇರುವುದನ್ನು ನೋಡಬಹುದು. ಹಾಗೆಯೇ ಕಂಠಸ್ಥ(ಮೌಖಿಕ) ಮಾಹಿತಿಯನ್ನು ಸಂಗ್ರಹಿಸಿ ಚರ್ಚಿಸುವುದು ಅಗತ್ಯವೆಂಬ ಅಂಶವನ್ನು ಇಲ್ಲಿ ಮನಗಾಣಲಾಗಿದೆ. ಮಾತಿನ ಮೂಲಕ ತಮ್ಮ ಇತಿಹಾಸದ ನೆನಪುಗಳನ್ನು ಈ ವಂಶಸ್ಥರು, ಇಲ್ಲವೆ ಆ ಪರಿಸರದ ಜನ ಸುರಕ್ಷಿತವಾಗಿ ರಕ್ಷಿಸಿಕೊಂಡು ಬಂದಿರುವುದು ಮುಖ್ಯ. ಇವರು ಆ ಪ್ರದೇಶದ ಚಾರಿತ್ರಿಕ ಆಚರಣೆಗಳಲ್ಲಿ ಭಾಗವಹಿಸಿದ ಸಂದರ್ಭ, ಅರಸ, ರಾಣಿ, ಮಂತ್ರಿ, ಒಡ್ಡೋಲಗ, ಯುದ್ಧ, ಹಬ್ಬ, ಜಾತ್ರೆಯ ಆಚರಣೆ ಮುಂತಾದ ಸಂಗತಿಗಳನ್ನು ಮೌಖಿಕ ಸಾಹಿತ್ಯದಲ್ಲಿ ನಿರೂಪಿಸಲಾಗುತ್ತದೆ.

ಮೌಖಿಕ ಪರಂಪರೆಯಲ್ಲಿ ಈ ಮನೆತನಗಳ ಆಚರಣೆಗಳು ಜೀವಂತವಾಗಿ ಮೈವೆತ್ತಿ ನಿಲ್ಲುತ್ತವೆ. ಅಲ್ಲದೆ ಅವರ ಆಚಾರ ವಿಚಾರಗಳು, ರೀತಿ-ನೀತಿಗಳು, ಪದ್ಧತಿಗಳು, ನಂಬಿಕೆಗಳು ಅಂತರಂಗದಲ್ಲಿ ಅಚ್ಚಳಿಯದಂತೆ ಗರ್ಭೀಕರಿಸಿಕೊಂಡಿರುವುದನ್ನು ಕಾಣಬಹುದು. ಆದರೆ ಇತಿಹಾಸ ರಚನೆಯ ಸಂದರ್ಭದಲ್ಲಿ ಕೆಲವು ವಿದ್ವಾಂಸರು ಮೌಖಿಕ ಆಕರವನ್ನು ಅಷ್ಟೇನೂ ಪರಿಗಣಿಸುವುದಿಲ್ಲ. ಆದರೆ ಇಲ್ಲಿ ನಾಯಕ ಅರಸುಮನೆತನಗಳ ಲಿಖಿತ ಚರಿತ್ರೆ ಮಾತ್ರವೇ ಇತಿಹಾಸವಲ್ಲ. ಮರೆಯಾದ ಚಾರಿತ್ರಿಕ ಸಂಗತಿಗಳೂ ಮೌಖಿಕ ಆಧಾರಗಳ ಮೂಲಕ ಅವರ ಸಾಂಸ್ಕೃತಿಕ ಮೌಲ್ಯವನ್ನು ಎತ್ತಿ ಹಿಡಿಯಬಲ್ಲವುಗಳಾಗಿವೆ. ಲಿಖಿತ ಆಕರಗಳು ತುಂಬಿಕೊಡದ ಅದೆಷ್ಟೋ ಅಂಶಗಳನ್ನು ಜನಪದಸಾಹಿತ್ಯವೂ ಯಥಾವತ್ತಾಗಿ ತುಂಬಿಕೊಡುವಲ್ಲಿ ಜೀವಾಳದಂತಿದೆ. ಅಲ್ಲದೆ, ಹಳೆಯ ಆಕರ ಸಾಮಗ್ರಿಗಳೊಂದಿಗೆ ಕ್ಷೇತ್ರಕಾರ್ಯದಲ್ಲಿ ದೊರೆತ ಹೊಸ ಮೌಖಿಕ ಮಾಹಿತಿಯೂ ಇಲ್ಲಿ ಬೆರೆತ ಪರಿಣಾಮವಾಗಿ ಅಧ್ಯಯನದುದ್ದಕ್ಕೂ ಕುತೂಹಲದ ಸಂಗತಿಗಳು ಮೈದಾಳಿವೆ. ಇಲ್ಲಿಯ ಪ್ರತಿಯೊಂದು ಅಧ್ಯಾಯವೂ ಆಧಾರಸಹಿತವಾಗಿದ್ದು, ಸಾಂಸ್ಕೃತಿಕ ಆಚರಣೆಗಳಿಗೆ ಸಮರ್ಥನೆ ನೀಡುವಲ್ಲಿ ಸಾಫಲ್ಯವನ್ನು ಕಂಡುಕೊಂಡಿದೆ ಎನ್ನಬಹುದು.

ಈ ನಿಟ್ಟಿನಲ್ಲಿ ಪ್ರಸ್ತುತ ಮಹಾಪ್ರಬಂಧದ ವಿಷಯ ಕುರಿತು ಅಧ್ಯಯನ ಕೈಗೊಂಡುದರ ಉದ್ದೇಶ, ಮಹತ್ವ, ವ್ಯಾಪ್ತಿ ಹಾಗೂ ವಿಧಾನವನ್ನು ಅಧ್ಯಾಯ ಒಂದರಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಇಲ್ಲಿ ಕರ್ನಾಟಕ ನಾಯಕ ಅರಸು ಮನೆತನಗಳ ಸಾಂಸ್ಕೃತಿಕ ಆಚರಣೆಗಳ ಅಗತ್ಯತೆ, ಅವುಗಳ ಐತಿಹಾಸಿಕ ಮಹತ್ವ ಹಾಗೂ ಅದಕ್ಕೆ ಸಂಬಂಧಿಸಿದ ಆಕರಗಳ ಕುರಿತಾಗಿ ಚರ್ಚಿಸಲಾಗಿದೆ. ಇಲ್ಲಿಯವರೆಗೆ ನಡೆದಿರುವ ಸಂಶೋಧನೆಗಳೊಂದಿಗೆ ವಿಶಿಷ್ಟ ಸಾಂಸ್ಕೃತಿಕ ಆಚರಣೆಗಳ ಅಧ್ಯಯನದ ಮಹತ್ವವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಚಿತ್ರದುರ್ಗ, ಸುರಪುರ, ಆನೆಗೊಂದಿಗಳು ಪ್ರಮುಖ ನಾಯಕ ಅರಸುಮನೆತನಗಳೆಂದು ಹಾಗೂ ಸಹ ಮನೆತನಗಳೆಂದು ಗುಡಗುಂಟಿ, ಗುಂತಗೋಳ, ದೇವದುರ್ಗ, ಕನಕಗಿರಿ, ಗುಡೇಕೋಟೆ, ಜರಿಮಲೆ, ನಾಯಕನಹಟ್ಟಿ, ಮತ್ತೋಡು, ಹರತಿ ಮನೆತನಗಳ ರಾಜಕೀಯ ಚಿತ್ರಣವನ್ನು ನೀಡಲಾಗಿದೆ. ಅಲ್ಲದೆ ಇವರು ಪ್ರಬಲ ಅರಸುಮನೆತನಗಳಿಗೆ ಹೇಗೆ ತಳಪಾಯವಾಗಿದ್ದರು

ಎಂಬ ಘಟನಾವಳಿಗಳನ್ನು ವಿವರಿಸಲಾಗಿದೆ. ಸೇನಾನಿಗಳಾಗಿ, ಮುಖಂಡರಾಗಿ, ನಂತರ ರಾಜಕೀಯ ಸ್ವಸಾಮರ್ಥ್ಯದಿಂದ ಅರಸೊತ್ತಿಗೆಯನ್ನು ಹುಟ್ಟುಹಾಕಿ, ಆಡಳಿತ ನಡೆಸುವುದರ ಮೂಲಕ ಇವರ ರಾಜಕೀಯ ಸಾಧನೆಗಳನ್ನು ಅರಿಯುವಲ್ಲಿ ಈ ಅಧ್ಯಾಯ ಸಫಲವಾಗಿದೆ. ಇಲ್ಲಿಯವರೆಗೆ ದಾಖಲಾಗದ ಗುಡಗುಂಟಿ, ಗುಂತಗೋಳ, ದೇವದುರ್ಗದಂತಹ ಸಂಸ್ಥಾನಗಳ ಚರಿತ್ರೆಯನ್ನು ಲಭ್ಯವಿದ್ದ ಆಕರಗಳ ಸಹಾಯದಿಂದ ಇಲ್ಲಿ ಹೆಣೆಯಲಾಗಿದೆ. ಇನ್ನೂ ಮುಂದಿನ ದಿನಗಳಲ್ಲಿ ಆಕರಗಳು ಲಭ್ಯವಾದಲ್ಲಿ ಹೆಚ್ಚಿನ ಅಂಶಗಳು ಹೊರ ಬೀಳಬಹುದು. ಇತಿಹಾಸವೆಂದರೆ ಹೀಗೆ, ಇಷ್ಟೇ ಇರಬೇಕಾದುದೆಂಬುದರ ಕಟ್ಟಳೆಯಿಲ್ಲ. ಇದು ಚಲನಶೀಲವಾದುದಾಗಿದ್ದು, ಇದರ ರಚನೆಯಲ್ಲಿ ಪುನರ್‌ರಚನೆ, ವ್ಯಾಖ್ಯಾನ, ಮರುವ್ಯಾಖ್ಯಾನ ಗಳಂತಹ ಕ್ರಿಯೆ ನಿರಂತರವಾಗಿರುತ್ತದೆ. ಕೆಲವು ಸಲ ಹೊಸ ಹೊಸ ಆಧಾರಗಳು ಲಭ್ಯವಾದಂತೆ ಹಳೆಯ ಆಧಾರಗಳು ಪುನರ್‌ಪರಿಶೀಲನೆಗೆ ಒಳಗಾಗುತ್ತವೆ. ಇತಿಹಾಸದ ಸ್ವರೂಪ, ಗ್ರಹಿಕೆಗಳು ಬೇರೆ ಬೇರೆಯಾಗುತ್ತಾ ಹೋಗುತ್ತವೆ. ಆಗ ಇತಿಹಾಸದ ದೃಷ್ಟಿಕೋನ, ಸಿದ್ಧಾಂತಗಳು ಬದಲಾವಣೆ ಹೊಂದುವುದು ಸಹಜ.

ಸಂಶೋಧನಕ್ಷೇತ್ರದ ಹರವು ಹೆಚ್ಚಾಗಿರುವುದರಿಂದ ಇತಿಹಾಸಕ್ಕೆ ಪೂರ್ಣವಿರಾಮವೆಂಬುದಿಲ್ಲ. ಸಂಶೋಧನೆಗಳಾದಂತೆ ಹೊಸ ಸಂಗತಿಗಳು ಸೇರ್ಪಡೆಯಾಗುತ್ತಾ ಹೋಗುತ್ತವೆ. ಆಗ ಇತಿಹಾಸ ನಿರ್ದಿಷ್ಟತೆ ಹಾಗೂ ಖಚಿತತೆಯಿಂದ ಕೂಡಲು ಸಾಧ್ಯವಾಗುತ್ತದೆ. ಹೀಗಾಗಿ ಈ ಮನೆತನಗಳ ಕುರಿತಾಗಿ ಸಂಶೋಧನೆಗಳು ನಡೆದಿದ್ದರೂ. ಸಾಕಷ್ಟು ಅಂಶಗಳು ಹೊರಬಿದ್ದಿದ್ದರೂ, ಪುನಃ ಪುನಃ ಸಂಶೋಧನೆ ಕೈಗೊಳ್ಳಬೇಕಾದ ಅಗತ್ಯತೆ ಹಾಗೂ ಅನಿವಾರ್ಯತೆ ಇದ್ದೇ ಇರುತ್ತದೆ. ಇಲ್ಲಿ ಇಂತಹ ಸಣ್ಣಪುಟ್ಟ ಸಂಸ್ಥಾನಗಳ ವ್ಯವಸ್ಥಿತ ಅಧ್ಯಯನದ ಮೂಲಕ ಒಂದು ನಾಡಿನ ಇತಿಹಾಸ ಕಟ್ಟುವಲ್ಲಿಯ ಒಂದು ಪ್ರಯತ್ನ ಇದಾಗಿದ್ದು, ಕರ್ನಾಟಕದ ರಾಜಕೀಯ ಆಳ್ವಿಕೆಯ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.

ಮೂರನೆಯ ಅಧ್ಯಾಯವಾದ ಧಾರ್ಮಿಕ ನೆಲೆಯ ಆಚರಣೆಗಳಲ್ಲಿ, ಧಾರ್ಮಿಕ ಅಂಶಗಳು ನಾಯಕ ಜನಾಂಗದ ಅರಸರ ಮೇಲೆ ಬೀರಿದ ಪ್ರಭಾವದಿಂದ ಈ ಆಚರಣೆಗಳ ಮೂಲಕವಾಗಿ ತಮ್ಮ ಬದುಕಿನ ರೀತಿ-ನೀತಿಗಳನ್ನು ರೂಪಿಸಿಕೊಂಡರು ಹಾಗೂ ಧಾರ್ಮಿಕ ಶಕ್ತಿಯನ್ನು ರಾಜಕೀಯವಾಗಿ ಬಳಸಿಕೊಂಡರು. ಜೊತೆಗೆ ಸರ್ವಧರ್ಮ ಸಮನ್ವಯ ದೃಷ್ಟಿಕೋನದೊಂದಿಗೆ ಆದರ್ಶಮಯವಾದ ಮತೀಯ ಸಾಮರಸ್ಯವನ್ನು ಪಾಲಿಸಿಕೊಂಡು ಬಂದರು ಎಂಬ ಬಗೆಯನ್ನು ಚಿತ್ರಿಸಲು ಪ್ರಯತ್ನಿಸಲಾಗಿದೆ. ನಾಯಕ ಅರಸರಲ್ಲಿ ವಿಶಿಷ್ಟವಾದ ಧಾರ್ಮಿಕ ಪ್ರಕ್ರಿಯೆಯಿದೆ. ಜಾತಿಯಿಂದ ಬೇಡರಾಗಿ ಜನಿಸಿ, ಧರ್ಮದಿಂದ ಶೈವರಾಗಿ ವೈಷ್ಣವರಾಗಿ ಬೆಳೆದವರಾದರೂ ಮೂಲಜಾತಿ ಇವರ ಬೆನ್ನು ಬಿಡಲಿಲ್ಲ. ವೈಷ್ಣವರು, ಶೈವರು ಇವರನ್ನು ಹತ್ತಿರ ಕರೆದುಕೊಳ್ಳಲೂ ಇಲ್ಲ. ಇಂಥ ಸಂದರ್ಭಗಳ ಮಧ್ಯೆ ಈ ನಾಯಕ ಅರಸರು ತಮ್ಮದೇ ಆದ ವಿಶಿಷ್ಟ ಆಚರಣೆಗಳನ್ನು ರೂಢಿಸಿಕೊಂಡರು. ಆದರೂ ಧಾರ್ಮಿಕ ಸಮನ್ವಯ ಸಾಧಿಸುವ ನಿಟ್ಟಿನಲ್ಲಿ ಯಾವುದೇ ಧಾರ್ಮಿಕ ಸಂಘರ್ಷಗಳು ಇವರ ಕಾಲದಲ್ಲಿ ಉಂಟಾದ ಬಗೆಗೆ ಉದಾಹರಣೆಗಳಿಲ್ಲ.

ಇಲ್ಲಿ ಎಲ್ಲಾ ಅರಸುಮನೆತನಗಳಲ್ಲಿ ಜರುಗುತ್ತಿದ್ದಂತೆ ಪಟ್ಟಾಭಿಷೇಕದ ಧಾರ್ಮಿಕ ಹಿನ್ನಲೆಯ ವಿಧಿ-ವಿಧಾನಗಳಾದ ಉಪನಯನ ಮಹೋತ್ಸವವಾದ ಮೇಲೆ ವಿಧಿಪೂರ್ವಕ ವಿವಾಹವನ್ನು ಜರುಗಿಸಲಾಗುತ್ತಿತ್ತು. ತುಲಾಭಾರ ಕಾರ್ಯಕ್ರಮವಾದ ಮೇಲೆ ದಾನ ಧರ್ಮಗಳನ್ನು ಮಾಡಿ, ಪ್ರಾಯಶ್ಚಿತ್ತಾದಿ ಕಾರ್ಯಕ್ರಮವಾದ ನಂತರದಲ್ಲಿ ಐಂದ್ರಶಾಂತಿ ಕಾರ್ಯಕ್ರಮ, ಸಿಂಹಾಸನಾರೋಹಣ ಜರುಗುತ್ತಿತ್ತು. ಆಗಮಿಸಿದ ಬಂಧು-ಬಾಂಧವರು, ಸಾಮಂತ ಅರಸರು ಕಪ್ಪಕಾಣಿಕೆ ಸಮರ್ಪಿಸುತ್ತಿದ್ದರು. ಅದೇ ಸಂದರ್ಭದಲ್ಲಿ ಯುವರಾಜ ಪಟ್ಟಾಭಿಷೇಕವಾಗುತ್ತಿತ್ತು. ಇವೆಲ್ಲವುಗಳಲ್ಲಿ ಧಾರ್ಮಿಕ ವಿಧಿವಿಧಾನಗಳನ್ನು ಚಾಚೂತಪ್ಪದೆ ಪಾಲಿಸುತ್ತಿದ್ದರು.

ಅರಸರ ಪಟ್ಟಾಭಿಷೇಕದಂತೆ ಪಟ್ಟದರಸಿಯರ ಪಟ್ಟಾಭಿಷೇಕವೂ ನಡೆಯುತ್ತಿತ್ತು. ಈ ಮನೆತನದ ಪಟ್ಟದರಸಿಯರಿಗೆ ದೊರೆತ ಅಲ್ಪಕಾಲದ ರಾಜಕೀಯ ಅಧಿಕಾರದಲ್ಲಿ ಸಾರ್ವಜನಿಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾರೆ. ದೇವಾಲಯಗಳನ್ನು, ಕೆರೆಗಳನ್ನು ನಿರ್ಮಿಸುವುದಲ್ಲದೆ, ಜೀರ್ಣೋದ್ಧಾರ ಹಾಗೂ ಅಗ್ರಹಾರ ಸ್ಥಾಪನೆಯಂತಹ ಕೆಲಸಗಳಲ್ಲಿ ತೊಡಗಿದ್ದರು. ಯುದ್ಧದ ಪೂರ್ವಸಿದ್ಧತೆಯಲ್ಲಿ ನಾಯಕ ಅರಸರು ಸುವ್ಯವಸ್ಥಿತ ಸೈನ್ಯವನ್ನು ಹೊಂದಿದ್ದರು. ಯುದ್ಧಕ್ಕೆ ತೆರಳುವಾಗ ಅವರನ್ನು ಪ್ರೇರೇಪಿಸುತ್ತಿದ್ದರು. ಧಾರ್ಮಿಕ ಅಂಶಗಳನ್ನು ಮನದಲ್ಲಿ ಬಿತ್ತುತ್ತಿದ್ದರು. ಮನಸ್ಸಿನ ದೃಢತೆಗಾಗಿ ಜಯಗಳಿಸುತ್ತೇವೆಂಬ ಆತ್ಮವಿಶ್ವಾಸ ಮೂಡಿಸುವಲ್ಲಿ ಸಫಲರಾಗುತ್ತಿದ್ದರು. ಧಾರ್ಮಿಕತೆಯ ನೆಲೆಯಲ್ಲಿ ಸೌಮ್ಯದೇವರಿಗೆ ಪೂಜೆಸಲ್ಲಿಸುವ, ಉಗ್ರದೇವರಿಗೆ ಬಲಿನೀಡುವ ಕಾರ್ಯಕ್ರಮಗಳೂ ಜರುಗುತ್ತಿದ್ದವು.

ನಾಯಕ ಅರಸರು ಸಾರ್ವಜನಿಕವಾಗಿ, ಕೌಟುಂಬಿಕವಾಗಿ ನಡೆಯುವ ಹಬ್ಬ-ಉತ್ಸವಗಳಲ್ಲಿ ಮುಕ್ತವಾಗಿ ಭಾಗವಹಿಸುತ್ತಿದ್ದರು. ಇವರ ಪರಿವಾರಕ್ಕೆ ಹಾಗೂ ಆಡಳಿತವರ್ಗದವರಿಗೆಲ್ಲರಿಗೂ ಹಬ್ಬದ ವಾತಾವರಣ ವೇರ್ಪಟ್ಟಿರುತ್ತಿತ್ತು. ಹಾಗೂ ಆ ಸಂದರ್ಭದಲ್ಲಿ ವಿಶೇಷ ಸಾಧನೆಗೈದ ಪ್ರಜೆಗಳನ್ನು, ಆಡಳಿತ ವರ್ಗದವರನ್ನು ಸತ್ಕರಿಸಿ, ಗೌರವಿಸುವ ಕಾರ್ಯವೂ ನಡೆಯುತ್ತಿತ್ತು. ಇವರು ವೈಷ್ಣವ ಮತ್ತು ಶೈವ ಪಂಥಗಳ ಪಾಲಕರಾದರೂ ಇವರಲ್ಲಿ ಯಾವುದೇ ರೀತಿಯ ಧಾರ್ಮಿಕ ಬೇಧಭಾವವಿರಲಿಲ್ಲ. ಸರ್ವದೇವರನ್ನೂ ಪೂಜಿಸುತ್ತಿದ್ದರು. ಶಕ್ತಿ ಆರಾಧಕರೂ ಆಗಿದ್ದರು. ದಾನದತ್ತಿಗಳನ್ನು ನೀಡುವುದರ ಮೂಲಕ ತಮ್ಮ ಭಕ್ತಿ ಭಾವವನ್ನು ತೋರ್ಪಡಿಸುತ್ತಿದ್ದರು. ಹೊರರಾಜ್ಯದ ತಿರುಪತಿ ವೆಂಕಟೇಶ್ವರನನ್ನು ಇವರು ಪೂಜಿಸುತ್ತಿದ್ದು, ಇಂದಿಗೂ ಇದು ಅನೂಚಾನವಾಗಿ ನಡೆದಿರುವುದು ವಿಶೇಷ.

ತಮ್ಮದೇ ಆದ ನಂಬಿಕೆ-ಸಂಪ್ರದಾಯಗಳನ್ನು ಹೊಂದಿದ್ದ ಇವರು, ಗೋಪಾಳಪುಟ್ಟಿ ಹಿಡಿದು ಭಿಕ್ಷೆ ಬೇಡುವ, ಉಡುದಾರವನ್ನು ಕಟ್ಟದಿರುವ, ಮುಸ್ಲಿಂ ಸಂಪ್ರದಾಯದಂತೆ ರಾಣಿಯರು ಘೋಷಾ ಪದ್ಧತಿಯನ್ನು ಅನುಸರಿಸುವ ಸಂಪ್ರದಾಯಗಳಿವೆ. ಶುಭ-ಅಶುಭ, ಮೂರ್ತ-ಅಮೂರ್ತ, ಪಾಪ-ಪುಣ್ಯ, ಕನಸುಗಳು, ಸಹಗಮನ ಪದ್ಧತಿ ಮುಂತಾದವುಗಳ ಕುರಿತಾಗಿ ತಮ್ಮದೇ ಆದ ಧಾರ್ಮಿಕ ಚೌಕಟ್ಟನ್ನು

ಹೊಂದಿದ್ದರು. ಆದರೆ ಇವುಗಳಲ್ಲಿಯ ವೈಜ್ಞಾನಿಕ ಅಂಶಗಳ ಅರಿವಿಲ್ಲದೆಯೇ ಹಾಗೂ ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಅವು ಇಂದಿಗೂ ಮುಂದುವರಿದಿರುವುದು ವಿಪರ್ಯಾಸದ ಸಂಗತಿ.

ಅಧ್ಯಾಯ ನಾಲ್ಕರಲ್ಲಿ ಸಾಮಾಜಿಕ ನೆಲೆಯ ಆಚರಣೆಗಳಲ್ಲಿ ಇವರ ಸಾಮಾಜಿಕ ಜೀವನದ ಸ್ವರೂಪವನ್ನು ಹಾಗೂ ವೈಶಿಷ್ಟತೆಗಳನ್ನು ಚಿತ್ರಿಸಲಾಗಿದೆ. ಹೆಚ್ಚಾಗಿ ಅವಿಭಕ್ತ ಕುಟುಂಬ ಹಾಗೂ ಬಹುಪತ್ನಿತ್ವವನ್ನು ಅನುಸರಿಸುತ್ತಿದ್ದರು. ಸಾಂದರ್ಭಿಕವಾಗಿ ವೈವಿಧ್ಯಮಯ ಉಡುಗೆ-ತೊಡುಗೆಗಳನ್ನು ಧರಿಸುತ್ತಿದ್ದರು. ಇವು ಇವರ ವೈಭವದ ಪ್ರತೀಕಗಳಾಗಿದ್ದವು. ಬಗೆ ಬಗೆಯ ಆಹಾರಗಳನ್ನು ಸೇವಿಸುತ್ತಿದ್ದರಲ್ಲದೇ ಆಹಾರ ಸೇವನೆಗೆ ಸಂಬಂಧಿಸಿದ ನಿರ್ಬಂಧಗಳೂ ಇದ್ದವು. ಯುದ್ಧದಲ್ಲಿ ಜಯಶಾಲಿಗಳಾದಾಗ ಅದ್ದೂರಿಯ ಉತ್ಸವ ಜರುಗುತ್ತಿತ್ತು. ತಮ್ಮ ಮೇಲಿನ ಅರಸರಿಗೆ ಕಪ್ಪಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಸಾಂದರ್ಭಿಕವಾಗಿ ಇವರೂ ಸ್ವೀಕರಿಸುತ್ತಿದ್ದರು. ಬೇಟೆ ಇವರ ಹವ್ಯಾಸವಾಗಿತ್ತು. ಯುಗಾದಿಯ ಸಂದರ್ಭದ ಬೇಟೆ ವಿಶಿಷ್ಟತೆಯನ್ನು ಹೊಂದಿತ್ತು. ಶವಸಂಸ್ಕಾರಪದ್ಧತಿ ಶಾಸ್ತ್ರಸಮ್ಮತವಾಗಿ ನಡೆಯುತ್ತಿತ್ತು. ಹೀಗೆ ಇವರ ಆಚರಣೆಗಳು, ಜನಸಾಮಾನ್ಯರ ಸಾಮಾಜಿಕ ಬದುಕಿಗೂ ಇದ್ದ ಅಂತರ ಹಾಗೂ ಬೆರೆಯುವಿಕೆಯ ಕುರಿತಾದ ಅಂಶಗಳನ್ನು ಅವಲೋಕಿಸಲಾಗಿದೆ. ಇದು ಆ ಕಾಲದ ಸಾಮಾಜಿಕಕ್ಷೇತ್ರದಲ್ಲಾದ ಬಿರುಗಾಳಿಯೇ ಸರಿ. ಶೂದ್ರವರ್ಗದ ನಾಯಕರು, ರಾಜ್ಯದ ಒಡೆಯರಾಗಿದ್ದರೆ, ಇವರ ಅಧೀನದಲ್ಲಿ ಬ್ರಾಹ್ಮಣರು ಮತ್ತು ವೀರಶೈವರು ಇದ್ದರೂ ಯಾವುದೇ ಜಾತಿಸಂಘರ್ಷ ಇವರ ಕಾಲದಲ್ಲಾಗಿಲ್ಲದಿರುವುದು ವಿಶೇಷ. ಈ ಆಚರಣೆಗಳಲ್ಲಿ ಅಡಗಿದ ಅನೇಕ ಮಹತ್ವಪೂರ್ಣ ವಿಷಯಗಳು ಇಲ್ಲಿಯ ವ್ಯಾಪಕತೆಯೊಳಗೆ ಸೇರಿಕೊಂಡಿವೆ. ಇಲ್ಲಿಯ ಪ್ರತಿಯೊಂದು ಆಚರಣೆಯೂ ಆಯಾ ಪರಿಸರದಲ್ಲಿಯ ಹೊಸ ಅಂಶಗಳಿಂದೊಡಗೂಡಿ ಮೈನವಿರೇಳುವ ವೃತ್ತಾಂತಗಳನ್ನು ಪರಿಚಯಿಸುತ್ತವೆ.

ಅಧ್ಯಾಯ ಐದರಲ್ಲಿ ಸಾಹಿತ್ಯ, ಶಿಕ್ಷಣ, ಕಲೆಯ ಕ್ಷೇತ್ರಗಳಿಗೆ ನಾಯಕ ಅರಸರು ನೀಡಿದ ಕೊಡುಗೆಗಳ ಸಮೀಕ್ಷೆ ಮಾಡಲಾಗಿದೆ. ಅಲ್ಲದೆ, ಖಡ್ಗವಿಡಿದು ಹೋರಾಡುವ ಕಲಿಗಳು, ಕಂಠವಿಡಿದು ಕೃತಿ ರಚಿಸಿದ ಉದಾಹರಣೆಗಳಿವೆ. ಸುರಪುರದ ಅರಸ ರಾಘವ ಪಾಮನಾಯಕ 'ಭಾರ್ಗವಪುರಾಣ'ವೆಂಬ ಕೃತಿಯನ್ನು ತೆಲುಗುಭಾಷೆಯಲ್ಲಿ ರಚಿಸಿರುವುದು ಸಾಮಾನ್ಯವಲ್ಲ. ನಾಯಕ ಅರಸುಮನೆತನದವರು ಕೂಡ ಇತರ ಅರಸರುಗಳಂತೆ ಸಾಹಿತಿಗಳಿಗೆ. ಪಂಡಿತರುಗಳಿಗೆ ರಾಜಾಶ್ರಯ ನೀಡಿದ್ದರು. ಇವರ ಕಾಲದ ಸಾಹಿತಿಗಳು, ಪಂಡಿತರು ವೈವಿಧ್ಯಮಯ ಸಾಹಿತ್ಯವನ್ನು ರಚಿಸಿ ನಾಡಿಗೆ ನೀಡಿದ್ದಾರೆ. ಅಲ್ಲದೆ ಈ ಅರಸರ ಕುರಿತಾಗಿ ಯಥೇಚ್ಛವಾಗಿ ಹೊರಬಂದ ಜನಪದಸಾಹಿತ್ಯ ಈಗಲೂ ಜನರ ಮಧ್ಯೆ ಜೀವಂತವಾಗಿದೆ. ಈ ಸಾಹಿತ್ಯ ಕುರಿತು ಪ್ರತ್ಯೇಕ ಸಂಶೋಧನೆಯಾಗಬೇಕಿದೆ.

ನಾಯಕ ಅರಸರು ಮುಖ್ಯವಾಗಿ ಕ್ಷಾತ್ರವೃತ್ತಿಯ ಶಿಕ್ಷಣವನ್ನು ಪಡೆದವರು. ಇವರಲ್ಲಿ ಆಧ್ಯಾತ್ಮಿಕ, ಧಾರ್ಮಿಕ ಶಿಕ್ಷಣವನ್ನು ಪಡೆದವರು ತೀರ ವಿರಳ. ಇವರು ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ,

ಅವುಗಳಿಗೆ ನೀಡಿದ ದಾನದತ್ತಿಗಳು ಯಥೇಚ್ಛವಾಗಿದ್ದವು. ತಮ್ಮ ಅಧೀನದ ಸೈನಿಕರ ಮಕ್ಕಳಿಗೆ ಸೈನಿಕ ಶಿಕ್ಷಣವನ್ನು ನೀಡುವ ಜವಾಬ್ದಾರಿ ಸಂಪೂರ್ಣವಾಗಿ ಇವರದೇ ಆಗಿತ್ತು. ಅವರು ವಯಸ್ಕರಾದ ನಂತರವೂ ಅವರಿಗೆ ವಿವಾಹ ಮಾಡಿಕೊಡುತ್ತಿದ್ದರು. ಸ್ವತಃ ಅರಸರೇ ಗರಡಿಯಾಳುಗಳಾಗಿದ್ದರು. ಇವರ ಕಾಲದಲ್ಲಿ ಚಿತ್ರಕಲೆ, ಶಿಲ್ಪಕಲೆ, ಸಂಗೀತ ಕಲೆಗಳು ಅರಳಿದವು ಹಾಗೂ ಪೋಷಿಸಲ್ಪಟ್ಟವು. ಅನೇಕ ದೇವಾಲಯಗಳು, ಮಠಗಳು, ಅರಮನೆಗಳು ಚಿತ್ರಗಳಿಂದ ಅಲಂಕೃತಗೊಂಡಿದ್ದವು. ಸುರಪುರ ನಾಯಕ ಅರಸರ ಕಾಲದ ಚಿತ್ರಕಲೆ ಬಾನಯ್ಯ ಗರುಡಾದ್ರಿ ಎಂಬ ಕಲಾವಿದನಿಂದ ಜಗತ್ಪ್ರಸಿದ್ಧಿ ಪಡೆಯುವಂತಾಯಿತು. ಇವರ ಕಾಲದ ಚಿತ್ರಗಳನ್ನು ಲಂಡನ್ ಕಲಾಸಂಗ್ರಹಾಲಯ, ಇಂಗ್ಲೆಂಡಿನ ವಿವಿಧ ನಗರಗಳಲ್ಲಿ, ದೆಹಲಿ, ಮುಂಬೈ, ಹೈದ್ರಾಬಾದ್‌ನ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಸಾಲಾರಜಂಗ ವಸ್ತುಸಂಗ್ರಹಾಲಯಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಈ ಮನೆತನದ ಅರಸರುಗಳು ಉಬ್ಬುಶಿಲ್ಪ, ಗಾರೆಶಿಲ್ಪ ಹಾಗೂ ಕಂಬಶಿಲ್ಪಗಳಲ್ಲಿ ಚಿತ್ರಿತಗೊಂಡಿದ್ದಾರೆ. ಸ್ವತಃ ಸಂಗೀತಗಾರರಾದ ಕೆಲವರು, ಅದರಲ್ಲೂ ಸುರಪುರದ ಅರಸರು ಅನೇಕ ಸಂಗೀತಗೋಷ್ಠಿಗಳನ್ನು ನಡೆಸುವುದರ ಮೂಲಕ, ಸಂಗೀತಗಾರರನ್ನು ಸನ್ಮಾನಿಸುವ ಕಾರ್ಯವನ್ನು ಮಾಡಿದ್ದಾರೆ. ಸಂಗೀತಗಾರರಿಗೆ ಆಶ್ರಯದಾತರಾಗಿ, ಅವರಿಗೆ ಇನಾಮುಭೂಮಿಗಳನ್ನು ನೀಡಿದ ಉದಾಹರಣೆಗಳಿವೆ.

ಕೊನೆಯ ಸಮಾರೋಪ ಅಧ್ಯಾಯನದಲ್ಲಿ ಒಟ್ಟು ಆರು ಅಧ್ಯಾಯಗಳಲ್ಲಿ ಸಾದರಪಡಿಸಲಾದ ವಿಷಯಗಳನ್ನು ಪ್ರಸ್ತುತ ಮಹಾಪ್ರಬಂಧ ಹೊಂದಿದೆ. ಅಲ್ಲದೆ ಉದ್ದೇಶಿತ ಗುರಿಯನ್ನು ಮುಟ್ಟಿದ ಕುರಿತಾಗಿ ಹಾಗೂ ನಾಯಕ ಅರಸುಮನೆತನದ ಆಚರಣೆಗಳ ಪ್ರಸ್ತುತ ಸ್ಥಿತಿಗತಿಯ ಕುರಿತಾದ ಅಂಶಗಳನ್ನು ಚರ್ಚಿಸುತ್ತಾ ಸಮಾರೋಪಗೊಳಿಸಲಾಗಿದೆ.

ಹೀಗೆ ಇಲ್ಲಿಯ ಪ್ರತಿಯೊಂದು ಅಧ್ಯಾಯವೂ ಖಚಿತ ಆಕರ, ಪರಿಕರಗಳನ್ನು ಒಳಗೊಳ್ಳುವುದರ ಮೂಲಕ ಪ್ರಸ್ತುತ ಮಹಾಪ್ರಬಂಧವನ್ನು ಅರ್ಥಪೂರ್ಣವಾಗಿಸುವಲ್ಲಿ ತನ್ನದೇ ಪಾತ್ರ ನಿರ್ವಹಿಸಿದೆ. ಇಲ್ಲಿಯ ಪ್ರತಿಯೊಂದು ವಿಷಯವನ್ನೂ ವಸ್ತುನಿಷ್ಠವಾಗಿ ಸಾದರಪಡಿಸಲು ಪ್ರಯತ್ನಿಸಲಾಗಿದೆ. ಯಾವುದೇ ಪಕ್ಷಪಾತ ಧೋರಣೆ ತಲೆಹಾಕದಂತೆ ನೋಡಿಕೊಳ್ಳಲಾಗಿದೆ. ಒಟ್ಟಿನಲ್ಲಿ, ಇಲ್ಲಿಯ ಪ್ರತಿಯೊಂದು ಅಧ್ಯಾಯವೂ ಇದೊಂದು ಪ್ರತ್ಯೇಕ ಮಹಾಪ್ರಬಂಧವಾಗಿ ಹೊರಹೊಮ್ಮಲು ಸಹಕಾರಿಯಾಗಿದೆಯೆನ್ನ ಬಹುದು. ಆದರೆ ಸದ್ಯದ ಸವಾಲುಗಳನ್ನು ಎದುರಿಸುವ ನಿಟ್ಟಿನಲ್ಲಿ ಚರಿತ್ರೆಯ ಪಾತ್ರ ಪ್ರಮುಖವಾಗಿದ್ದು, ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ಪರಿಣಾಮವಾಗಿ ಸಂದಿಗ್ಧತೆಯ ಸುಳಿಯಲ್ಲಿ ಸಿಲುಕಿರುವ ಸಾಂಸ್ಕೃತಿಕ ಪರಿಸರವನ್ನು ಕುರಿತು ಪುನರಾಲೋಚಿಸಲು ಸಂದರ್ಭ ಒದಗಿದೆ. ನಮ್ಮ ಸಾಂಸ್ಕೃತಿಕ ಪರಿಸರವು ಮಲೀನಗೊಳ್ಳುವ ಅಥವಾ ವಿನಾಶದ ಹಾದಿ ಹಿಡಿಯುವ ಸಂದರ್ಭಗಳು ಒದಗಿಬರುತ್ತಿರುವಾಗ,

ಹಿಂದಿನ ಪರಂಪರೆಯ ದ್ಯೋತಕವಾದ ಕೆಲವು ಆಚರಣೆಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡು, ತನ್ನಷ್ಟಕ್ಕೆ ತಾವೇ ನಮಗರಿವಿಲ್ಲದಂತೆ ಕಣ್ಮರೆಯಾಗುತ್ತಿರುವುದು ವಿಪರ್ಯಾಸದ ಸಂಗತಿಯೆಂಬುದನ್ನು ಇಲ್ಲಿ ಮನಗಾಣಿಸಿಕೊಡಲು ಪ್ರಯತ್ನಿಸಿದೆ.

ರಾಜಕೀಯ ಅಧಿಕಾರ ಕಳೆದುಕೊಂಡ ತರುವಾಯ ನಾಯಕ ಅರಸುಮನೆತನದವರ ಜೀವನದಲ್ಲಿ ಅನೇಕ ಏರಿಳಿತಗಳಾದವು. ದಿನನಿತ್ಯದ ಜೀವನ ನಿರ್ವಹಣೆ ಕಷ್ಟವಾಯಿತು. ಒಂದುಕಾಲಕ್ಕೆ ಕ್ಷತ್ರಿಯರ ಸ್ಥಾನಮಾನವನ್ನು ಅನುಭವಿಸಿದ್ದ ಇವರು, ರಾಜಕೀಯ ಅಧಿಕಾರ ಕಳೆದುಕೊಂಡಂತೆ ಇವರ ರಾಜಕೀಯ ಮತ್ತು ಸಾಮಾಜಿಕ ಜೀವನಕ್ಕೆ ಪೆಟ್ಟು ಬಿದ್ದಿತು. ಪ್ರಚಲಿತ ಬದುಕಿನ ನಿರ್ವಹಣೆಯ ವೃತ್ತಿಗಳೆಡೆ ಇವರು ಗಮನಹರಿಸದಾದರು. ಕಾರಣ ಇವರಲ್ಲಿ ಹಿಂದೆ ತಮ್ಮ ಪೂರ್ವಜರು ನಡೆಸಿದ ಭವ್ಯ ಬದುಕಿನ ಪ್ರಜ್ಞೆ ಕಾಡುತ್ತಿತ್ತು. ಅದನ್ನು ನೆನೆಯುತ್ತಾ ಕುಳಿತುಕೊಂಡರಲ್ಲದೆ ಇದ್ದ ಪಿತ್ರಾರ್ಜಿತ ಆಸ್ತಿಯನ್ನೂ ಮಾರಲು ಪ್ರಾರಂಭಿಸಿದರು.

ಪ್ರಸ್ತುತ ರಾಜಕೀಯದ ಜ್ಞಾನದ ಕೊರತೆ ಈ ನಾಯಕ ಅರಸರ ವಂಶಜರಲ್ಲಿ ಇದ್ದುದರಿಂದ ಇವರು ರಾಜಕೀಯವಾಗಿ ಹಿಂದುಳಿಯಲು ಕಾರಣವಾಯಿತು. ಜನಸಾಮಾನ್ಯರೊಂದಿಗೆ, ಸರಳವಾಗಿ ಬೆರೆತು ಅವರೊಡನೆ ಜೀವನ ಮಾಡುವುದು ಅನಿವಾರ್ಯವಾಯಿತು. ತಾವು ಅರಸರ ವಂಶಸ್ಥರು ಎಂದು ಪ್ರತ್ಯೇಕವಾಗಿ ಹೇಳಿಕೊಳ್ಳುವ ಅಥವಾ ಹೇಳಿಕೊಳ್ಳಲಾಗದ ಸ್ಥಿತಿ ಬಂದಿತು. ಆದರೆ ಸುರಪುರ, ಗುಡಗುಂಟಿ, ಗುಂತಗೋಳ, ದೇವದುರ್ಗದ ಅರಸರ ವಂಶಜರು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಂಡಿರುವುದು ಗಮನಾರ್ಹ. ಅವರನ್ನು ಜನತೆ ಇನ್ನೂ ಗೌರವ, ಪ್ರೀತಿ, ವಿಶ್ವಾಸಗಳಿಂದ ಕಾಣುತ್ತಾರಲ್ಲದೇ 'ನಮ್ಮ ಧಣಿಗಳು, ದೊರೆಗಳು, ರಾಜರು, ಗುರುಗಳು' ಎಂದು ಸಂಬೋಧಿಸುತ್ತಾರೆ. ಚುನಾವಣೆಯ ಸಂದರ್ಭಗಳಲ್ಲಿ ಅವರಿಗೆ ಮತ ಹಾಕಿ ಜಯಗಳಿಸಲು ಸಹಾಯ ಮಾಡುತ್ತಾರೆ. ಇದೇ ಪರಿಸ್ಥಿತಿ ಇತರೆಡೆಗಳಲ್ಲಿ ಜೀವಿಸುತ್ತಿರುವ ಕೆಲವು ಪೀಳಿಗೆಯವರ ಪಾಲಿಗಿಲ್ಲ. ಆದರೆ ಸಾಂಸ್ಕೃತಿಕವಾಗಿ ಇವರಿಗೆ ಇಂದಿಗೂ ಇರುವ ಮಾನ್ಯತೆ ಆಶ್ಚರ್ಯವನ್ನುಂಟು ಮಾಡುತ್ತದೆ.

ಇಂದಿಗೂ ಆಯಾ ಪ್ರದೇಶಗಳಲ್ಲಿ ನಡೆಯುವ ಧಾರ್ಮಿಕ, ಸಾಮಾಜಿಕ ಕಾರ್ಯಕ್ರಮಗಳು ಅರಸು ವಂಶಸ್ಥರ ಮುಖಂಡತ್ವದಲ್ಲಿಯೇ ನಡೆಯುತ್ತವೆ. ಇವರ ಆಚರಣೆಗಳಲ್ಲಿ ಜನಸಾಮಾನ್ಯರು ಭಾಗವಹಿಸುವುದರ ಮೂಲಕ ಅವರಿಗೆ ಗೌರವವನ್ನು ಸೂಚಿಸುತ್ತಾರೆ. ಹಾಗೆಯೇ ಕೆಲವೆಡೆ ಇವರ ಆಚರಣೆಗಳು ವರ್ಷದಿಂದ ವರ್ಷಕ್ಕೆ ತಮ್ಮ ಪರಂಪರೆಯ ಕೊಂಡಿಯನ್ನು ಸಡಿಲಿಸಿಕೊಳ್ಳುತ್ತಿರುವುದೂ ದಿಟ. ಆದ್ದರಿಂದ ಈ ಮನೆತನದ ವಂಶಸ್ಥರು ಸಂಸ್ಕೃತಿಯ ಪ್ರತೀಕವಾದ ಆಚರಣೆಗಳು ಕಾಲಗರ್ಭದಲ್ಲಿ ಸೇರುವ ಮುನ್ನ ಇನ್ನೊಮ್ಮೆ ಎಚ್ಚರಗೊಳ್ಳುವ ಅಗತ್ಯ ಇದೆ. ಅಲ್ಲದೆ, ತಮ್ಮ ಪೂರ್ವಜರ ಸಂಬಂಧಿಸಿದ

ಕಾಗದಪತ್ರಗಳನ್ನು, ದಾಖಲೆಗಳನ್ನು ನೀಡುವಲ್ಲಿ, ಇಲ್ಲವೆ ತೋರಿಸುವಲ್ಲಿ ಕೆಲವು ವಂಶಸ್ಥರು ಹಿಂಜರಿಯುತ್ತಾರೆ; ಹಾಗೂ ನಿರ್ಲಕ್ಷ್ಯದ ಧೋರಣೆಯನ್ನು ತಾಳಿದ್ದಾರೆ. ಆ ಧೋರಣೆಯನ್ನು ದೂರೀಕರಿಸಿ, ತಮ್ಮ ಮನೆತನದ ಆಕರಗಳನ್ನು ಸಂರಕ್ಷಿಸುವುದರ ಜೊತೆಗೆ, ಅವುಗಳನ್ನು ಸಂಶೋಧಕರ ಅಥವಾ ಚರಿತ್ರಕಾರರ ಗಮನಕ್ಕೆ ತರುವುದರ ಮೂಲಕ ತಮ್ಮದೇ ಚರಿತ್ರೆಯ ಮರು ನಿರ್ಮಾಣ ಕಾರ್ಯದಲ್ಲಿ ಸಹಕರಿಸುವ ಕೆಲಸ ತುರ್ತಾಗಿ ಆಗಬೇಕಾಗಿದೆ. ಅಗ ಇಂಥ ನಿರ್ಲಕ್ಷಿತ ಮನೆತನಗಳನ್ನು ಕುರಿತು ವಿಪುಲ ಕಾರ್ಯನಡೆಯಲು ಸಾಧ್ಯವಾದೀತು; ನಾಯಕ ಅರಸರ ಹಾಗೂ ಅವರ ಪೀಳೀಗೆಯವರನ್ನು ಮೌಲ್ಯಾತ್ಮಕವಾಗಿ ಗುರುತಿಸಲು ಸಹಕಾರಿಯಾದೀತು.

# ಅನುಬಂಧಗಳು

೧. ನಕಾಶೆ

೨. ವಂಶಾವಳಿಗಳು

೩. ವಕ್ತೃಗಳು

೪. ಜನಪದ ಗೀತೆಗಳು

೫. ಸಾಂಸ್ಕೃತಿಕ ಪದಕೋಶ

೬. ಛಾಯಾಚಿತ್ರಗಳು

೭. ಗ್ರಂಥ ಋಣ

೧. ನಕಾಶೆ




ಕರ್ನಾಟಕ ನಾಯಕ ಅರಸುಮನೆತನಗಳು

## ಸುರಪುರ ನಾಯಕ ಅರಸು ಮನೆತನದ ವಂಶಾವಳಿ

ನರಸಿಂಹನಾಯಕ (೧೩೬೧-೧೩೮೬)

ವೀರ ಬೊಮ್ಮನಾಯಕ (೧೩೮೬-೧೪೧೧)

ನಿಂಗಪ್ಪ ನಾಯಕ (೧೪೧೧-೧೪೩೬)

ಒಡೆಯರ್ ನಾಯಕ (೧೪೩೬-೧೪೬೧)

ಕಲ್ಲಪ್ಪನಾಯಕ (೧೪೬೧-೧೪೮೬)

- ಹಿರೇಹನುಮಪ್ಪ ನಾಯಕ
- ಇಮ್ಮಡಿ ಹನುಮಪ್ಪ ನಾಯಕ
- ಮುಮ್ಮಡಿಹನುಮಪ್ಪ ನಾಯಕ
- ಸಾಹುಜಂಗ್‌ಹನುಮಪ್ಪ ನಾಯಕ
- ಕರಿಹನುಮಪ್ಪ ನಾಯಕ
- ಬಿಲ್ಲಹನುಮ ನಾಯಕ
- ಚಿನ್ನಹನುಮನಾಯಕ ಕೇಂದ್ರಸ್ಥಾನ ಕಕ್ಕೇರಿ(೧೪೮೬-೧೫೧೧)
  - ಎರ್ರಸಿಂಗನಾಯಕ
  - ೧ನೇ ಪಾಮನಾಯಕ(೧೫೧೧-೧೫೩೬)
    ಪೆದ್ದಸೋಮನಾಯಕ(೧೫೩೬-೧೫೬೧)
    ಬಲಿ ಸೋಮನಾಯಕ(೧೫೬೧-೧೫೮೬)
    (ಐದಭಾವಿ-ಗಡ್ಡಿ ಕೃಷ್ಣಾನದಿ ಕಣಿವೆ ಪ್ರದೇಶ)
    ಪೆದ್ದಹಿರೇಪಾಮನಾಯಕ(೧೫೮೬-೧೬೧೧)
    (ಕಕ್ಕೇರಿ ಕೇಂದ್ರಸ್ಥಾನ)
    - ಜಕ್ಕಪ್ಪದೇಸಾಯಿ(೧೬೧೧-೧೬೩೬)
    - ಹುಚ್ಚಸೋಮನಾಯಕ

- ಗಡ್ಡಿಪಿಡ್ಡನಾಯಕ (ಕೇಂದ್ರಸ್ಥಾನ ಕಕ್ಕೇರಿ ದೇವಪುರಗಡ್ಡಿ) ಪತ್ನಿ ೧. ಅಮ್ಮವ್ವನಾಗತಿ ೨. ಹನುಮವ್ವನಾಗತಿ (ದತ್ತುಮಗ)ಹಸರಂಗಿ ಪಾಮನಾಯಕ ತಂದೆ ಗಡ್ಡಿಲಿಂಗನಾಯಕ)
  - ಅನ್ನದಾನಿ ಸೋಮ ನಾಯಕ (ಗುಡಗುಂಟಿ ಕೇಂದ್ರಸ್ಥಾನ)
    - ೨ನೇ ಪಿಡ್ಡನಾಯಕ(೧೬೮೭-೧೭೨೬)ಪಿತಾಂಬರ ಬಹರಿ ಪಿಡ್ಡನಾಯಕ ಪತ್ನಿಯರು
      - ಕೃಷ್ಣಮ್ಮ
        - ೪ನೇ ಪಾಮನಾಯಕ (೧೭೨೭-೧೭೪೧)
          - ಪತ್ನಿಯರು
            - ರುಕ್ಮವ್ವ
            - ಬಂಗಾರಮ್ಮ
      - ಬಂಗಾರಮ್ಮ
        - ೧ನೇ ಕೃಷ್ಣಪ್ಪನಾಯಕ ಮದನಗೋಪಾಲ ಹೆಂಡತಿ ಚಿನ್ನಮ್ಮ ೪ನೇ ಪಿಡ್ಡನಾಯಕ (೧೮೦೨-೧೮೧೮)
      - ತಿಮ್ಮಮ್ಮ
        - ರಾಮಪ್ಪನಾಯಕ ಪತ್ನಿ ಲಕ್ಷ್ಮಮ್ಮ ರಾಘವಪಾಮನಾಯಕ (೩ನೇ ಪಾಮನಾಯಕ (೧೭೫೨-೧೭೭೩) ಪತ್ನಿ ತಿಮ್ಮಾಂಭ
      - ರಂಗಮ್ಮ
        - ೩ಮಂದಿ ಹೆಣ್ಣುಮಕ್ಕಳು
        - ಹನುಮಪ್ಪ ನಾಯಕ
        - ವಾಸುದೇವ ನಾಯಕ
      - ಮಂಗನಾಕ್ಶಿ
      - ದೇವಮ್ಮನಾಕಟಿ
  - ಜಕ್ಕಪ್ಪ ನಾಯಕ
  - ಜಡಿಸೋಮ ನಾಯಕ
  - ಹುಚ್ಚಸೋಮ ನಾಯಕ
  - ೩ನೇ ಪಾಮ ನಾಯಕ
  - ಜಕ್ಕನಾಯಕ (ಬಾಲ್ಯದಲ್ಲಿಯೆ ಮರಣ)
  - ಚೊಕ್ಕನಾಯಕ (ಬಾಲ್ಯದಲ್ಲಿಯೆ ಮರಣ)
- ಗಡ್ಡಿ ಲಿಂಗನಾಯಕ (ಕೇಂದ್ರಸ್ಥಾನ ಗುಡಗುಂಟಿ)



೩ನೇ ಪಿಡ್ಡನಾಯಕ
(೧೭೪೨-೧೭೪೬)
೧ನೇ ವೆಂಕಟಪ್ಪನಾಯಕ
(೧೭೪೬-೧೭೫೨)
ಇಮ್ಮಡಿ ವೆಂಕಟಪ್ಪ ನಾಯಕ
ಹಿರೇವೆಂಕಟಪ್ಪನಾಯಕ
(೧೭೭೩-೧೮೦೨)
ಪತ್ನಿ ಸತ್ಯಮ್ಮ
ಮೊಂಡಗ್ಯೆ ವೆಂಕಟಪ್ಪನಾಯಕ
ಪತ್ನಿಯರು
ಓಂಕಾರಮ್ಮ
ರಂಗಮ್ಮ
ರಾಣಿವೆಂಕಮ್ಮ
(ಪ್ಯಾಪಲಿ ರಂಗಪ್ಪ
ನಾಯಕನ ಮಗಳು)
ಅವ್ವಭೀಮವ್ವ
ಹಿರೇವೆಂಕಟಪ್ಪನಾಯಕ
ಕಿರಿಯ ವೆಂಕಟಪ್ಪನಾಯಕ
ವೆಂಕಟಪ್ಪನಾಯಕ
ಗಿರಿಯಮ್ಮ
ಸತ್ಯಮ್ಮ
ದೇವೇಂದ್ರ
ವೆಂಕಟಪ್ಪನಾಯಕ
ಪತ್ನಿಯರು
ಸೀತಾರಾಮ
ನಾಯಕ
ತಾತಾವೆಂಕಟಪ್ಪ
ನಾಯಕ
ವೆಂಕಮ್ಮ
ಪದ್ಮಮ್ಮ
ಮಂಗಮ್ಮ
ರಂಗಮ್ಮ
(ರತ್ನಗಿರಿ)
ಚಿನ್ನಮ್ಮ
ಹನುಮಪ್ಪನಾಯಕ
ಗೋವಿಂದಮ್ಮ
ಕೃಷ್ಣಮ್ಮ
ರುಕ್ಮಮ್ಮ
ರಂಗಮ್ಮ
೨ನೇ ಕೃಷ್ಣಪ್ಪ
ನಾಯಕ
(ಕ್ರಿ.ಶ.೧೮೨೭-೧೮೪೨)
೫ನೇ ಪಿಡ್ಡ
ನಾಯಕ
ಪಾಮ
ನಾಯಕ
ವಾಸುದೇವ
ನಾಯಕ
ಶ್ರೀನಿವಾಸ
ನಾಯಕ
ರಂಗಮ್ಮ
ಸೀತಮ್ಮ
ನಾಯಕ
ಮದನಗೋಪಾಲ
ಗೋವಿಂದಮ್ಮ
ಸತ್ಯಮ್ಮ
ವೆಂಕಮ್ಮ

- ೨ನೇ ಕೃಷ್ಣಪ್ಪನಾಯಕ
  - ರಾಣಿ ಈಶ್ವರಮ್ಮ
    - ನಾಲ್ವಡಿ ವೆಂಕಟಪ್ಪ ನಾಯಕ(೧೮೪೨-೧೮೫೮) (೧೧.೫.೧೮೫೮ ಮರಣ ಬ್ರಿಟಿಷರ ವಿರುದ್ಧ ಹೋರಾಡಿ ಮಡಿದನು ೮ ಮಂದಿ ಪತ್ನಿಯರಿದ್ದರು ರಾಣಿರಂಗಮ್ಮ ಪಟ್ಟದರಾಣಿ ಯಾಗಿ ಇದ್ದಳು ನಂತರ ಆಕೆ ೧೯೦೬ರಲ್ಲಿ ಮರಣ ಹೊಂದಿದಳು.)
  - ಚುಂಡಿಪೆದ್ದಮ್ಮ
  - ಲಕ್ಷ್ಮಮ್ಮ
- ವೆಂಕಟಪ್ಪನಾಯಕ
  - ರಾಜ ಕೃಷ್ಣಪ್ಪನಾಯಕ (ರಾಣಿ ರಂಗಮ್ಮನ ದತ್ತುಪುತ್ರ) (೧೯೦೬-೧೯೫೨)
    - ರಾಜ ಪಿಡ್ಡನಾಯಕ ಮರಣ ೧೯೯೨
      - ರಾಜಾ ವೆಂಕಟಪ್ಪನಾಯಕ (ತಾತಾ)
    - ರಾಜಾವೆಂಕಟಪ್ಪನಾಯಕ(ಬ್ಯಾರಿಸ್ಟರ್)
      - ರಾಜಾ ಸೀತಾರಾಮ ನಾಯಕ
      - ರಾಜಕೃಷ್ಣಪ್ಪ ನಾಯಕ
      - ರಾಜಾ ಶ್ರೀನಿವಾಸ ನಾಯಕ
- ೬ನೇ ಪಿಡ್ಡನಾಯಕ

. ಕೃಪೆ ಸೀತಾರಾಮ ಜಾಗೀರದಾರ, ಮೈಸೂರು

# ಆನೆಗೊಂದಿ ನಾಯಕ ಅರಸು ಮನೆತನದ ವಂಶಾವಳಿ






*ಕೃಪೆ: ರಾಜಾ ಅಚ್ಯುತದೇವರಾಯ, ಆನೆಗೊಂದಿ ಅರಸು ವಂಶಸ್ಥರು*

# ಗುಡಗುಂಟಿ ನಾಯಕ ಅರಸು ಮನೆತನದ ವಂಶಾವಳಿ

- ಜಕ್ಕಪ್ಪನಾಯಕ
  - ಗಡ್ಡಿಲಿಂಗನಾಯಕ
    - ಜಡಿಸೋಮಪ್ಪನಾಯಕ
      - ಲಿಂಗ ನಾಯಕ
        - ಸೋಮಸಜ್ಜನಾಯಕ
          - ಲಿಂಗನಾಯಕ
            - ಸೋಮಪ್ಪನಾಯಕ
              - ಸೋಮಲಿಂಗನಾಯಕ
                - ಜಡಿಸೋಮಪ್ಪನಾಯಕ
                  - ರಾಜಾಸೋಮಪ್ಪನಾಯಕ
                  - ಲಿಂಗನಾಯಕ
                    - ರಾಜಾಜಡಿಸೋಮಪ್ಪ ನಾಯಕ
                      - ರಾಣಿಗೌರಮ್ಮ
                        - ತಿಪ್ಪರಾಜಾಜಡಿಸೋಮಪ್ಪನಾಯಕ
                          - ರಾಣಿಲಕ್ಷ್ಮಿದೇವಿ
                          - ರಾಣಿಲಲಿತಾಬಾಯಿ
                            - ರಾಜಾಗುರುರಾಜನಾಯಕ (ದತ್ತುಪುತ್ರ)
                          - ರಾಣಿಕೃಷ್ಣಮ್ಮ
                            - ರಾಜಾಅಮರಪ್ಪನಾಯಕ
                      - ಲಕ್ಷ್ಮಮ್ಮ
                      - ಚೆನ್ನಮ್ಮ
                    - ಸರ್ಜಾನಾಯಕ
                      - ಕಸ್ತೂರೆಪ್ಪನಾಯಕ
                  - ಗೋಸಲನಾಯಕ
                - ಪಂಪಾಪತಿನಾಯಕ
            - ರಾಮಲಿಂಗನಾಯಕ
        - ಜಡಿಸೋಮಪ್ಪನಾಯಕ
        - ಶಿವಲಿಂಗಪ್ಪನಾಯಕ
      - ಪಿಡ್ಡ ನಾಯಕ
      - ಹಿರೇಸೋಮಪ್ಪ ನಾಯಕ
      - ಹುಚ್ಚ ಸೋಮಪ್ಪ ನಾಯಕ
      - ಭೂಪತಿ ನಾಯಕ
      - ಕರಿರಾಮಪ್ಪ ನಾಯಕ
      - ಕರಿಹನುಮಪ್ಪ ನಾಯಕ
  - ಗಡ್ಡಿಪಿಡ್ಡನಾಯಕ

ಕೃಪೆ : *ವೆಂಕಟರಾವ್ ಮುಜುಮದಾರ ಗುಡಗುಂಟಿ*
*ಲಿಂಗಸುಗೂರು ತಾಲ್ಲೂಕು, ರಾಯಚೂರು ಜಿಲ್ಲೆ*

# ಗುಂತಗೋಳ ನಾಯಕ ಅರಸು ಮನೆತನದ ವಂಶಾವಳಿ




ಕೃಪೆ : ರಾಜಾ ಶ್ರೀನಿವಾಸನಾಯಕ, ಗುಂತಗೋಳ, ನಾಯಕ ಅರಸು ವಂಶಸ್ಥರು

# ದೇವದುರ್ಗ ನಾಯಕ ಅರಸು ಮನೆತನದ ವಂಶಾವಳಿ

- ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ
  - ವಾಸುದೇವನಾಯಕ
    - ಕಿಲಚನಾಯಕ
      - ವೆಂಕಟಪ್ಪನಾಯಕ
        - ಕೃಷ್ಣಪ್ಪನಾಯಕ
          - ರಾಜಾ ರಂಗಪ್ಪನಾಯಕ
          - ರಾಜಾ ವಾಸುದೇವನಾಯಕ
            - ರಾಜಾ ಕೊಳ್ಳಿರಂಗಪ್ಪನಾಯಕ
              - ರಾಜಾ ಅಂಕಪ್ಪನಾಯಕ
                - ರಾಜಾ ಕೃಷ್ಣಪ್ಪನಾಯಕ
                - ರಾಜಾ ವಾಸುದೇವನಾಯಕ
                  - ರಾಜಾ ಕಿಲಚನಾಯಕ
                  - ರಾಜಾ ಕ್ರಿಷ್ಟಪ್ಪನಾಯಕ
                    - ರಾಜಾ ಚಂದ್ರಹಾಸನಾಯಕ
                  - ರಾಜಾ ವೆಂಕಟಪ್ಪನಾಯಕ
                    - ರಾಜಾರಘುವರ್ಮನಾಯಕ
                    - ರಾಜಾ ರವಿವರ್ಮನಾಯಕ
    - ಸಣ್ಣಕಿಲಚನಾಯಕ
    - ವೆಂಕಟಪ್ಪನಾಯಕ
    - ವಾಸುದೇವನಾಯಕ
    - ಕೃಷ್ಣಪ್ಪನಾಯಕ

ಕೃಪೆ : ರಾಜಾವೆಂಕಟಪ್ಪನಾಯಕ ರಾಜವಂಶಸ್ಥರು, ದೇವದುರ್ಗ

# ಗುಡೇಕೋಟೆ ನಾಯಕ ಅರಸು ಮನೆತನದ ವಂಶಾವಳಿ

## ವಂಶಾವಳಿ ೧

- ಇಂಮಡಿಬೊಂಮಂತರಾಜು
  - ವೆಂಕಟರಾಜ
    - ಬೊಮಂತರಾಜು
    - ತಾತಯ್ಯರಾಜು
      - ಇಮ್ಮಡಿಸದಾಶಿವರಾಜು
        - ಇಮ್ಮಡಿತಾತಯ್ಯರಾಜು
      - ಜಟಿಂಗರಾಜು
    - ಚಿನ್ನಮ್ಮರಾಜು
    - ಪಂಪಾಪತಿರಾಜು
  - ಪಂಪಾಪತಿರಾಜು

## ವಂಶಾವಳಿ ೨

- ಹರಶ್ವರಪ್ಪ
  - ಬೊಮಂತರಾಜು
    - ಬೊಮ್ಮಯ್ಯಲಿಂಗಪ್ಪ
  - ರಾಮರಾಜು
    - ಬೊಮ್ಮಂತರಾಜು
  - ಹರಶಿರಪ್ಪ

## ವಂಶಾವಳಿ ೩

- ರಾಮಪ್ಪನಾಯಕ
  - ಶಿದ್ದಪ್ಪ
    - ಇಮ್ಮಡಿಬೊಮಂತರಾಜರು
      - ಅಮಹಿರಿಯಮ್ಮನವರು
      - ವೆಂಕಟರಾಜು
        - ಸಿದ್ದಯಾಜಿ
          - ಭಂಗಾರಮ್ಮನವರು
            - ವಿರುಪಾಕ್ಷಮ್ಮ
            - ಪೊಂಪಾಪತಿರಾಜು
            - ತಾತಯ್ಯರಾಜು
          - ಬೊಮ್ಮಂತರಾಜರು
          - ನಿಲಮ್ಮಾಜಿ
            - ಜಂಪಳ್ಳಿನಾಯ್ಕ(ಚಿತ್ರದುರ್ಗ)
          - ಚಿನ್ನಯರಾಜು
            - ಶಿದ್ದಮ್ಮಾಜಿ
              - ಇಮ್ಮಡಿ ಸದಾಶಿವರಾಜು
                - ಲಕ್ಷಮ್ಮನವರು
              - ಗೌರಮ್ಮಾಜಿ
                - ಜಟಿಂಗರಾಜು
        - ಗೌರಂಮಾಜಿ
      - ಪಂಪಾಪತಿರಾಜು

*ಕೃಪೆ : ಕೃಷ್ಣವರ್ಮರಾಜ ರಾಜವಂಶಸ್ಥರು, ಗುಡೇಕೋಟೆ*

# ನಾಯಕನಹಟ್ಟಿ ನಾಯಕ ಅರಸು ಮನೆತನದ ವಂಶಾವಳಿ

**ಕಾಟಮಲ್ಲನಾಯಕ**

- ಸೂರದೇವಿನ ಪಾಪನಾಯ್ಕ
  - ಕಾಕಾಳ ನಾಯ್ಕ (ಹಟ್ಟಿ ಪಾಳೆಯಪಟ್ಟಿನ ಸಂಸ್ಥಾಪಕ)
    - ದೊಡ್ಡೆರೈಪ್ಪ ನಾಯ್ಕ
      - ಗಿಡ್ಡೆರೈಪ್ಪ ನಾಯ್ಕ
        - ದೊಡ್ಡ ಮಲ್ಲಪ್ಪನಾಯ್ಕ
          - ಬಸವ ಮಲ್ಲಪ್ಪನಾಯ್ಕ (ಹೆಂಡತಿ ರಾಯದುರ್ಗದ ಯರ್‍ರಿ ಬೊಂಮಳನಾಯ್ಕನ ತಂಗಿ ಬೊಂಮವ್ವ ನಾಗತಿ)
            - ಮೀಶೆ ಮಲ್ಲಪ್ಪನಾಯಕ
            - ಚಿನ್ನೈಯ್ಯರಾಜು
            - ಬಂಗಾರನಾಯ್ಕ (ಸಂತತಿ ಇಲ್ಲ)
          - ಬೋಡಿ ಮಲ್ಲಪ್ಪನಾಯ್ಕ (ಹೆಂಡತಿ ಚಿತ್ರದುರ್ಗದ ಚಿಕ್ಕಳ ನಾಯ್ಕನ ತಂಗಿ ಸರ್ಜಂಮ್ಮ ನಾಗತಿ ಸಂತತಿ ಇಲ್ಲ)
- ತೊರ್‍ರೆಲ ಮಲ್ಲನಾಯ್ಕ
  - ಜಗಲೂರು ಪಾಪನಾಯ್ಕ (ಶರಣ ಸಂತತಿ ಇಲ್ಲ)
- ಗಾದರ್‍ರ ಪಾಲನಾಯ್ಕ (ಶರಣ ಸಂತತಿ ಇಲ್ಲ)

- ಕಸ್ತೂರಿನಾಯ್ಕ (ಹೆಂಡತಿ ಚಿತ್ರದುರ್ಗದ ಅರಸು ಕುಮಾರಿ ಲಕ್ಷ್ಮವ್ವ ನಾಗತಿ ಸಂತತಿ ಇಲ್ಲ)

(೧ನೇ ಹೆಂಡತಿ ಜರಿಮಲೆ ಅರಸನ ಮಗಳು ಲಿಂಗಮ್ಮ ನಾಗತಿ)

- ಬಸವ ಮಲ್ಲಪ್ಪ ೨
  - ೨ನೇ ಹೆಂಡತಿಯಿಂದ ಬಂಗಾರ ಮಲ್ಲಪ್ಪ
    - ದೊಡ್ಡಮಲ್ಲಪ್ಪ
    - ಮಗಳು (ಚಿತ್ರದುರ್ಗದ ರಾಜಾವೀರ ಮದಕರಿನಾಯಕನಿಗೆ ಕೊಟ್ಟ ಹೆಣ್ಣು)
- ದೊಡ್ಡಮಲ್ಲಪ್ಪ ೨
  - ದೊಡ್ಡ ಮಲ್ಲಪ್ಪ ನಾಯ್ಕ
    - ಬಂಗಾರನಾಯ್ಕ
- ಯರ್ರಮಲ್ಲಪ್ಪ ನಾಯ್ಕ
  - ಗಿರ್ರ ಮಲ್ಲಪ್ಪ ನಾಯ್ಕ(ಸಂತತಿ ಇಲ್ಲ)
  - ಕೊಮಾರ ಚನ್ನಯ್ಯ
- ಬಂಗಾರನಾಯ್ಕ
  - (ಚಿಕ್ಕ ಹೆಂಡತಿ ಜರ್ರಿಮಲೆ ಯಂಮಡನಾಯ್ಕನ ತಂಗಿ)
    - ಬಂಗಾರ್ರ ಮಲ್ಲಪ್ಪನಾಯ್ಕ ಕಲ್ಲಿಕೋಟೆ ಯುದ್ಧದಲ್ಲಿ ಮಡಿಯುತ್ತಾನೆ(ಸಂತತಿ ಇಲ್ಲ)
  - (ಹಿರಿ ಹೆಂಡತಿ ಹೊರಮಠದ ಅಯ್ಯಸ್ವಾಮಿ ಅಕ್ಕಂಮ್ಮನ ಮಕ್ಕಳು)

(ಅರಮನಿಗೆ ಹಾಕಿಕೊಂಡಿದ್ದ ಗಿರಯಮ್ಮನಹಳ್ಳಿ ರಡ್ಡೇರ ಪಾಲಯ್ಯನ ಮಗಳು ಲಕ್ಷ್ಮವ್ವ)

- ಚಿಕ್ಕಮಲ್ಲಪ್ಪನಾಯ್ಕ (ಹೆಂಡತಿ ಚಿತ್ರದುರ್ಗದ ಭರಮಣ್ಣನಾಯಕರ ಮಗಳು ದೇಮವ್ವನಾಗತಿ)
  - ಪೆದ್ದಯ್ಯ
    - ಹೆಂಡತಿ ಸತ್ತೆವ್ವ (ಸಂತತಿ ಇಲ್ಲ)
    - ಹೆಂಡತಿ ಕುಂಚಿಗೊಕ್ಕಲಿಗ ಸೋಮಯ್ಯನ ತಂಗಿ ಅಂಕಮ್ಮ
      - ಬೋಡಿಮಲ್ಲಪ್ಪ
        - ದೊಡ್ಡ ತಿಪ್ಪಯ್ಯ
        - ಸಣ್ಣ ತಿಪ್ಪಯ್ಯ
        - ರುದ್ರಯ್ಯ

ತಿಪ್ಪನಾಯ್ಕ ಮಲ್ಲಪ್ಪನಾಯ್ಕ (ಸಂತತಿ ಇಲ್ಲ) ಕಸ್ತೂರಿನಾಯ್ಕ ೨ (ಸಂತತಿ ಇಲ್ಲ)

ಹೆಂಡತಿ ಕಾಮಗೇತಲಹಳ್ಳಿ ಪೂಜಾರಿನಾಯ್ಕನ ಮಗಳು
ಚಿನ್ನಮ್ಮನಾಗತಿ

ಚಿನ್ನಾಯ್ಕ (ಸಂತತಿ ಇಲ್ಲ) ಮಲ್ಲಪ್ಪನಾಯಕ

ಹೆಂಡತಿ ಜರ್‍ರಿಮಲೆ ಪೂಜಾರಿ ಮಾಕನಡಕುವಿನ
ಓಬಳಿ ದೇವರ ಪೂಜಾರಿ ಮುದ್ದಯ್ಯನ ಮಗಳು
ಮುದ್ದಪ್ಪನಾಗತಿ

ಕಸ್ತೂರಿನಾಯ್ಕ ೩ ಬಂಗಾರನಾಯ್ಕ ೪ ಬಸಪ್ಪನಾಯಕ ಬೋಶಿನಾಯ್ಕ

ವಂಶವೃಕ್ಷ ಹತಾತ್ತನೆ ಕೊನೆಗೊಳ್ಳುತ್ತದೆ

ಕೃಪೆ : ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ

# ಮತ್ತೋಡು ನಾಯಕ ಅರಸು ಮನೆತನದ ವಂಶಾವಳಿ




*ಕೃಪೆ: ದಕ್ಷಿಣ ಕರ್ನಾಟಕದ ಅರಸು ಮನೆತನಗಳು*
*ವಸು ಎಂ.ವಿ.(ಸಂ), ಕ.ವಿ.ವಿ.ಹಂಪಿ, ೨೦೦೧*

# ಹರತಿ ನಾಯಕ ಅರಸು ಮನೆತನದ ವಂಶಾವಳಿ(ಈವರೆಗೆ ಲಭ್ಯವಿರುವ ಸಂಗತಿಗಳನ್ನು ಆಧರಿಸಿದಂತೆ)



